ಸೋಮರಾಜನ

# ಉದ್ಭಟಕಾವ್ಯ





ಗದ್ಯಾನುವಾದ

ಡಾ. ಎಸ್. ವಿದ್ಯಾಶಂಕರ









ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

## ಸೋಮರಾಜನ

# ಉದ್ಭಟಕಾವ್ಯ



ಗದ್ಯಾನುವಾದ
**ಡಾ. ಎಸ್. ವಿದ್ಯಾಶಂಕರ**



**ಕನ್ನಡ ಸಾಹಿತ್ಯ ಪರಿಷತ್ತು**
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦ ೦೧೮

**UDBHATAKAVYA** - Original text with prose rendering in Kannada
by: **Dr. S. Vidyashankar.**
Published by: **Kannada Sahitya Parishat**, Pampa Mahakavi Road,
Chamarajapet, Bangalore - 560018. Pages :425 + xx 2001.
Price : **100-00**



ಆರನೆಯ ಮುದ್ರಣದ ವರ್ಷ : ೨೦೦೧

ಪ್ರತಿಗಳು : ೧೦೦೦

ಬೆಲೆ ರೂ. : ೧[illegible]/-



ಪ್ರಕಟಣ ಸಮಿತಿ

ಅಧ್ಯಕ್ಷರು
ಎನ್. ಬಸವಾರಾಧ್ಯ

ಸಂಚಾಲಕರು (೧೪-೫-೨೦೦೧ ವರೆಗೆ)
ಡಾ. ಸಿ. ವೀರಣ್ಣ

ಸದಸ್ಯರು
ಡಾ. ಕೆ.ವಿ. ಚಂದ್ರಣ್ಣಗೌಡ
ಬಿ.ಎನ್. ಸತ್ಯನಾರಾಯಣರಾವ್
ಅ.ರಾ. ಮಿತ್ರ
ಎಲ್ಲೇಗೌಡ ಬೆಸಗರಹಳ್ಳಿ
ಬಿ.ಆರ್. ಪೋಲೀಸ್ ಪಾಟೀಲ
ಶ್ರೀಮತಿ ಶಾಂತಾದೇವಿ ಮಾಳವಾಡ
೬೮ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಭಾಷೆ, ಸಂಸ್ಕೃತಿ, ನಾಡು-ನುಡಿಯ ಸಂರಕ್ಷಣೆ, ಸಂವರ್ಧನೆಗಾಗಿ ಶ್ರಮಿಸುತ್ತಿರುವ ಏಕೈಕ ಸಂಸ್ಥೆ. ಸುಮಾರು ೮೬ ವರ್ಷಗಳ ದೀರ್ಘಕಾಲದ ಇತಿಹಾಸ ಹೊಂದಿದ ಪರಿಷತ್ತು ಅನೇಕ ರೀತಿಗಳಲ್ಲಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದೆ. ಅವುಗಳಲ್ಲಿ ಅತ್ಯುತ್ತಮ ಸಾಹಿತ್ಯ ಕೃತಿಗಳ ಪ್ರಕಟಣಕಾರ್ಯ ಪ್ರಧಾನವಾದುದಾಗಿದೆ. ಈ ಹಿಂದಿನ ಹಲವಾರು ಮಹನೀಯರ ಪ್ರಯತ್ನದ ಫಲವಾಗಿ ಸುಮಾರು ೧೦೦೦ ಕ್ಕೂ ಹೆಚ್ಚು ಕೃತಿಗಳನ್ನು ಪರಿಷತ್ತು ಹೊರತಂದಿದೆ. ಈ ಕೃತಿಗಳು ಸಾಹಿತ್ಯ ಕ್ಷೇತ್ರದ ಎಲ್ಲ ಪ್ರಕಾರಗಳಿಗೂ ಸಂಬಂಧಿಸಿವೆ.

ಕನ್ನಡದ ಜನತೆಗೆ ಉತ್ತಮ ಸಾಹಿತ್ಯವನ್ನು ನೀಡುವ ಸಲುವಾಗಿ ಅತ್ಯಂತ ಸುಲಭ ಬೆಲೆಯಲ್ಲಿ ಈ ಪುಸ್ತಕಗಳನ್ನು ಒದಗಿಸಲಾಗಿದೆ. ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮೂಲಕ ಜ್ಞಾನಪ್ರಸಾರ ಮಾಡುವುದು ನಮ್ಮ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

ಹಳಗನ್ನಡ ಕಾವ್ಯಗಳನ್ನು ಮೂಲಪಾಠದೊಡನೆ ಗದ್ಯಾನುವಾದವನ್ನು ಸೇರಿಸಿ ಪ್ರಕಟಿಸುವ ಯೋಜನೆಯನ್ನು ಪರಿಷತ್ತು ಕೈಗೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಪೈಕಿ ಸೋಮರಾಜ ಕವಿಯ "ಉದ್ಭಟಕಾವ್ಯ"ವು ಗಮನಿಸಬೇಕಾದ ಕೃತಿಯಾಗಿದೆ. ಕನ್ನಡದ ಗಣ್ಯವಿದ್ವಾಂಸರಲ್ಲಿ ಒಬ್ಬರಾಗಿರುವ ಡಾ॥ ಎಸ್. ವಿದ್ಯಾಶಂಕರ್ ಅವರು ಪರಿಷತ್ತಿನ ಮನವಿಯ ಮೇರೆಗೆ ಉದ್ಭಟಕಾವ್ಯದ ಗದ್ಯಾನುವಾದವನ್ನು ಸಮರ್ಥವಾಗಿ ಮಾಡಿಕೊಟ್ಟಿದ್ದಾರೆ. ಅವರಿಗೆ ಪರಿಷತ್ತು ಆಭಾರಿಯಾಗಿದೆ.

ಪ್ರಸ್ತುತ ಗ್ರಂಥದ ಪ್ರಕಟಣೆಗೆ ಅನುಮತಿ ನೀಡಿರುವ ಗ್ರಂಥ ಪ್ರಕಟಣಾ ಸಲಹಾ ಸಮಿತಿಗೆ, ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ನೌಕರರಿಗೆ ಹಾಗೂ ಈ ಕಾರ್ಯದಲ್ಲಿ ಸಹಕರಿಸಿದ ಎಲ್ಲರಿಗೆ ಪರಿಷತ್ತು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಎನ್. ಬಸವಾರಾಧ್ಯ
ಅಧ್ಯಕ್ಷರು

# ಪೀಠಿಕೆ

## ಕವಿ-ಕಾಲ-ದೇಶ

ಉದ್ಭಟ ಕಾವ್ಯದ ಕರ್ತೃ ಸೋಮರಾಜ. ಈತನಿಗೆ 'ಸೋಮ' (೧.೧೪), 'ಸೋಮರಾಜ' (೧೨.೧೪೬), 'ಸೋಮಭೂಮೀಶ್ವರ' (೧.೨೯), 'ಸೋಮರಾಜೇಂದ್ರ' (೧.೩೨) ಎಂಬ ಹೆಸರುಗಳೂ ಇವೆ. ತನ್ನನ್ನು ಪರಮಜ್ಞಾನಿ (೧.೧೫), ವರವಾಣಿ (೧.೨೯) ಎಂಬ ಬಿರುದುಗಳಿಂದ ಕರೆದುಕೊಂಡಿರುವನು. ವೀರಶೈವ ಕವಿಯಾದ ಇವನು ಪ್ರಭುವಾಗಿರಬೇಕು. ತನ್ನ ವಂಶದ ಹಿರಿಮೆಯನ್ನು ಒಂದು ಪದ್ಯದಲ್ಲಿ (೧.೧೪) ಹೇಳುತ್ತಾ ಚಂದ್ರವಂಶೋದ್ಭವನಾದ ತಿರುಮಲರಾಜನು ಮುತ್ತಜ್ಜನು, ರಾಯಣರಾಜನು ಅಜ್ಜನು, ಇಂದುಶೇಖರ ರಾಜನು ತಂದೆಯು ಎಂದಿರುವನು. "ಈ ವಂಶದ ರಾಜರು ಎಲ್ಲಿ ರಾಜ್ಯವಾಳುತ್ತಿದ್ದರೋ ತಿಳಿಯದು. ಆದರೆ ಪಶ್ಚಿಮ ತೀರದಲ್ಲಿ ಆಳುತ್ತಿದ್ದ ವೀರಶೈವ ಮತಾವಲಂಬಿಗಳಾದ ಚೌಟರಾಜರಲ್ಲಿ ತಿರುಮಲರಾಯ, ಚಂದ್ರಶೇಖರ ಎಂಬ ಹೆಸರುಗಳು ದೊರೆಯುತ್ತವೆ. ಈ ಕವಿ ಆ ವಂಶದ ದೊರೆಯಾಗಿರಬಹುದೋ ಏನೋ ತಿಳಿಯದು" ಎಂದು ಕವಿಚರಿತೆಕಾರರು ಅಭಿಪ್ರಾಯಪಡುವರು (ಕರ್ಣಾಟಕ ಕವಿಚರಿತೆ, ಪರಿಷತ್ ಆವೃತ್ತಿ, ಪ್ರಥಮ ಸಂಪುಟ, ಪು. ೪೦೨). ಕವಿಯು ರಾಜನಾಗಿದ್ದರೂ ತಾನು ಆಳುತ್ತಿದ್ದ ದೇಶ ಹಾಗೂ ಅದರ ರಾಜಧಾನಿ ಯಾವುದೆಂಬುದನ್ನು ಎಲ್ಲಿಯೂ ಹೇಳಿಲ್ಲ. ಕುಂತಳದೇಶ ಹಾಗೂ ಪಂಪಾಕ್ಷೇತ್ರದ ಬಗೆಗೆ ಎಲ್ಲಿಲ್ಲದ ಅಭಿಮಾನವನ್ನು ತನ್ನ ಕೃತಿಯಲ್ಲಿ ಪ್ರಕಟಿಸಿರುವುದನ್ನು ನೋಡಿದರೆ ಬಗೆದುಂಬಿ ಅದರ ಮಹಿಮೆಯನ್ನೂ, ಪಂಪಾಕ್ಷೇತ್ರದ ಅಧಿಪತಿಗಳಾದ ವಿರೂಪಾಕ್ಷ-ಪಂಪಾಂಬಿಕೆಯರನ್ನೂ ಸ್ತುತಿಸಿರುವುದನ್ನು ಗಮನಿಸಿದರೆ ಬಹುವಾಗಿ ಕವಿಯು ತುಂಗಭದ್ರೆಯ ಆಜುಬಾಜಿನವನೇ ಇರಬೇಕು ಎಂದು ಊಹಿಸಬಹುದಾಗಿದೆ. ಕವಿ ತನ್ನ ಕೃತಿ ಸಮಾಪ್ತಿಯಾದ ಕಾಲವನ್ನು ಕೊನೆಯಲ್ಲಿ ಕೊಟ್ಟಿರುವನು (೧೨.೧೪೬). ಅದರ ಪ್ರಕಾರ ಶಾ.ಶ. ೧೧೪೪ (ಕ್ರಿ.ಶ. ೧೨೨೨)ರಲ್ಲಿ ಚಿತ್ರಭಾನು ಸಂವತ್ಸರದಲ್ಲಿ ಕೃತಿ ಪೂರ್ಣವಾಯಿತು. ಕೃತಿರಚನಾ ಕಾಲ ಕ್ರಿ.ಶ. ೧೨೨೨ ಎಂದು ಸ್ಪಷ್ಟವಾಗಿ ಕವಿ ಹೇಳಿರುವುದರಿಂದ ಕವಿಯ ಕಾಲವನ್ನು ಕ್ರಿ.ಶ. ೧೨೨೨ ಎಂದು ಸ್ವೀಕರಿಸಬಹುದು. ಆದರೆ, ಡಾ.ಎ. ವೆಂಕಟಸುಬ್ಬಯ್ಯನವರು ತಮ್ಮ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಎಂಬ ಕೃತಿಯಲ್ಲಿ ಸೋಮರಾಜನ ಕಾಲವನ್ನು ೧೫೨೨ ಎಂದು ನಿರ್ಧರಿಸಿರುವರು (ಪು. ೨೨೩). 'ಶಿವನೆಂದುತ್ತಮ ಶೈವರಂಬುರುಹನೇತ್ರಂಗೆತ್ತು ತಾಂ ವೈಷ್ಣವರ್......' ಎಂದು ಪ್ರಾರಂಭವಾಗುವ ಒಂದು ವೃತ್ತದ (೧;೧೦) ಭಾವವು ಬೇಲೂರು ಶಾಸನವೊಂದರ

(ಸಂಖ್ಯೆ ೨, ಪು. ೩೪೦; ಯಂ ಶೈವಾಸ್ಸಮುಪಾಸ್ಯತೇ.....' ಎಂಬ ಸಂಸ್ಕೃತ ಶ್ಲೋಕದಲ್ಲಿ ಪ್ರಕಟಗೊಂಡಿರುವುದು ಲಕ್ಷಿಸಬೇಕಾದ ಸಂಗತಿ. ಪೂರ್ವಕವಿಗಳಲ್ಲಿ ಹರೀಶ್ವರ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ - ಇವರುಗಳನ್ನು ಒಂದು ವೃತ್ತದಲ್ಲಿ ಸ್ತುತಿಸಿರುವನು. ತನ್ನ ಕೃತಿಗೆ ಪಂಪಾಪತಿಯೇ ಒಡೆಯನು ಎಂದು ಹೇಳಿಕೊಂಡಿರುವ (೧.೧೫) ಕವಿ ಮೊದಲ ಮೂರು ಪದ್ಯಗಳನ್ನು ವಿರೂಪಾಕ್ಷನ ಸ್ತುತಿಗೇ ಮೀಸಲು ಮಾಡಿರುವನು. ಒಂದು ಪದ್ಯದಲ್ಲಿ ಪಂಪಾಂಬಿಕೆಯನ್ನು ಸ್ತುತಿಸಿರುವನು (೧.೪). ಮುಂದೆ ಗಣಪತಿ, ವೀರಭದ್ರ, ಷಣ್ಮುಖ, ಬಸವೇಶ್ವರ, ಮುಖ್ಯರಾದ ಮಹೇಶ ಪೂಜಕರು - ಇವರುಗಳನ್ನು ಒಂದೊಂದು ಪದ್ಯದಲ್ಲಿ ಹೊಗಳಿರುವನು (೧.೫-೮). ಪರಮ ಜ್ಞಾನಮೂರ್ತಿಯಾದ ಅಲ್ಲಮಪ್ರಭುವನ್ನು ಕವಿಯು ತನ್ನ ಗುರುಮೂರ್ತಿಯಾಗಿ ಸ್ವೀಕರಿಸಿರುವನು. "ಸುವಿಲಾಸಂಬಡೆದೊಪ್ಪುವಲ್ಲಮನೆ ಬೆಚ್ಚಿರ್ಕೆನ್ನ ಚಿತ್ತಾಬ್ಜದೊಳ್" (೧.೧೦); "ಅಲ್ಲಮಾಂಕವೆಸರಂ ತಳೆದುಜ್ವಲಿಪಾರ್ಯರಾಟ್ಸು ಧಾರುಕ್ಷಯತೇಜನಂಘ್ರಿಕಮಲಂಗಳನಾಂ ನೆಱೆ ಪೊತ್ತು ಪೇೞ್ದಪೆಂ" (೧.೧೧); "ಗುರುವಲ್ಲಮಾಂಕ ನಾಮಸ್ಮರಣಮನೊಂದೊಂದು ನೆವದೊಳಭಿನುತಿಗೈವೆಂ" (೧.೨೯); "ಅಂ ಬಲ್ಲವೊಲಲ್ಲಮ ಪ್ರಭುವಿನೊಲ್ಮೆಯಿನೀ ಕಮನೀಯ ಕಾವ್ಯಮಂ ಸಲ್ಲಲಿತಾರ್ಥದೊಳ್ಪು ನೆಗೞ್ದಪ್ಪವೊಲೊಲ್ದುಸಿರ್ದೆಂ" (೧೨.೪೪) -ಹೀಗೆ ಹೇಳಿರುವುದನ್ನು ಗಮನಿಸಿದಾಗ ಕವಿಯು ತನ್ನ ಕಾಲಕ್ಕೆ ಪೂರ್ವದಲ್ಲಿ ಅಂದರೆ, ಸು. ೬೦-೬೫ ವರ್ಷಗಳ ಹಿಂದಿದ್ದ ಬಸವ ಸಮಕಾಲೀನನಾದ ಮಹಾನ್ ಶರಣ ಅಲ್ಲಮಪ್ರಭುವನ್ನು ಪ್ರೀತ್ಯರ್ಥವಾಗಿ ಭಕ್ತಿ ಗೌರವಗಳಿಂದ ತನ್ನ ಗುರುವೆಂದು ಮನ್ನಿಸಿರುವನು. ಪ್ರತಿ ಆಶ್ವಾಸಾಂತ್ಯ ಪದ್ಯದಲ್ಲಿ ಶಿವನನ್ನು ನೆನೆಯುವ ವ್ಯಾಜದಿಂದ "ರಕ್ಷಿಪುದೆನ್ನನೆಯಲ್ಲಮಪ್ರಿಯಾ" ಎಂದು ಹೇಳಿರುವನು.

ಉದ್ಭಟಕಾವ್ಯವನ್ನು ಸೋಮರಾಜನು ರಾಯಸದ ಲಿಂಗರಸನಿಗೆ ಹೇಳಿ ಅವನಿಂದ ಬರೆಯಿಸಿರಬೇಕು. "ಎನ್ನೆರ್ದೆವಂದ ರಾಯಸದ ಲಿಂಗರಸಂ ಬರೆಯಲ್....." ಎಂಬ ಹೇಳಿಕೆ (೧೨.೧೪೫) ಬಹುಶಃ ಇದನ್ನೇ ಹೇಳುವಂತಿದೆ. ಕವಿಯು ತನ್ನನ್ನು "ಕವಿಯಲ್ಲಂ, ಶಾಸ್ತ್ರಿಯಲ್ಲಂ, ವಿಪುಳ ಬುಧನುಮಲ್ಲಂ, ಪ್ರಸ್ಫುರದ್ವಾಗ್ಮಿಯಲ್ಲಂ ಶಿವಭಕ್ತಾನೀಕಪಾದಾಂಬುಜ ರಜಮೆನಿಪುದ್ಯದ್ವಿಭೂತಿ ಪ್ರಸನ್ನೋತ್ಸವದಿಂದಂ ಪೇೞ್ದೆನಿಂತೀ ವಿಲಸಿತಕೃತಿಯಂ ಬಲ್ಲ ಪಾಂಗಿಂದೆ" ಎಂದು (೧೨.೧೪೩) ವಿನಯವನ್ನು ಪ್ರಕಟಿಸಿರುವನು. ಈ ವಿನಯದ ಜೊತೆಗೇ ಆತ್ಮವಿಶ್ವಾಸದಿಂದ ದೀಪ್ತವಾದ ಸ್ವಪ್ರಶಂಸೆಯ ಕೆಳಗಿನ ಮಾತುಗಳೂ ಅವನಲ್ಲಿ ಕಾಣಬರುತ್ತವೆ:

ಸರಸರ ಚೇತನೋತ್ಪಲಕೆ ಪೂರ್ಣಹಿಮಾಂಶುಮರೀಚಿಯಾಗೆ, ಬ-
ಲ್ಲರ ಕಿವಿಗಳ್ಗೆ ಮಾಣಿಕದ ಮಂಜರಿಯಾಗೆ, ಪಳಂಚದೋದುವ-
ಕ್ಕರಿಗರ ಜಿಹ್ವೆಗಿಂಪಮರ್ದನೂತ್ನತರಾಮೃತಧಾರೆಯಾಗೆ, ಕೂ-
ರ್ತೊರೆವೆನಪಾರಸಾರಗುಣವೃಂದಮನೀ ರುಚಿರಪ್ರಬಂಧಮಂ॥

ಹಿಮರುಚಿಮಂಡಲಂ ನವಚಕೋರಿಗೆ, ಚಾದಗೆಗಂಬುದಾಗಮಂ
ವಿಮಲವಸಂತಸಂಪದವದನ್ಯಭೃತಕ್ಕೆ, ಸುಧಾಬ್ಧಿ ಹಂಸೆಗು-

ದ್ಗಮವೆಳದುಂಬಿಗೊಂದಿನಿತರೋಚಕಮಪ್ಪುದೆ ಸೋಮರಾಜಚಂ-
ದ್ರಮನ ವಚಸ್ಸುಧಾಲಹರಿ ಸಜ್ಜನಸಂತತಿಗೇನಸಹ್ಯಮೇ॥ (೧.೧೨,೧೬)

ಚಂದ್ರಮರೀಚಿಯಂತೆ, ತನಿಮಾವಿನ ಪಣ್ಗಳ ತಂದಲಂತೆ, ದೇ
ವೇಂದ್ರಮಹೀಜದಂತೆ, ಮಲಯಾನಿಲನಂತೆ, ವಸಂತನಂತೆ, ಸ
ದ್ರುಂದ್ರ ಸುಧಾಬ್ಧಿಯಂತೆ, ನವಚಂಪಕಮಂಜರಿಯಂತೆ, ಸೋಮರಾ
ಜೇಂದ್ರನ ಕಬ್ಬದಿಂಪು ಬುಧರಂ ಬಗೆಗೊಳ್ವುದಿಳಾತಳಾಗ್ರದೊಳ್॥

ನಲ್ಲಳ ಬೇಟವಾತೊ, ಶುಕಚಾರುನಿನಾದಮೊ, ವಾಗ್ವಧೂಟಿಕಾ
ವಲ್ಲಕಿಯೊಪ್ಪುವಿಂಚರಮೊ, ಚೈತ್ರಪಿಕಧ್ವನಿಯೋ, ಸಮಂತು ಪೂ
ವಿಲ್ಲನ ಚಾಪಸಂಜನಿತಮೋಹನನಾದಮೊ, ಸೋಮರಾಜಭೂ
ವಲ್ಲಭನಿಂಪುವೆತ್ತ ವಚನಾಮೃತಮೋ ವಿಬುಧಾನುರಾಗಮೋ॥ (೧.೩೨,೩೩)

ಇಷ್ಟೆಲ್ಲಾ ಹೊಗಳಿಕೊಂಡಿರುವ ಸೋಮರಾಜ ಪ್ರಾಚೀನ ಕಾವ್ಯಪರಂಪರೆಯ ಬಗೆಗೆ ಅಕ್ಕರೆಯುಳ್ಳವನು; ಪೂರ್ವ ಸೂರಿಗಳು ಸಮೆಸಿದ ಹಾದಿಯಲ್ಲಿ ನಡೆಯುವಲ್ಲಿ ಉತ್ಸಾಹಿ; ವಿದ್ವದ್‌ಪ್ರೇಮಿ; ಆಳವಾದ ಪಾಂಡಿತ್ಯವುಳ್ಳ ವಿದ್ವಾಂಸ. ಆದರೆ ಇವನ ಪ್ರತಿಭೆಯನ್ನು ಒರೆಹಚ್ಚಿ ನೋಡಲು ಸಧ್ಯಕ್ಕೆ ನಮಗೆ ದೊರಕಿರುವುದು ಉದ್ಭಟಕಾವ್ಯವೊಂದೇ. ಉದ್ಭಟಕಾವ್ಯಕ್ಕೆ 'ಶೃಂಗಾರಸಾರ'ವೆಂಬ ಮತ್ತೊಂದು ಹೆಸರೂ ಇದೆ (೧.೧೩). ಹೆಸರೇ ಸೂಚಿಸುವಂತೆ ಕೃತಿ ಶೃಂಗಾರಪ್ರಧಾನವಾದದ್ದು. ಕೃತಿಯ ಕಥಾಭಿತ್ತಿ ಚಿಕ್ಕದು. 'ಪ್ರಮಥಾನೀಕ ಕಥಾರ್ಣವೇಂದು'ವಾದ ಹರಿಹರನು ಮೊದಲಿಗೆ ಈ ಕಥೆಯನ್ನು 'ಉದ್ಭಟಯ್ಯನ ರಗಳೆ' ಎಂಬ ತನ್ನ ಕೃತಿಯಲ್ಲಿ ಹೇಳಿರುವನು. ಈ ರಗಳೆ ಗಾತ್ರದಲ್ಲಿ ತೀರಾ ಪುಟ್ಟದು (೨೧೪ ಸಾಲುಗಳು ಮಾತ್ರ). ಉದ್ಭಟದೇವ ಹಾಗೂ ಅವನ ಮನೋವಲ್ಲಭೆ ಸುಖ ಸಂತೋಷದಿಂದಿರಲು, ಒಂದು ದಿನ ಪತ್ನಿಯೊಡನೆ ಪಗಡೆಯಾಡುತ್ತ ಉದ್ಭಟದೇವನು ಅಕಾರಣವಾಗಿ ನಕ್ಕನು. ಅದಕ್ಕಾಗಿ ಮಾನಿನಿಯು ಮುನಿಸುಗೊಳ್ಳಲು ಅವಳನ್ನು ಸಮಾಧಾನಿಸಲು ಉದ್ಭಟನು ಪ್ರಯತ್ನಿಸುವನು. ನಗೆಗೆ ನಿನ್ನ ಕಾರಣವಲ್ಲ, ನನ್ನ ಶರಣರ ಸರಸ ಕಾರಣವೆಂದು ಹೇಳಿ, ಸೌರಾಷ್ಟ್ರದ ಓಹಿಲನು ತಾರಾದ್ರಿಗೆ ಒಬ್ಬನೇ ಹೋಗುತ್ತಿರುವುದನ್ನು ಕಂಡು ನಗು ಬಂದಿತೆಂದು ತಿಳಿಸುವನು. ನೀನು ಪುರದೊಂದಿಗೆ ಕೈಲಾಸಕ್ಕೆ ಹೋದದ್ದೇ ಆದರೆ ನಗೆ ಒಪ್ಪುವುದು ಎಂದು ಮಾನಿನಿಯು ಕಟಕಿಯಾಡಿದಳು. ಉದ್ಭಟನು ಅದಕ್ಕೊಪ್ಪಿ ನಾಡಿದ್ದು ಸೋಮವಾರ ಪುರಸಹಿತ ಹೋಗುವುದಾಗಿ ಪತ್ನಿಯೊಡನೆ ನುಡಿದನು. ನುಡಿದಂತೆ ನಡೆದ ಉದ್ಭಟನು ಕೈಲಾಸದಲ್ಲಿ ಶಿವನ ಕೃಪೆ ಪಡೆದು ಗಣಪದವಿಯನ್ನು ಹೊಂದಿದನು. ಶಿವನ ಕರುಣೆ ಪುರಜನರಿಗೆಲ್ಲ ಪ್ರಾಪ್ತವಾಯಿತು. ಪುರವನ್ನು ಶಿವಲೋಕದಲ್ಲಿ ಶಿವನು ನೆಲೆಗೊಳಿಸಿದನು.

ಸೋಮರಾಜನು ನೇರವಾಗಿ ತನ್ನ ಕೃತಿಗೆ ಮೂಲ ಆಕರ ಯಾವುದೆಂಬುದನ್ನು ಎಲ್ಲಿಯೂ ತಿಳಿಸಿಲ್ಲ. ಬಹುವಾಗಿ ಸೋಮರಾಜನು ಕೃತಿರಚನೆಗೆ ಸ್ಫೂರ್ತಿಯನ್ನು ಹರಿಹರನ 'ಉದ್ಭಟಯ್ಯನ ರಗಳೆ' ಹಾಗೂ 'ಓಹಿಲಯ್ಯನ ರಗಳೆ'ಗಳಿಂದ ಪಡೆದಿರಬಹುದು. ಸದ್ಯಕ್ಕೆ

ಕನ್ನಡದಲ್ಲಿ ಉದ್ಭಟ ಹಾಗೂ ಓಹಿಲದೇವರ ಬಗೆಗೆ ಮೊದಲಿಗೆ ಕೃತಿರಚನೆ ಮಾಡಿದವನು ಹರಿಹರನು. ಹರಿಹರನನ್ನು ಬಹಳ ಭಕ್ತಿಯಿಂದ ನೆನೆದಿರುವುದರಿಂದ ಸೋಮರಾಜನು ಹರಿಹರನಿಂದ ಮೂಲಕಥೆಯನ್ನು ಸ್ವೀಕರಿಸಿರಬಹುದೆಂದು ಊಹಿಸಬಹುದು. ಶೈಲಿಯ ದೃಷ್ಟಿಯಿಂದ ನೋಡಿದಾಗ ಹರಿಹರನನ್ನು ಸೋಮರಾಜ ಅನುಸರಿಸಿರುವನೆಂದು ಹೇಳಬಹುದು. ಹನ್ನೆರಡು ಆಶ್ವಾಸಗಳ 'ಮಹಾಕಾವ್ಯ'ವನ್ನು ಸೋಮರಾಜ ಬರೆಯಹೊರಟದ್ದರಿಂದ ಮೂಲದ ಪುಟ್ಟ ಕಥೆಯನ್ನು ಹಿಗ್ಗಿಸಲಿಕ್ಕಾಗಿ ಶುಕ ಸಂಭಾಷಣೆ, ಚಿದಂಗ ಚರಿತ್ರೆ, ನಿಘರ್ಜಾಸುರ ಸಂಹಾರ - ಇವೇ ಮೊದಲಾದ ಕಾಲ್ಪನಿಕ ಕಥೆಗಳನ್ನೂ ಅಷ್ಟಾದಶ ವರ್ಣನೆಗಳನ್ನೂ ಆಧರಿಸಿರುವನು.

**ಕಥಾಸಾರ**

ಮೇರುಪರ್ವತದ ದಕ್ಷಿಣ ದಿಶಾಭಾಗದಲ್ಲಿ ಘೂರ್ಜರ ದೇಶವಿರುವುದು. ಅದರಲ್ಲಿ ಭಲ್ಲಕೀನಗರವೆಂಬ ಪಟ್ಟಣವಿರುವುದು. ಅದಕ್ಕೆ ಉದ್ಭಟದೇವನು ಒಡೆಯನು. ಶೈವಧರ್ಮೀಯನಾದ ಇವನು ಚಂದ್ರವಂಶದ ಅರಸು. ಈತನು ಚಂದ್ರನಂತೆ ಸಲ್ಲಕ್ಷಣನೂ; ಮಾರುತನಂತೆ ಮಹಾಬಲನೂ; ವರುಣನಂತೆ ಚತುಸ್ಸಮುದ್ರಾಧೀಶ್ವರನೂ; ಕುಬೇರನಂತೆ ರಾಜರಾಜನೂ; ವಸಂತನಂತೆ ಸುಜನಾನುರಾಗನೂ; ತ್ಯಾಗ, ಭೋಗ, ಶೌರ್ಯ, ಧೈರ್ಯಾದಿ ಸಕಲ ಸದ್ಗುಣ ಮಣಿಗಣದಿಂದ ಶೋಭಿಸುವವನೂ ಆಗಿದ್ದನು. ದಾನಶೀಲನೂ ಪರಾಕ್ರಮಿಯೂ ಆದ ಈ ರಾಜನಿಗೆ ಶಿವಭದ್ರನೆಂಬ ಅಚ್ಚುಮೆಚ್ಚಿನ ಮಂತ್ರಿಯಿದ್ದನು. ಇವನೊಡನೆ ನಿರಾತಂಕವಾಗಿ ರಾಜ್ಯಪರಿಪಾಲನೆ ಮಾಡುತ್ತ, ಶಿವಯೋಗ ಚರಿತನಾಗಿ, ಭರಿತನಾಗಿ ಶೈವಸುಖದಿಂದ ರಾಜ್ಯಭಾರಮಾಡುತ್ತ ಸುಖದಿಂದಿದ್ದನು. ಮಹಾರಾಜನು ರಾಜಕಾರ್ಯನಿರ್ವಹಣೆಗಾಗಿ ಆಗಾಗ್ಗೆ ಸಭೆ ಕರೆಯುತ್ತಿದ್ದನು.

ಒಂದು ದಿನ ಸಭೆ ನೆರೆದಿದ್ದಿತು. ಆ ಸಭೆಯಲ್ಲಿ ಮಂತ್ರಿಗಳು, ಮಾಂಡಲಿಕರು, ಮಕುಟವರ್ಧನರು, ದಂಡಾಧೀಶರು, ಪಟುಭಟರು, ಪರಾಕ್ರಮಿಗಳು ಒಂದೆಡೆಯಲ್ಲೂ; ವಿಶ್ವವಿದ್ಯಾ ಬೋಧಕರು, ವೈದ್ಯರು, ಜೋಯಿಸರು, ವಿದ್ವಾಂಸರು, ಕವಿ ಗಮಕಿ ವಾದಿ ವಾಗ್ಮಿಗಳು, ನಚ್ಚಣಿಗರು, ಸಂಗೀತಗಾರರು, ವೇಶ್ಯಾಂಗನೆಯರು ಮತ್ತೊಂದೆಡೆಯಲ್ಲೂ ಸೇರಿ ತಮ್ಮ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾ ಜನರನ್ನು ಸಂತೋಷಪಡಿಸುತ್ತಿದ್ದರು. ಆ ಸಮಯದಲ್ಲಿ ಓರ್ವ ಋಷಿಕುಮಾರನು ಆ ಸಭೆಗೆ ಬಂದನು. ಇವನನ್ನು ನೋಡಿದ ಕೂಡಲೇ ಆನಂದಾಶ್ಚರ್ಯಗಳಿಂದ ಕೂಡಿ ಮಹಾರಾಜನು ಇದಿರಾಗಿ ಬಂದು ಆ ಋಷಿಕುಮಾರನಿಗೆ ಯೋಗ್ಯವಾದ ಮರ್ಯಾದೆಯನ್ನು ಮಾಡಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ, ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ಬಂದ ಕಾರಣವನ್ನೂ ಆತನು ಯಾರೆಂಬುದನ್ನೂ ತಿಳಿಸಬೇಕೆಂದೂ ಕೇಳಿಕೊಂಡನು. ಅದಕ್ಕೆ ಪ್ರತಿಯಾಗಿ ಮುನಿಕುಮಾರನು ಎಲೈ ರಾಜಾಧಿರಾಜನೇ, ನಾನು ದೇವಲನೆಂಬ ಮಹರ್ಷಿಯ ಶಿಷ್ಯ. ನನ್ನ ಗುರುಗಳು ಮಾಡುವ ಯಜ್ಞವನ್ನು ನಿಘರ್ಜನೆಂಬ

ದುಷ್ಟ ರಾಕ್ಷಸನು ಕೆಡಿಸುತ್ತಿರುವನು. ಆ ರಾಕ್ಷಸನನ್ನು ನಿಗ್ರಹಿಸಿ ಯಜ್ಞವು ಸಾಂಗವಾಗಿ ನೆರವೇರಲು ಸಹಾಯಮಾಡಬೇಕು. ಅದಕ್ಕಾಗಿ ಗುರುವಿನಿಂದ ಆಜ್ಞಪ್ತನಾಗಿ ಬಂದಿರುವೆನು ಎಂದನು.

ಅದನ್ನು ಕೇಳಿದ ಉದ್ಭಟನು, ಪುಣ್ಯ ಪುರುಷಾರ್ಥಗಳೆರಡೂ ಪ್ರಾಪ್ತಿಯಾಯಿತು. ಯಾಗದ ನಾಶಕ್ಕೆ ಬರುವ ರಾಕ್ಷಸನನ್ನು ಕೊಂದು ಮುನೀಶ್ವರನ ಯಾಗ ಸಂರಕ್ಷಣೆಯನ್ನು ಮಾಡುವೆನು ಎಂದು ಹೇಳಿ ಆ ಮುನಿಕುಮಾರನನ್ನು ಉಪಚರಿಸಿ ಬೀಳ್ಕೊಟ್ಟನು. ಸಭೆಯನ್ನು ಮುಕ್ತಾಯಮಾಡಿದ ಅರಸನು ಸಕಲ ಸೇನೆಯನ್ನು ಸಜ್ಜುಗೊಳಿಸಲು ಮಂತ್ರಿಗೆ ಆದೇಶ ನೀಡಿ ಸ್ವಲ್ಪ ಕಾಲ ಶಿವಧ್ಯಾನ ಮಾಡಿ, ಯುದ್ಧಕ್ಕಾಗಿ ಚತುರಂಗ ಬಲ ಸಮೇತನಾಗಿ ದಕ್ಷಿಣಾಭಿಮುಖನಾಗಿ ಹೊರಟನು. ದಾರಿಯಲ್ಲಿ ನಾನಾ ದೇಶ ತೀರ್ಥಕ್ಷೇತ್ರಾದಿಗಳನ್ನೂ ಪರ್ವತ ಗ್ರಾಮ ಪಟ್ಟಣಗಳನ್ನೂ ದಾಟಿ ರೇವಾ ನದೀತೀರಕ್ಕೆ ಬಂದನು. ಅಲ್ಲಿಂದ ಮುಂದೆ ವಿಂಧ್ಯಪರ್ವತ ಪ್ರದೇಶವನ್ನು ಹೊಕ್ಕು ಬೇಡರ ಬೇಟೆಯ ನಾನಾ ವಿನೋದಗಳನ್ನು ನೋಡುತ್ತ ವಿಂಧ್ಯಾಟವಿಯನ್ನು ದಾಟಿ, ಗೋದಾವರೀ ತೀರಕ್ಕೆ ಬಂದು ಅಲ್ಲಿ ಒಂದೆರಡು ದಿನ ಇದ್ದು ನಾನಾ ವಿನೋದಗೋಷ್ಠಿಗಳಲ್ಲಿ ಕಾಲ ನೂಕಿದನು. ಬಳಿಕ ಕುಂತಳ ದೇಶವನ್ನು ಪ್ರವೇಶಿಸಿ ಅದರ ವೈಭವವನ್ನು ನೋಡುತ್ತಾ ತುಂಗಭದ್ರಾ ನದೀತೀರಕ್ಕೆ ಬಂದು ಪಂಪಾಕ್ಷೇತ್ರವನ್ನು ಕಂಡನು. ಪಂಪಾಕ್ಷೇತ್ರವನ್ನು ಹೊಕ್ಕ ಉದ್ಭಟನು ಭಯಭರಿತ ಭಕ್ತಿಯಿಂದ ಪಂಪಾದೇವಿಯ ಸಂದರ್ಶನ ಸಂಕೀರ್ತನ ಮಾಡಿ ಬರುತ್ತಿರುವಲ್ಲಿ ಓರ್ವ ಋಷಿಯನ್ನು ಕಂಡನು. ಅವನಿಗೆ ವಂದಿಸಿ ಅವನಿಂದ ಹಂಪೆಯ ಮಹಿಮೆಯನ್ನು ಕೇಳಿ ತಿಳಿದು ಆನಂದಹೊಂದಿ ಅಲ್ಲಿಂದ ಬೀಳ್ಕೊಂಡು ವಿರೂಪಾಕ್ಷನನ್ನು ಸಂದರ್ಶಿಸಲು ಹೋಗುತ್ತಿರುವಾಗ ತುಂಗಭದ್ರೆಯು ಕಂಗೊಳಿಸಿತು. ಅದನ್ನು ದಾಟಿ ವಸಿಷ್ಠಾಶ್ರಮ ಪ್ರಾಂತದಲ್ಲಿ ಮಿಂದು ಮಡಿಯುಟ್ಟು ಭಸ್ಮ ರುದ್ರಾಕ್ಷಿಗಳನ್ನು ಧರಿಸಿ ಶಿವಭಕ್ತರಿಗೂ ಬ್ರಾಹ್ಮಣರಿಗೂ ನಾನಾ ದಾನಗಳನ್ನು ಮಾಡಿ ಲೋಕೈಕ ಮಾತೆಯಾದ ಹಿರಿಯ ಪಂಪಾದೇವಿ ಹಾಗೂ ಪಂಪಾಧಿನಾಥನ ಸಂದರ್ಶನ ಸಮರ್ಚನ ಸಂಸ್ತವಗಳಿಂದ ಮನವಾರೆ ತಣಿದನು. ಅಲ್ಲಿಂದ ಮುಂದೆ ದೇವಲ ಮಹರ್ಷಿಯ ಸನ್ನಿಧಾನಕ್ಕೆ ಬಂದು ಅವರ ಶ್ರೀಪಾದಗಳಿಗೆ ನಮಿಸಿದನು. ಮಹರ್ಷಿಯು ಮಹಾರಾಜನ ಸದ್ಭಾವಕ್ಕೆ ಮೆಚ್ಚಿ ಆತನ ಕೈಹಿಡಿದು ಹತ್ತಿರದಲ್ಲೇ ಕುಳ್ಳಿರಿಸಿಕೊಂಡು ಉಪಚರಿಸುತ್ತ ಮಧುರೋಕ್ತಿಗಳನ್ನು ಆಡಿದನು. ಮಹರ್ಷಿಯ ವಿನಯೋಕ್ತಿಯನ್ನು ಆಲಿಸುತ್ತ ಯಜ್ಞಸಿದ್ಧತೆ ಆಗುವವರೆಗೆ ದಿನಗಳನ್ನು ಬಂಜೆಯಿಲ್ಲದಂತೆ ದಾನಾದಿ ಸತ್ಕ್ರಿಯೆಗಳಲ್ಲಿ ಕಳೆಯುತ್ತ ಮಹಾರಾಜನು ಹಂಪೆಯಲ್ಲಿರಲು ಹಿಮಗಾಲ ಕಾಣಿಸಿಕೊಂಡಿತು. ಸಕಲ ಸಾಮಗ್ರಿಗಳಿಂದ ಸಿದ್ಧನಾದ ದೇವಲನು ಯಜ್ಞವನ್ನು ಪ್ರಾರಂಭಿಸಿದನು. ಒಂದು ಸುಮುಹೂರ್ತದಲ್ಲಿ ಯಜ್ಞ ಪ್ರಾರಂಭವಾಯಿತು. ಇನ್ನೇನು ಪೂರ್ಣಾಹುತಿ ಕೊಡಬೇಕು ಎನ್ನುವಾಗ ನಿಘರ್ಜಾಸುರನ ಧಾಳಿಯಾಯಿತು. ಅವನನ್ನು ಉದ್ಭಟನು ಯುದ್ಧದಲ್ಲಿ ಪರಲೋಕಕ್ಕೆ ಕಳುಹಿಸಿ ಯಜ್ಞವು ನಿರ್ವಿಘ್ನವಾಗಿ ಮುಂದುವರಿಯಲು ಸಹಾಯಮಾಡಿದನು. ಅನಂತರ ಸೇನೆಯನ್ನೆಲ್ಲಾ ಹಿಂತಿರುಗಿಸಿ ಆಪ್ತನಾದ ಮಂತ್ರಿ

ಶಿವಭದ್ರನೊಡನೆ ಒಂದು ಸರೋವರಕ್ಕೆ ಹೋಗಿ ಸ್ನಾನವನ್ನು ಮಾಡಿ ನೀರನ್ನು ಕುಡಿದು ಆಯಾಸವನ್ನು ಪರಿಹರಿಸಿಕೊಳ್ಳಲು ಆ ಸರೋವರ ಬಳಿಯ ಆಲದಮರದ ನೆರಳಿನಲ್ಲಿ ಕುಳಿತನು.

ಅದೇ ವೇಳೆಗೆ ಓರ್ವ ಬೇಟೆಗಾರನು ಬೇಟೆಯಾಡಿ ಬಳಲಿ ತಂಗೊಳದ ನೀರನ್ನು ಕುಡಿದು ವಿಶ್ರಮಿಸಲೆಂದು ಮರದಡಿಗೆ ಬಂದನು. ಅವನ ಹೆಗಲ ಮೇಲೆ ಬಿಲ್ಲೊಂದು ಇದ್ದಿತು. ಅದರ ಒಂದು ತುದಿಗೆ ಬಲೆಯೊಂದಿದ್ದಿತು. ಆ ಬಲೆಯೊಳಗೆ ಗಿಳಿಯೊಂದು ಸಿಕ್ಕಿಬಿದ್ದಿತ್ತು. ಬಂಧನದಲ್ಲಿ ಅಂಗವು ಚಲಿಸದಂತಾಗಿ ಕಣ್ಣುಗಳು ತಿರುಗಿ ಗಂಟಲಿನಲ್ಲಿ ಗುರುಗುರು ಶಬ್ದವು ಹುಟ್ಟಿ ಪ್ರಾಣಹೋಗುವ ಸಮಯ ಬಂದಿದ್ದಿತು. ಆ ಸ್ಥಿತಿಯಲ್ಲಿ ಗಿಳಿಯನ್ನು ನೋಡಿದ ಉದ್ಭಟನ ಮನಕರಗಿ ಗಿಳಿಯನ್ನು ಬಂಧನದಿಂದ ಬಿಡುಗಡೆ ಮಾಡುವಂತೆ ಹೇಳಿದನು. ಗಿಳಿಯನ್ನು ಬಿಟ್ಟದ್ದೇ ಆದರೆ ನನ್ನನ್ನೂ ನನ್ನ ಜನರನ್ನೂ ಕಾಪಾಡುವ ಬಗೆ ಯಾವುದು? ಎಂದು ಬೇಡನು ನುಡಿಯಲು ಒಡನೆಯೇ ರಾಜನು ತನ್ನ ಮುಂಗೈಯಲ್ಲಿದ್ದ ಮಣಿಕಂಕಣವನ್ನೇ ತೆಗೆದುಕೊಟ್ಟು ಆ ಗಿಳಿಯನ್ನು ಬೇಡನಿಂದ ಪಡೆದನು. ರಾಜನ ಶೈತ್ಯೋಪಚಾರದಿಂದ ಮೆಲ್ಲಮೆಲ್ಲನೆ ಚೇತರಿಸಿಕೊಂಡ ಗಿಳಿಯು "ಎಲೈ ಮಹಾರಾಜನೆ ನೀನಾರು? ನನ್ನನ್ನು ಉಪಚರಿಸಲು ಕಾರಣವೇನು?" ಎಂದು ಕೇಳಿತು. ಆಗ ಮಹಾರಾಜನು ಅಚ್ಚರಿಗೊಂಡು "ಎಲೈ ಗಿಳಿಯೇ ನೀನು ಪಕ್ಷಿಕುಲಕ್ಕೆ ಸೇರಿದವನು. ನಿನಗೆ ಮನುಷ್ಯರಂತೆ ಮಾತನಾಡುವ ಶಕ್ತಿ ಬಂದುದು ಹೇಗೆ?" ಎಂದು ಕೇಳಿದನು. ಗಿಳಿಯು ಆಗ ತನ್ನ ಮುನ್ನಿನ ವೃತ್ತಾಂತವನ್ನು ಹೇಳಲು ತೊಡಗಿತು.

ಎಲೈ ರಾಜಚಂದ್ರ! ಕೇಳು. ನಾನು ಚಿದಂಗಮುನಿಯ ಶಿಷ್ಯನು. ನನ್ನ ಹೆಸರು ಶುಕನೆಂಬುದು. ಗುರುವಾಜ್ಞೆಯಂತೆ ನಾನು ಹೂ ತರಲು ಹೋಗಿದ್ದೆನು. ಆಗ ನನ್ನ ಮನಸ್ಥಿತಿಯನ್ನು ಪರೀಕ್ಷಿಸಲೆಂದು ಒಂದು ಮಹೇಂದ್ರಜಾಲವನ್ನು ಹರಡಿದನು. ಹೂತೆಗೆದುಕೊಂಡು ನಾನು ಬರುವಷ್ಟರಲ್ಲಿ ನಾನೆಂದೂ ನೋಡದ ಮನಸೆಳೆವ ಮಂಟಪವೊಂದು ಆಶ್ರಮದಲ್ಲಿ ಕಂಗೊಳಿಸಿತ್ತು. ಮಂಗಳಮಯವಾದ ಆ ಮಂಟಪದ ತುಂಬ ಮೋಹನಾಂಗಿಯರು ನೆರೆದಿದ್ದರು. ಇವರ ನಡುವೆ ಚಿದಂಗಮುನಿಯಿದ್ದನು. ಆ ಮಂಟಪದ ಮಧ್ಯೆ ಒಂದು ಶ್ರೀಚಕ್ರ; ಆ ಚಕ್ರದಲ್ಲಿ ಓರ್ವ ಬಾಲೆ; ನನ್ನ ಗುರು ಚಿದಂಗನು ಆ ಬಾಲೆಯನ್ನು ಪೂಜಿಸುತ್ತಿದ್ದನು. ಅಲ್ಲಿ ಸುತ್ತ ಮುತ್ತ ಅನೇಕ ಬಗೆಯ ಕುಸುಮಗಳು, ಅಪಾನಪೇಯ ಅಭಕ್ಷ್ಯ ಭಕ್ಷಣದ ಸಾಮಗ್ರಿಗಳು ಇದ್ದುವು. ಸುರೆಯಿಂದ ತುಂಬಿದ ಒಂದು ಚಿನ್ನದ ಕೊಡವೂ ಇದ್ದಿತು. ಅದರಲ್ಲಿ ಇದ್ದ ಸುರೆಯನ್ನು ತೆಗೆದು ಅಂಬಿಕಾಸ್ತೋತ್ರದಿಂದ ಪೂಜಿಸಿ ಚಕ್ರವನ್ನು ಮೆಟ್ಟಿ ನಿಂತಿದ್ದ ಆ ಬಾಲೆಗೆ ಚಿದಂಗನು ಕೊಟ್ಟನು. ಮುಂಗಾರಹನಿಯನ್ನು ಸೇವಿಸುವ ಜಾತಕಪಕ್ಷಿಯಂತೆ ಅವಳು ಅದನ್ನು ಮೊದಲು ಕುಡಿದಳು. ಅವಳು ಕುಡಿದು ಬಿಟ್ಟುದನ್ನು ಚಿದಂಗಮುನಿಯೂ, ಉಳಿದ ಋಷಿಗಳೂ ಮಿಕ್ಕ ಅಂಗನೆಯರೂ ಸೇವಿಸಿದರು. ಇವನ್ನೆಲ್ಲಾ ನೋಡಿದ ನನಗೆ ಬಹಳ ವ್ಯಸನವಾಯಿತು; ಗುರುಭಕ್ತಿಯೆಲ್ಲಾ ಬಯಲಾಯಿತು.

ಅಯ್ಯೋ ದುರಾತ್ಮ! ಇದುವರೆಗೆ ನಿನ್ನನ್ನು ಅಗ್ರಗಣ್ಯ ಪುಣ್ಯಾತ್ಮನೆಂದೇ ಬಗೆದಿದ್ದೆನು. ಹೀಗೆ ದುರ್ಮಾರ್ಗ ಪ್ರವರ್ತಕನೆಂದು ತಿಳಿದಿರಲಿಲ್ಲ ಎಂದು ಪಶ್ಚಾತ್ತಾಪಪಡುತ್ತಾ ಕುಳಿತಿದ್ದೆನು. ಅಷ್ಟರಲ್ಲಿ ಮುನಿಯು ಹರಡಿದ್ದ ಇಂದ್ರಜಾಲವು ಮಾಯವಾಯಿತು. ಮಹಾತ್ಮನಾದ ಚಿದಂಗನೊಬ್ಬನೇ ಉಳಿದನು. ನನಗೆ ಬಹಳ ಆಶ್ಚರ್ಯವಾಯಿತು. ಗುರುವಿನ ಮಹಿಮೆಗೆ ನಾನು ನಡುಗಿದೆನು. ಆಗ ಗುರುವು "ಎಲೈ ಚಂಚಲನಾದ ಶುಕನೇ, ನಿನಗೆ ಗುರುಭಕ್ತಿ ಸಾಲದು. ನಿನಗೆ ಮಾನವಜನ್ಮವು ಹೋಗಿ ಶುಕಜನ್ಮವು ಬರಲಿ" ಎಂದು ಶಾಪವಿತ್ತನು. ನಾನು ಬಗೆಬಗೆಯಾಗಿ ಬೇಡಿದೆನು. ಆಗ "ಪಾರ್ವತೀವರದಿಂದ ಜನಿಸಿದ ಕನ್ಯೆಯ ಕೈಯಲ್ಲಿ ನೀನು ಎಂದು ಸಹಜವಾಗಿ ಸಿಕ್ಕುವೆಯೋ ಅಂದಿನಿಂದ ನಿನಗೆ ನಿನ್ನ ಪೂರ್ವಜನ್ಮಜ್ಞಾನವೂ ಭಾಷಣಶಕ್ತಿಯೂ ಉಂಟಾಗಲಿ ಮತ್ತು ಅದೇ ಕನ್ಯೆಯ ವಿವಾಹದ ನಾಲ್ಕನೆಯ ದಿನದ ಓಕುಳಿಯಾಟದಲ್ಲಿ ನೀನು ಒದ್ದೆಯಾದ ಒಡನೆಯೇ ಪುನಃ ನಿನ್ನ ಮೊದಲಿನ ನಿಜಜನ್ಮ ಬರಲಿ" ಎಂದು ಮುನಿಯು ವಿಶಾಪವನ್ನು ಅನುಗ್ರಹಿಸಿದನು.

ಚಿದಂಗಮುನಿಯ ಶಾಪದಿಂದಾಗಿ ನನಗೆ ಗಿಳಿಯ ಜನ್ಮವು ಬಂದಿತು. ನಾನು ಸುತ್ತಾಡುತ್ತಾ ಒಂದು ವನವನ್ನು ಸೇರಿದೆನು. ಒಂದು ದಿನ ಓರ್ವ ರಾಜಕುಮಾರಿಯು ಜಲವಿಹಾರ ಮಾಡಲು ಬಂದು ಒಂದು ಕೊಳದಲ್ಲಿ ಸ್ನಾನವನ್ನು ಮಾಡುತ್ತಿರುವಾಗ ನಾನು ಅವಳ ತುಟಿಯನ್ನು ತೊಂಡೆಯ ಹಣ್ಣೆಂದು ಭಾವಿಸಿ ಹಿಡಿಯಲು ಹೋದೆನು. ಆಕೆ ನನ್ನನ್ನು ಹಿಡಿದಳು. ಆಕೆಯ ಕರಸ್ಪರ್ಶದಿಂದ ಆಗ ನನಗೆ ಜ್ಞಾನೋದಯವೂ ವಾಕ್ಚಾತುರ್ಯವೂ ಉಂಟಾಯಿತು. ಇದನ್ನೆಲ್ಲಾ ಕೇಳಿದ ಉದ್ಭಟನು, ಮತ್ತೆ ಎಲೆ ಗಿಳಿಯೆ, ನಿನ್ನ ಸಖಿಯೂ ಪೋಷಕಿಯೂ ಆದ ಸೌಂದರವತಿಯನ್ನು ಅಗಲಿ ನೀನು ಈ ವಿಸ್ತಾರವಾದ ಕಾಡಿಗೆ ಹೇಗೆ ಬಂದೆ? ಎಂದನು.

ಭೂರಮಣನೆ ಕೇಳು, ಸೌಂದರವತಿಗೆ ಜವ್ವನ ಸಂದಿತು. ರಾಜಕುಮಾರಿಗೆ ತಕ್ಕ ವರನಿಲ್ಲದೆ ತಂದೆ ತಾಯಿಯರು ಚಿಂತೆಗೊಳಗಾದರು. ಇದನ್ನರಿತ ನಾನು ಅವಳಿಗೆ ತಕ್ಕ ವರನನ್ನು ತರುವ ಹೊಣೆ ಹೊತ್ತೆನು. ನಾನು ಅರಸಿ ತರುವ ವರನೇ ಸೌಂದರವತಿಗೆ ಪತಿ ಎಂದು ಸರ್ವರೂ ನನಗೆ ಭಾಷೆ ಕೊಟ್ಟರು. ಅದಕ್ಕಾಗಿ ಅವರೆಲ್ಲರಿಂದ ಬೀಳ್ಕೊಂಡ ನಾನು ದೇವ-ದಾನವ-ಮಾನವರಲ್ಲಿ, ಕಿನ್ನರ ಕಿಂಪುರುಷರಲ್ಲಿ, ನಾನಾ ಲೋಕಗಳ ರಾಜಪುತ್ರರುಗಳಲ್ಲಿ ರಾಜಕುಮಾರಿಗೆ ಎಣೆಯಾದ ವರನನ್ನು ಕಾಣಲಿಲ್ಲ. ಬಳಲಿ ಬೆಂಡಾದ ನಾನು ವಿಶ್ರಾಂತಿ ಹೊಂದಲು ಒಂದು ಮರದ ಮೇಲೆ ಕುಳಿತೆನು. ಆಗ ಬೇಡನೊಬ್ಬನು ಪಕ್ಷಿಗಳನ್ನೆಲ್ಲಾ ಹಿಡಿಯಲು ಬಲೆ ಬೀಸಿದ್ದನು. ಇದನ್ನರಿಯದ ನಾನು ಇಲಿಗೆ ಒಡ್ಡಿದ ಬಲೆಗೆ ಬೆಕ್ಕು ಸಿಕ್ಕಿಬಿದ್ದಂತೆ ನಾನು ಸೆರೆಹೋದೆನು. ಕೊರಗುತ್ತಿದ್ದ ನನ್ನನ್ನು ನೋಡಿ ಉಬ್ಬಿದ ಬೇಡನು ಬಲೆಯೊಡನೆ ನೀನಿದ್ದಲ್ಲಿಗೆ ಬಂದನು. ಇದು ನನ್ನ ಪುಣ್ಯಾತಿಶಯವಲ್ಲವೇ! ಬಿಡದೆ ಅರಸುವ ಬಳ್ಳಿಯು ಕಾಲಿಗೆ ತಾನೆ ತೊಡರಿದಂತಾಯಿತು ಇಂದು ನೀನು ನನಗೆ ದೊರಕಿದುದು. ನಿನಗೆ ಅವಳೆಣೆ; ಅವಳಿಗೆ ನೀನೆಣೆ ಇದು ಸತ್ಯ ಎಂದು ಅರಗಿಳಿ ನುಡಿಯಿತು. ಅದಕ್ಕೆ

ಮಹಾರಾಜನು, "ನಾನು ಈ ನೆಲವನ್ನು ಅರಿಯೆ; ಅಲ್ಲದೆ ದೂರದೇಸಿಗ. ಬಿಡು ಆ ರಾಜಕುಮಾರಿಯ ಪ್ರಸಂಗವನ್ನು" ಎಂದನು. ಮಹಾರಾಜಾ, ನೀನೇ ಅವಳಿಗೆ ತಕ್ಕ ವರ! ಎಂದು ಹೇಳಿದ ಗಿಳಿ ರಾಜನನ್ನೂ ಮಂತ್ರಿಯನ್ನೂ ಒಪ್ಪಿಸಿ ಚೋಳದೇಶಕ್ಕೆ ಕರೆದೊಯ್ದು ತಂಜಾವೂರಿನ ಉದ್ಯಾನದಲ್ಲಿನ ಚಂಡಿಕಾಲಯದಲ್ಲಿ ಅವರನ್ನು ಕುಳ್ಳಿರಿಸಿತು. "ನಾನೀಗ ನಗರಕ್ಕೆ ಹೋಗಿ ಮದುವೆಯ ಏರ್ಪಾಟು ಮಾಡಿ ಬರುವೆನು" ಎಂದು ರಾಜನಿಗೆ ಬಿನ್ನೈಸಿದ ಗಿಳಿ ಹರ್ಷದಿಂದ ಹಾರಿಹೋಯಿತು.

ಇತ್ತ ಸೌಂದರವತಿಯ ನೋಟ ಬೇಟಗಳಲ್ಲಿ ಕಾತರನಾದ ಉದ್ಭಟದೇವನು ಒಂದು ಅಶೋಕವೃಕ್ಷದ ಅಡಿಯಲ್ಲಿ ಮಂತ್ರಿಯೊಡನೆ ಕುಳಿತು ಗಿಳಿಯ ಬರವನ್ನೇ ನಿರೀಕ್ಷಿಸುತ್ತಿದ್ದನು. ರಾಜಕುಮಾರಿಯನ್ನು ನೆನೆನೆನೆದು ಉದ್ಭಟನು ವಿರಹದಿಂದ ಬಳಲಿದನು. ಶಿವಭದ್ರನು ಆಕೆಯ ಪ್ರಸಂಗವನ್ನೇ ಮಾತನಾಡುತ್ತ ರಾಜನನ್ನು ಸಂತೋಷಗೊಳಿಸುತ್ತಿದ್ದನು. ಬಾಯಾರಿದ ಮಹಾರಾಜನಿಗೆ ನೀರು ತರಲೆಂದು ಮಂತ್ರಿಯು ಹೋಗಲು, ಉದ್ಭಟನ ಮನಸ್ಸು ರಾಜಕುಮಾರಿಯ ರೂಪಾತಿಶಯದಲ್ಲಿ ಲೀನವಾಗಿ ಮರಕ್ಕೆ ಒರಗಿದ್ದಂತೆ ಹಾಗೆಯೇ ಮೂರ್ಛೆಹೋದನು. ಅದೇ ವೇಳೆಗೆ ಸೌಂದರವತಿಯು ಚಂಡಿಕಾದೇವಿಯ ಪೂಜೆಗೆಂದು ಬರುತ್ತಾ, ಮರಕ್ಕೆ ಒರಗಿ ನಿದ್ರಿಸುತ್ತಿದ್ದ ಮನ್ಮಥ ಸದೃಶನಾದ ರಾಜನನ್ನು ನೋಡಿ ಅಚ್ಚರಿಗೊಂಡಳು. ನೋಡುತ್ತಿದ್ದಂತೆಯೇ ಅವಳ ಮನ ಕರಗಿತು. ತನಗೆ ಈತನೇ ಪತಿಯೆಂದು ಮೆಚ್ಚಿ ನಿಂತು ನಸುನಾಚಿ ನಡೆಗೆಟ್ಟಳು. ಒಡತಿಯ ಮನವನ್ನು ಸಖಿಯರು ಅರಿತರು. ನಾಚಿದ ಸೌಂದರವತಿಯು ತನ್ನ ಗೆಳತಿಯಾದ ಶಶಿಲೇಖೆಯನ್ನು ಕರೆದು "ನೀನು ಇಲ್ಲಿದ್ದು ಈ ಸುಕುಮಾರಚಂದ್ರ ಯಾರು ಎಂಬುದನ್ನು ಚೆನ್ನಾಗಿ ತಿಳಿದು ಬಾ ನಾನು ಪಟ್ಟಣಕ್ಕೆ ಹೋಗುವೆನು" ಎಂದು ಹೇಳಿ ಹೋದಳು.

ಶಶಿಲೇಖೆಯು ಹೂವನೆತ್ತುವ ನೆಪದಲ್ಲಿ ರಾಜನು ಮಲಗಿದ್ದಲ್ಲಿಗೆ ಬಂದಳು. ಆ ವೇಳೆಗೆ ಮಂತ್ರಿಯೂ ಬಂದನು. ಮಂತ್ರಿಯೊಡನೆ ಮಾತನಾಡಿ ಉದ್ಭಟನ ಬಗೆಗೆ ವಿವರ ಪಡೆದು ಅರಮನೆಗೆ ಹಿಂತಿರುಗಿದಳು. ಇತ್ತ ಸೌಂದರವತಿಯೂ ವಿರಹಾಗ್ನಿಯಿಂದ ಕಂದಿ ಕುಂದಿ ಕಳೆಯಳಿದಿದ್ದಳು. ಚಿಂತೆಯಿಂದ ಬಸವಳಿದಿದ್ದ ಅವಳನ್ನು ಶಶಿಲೇಖೆ ಸಮಾಧಾನ ಮಾಡುತ್ತ ಮಹಾರಾಜನ ಬಗೆಗೆ ತಾನು ತಿಳಿದುಬಂದುದನ್ನು ಹೇಳಿದಳು. ಅವಳ ಈ ಮಾತು ಅಗ್ನಿಗೆ ತುಪ್ಪ ಹೊಯ್ದಂತಾಯಿತು. ವಿರಹಾಗ್ನಿ ಇನ್ನಷ್ಟು ಹೆಚ್ಚಿತು. ಹೆದರಿದ ಸಖಿಯರು ಶೈತ್ಯೋಪಚಾರ ಮಾಡಲೆಂದು ತಂಪಾದ ತಿಳಿಗೊಳದ ತೀರದಲ್ಲಿದ್ದ ಒಂದು ಲತಾಮಂಟಪಕ್ಕೆ ಕರೆತಂದು ಮಲಗಿಸಿದರು. ಅಲ್ಲಿಯೂ ರಾಜನನ್ನೇ ಕಣ್ಣೆದುರು ಕಂಡಂತಾಗಿ ವಿಕಲತೆಯಿಂದ ರಾಜಕುಮಾರಿಯು ಮೂರ್ಛೆ ಹೋದಳು. ಶಶಿಲೇಖೆಯೇ ಮೊದಲಾದವರು ರಾಜಕುಮಾರಿಗೆ ಶೈತ್ಯೋಪಚಾರ ಮಾಡುತ್ತಿದ್ದಾಗ ಅದೇ ತಿಳಿಗೊಳದಿಂದ ಗಿಳಿಯು ಕಾಣಿಸಿಕೊಂಡಿತು. ಅರಗಿಳಿಗೆ ಶಶಿಲೇಖೆಯು ರಾಜಕುಮಾರಿಯ ಈ ಸ್ಥಿತಿಗೆ ಕಾರಣವನ್ನು ತಿಳಿಸಿದಳು. ಗಿಳಿಯು ಉದ್ಭಟರಾಜೇಂದ್ರನ ಹೆಸರೆತ್ತಿ ಕೊಂಡಾಡಿತು. ಒಡನೆಯೇ

ಸೌಂದರವತಿಯು ಮೂರ್ಛೆಯಿಂದ ಎಚ್ಚತ್ತು ಕಣ್ದೆರೆದು ನೋಡಿದಳು. ಗಿಳಿಯು ರಾಜಕುಮಾರಿಗೆ ತನಗೆ ಬಂದೊದಗಿದ ವಿಪತ್ತು, ಜಗನ್ಮಾತೆಯ ಸ್ತುತಿಯಿಂದ ಪರಿಹಾರಗೊಂಡುದನ್ನು ತಿಳಿಸಿ, ನಂತರ ಅರಮನೆಗೆ ಬಂದು ಸುಧರ್ಮಮಹಾರಾಜನಿಗೆ ಸಕಲ ಸಂಗತಿಯನ್ನೂ ವಿವರಿಸಿದನು. ಸುಧರ್ಮಮಹಾರಾಜನು ಸಂತೋಷದಿಂದ ಉದ್ಭಟರಾಜನನ್ನು ಎದುರುಗೊಂಡನು. ವಿಧಿವತ್ತಾಗಿ ಸೌಂದರವತಿಗೂ ಉದ್ಭಟದೇವನಿಗೂ ವಿವಾಹ ಮಹೋತ್ಸವವನ್ನು ವೈಭವದಿಂದ ನೆರವೇರಿಸಲಾಯಿತು. ಮದುವೆಯಾದ ನಾಲ್ಕನೆಯ ದಿನದಲ್ಲಿ ದಂಪತಿಗಳು ಓಕುಳಿಯಾಟವಾಡಿದರು. ಇನ್ನು ನನ್ನ ಶಾಪವಿಮೋಚನೆಯ ಕಾಲ ಕೈಗೂಡಿತು ಎಂದು ಸಂತಸದಿಂದ ಓಕುಳಿ ಚೆಲ್ಲುತ್ತಿದ್ದ ಸುಂದರಿಯ ಮಧ್ಯೆ ಹೊಕ್ಕು ಆ ನೀರಿನಿಂದ ಚೆನ್ನಾಗಿ ನೆನೆಯಿತು. ತಕ್ಷಣ ಗಿಳಿಯ ರೂಪ ಹೋಗಿ ಋಷಿ ರೂಪ ಬಂದಿತು. ಇದನ್ನು ನೋಡಿದ ಎಲ್ಲರಿಗೂ ಆಶ್ಚರ್ಯವಾಯಿತು. ಓಕುಳಿಯಾಟ ನಿಲ್ಲಿಸಿ' ಉದ್ಭಟದೇವನು ತನ್ನ ಪತ್ನಿಯೊಡನೆ ಆ ಋಷಿಗೆ ನಮಸ್ಕರಿಸಿದನು. ಸುಧರ್ಮ-ಸತ್ಯವತಿ ದಂಪತಿಗಳೂ ಆ ಮುನಿಗೆ ವಂದಿಸಿದರು. ಸವಿಮಾತುಗಳಿಂದ ಹರಸಿದ ಆ ಶುಕಮುನಿಯು ಅವರೆಲ್ಲರಿಂದ ಬೀಳ್ಕೊಂಡು ತನ್ನ ಆಶ್ರಮದತ್ತ ನಡೆದನು.

ಉದ್ಭಟನು ಪತ್ನಿಯೊಡನೆ ಪಂಪಾವಿರೂಪಾಕ್ಷನ ದರ್ಶನ ಮಾಡಿ, ತನ್ನ ರಾಜಧಾನಿಗೆ ಬಂದನು. ಸೌಂದರವತಿಯೊಡನೆ ಸುಖ ಭೋಗ ವಿಲಾಸಗಳಲ್ಲಿ ಕಾಲಕಳೆಯುತ್ತಿದ್ದ ಉದ್ಭಟನು ಒಂದು ದಿನ ಪತ್ನಿಯೊಡನೆ ಪಗಡೆಯಾಡುತ್ತ ಸತಿಯ ಮುಖನೋಡಿ ನಕ್ಕುಬಿಟ್ಟನು. ಕೋಪಗೊಂಡ ಸೌಂದರವತಿಯು ಆಟದ ಸಾಮಗ್ರಿಗಳನ್ನು ನೂಕಿದಳು. ಕಾರಣವಿಲ್ಲದೆ ನಗುವುದೇಕೆ? ಎಂದು ಗಂಡನನ್ನು ಪ್ರಶ್ನಿಸಿದಳು. "ನಿನ್ನ ಕಾರಣಕ್ಕಾಗಿ ನಾನು ನಕ್ಕಿದ್ದಲ್ಲ. ಓಹಿಲನೆಂಬ ಭಕ್ತನು ಸೌರಾಷ್ಟ್ರ ಸೋಮನಾಥನನ್ನು ಮೆಚ್ಚಿಸಿ, ತನ್ನ ಶರೀರವನ್ನು ಧೂಪಾಗ್ನಿಗಿತ್ತು ಕೈಲಾಸಕ್ಕೆ ಒಬ್ಬನೇ ಹೋಗುತ್ತಿರುವುದನ್ನು ನೋಡಿ ನಕ್ಕೆನು" ಎಂದು ತಾನು ನಕ್ಕಿದ್ದಕ್ಕೆ ಉದ್ಭಟಮಹಾರಾಜನು ಕಾರಣ ತಿಳಿಸಿದನು. ಮಹಾರಾಜಾ, ಗುಣಾಗ್ರೇಸರನಾದ ಆ ಭಕ್ತ ಯಾರು? ಅವನ ಸಂಗತಿ ಏನು? ಕೃಪೆಮಾಡಿ ತಿಳಿಸು ಎಂದು ಸೌಂದರವತಿಯು ಕೇಳಲು ಉದ್ಭಟನು ಓಹಿಲದೇವನ ಕಥೆ ಹೇಳಿದನು. ಕಥೆ ಕೇಳಿ ಓಹಿಲದೇವನನ್ನು ಕಣ್ಣಾರೆ ಕಂಡು ಹಿಗ್ಗಿ ದಂಡಪ್ರಣಾಮ ಮಾಡಿದ ಪತ್ನಿಯನ್ನು ನೋಡಿ ಉದ್ಭಟನು "ಬಿಡು ಬಿಡು ಕಾಂತೆ! ತನ್ನೊಡಲ ಉರಿಗಿತ್ತು ಕೈಲಾಸಕೊಬ್ಬನೇ ಹೋಗುವವನ ಏನ ನೋಡುವೆ ತಾನಿದು ಚೋದ್ಯವೆಂದು?" ಎಂದು ತಮಾಷೆ ಮಾಡುವನು. ಸೌಂದರವತಿ ಅದಕ್ಕೆ "ಶಿವಲೋಕಕೆ ಇಂತು ಹೋದವರಾರು ಧರೆಯೊಳಗೆ?" ಎಂದು ಪ್ರಶ್ನಿಸುವಳು. ಉದ್ಭಟನು ನಂಬಿಯಣ್ಣ, ಸಿಂಧುಬಲ್ಲಾಳ, ಇಹಪ್ಪಗೆಯರ್, ಚಿರುತೊಣೆಯಾಂಡರ್, ಕಳಚಂಗ, ಮಾನಕಂಜರ, ಚೋಳಿಯಕ್ಕ, ಸುರಗಿಯ ಚೌಡಯ್ಯ, ಚಂಡೇಶಪಿಳ್ಳೆ, ಕಲಿಗಣನಾಥ, ಸಿರಿಯಾಳ, ಸಾಮವೇದಿ, ಚೇರಮರಾಯ - ಇವರೇ ಮೊದಲಾದ ಶರಣರ ಕಥೆ ಹೇಳುವನು. ಇಂತಹ ಲೋಕವಂದ್ಯರಾದ ಭಕ್ತರು ಇರುವಾಗ, ಇದ್ದ ದೇಶ ಕೋಶ ಭೋಗ ಭಾಗ್ಯಾದಿ ಒಡೆತನವನ್ನೆಲ್ಲಾ ತೊರೆದು ಧೂಪದ ಉರಿಗೆ ತನುವನ್ನಿತ್ತು, ಶಿವನ ಮೆಚ್ಚಿಸಿ ಕೊನೆಗೆ

ದೇಸಿಗನಂತೆ ತಾನೊಬ್ಬನೇ ಕೈಲಾಸಕ್ಕೆ ಹೋಗುವವನು ಜಾಣನೇನು? ಎನ್ನುವನು. ಹೀಗೆಂದ ಉದ್ಭಟದೇವನ ಕಟಕಿಯನ್ನು ಕೇಳಿ ಸೌಂದರವತಿಯು ಓಹಿಲದೇವನಾದರೋ ನಿಷ್ಕಾಮಿ, ನಿರ್ಮೋಹಿ, ಅತುಳ ವಿರಕ್ತ; ನೀನಾದರೋ ಕಾಮುಕ, ಕಡುಮೋಹಿ, ರಾಜ, ಜೂಜಿನ ಮೋಜುಗಾರ. ಆ ಪೂಜ್ಯ ಭಕ್ತನನ್ನು ವೃಥಾ ಕಡೆಗಣಿಸುವ ಮಾತಿಂದೇನು ಸಿದ್ಧಿಯಾಯಿತು ನಿನಗೆ? ಎನ್ನುವಳು. ಅದಕ್ಕೆ ಉದ್ಭಟನು "ಮಲುಹಣನು ಕಾಮಾಸಕ್ತನಲ್ಲವೆ? ಮನುಚೋಳ ಮಹಾರಾಜನಲ್ಲವೆ? ಮೂರ್ಖನೈನಾರಿ ಜೂಜಿಗನಲ್ಲವೆ? ಇವರೆಲ್ಲಾ ತಮ್ಮ ತಮ್ಮ ಉದ್ಯೋಗವನ್ನು ಪ್ರೀತಿಯಿಂದ ಮಾಡುತ್ತ ಶಿವಲೋಕಕ್ಕೆ ಹೋಗಲಿಲ್ಲವೆ? ಲೋಕದಲ್ಲಿ ನಿಸ್ಪೃಹರಾದ ಭಕ್ತರು ಹೇಗೆ ನಡೆದರೂ ಕುಂದುಂಟೆ?" ಎನ್ನುವನು. ಸೌಂದರವತಿ ಆ ಮಾತಿಗೆ ಪ್ರತಿಯಾಗಿ "ಹೀಗೆ ಕಲಿತ ಕತೆ ಹೇಳುವುದು ದೊಡ್ಡದಲ್ಲ, ಕಾಯಸಹಿತ ಕೈಲಾಸ ಕಾಣುವವ ಜಗದೊಳಿಲ್ಲ" ಎನ್ನುವಳು. ಉದ್ಭಟನು ಅದಕ್ಕೆ ಪ್ರತ್ಯುತ್ತರವಾಗಿ "ಕಮಲನಯನೆ! ನನ್ನ ಮಾತನ್ನು ಕೇಳು, ಕೈಲಾಸಕ್ಕೆ ತಾನೊಬ್ಬನೇ ಹೋಗುವುದೇನು ಭಕ್ತರಿಗೆ ದೊಡ್ಡದೆ? ನೀನೊಪ್ಪಿದರೆ ಈ ಪುರಸಹಿತ ಶಿವಲೋಕಕ್ಕೆ ಇಂದೇ ಹೋಗುವೆ ನೋಡು!" ಎಂದು ಮಾತುಕೊಟ್ಟ ಉದ್ಭಟನು ಪತ್ನಿಯೊಡನೆ ಶಿವಾಲಯಕ್ಕೆ ಬಂದು ಶಿವಪೂಜೆ ಮಾಡುತ್ತ ಪದ್ಯವನ್ನು ಹಾಡುತ್ತ ಇರುವಲ್ಲಿ ಉದ್ಭಟನ ಒಂದೊಂದು ಪದ್ಯಕ್ಕೆ ಒಂದೊಂದು ಸಹಸ್ರಯೋಜನದಂತೆ ಆ ಭಲ್ಲಕೀ ನಗರವು ಗಗನಕ್ಕೆ ಏರಿತು. ಪುರಸಹಿತ ಶಿವಲೋಕಕ್ಕೆ ಪರಮಾನಂದದಿಂದ ಬಂದ ಉದ್ಭಟನ ಮೇಲೆ ಪ್ರಮಥಗಣರು ಹೂಮಳೆಗರೆದರು; ಶಿವನ ಸಭೆಗೆ ಕರೆದು ತಂದರು. ಶಿವನು ನಮಸ್ಕರಿಸಿದ ಉದ್ಭಟನನ್ನು ಕೈ ಹಿಡಿದು ಮೈತಡವಿ ಅವನಿಗೆ ಗಣಪದವಿಯನ್ನು ಅನುಗ್ರಹಿಸಿ ಅವನು ತಂದ ಪಟ್ಟಣವನ್ನು ಕೈಲಾಸದಲ್ಲಿ ಇಂಬಿಟ್ಟನು. ಸೌಂದರಿಗೆ ರುದ್ರಕನ್ಯೆಯ ಪದವನ್ನು ಅನುಗ್ರಹಿಸಿ ಪಂಪಾಂಬಿಕಾ ವಲ್ಲಭನಾದ ಶ್ರೀ ಗುರುವಿರೂಪಾಕ್ಷನು ಶೋಭಿಸುತ್ತಿದ್ದನು.

**ವಿಮರ್ಶೆ**

ಸೋಮರಾಜ ತನ್ನ ಕೃತಿಯನ್ನು ಉದ್ದಕ್ಕೂ 'ಶೃಂಗಾರ ಸಾರ'ವೆಂದೇ ಕರೆದಿದ್ದಾನೆ. ಎಲ್ಲಿಯೂ 'ಉದ್ಭಟಕಾವ್ಯಂ' ಎಂದು ಹೇಳುವುದಿಲ್ಲ. ಕಥೆಯ ಮೂಲ ವಸ್ತುವಿನಲ್ಲಿ ಶೃಂಗಾರವು ಪ್ರಧಾನವಾಗಿಲ್ಲ. ರಸಿಕನಾದ ಕವಿ ಮೂಲಕಥೆಯನ್ನು ವಿಕಸಿಸಿ, ಶೃಂಗಾರ ಸಂದರ್ಭಗಳನ್ನು ಅಳವಡಿಸಿ, ತನ್ನ ಕೃತಿಯನ್ನು ಶೃಂಗಾರದ ತಿರುಳನ್ನಾಗಿಸಲು ಪ್ರಯತ್ನಿಸಿದಂತಿದೆ. ಮೂಲಕಥೆ ಹರಿಹರನಲ್ಲಿ ಬಂದಿರುವಂತೆ ತೀರಾ ಪುಟ್ಟದು. ಮೂಲಕಥೆಯಲ್ಲಿ ಯಥೇಚ್ಛವಾದ ಬದಲಾವಣೆಯನ್ನು, ಕಾಲ್ಪನಿಕಾಂಶವನ್ನು ಕವಿಯೇ ಸ್ವತಃ ಮಾಡಿಕೊಂಡನೊ ಇಲ್ಲವೇ ಇವನಿಗಿಂತ ಹಿಂದೆ ಈ ವಸ್ತುವನ್ನು ಕುರಿತು ಬರೆದ ಕವಿಗಳು ಮಾಡಿದ್ದರೋ ತಿಳಿಯದು. ಸದ್ಯಕ್ಕೆ ಹರಿಹರನ ನಂತರ ಈ ವಸ್ತುವನ್ನು ಕುರಿತು ಸ್ವತಂತ್ರವಾಗಿ ಬರೆದ ಕವಿಗಳಲ್ಲಿ ಸೋಮರಾಜನೇ ಮೊದಲಿಗನು. ಮಹಾಕಾವ್ಯದಲ್ಲಿ ಕವಿ ವರ್ಣನೆಗೆ ಹದಿನೆಂಟು ಅಂಗಗಳಿರಬೇಕೆಂಬ ನಿಯಮವಿದೆ. ನಮ್ಮ ಚಂಪೂಕವಿಗಳು ಬಹುತೇಕ ಈ

ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿದಂತಿದೆ. ಸೋಮರಾಜ ಪಂಡಿತ ಕವಿ. ತನ್ನ ಕೃತಿಯನ್ನು 'ಮಹಾಕಾವ್ಯ'ವಾಗಿಸಬೇಕೆಂಬ ಮಹದಾಸೆಯುಳ್ಳವನು. ಹೀಗಾಗಿ ಮಲ್ಲಿಕಾರ್ಜುನ ಕವಿಯು 'ಸೂಕ್ತಿ ಸುಧಾರ್ಣವ'ದಲ್ಲಿ ಹೇಳಿರುವ (೧.೭೭) ಅಷ್ಟಾದಶ ವರ್ಣನೆಗಳಲ್ಲಿ ಯಾವುದನ್ನೂ ಬಿಡದೆ ವಿಶದವಾಗಿ, ರಸಸ್ಯಂದಿಯಾಗಿ ವರ್ಣಿಸುವುದರಲ್ಲಿ ಸೋಮರಾಜನಿಗೆ ಎಲ್ಲಿಲ್ಲದ ಉತ್ಸಾಹ. ಮೂಲಕಥೆ ಹಿಗ್ಗಲು ಇದೂ ಒಂದು ಕಾರಣ. ಶುಕಮುನಿಯ ಕಥೆ, ಚಿದಂಗ ಚರಿತ್ರೆ, ನಿಘರ್ಜಾಸುರ ಸಂಹಾರ - ಇವು ಮೂಲಕಥೆಯಲ್ಲಿಲ್ಲ. ಇವು ಸೋಮರಾಜನ ಕಾಲ್ಪನಿಕ ಭಾಗಗಳು. ಉದ್ಭಟ-ಸೌಂದರವತಿಯರು ಈ ಕೃತಿಯ ನಾಯಕ-ನಾಯಕಿಯರು. ಇವರ ಪ್ರಥಮ ದರ್ಶನ - ಪ್ರಣಯ - ಅಗಲಿಕೆ - ವಿರಹ - ಸಮಾಗಮ - ವಿವಾಹ ಈ ಘಟನಾ ಚಕ್ರಕ್ಕೆ ಕಥೆಯಲ್ಲಿ ಬರುವ ಗಿಳಿಯು ಕಾರಣವಾಗಿರುತ್ತದೆ. ಬಾಣನ ಕಾದಂಬರಿಯಲ್ಲಿನ ಶುಕವೃತ್ತಾಂತದಂತೆ ಇಲ್ಲಿಯೂ ಶುಕಮುನಿಯ ಕಥೆ ಬರುತ್ತದೆ. ಕಥಾಸಂವಿಧಾನದ ದೃಷ್ಟಿಯಿಂದ ಗಿಳಿಯ ಪಾತ್ರ ಮಹತ್ವದ್ದಾಗುತ್ತದೆ. ಗುರು ಚಿದಂಗನ ಚಾರಿತ್ರ್ಯದ ಬಗೆಗೇ ಶಂಕೆಯನ್ನು ತಾಳಿದ ಶುಕಮುನಿಯು ಗುರುವಿನ ಶಾಪಕ್ಕೆ ಗುರಿಯಾಗಿ ಶುಕನಾಗುವನು. ಪಾರ್ವತಿಯ ವರದಿಂದ ಜನಿಸುವವಳ ಸ್ಪರ್ಶದಿಂದ ಹಾಗೂ ಅವಳು ತನ್ನಿನಿಯನೊಡನೆ ನೀರಾಟವಾಡುವಾಗ ಸುರಿದ ನೀರಿನಲ್ಲಿ ಮುಳುಗುವುದರಿಂದ ಶಾಪವಿಮೋಚನೆಯಾಗುವುದೆಂದು ಚಿದಂಗ ಮುನಿಯು ಶಾಪ ಪರಿಹಾರವನ್ನು ಸೂಚಿಸುವನು. ಶಿಷ್ಯನ ದೃಢತೆಯ ಪರೀಕ್ಷೆಗೆ ಒಡ್ಡಿದ ಮಹೇಂದ್ರಜಾಲದಲ್ಲಿ, ಕವಿ ಸೋಮರಾಜನು ಅನುದ್ದೇಶಿತವಾಗಿ ತನ್ನ ಸಮಕಾಲೀನ ತಾಂತ್ರಿಕ ಪಂಥವೊಂದರ ಆಚರಣೆಯನ್ನು ವರ್ಣಿಸಿರುವನು. ಕೌಲಪಥವು ಕೌಳರ ಸಿದ್ಧಾಂತ ಗ್ರಂಥವಾಗಿದೆ. ನಾವು ಕೌಳರ ತಾಂತ್ರಿಕ ಆಚರಣೆಗಳನ್ನು ಸೋಮರಾಜನು ತನ್ನ ಕೃತಿಯಲ್ಲಿ ವರ್ಣಿಸಿರುವ ಇಂದ್ರಜಾಲ ಪ್ರಸಂಗದಲ್ಲಿ ಮೊದಲಿಗೆ ಕಾಣಬಹುದಾಗಿದೆ. ಅದು ಕೊಡುವ ಮಾಹಿತಿಗಳ ಮೂಲಕ ಆ ರಹಸ್ಯ ತಾಂತ್ರಿಕ ಪಂಥದ ಆಚರಣೆಯನ್ನು ನಮ್ಮ ಅನುಭವ ಪ್ರಪಂಚಕ್ಕೆ ತಂದುಕೊಳ್ಳಬಹುದು (ವಿವರಗಳಿಗೆ ನೋಡಿ: ವಚನಾನುಶೀಲನ (೧೯೮೯) ಪು. ೧೭೮-೧೮೪). ಮನುಷ್ಯರಂತೆ ಮಾತನಾಡುವ ಗಿಳಿಯು ಘೂರ್ಜರದೇಶದ ಭಲ್ಲಕೀ ನಗರದ ಉದ್ಭಟ ಮಹಾರಾಜನನ್ನೂ ಚೋಳಮಂಡಲದ ತಂಜಾವೂರಿನ ಸುಧರ್ಮಮಹಾರಾಜನ ಏಕಮಾತ್ರ ಪುತ್ರಿಯೂ ಕಾಳಿಕಾಮಾತೆಯ ವರಪ್ರಸಾದದಿಂದ ಜನಿಸಿದವಳೂ ಆದ ಸೌಂದರವತಿಯನ್ನೂ ಪ್ರೇಮದ ಸಂಕಲೆಯಲ್ಲಿ ಬಂಧಿಸಲು ನೆರವಾಗುವುದು. ತನ್ಮೂಲಕ ತನಗೆ ಬಂದಿದ್ದ ಶುಕರೂಪವನ್ನು ನಿವಾರಿಸಿಕೊಳ್ಳುವುದು. ಗಿಳಿಯ ಕಥೆಯೂ ಅದರ ನಿಮಿತ್ತವಾಗಿ ಬರುವ ಚಿದಂಗಮುನಿಯ ಕಥೆಯೂ ಕೃತಿಯ ಅರೆಭಾಗವನ್ನು ಆವರಿಸುತ್ತದೆ. ಕಥೆಯ ಬೆಳವಣಿಗೆಯ ದೃಷ್ಟಿಯಿಂದ, ಕಥಾಶಿಲ್ಪದ ದೃಷ್ಟಿಯಿಂದ ಇದು ಮೂಲಕಥೆಗೆ ಸೊಗಸಾಗಿ ಹೊಂದಿಕೆಯಾಗುತ್ತದೆ. ಮೂಲದಲ್ಲಿ ಹರಿಹರ ಉದ್ಭಟನ ಪತ್ನಿಯ ಹೆಸರನ್ನು ಹೇಳಿಲ್ಲ. ಸೌಂದರವತಿ ಎಂಬ ಸೊಗಸಾದ ಹೆಸರನ್ನು

ಕೊಡುವುದರ ಜೊತೆಗೆ ಸೋಮರಾಜನು ಉದ್ಭಟ-ಸೌಂದರವತಿಯರ ಪ್ರೇಮ ಕಥೆಯನ್ನು ಹೊಸದಾಗಿ ಮೂಲಕ್ಕೆ ಸೇರಿಸಿ ಮೂಲಕಥೆಗೆ ಪೂರ್ಣತೆಯನ್ನು ದೊರಕಿಸಿಕೊಡುವನು.

ನವರಸಗಳಲ್ಲಿ ಶೃಂಗಾರಕ್ಕೆ ಪ್ರಾಧಾನ್ಯ ಕೊಟ್ಟ ಸೋಮರಾಜನು ತನ್ನ ವರ್ಣನೆಯ ಬಹುಪಾಲನ್ನು ಹೆಣ್ಣಿನ ಮೈ ಮಾಟಗಳನ್ನು, ಬೆಡಗು ಬಿನ್ನಾಣಗಳನ್ನು, ಚೆಲುವು ಗೆಲುವುಗಳನ್ನು, ಬೇಟ ಕೂಟಗಳನ್ನು ಬಣ್ಣಿಸಲು ಮೀಸಲು ಮಾಡಿರುವನು. ಹೆಣ್ಣಿನ ದೇಹದ ಏರಿಳಿವುಗಳನ್ನು ಎಷ್ಟು ಬಗೆಯಾಗಿ ಹೇಳಿದರೂ ಅವನಿಗೆ ತೃಪ್ತಿಯಿಲ್ಲ. ರಾಜನಾದ ಅವನಿಗೆ ಹೆಣ್ಣು ನೋಟಕ್ಕೆ ಐಸಿರಿ ಮಾತ್ರ ಆಗಲಿಲ್ಲ ; ಕೇವಲ ಕಾಮನಾಟದ ಅರಗಿಣಿಯಾಗಲಿಲ್ಲ ಭೋಗ್ಯ ವಸ್ತುವಾದಳು. ವೇಶ್ಯಾವಾಟಿಯ ವರ್ಣನೆ (೧.೭೭-೭೮; ೧೦.೩೮-೧೧೬); ಬೇಟೆಗಾರರ ಕಾಮದಾಟ (೨.೭೮-೮೨); ಶಿಶಿರ ಕಾಲದ ಚಳಿಯ ವರ್ಣನೆ (೪.೩೭-೩೯); ಪಾನೀಯ ಶಾಲೆಯ ವರ್ಣನೆ (೩.೨೭-೩೩); ಸೌಂದರವತಿಯ ವರ್ಣನೆ (೮.೪೧-೪೪); ಉದ್ಭಟ-ಸೌಂದರವತಿಯರ ಓಕುಳಿಯಾಟ (೮.೭೨-೭೫); ಸುರತ ವರ್ಣನೆ (೮.೯೨-೧೩೬); ಜಲಕ್ರೀಡಾ ವರ್ಣನೆ (೯.೯೩-೧೨೯) - ಇಲ್ಲೆಲ್ಲಾ ಕವಿ ಹೆಣ್ಣನ್ನು ಭೋಗ್ಯ ವಸ್ತುವಾಗಿಯೇ ಕಂಡಿರುವನು, ವರ್ಣಿಸಿರುವನು.

ಯಜ್ಞಯಾಗಾದಿಗಳನ್ನು ೧೨ನೇ ಶತಮಾನದ ವೀರಶೈವ ಶರಣರು ಬಲವಾಗಿ ವಿರೋಧಿಸಿದ್ದರೂ ಅದರ ವಿಸ್ತಾರವಾದ ವರ್ಣನೆಯನ್ನು ವೀರಶೈವ ಕವಿಯಾದ ಸೋಮರಾಜನು ಮಾಡಿರುವನು.* ಯಾಗದಲ್ಲಿ ಶ್ರೀ ವಿರೂಪಾಕ್ಷನ ಪ್ರೀತ್ಯರ್ಥವಾಗಿ ದೇವಲ ಮಹರ್ಷಿಯು ಗೋವಧೆಯೇ ಮೊದಲಾದುವನ್ನು ಮಾಡುವನು (೪.೫೬ ವ) ನಿರ್ಘರ್ಜನೆಂಬ ಯಜ್ಞವಿರೋಧಿ ರಾಕ್ಷಸನನ್ನು ಕೊಲ್ಲಹೊರಟ ಉದ್ಭಟನ ಧರ್ಮರಕ್ಷಣಾ ಸ್ವಭಾವವನ್ನೂ, ಶೌರ್ಯ ಸಾಹಸವನ್ನೂ ವಿವರಿಸಲು ಒಳ್ಳೆಯ ಸಂದರ್ಭವೆಂದು ಇದನ್ನು ಬಳಸಿಕೊಂಡಂತಿದೆ. ಈ ವ್ಯಾಜದಲ್ಲಿ ಯುದ್ಧ ಪ್ರಯಾಣ, ವಿಂಧ್ಯಪರ್ವತ ವರ್ಣನೆ, ಮೃಗಯಾ ವರ್ಣನೆ, ಪುಳಿಂದವಾಟಿಕಾ ವರ್ಣನೆ, ದೇಶ ಹಾಗೂ ಕ್ಷೇತ್ರಮಹಾತ್ಮೆಯ ವರ್ಣನೆ, ಹೇಮಂತ - ಶಿಶಿರ ಋತುಗಳ ವರ್ಣನೆ, ಯುದ್ಧ ವರ್ಣನೆ - ಇವೆಲ್ಲವುಗಳನ್ನೂ ಸಾಧಿಸಿದಂತಾಗಿದೆ. ಆರನೆಯ ಆಶ್ವಾಸದಲ್ಲಿ ಅಷ್ಟಾದಶ ವರ್ಣನೆಗಳಲ್ಲಿ ಬರುವ ವನ, ಪುರ, ಜಲಕ್ರೀಡೆಗಳೂ; ಏಳನೆಯ ಆಶ್ವಾಸದಲ್ಲಿ ಕಾಂತಾರತಿ, ಚಿಂತೆಗಳೂ; ಎಂಟನೆಯ ಆಶ್ವಾಸದಲ್ಲಿ ವಿವಾಹ, ಸುರತಗಳೂ; ಒಂಬತ್ತನೆಯ ಆಶ್ವಾಸದಲ್ಲಿ ವಸಂತ, ಪುಷ್ಪಾಪಚಯ, ಗ್ರೀಷ್ಮ, ಜಲಕ್ರೀಡೆ, ವರ್ಷಋತುಗಳೂ; ಹತ್ತನೆಯ ಆಶ್ವಾಸದಲ್ಲಿ ಶರತ್ಕಾಲ, ವೇಶ್ಯಾವಾಟಿಗಳೂ; ಹನ್ನೊಂದನೆಯ ಆಶ್ವಾಸದಲ್ಲಿ ಸೂರ್ಯೋದಯ ಇವೇ ಮೊದಲಾದ

---

* ಯಜ್ಞಯಾಗಾದಿಗಳನ್ನು ಶರಣರು ಎಷ್ಟೇ ವಿರೋಧಿಸಿದ್ದರೂ ಸಾಮಾಜಿಕ ಆಚರಣೆಯಿಂದ ಅದನ್ನು ಬೇರ್ಪಡಿಸಲಾಗಲಿಲ್ಲ. ಸಿದ್ಧರಾಮ ಮಹಾನ್ ಶಿವಯೋಗಿಯಾಗಿದ್ದರೂ ಅವನು ನಿತ್ಯವೂ ಹೋಮವನ್ನು ಮಾಡುತ್ತಿದ್ದನೆಂದು ರಾಘವಾಂಕ 'ಸಿದ್ಧರಾಮ ಚಾರಿತ್ರ'ದಲ್ಲಿ ಹೇಳುವನು.

ವರ್ಣನೆಗಳು ಬಂದಿವೆ. ಹಾಡುಗಾರ್ತಿಯರು ಉದ್ಭಟನ ಮುಂದೆ ಹಾಡಿದ ಸಂದರ್ಭದಲ್ಲಿ ಸಂಗೀತದ ಬಗೆಗೆ ವಿಶದವಾಗಿ ಹೇಳುವನು (೨.೧೦೫-೧೧೭). ಸೌಂದರಿಯ ವಿವಾಹದ ಮುನ್ನ ಅವಳಿಗೆ ನೀರೆರೆದು ಹೇಗೆ ಸಿಂಗರಿಸಿದರೆಂಬುದನ್ನು ವಿಸ್ತಾರವಾಗಿ ವರ್ಣಿಸಿದಂತೆ (೮.೧೮-೪೪) ಉದ್ಭಟನ ಅಲಂಕಾರವನ್ನೂ ಕವಿ ಹೇಳಿರುವನು (೮.೪೯-೫೧ ವ).

ಸೋಮರಾಜನಿಗೆ ಪ್ರಿಯವಾದುದೆಂದರೆ ದೇವತಾ ಸ್ತುತಿ. ಭಕ್ತ ಹೃದಯದ ಕವಿಯ ಮನಸ್ಸು ಹೇಗೆ ಮಿಡಿದಿದೆಯೆಂಬುದು ಅವನು ಮಾಡುವ ಸ್ತುತಿಗಳಲ್ಲಿ ನೋಡಬಹುದು. ಪಂಪಾವಿರೂಪಾಕ್ಷ, ಪಂಪಾಂಬಿಕೆ, ಚಂಡಿಕಾದೇವಿ, ಭುವನಾಂಬಿಕೆ - ಹೀಗೆ ಉದ್ದಕ್ಕೂ ದೇವತಾ ಸ್ತುತಿಗಳು ಕಾವ್ಯದಲ್ಲಿ ಕಾಣಬರುತ್ತವೆ. ಪರಿಶುದ್ಧವಾದ ಮನಸ್ಸು ದೇವರ ಸಾಕ್ಷಾತ್ಕಾರಕ್ಕಾಗಿ, ಇಲ್ಲವೆ, ಕೃಪೆಗಾಗಿ ಹೇಗೆ ಹಂಬಲಿಸುತ್ತದೆ, ಓತಪ್ರೋತವಾದ ಭಕ್ತಿರಸಧಾರೆಯಲ್ಲಿ ಹೇಗೆ ಮನಸ್ಸು ಮಿಂದು ತಣಿಯುತ್ತದೆ ಎಂಬುದನ್ನು ಈ ಸ್ತೋತ್ರ ಭಾಗದಲ್ಲಿ ನಾವು ತಿಳಿಯಬಹುದು.

ಕವಿಗೆ ಸೂರ್ಯೋದಯ-ಸೂರ್ಯಾಸ್ತಗಳು ಹೇಗೆ ಪ್ರಿಯವೋ ಹಾಗೆಯೇ ಪ್ರಕೃತಿಯಲ್ಲಿ ಕಾಲಕಾಲಕ್ಕೆ ತಲೆದೋರುವ ಬದಲಾವಣೆಗಳು ಕಾಲಚಕ್ರದ ಉರುಳಿನಲ್ಲಿ ಬರುವ ಶಿಶಿರ, ವಸಂತ, ವರ್ಷ, ಬೇಸಗೆ - ಕಾಲಗಳು (ಅ) ಋತುಗಳೂ ಆಗ ಭುವಿಯಲ್ಲಾಗುವ ಮಾರ್ಪಾಡುಗಳೂ ಪ್ರಿಯವಾಗಿವೆ. ಚಿತ್ರವತ್ತಾಗಿ ಅವುಗಳನ್ನು ಕವಿ ನಿರೂಪಿಸುವನು. ಕವಿಯು ಷಡೃತುಗಳನ್ನು ಶಿವಪರವಾಗಿ ಕೃತಿಯ ಪ್ರಾರಂಭದ ಎರಡನೆಯ ಪದ್ಯದಲ್ಲೇ ವರ್ಣಿಸಿರುವನು. ಸೌಂದರ್ಯವನ್ನು ಮೆಚ್ಚುವ ಕಣ್ಣು-ಮನಗಳು ಈ ವರ್ಣನೆಗಳನ್ನು ಮೆಚ್ಚುವುದರಲ್ಲಿ ಆಶ್ಚರ್ಯವಿಲ್ಲ. ವ್ಯಕ್ತಿಯ ಬದುಕಿನಲ್ಲಿ ಸ್ಥಿತ್ಯಂತರಗಳು ಹೇಗೆ ಸಹಜವೋ ಹಾಗೆಯೇ ಕಾಲಗತಿಯಲ್ಲೂ ವ್ಯತ್ಯಾಸಗಳು ಸಹಜವೆಂಬುದನ್ನು ಕವಿ ಸೊಗಸಾಗಿ ನಿರೂಪಿಸುವನು.

ಮೂಲಕಥೆಗೆ ಶುಕಮುನಿಯ ಕಥೆ ಹೊಂದಿಕೊಂಡು ಬಂದಿದೆಯೆಂಬುದನ್ನು ಹಿಂದೆಯೇ ಹೇಳಿರುವೆವು. ಮೂಲಕಥೆಯೊಂದಿಗೆ ಹಲವು ಉಪಕಥೆಗಳು ಸಂದರ್ಭೋಚಿತವಾಗಿ ಬರುತ್ತವೆ. ಇವುಗಳು ಒಂದು ಅಭಿಪ್ರಾಯದ ಸಮರ್ಥನೆಗಾಗಿ ಬಂದಿವೆ. ಚಿದಂಗಮುನಿಯು ಶಿಷ್ಯನು ಗುರುವನ್ನು ಸಂದೇಹಿಸಬಾರದೆಂಬುದಕ್ಕೆ ಬಿಲ್ಲಮರಾಯನ ಕಥೆ ಹೇಳಿದರೆ (೫.೯೯-೧೦೮), ಉದ್ಭಟನು ಶಿವನನ್ನು ಮೆಚ್ಚಿಸಲು ಧೂಪದ ಕುಂಡಕ್ಕೆ ತನ್ನನ್ನೇ ಅರ್ಪಿಸಿಕೊಂಡ ಓಹಿಲನ ಕಥೆ ಹೇಳುವನು (ಸಂ. ೧೧). ಶುಕಮುನಿಯ ಕಥೆಯ ನಂತರ ಬರುವ ವಿಸ್ತಾರವಾದ ಕಥೆ ಓಹಿಲನದು. ಇದಕ್ಕೆ ಹರಿಹರನ 'ಓಹಿಲಯ್ಯನ ರಗಳೆ'ಯನ್ನು ಮೂಲ ಆಕರವಾಗಿ ಸ್ವೀಕರಿಸಿದಂತಿದೆ. ತನ್ನ ಪ್ರಿಯಳ ಕೋರಿಕೆಯಂತೆ ಉದ್ಭಟನು ಓಹಿಲನಂತೆ ಶಿವಲೋಕಕ್ಕೆ ಹೋದ ಭಕ್ತರು ಯಾರು ಯಾರು ಎಂಬುದನ್ನು ಹೇಳುತ್ತಾ ನಂಬಿಯಣ್ಣ, ಸಿಂಧುಬಲ್ಲಾಳ, ಇಹಪ್ಪಗೆಯಾಂಡಾರ್, ಕಳಚೆಂಗ, ಮಾನಕಂಜರ, ಚೋಳಿಯಕ್ಕ, ನಿಂಬಿಯಕ್ಕ, ಸುರಗಿ ಚೌಡಯ್ಯ, ಚಂಡೇಶ, ಕಲಿಗಣ, ಸಿರಿಯಾಳ,

ಸಾಮವೇದಿ, ಚೇರಮ, ಮಳೆಯರಾಜ - ಈ ಶಿವಭಕ್ತರ ಕಥೆಯನ್ನು ಸಂಕ್ಷಿಪ್ತವಾಗಿ ತಿಳಿಸುವನು (೧೨.೧೨ - ೨೫). ಕಥೆಗಳನ್ನು ಹೇಳುವಾಗ ವಿಸ್ತರಿಸಬಹುದಿತ್ತು. ಸಂದರ್ಭಕ್ಕೆ ಒಪ್ಪುವಂತೆ ಕಥೆಗಳನ್ನು ಲಂಬಿಸದೆ ಸಂಕ್ಷಿಪ್ತವಾಗಿ ಹೇಳಿರುವುದು ಕವಿಯ ಔಚಿತ್ಯ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಸೋಮರಾಜನು ಚಂಪೂಕವಿಗಳಲ್ಲಿ ಅಗ್ರಪಂಕ್ತಿಗೆ ಸೇರಲು ಸಮರ್ಥನಾದ ಪ್ರತಿಭಾನ್ವಿತ ಕವಿಯೇನಲ್ಲ. ಅವನಲ್ಲಿ ಪಾಂಡಿತ್ಯವಿದೆ; ಪೂರ್ವಕವಿಗಳ ಆಳವಾದ ಅಭ್ಯಾಸದ ಫಲವಿದೆ; ಮನಂಬುಗುವಂತೆ ವರ್ಣನೆ ಮಾಡುವ ಜಾಣ್ಮೆಯಿದೆ; ಪ್ರಸನ್ನ ಶೈಲಿಯಿದೆ; ವ್ಯಾಕರಣ, ಅಲಂಕಾರಗಳ ಬಗೆಗೆ ಪ್ರೀತಿಯಿದೆ; ಎಲ್ಲಕ್ಕಿಂತ ಮಿಗಿಲಾಗಿ ಮಂಜುಳವಾದ ಪದಗಳ ಬಳಕೆಯಿಂದ ಶಬ್ದಚಿತ್ರಗಳನ್ನು ನಿರ್ಮಿಸುವ ಜಾಣ್ಮೆಯಿದೆ. ಅವನಲ್ಲಿ ಸಂಸ್ಕೃತದ ಬಗೆಗೆ ಅಪಾರ ಪ್ರೇಮವಿದೆ. ವಿಸ್ತಾರವಾದ ಹಲವು ಗದ್ಯಭಾಗಗಳಲ್ಲಿ ನಾವು ಇದನ್ನು ಕಾಣಬಹುದು. ಸಂಸ್ಕೃತದ ಬಗೆಗಿನ ಈ ಅಭಿಮಾನ, ಕನ್ನಡದ ಬಗೆಗೆ ಅವಧೋರಣೆಯನ್ನು ತಾಳುವಂತೆ ಮಾಡಿಲ್ಲ. ಅವನ ಬಹುತೇಕ ಪದ್ಯಗಳು ಸರಳವಾಗಿವೆ. ಕನ್ನಡ ಪದಗಳು ಸಂಸ್ಕೃತ ಪದಗಳು ಬೆರಕೆಗೊಂಡಿದ್ದರೂ ಮೊದಲ ಓದಿಗೇ ವಿಷಯ ಗ್ರಾಹ್ಯವಾಗುತ್ತದೆ. ಅವನು ವಿಷಯದ ಗ್ರಹಿಕೆಗಾಗಿ ಬಳಸುವ ಉಪಮೆಗಳು ಮನಸೆಳೆಯುತ್ತವೆ. ಹಸಿರು ಚೆಲ್ಲುವ ತುಂಬಿದ ಗದ್ದೆಗಳು ಮೈದುಂಬಿದ ಗರ್ಭಿಣಿಯಂತಿದ್ದುವು (೩.೧೪); ನಿರ್ಘರ್ಜನು ತನ್ನನ್ನು ಇದಿರಿಸಿದ ಸೈನ್ಯವು 'ಕೆಂಡಮನಿಱುಂಪೆಗಳ್ ಬಂದಂಡಲೆವುದಿದರಿದು' ಎನ್ನುತ್ತ ಎದುರಾದವರನ್ನು ಸಂಹರಿಸಿದನು (೪.೮೪); ಭಿಲ್ಲಮನನ್ನು ಅನುಸರಿಸಿ 'ಅಲರಿಂದೆ ಮುಂಜಿ ಬಂದುಱು ತಲೆಗೇಱಿದ ತೆಱದೆ' ಜನಸಮೂಹವೇ ಕೈಲಾಸಕ್ಕೆ ಬಂದಿತು (೫.೧೦೮); ಶುಕವು ಬೇಡನು ಪಸರಿಸಿದ ಬಲೆಗೆ 'ಆಮಿಗೆ ಪಣ್ಣೆವೋದ ಸಿಡಿಯೊಳ್ಮಿಗೆ ಬಿಟ್ಟಿ ಬಿಡಾಲನಂದದಿ' ಸಿಕ್ಕಿ ಬಿದ್ದಿತು (೬.೧೨೬); ಸೂಳೆಗೆ ಸದಾ ಹೊನ್ನನ್ನು 'ಸೊಡರಗುಡಿಗೆಣ್ಣೆಯೆಱುವಂತೆ' ಕೊಡುವುದು (೧೦.೯೫) ಇವೇ ಮೊದಲಾದ ಉಪಮೆಗಳು ನಮಗೆ ಪರಿಚಿತವಾದವುಗಳೇ. ಅವುಗಳ ಮೂಲಕ ಕವಿ ಹೇಳುವುದನ್ನು ಇನ್ನಷ್ಟು ಸ್ಫುಟವಾಗಿ ತಿಳಿಯಹೇಳುತ್ತಾನೆ. ಪೂರ್ವ ಕವಿಗಳಿಂದ ಸಂಕೋಚವಿಲ್ಲದೆ ವರ್ಣನಾ ಭಾಗಗಳನ್ನು, ಭಾವಗಳನ್ನು ಸ್ವೀಕರಿಸಿರುವನು. ಸಂಸ್ಕೃತ ಕವಿಗಳಾದ ಭಟ್ಟ ಮಾಘ ಹರಿಚಂದ್ರ ಬಾಣ- ಇವರೇ ಮೊದಲಾದವರಿಂದ ಪ್ರಭಾವಿತನಾಗಿರುವಂತೆ ಕನ್ನಡದ ಕವಿಗಳಾದ ಪಂಪ, ಹರಿಹರ, ಕೆರೆಯ ಪದ್ಮರಸ - ಇವರೇ ಮೊದಲಾದವರಿಂದಲೂ ಪ್ರಭಾವಿತನಾಗಿರುವನು. ಇವನ ದಟ್ಟವಾದ ಪ್ರಭಾವ ಚಂಪೂ ಪ್ರಕಾರಕ್ಕೆ ಮರಳಿ ಜೀವವನ್ನು ಕೊಟ್ಟ ಷಡಕ್ಷರ ಕವಿಯ ಮೇಲೆ ಆಗಿರುವಂತಿದೆ. ಉದಾಹರಣೆಗೆ ಕೆಲವನ್ನಿಲ್ಲಿ ನೋಡಬಹುದು:

**ಸೋಮರಾಜ:**

ಕವಿತಾಪ್ರೌಢಿ ತನಗೆ ಸಂ
ಭವಿಸೆ ಶಿವಸ್ತವದೆ ಮುಕ್ತಿವಡೆಯದಜಸ್ರಂ

ಭವಿಜನಮಂ ಕೀರ್ತಿಸುವಾ
ಕವಿತೆಯೆ ದುಷ್ಕರ್ಮವಲ್ತೆ ವಸುಧಾತಳದೊಳ್॥ (೧.೨೭)

**ಷಡಕ್ಷರಿ:**

ರಸೆಯೊಳ್ ರಸವತ್ಕವಿತೆಯ
ನುಸುರಲ್ಪಡೆದಸಮನಯನನಂ ಪೊಗಳದೆ ಮಾ
ನಿಸರಂ ಸುರರಂ ಪೊಗಳ್ವುದು
ಕಸವರಮಂ ಕಳೆದು ಕಸವನಾಂತವೊಲಕ್ಕುಂ॥ (೧.೨೧)

**ಸೋಮರಾಜ:**

ಅದನಱಿದೊಲವಿಂದಂ ಲೋ
ಕದ ಜನರಂ ಪೊಗಟ್ದು ಪಾತಕಂಬಡೆಯದೆ ಸ
ನ್ಮುದದಿಂದೆಳವೆಱದಲೆಯನ
ಪದವಂ ಕೀರ್ತಿಸುವೆನುತ್ತಮರ್ಮೆಚ್ಚುವಿನಂ॥ (೧.೨೮)

**ಷಡಕ್ಷರಿ:**

ಅದಱಿಂದೆ ಮಹಿತಮಹಿಮಾ
ಸ್ಪದನಂ ಶಿವನಂ ತದೀಯ ಶರಣವ್ರಜಮಂ
ಪದೆದು ಮುದಮೊದವೆ ಬಲ್ಲಂ
ದದೆ ನುತಿಪೆಂ ನುತಿಸೆನುಳಿದ ಸುರರಂ ನರರಂ॥ (೧.೨೨)

ಸೋಮರಾಜನ ಕೃತಿಯ ಹತ್ತನೇ ಆಶ್ವಾಸದ ೯೭-೧೦೦ನೇ ಪದ್ಯಗಳು ವ್ಯತ್ಯಾಸಗೊಳ್ಳದೆ ಷಡಕ್ಷರಿಯ 'ರಾಜಶೇಖರ ವಿಳಾಸ'ದಲ್ಲಿ ಸೂಳೆಗೇರಿಯ ವರ್ಣನಾ ಭಾಗದಲ್ಲಿ ಬಂದಿವೆ. ಸೋಮರಾಜನ ಎಷ್ಟೋ ವರ್ಣನೆಗಳನ್ನು, ಪದ್ಯ ಭಾವಗಳನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಷಡಕ್ಷರಿ ಸ್ವೀಕರಿಸಿರುವನು. ಸೋಮರಾಜನ ಒಂದು ಪದ್ಯದ ಭಾವ (೧೦.೯೫) ಮುಕ್ಕಾಗದೆ ಜನ್ನನ 'ಅನಂತನಾಥ ಪುರಾಣ' (೮.೨೬)ದಲ್ಲಿ ಬಂದಿದೆ.

ಸೋಮರಾಜನ ಪ್ರಭಾವ ವೃತ್ತವಿಲಾಸನ (ಸು. ೧೩೬೦) 'ಧರ್ಮಪರೀಕ್ಷೆ'ಯ ಮೇಲೆ ಅತ್ಯಂತ ನಿಕಟವಾಗಿ ಆಗಿರುವಂತೆ ತೋರುತ್ತದೆ:

**ಸೋಮರಾಜ:**

ಈಕೆಯ ಲೋಚನಂ ಕುಸುಮಸಾಯಕಮೀಕೆಯ ಪುರ್ಬು ಕರ್ವುವಿ
ಲ್ಲೀಕೆಯ ಕುಂತಳಂ ಭ್ರಮರಸಂಕುಳಮೀಕೆಯ ವಾಗ್ವಿಲಾಸಮೇ
ಕೋಕಿಲನಾದಮೀಕೆಯ ಮೊಗಂ ಶಶಿ ಯೀಜಗಮಂ ಗೆಲಲ್ಕೆ ಸಾ-
ಕೀಕೆಯ ರೂಪಮೆಂದು ಮಕರಧ್ವಜನೀಕೆಯನ್ನೈದೆ ಪೊರ್ದುಗುಂ॥ (೮.೪೩)

**ವೃತ್ತವಿಲಾಸ:**

ಆಕೆಯ ಲೋಚನಂ ಕುಸುಮಸಾಯಕಮಾಕೆಯ ಪುರ್ಬು ಕರ್ಬುವಿ-
ಲ್ಲಾಕೆಯ ಕುಂತಳಂ ಭ್ರಮರ ಸಂಕುಳವಾಕೆಯ ವಾಗ್ವಿಳಾಸಮುಂ
ಕೋಕಿಳನಾದವಾಕೆಯ ಮುಖಂ ಸಸಿಯಾ ಜಗಮಂ ಗೆಲಲ್ಕೆ ಸಾ-
ಕೀಕೆಯ ರೂಪಮೆನುತ್ತೆ ಮಕರಧ್ವಜನಾಕೆಯನೆಯ್ದೆ ಪೊರ್ದುಗುಂ॥ (೩.೩೨)

ಒಟ್ಟಿನಲ್ಲಿ, ಸೋಮರಾಜ ಪ್ರತಿಭೆಯುಳ್ಳ ಕವಿ. ಪೂರ್ವಕವಿಗಳಿಂದ ಪ್ರಭಾವಿತನಾಗಿಯೂ ತನ್ನ ಸ್ವಂತಿಕೆಯನ್ನು ಮೆರೆಯಬಲ್ಲ ಸಹೃದಯಪರನಾದ ಕವಿ. ರುದ್ರಭಟ್ಟ, ಜನ್ನ, ಷಡಕ್ಷರಿ - ಇತ್ಯಾದಿ ಕನ್ನಡದ ಪ್ರಸಿದ್ಧ ಚಂಪೂಕವಿಗಳ ಮೇಲೆ ಪ್ರಭಾವ ಬೀರಬಲ್ಲವನೆಂದ ಮೇಲೆ ಅವನ ಹಿರಿಮೆ ಮತ್ತಷ್ಟು ಹೆಚ್ಚಿದೆ.

ಈ ಕೃತಿಯ ಗದ್ಯಾನುವಾದಕ್ಕೆ ಆರ್. ಶಾಮಶಾಸ್ತ್ರಿಗಳು ೧೯೨೧ರಲ್ಲಿ ಸಂಪಾದಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಓರಿಯಂಟಲ್ ಲೈಬ್ರರಿ ಪ್ರಕಟಣೆಯ ಕನ್ನಡ ಗ್ರಂಥಮಾಲೆ ಸಂಖ್ಯೆ ೧೦ನ್ನು ಮೂಲ ಆಕರವಾಗಿ ಬಳಸಿಕೊಳ್ಳಲಾಗಿದೆ. ಇದು ಓರಿಯಂಟಲ್ ಲೈಬ್ರರಿಯಲ್ಲಿರುವ ಅಶುದ್ಧ ಏಕೈಕ ಪ್ರತಿಯನ್ನು ಆಧರಿಸಿ ಸಂಪಾದಿತವಾಗಿದೆ. ಅನೇಕ ಕಡೆ ತ್ರುಟಿತವಾಗಿರುವ ಕಾರಣ ಲುಪ್ತವಾದ ಭಾಗಗಳನ್ನು ಹಾಗೆಯೇ ಬಿಡಲಾಗಿದೆ. ಇನ್ನೊಂದು ಶುದ್ಧಪ್ರತಿ ದೊರೆಯದೆ ಬಿಟ್ಟುಹೋಗಿರುವ ಭಾಗಗಳನ್ನು ತುಂಬಲು ಹಾಗೂ ಅಶುದ್ಧ ಪಾಠಗಳನ್ನು ಸರಿಪಡಿಸಲು ಸಾಧ್ಯವಾಗುತ್ತಿಲ್ಲ.

ಈ ಗದ್ಯಾನುವಾದ ಶ್ರೀ ಜಿ. ನಾರಾಯಣ ಅವರು ಪರಿಷತ್ ಅಧ್ಯಕ್ಷರಾಗಿದ್ದಾಗ ಸಿದ್ಧವಾಯಿತು. ಅವರ ಅವಧಿ ಮುಗಿದ ಮೇಲೆ ಇದು ಮುಂದಿನ ಅಧ್ಯಕ್ಷರ ಗಮನಕ್ಕೆ ಬರದೆ ಅಜ್ಞಾತವಾಸವನ್ನು ಅನುಭವಿಸಿತು. ನನ್ನ ಕೋರಿಕೆಯನ್ನು ಮನ್ನಿಸಿ ಇದರ ಹಸ್ತಪ್ರತಿಯನ್ನು ಪತ್ತೆಮಾಡಿ ಅಚ್ಚಿಗೆ ಅನುಮತಿ ನೀಡಿ ಉಪಕರಿಸಿರುವ ಈಗಿನ ಅಧ್ಯಕ್ಷರಾದ ಶ್ರೀ ಎನ್. ಬಸವಾರಾಧ್ಯ ಅವರಿಗೆ ನಾನು ವಿಶೇಷ ಆಭಾರಿಯಾಗಿರುವೆನು. ಏಕೆಂದರೆ ಅವರು ಈ ಗದ್ಯಾನುವಾದದ ಬಗೆಗೆ ಆಸಕ್ತಿ ತೋರಿಸದಿದ್ದಲ್ಲಿ ಇದು ಬೆಳಕು ಕಾಣುತ್ತಿರಲಿಲ್ಲ. ನನ್ನ ಗದ್ಯಾನುವಾದವನ್ನು ಪರಿಶೀಲಿಸಿ ಸಲಹೆ-ಸೂಚನೆ ನೀಡಿ ಉಪಕರಿಸಿದ ಪ್ರೊ. ಎನ್. ರಂಗನಾಥ ಶರ್ಮ ಅವರಿಗೆ ವಂದನೆಗಳು.

**- ಎಸ್. ವಿದ್ಯಾಶಂಕರ**

18.

# ಪರಿವಿಡಿ

ಶ್ರೀ ಸೋಮರಾಜವಿರಚಿತಂ

# ಉದ್ಭಟಕಾವ್ಯಂ

## ಪ್ರಥಮಾಶ್ವಾಸಂ

ಶ್ರೀನೀಹಾರಾಚಳಾಧೀಶ್ವರದುಹಿತೃಮುಖಾಂಭೋಜಸೂರ್ಯಂ ಮಹಾಸು
ಜ್ಞಾನಾನಂದಸ್ವರೂಪಂ ನಿಗಮತತಿನುತಂ ಚಂದ್ರಲೇಖಾವತಂಸಂ।
ಭಾನುಗ್ಲೌವಹ್ನಿನೇತ್ರಂ ತ್ರಿಪುಟಿವಿರಹಿತಂ ನಿರ್ವಿಕಲ್ಪಂ ಶಿವಂ ಸ
ನ್ಮಾನಂಬೆತ್ತೋವುಗೆನ್ನಂ ಪರಮಗುರುವಿರುಪಾಕ್ಷಲಿಂಗಂ ಸಿತಾಂಗಾಂ ॥ ೧ ॥

ವಿಧುಸಂಜಾತಾಂಶುಶೀತಂ ವಿಸ್ಮರಶಿಶಿರಂ ವ್ಯೋಮಗಂಗಾತುಷಾರಂ
ಕುಧರವ್ರಾತೇಂದ್ರಕನ್ಯಾಮಳತರವರರೂಪಂ ವಸಂತಂ ಲಲಾಟ।
ಪ್ರಧೃತಾಕ್ಷಿಗ್ರೀಷ್ಮ ಮಂಚತ್ಕರುಣರಸಮೆ ವರ್ಷಂ ಶರನ್ಮೂರ್ತಿಯಾದಂ
ತಧಿಕಂಬೆತ್ತೊಪ್ಪೆಯಾರುಂಋತುವೆನಲೆಸೆವಾರ್ಯೇಶನೊಲ್ದೋವುಗೆನ್ನಂ ॥ ೨ ॥

ನಗಿಸುತ್ತೊಳ್ದೆರ್ದೆ ನೈದಿಲಂ ಬೆಳಗುತುಂ ಮೋಹಾತುಳಧ್ವಾಂತಮಂ
ಮಿಗೆ ರಾಜದ್ಧ್ರುವಮಂಡಲೇಂದುಮಣಿಯಂ ತುಳ್ಕುತ್ತುಮಾನಂದವಾ।
ರ್ಧಿಗೆ ಪೆರ್ಚ್ಚೀಯುತುಮಾನತರ್ಕ್ಕಳ ಚಿದಾಕಾಶಾಂಗಣೋನ್ಮಧ್ಯದೊಳ್
ಭಗಣೇಶಂಬೊಲಜಸ್ರಮೊಪ್ಪುವಭವಂ ರಕ್ಷಿಕ್ಕೆ ಭಕ್ತಾಳಿಯಂ ॥ ೩ ॥

೧. ಹಿಮಾಚಲದ ಒಡೆಯನ ಮಗಳಾದ ಗಿರಿಜೆಯ ಮುಖವೆಂಬ ಕಮಲಕ್ಕೆ ಸೂರ್ಯನೂ, ಅತಿಶಯವಾದ ಸುಜ್ಞಾನ - ಆನಂದ ಸ್ವರೂಪನೂ, ವೇದಗಳಿಂದ ನುತಿಸಲ್ಪಟ್ಟವನೂ, ಚಂದ್ರನನ್ನು ಜಡೆಯಲ್ಲಿ ಧರಿಸಿದವನೂ, ಸೂರ್ಯ-ಚಂದ್ರ-ಅಗ್ನಿಗಳೆಂಬ ನೇತ್ರಗಳುಳ್ಳವನೂ, ತ್ರಿಪುಟಿರಹಿತನೂ,[೧] ಸವಿಕಲ್ಪಕ ಜ್ಞಾನಕ್ಕೆ ವಿಷಯನಲ್ಲದವನೂ, ಶುಭ್ರವಾದ ದೇಹವುಳ್ಳವನೂ, ನನ್ನ ಪರಮ ಗುರುವೂ ಆದ ಶಿವನು - ಪಂಪಾವಿರೂಪಾಕ್ಷನು ನನ್ನನ್ನು ಆದರಪೂರ್ವಕವಾಗಿ ಕಾಪಾಡಲಿ. ೨. ಚಂದ್ರನಿಂದುಂಟಾದ ಶೀತಲಕಿರಣಗಳನ್ನು ಪ್ರವಹಿಸುವುದರ ಮೂಲಕ ಹೇಮಂತ; ಆಕಾಶಗಂಗೆಯ ತುಂತುರಿನ ಮೂಲಕ ಶಿಶಿರ; ಪರ್ವತರಾಜಪುತ್ರಿ ಗಿರಿಜೆಗೆ ನಿರ್ಮಲ ವರರೂಪನಾದ (ವರ=ಪತಿ; ಶ್ರೇಷ್ಠ) ವಸಂತ; ದೃಢವಾದ ಹಣೆಗಣ್ಣರೂಪದಲ್ಲಿ ಗ್ರೀಷ್ಮ; ಕರುಣರಸದಿಂದ ಕೂಡಿ ವರ್ಷ; ಶರನ್ಮೂರ್ತಿಯಾಗಿ (ಶರತ್ಕಾಲದಂತೆ ಶುಭ್ರಮೂರ್ತಿಯಾಗಿ) ಶರತ್ - ಹೀಗೆ ವಿಶೇಷವಾಗಿ ಷಡೃತುಗಳನ್ನು ಹೋಲಿ ಶೋಭಿಸುವ ಪಾರ್ವತೀಪತಿಯಾದ (ಆರ್ಯಾ=ಪಾರ್ವತಿ) ಶಿವನು ನನ್ನನ್ನು ಪ್ರೀತಿಯಿಂದ ರಕ್ಷಿಸಲಿ. ೩. ಸದ್ಭಕ್ತರ ಹೃದಯಕಮಲವನ್ನು ಅರಳಿಸುತ್ತ, (ಸುಜ್ಞಾನ

---

೧. ಜ್ಞಾನ, ಜ್ಞೇಯ, ಜ್ಞಾತೃ - ಎಂಬಿವು ತ್ರಿಪುಟಿ. ಈ ಭೇದವಿಲ್ಲದವನು.

ಹರಕಲ್ಪದ್ರುಲತಾಂಗಿ ನೀಲಗಳಮಾರ್ತಾಂಡಾಂಬುಜಾತಾಸ್ಯೆ ಶಂ
ಕರಪದ್ಮಾಕರಚಕ್ರವಾಕಕುಚೆ ಶರ್ವಾಂಚಚ್ಛರತ್ಕಾಲಬಂ।
ಧುರಹಂಸೀಮೃದುಯಾನೆ ಚಂದ್ರಧರಪುಷ್ಪೇಂದಿಂದಿರೋದ್ವೇಣಿ ಯೊ
ಶ್ವರಪೂರ್ಣೇಂದುಚಕೋರನೇತ್ರೆ ಪೊರೆಗೆನ್ನಂ ಕೂರ್ತು ಪಂಪಾಂಬಿಕೆ ॥ ೪ ॥

ಮದಧಾರಾಸಕ್ತಭೃಂಗೀಕುಳದ ರವಮೆ ಗೀತಂ ಸ್ತುತಾಮ್ನಾಯಸಂದೋ
ಹದ ನಾದಂ ವಾದ್ಯಮಂಚತ್ಕರತಳದೆಲರುಂಡೊಯ್ಯನಾಂದೋಳಿಸುತ್ತುಂ।
ಪೊದಟ್ದುದ್ಯದ್ಗರ್ಭಬದ್ಧೋರಗಿಯ ಗತಿ ಲಸನ್ನರ್ತಕೀನೃತ್ಯಮಾಗಲ್
ಮುದದಿಂದಾಲೋಕಿಸುತ್ತುರ್ಬುವ ಕರಿವದನಂ ಕೂರ್ತು ರಕ್ಷಿಪ್ಪುದೆನ್ನಂ ॥ ೫ ॥

ತನುವರ್ಣಂ ಮುಗಿಲಿಂದ್ರಚಾಪಲತೆ ನಾನಾರತ್ನಭೂಷಾಂಶು ಲೋ
ಚನರುಕ್ಕೊಪ್ಪುವ ಬಳ್ಳಿ ಮಿಂಚುಲಿಯೆ ಪಾದಾಬ್ಜಾಂಕಮಾದೊಳ್ಗೊಡರ್।
ಘನನಾದಂ ಕರುಣಾಮೃತಂ ಮಳೆಯದಾಗಲ್ಕಾಡೆ ಕಾರ್ಗಾಲಮೆಂ
ಬಿನೆಗಂ ರಂಜಿಪ ವೀರಭದ್ರನೆಮಗೀಗಿಷ್ಟಾರ್ಥಸಂಸಿದ್ಧಿಯಿಂ ॥ ೬ ॥

ಜ್ಯೋತಿಯಿಂದ) ಮೋಹವೆಂಬ ಗಾಢಾಂಧಕಾರವನ್ನು ಸರಿಸಿ ಅಂತರಂಗವನ್ನು ಬೆಳಗಿಸುತ್ತ, ಪ್ರಕಾಶಮಾನವಾದ ಆಕಾಶಮಂಡಲವೆಂಬ ಚಂದ್ರಕಾಂತ ಶಿಲೆಯನ್ನು ಕರಗಿಸಿ ಉಕ್ಕಿಸುತ್ತ, ಆನಂದ ಸಾಗರಕ್ಕೆ ಆಧಿಕ್ಯವನ್ನುಂಟುಮಾಡುತ್ತ, ನಮಸ್ಕರಿಸಿದ (ಭಕ್ತರ) ಮನವೆಂಬ ಆಕಾಶದ ಅಂಗಳದ ನಡುವೆ, ತಾರಾಮಂಡಲಕ್ಕಧಿಪತಿಯಾದ ಚಂದ್ರನಿರುವಂತೆ ಸದಾ ಶೋಭಿಸುವ ಶಿವನು ಭಕ್ತಸಮೂಹವನ್ನು ರಕ್ಷಿಸಲಿ. ೪. ಶಿವನೆಂಬ ಕಲ್ಪವೃಕ್ಷಕ್ಕೆ ಲತೆಯಂತಿರುವವಳೂ, ನೀಲಕಂಠನೆಂಬ ಸೂರ್ಯನಿಂದ ಅರಳುವ ಮುಖಕಮಲವುಳ್ಳವಳೂ, ಶಿವನೆಂಬ ಕೊಳದಲ್ಲಿ (ನೆಲೆಗೊಂಡ) ಎಣೆವಕ್ಕಿ ಕುಚದವಳೂ, ಶಿವನೆನ್ನುವ ಶರತ್ಕಾಲದಲ್ಲಿ ಮನೋಹರನಾದ ಹಂಸನ ಮೃದುನಡಿಗೆಯನ್ನು ಅನುಕರಿಸುವವಳೂ, ಶಿವನ ಶಿರದಲ್ಲಿ ನೈದಿಲೆಯ ಹೂವಿನಂತಿರುವ ತಲೆಗೂದಲುಳ್ಳವಳೂ, ಶಿವನೆಂಬ ಪೂರ್ಣಚಂದ್ರನ ಕಾಂತಿಯೆಂಬ ತಣ್ಣನೆಯ ಕಿರಣಗಳನ್ನು ಕಣ್ಣುಗಳಿಂದ ಹೀರುವ ಚಕೋರದಂತಿರುವವಳೂ ಆದ ಪಂಪಾಂಬಿಕೆಯು ನನ್ನನ್ನು ಪ್ರೀತಿಯಿಂದ ರಕ್ಷಿಸಲಿ.[೨] ೫. ಮದೋದಕದಲ್ಲಿ ಆಸಕ್ತವಾದ ದುಂಬಿಗಳ ಸಮೂಹದ ಝೇಂಕಾರವೇ ಗೀತ, ಹೊಗಳುವ ವೇದಗೋಷ್ಠಿಯ ನಾದವೇ ವಾದ್ಯ, ಬೀಸುವ ಕರತಳದಿಂದುಂಟಾದ ಗಾಳಿಯನ್ನುಂಡು ತೂಗಾಡುತ್ತ ಹೊಟ್ಟೆಗೆ ಬಿಗಿದಿರುವ ಸರ್ಪಿಣಿಯು ಚಲಿಸುವುದೇ ನೃತ್ಯವಾಗಿರಲು ಅದನ್ನು ನೋಡಿ ಉಬ್ಬುವ ಕರಿಮುಖನಾದ ಗಣಪತಿಯು ನನ್ನನ್ನು ಪ್ರೀತಿಯಿಂದ ರಕ್ಷಿಸಲಿ. ೬. ದೇಹದ ಬಣ್ಣವೇ ಆಕಾಶ, ನಾನಾ ಬಗೆಯ ರತ್ನಖಚಿತವಾದ ಆಭರಣಗಳ ಕಾಂತಿ ಕಾಮನ ಬಿಲ್ಲು, ಕಣ್ಣ ಕಾಂತಿಯೇ ಥಳಥಳಿಸುವ ಬಳ್ಳಿಮಿಂಚು, ಪಾದಕಮಲಗಳಿಗೆ ಧರಿಸಿರುವ ಗೆಜ್ಜೆಗಳ ದನಿಯೇ ಮೋಡಗಳ ಗುಡುಗು, ಕರುಣಾಮೃತವೇ ಮಳೆ - ಇವುಗಳಿಂದ ವಿಶೇಷವಾಗಿ ಮಳೆಗಾಲವೆನ್ನುವಂತೆ

---

೨. ಅರ್ಧನಾರೀಶ್ವರನಾದ ಶಿವನ ಅರ್ಧಭಾಗವಾದ ಪಾರ್ವತಿಯ ವರ್ಣನೆ ಇದು.

ಮೆಲ್ಲನೆ ಪಾರ್ವತೀಪ್ರಣಯವಾಕ್ಕತಿಯಂ ತವೆ ಕಲ್ತು ಯೋಗಸಂ
ಪಲ್ಲಸಿತಸ್ಮಿತಾನನದೊಳೀಶ್ವರನಂ ನೆಱೆ ನೋಡಿ ಬಂದು ಮೇ।
ಱುಲ್ಲಸದಿಂ ಮುಗುಳ್ದುಮೆಯನಪ್ಪಿ ಲಸತ್ಪಿತೃಮಾತೆಯರ್ಗೆ ಸಂ
ಫುಲ್ಲವಿಲಾಸಮಂ ಕುಡುವ ಷಣ್ಮುಖನೀಗೆ ಮದೀಯವಾಂಛೆಯಂ ॥ ೭ ॥

ಸಸಿದಲೆಯಂಗೆ ತೆತ್ತು ಧನವಂ ಮನವಂ ತನುವಂ ವಿಲಾಸದಿಂ
ದಸಮಸುಭಕ್ತಿಯೊಳ್ಬೆರೆದು ಕಪ್ಪುರದೊಳ್ಸೊಡರಂತೆ ನಾಡೆ ರಂ।
ಜಿಸುವ ಚಿದಂಬುರಾಶಿಬಸವೇಶ್ವರಮುಖ್ಯಮಹೇಶಪೂಜಕ
ಪ್ರಸರಪದಂಗಳೆನ್ನ ಬಗೆದಾವರೆಯೊಳ್ನೆಲಸಿರ್ಕೆ ಸಂತತಂ ॥ ೮ ॥

ಪ್ರಮಥಾನೀಕಕಥಾರ್ಣವೇಂದು ಹರಿದೇವಾಚಾರ್ಯನಂ ಧೈರ್ಯನಂ
ಸಮುದಂಚದ್ವೃಷಭಸ್ವಾಮರಮಹೀಜಾರಾಮನಂ ಸೋಮನಂ।
ವಿಮಲಜ್ಞಾನಸುದೀಪಿಕಾಸ್ಫುರಿತಚೇತಸ್ಸದ್ಮನಂ ಪದ್ಮನಂ
ಕ್ರಮದಿಂದಂ ಬಲಗೊಂಡು ಪೇೞ್ವೆನೊಸೆದಾನೀಕಾವ್ಯಮಂ ಸೇವ್ಯಮಂ ॥ ೯ ॥

ಶಿವನೆಂದುತ್ತಮಶೈವರಂಬುರುಹನೇತ್ರಂಗೆತ್ತು ತಾಂ ವೈಷ್ಣವರ್
ಹವಿರನ್ನಪ್ರಿಯನೆಂದು ಭೂಮಿದಿವಿಜರ್ಜೈನರ್ಜಿನಂಗೆತ್ತು ತ।
ಮ್ಮವನೆಂದರ್ಚಿಸಲೊಲ್ದುಸರ್ವಮುಖದಿಂದಂ ಪೂಜೆಗೊಂಡಾವಗಂ
ಸುವಿಲಾಸಂಬಡೆದೊಪ್ಪುವಲ್ಲಮನೆ ಬೆಚ್ಚಿರ್ಕೆನ್ನ ಚಿತ್ತಾಬ್ಜದೊಳ್ ॥ ೧೦ ॥

ಶೋಭಿಸಿರುವ ವೀರಭದ್ರನು ನಮಗೆ ಇಷ್ಟಾರ್ಥಸಿದ್ಧಿಯನ್ನು ಅನುಗ್ರಹಿಸಲಿ. ೭. ಪಾರ್ವತಿಯ ಏಕಾಂತದ ಮಾತುಗಳನ್ನು ಮೆಲ್ಲನೆ [ಕೇಳಿ] ಕಲಿತು, ಆ ಸಂಬಂಧವಾಗಿ ಅರಳಿದ ಮುಖದಿಂದ ಶಿವನನ್ನು ನೋಡಿ ಬಂದು [ಮನದಲ್ಲಾದ] ಸಂತೋಷವನ್ನು [ಅದುಮಿಡಲಾಗದೆ] ಮೇಲಿಂದ ಮೇಲೆ ತಾಯಿಯನ್ನು ಅಪ್ಪಿ ತಂದೆ - ತಾಯಿಯರಿಗೆ ಹೆಚ್ಚಿನ ಸಂತೋಷವನ್ನುಂಟುಮಾಡುವ ಷಣ್ಮುಖನು ನಮ್ಮ ಬಯಕೆಗಳನ್ನು ನೆರವೇರಿಸಲಿ. ೮. ಚಂದ್ರಧರನಾದ ಶಿವನಿಗೆ ಸಂಭ್ರಮದಿಂದ ತನು-ಮನ-ಧನಗಳನ್ನಿತ್ತು, ಉರಿಯುಂಡ ಕರ್ಪೂರದ ಸೊಡರಿನಂತೆ ಬೆಳಗುವ, ಜ್ಞಾನಸಮುದ್ರರಾದ ಬಸವನೇ ಮೊದಲಾದ ಶಿವಭಕ್ತರ ಪಾದಗಳು ಸದಾ ನನ್ನ ಹೃತ್ಕಮಲದಲ್ಲಿ ನೆಲಸಿರಲಿ. ೯. ಪ್ರಮಥರ ಕಥಾಸಮುದ್ರಕ್ಕೆ ಚಂದ್ರನಂತಿರುವ ಮಹಾಧೈರ್ಯಶಾಲಿ ಆಚಾರ್ಯ ಹರಿದೇವ (ಹರಿಹರ)ನನ್ನು, ಶ್ರೇಷ್ಠವಾದ ವೃಷಭಸ್ವಾಮಿಗಳೆಂಬ ಕಲ್ಪವೃಕ್ಷಗಳ ಉದ್ಯಾನವನವಾದ ಸೋಮನಾಥನನ್ನು, ನಿರ್ಮಲ ಜ್ಞಾನದೀಪ್ತಿಯಿಂದ ಬೆಳಗುವ ಚಿತ್ತಗೃಹವುಳ್ಳ ಪದ್ಮಣಾಂಕನನ್ನು ಕ್ರಮವಾಗಿ [ನೆನೆದು] ನಮಸ್ಕರಿಸಿ ನಾನು ಪ್ರೀತಿಯಿಂದ [ಭಕ್ತರಿಗೆ] ಸೇವ್ಯವಾದ ಈ ಕಾವ್ಯವನ್ನು ಹೇಳುವೆನು. ೧೦. ಶ್ರೇಷ್ಠರಾದ ಶೈವರು ಶಿವನೆಂದೂ, ವೈಷ್ಣವರು ವಿಷ್ಣುವೆಂದೂ, ಬ್ರಾಹ್ಮಣರು ಬ್ರಹ್ಮನೆಂದೂ, ಜೈನರು ಜಿನನೆಂದೂ - ಹೀಗೆ ಎಲ್ಲರೂ ತಮ್ಮವನೆಂದು ಭಾವಿಸಿ ಪೂಜಿಸಲು ಸರ್ವಮುಖಗಳಿಂದ ಅವರ ಪೂಜೆಯನ್ನು ಒಲಿದು ಸ್ವೀಕರಿಸಿ, ಸದಾ ವಿಲಾಸಯುಕ್ತನಾಗಿ ಮೆರೆಯುವ ಅಲ್ಲಮನು ನನ್ನ ಹೃದಯಕಮಲದಲ್ಲಿ ಅಗಲದಂತಿರಲಿ. ೧೧. ನುಡಿಜಾಣರಿಗೆ ಸೇವ್ಯವಾದ ಶ್ರೇಷ್ಠವೂ

ದಿಕ್ಸಲಿಲಾಂಬುವಹ್ನಿವಿಯದಾದಿಗತಾಮಲಚಿತ್ತಿನೊಳ್ಪ ಸ
ಮ್ಯಕ್ಷರನಲ್ಲಮಾಂಕವೆಸರಂ ತಳೆದುಜ್ವಲಿಪಾರ್ಯ್ಯರಾಟ್ಸುಧಾ।
ರುಕ್ಷಯತೇಜನಂಘ್ರಿಕಮಲಂಗಳನಾಂ ನೆಱೆಪೊತ್ತು ಪೇೞ್ದಪೆಂ
ವಾಕ್ಷುರರ್ಗೆ ಸೇವ್ಯಮನುದಂಚಿತಭವ್ಯಮನೀಸುಕಾವ್ಯಮಂ ॥ ೧೧ ॥

ಸರಸರ ಚೇತನೋತ್ಪಲಕೆ ಪೂರ್ಣಹಿಮಾಂಶುಮರೀಚಿಯಾಗೆ ಬ
ಲ್ಲರ ಕಿವಿಗಳ್ಗೆ ಮಾಣಿಕದ ಮಂಜರಿಯಾಗೆ ಪಳಂಚಿದೋದುವ।
ಕ್ಕರಿಗರ ಜಿಹ್ವೆಗಿಂಪಮರ್ದನೂತ್ನತರಾಮೃತಧಾರೆಯಾಗೆ ಕೂ
ರ್ತ್ತೊರೆವೆನಪಾರಸಾರಗುಣವೃಂದಮನೀರುಚಿರಪ್ರಬಂಧಮಂ ॥ ೧೨ ॥

ಶೃಂಗಾರಸಾರಮೆಂದೀ
ಮಂಗಳಕೃತಿನಾಮಮಿಕೃತಿಗೆ ವಲ್ಲಭನು।
ತ್ತುಂಗವಿರೂಪಾಕ್ಷಂ ಸುಧೆ
ಯಂ ಗೆಲಲೀಕೃತಿಯನುಸುರಿದಂ ಸೋಮನೃಪಂ ॥ ೧೩ ॥

ಬಿಸಜಾರಾತಿಕುಲೋದ್ಭವಂ ತಿರುಮಲಕ್ಷೋಣೀಧರಂ ತನ್ನರೇಂ
ದ್ರಸುಪುತ್ರಂ ನುತರಾಯಣೋರ್ವಿಪತಿ ತದ್ರಾಜನ್ಯರಾಣ್ಣಂದನಂ।
ವಸುಧೇಶೋತ್ತಮನಿಂದುಶೇಖರನೃಪಂ ತದ್ಭೂಪಜಂ ಸೋಮನೊ
ಲ್ದುಸಿರ್ದೀಸತ್ಕೃತಿ ಸಜ್ಜನರ್ಕ್ಕಳ ಮನಕ್ಕಂಟಿರ್ಪುದೇಂ ಚೋದ್ಯಮೇ ॥ ೧೪ ॥

ಪಂಪಾನಗರೀಶ್ವರನೀ
ಪೆಂಪಮರ್ದಿನಿಗಬ್ಬಕಾಣ್ಮನೀಸತ್ಕೃತಿಯನ।
ಲಂಪಿಂದಂ ವಿರಚಿಸಿದಾ
ತಂ ಪರಮಜ್ಞಾನಿ ಸೋಮನೆನೆ ಮೆಚ್ಚದರಾರ್ ॥ ೧೫ ॥

ಭವ್ಯವೂ ಆದ ಈ ಮನೋಹರ ಕಾವ್ಯವನ್ನು ಹೇಳುವೆನು. ವಾಯು, ಜಲ, ಅಗ್ನಿ, ಆಕಾಶಾದಿಗಳಲ್ಲಿ ಅಮಲ ಚಿತ್‌ಸ್ವರೂಪನಾಗಿರುವವನೂ, ಜಂಗಮನಾದ ಅಲ್ಲಮನ ಹೆಸರನ್ನು ಧರಿಸಿದವನೂ, ಪ್ರಕಾಶಮಾನರಾದ ದೇವತೆಗಳಿಗೆ ಒಡೆಯನೂ, ಅಮೃತಕಿರಣನಾದ ಚಂದ್ರನಂತೆ ತೇಜಸ್ವಿಯೂ ಆದ ಶಿವನ ಪಾದಕಮಲಗಳನ್ನು [ತಲೆಯಲ್ಲಿ] ಧರಿಸಿ ಈ ಕಾವ್ಯವನ್ನು ಹೇಳುವೆನು. ೧೨. ರಸಿಕರ ಬುದ್ಧಿಯೆಂಬ ಕಮಲಕ್ಕೆ ಪೂರ್ಣಚಂದ್ರನ ಕಿರಣಗಳಂತೆ, ಜ್ಞಾನಿಗಳ ಕಿವಿಗೆ ಮಾಣಿಕ್ಯದ ಲೋಲಾಕಿನಂತೆ, ವಿರೋಧಿಸದೆ ಪ್ರೀತಿಯಿಂದ ಓದುವ ಪಂಡಿತರ ನಾಲಗೆಗೆ ಸವಿಯಾದ ನೂತನತರವಾದ ಅಮೃತಧಾರೆಯಂತೆ ಪ್ರಿಯವಾಗಿಯೂ ಹೆಚ್ಚು ಸಾರವತ್ತಾಗಿಯೂ ಇರುವ ಈ ಸುಂದರವಾದ ಕಾವ್ಯವನ್ನು ಹೇಳುವೆನು. ೧೩. 'ಶೃಂಗಾರಸಾರ' ಈ ಕೃತಿಗಿರುವ ಶುಭನಾಮ. ಶ್ರೇಷ್ಠನಾದ ಪಂಪಾ ವಿರೂಪಾಕ್ಷನು ಈ ಕೃತಿಗೆ ಒಡೆಯನು. ಅಮೃತವನ್ನು ಹೀಗಳೆವಂತೆ ಈ ಕೃತಿಯನ್ನು ಹೇಳಿದವನು ಸೋಮರಾಜನು. ೧೪. ಚಂದ್ರವಂಶದಲ್ಲಿ ಜನಿಸಿದವನು ತಿರುಮಲ ಮಹಾರಾಜನು. ಅವನ ಸುಪುತ್ರ ರಾಯಣಭೂಪ. ಇವನ ಮಗನು ಭೂಮೀಶರಲ್ಲಿ ಶ್ರೇಷ್ಠನಾದ ಚಂದ್ರಶೇಖರ ಮಹಾರಾಜ. ಈ ರಾಜನ ಮಗನಾದ ಸೋಮರಾಜನು ಹೇಳಿದ ಈ ಸತ್ಕೃತಿಯು ಸಜ್ಜನ ಸಮೂಹದ ಮನಸ್ಸಿಗೆ ನಾಟುವುದರಲ್ಲೇನು ಅಚ್ಚರಿ? ೧೫. ಪಂಪಾಕ್ಷೇತ್ರಕ್ಕೆ ಒಡೆಯನಾದ ವಿರೂಪಾಕ್ಷನು ಹಿರಿಮೆಯಿಂದ ಕೂಡಿರುವ ಈ

ಹಿಮರುಚಿಮಂಡಲಂ ನವಚಕೋರಿಗೆ ಚಾದಗೆಗಂಬುದಾಗಮಂ
ವಿಮಲವಸಂತಸಂಪದವದನ್ಯಭೃತಕ್ಕೆ ಸುಧಾಬ್ಧಿ ಹಂಸೆಗು।
ದ್ಗಮವೆಳದುಂಬಿಗೊಂದಿನಿತರೋಚಕಮಪ್ಪುದೆ ಸೋಮರಾಜಚಂ
ದ್ರಮನ ವಚಸ್ಸುಧಾಲಹರಿ ಸಜ್ಜನಸಂತತಿಗೇನಸಹ್ಯಮೇ ॥ ೧೬ ॥

ಬಲ್ಲವರೀಕೃತಿಯಂ ತ
ಪ್ಪಲ್ಲೆಂದೊಡೆ ಸಾಕು ಗಾಂಪರಿರದೂಳಿದೊಡೇಂ।
ನಲ್ಲಲರ ಕಂಪು ಪೀನಸ
ದಲ್ಲೊಂದಿದವಂಗೆ ಸೊಗಸದಿರೆ ಕೆಟ್ಟಪುದೇ ॥ ೧೭ ॥

ಬಲಿಭೋಜ್ಯಂಗೆ ನವೀನಚೂತದಿನಿವಣ್ಣಿಂದ್ರಾಂಶು ಕಳ್ಳಂಗೆ ನ
ಲ್ಲಲರ್ಜೊಂಪಂ ಪ್ಲವಗಕ್ಕೆ ಚಂದನರಸಂ ಕ್ರೋಡಂಗೆ ದಿವ್ಯಾಮೃತಂ।
ಸಲೆ ಮದ್ಯಾರ್ಥಿಗೆ ರಮ್ಯವಾಗದೊಡವರ್ಕೇಂ ಕುಂದೆ ದುರ್ಬೋಧಕರ್
ವಿಲಸತ್ಕಾವ್ಯಮನೊಪ್ಪುಗೆಯ್ಯದೊಡದೇಂ ಬಲ್ಲರ್ಗೆ ತಾಂ ಪೊಲ್ಲಮೇ ॥ ೧೮ ॥

ಅಲ್ಲಲ್ಲಿ ಕಲ್ತ ಪಳವಾ
ತೆಲ್ಲಮನಂತಿಂತು ಕೋದು ಕಬ್ಬಂಬೇಟ್ಟು।
ತ್ಫುಲ್ಲಮುದಂಬಡೆದಿರ್ಪ
ಕ್ಷುಲ್ಲಕಕವಿ ಕಾವ್ಯರಸಮನೇನಱಿದಪನೇ ॥ ೧೯ ॥

ಕೋಗಿಲೆ ಕಮನೀಯವಸಂ
ತಾಗಮವಱಿವಂತೆ ಕಾಗೆಯಱಿವುದೆ ಕವಿಪು।
ನ್ನಾಗಂ ಬಲ್ಲವೊಲೇನಿಂ
ಬಾಗಿರಲಱಿದಪನೆ ಕುಕವಿ ಸತ್ಕೃತಿರಸಮಂ ॥ ೨೦ ॥

ಇನಿದಾದ ಕಾವ್ಯಕ್ಕೆ ಒಡೆಯನು. ಈ ಸತ್ಕೃತಿಯನ್ನು ಸಂತಸದಿಂದ ಪರಮಜ್ಞಾನಿಯಾದ ಸೋಮನು ವಿರಚಿಸಿದನು ಎನ್ನಲು ಮೆಚ್ಚದವರಾರು? ೧೬. ಚಂದ್ರನ ಕಿರಣಗಳು ನವಚಕೋರಿಗೆ, ಮೋಡಗಳ ಆಗಮನವು ಚಾತಕಪಕ್ಷಿಗೆ, ಶುಭ್ರ ವಸಂತನ ಸಂಪದವು ಕೋಗಿಲೆಗೆ, ಕ್ಷೀರಸಾಗರವು ಹಂಸಪಕ್ಷಿಗೆ, ಅರಳಿದ ಹೂವು ಎಳೆದುಂಬಿಗೆ ಇನಿತಾದರೂ ಬೇಸರ ತರುವುದೆ? ಸೋಮರಾಜನೆಂಬ ಚಂದ್ರನ ಮಾತೆಂಬ ಅಮೃತಲಹರಿಯು ಸಜ್ಜನಸಮೂಹಕ್ಕೇನು ಅಸಹನೀಯವೆ? ೧೭. ಮನೋಹರವಾದ ಹೂವಿನ ಮಾಧುರ್ಯವು ಪೀನಸವೆಂಬ ಮೂಗಿನ ರೋಗವುಳ್ಳವನಿಗೆ ಪ್ರಿಯವಾಗದಿದ್ದಲ್ಲಿ (ಅದು) ಕೆಡುವುದೆ? ಮೂರ್ಖರು ಬಿಡದೆ ಬೊಬ್ಬೆಯಿಟ್ಟರೇನು, ಜ್ಞಾನಿಗಳು ಈ ಕೃತಿಯನ್ನು ಒಪ್ಪಿದರೆ ಸಾಕು. ೧೮. ಅರಳಿದ ಮಾವಿನಮರದ ಸವಿಯಾದ ಹಣ್ಣು ಕಾಗೆಗೆ, ಬೆಳುದಿಂಗಳು ಕಳ್ಳನಿಗೆ, ಮನೋಹರವಾದ ಹೂಗಳ ಗುಚ್ಛವು ಮಂಗನಿಗೆ, ಶ್ರೀಗಂಧದ ಸುಗಂಧವು ಹಂದಿಗೆ, ದಿವ್ಯಾಮೃತವು ಅತಿಯಾದ ಮದಿರಾಪೇಕ್ಷಿಗೆ ಇಷ್ಟವಾಗದಿದ್ದಲ್ಲಿ ಅವಕ್ಕೇನು ಕಳಂಕವೆ? ಅವಿವೇಕಿಗಳು ಶ್ರೇಷ್ಠವಾದ ಕಾವ್ಯವನ್ನು ಒಪ್ಪದಿದ್ದಲ್ಲಿ ವಿವೇಕಿಗಳಿಗೆ ಅದೇನು ತ್ಯಾಜ್ಯವೆ? ೧೯. ಆಗೊಮ್ಮೆ ಈಗೊಮ್ಮೆ ಕಲಿತ ಹಳೆಯ ಮಾತುಗಳನ್ನೆಲ್ಲ ಹಾಗೂ ಹೀಗೂ ಪೋಣಿಸಿ ಕಾವ್ಯವನ್ನು ರಚಿಸಿ ಅತ್ಯಾನಂದ ಹೊಂದಿದ ಕ್ಷುಲ್ಲಕ ಕವಿಯು ಕಾವ್ಯರಸವನ್ನೇನು ತಿಳಿದಿರುವನೇ? ೨೦. ಮನೋಹರವಾದ ವಸಂತಮಾಸದ ಆಗಮನವನ್ನು ಕೋಗಿಲೆಯು

ಅಱಿಯದ ನೃಪನಾಸ್ಥಾನದೊ
ಳೊಱಲಿ ಖಳಂ ಕೊರ್ವಿ ಕುಕವಿಗಳನಟ್ಟಿಪವೋಲ್।
ನೆಱೆ ಬಲ್ಲ ಸತ್ಕವೀಂದ್ರರ
ನೆಱಗಿಸಲೇನವನ ನೊಸಲೊಳಂಬಕಮುಂಟೇ ॥ ೨೧ ॥

ವಾಚಾಲತ್ವಮನೆಸಗ
ಲ್ಕೋಚರಮೇ ಕಬ್ಬಗಡಲನುತ್ತರಿಸುವ ಜಾ।
ಣ್ಣೀಚರ್ಗೆ ಸರ್ವಶಾಸ್ತ್ರವಿ
ಲೋಚನಮಪ್ಪದಟಸುಕವಿಪಂಚಾಸ್ಯನವೋಲ್ ॥ ೨೨ ॥

ವ್ಯಾಕರಣಾರ್ಣವಮುಮನವ
ಲೋಕಿಸಿ ಪೇೞ್ದಮಲಕಾವ್ಯದೊಳ್ ದೋಷಮದುಂ।
ಟೇ ಕವಿಗಱಿಸಲ್ಕೇಂ ರ
ತ್ನಾಕರದೊಳ್ಬೆದಕಲುಂಟೆ ಸರಟಂಗೂಟಂ ॥ ೨೩ ॥

ನರರುಣಿಸಂ ಪೊಕ್ಕು ನೊಳಂ
ಮರಳಿಪವೊಲ್ಕುಂಭಜಾತನಾರೋಗಣೆಯಂ।
ಮರಳಿಸಲಾರ್ಪುದೆ ಖಳನೆ
ಗ್ಗರನಲೆವವೊಲದಟಕವಿಯನಲೆಯ್ಕಳವೇ ॥ ೨೪ ॥

ಪೞಿವರ್ಗಳುಕದೆ ಸುಕವಿಗ
ಳಳವಡೆ ವಿರಚಿಸರೆ ನವ್ಯಕಾವ್ಯಮನುೞಿ ತಾ।
ಮಳವಱಿಯದೊಳ್ವಕುಕ್ಕುರ
ಕುಳಮಂ ಲೆಕ್ಕಿಪುದೆ ಪೋಪ ಮದಶುಂಡಾಲಂ ॥ ೨೫ ॥

ತಿಳಿಯುವಂತೆ ಕಾಗೆಯು ತಿಳಿಯುವುದೆ? ಕವಿಶ್ರೇಷ್ಠನು ಸತ್ಕೃತಿಯ ರಸವನ್ನು ಅರಿಯುವಂತೆ ಕುಕವಿಯಾದವನು ಚೆನ್ನಾಗಿ ತಿಳಿಯಬಲ್ಲನೆ? ೨೧. ಅಜ್ಞಾನಿಯಾದ ರಾಜನ ಆಸ್ಥಾನದಲ್ಲಿ ಕೊಬ್ಬಿದ ದುಷ್ಟನು ಕೂಗಿ ಕುಕವಿಗಳನ್ನು ಹೆದರಿಸುವಂತೆ, ಸುಜ್ಞಾನಿಗಳಾದ ಕವಿಶ್ರೇಷ್ಠರನ್ನು ನಮಸ್ಕರಿಸುವಂತೆ ಮಾಡಲು ಅವನ ಹಣೆಯಲ್ಲೇನು ಕಣ್ಣಿದೆಯೆ? ೨೨. ಸಕಲಶಾಸ್ತ್ರ ಸಂಪನ್ನನೂ ಸಮರ್ಥನಾದ ಕವಿಸಿಂಹನೂ ಆದವನಿಗೆ ಕಾವ್ಯವೆನ್ನುವ ಸಮುದ್ರವನ್ನು ದಾಟಲು ಸಾಧ್ಯವಾಗುವಂತೆ, ನೀಚರಾದವರಿಗೆ ಕೇವಲ ವಾಚಾಳಿತನದಿಂದ ಕಾವ್ಯವೆಂಬ ಸಮುದ್ರವನ್ನು ದಾಟುವ ಚತುರತನವು ಸಾಧ್ಯವೆ? ೨೩. ವ್ಯಾಕರಣವೆನ್ನುವ ಸಮುದ್ರವನ್ನು ನೋಡಿ ರಚನೆಗೈದ ಶುದ್ಧ ಕಾವ್ಯದಲ್ಲಿ ದೋಷವೆಂಬುದು ಹುಡುಕಲುಂಟೆ? ರತ್ನಗರ್ಭ ಸಮುದ್ರದಲ್ಲಿ ಬೆದಕಿದರೆ ಓತೀಕೇತನಿಗೆ ಊಟ ಸಿಗುವುದೆ? ೨೪. ಮನುಷ್ಯರ ಆಹಾರದಲ್ಲಿ ಸೇರಿದ ನೊಣವು ಮರಳಿ ಬರುವಂತೆ ಅಗಸ್ತ್ಯನ ಆಹಾರದಲ್ಲಿ ಸೇರಿ ಹಿಂತಿರುಗಿ ಬರಲು ಸಾಧ್ಯವೆ? ದುಷ್ಟನು ಮೂಢರನ್ನು ನಿಂದಿಸುವಂತೆ ಶಕ್ತಕವಿಯನ್ನು ನಿಂದಿಸಲು ಸಾಧ್ಯವೆ? ೨೫. ನಿಂದಕರಿಗೆ ಹೆದರದೆ ಸುಕವಿಗಳು ಸರ್ವರಿಗೂ ಹೊಂದುವಂತೆ ನವೀನವೆನ್ನುವ ಕಾವ್ಯವನ್ನು ರಚಿಸಲಾರರೆ? ಹೆಚ್ಚಾಗಿ, ತಮ್ಮ ಕಾವ್ಯಶಕ್ತಿಯನ್ನರಿಯದೆ ಬಗುಳುವ ನಾಯಿಗಳ ಗುಂಪನ್ನು (ಹಾದಿಯಲ್ಲಿ) ಹೋಗುವ ಮದ್ದಾನೆಯು ಲಕ್ಷಿಸುವುದೆ? ೨೬. ದುಷ್ಟರು ಬಗುಳಿದರೇನು? ಶಾಶ್ವತ

ದುರ್ಜನರೂಳಿದೊಡೇಂ ಬುಧ
ಗೂರ್ಜಿತ ಸಂತೋಷಮೀವ ಸತ್ಕೃತಿಮಣಿಯಂ।
ಧೂರ್ಜಟಿಗೊಲಿದೊಪ್ಪಿಸಿದರೆ
ಬರ್ಜನರಂ ಪೊಗೞ್ದಘಂಬಡೆವರೇ ಧರೆಯೊಳ್ ॥ ೨೬ ॥

ಕವಿತಾಪ್ರೌಢಿ ತನಗೆ ಸಂ
ಭವಿಸೆ ಶಿವಸ್ತವದೆ ಮುಕ್ತಿವಡೆಯದಜಸ್ರಂ।
ಭವಿಜನಮಂ ಕೀರ್ತಿಸುವಾ
ಕವಿತೆಯೆ ದುಷ್ಕರ್ಮವಲ್ತೆ ವಸುಧಾತಳದೊಳ್ ॥ ೨೭ ॥

ಅದನಱಿದೊಲವಿಂದಂ ಲೋ
ಕದ ಜನರಂ ಪೊಗೞ್ದು ಪಾತಕಂಬಡೆಯದೆ ಸ।
ನ್ಮುದದಿಂದೆಳವೆಱೆದಲೆಯನ
ಪದವಂ ಕೀರ್ತಿಸುವೆನುತ್ತಮರ್ಮೆಚ್ಚುವಿನಂ ॥ ೨೮ ॥

ಗುರುವಲ್ಲಮಾಂಕನಾಮ
ಸ್ಮರಣಮನೊಂದೊಂದು ನೆವದೊಳಭಿನುತಿಗೈವೆಂ
ವರವಾಣಿ ಸೋಮಭೂಮೀ।
ಶ್ವರ ಭಾಪುರೆ ಯೆಂದು ಸುಜನತತಿ ಕೀರ್ತಿಪಿನಂ ॥ ೨೯ ॥

ತ್ರಿಪುರಾಂತಕನಡಿಯಂ ಕೀ
ರ್ತಿಪ ನೆವದಿಂದಾನಱಿದವೊಲುಸಿರ್ದೆಂ ಸುಜನ
ರ್ವಿಪುಳಬುಧರ್ಭಾವಕರಾ
ಲಿಪುದೀ ಕಮನೀಯಕಾವ್ಯಮಂ ನವ್ಯಮುಮಂ ॥ ೩೦ ॥

ಸುಖವನ್ನೀವ ಸತ್ಕೃತಿಯೆಂಬ ಮಣಿಯನ್ನು ಪಂಡಿತರಿಗೆ - ಶಿವನಿಗೆ ಪ್ರೀತಿಯಿಂದ ಒಪ್ಪಿಸಿದರೆ, **ರತ್ನಪ್ರಾಯರಾದ ಮಹಾನುಭಾವರನ್ನು ಹೊಗಳಿದರೆ ಭುವಿಯಲ್ಲಿ ಪಾಪಿಗಳಾಗುವರೆ?** ೨೭. ಕಾವ್ಯರಚನಾ ಪ್ರೌಢಿಮೆಯು ತನಗೆ ಪ್ರಾಪ್ತವಾಗಿರಲು, ಶಿವಸಂಕೀರ್ತನೆಯಿಂದ ಮುಕ್ತಿಹೊಂದದೆ ಸದಾ ಭವಿಗಳನ್ನು ಸ್ತುತಿಸುವ ಕವಿತೆಯು ಭೂಮಂಡಲದಲ್ಲಿ ಪಾಪ ಕರ್ಮವಲ್ಲವೆ? ೨೮. ತಿಳಿದೂ ತಿಳಿದು ಪ್ರೀತಿಯಿಂದ ಲೋಕದ ಸಾಮಾನ್ಯರನ್ನು ಹೊಗಳಿ ಪಾಪವನ್ನು ಹೊಂದದೆ ಸತ್ಪ್ರೀತಿಯಿಂದ ಬಾಲಚಂದ್ರಧಾರಿಯಾದ ಶಿವನ ಪಾದಗಳನ್ನು ಉತ್ತಮರು ಮೆಚ್ಚುವಂತೆ ಸ್ತುತಿಸುವೆನು. ೨೯. ಗುರು ಅಲ್ಲಮನ ನಾಮಸ್ಮರಣೆಯನ್ನು ಮನಸ್ಸಿಗೆ ತಂದುಕೊಂಡು, 'ವಿದ್ಯಾಧಿದೇವತೆಯಾದ ಸರಸ್ವತಿಯಿಂದ ವರವನ್ನು ಪಡೆದ ಸೋಮರಾಜನೇ ಭೇಷ್!' ಎಂದು ಸುಜನರ ಸಮೂಹವು ಹೊಗಳುವಂತೆ ಕಾವ್ಯವನ್ನು ರಚಿಸುವೆನು. ೩೦. ತ್ರಿಪುರಸಂಹಾರಿಯಾದ ಶಿವನ ಪಾದಗಳನ್ನು ಕೀರ್ತಿಸುವ ನೆವದಿಂದ ನಾನು ತಿಳಿದಂತೆ ಮನೋಹರವಾದ ಈ ಸುಂದರವಾದ ನವ್ಯ ಕಾವ್ಯವನ್ನು ರಚಿಸಿದೆನು. ಸುಜನರು, ಹೆಚ್ಚಿನ ಸಂಖ್ಯೆಯಲ್ಲಿ ವಿದ್ವಾಂಸರು, ಭಾವುಕರು ನನ್ನೀ ಕಾವ್ಯವನ್ನು ಆಲಿಸುವುದು.

ವಿಧೃತಾಲಂಕಾರದಿಂದಂ ನವಯುವತಿಯವೋಲ್ ಲಕ್ಷಣಸ್ಫೂರ್ತಿಯಿಂದಂ
ವಿಧುಜೃಂಭದ್ಬಿಂಬದಂತುಜ್ವಳರಸಮಯದಿಂದಂ ಮನೋಜ್ಞೇಕ್ಷುವಂತು
ದ್ಬುಧತತ್ಯಾನಂದದಿಂದಂ ತ್ರಿದಶಕುಜದ ವೋಲ್ ಧಾತ್ರಿಯೊಳ್ಶೋಭಿಕುಂ
ಸನ್ಮಧುರಂಬೆತ್ತಿರ್ಪ ಕಾವ್ಯಂ ಸುಜನನಿಕರಸೇವ್ಯಂ ವಿಭಾವ್ಯಂಸುನವ್ಯಂ ॥ ೩೧ ॥

ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ ದೇ
ವೇಂದ್ರಮಹೀಜದಂತೆ ಮಲಯಾನಿಲನಂತೆ ವಸಂತನಂತೆ।
ಸದ್ರುಂದ್ರಸುಧಾಬ್ಧಿಯಂತೆ ನವಚಂಪಕಮಂಜರಿಯಂತೆ ಸೋಮರಾ
ಜೇಂದ್ರನ ಕಬ್ಬದಿಂಪು ಬುಧರಂ ಬಗೆಗೊಳ್ವುದಿಳಾತಳಾಗ್ರದೊಳ್ ॥ ೩೨ ॥

ನಲ್ಲಳ ಬೇಟವಾತೊ ಶುಕಚಾರುನಿನಾದಮೊ ವಾಗ್ವಧೂಟಿಕಾ
ವಲ್ಲಕಿಯೊಪ್ಪುವಿಂಚರಮೊ ಚೈತ್ರಪಿಕಧ್ವನಿಯೋ ಸಮಂತು ಪೂ।
ವಿಲ್ಲನ ಚಾಪಸಂಜನಿತಮೋಹನನಾದಮೊ ಸೋಮರಾಜಭೂ
ವಲ್ಲಭನಿಂಪುವೆತ್ತವಚನಾಮೃತಮೋ ವಿಬುಧಾನುರಾಗಮೋ ॥ ೩೩ ॥

ಎಂದಿಂತು ವಿಬುಧರತ್ಯಾ
ನಂದಂಬಡೆದಂದು ಪೆರ್ಚಿ ಸಲೆ ಕೀರ್ತಿಸೆ ಬಾ।
ಲೇಂದುಕಲಾಶೇಖರನೊಲ
ವಿಂದಂ ಬಿತ್ತರಿಸಿ ಪೇಳ್ದನೀಸತ್ಕೃತಿಯಂ ॥ ೩೪ ॥

೩೧. ಮಧುರವೂ ಸಜ್ಜನ ಸಮೂಹಕ್ಕೆ ಸೇವ್ಯವೂ ಆಸ್ವಾದನೀಯವೂ ನವ್ಯವೂ ಆಗಿರುವ ಈ ಕಾವ್ಯವು ಅಲಂಕಾರಗಳಿಂದ (ಉಪಮಾದ್ಯಲಂಕಾರಗಳಿಂದ ಮತ್ತು ಒಡವೆಗಳಿಂದ) ನವಯುವತಿಯಂತೆಯೂ ಲಕ್ಷಣಪ್ರಕಾಶದಿಂದ (ಲಕ್ಷಣ=ಅಲಂಕಾರ ಶಾಸ್ತ್ರೋಕ್ತ ಲಕ್ಷಣ ಮತ್ತು ಚಂದ್ರಕಳಂಕ) ಚಂದ್ರಮಂಡಲದಂತೆಯೂ ಇದೆ. ಉಜ್ವಲವಾದ ಶೃಂಗಾರಾದಿ-ರಸಗಳಿಂದ ಮತ್ತು ಸಿಹಿಯಾದ ರಸದಿಂದ ಕಬ್ಬಿನಂತೆಯೂ ಇದೆ. ಬುಧರಿಗೆ - ವಿದ್ವಾಂಸರಿಗೆ ಮತ್ತು ದೇವತೆಗಳಿಗೆ ಅದ್ಭುತಾನಂದವೀಯುವುದರಿಂದ ಕಲ್ಪವೃಕ್ಷದಂತೆ ಭೂಮಿಯಲ್ಲಿ ಶೋಭಿಸುವುದು. ೩೨. ಚಂದ್ರನ ಕಿರಣದಂತೆ, ಇನಿದಾದ ಮಾವಿನಹಣ್ಣುಗಳು ಮಳೆಗರೆದಂತೆ, ಕಲ್ಪವೃಕ್ಷದಂತೆ, ಮಲಯಮಾರುತನಂತೆ, ವಸಂತನಂತೆ, ವಿಸ್ತಾರವಾದ ಸಮುದ್ರದಂತೆ, ಅದಾಗ ತಾನೇ ಅರಳಿದ ಸಂಪಗೆಯ ಗೊಂಚಲಿನಂತೆ ಸೋಮರಾಜನ ಕಾವ್ಯದ ಸವಿ ಭುವಿಯಲ್ಲಿ ವಿದ್ವಾಂಸರ ಮನಸೆಳೆಯುವುದು. ೩೩. ಈ ಕಾವ್ಯವು ಪ್ರೇಯಸಿಯ ಮೋಹದ ಮಾತುಗಳೊ, ಗಿಳಿಯ ಮನಮೋಹಕ ಉಲಿತವೊ, ಸರಸ್ವತಿಯ ವೀಣೆಯ ಚಿತ್ತಾಕರ್ಷಕ ನುಡಿತವೊ, ವಸಂತದ ಕೋಗಿಲೆಯ ಮಾಧುರ್ಯ ಮಿಶ್ರ ಧ್ವನಿಯೊ, ಮದನನ ಬಿಲ್ಲಿನ ಸಮ್ಮೋಹಕ ಝೇಂಕಾರವೊ, ವಿದ್ವಾಂಸರ ಪ್ರೀತಿಯೊ, ಭೂಕಾಂತನಾದ ಸೋಮರಾಜನ ಸವಿಒಸರುವ ವಚನಾಮೃತವೋ! ೩೪. ಹೀಗೆಂದು ವಿದ್ವಾಂಸರು ಅತ್ಯಾನಂದದಿಂದ ಉಬ್ಬಿ ಬಾಯ್ತುಂಬ ಹೊಗಳಲು ಬಾಲೇಂದು ಕಲಾಶೇಖರನಾದ ಸೋಮರಾಜನು ಈ ಸತ್ಕೃತಿಯನ್ನು ವಿಸ್ತರಿಸಿ ಹೇಳಿದನು. ೩೫. ವಾದಿಗಳ ಮುಖಕಮಲಕ್ಕೆ

ವಾದಿಜನಾನನಾಂಬುಜಕೆ ನಿರ್ಮಲಚಂದ್ರಮರೀಚಿ ಕೇಳುತಾ
ಹ್ಲಾದಿಪಸಾಧುಸಜ್ಜನಮನೋಜಲಜಾಕರಕಬ್ಜ ನಾಡೆ ಕೂ।
ರ್ತೋದುವ ಸೌಂದರರ್ಗೆ ಕಮನೀಯದ ಬಿಂಬಫಲೋಷದಿಂಪು ಮೇ
ಣಾದುದೆನುತ್ತೆ ಬಣ್ಣಿಸೆ ಬುಧಾವಳಿ ಕೀರ್ತಿಪೆನೀಪ್ರಬಂಧಮಂ ॥ ೩೫ ॥

ಮಿನುಪೀಕೃತಿಗಾವುದು ಮೊದ
ಲೆನಲುರ್ವೀಕಾಂತೆಯುಟ್ಟನೀಲಾಂಬರಮೆಂ।
ಬಿನೆಗಂ ಶರನಿಧಿಯೊಪ್ಪಿದು
ದನುಪಮಕೃತಿಯಾರಂಭದ ನೆಲೆಯೆಂಬಿನೆಗಂ ॥ ೩೬ ॥

ಮಕರಂ ಕೂರ್ಮಂ ಕುಳೀರಂ ಕರಿ ಕಿರಿ ಫಣಿ ನಕ್ರಂ ಚಲದ್ಗ್ರಾಹಮಂಭ
ಶ್ಯಕುಲಂ ಶಂಬೂಕಮೂರ್ಮಿಪ್ರಘಟನಜನಿತಾಂಭಃಕಣಾಂ ಸ್ವಚ್ಛಮುಕ್ತಾ।
ಪ್ರಕರಂ ಡಿಂಡೀರಪಿಂಡಂ ಶಿಶುಕಚಿಳಿಚಿಮಾದ್ಯಂ ಜಳೂಕಂ ಕುಳೀರಾ
ರ್ಭಕಸಂಘಂ ಪ್ಲವಂ ಕಿಂಚುಳಕಚಯಮಿರಲ್ ತೋರ್ಕುಮಂಭೋನಿಧಾನಂ ॥ ೩೭ ॥

ಸುೞಿ ಚಕ್ರಂ ನುತಪಾಂಚಜನ್ಯಮದು ಶಂಖಂ ಕೌಸ್ತುಭಂ ಮಾಣಿಕಂ
ವಳಿ ತೋಳ್ಗಳ್ ತನುಕಾಂತಿ ವಾರಿ ವಿಲಸತ್ಪೀತಾಂಬರಂ ವಾರಿಜೋ।
ಜ್ವಳತೇಜಂ ನಗೆ ಜತ್ತುಳಂ ಜಠರದೊಳ್ ತೋರ್ಪಬ್ಜಜಾತಾಂಡಸಂ
ಕುಳಮೇ ಬುದ್ಬುದಮಾಗೆ ವಿಷ್ಣುವೆನೆ ಕಣ್ಗೊಪ್ಪಿತ್ತು ನೀರಾಕರಂ ॥ ೩೮ ॥

ಅಮರರ್ಗಮೃತಾಶನರೆಂ
ದಮಲೇಂದಿರೆಯಾಣ್ಮನೆಂದು ಹರಿಗೆ ಲಸತ್ಕಾ।
ಳಿಮಕಂಧರನೆಂದು ಶಿವಂ
ಗಮರ್ದಿರೆ ಪೆಸರಿತ್ತ ಜಲಧಿಯೇಂ ರಂಜಿಸಿತೋ ॥ ೩೯ ॥

(ಅದನ್ನು ಮುದುಡಿಸುವ) ಶುಭ್ರಚಂದ್ರನ ಕಿರಣ, ಕೃತಿಯನ್ನು ಕೇಳಿ ಮುದವನ್ನು ಹೊಂದುವ ಸಾಧು ಸಜ್ಜನರ ಮನವೆಂಬ ನೈದಿಲೆಯ ಕೊಳಕ್ಕೆ ಚಂದ್ರ, ಮನವಿಟ್ಟು ಪ್ರೀತಿಯಿಂದ ಓದುವ ರಸಿಕರಿಗೆ ಮನೋಹರವಾದ ತೊಂಡೆಹಣ್ಣಿನಂತಿರುವ ಕೆಂದುಟಿಯ ಸವಿ - ಪ್ರಾಪ್ತವಾಯಿತೆಂದು ವಿದ್ವಜ್ಜನರ ಸಮೂಹವು ಹೊಗಳುವಂತೆ ಈ ಕಾವ್ಯವು ಸ್ತುತ್ಯರ್ಹವಾಗುವಂತೆ ರಚಿಸುವೆನು. ೩೬. ಹೊಳೆವ ಈ ಕೃತಿಗೆ ಆರಂಭವಾವುದೆಂದರೆ, ಎಣೆಯಿಲ್ಲದ ಈ ಕೃತಿಯ ಆದಿಯೆನ್ನುವಂತೆ ಭೂಕಾಂತೆಯು ಧರಿಸಿರುವ ನೀಲವಸ್ತ್ರವೆನ್ನುವಂತೆ ಸಮುದ್ರವು ಶೋಭಿಸಿರುವುದು. ೩೭. ಮೀನು, ಆಮೆ, ಏಡಿ, ಆನೆ, ಹಂದಿ, ಹಾವು, ಮೊಸಳೆ, ಹೊಳೆವ ನೀರಾನೆ, ಮುತ್ತಿನ ಚಿಪ್ಪು, ಕಪ್ಪೆಚಿಪ್ಪು, ತೆರೆಗಳ ಹೊಡೆತದಿಂದಾದ ಜಲಬಿಂದು, ಮುತ್ತುಗಳ ರಾಶಿ, ಗುಳ್ಳೆಗಳು, ಮತ್ಸ್ಯ ಭೇದಗಳು, ಜಿಗಣೆ, ಏಡಿಮರಿಗಳ ಸಮೂಹ, ಕಪ್ಪೆ, ಎರೆಹುಳ - ಇವುಗಳ ಮೊತ್ತದಿಂದ ಕೂಡಿ ಸಮುದ್ರವು ಶೋಭಿಸಿರುವುದು. ೩೮. ಸಮುದ್ರದ ಸುಳಿಯೇ ವಿಷ್ಣುವಿನ ಕೈಯ ಚಕ್ರ, ಶಂಖವೇ ಪಾಂಚಜನ್ಯ, ಮಾಣಿಕ್ಯವೇ ಕೌಸ್ತುಭ, ನೊರೆಯೇ ಕೈ, ಕಮಲದ ನೀರೇ ದೇಹಕಾಂತಿ, ಕಮಲದ ಕಾಂತಿಯೇ ಪೀತಾಂಬರ, ನೊರೆಯೇ ವಿಷ್ಣುವಿನ ನಗೆ, ಜಲಚರಗಳ ಅಂಡಗಳೇ ಉದರದಲ್ಲಿ ತೋರುವ ಬ್ರಹ್ಮಾಂಡ - ಹೀಗೆ ಸಮುದ್ರವು ವಿಷ್ಣುವೆನ್ನುವಂತೆ ಕಣ್ಣಿಗೆ ಅಂದವಾಗಿದ್ದಿತು. ೩೯. ದೇವತೆಗಳಿಗೆ

ಆ ಜಲರಾಶಿವೇಷ್ಟಿತಮಹೀವಳಯಂ ವರಪೀಠಮಭ್ರಗಂ
ಗಾಜಲಮೇ ಶಿರಸ್ಸ್ನಪನಮುನ್ನತಚಂದನಮಿಂದುರೋಚಿ ನೀ।
ರಾಜನವರ್ಕಬಿಂಬಮುಡುರಾಜಿ ಲತಾಂತಮದಾಗೆ ಕಂಜಜಂ
ಪೂಜಿಪ ಹೇಮಲಿಂಗಮೆನೆ ರಾಜಿಸಿತಂದು ಸುವರ್ಣಭೂಧರಂ ॥ ೪೦ ॥

ದ್ರುಹಿಣಾಂಡೋದರಪಂಕಜಾಕರದೊಳುತ್ಕೂರ್ಮಂ ಮೃಣಾಳಂ ತೊಳ
ಪ್ಪಹಿಪಂ ಮಂಜುಳನಾಳಮುಜ್ವಳದಳಂ ದಿಕ್ಸಂಚಯಂ ಕೇಸರಂ।
ಮಹಿಜಾತವಳಿಯಾಗಲುದ್ಭವಿಸಿ ರಾಜದ್ಧಾತ್ರಿಯೆಂಬಾಸರೋ
ರುಹಮಧ್ಯಸ್ಥಿತನೂತ್ನಕರ್ಣಿಕೆಯವೊಲ್ತೋರ್ಕುಂ ಸುವರ್ಣಾಚಲಂ ॥ ೪೧ ॥

ಕಲ್ಲಕುತ್ತನಕಾದ್ರಿಗಂಚಿತಮಾದ ದಕ್ಷಿಣಭಾಗದೊಳ್
ನಲ್ಲಸಂತಸಮೀವ ಗೂರ್ಜರದೇಶವೆಂಬವಧೂಟಿಯ।
ದ್ಗಲ್ಲಕಾಂತಿಯನಾಂತು ಜೃಂಭಿಪ ಮಸ್ತರತ್ನದವೋಲ್ಮಹಾ
ಬಲ್ಲಕೀನಗರಾಖ್ಯದುನ್ನತಪಟ್ಟಣಂ ಪರಿರಂಜಿಕುಂ ॥ ೪೨ ॥

ಇಹಪರವೆರಡರ ಸೌಖ್ಯಾ
ವಹಮಿಂತಿದೆ ತಾಣಮೆಂದಜಂ ಗೆರೆಗೊಯ್ದಂ।
ತಿಹ ಲೋಕಕ್ಕಂತಾಪುರ
ದಹಿತರ್ಗೆ ಬೆಗಟ್ಟಿನೀಯುತಗಟು'ಸೆದಿರ್ಕುಂ ॥ ೪೩ ॥

ಮುಂದೀಪೊಟಿಲಭವಾಂಚಲ
ಕೊಂದುವುದೆಂದು ಜನರ್ಗಿತ್ತ ನೆಲನಂ ಬಿಡಿಸಿ।

ಅಮೃತಾಹಾರಿಗಳೆಂದೂ, ವಿಷ್ಣುವನ್ನು ಇಂದಿರೆಯ ಪತಿಯೆಂದೂ, ಶಿವನಿಗೆ ನೀಲಕಂಠನೆಂದೂ ಬಿರುದಿತ್ತ ಸಮುದ್ರವು ಎಷ್ಟು ಅಂದವಾಗಿ ಶೋಭಿಸುತ್ತಿದೆ! ೪೦. ಆ ಸಮುದ್ರದಿಂದ ಆವೃತವಾದ ಭೂಭಾಗವೇ ಭದ್ರವಾದ ಪೀಠ, ಆಕಾಶ ಗಂಗಾಜಲವೇ ಶಿರಸ್ನಾನ, ಚಂದ್ರನ ಶೀತಲಕಿರಣಗಳೇ ಶ್ರೇಷ್ಠವಾದ ಶ್ರೀಗಂಧ, ಸೂರ್ಯಬಿಂಬವೇ ಆರತಿ, ಅಸಂಖ್ಯ ನಕ್ಷತ್ರಗಳ ರಾಶಿಯೇ ಹೂವುಗಳು - ಹೀಗೆ ಬ್ರಹ್ಮನು ಪೂಜಿಸುವ ಸುವರ್ಣಲಿಂಗವೆಂಬಂತೆ ಮೇರು ಪರ್ವತವು ಶೋಭಿಸಿತು. ೪೧. ಭುವನಕೋಶವೆಂಬ ಕೊಳದಲ್ಲಿನ ಆಮೆಯೇ ತಾವರೆಯ ದಂಟು, ಬೆಳಗುವ ನಾಗರಾಜನೇ ಸುಂದರವಾದ ನಾಳ, ದಿಕ್ಕುಗಳೇ ಮನೋಹರವಾದ ದಳಗಳು, ಭುವಿಯ ಜೀವಗಳೆಲ್ಲವೂ ಕೇಸರ - ಹೀಗೆ ಮಂಗಳಕರವಾದ ಭೂಮಿಯೆಂಬ ಕಮಲದ ಮಧ್ಯದಲ್ಲಿನ ನವೀನ ಬೀಜ ಕೋಶದಂತೆ ಆ ಪೊಂಬೆಟ್ಟವು ಕಾಣುವುದು. ೪೨. ಹೊಳೆವ ಸುಂದರವಾದ ಕನಕಾದ್ರಿಗೆ ದಕ್ಷಿಣಭಾಗದಲ್ಲಿ ಅತ್ಯಾನಂದವನ್ನೀವ ಗೂರ್ಜರದೇಶವೆಂಬ ತರುಣಿಯ ಗಲ್ಲದ ಕಾಂತಿಯನ್ನು ಹೊಂದಿ ಶೋಭಿಸುವ ಶಿರೋರತ್ನದಂತೆ ಘನವಾದ ಭಲ್ಲಕೀನಗರವೆಂಬ ಹೆಸರಿನ ಪಟ್ಟಣವು ಚೆಲುವುದೋರಿರುವುದು. ೪೩. ಇಹ-ಪರಗಳೆರಡಕ್ಕೂ ಸೌಖ್ಯವನ್ನುಂಟುಮಾಡುವುದಕ್ಕೆ ಇದು ನೆಲೆ ಎಂದು ಬ್ರಹ್ಮನು ಇಹಲೋಕಕ್ಕೆ ಗೆರೆ ಎಳೆದಂತೆ ಇರುವ ಆ ಪುರದ ಕಂದಕವು ತನ್ನ ಶತ್ರುಗಳಿಗೆ ಭಯವನ್ನುಂಟುಮಾಡುವಂತೆ ಶೋಭಿಸಿರುವುದು. ೪೪. ಮುಂದೆ ಈ

ರ್ಪಂದದೆ ಘನರಸಮಮಂ ತಳ
ದಂದಾಪಟ್ಟಣದಗಟ್ಟಿ ನಂಗೊಳಿಸಿರ್ಕುಂ ॥ ೪೪ ॥

ಆಮಂಜುಪುರವೆನಿಪ್ಪಬ
ಲಾಮಣಿಯುರುಜಘನಮಂಡಲಾವೃತಸಮ್ಯ।
ಕ್ಚಾಮೀಕರಮಯಕಾಂಚೀ
ದಾಮವೆನಲ್ನೆಗೆಟ್ಟಿದ್ದುನ್ನತಪ್ರಾಕಾರಂ ॥ ೪೫ ॥

ಭಾಸುರನಾಗನಾಥನ ಫಣಾಮಣಿರುಕ್ಷಯಮುರ್ಬಿ ಧಾತ್ರಿ ಮೇ
ಣ್ಬೇಸರಮಾಗಲಲ್ಲಿ ಪೊಱಪೊಣ್ಮೆ ಮಡಲ್ತು ವಿಜೃಂಭಿಪಂತೆ ತೋ।
ರ್ಪ್ಪೀಸರಸೀಡ್ಯ ಸನ್ನಿಧಿಯೊಳೊಪ್ಪುವಶೋಕೆಯ ಪುಷ್ಪಕೇಸರಂ
ಸೂಸಿ ಮನಂಗೊಳಿಪ್ಪುದೆಸೆವಾನಗರೀಪರಿಖಾಗ್ರ್ಯಮಂಡಲಂ ॥ ೪೬ ॥

ಅರಿನೃಪರೆರ್ದೆಗೆಚ್ಚಂ ಮೇ
ಣೆಱೆವತುಳಕ್ರಕಚಧಾರೆಗಳೋ ಯೆನಲತಿಬಂ।
ಧುರಕಾಂತಿಯನೊಳಗೊಂಡಾ
ಪುರದಪರಂಜಿಕೆಯ ಕೋಂಟೆದೆನೆಗಳ್ತೋರ್ಕುಂ ॥ ೪೭ ॥

ಮತ್ತಮದಲ್ಲದೆ,

ಸಸಿಗಲ್ಲಟ್ಟಳೆಗಳಿನಾ
ಗಸದೊರೆಯಂ ಚುಂಬಿಪಖಿಳಕೇತನದಿಂ ರಂ।
ಜಿಸುವ ಮಣಿದ್ವಾರಂಗಳಿ
ನೆಸೆದುದು ಪೊಸಲಂಪಿನಿಂಪಿನಿಂದಾನಗರಂ ॥ ೪೮ ॥

ಪಟ್ಟಣವು ಶಿವನ ಕೈಲಾಸದ ಸೆರಗಿಗೆ ಸೇರುವುದೆಂದು ಮನುಷ್ಯರಿರುವ ನೆಲವನ್ನು ಪ್ರತ್ಯೇಕಿಸಿದಂತೆ ಹೇರಳವಾಗಿ ನೀರನ್ನು ಹೊಂದಿ ಆ ಪಟ್ಟಣದ ಕಂದಕವು ಮನಸ್ಸನ್ನು ಸೂರೆಗೊಂಡಿರುವುದು. ೪೫. ಆ ಮನೋಹರ ಪುರವೆಂಬ ಸ್ತ್ರೀಯ ದೊಡ್ಡದಾದ ಸೊಂಟವನ್ನು ಆವರಿಸಿರುವ ಅಪ್ಪಟ ಚಿನ್ನದಿಂದಾದ ಸೊಂಟಪಟ್ಟಿ (ಮೇಖಲೆ) ಎನ್ನುವಂತೆ ಎತ್ತರವಾದ ಕೋಟೆಯು ರಚಿತವಾಗಿದ್ದಿತು. ೪೬. ಮೇಲೆ ಒತ್ತರಿಸಲು ಭೂಮಿಯು ಒಡೆದು ಬಿರುಕಾಗಲು ಅಲ್ಲಿ ನೀರು ಉಕ್ಕಿಬಂದು ಒಂದು ಸರಸ್ಸೇ ನಿರ್ಮಾಣವಾಯಿತು. ಅದರ ತೀರದಲ್ಲಿರುವ ಅಶೋಕ ವೃಕ್ಷದ ಪುಷ್ಪಕೇಸರವು ಉದುರಿ ನೀರಲ್ಲಿ ಹರಡಿರಲು ಅದು ಶೋಭಿಸುತ್ತಿರುವಾಗ ಆದಿಶೇಷನ ಹಣೆಯ ಮಣಿಯ ಕಾಂತಿ ಹರಡಿದಂತೆ ಆ ಸುಂದರ ನಗರವನ್ನು ಸುತ್ತುವರಿದಿರುವ ಕಂದಕವು [ನೋಡುಗರ] ಮನಸ್ಸನ್ನು ಆಕರ್ಷಿಸುವುದು. ೪೭. ಆ ಪುರದ ಅಪ್ಪಟ ಬಂಗಾರದಂತಹ ಕೋಟೆಯ ಗೋಡೆಯ ಉನ್ನತಭಾಗವು ಶತ್ರುಗಳ ಎದೆಯಾಳದ ಕೆಚ್ಚನ್ನು ಚುಚ್ಚುವ ಅಸಮಾನವಾದ ಗರಗಸದ ಮೊನೆಯೋ ಎನ್ನುವಂತೆ ಮನಸೆಳೆಯುವ ಚೆಲುವಿನಿಂದ ರಂಜಿಸಿರುವುದು. ವ॥ ಅಷ್ಟಲ್ಲದೆ, ೪೮. ಚಂದ್ರಕಾಂತ ಶಿಲೆಯ ಬುರುಜುಗಳಲ್ಲಿ ಆಕಾಶರಾಜನಾದ ಚಂದ್ರನನ್ನು ಮುತ್ತಿಡುವಂತೆ ಹಾರಿಸುವ ಬಾವುಟಗಳಿಂದ, ಮಣಿಗಳಿಂದ ಅಲಂಕರಿಸಿ ಅಂದಗೊಳಿಸಿರುವ ಬಾಗಿಲುಗಳಿಂದ

ತನ್ನಗರಿಯೆಂಬ ಕಾಂತೆಯ
ಸನ್ನುತಸೀಮಂತಲೇಖೆಯಿರವೆಂಬಿನಮು।
ತ್ತುನ್ನ ತವೈಭವದಿಂದಂ
ಚೆನ್ನೆಡೆವಿಡಿದಮರ್ದ ರಾಜವೀಥಿಯದೆಸೆಗುಂ ॥ ೪೯ ॥

ಮತ್ತಮಾಪುರಂ ಶ್ರೀಯ ಪೂಜಾಕುಸುಮವಿಸರಮೆಂಬಂತೆಲ್ಲೆಡೆಯೊಳಮರ್ದ ತೊಳಪ ಮುತ್ತಿನ ರಂಗವಲ್ಲಿಗಳಿಂ ಶಕ್ರಚಾಪವಿಲಾಸೋಪಹಾಸಿರತ್ನ ಕದಂಬಾಲಂಬಿತ ಸುಂದರವಂದನಮಾಲಾವ್ಯಂದದಿಂ ಜಲಪ್ರವಾಹದೊಳ್ತೆಂಕುವ ಶಫರಸಮಿತಿಗಳೆಂಬಂತಪಾಂಗಮರೀಚಿಸಂಚಯಂ ನಿಮಿರೆ ಮನದಟ್ಟೆಯಿಂ ಕಟ್ಟಿದಂಬಕಂಗಳೊಳ್ ಕನ್ನೈದಿಲೆಗಳನಮರ್ಚೆ ನಡೆನೋಡುವೆಳೆವೆಂಡಿರನೊಳಕೊಂಡೆಸೆದಿರ್ಪ ಮಣಿಮಾಡಂಗಳ ಸಾಲ್ಗಳಿಂ ಮಕರಪತಾಕಂಪೊದೆಗೆದಚಿ'ದಲರ ಸರಳ್ಗಳಿಂದೆಂಬಂತೆ ಮನೋವಿಳಾಸದಿಂ ಚರಿಪ ವಾರನಾರೀನಿಕುರುಂಬದಿಂ ಮಯಂಗೆ ಮತಿವಿಸ್ಮಯಮಂ ಘಟ್ಟಿಸುವ ಸಂಪಜ್ಜನಮಿರ್ಪಸಂಸ್ಥಾಯ ಸಂದೋಹದಿಂದಪರಿಮಿತವೈಭವಂಬಡೆದ ರಾಜವೀಥಿ ವಿರಾಜಿಸುತ್ತಿರ್ದುದು॥

ಅಂತುಮಲ್ಲದೆಯುಂ,

ಪೊಂಬರದರ ಪೂವಡಿಗರ
ತಂಬುಲಿಗರ ಕಂಚುವಳರ ಮಣಿಗಾಱಿಱ ಕಂ।
ಪಂಬೀರ್ವ ಘಟ್ಟಿವಳರ ಕ
ದಂಬದಿನಾರಾಜವೀಥಿ ಕಣ್ಗೆಸೆದಿರ್ಕುಂ ॥ ೫೦ ॥

ನವೀನವಾದ ವೈಭವದ ರಮ್ಯತೆಯಿಂದ ಆ ನಗರವು ಶೋಭಿಸಿತು. ೪೯. ಆ ನಗರವೆಂಬ ಹೆಣ್ಣಿನ ಒಪ್ಪುವ ಬೈತಲೆಯ ಗೆರೆಯೊ ಎನ್ನುವಂತೆ ಹೆಚ್ಚಿನ ವೈಭವದಿಂದ, ಒಳ್ಳೆಯ ಕಟ್ಟಡಗಳಿಂದ ಕೂಡಿದ ರಾಜಬೀದಿಯು ಶೋಭಿಸಿರುವುದು. ವ॥ ಮತ್ತೆ ಆ ಪಟ್ಟಣವು ಲಕ್ಷ್ಮಿಯು ಪೂಜೆಗೆಂದು ತಂದ ಹೂವುಗಳ ರಾಶಿಯೆಂಬಂತೆ ಎಲ್ಲಾ ಕಡೆ ಹೊಳೆವ ಮುತ್ತಿನ ರಂಗವಲ್ಲಿಗಳಿಂದ, ಕಾಮನಬಿಲ್ಲಿನ ಸೌಂದರ್ಯವನ್ನು ಕೀಳ್ಗಳೆಯುವ ಶ್ರೇಷ್ಠ ವಸ್ತುಗಳಿಂದ, ಸುವಾಸನಾ ದ್ರವ್ಯಗಳಿಂದ, ಪೂಜೆಯಲ್ಲಿ ಬಳಸಲಾಗುವ ಸುಂದರ ಹಾರಗಳ ರಾಶಿಯಿಂದ, ನೆಗೆದಾಡುವ ಮೀನುಗಳೆಂಬಂತೆ, ಕಡೆಗಣ್ಣ ಕಾಂತಿಪುಂಜವು ಮಿಂಚಲು, ಮನದಾಸೆಯಿಂದ, ಮುಚ್ಚಿದ ಕಣ್ಣುಗಳಲ್ಲಿ ಕನ್ನೈದಿಲೆಗಳನ್ನು ಮಿಳಿತಗೊಳಿಸಿ ಕಣ್ಣರಳಿಸಿ ನೋಡುವ ನವಯುವತಿಯರನ್ನು ಒಳಗೊಂಡು ಅಂದವಾಗಿರುವ ರತ್ನಖಚಿತವಾದ ಉಪ್ಪರಿಗೆ ಮನೆಗಳ ಸಾಲುಗಳಿಂದ, ಮನ್ಮಥನು ತನ್ನ ಬತ್ತಳಿಕೆಯ ಹೂಬಾಣಗಳಿಂದ ಕೆದರಿದನೋ ಎನ್ನುವಂತೆ ಮನಬಂದಂತೆ ಓಡಾಡುವ ವೇಶ್ಯಾಸ್ತ್ರೀಯರ ಗುಂಪಿನಿಂದ, ಮಯನಿಗೆ ಅಚ್ಚರಿಯನ್ನುಂಟುಮಾಡುವ ಐಶ್ವರ್ಯವಂತರಿರುವ ಅಪೂರ್ವ ರಚನೆಗಳಿಂದ ಕೂಡಿರುವ ಗೃಹಗಳಿಂದ ಅತ್ಯಂತ ಹೆಚ್ಚಿನದಾದ ವೈಭವವನ್ನು ಹೊಂದಿರುವ ರಾಜಮಾರ್ಗವು ಶೋಭಿಸುತ್ತಿದ್ದಿತು. ವ॥ ಅಷ್ಟಲ್ಲದೆ, ೫೦. ಚಿನ್ನ ವ್ಯಾಪಾರಿಗಳ, ಹೂವಾಡಿಗರ, ವೀಳೆಯದೆಲೆ ಮಾರುವವರ, ಕಂಚುಗಾರರ, ಮಣಿಗಳನ್ನು ಮಾರುವವರ, ಸುಗಂಧ ವಸ್ತುಗಳನ್ನು ಮಾರುವವರ ಗುಂಪಿನಿಂದ ಆ ರಾಜಮಾರ್ಗವು ಕಣ್ಣಿಗೆ ಅಂದವಾಗಿದ್ದಿತು.

ಮಂದಾನಿಲರಗಳೆ

ರಂಜಿಸುವಾಬೀದಿಯೊಳೊಂದೆಡೆಯೊಳ್
ಮಂಜುಕುಸುಮವನಮರ್ಚಿದ ಮುಡಿಯಿಂ।
ನಱುಗಂಪಂ ತಣಿದುಂಡು ಕೊನೆಯುತುಂ
ಪರಮೆವರಿಗಳಾಡುತಿರೆ ಜಿನುಗುತ್ತುಂ ॥ ೫೧ ॥

ಮೇಲಾಡುವ ತುಂಬಿಗಳಿಂಚರಮಂ
ಲಾಲಿಸುತಲರ್ಗೆಱಿವಳಿಸಂಚರಮಂ।
ಬಿಡಿಸುತ್ತುಂ ಚಾಂಪೇಯದ ಮುಗುಳಂ
ಪಿಡಿದಾಡುತ್ತಂ ಪರಮೆವರಿಗಳಂ ॥ ೫೨ ॥

ಮೆಲ್ಲನೆ ಸೋವುತ್ತಮರ್ದಚ್ಚರದಿಂ
ಫುಲ್ಲಲತಾಂತಂಗಳಸಮುದಯದಿಂ।
ಪೊಟಲಂಗದಿರ್ಗಳ್ಪುಗೆಯೆಂದೆನುತುಂ
ನಳಿನಂಗಳ್ಪೊಂದಿಪವೋಲ್ನಗುತುಂ ॥ ೫೩ ॥

ಕರಕಮಲದೊಳಲರ್ಗಳನೊಂದಿಸುತಂ
ಪರಿವಿಡಿಯಿಂದೊಯ್ಯನೆ ಬಂಧಿಸುತುಂ।
ರಚಿಸುತೆ ಪೊಸಪೂವಿನ ಮಾಲೆಗಳಂ
ಪ್ರಚುರವೆನಿಪ ಮೋಹನಲೀಲೆಗಳಿಂ ॥ ೫೪ ॥

ಕೈಯ್ಯೆತ್ತಿ ಬೆಡಂಗಂ ಬೀಱುತ್ತುಂ
ರಯ್ಯಲರ್ಮಾಲೆಗಳಂ ತೋಱುತ್ತುಂ।
ಕಣ್ಬೆಳಗಿರದೆಳಜೊನ್ನದ ಕೂರ್ಪಂ
ಬಿಂಬಾಧರಮಧುಸುಧೆಯ ಪೊಡರ್ಪಂ ॥ ೫೫ ॥

**೫೧. ಚೆಲುವುದೋರಿರುವ ಆ ಬೀದಿಯಲ್ಲಿ ಒಂದೆಡೆಯಲ್ಲಿ ಮನೋಹರವಾದ ಹೂವನ್ನು** ಮುಡಿದ ಮುಡಿಯಿಂದ ಮಧುರವಾದ ಕಂಪನ್ನು ತೃಪ್ತಿಯಾಗುವಂತೆ ಸವಿದು ಮದಿಸಿದ ದುಂಬಿಯ ಮರಿಗಳು ಝೇಂಕರಿಸುತ್ತ ಆಡುತ್ತಿದ್ದವು. ೫೨. ಮೇಲಾಡುವ ದುಂಬಿಗಳ ಇನಿದಾದ ಝೇಂಕಾರವನ್ನು ಕೇಳಿ ಹೂವಿಗೆ ದಾಳಿಯಿಡುವ ದುಂಬಿಗಳ ಸಂಚಾರವನ್ನು ನಿಲ್ಲಿಸಲು ಸಂಪಿಗೆಯ ಮೊಗ್ಗನ್ನು ಕೈಯಲ್ಲಿ ಹಿಡಿದು ಆಡಿಸುತ್ತ ಆ ಮೂಲಕ ದುಂಬಿಯ ಮರಿಗಳನ್ನು ಮೆಲ್ಲನೆ ಸರಿಸುತ್ತಿದ್ದವು. ೫೩. ಹಾಗೆ ಓಡಿಸಿದ ಮೇಲೆ ಅರಳಿದ ಹೂವುಗಳ ರಾಶಿಯನ್ನು ಪುರದ ದೇಹಕಾಂತಿಯೊಡನೆ ಸೇರಿಸಲೆಂದು ಕಮಲಗಳನ್ನು ಹೊಂದಿಸುವಂತೆ ನಗುತ್ತ ಕರಕಮಲದಲ್ಲಿ ಹೂವುಗಳನ್ನು ಪೋಣಿಸುತ್ತಿದ್ದರು. ೫೪. ಕ್ರಮವಾಗಿ ಮೆಲ್ಲನೆ ನವೀನವಾದ ಹೂಮಾಲೆಗಳನ್ನು ರಚಿಸುತ್ತ, ಪ್ರಸಿದ್ಧವಿರುವ ಮೋಹನಲೀಲೆಗಳಿಂದ ಕಟ್ಟುತ್ತಿದ್ದರು. ೫೫. ಕೈಯೆತ್ತಿ ಮನೋಹರವಾದ ಹೂಮಾಲೆಗಳನ್ನು ತೋರುತ್ತ, ಬೆಡಗನ್ನು ಪ್ರದರ್ಶಿಸುತ್ತ, ಕಣ್ಣಿನ ಕಾಂತಿಯು ಎಳೆಯ ಬೆಳುದಿಂಗಳ ಪ್ರಖರತೆಯನ್ನೂ ಕೆಳದುಟಿಯು

ವದನಂ ಕುಮುದಪ್ರಿಯನುನ್ನತಿಯಂ
ಸದಮಳತನುಲತೆ ಪೂತೆಳೆಲತೆಯಂ।
ನೆಲೆಮೊಲೆಗಳು ಕನಕಾಬ್ಜದ ಮುಗುಳಂ
ಸುಲಿಪಲ್ಗಳು ಕುಲಿಶದ ಪೊಳಪುಗಳಂ ॥ ೫೬ ॥

ಸ್ಫುರಿಪಂಕಂ ಪೊಂಬಾಳೆಯಲಂಪಂ
ಕರೆ ಕಂಧರವೆಳಗೌಂಗಿನ ಸೊಂಪಂ।
ಪಱಿಯುತ್ತಿರೆ ಸೊಗಸಂ ಬೀಱುತ್ತುಂ
ಪೊಳವಲರ್ಗಳನೊಲವಿಂ ಮಾಱುತ್ತುಂ ॥ ೫೭ ॥

ಪದತಳದೊಳಗಸುಗೆಯ ಪಲ್ಲವಮಂ
ಮೃದುತಳದೊಳ್ಚೂತದ ಪಲ್ಲವಮಂ।
ಮಿಸುಗುವ ಸೆಳ್ಳುಗುರೊಳ್ಕೇದಗೆಯಂ
ನಸುನಗೆಯೊಳ್ಸೊಗಯಿಪ ಮಲ್ಲಿಗೆಯಂ ॥ ೫೮ ॥

ಮಿಂಚುವ ಬಾಯ್ದೆಱೆಯೊಳ್ಬಂದುಗೆಯಂ
ಪ್ರಾಂಚನ್ನಾಸಿಕದೊಳ್ಸಂಪಿಗೆಯಂ।
ನಗೆಮೊಗದೊಳ್ನವಕನಕಾಂಬುಜಮಂ
ಮಿಗೆ ಕಣ್ಗಳೊಳಲರ್ದಸಿತಾಂಬುಜಮಂ ॥ ೫೯ ॥

ತೋಱುತ್ತುಂ ಪೂವುತ್ಥಳಿಗಳವೋಲ್
ಮೊಱೆದ ಕಂಪಿನ ಲೆಪ್ಪಂಗಳವೋಲ್।
ಪೊಸಪೂವಂ ಮಾಱುತ್ತುಂ ಸತಿಯರ್
ಕುಸುಮಶರನ ಬಗ್ಗಿನವೋಲ್ ಸರದಿಂ ॥ ೬೦ ॥

ಜೇನಿನಂತಹ ತೊಂಡೆಹಣ್ಣಿನ ಸವಿಯನ್ನೂ ಪ್ರಕಟಿಸುತ್ತಲಿದ್ದಿತು. ೫೬. [ಅವರ] ಮುಖವು ಚಂದ್ರನ ಉನ್ನತಿಯನ್ನೂ, ಪರಿಶುದ್ಧವಾದ ಬಳ್ಳಿಯಂತೆ ಬಾಗುವ ಶರೀರವು ಚಿಗುರಿದ ಎಳಲತೆಯನ್ನೂ, ಸ್ಥಿರವಾದ ಮೊಲೆಗಳು ಹೊಂದಾವರೆಯ ಮೊಗ್ಗನ್ನೂ, ಚೊಕ್ಕವಾದ ಹಲ್ಲುಗಳು ಇಂದ್ರನ ವಜ್ರಾಯುಧದ ಹೊಳಪನ್ನೂ [ಹೋಲುತ್ತಿದ್ದು]. ೫೭. ಅಲುಗಾಡುವ ತೊಡೆಗಳು ಹೊಂಬಾಳೆಯ ಸೊಗಸನ್ನೂ, ಉದ್ದವಾದ ಕಪ್ಪು ಕೊರಳು ಎಳೆಯ ಅಡಿಕೆಯ ಮರದ ಚೆಲುವನ್ನೂ ಕೀಳ್ಮಾಡುವಂತೆ ಅಂದವನ್ನು ಪ್ರದರ್ಶಿಸುತ್ತ ಸುಂದರ ಸುವಾಸಿತ ಪುಷ್ಪಗಳನ್ನು ಪ್ರೀತಿಯಿಂದ [ಅವರು] ಮಾರುತ್ತಲಿದ್ದರು. ೫೮. [ಅವರ] ಪಾದಗಳ ತಳಭಾಗವು ಅಶೋಕದ ಚಿಗುರನ್ನೂ, ಹಿಮ್ಮಡಿಯು ಮಾವಿನ ಚಿಗುರನ್ನೂ, ಮಿರುಗುವ ಚೂಪಾದ ಹಾಗೂ ನಿಡಿದಾದ ಉಗುರುಗಳು ತಾಳೆಹೂಗಳನ್ನೂ, ನಸುನಗೆಯು ಆಹ್ಲಾದವನ್ನುಂಟುಮಾಡುವ ಮಲ್ಲಿಗೆಯನ್ನೂ ಹೋಲುತ್ತಿದ್ದುವು. ೫೯. [ಅವರು] ಮಿಂಚುವ ತುಟಿಗಳಲ್ಲಿ ಗುಲಾಬಿಯನ್ನೂ, ಹೊಳೆವ ಮೂಗಿನಲ್ಲಿ ಸಂಪಗೆಯನ್ನೂ, ನಗೆಮೊಗದಲ್ಲಿ ಅರಳಿದ ಹೊಂದಾವರೆಯನ್ನೂ, ವಿಶಾಲವಾದ ಕಣ್ಣುಗಳಲ್ಲಿ ಅರಳಿದ ಕನ್ನೈದಿಲೆಯನ್ನೂ ಪ್ರದರ್ಶಿಸುತ್ತಲಿದ್ದರು. ೬೦. ಹೂವಿನ ಗೊಂಬೆಗಳಂತೆ, ಅತಿಶಯವಾದ ಮಾಧುರ್ಯದ

ಕಣ್ಗೆಸೆದರ್ ಪೂವಂ ಮಾಱುತ್ತುಂ
ತಣ್ಗಂಪಂ ದೆಸೆಗಂ ಬೀಱುತ್ತುಂ ॥ ೬೧ ॥

ಮತ್ತಮದೊರ್ವಳೆಯಳ್ತೋ
ಳೆತ್ತಿರೆ ಪೂಮಾಲೆಯ ನೆಲೆಕೆಳೆಯಲದೊಲವಿಂ।
ಮುತ್ತಿರಲಳಿಕುಳಮೆಸೆದ
ಳ್ಚಿತ್ತಜಭೂವರನ ಚಾಪಲತೆ ಯೆಂಬಿನೆಗಂ ॥ ೬೨ ॥

ಪಂಚಶರಂಗೆ ಮಾರ್ಸರಲರಾಗಿ ವಿಜೃಂಭಿಸುವೆಮ್ಮ ನೀಳ್ದ ಕ
ಣ್ಣಂಚಿನ ಕಾಂತಿಗೊಂದಿನಿತುಸಾಮ್ಯವ ನೋಡಿಯೆನುತ್ತೆ ತೋರ್ಪವೋ।
ಲ್ಮಿಂಚಿನ ಬಳ್ಳಿಯಂ ನೆಗಪಿ ಮಲ್ಲಿಗೆಪೂವಿನ ಲೋಲಮಾಲೆಯಂ
ತಾಂ ಚದುರರ್ಗೆ ಮಾಱುತೆ ಸರೋರುಹಲೋಚನೆಯಾದಮೊಪ್ಪಿದಳ್ ॥ ೬೩ ॥

ನಳಿತೋಳ್ಚಂಪಕಮಾಲೆಯಂ ನಗೆಯೆ ಮಲ್ಲೀಮಾಲೆಯಂ ಕಣ್ಗಳು
ಜ್ವಳಮಾದುತ್ಪಲಮಾಲೆಯಂ ಪಡೆಯಲತ್ಯಾನಂದದಿಂ ತಾನೆ ಪೂ।
ಗಳ ಪಾಂಚಾಲಿಕೆಯಂತೆ ಬಂದುಗೆ ಲಸನ್ಮಂದಾರಕುಂದಾಬ್ಜನಿ
ರ್ಮಳಸ್ರಗ್ಜಾಲಮನಾಂತು ಕಾಮಿನಿಯದೊರ್ವಳ್ ನಾಡೆ ಕಣ್ಗೊಪ್ಪಿದಳ್ ॥ ೬೪ ॥

ಮತ್ತಮದಲ್ಲದಲರ್ದ ಸಂಪಗೆಯ ಪೆಂಪಮರ್ದ ಜೊಂಪದಲಂಪಿನಿಂಪಿನ ಲಾಂಪಟ್ಯದಿಂ ತಾಂ ಪಿರಿದು ತಣಿಯುಂಡು ಝೋಂಪಿಸಿ ಬೀೞ್ವಲರ್ವಕ್ಕಿವಱಿಗಳನೆತ್ತಿ ತೆಗೆದಶೋಕೆಯ ತಳಿರ ತಳ್ಪದೊಳಿರಿಸಿ ಮಗಮಗಿಪ ಪಲತೆಱದಲರ ಗಂಪಿಂದುಪಚರಿಸಿ ಪಾಱಿಸುವ ಪರಮೆವಱಿಗಳ ಪಚ್ಚಪಸಿಯಜವ್ವನೆಯರ ಬೆಡಂಗನೊಳಕೊಂಡು ಪೂವಸರಮೊಪ್ಪುತ್ತಿರ್ಪುದು॥

ಎರಕದ ಪ್ರತಿಮೆಗಳಂತೆ ತೋರುತ್ತ, ಅದಾಗ ಕಟ್ಟಿದ ಹೂಗಳನ್ನು ಮಾರುತ್ತ ಮನ್ಮಥನ ಮಧುರ ಧ್ವನಿಯನ್ನು [ಅನುಕರಿಸುತ್ತಲಿದ್ದರು]. ೬೧. [ಆ ಹೂವಾಡಗಿತ್ತಿಯರು] ಮಧುರವಾದ ಕಂಪನ್ನು ದಿಕ್ಕುದಿಕ್ಕಿಗೆ ಹರಡುತ್ತ ಹೂವನ್ನು ಮಾರುತ್ತ ಕಣ್ಣಿಗೆ ಅಂದವಾದರು. ೬೨. ಮತ್ತೆ ಓರ್ವ ನವಯುವತಿಯು ಹೂಮಾಲೆ ಹಿಡಿದು ತನ್ನ ತೋಳನ್ನು ಮೇಲೆತ್ತಿರಲು, ಹೂಮಾಲೆಯು ನೆಲಕ್ಕೆ ಜೋತಿರಲು, ದುಂಬಿಗಳ ಸಮೂಹವು ಪ್ರೀತಿಯಿಂದ ಮುತ್ತಿದುವು. ಆಗ ಆಕೆ ಮನ್ಮಥರಾಜನ ಬಿಲ್ಲೆನ್ನುವಂತೆ ಶೋಭಿಸಿದಳು. ೬೩. ಮನ್ಮಥನಿಗೆ ಪ್ರತಿಬಾಣವಾಗಿ ಶೋಭಿಸುವ ನಮ್ಮ ಕಣ್ಣಂಚಿನ ಕಾಂತಿಗೆ ಒಂದಿಷ್ಟು ಹೋಲಿಕೆಯನ್ನು ಗಮನಿಸಿ ಎಂದು ತೋರಿಸುವ ರೀತಿಯಲ್ಲಿ (ಕಣ್ಣಿನ ನೋಟದಿಂದ) ಮಿಂಚಿನ ಬಳ್ಳಿಯನ್ನುಂಟುಮಾಡಿ ಮಲ್ಲಿಗೆ ಹೂವಿನ ತೂಗಾಡುವ ಮಾಲೆಯನ್ನು ಕಮಲಗಣ್ಣಿನ ಸುಂದರಿಯೋರ್ವಳು ರಸಿಕರಿಗೆ ಮಾರುತ್ತ ಅಂದಗೊಂಡಳು. ೬೪. ಕೋಮಲವಾದ ತೋಳುಗಳು ಚಂಪಕಮಾಲೆಯನ್ನೂ, ನಗೆಯು ಮಲ್ಲಿಗೆಯ ಮಾಲೆಯನ್ನೂ, ಕಣ್ಣುಗಳು ಮನೋಹರವಾದ ಉತ್ಪಲಮಾಲೆಯನ್ನೂ ಹೋಲಿಕೆ ಪಡೆಯಲು ಅತ್ಯಾನಂದದಿಂದ ತಾನೇ ಹೂಗಳ ಗೊಂಬೆಯೆಂಬಂತೆ ಬಂದುಗೆ, ಸುಂದರವಾದ ಪಾರಿಜಾತ, ಮಲ್ಲಿಗೆ, ಕಮಲ [ಇವೇ ಮೊದಲಾದ] ಪರಿಶುದ್ಧವಾದ ಹೂಗಳ ಮಾಲೆಯನ್ನು ಹಿಡಿದ ಸುಂದರಿಯೋರ್ವಳು ಅತಿಶಯವಾಗಿ ಕಣ್ಣಿಗೆ ಅಂದಗೊಂಡಳು. ವ॥ ಮತ್ತೆ ಅದಲ್ಲದೆ, ಪ್ರಸಿದ್ಧಿ ಪಡೆದ ಅರಳಿದ

ಅಂತುಮಲ್ಲದೆಯುಂ,
ಕುಸುಮದ ಸೌಸವಮಂ ಪೊ
ತ್ತೆಸೆಯುವ ತನುಗಂಧದಲರ್ಗಳಂ ಮಾಱುತ್ತೊ।
ಲ್ದೆಸೆವಸಿತಾಂಭೋಜಾಕ್ಷೀ
ವಿಸರಮನೊಳಕೊಂಡು ರಂಜಿಕುಂ ಪೂವಸರಂ ॥ ೬೫ ॥

ನೆಲೆಮೊಲೆ ವಚ್ಚಮೊಯ್ಯನೊಲೆದಾಡೆ ವಿಕುಂಚಿತಕುಂತಳಾಳಿ ಚಂ
ಚಲಿಸೆ ಕದಂಪಿನೊಳ್ನಟಿಸೆ ಮೌಕ್ತಿಕದೋಲೆ ಮುಖಾಂಬುಜಾತದೊ
ಳ್ನೆಲಸಿರೆ ಘರ್ಮಬಿಂದು ನರಸುಯ್ಕೆಲರುರ್ವೆ ಮನೋವಿಲಾಸದಿಂ
ಮಲಯಜದಣ್ಪನಂದರೆಯುತೊಪ್ಪಿದರಲ್ಲಿಯ ಘಟ್ಟಿವಳ್ತಿಯರ್ ॥ ೬೬ ॥

ಪರಿಮಳದ ಲಂಪಟತ್ವದಿ
ನಿರದಳಿಗಳ್ಮುತ್ತೆ ಪಚ್ಚಸೀರೆಯಿನೆಸೆದಳ್
ವರನೀಲಮಣಿಯ ಪಂಜರ
ದರಗಿಳಿಯೆಂಬಂತೆ ಚಂದನಮನರೆಯುತ್ತುಂ ॥ ೬೭ ॥

ಚಕ್ಷುಶ್ಶ್ರುತಿಗೆಡೆಯಾದೀ
ವೃಕ್ಷಮನೆಣೆಯಿಡುವರೆಮ್ಮವರ ತನುಲತೆಗೆಂ।
ದೀಕ್ಷಿಸುತರೆವವೊಲಬ್ಜದ
ಳಾಕ್ಷಿಯರರೆಯುತ್ತಮೊಪ್ಪಿದರ್ ಮಲಯಜಮಂ ॥ ೬೮ ॥

ಸಂಪಗೆಯ ಜೊಂಪೆಯ ಅತಿಶಯವಾದ ರಮ್ಯತೆಗೆ [ಸೋತು] ಲಂಪಟತನದಿಂದ ಅತಿಯಾಗಿ ಮನದಣಿಯುವಂತೆ [ಸುವಾಸನೆಯನ್ನು] ಸವಿದು ಜೋಲಿಹೊಡೆದು ಕೆಳಗೆ ಬೀಳಹೊರಟ ದುಂಬಿಯ ಮರಿಗಳನ್ನು ಎತ್ತಿ ತೆಗೆದು ಅಶೋಕವೃಕ್ಷದ ಚಿಗುರಿನ ಹಾಸುಗೆಯಲ್ಲಿ ಮಲಗಿಸಿ ಮಗಮಗಿಸುವ ಹಲವು ಬಗೆಯ ಹೂವಿನ ಕಂಪಿನಿಂದ ಉಪಚರಿಸಿ ದುಂಬಿಯ ಮರಿಗಳನ್ನು ಹಾರಿಬಿಡುವ ನವಯೌವನದ ಸುಂದರಿಯರ ಲಾವಣ್ಯವನ್ನು ಪಡೆದುಕೊಂಡು ಹೂವಿನ ಅಂಗಡಿ[ಗಳು] ಶೋಭಿಸುತ್ತಿರುವವು. ಅಷ್ಟಲ್ಲದೆ, ೬೫. ಹೂಗಳ ಕಂಪನ್ನು ತಮ್ಮ ದೇಹದಲ್ಲಿ ಹೊಂದಿ ಸುವಾಸನಾಭರಿತವಾದ ಹೂಗಳನ್ನು ಮಾರುತ್ತ ಪ್ರಿಯವಾಗಿ ಕಾಣಿಸುವ ಕಮಲನೇತ್ರೆಯರ ಸಮುದಾಯವನ್ನು ಹೊಂದಿ ಹೂವಿನ ಅಂಗಡಿಗಳು ಶೋಭಿಸಿರುವುವು. ೬೬. ಸುಗಂಧ ದ್ರವ್ಯಗಳನ್ನು ಅರೆಯುವ ಅಲ್ಲಿಯ ಸುಂದರಿಯರು, ತಮ್ಮ ಮೊಲೆಗಳು ಚೆನ್ನಾಗಿ ಅಲುಗಾಡುತ್ತಿರಲು, ಬಾಗಿದ ಮುಂಗುರುಳುಗಳು ಚಂಚಲಗೊಂಡು ಹಾರಾಡುತ್ತಿರಲು, ಮುತ್ತಿನ ಓಲೆ ಕೆನ್ನೆಯಲ್ಲಿ ನರ್ತಿಸುತ್ತಿರಲು, ಮುಖಕಮಲದಲ್ಲಿ ಬೆವರ ಹನಿಗಳು ತುಂಬಿರಲು, ಸುವಾಸನಾಭರಿತ ಉಸಿರು ತೀವ್ರತರವಾಗಿರಲು ಮನದಲ್ಲುಂಟಾದ ಸಂತಸದಿಂದ ಶ್ರೀಗಂಧದ ಲೇಪನವನ್ನು ಅರೆಯುತ್ತ ಶೋಭಿಸಿದರು. ೬೭. ಶ್ರೀಗಂಧವನ್ನು ಅರೆಯುತ್ತಲಿದ್ದ ಹಸಿರು ಸೀರೆಯ ಸುಂದರಿಯೋರ್ವಳನ್ನು ದುಂಬಿಗಳು ಪರಿಮಳದ ಆಸೆಯಿಂದ ಬಿಡದೆ ಮುತ್ತಲು, ಆಗ ಆಕೆಯು ಬೆಲೆಬಾಳುವ ನೀಲಮಣಿಯ ಪಂಜರದಲ್ಲಿನ ಗಿಳಿಯೋ ಎನ್ನುವಂತೆ ಅಂದಗೊಂಡಳು. ೬೮. [ಕವಿಗಳ] ದೃಷ್ಟಿ ಹಾಗೂ ವರ್ಣನೆಗೆ ಒಳಗಾದ ಈ ಮರವನ್ನು

ಕರ್ಪೂರರಮೊಳ್ಜವ್ವಾದಿ ತೊ
ಳಪ್ಪುರುಕಸ್ತೂರಿ ಕುಂಕುಮಂ ಪೊಸಪನ್ನೀ।
ರ್ಗುಪ್ಪಿಗೆಗಳಮರ್ದ ವಿಪಣಿ
ಗಳೊಪ್ಪಿದುವಂಗಜನ ಗಂಧಗೃಹಮೆಂಬಿನೆಗಂ ॥ ೬೯ ॥

ಮತ್ತಮೊಂದೆಡೆಯೊಳ್।

ಲಲನಾಜನಮೃದುಗಂಡ
ಸ್ಥಲಮಂ ನುಣ್ಪಿಂ ವಿನೂತ್ನಚಂದ್ರಿಕೆಯಂ ನಿ।
ರ್ಮಲರುಚಿಯಿಂ ಪಟಿ'ಯುತ್ತೆ ತಂ
ಬುಲಿಗರ ಪಸರಂ ವಿರಾಜಿಕುಂ ಸೊಗಸಿಂದಂ ॥ ೭೦ ॥

ಎಳಮಿಂಚಾವರಿಸೆ ಕರಂ
ತೊಳಪಮೃತಮರೀಚಿಕೋಪಳಾವಳಿಯಂ ಮೇ।
ಳ್ತೊಳೆದು ವಿಜೃಂಭಿಪ ವಿಮಲ
ಸ್ಥಲಮೆಂದೆನೆ ಕಂಚುಗಾಱವಸರಮದೆಸೆಗುಂ ॥ ೭೧ ॥

ರಾರಾಜತ್ಸ್ವರ್ಣಕಾರೋದ್ಗಮದಳನಿಕರಂ ತೀವೆ ನಿಚ್ಚಂ ತೊಳಪ್ಪ
ಸ್ಫಾರಸ್ಫಾಟಿಕ್ಯಭೂಮೀಧರವರವಿಲುಠತ್ಸಾನುವೆಂಬಂತೆ ಚಂಚ।
ಚ್ಛ್ರೀರುಕ್ಕೌಮ್ಯಭಾಸಿಕೋದ್ಯದ್ವಿಮಲಧವಳಸುವ್ಯಕ್ತ ಹರ್ಮ್ಯಂಗಳಿಂದಂ
ಕೋರೈಸುತ್ತುಂ ವಲಂ ಪೊಂಬರದರ ಪಸರಂ ಗಾಡಿಯಂ ಬೀಱುತಿರ್ಕುಂ ॥ ೭೨ ॥

ನಮ್ಮಂತಹವರ ಲತೆಯಂತೆ ಬಳುಕುವ ಶರೀರಕ್ಕೆ ಹೋಲಿಸುವರು ಎಂದು ಮರ್ದಿಸುವ ರೀತಿಯಲ್ಲಿ ನೋಡುತ್ತ ಶ್ರೀಗಂಧವನ್ನು ಅರೆಯುತ್ತ ಕಮಲಾಕ್ಷಿಯರು ಶೋಭಿಸಿದರು. ೬೯. ಕರ್ಪೂರ, ಒಳ್ಳೆಯ ಜವ್ವಾಜಿ, ಅತಿ ಶ್ರೇಷ್ಠವಾದ ಕಸ್ತೂರಿ, ಕುಂಕುಮ, ಹೊಸ ಪನ್ನೀರಿನ ಭರಣಿಗಳನ್ನು ಹೊಂದಿದ್ದ ಅಂಗಡಿಗಳು ಮನ್ಮಥನ ಗಂಧಗೃಹವೆನ್ನುವಂತೆ ಅಂದಗೊಂಡುವು. ಮತ್ತೆ ಒಂದೆಡೆಯಲ್ಲಿ, ೭೦. ಸ್ತ್ರೀಯರ ಮೃದುವಾದ ಕೆನ್ನೆಯನ್ನು ನುಣುಪಿನಿಂದ, ಹೊಚ್ಚ ಹೊಸದಾದ ಬೆಳುದಿಂಗಳನ್ನು ಪರಿಶುಭ್ರ ಕಾಂತಿಯಿಂದ ತಿರಸ್ಕರಿಸುತ್ತ ಸೊಗಸಿನಿಂದ ವೀಳೆಯವನ್ನು ಮಾರುವವರ ಅಂಗಡಿ ಶೋಭಾಯಮಾನವಾಗಿರುವುದು. ೭೧. ಎಳೆಯ ಮಿಂಚು ಆವರಿಸಲು ಚೆನ್ನಾಗಿ ಹೊಳೆವ ಚಂದ್ರನ ಕಿರಣಗಳ ಸಮೂಹದಿಂದ ತೊಳೆದು ಶೋಭಿಸಿರುವ ಪರಿಶುದ್ಧ ಸ್ಥಳವೆನ್ನುವಂತೆ ಕಂಚುಗಾರರ ಅಂಗಡಿಯು ಶೋಭಿಸಿರುವುದು. ೭೨. ಅಂದವಾದ ಬೆಟ್ಟದಾವರೆಯ ಹೂವಿನ ದಳಗಳ ಸಮೂಹವು ತುಂಬಿ ಸದಾ ಬೆಳಗುವ ವಿಶಾಲವಾದ ಹೊಳೆವ ಬೆಟ್ಟದ ತಪ್ಪಲೆನ್ನುವಂತೆ ಮಿಂಚುವ ಪ್ರಕಾಶಮಾನವಾದ ಬೆಳಕನ್ನು ಹೊಂದಿ ಕಣ್ಣಿಗೆ ಆಪ್ಯಾಯಮಾನವಾಗಿ ಕಾಣುವ ಉಪ್ಪರಿಗೆಯ ಮನೆಗಳಿಂದ, ಕಣ್ಣು ಕುಕ್ಕುವ ಚಿನ್ನದ ವ್ಯಾಪಾರಿಗಳ ಅಂಗಡಿಗಳಿಂದ ನಿಶ್ಚಯವಾಗಿಯೂ

ಪಟ್ಟಣದೊಳ್ನವವೈಭವಮೀಕ್ಷಿಸಲುರ್ವಿಗನೇಕರೂಪಮಂ
ತೊಟ್ಟತಿರಾಗದಿಂದಿಳಿದು ಬಂದು ನಿರೀಕ್ಷಿಸಿ ತದ್ವಿಲಾಸಮಂ।
ಬಿಟ್ಟಿರಲಾರದಲ್ಲಿ ಬಿಡದಿರ್ಪ ನವಗ್ರಹಮೆಂಬ ಪಾಂಗಿನಿಂ
ದಿಟ್ಟಿಗೊಳಿಪ್ಪುದುಜ್ವಲಿಪರತ್ನ ಸಮಂಚಿತಪಣ್ಣಿಕಾಕುಳಂ ॥ ೭೩ ॥

ಮತ್ತಮದಲ್ಲದೆ,

ಪಲವಣ್ಣಮನೊಳಕೊಂಡ
ಗ್ಗಲಿಪ ಲಸನ್ಮೇಘಮಾಲೆಯಂ ಬಿಡದಾಂತು।
ಜ್ವಲಿಪ ತನುಸಂಜೆಯೆಂದೆನೆ
ಸಲೆ ಕಣ್ಗೆಸೆದಿರ್ಪವಲ್ಲಿ ದೂಸಿಗವಸರಂ ॥ ೭೪ ॥

ಚಂಚತ್ಕಾಂಚನಕುಂಚಸಂಚಯದೆ ರಾರಾಜತ್ಪತಾಕೌಘದಿಂ
ಪ್ರಾಂಚದ್ವಂದನಮಾಲಿಕಾವಳಿಯಿನುತ್ತೂರ್ಯತ್ರಯಧ್ವಾನದಿಂ।
ಪಂಚಾಸ್ತ್ರಸ್ತ್ರಸಮಾಜದಂತೆ ಚರಿಸುತ್ತಿರ್ಪಂಗನಾನೀಕದಿಂ
ತಾಂ ಚೆಲ್ವಂದಳೆದೊಪ್ಪುಗುಂ ಪಲವು ದೇವಾಗಾರಮುತ್ಸಾಹದಿಂ ॥ ೭೫ ॥

ಮತ್ತಮದಲ್ಲದೆ,

ಕಂಜಾಸ್ತ್ರನ ಸಮ್ಮೋಹನ
ಪುಂಜಂ ಬಿಡದಿರ್ಪ ತಾಣಮೆಂಬಿನೆಗಂ ತಾಂ
ರಂಜಿಸಿದುದು ಕಡುಸೊಬಗಿಂ
ಲಂಜಿಕೆಯರ ಬೀದಿ ಬೀಱುತುಂ ಪರಿಮಳಮಂ ॥ ೭೬ ॥

ಚೆಲುವನ್ನು ಪ್ರಕಟಿಸುತ್ತಿರುವುವು. ೭೩. ಪಟ್ಟಣದ ಆ ನವ ವೈಭವವನ್ನು ನೋಡಲು ಅತ್ಯಾನಂದದಿಂದ ಬಗೆಬಗೆಯ ವೇಷ ಧರಿಸಿ ಭೂಮಿಗೆ ಬಂದು ಅದರ ಸೊಬಗನ್ನು ನೋಡಿ [ಅದನ್ನು] ಬಿಟ್ಟಿರಲಾರದೆ ಭದ್ರವಾಗಿ ನೆಲೆಸಿರುವ ನವಗ್ರಹವೆನ್ನುವಂತೆ ಉಜ್ವಲಿಸಿ ಬೆಳಗುವ ಉಚಿತ ರೀತಿಯಲ್ಲಿ ಸಜ್ಜುಗೊಳಿಸಿದ್ದ [ನವ] ರತ್ನಗಳಿಂದ ನಿರ್ಮಿಸಿದ ತಿಲಕಗಳು ಕಣ್ಣಿಗೆ ಅಂದವಾಗಿರುವುವು. ೭೪. ಹಲವು ಬಣ್ಣಗಳನ್ನು ಹೊಂದಿರುವ ವಿಸ್ತಾರವಾದ ಮೋಡಗಳ ರಾಶಿಯನ್ನು ಬಿಡದೆ ಹೊಂದಿ ಬೆಳಗುವ ಕೋಮಲವಾದ ಸಂಜೆಯಂತೆ ಬಟ್ಟೆ ವ್ಯಾಪಾರಿಗಳ ಅಂಗಡಿ ಕಣ್ಣಿಗೆ ಬಲು ಸೊಗಸಾಗಿರುವುದು. ೭೫. ಪ್ರಕಾಶಮಾನವಾದ ಚಿನ್ನದ ಗೊಂಡೆಯಿಂದ ಕೂಡಿ ಸಂಭ್ರಮದಿಂದ ಹಾರಾಡುತ್ತಿರುವ ಬಾವುಟಗಳ ಸಮೂಹದಿಂದ, ಹೊಳೆವ ಸ್ತುತಿಮಾಲಿಕೆಗಳಿಂದ, ಗಾನ ನೃತ್ಯ ಹಾಗೂ ವಾದ್ಯಗಳ ಮಧುರಧ್ವನಿಯಿಂದ, ಮನ್ಮಥನ ಪಂಚಬಾಣಗಳ ಸಮೂಹದಿಂದ, ನಡೆದಾಡುವ ಸುಂದರಿಯರ ಸಮೂಹದಿಂದ ಹಲವು ದೇವಾಲಯಗಳು ಸಡಗರಗೊಂಡು ಚೆಲುವಿಕೆಯನ್ನು ತಳೆದು ಶೋಭಿಸಿರುವುವು. ವ॥ ಮತ್ತೆ ಅದಲ್ಲದೆ, ೭೬. ಮನ್ಮಥನ ಸಮ್ಮೋಹನ ರಾಶಿಯು ತಪ್ಪದೆ ಇರುವ ಸ್ಥಳವೆನ್ನುವಂತೆ ಸೂಳೆಯರ ಬೀದಿಯು ಸುತ್ತೆಲ್ಲ ಪರಿಮಳವನ್ನು ಬೀರುತ್ತ

ನಗೆ ಬೆಳ್ದಿಂಗಳನಾನನಂ ಸಸಿಯನುತ್ತುಂಗಸ್ತನಂ ಚಕ್ರಮಂ
ಮುಗಿಲಂ ಸೋರ್ಮುಡಿ ಕಂತುಚಾಪಲತೆಯಂ ಭ್ರೂವಲ್ಲಿ ಕಂಗಳ್ಚಕೋ
ರಿಗಳಂ ಚೂತವಿನೂತ್ನಪಲ್ಲವಮನಂಚತ್ಪಾಣಿಗಳ್ಪೋಲ್ತೆನಲ್
ಮಿಗೆ ಸಮ್ಮೋಹನಪುಂಜದಂದೆಸೆದುದುದ್ಯದ್ವಾರನಾರೀಕುಳಂ ॥ ೭೭ ॥

ವೀಣೆಯನೊಲ್ದು ಬಾಜಿಸುವ ಮನ್ಮಥಶಾಸ್ತ್ರಕಲಾಪಮಂ
ಮಾಣದೆ ಕೇಳ್ವಗಾನರಸವಾರ್ಧಿಯನ್ನೈದೆ ತುಳುಕುವಾಲಸ।
ದ್ವೇಣುವಿನಿಂಚರಂಗಳನೆ ಪೊಣ್ಮೆಪ ಮೋಹನರೂಪದಂಗನಾ
ಶ್ರೇಣಿ ವಿರಾಜಿಕುಂ ನೆಗಟ್ದಿ ರತ್ನಸಮಂಚಿತಹರ್ಮ್ಯಜಾಲದೊಳ್ ॥ ೭೮ ॥

ಮತ್ತಮದಲ್ಲಿ ಮದನವಿಕೃತಿವಿಜೃಂಭಿಪ ಮೃದುಮಧುರರವದಿಂ ಪಾರಿವಂಗಳೊಳ್ಬಿನದಿಪಸರಸ ಯುವತಿಯರಿಂ ಮನೋಭವನ ಚಿತ್ತಾಕರ್ಷಣಂಮಾಳ್ಪಮೃದುಪದವ್ಯಸನದಿಂದರಸಂಚೆಗಳ್ಗೆ ನಡೆಗಲಿಪ ವಿಲಾಸಿನಿಯರಿಂ ಚೈತ್ರಮಿತ್ರನ ಪಟಿಯಿಗೆಯ ತಳಿರ್ಕಳಂ ಪಟಿವ ಚನ್ದಳದಿಂದಶೋಕೆಯ ಕೊನೆದಳಿರನುಣಿಸಿತ್ತು ಪಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ ಕಾಮಕಾರ್ಮುಕ ಜ್ಯಾರವಮೆಂಬಂತೆ ಪೊಣ್ಮುವಿಂಚರಂಗಳಿಂದನಂಗನಂಕಮಾಲೆಯ ಪಾಡುತ್ತೊಲವಿಂದುಯ್ಯಲಾಡುವೆಳೆಜವ್ವನೆ ಯರಿಂ ಮಕರಧ್ವಜನಲಂಪುವಡೆದ ಭುಜಂಗತಾಟಿತಕನಕಘಂಟಾಸ್ವನಮೇ ಕರ್ಣಾವತಂಸಮಾದ ವಿಭವವತಿಯರಿಂ ಮನ್ಮಥನ ಲೀಲೋದ್ಯಾನಮೆಂಬ ವಿಲಾಸಗೃಹದೊಳ್ ತಮ್ಮ ಕಣ್ನೋಟವೆಂಬ ದೀವಿಗೆಯಿಂ ಬಂಧುರಗಂಧಮೆಂಬೊಡಮೆಯಿಂ ಕಾಣಿಕೆಗೊಟ್ಟು ಮಧುವ್ರಜಮಧುರಧ್ವನಿಯಿಂದುಪಚರಿಪ ತಂಬೆಲರ ಸುಯ್ಗಂಪಿಂ ಪೊರೆವರತ್ಯಂತಕಾಂತೆಯರಿಂದತಿಮನೋಹರಮಾದ ವೇಶ್ಯಾವಾಟಂ ಕಣ್ಗೆಸೆದಿರ್ಪುದು॥

ವಿಶೇಷ ಸೊಬಗಿನಿಂದ ರಂಜಿಸಿತ್ತು. ೭೭. ನಗೆಯು ಬೆಳುದಿಂಗಳನ್ನು, ಮುಖವು ಚಂದ್ರನನ್ನು, ಉನ್ನತವಾದ ಮೊಲೆಗಳು ಚಕ್ರವನ್ನು, ಬಳಲ್ಮುಡಿಯು ಮೋಡವನ್ನು, ಬಳ್ಳಿಯಂತೆ ಬಾಗಿರುವ ಹುಬ್ಬು ಕಾಮನಬಿಲ್ಲನ್ನು, ಕಣ್ಣುಗಳು ಚಕೋರಪಕ್ಷಿಯನ್ನು, ಸುಂದರವಾದ ಕೈಗಳು ಹೊಸದಾದ ಮಾವಿನ ಚಿಗುರನ್ನು ಹೊಂದಿಕೆ ಪಡೆದು ಸಮ್ಮೋಹನಾಸ್ತ್ರಗಳ ಸಮೂಹದಂತೆ ಶ್ರೇಷ್ಠರಾದ ಸೂಳೆಯರ ಗುಂಪು ರಂಜಿಸಿತ್ತು. ೭೮. ಪ್ರೀತಿಯಿಂದ ವೀಣೆಯನ್ನು ನುಡಿಸುವ, ಕಾಮಶಾಸ್ತ್ರದಲ್ಲಿನ ನಿರೂಪಣೆಯನ್ನು ಬಿಡದೆ ಕೇಳುವ, ಗಾನರಸಸಾಗರದಲ್ಲಿ ಚೆನ್ನಾಗಿ ಓಲಾಡುವ, ಶ್ರೇಷ್ಠವಾದ ಕೊಳಲಿನಿಂದ ಮಧುರವಾದ ಧ್ವನಿಯನ್ನು ಹೊಮ್ಮಿಸುವ ಮೋಹನರೂಪದ ಸುಂದರಿಯರ ಸಮೂಹವು ಪ್ರಸಿದ್ಧ ರತ್ನಗಳಿಂದ ನಿರ್ಮಿತ ಉಪ್ಪರಿಗೆಯ ಮನೆಗಳಲ್ಲಿ ಶೋಭಿಸಿರುವುದು. ವ॥ ಮತ್ತೆ ಅಲ್ಲಿ, ಮದನವಿಕಾರವು ಹೆಚ್ಚಿ ಮೃದುಮಧುರ ಧ್ವನಿಯಿಂದ ಪಾರಿವಾಳಗಳೊಡನೆ ವಿನೋದವಾಡುವ ರಸಿಕ ಯುವತಿಯರಿಂದ; ಅಭ್ಯಾಸದಂತೆ ಮದನನ ಮನಸೆಳೆಯುವ ಕೋಮಲ ಪಾದಗಳಿಂದ ರಾಜಹಂಸಗಳಿಗೆ ನಡೆಗಲಿಸುವ ಬೆಡಗಿಯರಿಂದ; ವಸಂತನ ಗೆಳೆಯನಾದ ಮದನನ ಬಾವುಟದ ಚಿಗುರುಗಳನ್ನು ತಿರಸ್ಕರಿಸುವ ಸೊಗಸಾದ ದಳಗಳಿಂದ ಕೂಡಿದ ಅಶೋಕವೃಕ್ಷದ ಎಳೆಯ ಚಿಗುರನ್ನು ಕೋಗಿಲೆಯ ಮರಿಗಳಿಗೆ ತಿನ್ನಿಸುತ್ತ ಅವುಗಳನ್ನು ರಕ್ಷಿಸುವ [ಸುಂದರಿಯರಿಂದ]; ವೀಣೆಯಂತೆ ಮಂಜುಳವಾಗಿ ನುಡಿವ [ಮನೋಹರಿಯರಿಂದ]; ಕಾಮನಬಿಲ್ಲಿನ ಹೆದೆಯ ಝೇಂಕಾರದಂತೆ ಹೊಮ್ಮುವ ಮಧುರಧ್ವನಿಯಿಂದ ಮದನನ ಬಿರುದುಗಳ ಮಾಲೆಯನ್ನು ಹಾಡುತ್ತ

ಅಂತುಮಲ್ಲದೆಯುಂ,

ಮನಸಿಜನಂಕದ ಕಣಾವಿಂ
ಪಿನ ಕಂಪಿನ ಗೊತ್ತು ಕಲೆಗಳಾರಾಮಂ ಮೋ।
ಹನದಂಬುನಿಧಿ ಚದುರತೌ
ರ್ಮನೆಯೆನಿಸಿ ವಿರಾಜಿಕುಂ ಸುವೇಶ್ಯಾವಾಟಂ ॥ ೭೯ ॥

ಮತ್ತಮದಲ್ಲದೆಯುಂ,

ಧರಣೀನಾಥರ ಸಾಮಂ
ತರ ದಂಡೇಶ್ವರರ ಪಡೆವಳರ ಕಲಿಗಳ ಬಂ।
ಧುರಕವಿಗಳ ಗಾಣರ ಭ
ಟ್ಟರ ಗೃಹವೀಧಿಗಳಿನಾಪುರಂ ರಂಜಿಸುಗುಂ ॥ ೮೦ ॥

ಮತ್ತಮಲ್ಲದಳವಟ್ಟು ಪಂಣ್‌ಪಂಣನೆ ತೀಡುವ ತಣ್ಣೆಲರಲೆಯಿಂದಮಿನಿತು ಜಗುಳ್ದ ಪೀವರಸ್ತನಾಚ್ಛಾದಕಸ್ವಚ್ಛಾಂಬರಾಂಚಲವಂ ಮೆಲ್ಲನೆ ಸೈತುಮಾಡಿಕೊಳುತ್ತಾನಂದದಿಂ ಸಂಚರಿಪ ಲಂಜಿಕಾಪುಂಜದಂಚಿತ ಮಂಜುಧಮ್ಮಿಲ್ಲಸ್ಥಿತ ಕುಸುಮಮಂಜರೀಸಂಜನಿತಸುಗಂಧಾಸಕ್ತಿಸಂಚರಿತ ಚಂಚರೀಕಸಂಚಯದಿಂಚರಂಗಳಿಂ ಲೀಲಾವಿಹಾರಿಸಮಸ್ತನೃಪಕುಮಾರಮನೋಹರರಂಗತ್ತುಂಗ ತುರಂಗ ಖುರಪದೋತ್ಥಿತಧೂಳೀಪಟಲಪಂಕೀಕೃತಿನಿಷ್ಯಂದಮಾನಾಮಂದಮದಧಾರಾವೃಂದಪರಿಪೂರಿತತಗಂಡ ಮಂಡಲಾರಂಜಿತೋದ್ದಂಡಶುಂಡಾಲಪದಬಂಧಿತಸುವರ್ಣಶೃಂಖಲಾಧ್ವನಿಸಂಕುಳದಿಂ ಪೊಸಮಿಂಚಿನ ಪೊಲ್ಪುಳಂಚುತಾಯದಿಂದಡಿಯಿಡುವ ತುಟಿಲಾಲ್ಗಳ ಚರಣಾಂಕಿತಕಾಂಚನಚುಚಿತ್ಕಿಂಕಿಣೀಧ್ವನಿಪ್ರತಾನದಿಂದಾ ಬಲ್ಲಕೀನಗರಂ ವಿರಾಜಿಸುತ್ತಮಿರ್ದುದು॥

ಸಂತಸದಿಂದ ಉಯ್ಯಾಲೆಯಾಡುವ ಎಳೆಯ ಪ್ರಾಯದ ಜವ್ವನೆಯರಿಂದ; ಮನ್ಮಥನ ಪ್ರೀತಿಗೆ ಪಾತ್ರರಾದ ವಿಟರಿಂದ; ಹೊಡೆಯಲಾದ ಹೊನ್ನಗಂಟೆಯ ಧ್ವನಿಯೇ ಕರ್ಣಾಭರಣವಾದ ಸೊಗಸುಗಾತಿಯರಿಂದ; ಮನ್ಮಥನ ವಿಹಾರಸ್ಥಳವೆಂಬ ಕಾಮಕ್ರೀಡೆಯ ಮನೆಗಳಲ್ಲಿ ತಮ್ಮ ಕುಡಿಗಣ್ಣಿನ ನೋಟವೆಂಬ ಬೆಳಗಿನಲ್ಲಿ ಮನೋಹರವಾದ ಗಂಧವೆನ್ನುವ ಆಭರಣವನ್ನು ಕಾಣಿಕೆಗೊಟ್ಟು, ದುಂಬಿಗಳ ಮಧುರಧ್ವನಿಯಿಂದ ಉಪಚರಿಸಿ, ತಣ್ಣನೆಯ ಗಾಳಿಯ ಪರಿಮಳದಿಂದ [ವಿಟರನ್ನು] ಅತಿಶಯವಾಗಿ ರಮಿಸುವ ಸ್ತ್ರೀಯರಿಂದ ಅತಿಮನೋಹರವಾದ ವೇಶ್ಯಾವಾಟವು ಕಣ್ಣಿಗೆ ಆಪ್ಯಾಯಮಾನವಾಗಿರುವುದು. ಅಷ್ಟಲ್ಲದೆ, ೭೯. ಮನ್ಮಥನ ಕಾಳಗದ ಕಣ, ಇಂಪಿನ ಕಂಪಿನ ಬೀಡು, [ಕಾಮ] ಕಲೆಗಳ ತೋಟ, ಮೋಹದ ಸಾಗರ, ಜಾಣೆನ ತವರು ಎನ್ನಿಸಿ ಆ ವೇಶ್ಯಾವಾಟವು ಶೋಭಿಸಿರುವುದು. ವ॥ ಮತ್ತೆ ಅಷ್ಟಲ್ಲದೆ, ೮೦. ಮಹಾರಾಜರ, ಸಾಮಂತರ, ದಂಡಾಧಿಪತಿಗಳ, ಸೈನ್ಯಾಧಿಕಾರಿಗಳ, ವೀರರ, ಶ್ರೇಷ್ಠ ಕವಿಗಳ, ಗಾಯಕರ, ಹೊಗಳುಭಟ್ಟರ, ಮನೆಗಳ ಸಾಲುಗಳಿಂದ ಆ ಪುರವು ಶೋಭಿಸಿರುವುದು. ವ॥ ಮತ್ತೆ ಅಷ್ಟಲ್ಲದೆ, ಹೊಂದಿಕೊಂಡು ಮೆಲ್ಲಮೆಲ್ಲನೆ ಬೀಸುವ ತಂಗಾಳಿಯ ಅಲೆಗಳಿಂದ ಕೊಂಚ ಸರಿದ ದೊಡ್ಡ ಮೊಲೆಗಳನ್ನು ಕವಿದ ಶುಭ್ರವಾದ ಸೀರೆಯ ಸೆರಗನ್ನು ಸರಿಪಡಿಸಿಕೊಳ್ಳುತ್ತ ಸಂಭ್ರಮದಿಂದ ಓಡಾಡುವ ವೇಶ್ಯಾಂಗನೆಯರ ಬಾಗಿದ ಚೆಲುವಾದ ಮುಡಿಯನ್ನು ಅಲಂಕರಿಸಿದ ಕುಸುಮಗಳಿಂದುಂಟಾದ ಸುಗಂಧದಲ್ಲಿ ಆಸಕ್ತಿ ಹೊಂದಿ ಸುತ್ತಿ ಮುತ್ತುವ ದುಂಬಿಗಳ ಮಧುರ ಝೇಂಕಾರದಿಂದ,

ಅಂತುಮಲ್ಲದೆಯುಂ,

ಅಳಕೆಯನಮರಾವತಿಯಂ
ಪಟಿೆಯತ್ತುಂ ತನ್ನ ಪೊಳಪಲಂಪಿಂದಿಂಪಿಂ।
ದಿಳೆಯೊಳ್ನಿತ್ಯೋತ್ಸವಮಂ
ತಳೆದಂತಾಬಲ್ಲಕೀಪುರಂ ರಂಜಿಸುಗುಂ ॥ ೮೧ ॥

ಪಟುಸಂರಂಭದಿನಿಂತು
ತ್ಕಟರಮ್ಯತೆವೆತ್ತುರಂಜಿಪಾಪುರದಾಣ್ಮಂ।
ನಿಟಿಳಾಕ್ಷಪದಾರ್ಚಕನು
ದ್ಭಟದೇವನೆನಿಪ್ಪ ಪೆಸರ ಧರಣೀನಾಥಂ ॥ ೮೨ ॥

ವೀರಂ ತ್ಯಾಗಂ ಭೋಗಂ
ಚಾರುಕಲಾಪ್ರೌಢಿ ಕೀರ್ತಿ ಲಾವಣ್ಯಂ ಗಂ।
ಭೀರಂ ಸತ್ಯಂ ಶಮೆ ಸಾ
ಕಾರಂಗೊಂಡಂತಿರಾಮಹೀಧವನೆಸೆಗುಂ ॥ ೮೩ ॥

ಮತ್ತಮದಲ್ಲದಮರೇಂದ್ರನಂತೆ ಯಖಿಳಭೋಗೋಜ್ವಳನುಂ ವಹ್ನಿಯಂತೆ ಶುಚ್ಯಂಗನುಂ ದಂಡಧರನಂತೆ ಧರ್ಮಪ್ರತಿಪಾಲಕನುಂ ನಿಋತಿಯಂತೆ ಪುಣ್ಯಜನೋತ್ಸವನುಂ ವರುಣನಂತೆ ಚತುಸ್ಸಮುದ್ರಾಧೀಶ್ವರನುಂ ಮಾರುತನಂತೆ ಮಹಾಬಲನುಂ ಕುಬೇರನಂತೆ ರಾಜರಾಜನುಂ ಈಶಾನನಂತೆ

ವಿನೋದಕ್ಕಾಗಿ ಸುತ್ತಾಡುವ ಸಕಲ ರಾಜಕುಮಾರರ ಮನೋಹರವಾದ ಬಣ್ಣ ಬಣ್ಣದ ಶ್ರೇಷ್ಠಲಕ್ಷಣಗಳಿಂದ ಕೂಡಿದ ಕುದುರೆಗಳ ಗೊರಸಿನಿಂದೆದ್ದ ಧೂಳಿನ ತೆರೆಯಿಂದ, ಹೊಳೆಯುವ ಮದ್ದಾನೆಗಳ ಗಂಡಸ್ಥಲದಿಂದ ಮಂದವಾಗಿ ಜಿನುಗುವ ಮದಜಲದಿಂದ ಕೆಸರುಗೊಂಡ ನೆಲದಿಂದ, [ಆ ಮದ್ದಾನೆಗಳ] ಕಾಲಿಗೆ ಕಟ್ಟಿದ ಚಿನ್ನದ ಸಂಕೋಲೆಯ ಝುಣತ್ಕಾರದಿಂದ, ಸಮನಾಗಿ ಹೆಜ್ಜೆ ಹಾಕುವ ಕಲಿಗಳ ಪಾದಗಳಲ್ಲಿನ ಎಳೆಮಿಂಚಿನಂತೆ ಥಳಥಳಿಸುವ ಅಲುಗಾಡುವ ಚಿನ್ನದ ಕಿರುಗೆಜ್ಜೆಗಳ ಮಧುರ ನಿನಾದದಿಂದ ಆ ಭಲ್ಲಕೀನಗರವು ಬೆಳಗುತ್ತಿರುವುದು. ವ॥ ಅಷ್ಟಲ್ಲದೆ, ೮೧. ಹೋಲಿಕೆಯಲ್ಲಿ ಇಂದ್ರನ ರಾಜಧಾನಿಯಾದ ಅಮರಾವತಿಯನ್ನು ಅವಮಾನಿಸುತ್ತ, ತನ್ನ ಶೋಭೆಯಿಂದ, ಸೊಗಸಿನಿಂದ, ಆನಂದದಿಂದ ಭುವಿಯಲ್ಲಿ ನಿತ್ಯವೂ ಉತ್ಸವವನ್ನು ಪಡೆದ ಆ ಬಲ್ಲಕೀಪುರವು ಅಂದಗೊಂಡಿರುವುದು. ೮೨. ಹೀಗೆ ಅತಿಶಯವಾದ ಸಡಗರದಿಂದ ಹೆಚ್ಚಿನ ಚೆಲುವಿಕೆಯನ್ನು ಪಡೆದು ರಂಜಿಸುವ ಆ ಪಟ್ಟಣದ ಅಧಿಪತಿಯು ಶಿವನ ಪಾದಪೂಜಕನಾದ ಉದ್ಭಟದೇವನೆಂಬ ಹೆಸರಿನ ಮಹಾರಾಜನಾಗಿರುವನು. ೮೩. ವೀರ, ತ್ಯಾಗ, ಭೋಗ, ಶ್ರೇಷ್ಠ ಕಲೆಗಳಲ್ಲಿ ಪ್ರೌಢಿಮೆ, ಕೀರ್ತಿ, ಲಾವಣ್ಯ, ಗಾಂಭೀರ್ಯ, ಸತ್ಯ, ಶಾಂತಿ - ಇವೆಲ್ಲವೂ ಸಾಕಾರಗೊಂಡಂತೆ ಆ ಮಹಾರಾಜನು ಶೋಭಿಸುವನು. ವ॥ ಮತ್ತೆ ಅಷ್ಟಲ್ಲದೆ, ದೇವೇಂದ್ರನಂತೆ ಸಕಲ ಭೋಗಗಳಲ್ಲಿ ಉಜ್ವಲನೂ, ಅಗ್ನಿಯಂತೆ ಶುಚಿಯೂ, ಯಮರಾಜನಂತೆ ಧರ್ಮಪ್ರತಿಪಾಲಕನೂ, ನೈಋತ್ಯನಂತೆ ಪುಣ್ಯವಂತರನ್ನು ಸಂತೋಷಪಡಿಸುವವನೂ, ವರುಣನಂತೆ ನಾಲ್ಕು ಸಮುದ್ರಗಳ ಒಡೆಯನೂ, ವಾಯುವಿನಂತೆ ಶಕ್ತಿಶಾಲಿಯೂ, ಕುಬೇರನಂತೆ ರಾಜರಿಗೆ ರಾಜನೂ, ಈಶಾನ್ಯನಂತೆ

ವಿಭೂತಿಭೂಷಣನುಂ ಮತ್ತಮಾರ್ತಾಂಡನಂತೆ ಸಮಸ್ತಭೂಭೃನ್ಮಸ್ತಕನ್ಯಸ್ತಪಾದನುಂ ಚಂದ್ರನಂತೆ ಸಲ್ಲಕ್ಷಣ ಸಂಪನ್ನನುಂ ಮಂಗಳನಂತೆ ವಿಬುಧಗಣಕಲ್ಪಕುಜನುಂ ಬುಧನಂತೆ ಸೌಮ್ಯನುಂ ವಾಚಸ್ಪತಿಯಂತೆ ರಮಣೀಜನಸಂಜೀವನನುಂ ಭಾರ್ಗವನಂತೆ ಕವಿರಾಜ ಕುಂಜರನುಂ ಸೂರ್ಯಸುತನಂತೆ ಮಂದಸ್ಮಿತ ವದನಾರವಿಂದನುಂ ಮತ್ತಂ ವಸಂತನಂತೆ ಸುಜನಾನುರಾಗನುಂ ಫಣಿಪನಂತೆ ವಿಧೃತನಿಖಿಳಾವನೀಚಕ್ರನುಂ ವಿರಿಂಚಿಯಂತೆ ಗೀರ್ಲಪನನುಂ ಮುಕುಂದನಂತೆ ಜನ ಸಂರಕ್ಷಕನುಮಾಗಿ ಯುದ್ಭಟೋರ್ವೀನಾಥಂ ಕಣ್ಗೆಸೆದಿರ್ದಂ॥

ಅಂತುಮಲ್ಲದೆಯುಂ,

ಸ್ಮಿತವಕ್ತ್ರಂ ಸ್ಫಾರನೇತ್ರಂ ಪ್ರವಿಮಲತರಗಾತ್ರಂ ಬುಧಸ್ತೋತ್ರಪಾತ್ರಂ
ಚ್ಯುತಪಾಪಂ ಮಾರರೂಪಂ ಕರಕಲಿತಸುಚಾಪಂ ತ್ರಿಲೋಕಪ್ರದೀಪಂ।
ಧೃತಪುಣ್ಯಂ ಕೀರ್ತಿಗುಣ್ಯಂ ನೆಗಳ್ದನಿಖಿಳರಾಜಾಗ್ರಗಣ್ಯಂ ವರೇಣ್ಯಂ
ನುತಶೀಲಂ ಯೋಗಲೋಲಂ ಸುಭಗನೆಸೆದನಂದುದ್ಭಟಕ್ಷೋಣೀಪಾಲಂ ॥ ೮೪ ॥

ರಜನೀಕರಕುಲತಿಲಕಂ
ತ್ರಿಜಗತ್ಪತಿ ಪೂರ್ಣಕೀರ್ತಿಯುದ್ಭಟದೇವಂ।
ಸುಜನಜನಾನಂದಂ ನಿಜ
ಭುಜಸಂಸ್ಥಿತನಿಖಿಳಭೂವಲಯನೆಸೆದಿರ್ಪಂ ॥ ೮೫ ॥

ಅಲೌಕಿಕ ಶಕ್ತಿ ಸಂಪನ್ನನೂ, ಸೂರ್ಯನಂತೆ ಸಕಲ ರಾಜರುಗಳ ಶಿರಗಳನ್ನು ತನ್ನ ಪಾದಗಳಲ್ಲಿ ಇಟ್ಟಂಥವನೂ, ಚಂದ್ರನಂತೆ ಸಲ್ಲಕ್ಷಣನೂ, ಮಂಗಳನಂತೆ ವಿದ್ವಜ್ಜನರ ಪಾಲಿಗೆ ಕಲ್ಪವೃಕ್ಷನೂ, ಬುಧನಂತೆ ಸೌಮ್ಯನೂ, ವಾಚಸ್ಪತಿಯಂತೆ ಸ್ತ್ರೀಯರಿಗೆ ಪ್ರಾಣಸಮಾನನೂ, ಪರಶುರಾಮನಂತೆ ಕವಿಶ್ರೇಷ್ಠರ ಪಾಲಿಗೆ ಉತ್ತಮನೂ, ಸೂರ್ಯಸುತನಂತೆ ಮಂದಹಾಸದಿಂದ ಕೂಡಿದ ಮುಖಕಮಲವುಳ್ಳವನೂ, ಮತ್ತೆ, ವಸಂತನಂತೆ ಸಜ್ಜನರಿಗೆ ಸಂತೋಷವನ್ನುಂಟು-ಮಾಡುವವನೂ, ನಾಗರಾಜನಂತೆ ಸಕಲ ಭೂಮಂಡಲವನ್ನು ಹೊತ್ತವನೂ, ಬ್ರಹ್ಮನಂತೆ ಶಾರದೆಯನ್ನು ಬಾಯಲ್ಲಿ ಧರಿಸಿರುವವನೂ, ವಿಷ್ಣುವಿನಂತೆ ಪ್ರಜಾಸಂರಕ್ಷಕನೂ ಆಗಿ ಉದ್ಭಟಮಹಾರಾಜನು ಕಣ್ಣಿಗೆ ಅಂದಗೊಂಡಿರುವನು. ವ॥ ಅಷ್ಟಲ್ಲದೆ, ೮೪. ಅರಳಿದ ಮುಖವುಳ್ಳವನೂ, ವಿಶಾಲನೇತ್ರನೂ, ಮನೋಹರಾಕಾರನೂ, ಪಂಡಿತರ ಸ್ತುತಿಗೆ ಯೋಗ್ಯನೂ, ಪಾಪವಿದೂರನೂ, ಮನ್ಮಥರೂಪನೂ, ಬಿಲ್ಲನ್ನು ಕೈಯಲ್ಲಿ ಹಿಡಿದವನೂ, ಮೂರು ಲೋಕಗಳಿಗೆ ಬೆಳಕನ್ನು ಹರಿಸುವವನೂ, ಪುಣ್ಯವಂತನೂ, ಅಧಿಕ ಕೀರ್ತಿಶಾಲಿಯೂ, ಪ್ರಖ್ಯಾತರಾದ ರಾಜರೆಲ್ಲರಿಗೆ ಮುಖ್ಯನೂ, ಶ್ರೇಷ್ಠನೂ, ಹೊಗಳಿಕೆಗೆ ಪಾತ್ರವಾದ ಶೀಲವುಳ್ಳವನೂ, ಇಂದ್ರಿಯ ನಿಗ್ರಹದಲ್ಲಿ ತಲ್ಲೀನನಾದವನೂ, ಮನ್ನಣೆಗೆ ಯೋಗ್ಯನಾದವನೂ ಆದ ಉದ್ಭಟಮಹಾರಾಜನು ಶೋಭಿಸಿದನು. ೮೫. ಚಂದ್ರವಂಶಕ್ಕೆ ತಿಲಕಪ್ರಾಯನೂ, ತ್ರಿಜಗತ್ಪತಿಯೂ, ಅತ್ಯಂತ ಪ್ರಸಿದ್ಧನೂ, ಸಜ್ಜನರಿಗೆ ಆನಂದವನ್ನುಂಟು-ಮಾಡುವವನೂ, ತನ್ನ ಭುಜಮಂಡಲದಲ್ಲಿ ಸಕಲ ಭೂಮಂಡಲಗಳನ್ನು ನೆಲೆಗೊಳಿಸಿದವನೂ,

ಮತ್ತಮದಲ್ಲದೆಯುಂ,

ಘನವಿಕ್ರಮಶಿಖಿಯುತನೂ
ತನವಿಚಲದ್ಧೂಮಲೇಖೆಯೊಳ್ಪೆಂಬಿನೆಗಂ।
ಜನನುತನುದ್ಭಟದೇವನ
ಮಿನುಪ ಕರಾಬ್ಜಸ್ಥಿತಾಸಿಲತೆ ಸೊಗಯಿಸುಗುಂ ॥ ೮೬ ॥

ನಿರ್ಮೋಕಂಗಳಿದು ಕರಂ
ಘೂರ್ಮಿಸಿ ಮೈಮುಱಿವ ಕೃಷ್ಣಫಣಿಯೆನಲೊಱೆಯಿಂ।
ಕೂರ್ಮೆ ಮಿಗೆ ತೆಗೆದು ಜಡಿಯೆ ಪೊ
ಗರ್ಮಿಗುತುದ್ಭಟನ ಖಡ್ಗಲತೆ ಸೊಗಯಿಸುಗುಂ ॥ ೮೭ ॥

ಪೊಣರ್ವರಿನೃಪರಂ ಮಣಿದ
ರ್ಪಣದ ಛಾಯೆಯವೋಲಾಡಿಕುಂ ತದ್ರಾಜಾ।
ಗ್ರಣಿ ಝಳಪಿಸುವಸಿ ಸಮರಾಂ
ಗಣದೊಳ್ತಾಂ ನಡುಗಿ ಯವರನುಱೆ ನಡುಗಿಸುಗುಂ ॥ ೮೮ ॥

ಗಂಡುಮೀನ್ಬೊಗರ್ಗಣ್ಗದಿರ್ನಿಜವಸ್ತ್ರಮಾಗೆ ಸುರೋರ್ವಿಯೊ
ಳ್ಮಿಂಡಿವೆಣ್ಗಳ ತೋಳ ತೆಕ್ಕೆಯೊಳಾವಗಂ ಬಿಡದೊಪ್ಪುಗುಂ।
ಚಂಡವಿಕ್ರಮಧಾಮನುದ್ಭಟಭೂಮಿಪಾಲಕನುಲ್ಲಸ
ನ್ಮಂಡಲಾಗ್ರಕಿದಿರ್ಚಿದುನ್ನತಶತ್ರುಧಾತ್ರಿಪಸಂಚಯಂ ॥ ೮೯ ॥

ಸ್ವಪಕ್ಷಭೂಪರ್ಗುರುಭೋಗಮಾರ್ಗಮಂ
ವಿಪಕ್ಷರಾಜರ್ಗಿನಬಿಂಬಮಾರ್ಗಮಂ।
ನೃಪಾಲಚೂಡಾಮಣಿಯುದ್ಭಟೋಲ್ಲಸ
ತ್ಕೃಪಾಣವಿದ್ಯುಲ್ಲತೆ ತೋಱುತಿರ್ಪುಗುಂ ॥ ೯೦ ॥

ಆದ ಉದ್ಭಟದೇವನು ಶೋಭಿಸಿದನು. ವ॥ ಮತ್ತೆ ಅಷ್ಟಲ್ಲದೆ, ೮೬. ಅತಿಶಯವಾದ ಪರಾಕ್ರಮವೇ ಬೆಂಕಿಯು, ಹೊಸದಾದ ಚಲಿಸುವ ಹೊಗೆಯೆ ಒಳ್ಳೆಯ ಕಾರ್ಯಗಳಿಗೆ ಸಾಕ್ಷಿ ಎನ್ನುವಂತೆ ಜನರಿಂದ ಹೊಗಳಲ್ಪಟ್ಟ ಉದ್ಭಟದೇವನ ಕರಕಮಲದಲ್ಲಿ ಖಡ್ಗವು ಕಂಗೊಳಿಸಿರುವುದು. ೮೭. ಉದ್ಭಟನು ತನ್ನ ಖಡ್ಗವನ್ನು ಸಂತೋಷದಿಂದ [ಅದರ] ಒರೆಯಿಂದ ತೆಗೆದು [ಒಮ್ಮೆ] ಝಳಪಿಸಿದ್ದೇ ಆದರೆ ಅದರ ಕಾಂತಿ ಉಜ್ವಲಗೊಂಡು ಫೂತ್ಕರಿಸಿ ಮೈಮುರಿದ ಕೃಷ್ಣಸರ್ಪವೆನ್ನುವಂತೆ ಶೋಭಿಸುವುದು. ೮೮. ರಾಜರುಗಳಲ್ಲಿ ಶ್ರೇಷ್ಠನಾದ ಆ ಉದ್ಭಟನು ಝಳಪಿಸುವ ಕತ್ತಿಯು ಯುದ್ಧರಂಗದಲ್ಲಿ ಎದುರಾಗುವ ಶತ್ರುರಾಜರನ್ನು ಅತಿಶಯವಾಗಿ ನಡುಗಿಸುವುದು. ಅದು ಅವರನ್ನು ಮಣಿಖಚಿತವಾದ ಕನ್ನಡಿಯಲ್ಲಿನ ಬಿಂಬದಂತೆ ಆಡಿಸುವುದು. ೮೯. ಪ್ರಚಂಡ ಸಾಹಸಕ್ಕೆ ನೆಲೆಯಾದ ಉದ್ಭಟಮಹಾರಾಜನ ಉಲ್ಲಾಸಯುಕ್ತವಾದ ಖಡ್ಗಕ್ಕೆ ಇದಿರಾದ ಪ್ರಸಿದ್ಧ ಶತ್ರುರಾಜರ ಸಮೂಹವು ಗಂಡುಮೀನಿನ ಹೊಳಪುಗಣ್ಣಿನ ಕಾಂತಿಯೇ [ಅದರ] ಆಯುಧವಾಗುವಂತೆ [ಸತ್ತು] ದೇವಲೋಕದ ಪ್ರಾಯದ ಹೆಣ್ಣುಗಳ ತೋಳತೆಕ್ಕೆಯಲ್ಲಿ ಯಾವಾಗಲೂ ಬಿಡದೆ ಶೋಭಿಸುವುದು. ೯೦. ರಾಜರುಗಳಲ್ಲಿ ಚೂಡಾಮಣಿಯಂತಿರುವ ಉದ್ಭಟನ ಹೊಳೆಯುವ

ಕುಂಭಿನಿಯೊಳಗುದ್ಭಟನ ವಿ
ಜೃಂಭಿತಕರದಸಿ ಯಿದಿರ್ಚಿದರನಳ್ಕಿದರಂ।
ಜಂಭರಿಪುವಿನೋಲಗದೊಳ್
ರಂಭಾಸಂಭೋಗಸೌಖ್ಯಮಂ ನೆಱ ಮಾೞ್ಕುಂ ॥ ೬೧ ॥

ಸೆಣಸಿ ಸಮುನ್ನತೋದ್ಭಟನೊಳಾಟವಿಕತ್ವಮನಾಂತು ಕಾಮಿನೀ
ಮಣಿತಮಿದೆಂದು ಪಾರಿವದ ಮೆಲ್ಲುಲಿಯಂ, ತನುವೆಂಬ ವಲ್ಲಿಯಂ।
ಪೊಣರ್ವಣೆವಕ್ಕಿಯಂ ಮೊಲೆಗಳೆಂದರುಣಾಧರವೆಂದು ಬಿಂಬಮಂ,
ತಣಿಯದೆ ಕೇಳ್ವರೊಲ್ದು ಪರಿರಂಭಿಪರೀಕ್ಷಿಪರೀಂಟುವರ್ ನೃಪರ್ ॥ ೬೨ ॥

ನೃಪವರನುದ್ಭಟೋರ್ವಿಪನ ಧಾಳಿಗೆ ಕೆಟ್ಟಹಿತಾಂಗನಾಜನಂ
ವಿಪಿನಮನಂದು ಪೊಕ್ಕಿರದೆ ಕಾದಲರಂ ವಿರಹೋಗ್ರತಾಪದಿಂ
ವಿಪುಳಲತಾನಿಕುಂಜಚಯದೊಳ್ಮನಮೊಲ್ದಱಸುತ್ತಮೊಪ್ಪಿದ
ರ್ತಪದೊಳೆ ಸಂದರಂ ಬೆದಕುತುಂ ಚರಿಪಂಗಜಬಾಣರಾಜಿವೋಲ್ ॥ ೬೩ ॥

ಮಾಣಿಕ್ಯಹಾರಯುತಶತ್ರುವಧೂಕುಚಂಗಳ್
ಕ್ಷೋಣೀಶನುದ್ಭಟನ ಖಡ್ಗವಿಘಾತದಾರ್ಪಿಂ।
ಶೋಣಾಂಬುಬಿಂದುಮಯಮಾದ ಮದೇಭಕುಂಭ
ಮೇಣೆಂಬವೊಲ್ಪೊಗಯಿಸಿರ್ಪುದರಣ್ಯದತ್ತಂ ॥ ೬೪ ॥

ಕತ್ತಿಯ ಮಿಂಚೆಂಬ ಬಳ್ಳಿಯು ತನ್ನ ಪಕ್ಷದ ರಾಜರುಗಳಿಗೆ ಅತಿಶಯವಾದ ಭೋಗಮಾರ್ಗವನ್ನೂ, ಪ್ರತಿಪಕ್ಷದ ರಾಜರುಗಳಿಗೆ ಯಮನ ಪಟ್ಟಣದ ಮಾರ್ಗವನ್ನೂ ತೋರುತ್ತಿರುವುದು. ೬೧. ಭೂಮಿಯಲ್ಲಿ ಉದ್ಭಟನ ಕೈಯಲ್ಲಿ ಹೊಳೆಯುವ ಕತ್ತಿಯು ತನ್ನನ್ನು ಇದಿರಿಸಿದವರಿಗೆ, ಹೆದರಿಸಿದವರಿಗೆ ಇಂದ್ರನ ಓಲಗದ ರಂಭೆಯ ಒಡನಾಟದ ಸೌಖ್ಯವು ವಿಶೇಷವಾಗಿ ದೊರೆಯುವಂತೆ ಮಾಡುವುದು. ೬೨. ಶತ್ರುರಾಜರುಗಳಲ್ಲಿ ಶ್ರೇಷ್ಠನಾದ ಉದ್ಭಟನೊಂದಿಗೆ ಹೋರಾಡಿ ಮೋಸಹೋಗುವರು; ಪಾರಿವಾಳದ ಮೆಲುದನಿಯನ್ನು ಹೆಣ್ಣಿನ ಮಣಿತವೆಂದು ತಣಿಯದೆ ಕೇಳುವರು; ಬಳ್ಳಿಯನ್ನು ದೇಹವೆಂದು ಪ್ರೀತಿಯಿಂದ ಆಲಂಗಿಸುವರು; ಚಕ್ರವಾಕಪಕ್ಷಿಯನ್ನು ಮೊಲೆಗಳೆಂದು ನೋಡುವರು; ತೊಂಡೆ ಹಣ್ಣನ್ನು ಕೆಂಪಾದ ತುಟಿಯೆಂದು ಸವಿಯುವರು. ೬೩. ನೃಪಶ್ರೇಷ್ಠನಾದ ಉದ್ಭಟ ಮಹಾರಾಜನ ದಾಳಿಗೆ ಹೆದರಿದ ಶತ್ರುರಾಜನ ಸ್ತ್ರೀಯರು ವಿರಹಾಗ್ನಿಯಲ್ಲಿ ಬೆಂದು ತಮ್ಮ ಪ್ರಿಯರನ್ನು ಬಿಡದೆ ಹುಡುಕಲು ಕಾಡನ್ನು ಹೊಕ್ಕು ದಟ್ಟವಾದ ಬಳ್ಳಿಯ ಪೊದರುಗಳಲ್ಲಿ ಮನಸಾರೆ ಅರಸುತ್ತ ತಪಸ್ಸಿನಲ್ಲಿ ಮೈಮರೆತವರನ್ನು ಶೋಧಿಸುತ್ತ ಮನ್ಮಥನ ಬಾಣಗಳ ಸಮೂಹದಂತೆ [ಅವರು] ಶೋಭಿಸಿದರು. ೬೪. ಉದ್ಭಟಮಹಾರಾಜನ ಕತ್ತಿಯ ಹೊಡೆತದ ಸಾಮರ್ಥ್ಯದಿಂದ, ಕಾಡಿಸತ್ತ ನಡೆದ ಶತ್ರುಗಳ ಹೆಂಡಿರ ಮಾಣಿಕ್ಯಹಾರದಿಂದ ಕೂಡಿದ ಮೊಲೆಗಳು, ರಕ್ತದ ಹನಿಗಳಿಂದ ಕೂಡಿದ ಮದಿಸಿದ ಆನೆಯ ಕುಂಭಸ್ಥಲವೋ ಎನ್ನುವಂತೆ

ಗುಂಜಿಯ ಕುಂಜಮಂ ಮಿಸುಪಶೋಕೆಯ ಪಲ್ಲವಮಂ ಪಲಾಶದಾ
ರಂಜಿತಪುಷ್ಪಮಂ ನವಜಪಾಕುಸುಮಾವಳಿಯಂ ನೃಪಾಲರಾ।
ಟ್ಟುಂಜರನುದ್ಭಟೋರ್ವಿಪನ ವಿಕ್ರಮವಹ್ನಿಯ ವಿಸ್ಫುಲಿಂಗವೆಂ
ದಂಜುವುದಂತವಂ ವನದೊಳೀಕ್ಷಿಸಿ ಶಾತ್ರವಧಾತ್ರಿಪೋತ್ಕರಂ ॥ ೯೫ ॥

ವಿದ್ರುಮಮಂಬುರಾಶಿಗೆ ನಭಕ್ಕೆ ವಿಯನ್ಮಣಿ ರತ್ನ ರಾಜಿ ಶೋ
ಣಾದ್ರಿಗೆ ಪೂಗೊಳಕ್ಕೆ ನವಕೋಕನದಂ ದೆಸೆವೆಣ್ಗೆ ಚಾರುಹಾ।
ರಿದ್ರವಿಲೇಪನಂ ಫಣಿವರಂಗೆ ಫಣಾಮಣಿಯಾದುದಾವಗಂ
ರುದ್ರಪ್ರದಾಬ್ಜಷಟ್ಚರಣನುದ್ಭಟನುನ್ನತವಿಕ್ರಮಾನಳಂ ॥ ೯೬ ॥

ಶುಭ್ರಯಶನುದ್ಭಟಾಂಕನ
ವಿಭ್ರಾಜಿತವಿಕ್ರಮಾಶುಶುಕ್ಷಣಿಜನಿತಾ।
ದಭ್ರತರಧೂಮಮೆನಲಸಿ
ತಾಭ್ರಂಗಳ್ಸೊಗಯಿಸಿಪ್ಪುವಾಗಸದೆಡೆಯೊಳ್ ॥ ೯೭ ॥

ತೊಳಪ ಪರಾಕ್ರಮಮೆಂಬ ಪ
ವಳವಳ್ಳಿಯನಗಲದಪ್ಪಿ ಜೃಂಭಿಪ ಮುಕ್ತಾ।
ಫಲಮೆಂದೆನಲುದ್ಭಟನು
ಜ್ವಳತರಸತ್ಕೀರ್ತಿಪುಂಜಮುಂ ರಂಜಿಸುಗುಂ ॥ ೯೮ ॥

ಕಂಗೊಳಿಸಿದುವು. ೯೫. ಶತ್ರುರಾಜರುಗಳ ಸಮೂಹವು ಕಾಡಿನಲ್ಲಿ ಗುಲಗಂಜಿಯ ಎಲೆಮನೆಯನ್ನು, ಹೊಳೆವ ಅಶೋಕವೃಕ್ಷದ ಚಿಗುರನ್ನು, ಮುಳ್ಳು ಮುತ್ತುಗದ ಮರದ ಬಣ್ಣದ ಹೂವನ್ನು, ಎಳೆಯ ಕೆಂಪುದಾಸವಾಳದ ಹೂವುಗಳನ್ನು ನೋಡಿ ಅವುಗಳು ನೃಪಸಮೂಹಕ್ಕೆ ಆನೆಯಂತಿರುವ ಉದ್ಭಟಮಹಾರಾಜನ ಪರಾಕ್ರಮವೆಂಬ ಬೆಂಕಿಯ ಪ್ರಖರ ಕಿಡಿಗಳೆಂದು [ಭ್ರಮಿಸಿ] ಹೆದರಿದುವು. ೯೬. ಸಮುದ್ರಕ್ಕೆ ಹವಳ, ಆಗಸಕ್ಕೆ ಸೂರ್ಯ, ಕೆಂಪು ಪರ್ವತಕ್ಕೆ ರತ್ನಗಳ ಸಮೂಹ, ಹೂವಿನ ಕೊಳಕ್ಕೆ ಎಳೆಯ ಕೆಂದಾವರೆ, ದಿಗ್ದೇವತೆಗೆ ಮನೋಹರವಾದ ಅರಿಶಿನ ಬಣ್ಣದ ಲೇಪನ, ಆದಿಶೇಷನಿಗೆ ಹೆಡೆಯಲ್ಲಿನ ಮಣಿ ಹೇಗೆ ಸದಾ ಹೊಂದಿಕೊಂಡಿರುವುದೊ ಹಾಗೆ ಶಿವನ ಪಾದಕಮಲಗಳಲ್ಲಿ ದುಂಬಿಯಾಗಿರುವ ಉದ್ಭಟನ ಅತಿಶಯ ಪರಾಕ್ರಮವೆನ್ನುವ ಬೆಂಕಿಯು ಅವನಲ್ಲಿ ಹೊಂದಿಕೊಂಡಿರುವುದು. ೯೭. ಕಳಂಕವಿಲ್ಲದ ಕೀರ್ತಿಯನ್ನು ಹೊಂದಿರುವ ಉದ್ಭಟದೇವನ ವಿಶೇಷವಾಗಿ ಹೊಳೆಯುವ ಪರಾಕ್ರಮವೆಂಬ ಬೆಂಕಿಯಿಂದ ಹುಟ್ಟಿದ ಕಪ್ಪು ಹೊಗೆಯೋ ಎನ್ನುವಂತೆ ಆಕಾಶದಲ್ಲಿ ಕಪ್ಪು ಮೋಡಗಳು ಅಂದವಾಗಿ ಕಾಣುತ್ತಿರುವುವು. ೯೮. ಪ್ರಕಾಶಿಸುವ ಪರಾಕ್ರಮವೆಂಬ ಹವಳದ ಬಳ್ಳಿಯನ್ನು ಬಿಡದೆ ಅಪ್ಪಿ ಅತಿಶಯವಾಗಿ ಶೋಭಿಸಿರುವ ನವರತ್ನಗಳಲ್ಲಿ ಒಂದಾದ ಮುಕ್ತಾಫಲವೆನ್ನುವಂತೆ ಉದ್ಭಟನು ಉಜ್ವಲವಾದ ಸತ್ಕೀರ್ತಿಯನ್ನು ಅಪ್ಪಿ ಶೋಭಿಸುವನು.

ಕ್ಷಣದೇಶಜ್ಯೋತಿಯೊಳ್ ನಿರ್ಜರವರತತಿಯೊಳ್ ವಾಣಿಯೊಳ್ ನೂತ್ನಮುಕ್ತಾ
ಗಣದೊಳ್ಮಂದಾಕಿನೀಸಂಜನಿತತರಳಕಲ್ಲೋಲದೊಳ್ ಸ್ಫಾಟಿಕಾಂಚ।
ನ್ಮಣಿಯೊಳ್ತಾರಾದ್ರಿಯೊಳ್ಪಾಂಡುರಜಲಧರದೊಳ್ ಶೇಷನೊಳ್ಪೆರ್ಮೆಯಿಂದಂ
ಪೊಣರ್ಗುಂ ನಿಚ್ಚಂ ಸಮಂತುದ್ಭಟವಿಶದಯಶಃಕಾಂತಿಕುಂಜಪ್ರಪುಂಜಂ ॥ ೯೯ ॥

ವಿಳಸಚ್ಚಂದ್ರಾತಪಂಗೆತ್ತಮರ್ದನವಚಕೋರಂ ಸುಧಾಂಬೋಧಿಯೆಂದು
ಜ್ವಳಹಂಸಂ ಮಲ್ಲಿಕಾಮಂಜರಿಯೆನುತಳಿಪುಂಜಂ ಮೃಣಾಳಂ ಸಮಂತೆಂ।
ದಿಳೆಯೊಳ್ಮತ್ತದ್ವಿಪಂ ಪೆರ್ಚುತೆಜಿಗಲಮಲಾದಭ್ರಶುಭ್ರಾಂಶುವಿಂದಂ
ಬೆಳಗುತ್ತುಂ ಲೋಕಮಂ ತನ್ನೃಪವರನ ಯಶಂ ಪೆಂಪುವೆತ್ತೊಪ್ಪಿತೋರ್ಕುಂ ॥ ೧೦೦ ॥

ಅವನೀಧ್ರೌಘಂಗಳೆಲ್ಲಂ ಪುರಹರಕುಧರಂ ಸರ್ವರತ್ನಂಗಳೆಲ್ಲಂ
ನವಮುಕ್ತಾಸಂಕುಳಂ ಮಂಜುಳತಟಿನಿಗಳೆಲ್ಲಂ ವಿಯದ್ಗಂಗೆ ಸಪ್ತಾ।
ರ್ಣವಮೆಲ್ಲಂ ಪಾಲ್ಗಡಲ್ ಸತ್ಕುಸುಮತತಿಯದೆಲ್ಲಂ ಸುಮಲ್ಲೀಮತಲ್ಲೀ
ನಿವಹಂ ಮೇಣಾದುವಂದುದ್ಭಟವಿಶದಯಶಃಕಾಂತಿಸಂದೋಹದಿಂದಂ ॥ ೧೦೧ ॥

ಘನಕೀರ್ತಿಮಯಂ ಶಾಂತಂ
ಮನಸಿಜನಿಭನತುಳದಾನಶೀಲಂ ಸುಭಗಂ।
ವಿನುತಪರಾಕ್ರಮಭೂಷಣ
ನೆನಲೆಸೆವಂ ಸಾವಧಾನನುದ್ಭಟದೇವಂ ॥ ೧೦೨ ॥

೯೯. ಉದ್ಭಟನ ವಿಶಾಲವಾದ ಕೀರ್ತಿಯೆಂಬ ಪ್ರಕಾಶಮಾನವಾದ ಬೆಳಕು ಹೆಮ್ಮೆಯಿಂದ ನಾಲ್ಕು ನಿಮಿಷಗಳ ಕಾಲದ ನಾಡ ಬೆಳಕಿನಲ್ಲಿ, ಶ್ರೇಷ್ಠರಾದ ದೇವತೆಗಳ ಸಮೂಹದಲ್ಲಿ, ಮಾತಿನಲ್ಲಿ, ಹೊಸದಾದ ಮುತ್ತುಗಳಲ್ಲಿ, ಮಂದಾಕಿನಿಯಲ್ಲಿ ಹುಟ್ಟಿದ ಚಂಚಲವಾದ ದೊಡ್ಡ ಅಲೆಯಲ್ಲಿ, ಸ್ಫಟಿಕದ ಸುಂದರ ಮಣಿಯಲ್ಲಿ, ಆಕಾಶದಲ್ಲಿ, ಹಳದಿಮಿಶ್ರಿತ ಬಿಳಿಬಣ್ಣದ ಮೋಡದಲ್ಲಿ, ಆದಿಶೇಷನಲ್ಲಿ ಸದಾ ಕೂಡಿರುವುದು. ೧೦೦. ಆ ಶ್ರೇಷ್ಠ ಮಹಾರಾಜನ ಅತಿಶಯವಾದ ಯಶಸ್ಸೆನ್ನುವ ಮಂಗಳ ಕಿರಣಗಳು ಶುಭ್ರವಾದ ಆಕಾಶವನ್ನು ವ್ಯಾಪಿಸಿ ಲೋಕವನ್ನು ಬೆಳಗುತ್ತಿರಲು [ಅದನ್ನು] ಪ್ರಕಾಶಮಾನವಾದ ಬೆಳುದಿಂಗಳೆಂದು ಭಾವಿಸಿ ಸಮೀಪಿಸಿದ ಎಳೆಯ ಚಕೋರಪಕ್ಷಿಯು, ಕ್ಷೀರಸಾಗರವೆಂದು ಭಾವಿಸಿ ನಲಿದ ಹಂಸಪಕ್ಷಿಯು, ಮಲ್ಲಿಗೆಯ ಮಾಲೆಯೆಂದು ಭಾವಿಸಿ [ಝೇಂಕರಿಸಿದ] ದುಂಬಿಗಳು, ತಾವರೆಯ ದಂಟೆಂದು ಭಾವಿಸಿದ ಭೂಮಿಯ ಮೇಲಿನ ಆನೆಯು ಉಬ್ಬಿ ಮೇಲೆ ಬೀಳಲು ತವಕಿಸಿದುವು ಎನ್ನುವಂತೆ [ಮಹಾರಾಜನ ಯಶಸ್‌ಚಂದ್ರಿಕೆಯು] ಶೋಭಿಸಿರುವುದು. ೧೦೧. ಅಂದು ಉದ್ಭಟದೇವನ ವಿಶಾಲವಾದ ಯಶಸ್ಸೆಂಬ ಕಾಂತಿಯ ಪುಂಜದಿಂದಾಗಿ ಭುವಿಯ ಬೆಟ್ಟಗಳೆಲ್ಲ ಶಿವನ ಬೆಳ್ಳಿಯ ಬೆಟ್ಟ, ಸಕಲ ರತ್ನಗಳೆಲ್ಲ ಎಳೆಯ ಮುತ್ತುಗಳ ಸಮೂಹ, ಮನೋಹರವಾದ ನದಿಗಳೆಲ್ಲ ಆಕಾಶಗಂಗೆ, ಸಪ್ತಸಮುದ್ರಗಳೆಲ್ಲ ಕ್ಷೀರಸಾಗರ, ಒಳ್ಳೆಯ ಹೂವುಗಳೆಲ್ಲ ಸುವಾಸನಾಭರಿತ ಮಲ್ಲಿಗೆಯ ರಾಶಿ ಎನ್ನುವಂತಾದುವು. ೧೦೨. ಉದ್ಭಟದೇವನು ಅತಿಶಯವಾದ ಕೀರ್ತಿಶಾಲಿಯೂ, ಶಾಂತನೂ, ಮನ್ಮಥನಿಗೆ ಸಮಾನನೂ ಉದಾರ ದಾನಿಯೂ, ಶೀಲವಂತನೂ, ಸುಂದರನೂ, ಶಾಂತಿಯುತನೂ, ಹೊಗಳಲ್ಪಡುವ ಪರಾಕ್ರಮಶಾಲಿಯೂ

ಈಪರಿ ರಂಜಿಸುವುದ್ಭಟ
ಭೂಪನ ತೋಳ್‌ಬಲಮುಮೆನಿಸಿ ಕಣ್ಗೆಸೆದಿರ್ಪಂ।
ಶ್ರೀಪುಣ್ಯಾಕಾರಂ ಸ್ಮರ
ರೂಪಂ ಶಿವಭದ್ರನೆಂಬ ಸಚಿವವರೇಣ್ಯಂ ॥ ೧೦೩ ॥

ಮತ್ತಮಾಸಚಿವಶಿಖಾಮಣಿ ವೆರಸುತಖಿಳಸಂರಂಭೋಲ್ಬಣದೊಳುಂ ಬಂದಿರುತ ಪಟ್ಟಣಕ್ಕೆ ಮೂಲಸ್ಥಾನಮಪ್ಪ ನೀಲಕಂಠನಡಿದಾವರೆಗಳಂ ನಿಚ್ಚಂ ಭಕ್ತಿಯಿಂದರ್ಚಿಸುತ್ತಮನಂತಾರ್ಕತೇಜಃಪುಂಜಮ ನಡಂಗಿಸಿ ತೊಳತೊಳಗುವಾತ್ಮಜ್ಯೋತಿಯೊಳ್ಮನಮಂಲೀನಮಂ ಮಾಡಿ ನುಡಿಗೆಡೆಗುಡದವಿರಳಸೌಖ್ಯ ದೊಳೊಡೆವೆರದುದ್ಭಟಕ್ಷಿತೀಂದ್ರಚಂದ್ರಮನೆಸೆದೀರ್ಪಂ॥

ಅಂತುಮಲ್ಲದೆಯಂ,

ಮನದೊಳ್ಗಿರಿಶಧ್ಯಾನಂ
ತನಿನೋಟದೊಳೀಶಮೂರ್ತಿ ನಾಲಿಗೆಗೊನೆಯೊಳ್।
ಮನಸಿಜಹರಪದನುತಿತತಿ
ಮಿನುಗಲ್ನೆಗಳ್ದಿರ್ಪನುದ್ಭಟಕ್ಷಿತಿಪಾಲಂ ॥ ೧೦೪ ॥

ಇಂತೆಸೆವುದ್ಭಟೋರ್ವಿಪನ ಹೃತ್ಸರಸೀರುಹನಿರ್ಮಲಾಂಗಣಾ
ಭ್ಯಂತರಸಂಸ್ಥಿಭ್ರಮರ ಚಂದ್ರಕಲಾಂಚಿತಚಾರುಮೌಳಿ ನಿ।
ಶ್ಚಿಂತ ಸಮಸ್ತಲೋಕನುತ ಪಾವನಪಾದಪಯೋಜ ಪಾರ್ವತೀ
ಕಾಂತ ಕೃಪಾಂಬುರಾಶಿ ಸಲೆ ರಕ್ಷಿಪುದೆನ್ನನೆಯಲ್ಲಮಪ್ರಿಯಾ ॥ ೧೦೫ ॥

[ಆಗಿರುವನು] ಎನ್ನುವಂತೆ ಶೋಭಿಸಿರುವನು. ೧೦೩. ಈ ರೀತಿ ಶೋಭಿಸಿರುವ ಉದ್ಭಟಮಹಾರಾಜನ ತೋಳ್ಬಲವೆನ್ನುವಂತೆ ಪುಣ್ಯರೂಪನೂ, ಮನ್ಮಥಾಕಾರನೂ ಆದ ಶಿವಭದ್ರನೆಂಬ ಮಂತ್ರಿಶ್ರೇಷ್ಠನು ಕಣ್ಣಿಗೆ ಮಂಗಳವಾಗಿರುವನು. ವ॥ ಮತ್ತೆ, ಮಂತ್ರಿಗಳಲ್ಲಿ ತಲೆಮಣಿಯಂತಿರುವ ಶಿವಭದ್ರನೊಡಗೂಡಿ ಸಕಲಸಂಭ್ರಮಗಳಿಂದ ಪಟ್ಟಣಕ್ಕೆ ಮೂಲಸ್ಥಾನವಾದ ಶಿವಮಂದಿರಕ್ಕೆ ಬಂದಿರುತ್ತ ಶಿವನ ಪಾದಕಮಲಗಳನ್ನು ನಿತ್ಯವೂ ಭಕ್ತಿಯಿಂದ ಪೂಜಿಸುತ್ತ ಸೂರ್ಯನ ಅನಂತ ಪ್ರಭಾಪುಂಜವನ್ನು ಅಡಗಿಸಿ ತೊಳತೊಳಗುವ ಆತ್ಮಜ್ಯೋತಿಯಲ್ಲಿ ಮನಸ್ಸನ್ನು ಹೊಂದಿಸಿ ಮಾತಿಗೆ ಮೀರಿದ ಸುಖದಲ್ಲಿ ಮುಳುಗಿದ ಉದ್ಭಟ ಮಹಾರಾಜಚಂದ್ರಮನು ಶೋಭಿಸಿರುವನು. ವ॥ ಅಷ್ಟಲ್ಲದೆ, ೧೦೪. ಮನಸ್ಸಿನಲ್ಲಿ ಶಿವನ ಧ್ಯಾನ, ಶುದ್ಧ ನೋಟದಲ್ಲಿ ಶಿವನ ಮೂರುತಿ, ನಾಲಗೆಯ ತುದಿಯಲ್ಲಿ ಶಿವನ ಪಾದಗಳ ಸ್ತುತಿ ಪ್ರಕಾಶಿಸಿರಲು [ಹೀಗೆ] ಉದ್ಭಟಮಹಾರಾಜನು ಕಾರ್ಯಪ್ರವೃತ್ತನಾಗಿದ್ದನು. ೧೦೫. ಹೀಗೆ ಶೋಭಿಸುವ ಉದ್ಭಟ ಮಹಾರಾಜನ ಹೃದಯಕಮಲದ ಪರಿಶುದ್ಧವಾದ ಅಂಗಳದ ನಡುವೆ ಭದ್ರವಾದ ನೆಲೆಯಲ್ಲಿ ದುಂಬಿಯಾಗಿ, ಚಂದ್ರಕಲೆಯನ್ನು ಮನೋಹರವಾದ ಶಿರಸ್ಸಿನಲ್ಲಿ ಧಾರಣಮಾಡಿ, ಚಿಂತಾರಹಿತನಾಗಿ, ಸಕಲಲೋಕವೂ ಹೊಗಳುತ್ತಿರುವ ಪವಿತ್ರವಾದ ಪಾದಕಮಲಗಳನ್ನು ಹೊಂದಿರುವ ಪಾರ್ವತೀವಲ್ಲಭನ ಕೃಪಾಸಮುದ್ರವು ಅಲ್ಲಮಪ್ರಿಯನಾದ ತನ್ನನ್ನು ಚೆನ್ನಾಗಿ ರಕ್ಷಿಸಲಿ.

4

ಇದು ಸಮಸ್ತಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾತ
ಪಿಂಜರಿತಮಂಜುಳಮಯೂಖಮಂಜರೀರಂಜಿತ ಶ್ರೀಗುರುವಿರೂಪಾಕ್ಷಪಾವನ
ಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣ ಶ್ರೀಸೋಮರಾಜೇಂದ್ರ
ವಿರಚಿತಮಪ್ಪಶೃಂಗಾರಸಾರ ಮಹಾಪ್ರಬಂಧದೊಳ್
ನಾಯಕಾಭ್ಯುದಯಂ
ಮೊದಲನೆಯ ಆಶ್ವಾಸಂ ಮುಗಿದುದು.

ಇದು ಸಕಲದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ, [ಅವರ] ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತುರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಮೊದಲನೆಯ ಆಶ್ವಾಸವಾದ ನಾಯಕಾಭ್ಯುದಯವು ಮುಗಿದುದು.

# ಎರಡನೆಯ ಆಶ್ವಾಸಂ

ಸುರರಾಜಂಗೆ ವಿಭೂತಿಯಂ ದಶಶಿರಂ ಬೇಡಲ್ಕೆ ಚಂದ್ರಾಸಮಂ
ಕರಮಂ ಬಾಣನರರ್ಗೆ ಪಾಶುಪತಮಂ ಶ್ರೀಗೌರಿಗರ್ಧಾಂಗಮಂ
ಹರಿಗಿಂತೊಪ್ಪುವ ದುಗ್ಧವಾರ್ಧಿಯನದಂ ಬ್ರಹ್ಮಂಗೆ ವಾಗ್ದೇವಿಯಂ
ಪರಮಾನಂದದೊಳಿತ್ತ ರುದ್ರನೆಮಗೀಗಾನಂದಸಂದೋಹಮಂ ॥ ೧ ॥

ಶ್ರೀಕಂಠನ ರಾಜತ್ಪದ
ಕೋಕನದಧ್ಯಾನಶೀಲನುದ್ಭಟದೇವಂ।
ಲೋಕನುತಂ ಶಶಿಕುಲರ
ತ್ನಾಕರಮಂದಾರನೆಸೆದನತಿವೈಭವದಿಂ ॥ ೨ ॥

ಬೇಟಂ ಚಂದ್ರಕಲಾಪನೊಳ್ ಪ್ರಣಯಸಲ್ಲಾಪಂ ಮಹಾದೇವನೊಳ್
ನೋಟಂ ತ್ರ್ಯಂಬಕನೊಳ್ವಿಲಾಸತತಿ ನೀಲಗ್ರೀವನೊಳ್ ಕೂರ್ತ ಚೆ।
ಲ್ಲಾಟಂ ಶಂಕರನೊಳ್ಮನೋಮುದಮುಮಾಪ್ರಾಣೇಶನೊಳ್ ಶರ್ವನೊಳ್
ಕೂಟಂ ಬೆತ್ತಿರಲುದ್ಭಟಂ ಬಿಡದೆ ರಾರಾಜಿಪ್ಪನಾನಂದದಿಂ ॥ ೩ ॥

ತೊಳಪಭವಾಂಘ್ರಿಸಾರಸನಖಪ್ರಭೆಯುರ್ಬಿ ಮಡಲ್ತು ಚಂದ್ರಮಂ
ಡಳವನನಂತಮಂ ಪಟಿವ ನಿರ್ಮಳತೇಜದೊಳಂತರಂಗಮಂ।
ಬೆಳಗುವಪಾರಸಾರತರತನ್ನಿಜಸೌಖ್ಯದೊಳೊಂದಿ ಸಂತತೋ
ಜ್ವಳಮಯನಾಗಿ ಕಂಗೊಳಿಪನುದ್ಭಟಭೂಭುಜಪುಂಜಕುಂಜರಂ ॥ ೪ ॥

೧. ದೇವೇಂದ್ರನಿಗೆ ಸಂಪತ್ತನ್ನೂ, ರಾವಣನು ಬೇಡಲು ಚಂದ್ರಹಾಸ[ವೆನ್ನುವ ಕತ್ತಿ]ಯನ್ನೂ, ಬಾಣನಿಗೆ ಕೈಗಳನ್ನೂ, ಅರ್ಜುನನಿಗೆ ಪಾಶುಪತಾಸ್ತ್ರವನ್ನೂ, ಪಾರ್ವತಿಗೆ ಅರ್ಧ ದೇಹವನ್ನೂ, ವಿಷ್ಣುವಿಗೆ ಶೋಭಿಸುವ ಕ್ಷೀರಸಾಗರವನ್ನೂ, ಬ್ರಹ್ಮನಿಗೆ ಸರಸ್ವತಿಯನ್ನೂ ಅತ್ಯಾನಂದದಿಂದ ಅನುಗ್ರಹಿಸಿದ ಶಿವನು ನಮಗೆ ಆ ಆನಂದದ ಮೊತ್ತವನ್ನು ಕೊಡುವವನಾಗಲಿ. ೨. ಶಿವನ ಹೊಳೆಯುವ ಪಾದಕಮಲಗಳನ್ನು ಧ್ಯಾನಿಸುವ ಶೀಲವಂತನೂ, ಕೀರ್ತಿಶಾಲಿಯೂ, ಚಂದ್ರವಂಶವೆಂಬ ಸಾಗರಕ್ಕೆ ಕಲ್ಪವೃಕ್ಷನೂ ಆದ ಉದ್ಭಟದೇವನು ಹೆಚ್ಚಿನ ವೈಭವದಿಂದ ಮೆರೆದನು. ೩. ವಿರಹವು ಚಂದ್ರಧರನಲ್ಲಿ, ಪ್ರಣಯ ಸಲ್ಲಾಪವು ಮಹಾದೇವನಲ್ಲಿ, ನೋಟವು ಮುಕ್ಕಣ್ಣನಲ್ಲಿ, ವಿಲಾಸವು ನೀಲಕಂಠನಲ್ಲಿ, ಪ್ರೀತಿಯ ಚೆಲ್ಲಾಟಗಳು ಶಂಕರನಲ್ಲಿ, ಮನದಾನಂದವು ಪ್ರಾಣೇಶನಲ್ಲಿ, ರತಿಯು ಶಿವನಲ್ಲಿ ಹೊಂದಿರಲು ಉದ್ಭಟದೇವನು ಸದಾ ಆನಂದದಿಂದ ಶೋಭಾಯಮಾನನಾಗಿರುವನು. ೪. ಚಂದ್ರಮಂಡಲ ವನ್ನೂ, ಆಕಾಶವನ್ನೂ ಅವಹೇಳನ ಮಾಡುವ ಮಿರುಗುವಂತಹ ಶಿವನ ಪಾದಗಳ

ಚಿದಾಕಾರಲಿಂಗಾಂಘ್ರಿಯೊಳ್ಚೇತನಾಗ್ರಂ
ಸದಾನಂದದಿಂ ಬೆಚ್ಚಿರಲ್ಭಕ್ತಿಯಿಂದಂ।
ಮದಾನೀಕಮಂ ಮೆಟ್ಟಿ ಮಾಂಗಲ್ಯರೂಪಂ
ಮುದಂಬೆತ್ತು ಮೇಣುದ್ಭಟಂ ಕಂಗೊಳಿಪ್ಪಂ ॥ ೫ ॥

ಕರ್ಪೂರಜ್ಯೋತಿಯವೊಲ್
ದರ್ಪಕಸಂಕಾಶನುದ್ಭಟಕ್ಷಿತಿಪಾಲಂ।
ಸರ್ಪಾಭರಣಧ್ಯಾನದೊ
ಳಿರ್ಪಂ ನಾನಾವಿನೋದಗೋಷ್ಠಿಗಳಿಂದಂ ॥ ೬ ॥

ಇಂತೆಸೆವಖಿಳ ಕರಣಂಗಳೀಶ್ವರನುಪಕರಣಾನುವರ್ತನನುಂ ವರೇಣ್ಯ ಪುಣ್ಯಗಣ್ಯಮುರುಪುರಾತನಚರಿತ್ರ ವಿಚಿತ್ರಕಥಾರಸಪ್ರವಾಹಗಹನನುಂ ಪ್ರಣವಪಂಚಾಕ್ಷರೀಮಂತ್ರಾಮೃತಾಸ್ವಾದಿಮನೋಜ್ಞ ಜಿಹ್ವಾಂಕುರನುಂ ಸಮುದಂಚಿತಲಕ್ಷ್ಯಲಕ್ಷಣೋಪೇತನವೀನಗಾನವಿನೋದನುಂ ಮಂಜುಳಾಭಿನಯರಂಜಿತ ನರ್ತಕೀನರ್ತನಾವ ಲೋಕನನುಂ ಕರಿತುರಗದೆಖ್ಖಾಳಕೇಳೀವಿಳಾಸನುಂ ಎಂದಿನಂದದಿನೊಂದುದಿವಸಂ ಬಂದುದಯಾಚಳ ಚೂಡಮಂ ಸಾರ್ವಂಬುಜಮಿತ್ರನಂತುತ್ಫುಲ್ಲೋಲ್ಲಾಸದಿಂ ಮೆಲ್ಲನೆಟ್ಟಿಂದೊಪ್ಪುವ ಸಭಾಮಂಟಪಮಧ್ಯಸ್ಥಿತ ನವರತ್ನಖಚಿತಸಿಂಹಾಸನಮನಡರ್ದು ಸುಕವಿಜನಸ್ತೋತ್ರಪಾತ್ರಪವಿತ್ರಗಾತ್ರನುದ್ಭಟಕ್ಷಿತೀಂದ್ರಚಂದ್ರಮಂ ಪೇರೋಲಗಂ ಗೊಟ್ಟಿಸೆದಿರ್ದಂ॥

ಕಾಂತಿಪೂರ್ಣವಾದ ಉಗುರಿನ ಬೆಳಗು ಹಬ್ಬಿ ಹರಡಿ ಆ ನಿರ್ಮಲ ತೇಜದಿಂದ ಅಂತರಂಗವನ್ನು ಬೆಳಗುವ, ಅತಿಸಾರವತ್ತಾದ ಸುಖವನ್ನು ಪಡೆದು, ಸದಾ ಮಹಾರಾಜರುಗಳ ಸಮೂಹಕ್ಕೆ ಆನೆಯಂತೆ ಉದ್ಭಟನು ಪ್ರಕಾಶಯುಕ್ತನಾಗಿ ಶೋಭಿಸಿರುವನು. ೫. ಜ್ಞಾನರೂಪಿಯಾದ ಪರಶಿವನ ಪಾದಗಳಲ್ಲಿ ಮನದ ಮೊನೆಯನ್ನಿಟ್ಟು ಅದರಿಂದುಂಟಾದ ಆನಂದದಿಂದ ಸುತ್ತುವರಿಯಲ್ಪಟ್ಟು, ಅರಿಷಡ್ವರ್ಗಗಳನ್ನು ಗೆದ್ದು, ಮಂಗಳಾಂಗನಾಗಿ, ಸಂತೋಷಭರಿತನಾಗಿ ಉದ್ಭಟನು ಕಂಗೊಳಿಸುವನು. ೬. ಕರ್ಪೂರ ದುರಿಯಂತೆ ಮನ್ಮಥನಿಗೆ ಸಮಾನನಾದ ಉದ್ಭಟ ಮಹಾರಾಜನು ಸರ್ಪಗಳೇ ಆಭರಣಗಳಾದ ಶಿವನ ಧ್ಯಾನದಲ್ಲಿ, ನಾನಾ ವಿನೋದ ಗೋಷ್ಠಿಗಳಿಂದ ಕೂಡಿ ಇರುವನು. ವ॥ ಹೀಗೆ ಶೋಭಿಸುವ ಸಕಲೇಂದ್ರಿಯಗಳು ಶಿವನ ಸಾಧನಗಳಾಗಿ ಸೇವೆ ಸಲ್ಲಿಸುವವನೂ, ಶ್ರೇಷ್ಠರೂ ಗಣ್ಯರೂ ಹಿರಿಯ ಪುರಾತನರೂ ಆದವರ ವಿಚಿತ್ರ ಚರಿತ್ರ ಕಥಾ ರಸಪ್ರವಾಹದಲ್ಲಿ ಮಗ್ನನೂ, ಓಂಕಾರ ಹಾಗೂ ಪಂಚಾಕ್ಷರೀ ಮಂತ್ರಗಳೆನ್ನುವ ಅಮೃತವನ್ನು ಸವಿಯಲು ಮನೋಹರವಾದ ತುದಿ ನಾಲಗೆಯುಳ್ಳವನೂ, ಶ್ರೇಷ್ಠ ಲಕ್ಷ್ಯ ಲಕ್ಷಣಗಳಿಂದ ಕೂಡಿದ ನವೀನ ಗಾನ ವಿನೋದಗಳಲ್ಲಿ ಆಸಕ್ತನೂ, ಮಂಜುಳ ಅಭಿನಯದಿಂದ ರಂಜಿಸುವ ನರ್ತಕಿಯರ ನೃತ್ಯಗಳನ್ನು ನೋಡುವವನೂ, ಆನೆ ಕುದುರೆಗಳ ಸಂಭ್ರಮದಿಂದ ಕೂಡಿದ ಕ್ರೀಡೆಗಳಲ್ಲಿ ಆಸಕ್ತನಾದವನೂ ಆದ ಉದ್ಭಟ ಮಹಾರಾಜ ಚಂದ್ರಮನು ನಿತ್ಯದಂತೆ ಒಂದು ದಿನ ಉದಯಾಚಲದ ಶಿಖರವನ್ನು ಸಮೀಪಿಸುವ ಚಂದ್ರನಂತೆ ಉಲ್ಲಾಸದಿಂದ ಅರಳಿ ಮೆಲ್ಲನೆ ನಡೆದುಬಂದು ಶೋಭಾಯಮಾನವಾದ ಸಭಾಮಂಟಪದ ಮಧ್ಯದಲ್ಲಿನ ನವರತ್ನಗಳಿಂದ ಕೂಡಿದ ಸಿಂಹಾಸನವನ್ನೇರಿ ಸುಕವಿಗಳ ಸ್ತುತಿಗೆ ಪಾತ್ರನಾಗಿ

ಅದೆಂತೆಂದೊಡೆ,

ತಾರಾಸಂದೋಹಮಧ್ಯಾಮೃತ ಕಿರಣನವೋಲ್‌ಭೂರಿಭೂಮೀಂದ್ರಮಧ್ಯ
ಸ್ಫಾರಶ್ರೀಮೇರುವೋಲ್‌ನಿರ್ಮಳಮಣಿಗಣಮಧ್ಯಪ್ರಚಿಂತಾಸುರತ್ನಾ।
ಕಾರಂಬೊಲ್ಸರ್ವಧಾತ್ರೀವರರೆಡೆಯೊಳನಂಗಪ್ರತೀಕಾಶರೂಪಂ
ರಾರಾಜಿಪ್ಪೋಲಗಂಗೊಟ್ಟೆಸೆದನೊಲವಿನಿಂದುದ್ಭಟಕ್ಷೋಣಿಪಾಲಂ ॥ ೭ ॥

ಕಾಮನ ಕೆಳೆಯಂ ಚಂದ್ರಮ
ನಾಮೋದಂ ಬಡೆದು ಪಾರ್ಶ್ವದೊಳ್ಶೋಭಿಪವೋಲ್।
ಭೂಮಿಪನುದ್ಭಟವೀರಲ
ಲಾಮನ ಸನ್ನಿಧಿಯೊಳೊಪ್ಪಿದಂ ಶಿವಭದ್ರಂ ॥ ೮ ॥

ಪೊಂಜಾಮರಮುಱು' ತೊಳಪಾ[ಪ]
ರಂಜಿಯ ಬೀಸಣಿಗೆ ಗಿಂಡಿ ಹಡಪಂ ಮಣಿ ಕಾ।
ಳಾಂಜಿಯನಾಂತೆಸೆದರ್ ನೃಪ
ಕುಂಜರನಿರ್ವಕ್ಕದೊಳ್ವಿಲಂಬರ್ ಸತಿಯರ್ ॥ ೯ ॥

ಮೊಗದಾವರೆ ಯಿಕ್ಕೆಲದೊಳ
ಗಗಲದೆ ಸಂಚರಿಪ ರಾಜಹಂಸಂಗಳ ವೋಲ್।
ಮೃಗದೃಶೆಯರ್ಢಾಳಿಪ ಚೌ
ರಿಗಳುದ್ಭಟಭೂಮಿಪತಿಗದೇನೊಪ್ಪಿದುದೋ ॥ ೧೦ ॥

ಮತ್ತಮದಲ್ಲದೆ,

ಶಿವಭದ್ರಂ ಮೊದಲಾದ ಸ
ಚಿವರೆಡಬಲವಕ್ಕದೊಳ್ಮನಂಗೊಳಿಸೆ ತರು।
ಪ್ರವಹದೆಡೆಯೊಳ್ವಿಜೃಂಭಿಪ
ನವಮಂದಾರದ ವೊಲುದ್ಭಟಂ ರಂಜಿಸುಗುಂ ॥ ೧೧ ॥

ಒಡ್ಡೋಲಗಗೊಟ್ಟು ಮೆರೆದಿದ್ದನು. ಹೇಗೆಂದರೆ- ನಕ್ಷತ್ರಗಳ ಗುಂಪಿನ ನಡುವಣ ಚಂದ್ರನಂತೆ, ವಿಶಾಲವಾದ ಭೂಮಿಯ ನಡುವೆ ಹೊಳೆಯುವ ಮೇರುಗಿರಿಯಂತೆ, ನಿರ್ಮಲ ಮಣಿಗಳ ಮಧ್ಯೆ ಇರುವ ಚಿಂತಾಮಣಿಯಂತೆ ಸಕಲ ರಾಜರುಗಳ ನಡುವೆ ಮನ್ಮಥನಂತಿರುವ ಭೂಪಾಲ ಉದ್ಭಟದೇವನು ಪ್ರೀತಿಯಿಂದ ಓಲಗಗೊಟ್ಟು ಶೋಭಿಸಿದನು. ೮. ಕಾಮನ ಸ್ನೇಹವನ್ನೂ, ಚಂದ್ರನ ಆನಂದವನ್ನೂ ಹೊಂದಿ ಪಕ್ಕದಲ್ಲಿ ಶೋಭಿಸುವಂತೆ ವೀರರಲ್ಲಿ ತಿಲಕಪ್ರಾಯನಾದ ಉದ್ಭಟನ ಸಮೀಪದಲ್ಲಿ ಶಿವಭದ್ರನು ಶೋಭಿಸಿದನು. ೯. ಚಿನ್ನದ ಚಾಮರ, ಪ್ರಜ್ವಲಿಸುವ ಅಪರಂಜಿಯ ಬೀಸಣಿಗೆ, ಗಿಂಡಿ, ಸಂಚಿ, ಮಣಿಖಚಿತವಾದ ಪೀಕದಾನಿ ಇವುಗಳನ್ನು ಹಿಡಿದ ಹಲವರು ಸುಂದರಿಯರು ಮಹಾರಾಜನ ಎರಡೂ ಕಡೆಗಳಲ್ಲಿ ಶೋಭಿಸಿದರು. ೧೦. ಮುಖಕಮಲದ ಎರಡೂ ಪಾರ್ಶ್ವಗಳಲ್ಲಿ ಬಿಡದೆ ಚಲಿಸುವ ರಾಜಹಂಸಗಳಂತೆ ಹರಿಣಾಕ್ಷಿಯರು ಬೀಸುವ ಚೌರಿಗಳು ಉದ್ಭಟಭೂಪಾಲನಿಗೆ ಅದೇನು ಒಪ್ಪಿದುವೋ! ವ॥ ಅಷ್ಟೇ ಅಲ್ಲದೆ, ೧೧. ಶಿವಭದ್ರ ಮೊದಲಾದ ಮಂತ್ರಿಗಳು ಎಡಬಲ ಪಕ್ಕಗಳಲ್ಲಿ

ಎಡಬಲದೊಳ್ವಿವೇಕಯುತರಾದ ಸುಮಂತ್ರಿಗಳುರ್ವಕಜ್ಜಮಂ
ಕಡುನಯದಿಂದೆ ಬಿನ್ನವಿಸೆ ಸರ್ವನೃಪಾಲಕರಿತ್ತ ಕಪ್ಪಮಂ।
ಪಡೆವಳರೊಲ್ದು ಮುಂದಿರಿಸಿ ವೀರಭಟಾವಳಿ ಯಾಂತುಪಂಥಮಂ
ಘಡಣಿಸೆ ಪೆಂಪಿನೋಲಗಮನಿತ್ತೆಸೆದಂ ನೃಪರಾಜಕುಂಜರಂ ॥ ೧೨ ॥

ಚಿಂತಾರತ್ನಮನಾಂತ ಮೇರುವಿನ ವೋಲ್ ಪೀಯೂಷಮಂ ಪೆಂಪಿನಿಂ
ದಾಂತುದ್ಯನ್ನವಚಂದ್ರಮಂಡಲದ ವೋಲ್ಗೀರ್ವಾಣಭೂಜಾತಮಂ।
ತಾಂ ತಾಳ್ದೊಪ್ಪುವನವ್ಯನಂದನದವೋಲ್ಮೇಣುದ್ಭಟೋರ್ವೀಲಸ
ತ್ಕಾಂತಾಕಾಂತನನಾಂತು ತತ್ಸಭೆ ವಿರಾಜಿಕ್ಕುಂ ಸುಸಂರಂಭದಿಂ ॥ ೧೩ ॥

ದಂಡಾಧೀಶರ ಸಚಿವರ
ಮಂಡಳಿಕರ ಮಕುಟವರ್ಧನರ ಮನ್ನೆಯರು।
ದ್ದಂಡಪಟುಭಟರ ಶೂರರ
ತಂಡದಲಂಪಿಂದೆ ಸಭೆಯೆಸೆದುದವನಿಪನ ॥ ೧೪ ॥

ಜೋದರ ರಾವುತರ ಕರಂ
ಕಾದುವ ಕಲಿಗಳ ಸಮಸ್ತನೃಪಪುತ್ರರ ಕೂ।
ರ್ತೋದುವರ ವಿಶ್ವವಿದ್ಯಾ
ಬೋಧಕರಿಂದೊಪ್ಪಿತೋಲಗಂ ಭೂವರನಾ ॥ ೧೫ ॥

ನಾನಾದೇಶೇಶ್ವರರ
ಸ್ಥಾನದ ಪತಿಗಳ ಗಣಕರ ವೈದ್ಯರ ಬಲವ।
ದ್ಧ್ಯಾನಾಥರ ಜೋಯಿಸರ ವಿ
ತಾನದಿನೊಪ್ಪಿದುದು ಚಾರುಸಭೆ ಭೂಮಿಪನಾ ॥ ೧೬ ॥

ಮನಸ್ಸನ್ನು ಸೂರೆಗೊಂಡಿರಲು, ವೃಕ್ಷಗಳ ಸಮೂಹದಲ್ಲಿ ಮೆರೆದಿರುವ ಕಲ್ಪವೃಕ್ಷದಂತೆ ಉದ್ಭಟನು ಶೋಭಿಸುವನು. ೧೨. ಎಡಬಲಗಳಲ್ಲಿ ವಿವೇಕಸಂಪನ್ನರಾದ ಮಂತ್ರಿಗಳು ಒಪ್ಪುವ ಕಾರ್ಯಗಳನ್ನು ಅತಿವಿನಯದಿಂದ ವಿಜ್ಞಾಪಿಸಲು, ಸಕಲ ರಾಜರುಗಳಿತ್ತ ಕಪ್ಪಕಾಣಿಕೆಗಳನ್ನು ದಳವಾಯಿಗಳು ಪ್ರೀತಿಯಿಂದ ಮುಂದಿರಿಸಿರಲು, ವೀರ ಸೈನಿಕರ ಸಮೂಹವು ಪಂಥ ತೊಟ್ಟು ಒಟ್ಟುಗೂಡಿರಲು ನೃಪೋತ್ತಮನು ವೈಭವಯುತವಾದ ಒಡ್ಡೋಲಗವನ್ನಿತ್ತು ಶೋಭಿಸಿದನು. ೧೩. ಚಿಂತಾಮಣಿಯನ್ನು ಪಡೆದ ಮೇರುಪರ್ವತದಂತೆ, ಅಮೃತವನ್ನು ಹೊಂದಿರುವ ಹಿರಿಮೆಯನ್ನು ಪಡೆದ ಚಂದ್ರಮಂಡಲದಂತೆ, ಪ್ರಸಿದ್ಧ ಕಲ್ಪವೃಕ್ಷವನ್ನು ಹೊಂದಿರುವ ಮನೋಹರವಾದ ತೋಟದಂತೆ, ಹೊಳೆವ ಭೂಕಾಂತೆಯ ಒಡೆಯನಾದ ಉದ್ಭಟನನ್ನು ಹೊಂದಿ ಸಂಭ್ರಮದಿಂದ ಕೂಡಿರುವ ಆ ಒಡ್ಡೋಲಗವು ಶೋಭಿಸಿರುವುದು. ೧೪. ಸೈನ್ಯಾಧಿಕಾರಿಗಳ, ಮಂತ್ರಿಗಳ, ಮಾಂಡಲಿಕರ, ರಾಜರ, ಮನ್ನೆಯರ, ಅತಿಶಯ ಪರಾಕ್ರಮಿಗಳ, ಶೂರರ ತಂಡದ ವೈಭವದಿಂದ ಮಹಾರಾಜನ ಸಭೆಯು ಶೋಭಿಸಿತು. ೧೫. ಯೋಧರು, ಕುದುರೆ ಸವಾರರು, ಅತಿಶಯವಾಗಿ ಹೋರಾಡುವ ವೀರರು, ಸಕಲರಾಜ ಪುತ್ರರು, ಪ್ರೀತಿಪಟ್ಟು ಓದುವವರು, ವಿಶ್ವವಿದ್ಯೆಗಳನ್ನು ಬೋಧಿಸುವವರು - ಇವರುಗಳಿಂದ ಮಹಾರಾಜನ ಓಲಗವು ಶೋಭಿಸಿತು. ೧೬.ಅದಲ್ಲದೆ,

ಮತ್ತಮದಲ್ಲದಿರ್ಪಕ್ಕಂಗಳೊಳ್ ಚತುರಾಲಾಪಂಗಳಿಂದುತ್ತರಂಗೊಡುವ ವಿದ್ವಾಂಸರ ವಿತಾನಂಗಳಿಂ ಕಬ್ಬಿಗರೊಬ್ಬುಳಿಯಿಂ ಗಮಕಿಗಳ ಗಾಂಭೀರ್ಯದಿಂ ವಾದಿಗಳ ವಿನೋದದಿಂ ವಾಗ್ಮಿಗಳ ವಚೋವಿಳಾಸದಿಂ ಪಾಠಕರ ಸಘಾಟದಿಂ ನಚ್ಚಣಿಗರ ಬಿಚ್ಚಣಿಗೆಯಿಂ ಗಾಣರಗಮಕದಿಂ ವೀಣೆಗಾಱರ ವಿಭವದಿಂ ಕಾಮನ ಕೈದುಗಳ ಬಳಗದಂತೆ ಕಂಣ್ಗೊಳಿಪೆಳವೆಣ್ಗಳ ತಂಡದಿಂ ಇಂದ್ರನ ಸಭೆಗಿರ್ಮಡಿಯೆನಿಸಿ ಮಹೋನ್ನತವೈಭವ ಮನೊಳಕೊಂಡುದ್ಭಟರಾಜೇಂದ್ರಚಂದ್ರಮನೋಲಗಂ ವಿರಾಜಿಸುತ್ತಿರ್ದುದು.

ಅಂತುಮಲ್ಲದೆಯುಂ,

ಎಳವೆಣ್ಗಳ ಕಣ್ಬೆಳಗು
ಜ್ವಳಭಟರ ಕೃಪಾಣಲತೆಯ ತೊಳಪುಂ ವಿಬುಧಾ।
ವಳಿಯ ರದನಾಂಶು ಕುಡಿವರಿ
ದಳವಟ್ಟುಱೆ ಪರ್ವಿತಾಸಭಾಮಂದಿರಮಂ ॥ ೧೭ ॥

ಸೂಳೆಯರ ಲೋಚನಾಂಶು ಭ
ಟಾಳಿಯ ಕರಖಡ್ಗಲತೆಗಳೊಳ್ಮಾರ್ಪೊಳೆಯಲ್।
ಕಾಳಿಂದಿಯ ಪೊಸಕಿಱುದೆಱೆ
ಯೋಳಿಯೊಳೆಡೆವರಿವ ಮೀನ್ಗಳೆನೆ ಸೊಗಯಿಸುಗುಂ ॥ ೧೮ ॥

ನೃಪರ ಕಿರೀಟರತ್ನನಿಚಯಂ ಕಿಸುಸಂಜೆಯದಾಗೆ ಕಾಮಿನೀ
ಚಪಳವಿಲೋಚನಾಂಶುತತಿ ಚಂದ್ರಿಕೆಯಾಗೆ ಸಮಸ್ತಚಾರುವೀ।
ರಪರಿಲಸದ್ಭುಜಾರ್ಚಿತನವಾಕ್ಷತೆ ತಾರಗೆಯಾಗಲುದ್ಭಟೋ
ರ್ವಿಪನಮಲೇಂದುವಾಗಲೆಸೆದತ್ತುಱೆ ತತ್ಸಭೆ ರಾತ್ರಿಯೆಂಬವೋಲ್ ॥ ೧೯ ॥

ಎರಡೂ ಪಕ್ಕಗಳಲ್ಲಿ ಚತುರೋಕ್ತಿಗಳಿಂದ ಪ್ರತಿ ನುಡಿಯಾಡುವ ವಿದ್ವಾಂಸರ ಸಮೂಹದಿಂದ, ಕವಿಗಳ ಗುಂಪಿನಿಂದ, ಗಮಕಿಗಳ ಗಾಂಭೀರ್ಯದಿಂದ, ವಾದಿಗಳ ವಿನೋದದಿಂದ, ವಾಗ್ಮಿಗಳ ನುಡಿ ವಿಲಾಸದಿಂದ, ವಂಧಿಮಾಗಧರ ಹೆಚ್ಚಳದಿಂದ, ನರ್ತಕರ ವೈಶಾಲ್ಯದಿಂದ, ಹಾಡುಗಾರರ ರಾಗಬದ್ಧವಾದ ವಾಚನದಿಂದ, ವೈಣಿಕರ ಉತ್ಸಾಹದಿಂದ, ಮನ್ಮಥನ ಆಯುಧಗಳ ಮೊತ್ತದಂತೆ ಕಣ್ಣುಗಳನ್ನು ಸೆಳೆಯುವ ಎಳೆವಯಸ್ಸಿನ ಸುಂದರಿಯರ ಸಮೂಹದಿಂದ, ದೇವೇಂದ್ರನ ಸಭೆಗಿಂತ ಮಿಗಿಲು ಎನ್ನಿಸಿ ಮಹೋನ್ನತ ವೈಭವದಿಂದ ಕೂಡಿ ಉದ್ಭಟಮಹಾರಾಜನ ಓಲಗವು ಶೋಭಿಸುತ್ತಿದ್ದಿತು. ವ॥ ಅಷ್ಟಲ್ಲದೆ, ೧೭. ಎಳೆಯ ವಯಸ್ಸಿನ ಹೆಣ್ಣುಗಳ ಕಣ್ಣ ಕಾಂತಿ, ಪರಾಕ್ರಮಿಗಳಾದ ವೀರರ ಕತ್ತಿಯೆಂಬ ಬಳ್ಳಿಯ ಹೊಳಪು, ವಿದ್ವಾಂಸರ ಸಮೂಹದ ಹಲ್ಲುಗಳ ಬೆಳಗು ಆ ಸಭಾಮಂದಿರವನ್ನು ಸೇರಿ ಅತಿಶಯವಾಗಿ ಹಬ್ಬಿ ಹರಡಿತು. ೧೮. ವೇಶ್ಯೆಯರ ಕಣ್ಣ ಕಾಂತಿಯು ಯೋಧರ ಸಮೂಹದ ಕೈಕತ್ತಿಯೆಂಬ ಬಳ್ಳಿಗಳಲ್ಲಿ ಪ್ರತಿಬಿಂಬಿಸಲು ಅದು ಕಾಳಂದಿಯ ಹೊಸದಾದ ಪುಟ್ಟ ತೆರೆಗಳ ಸಾಲಿನಲ್ಲಿ ಓಡಾಡುವ ಮೀನುಗಳೊ ಎನ್ನುವಂತೆ ಅಂದವಾಗಿ ಕಾಣಿಸುವುದು. ೧೯. ರಾಜರ ಕಿರೀಟದ ರತ್ನಗಳ ಮೊತ್ತವು ಕೆಂಪು ಕವಿದ ಸಂಜೆಯಂತಿರಲು, ಕಾಮಿನಿಯರ ಚಂಚಲವಾದ ಕಣ್ಣುಗಳ ಕಾಂತಿಯ ಮೊತ್ತವು ಬೆಳುದಿಂಗಳಾಗಿರಲು, ಸಕಲ ಸುಂದರಾಂಗ ವೀರರ ಅರ್ಚನೆಗೊಂಡು ಹೊಳೆಯುವ ಭುಜದ ಅಕ್ಷತೆಗಳು ನಕ್ಷತ್ರವಾಗಿರಲು

ಗಣಿಕಾಲೋಲಾಕ್ಷಿಮೀನಾವಳಿಯಿನಖಿಳರಾಜನ್ಯರಾಜೀಢ್ಯಚೂಡಾ
ಮಣಿನಾನಾರತ್ನ ಜಾಲಂಗಳಿನತಿಭಟರುದ್ಯಲ್ಲಸನ್ಮಂಡಲಾಗ್ರೋ।
ಲ್ಬಣಾತೇಜಸ್ತುಂಗವೀಚೀಗಣದಿನೆಸೆದುದಂಬೋಧಿ ಯೆಂಬಂತೆವೋಲ್ಧಾ
ರಿಣಿರಾಟ್ಪಂಚಾನನಪ್ರೋದ್ಭಟನತುಳಸಭಾಮಂದಿರಂ ಪೆಂಪಿನಿಂದಂ ॥ ೨೦ ॥

ಮತ್ತಮಾಸಭೆಯೊಳ್,

ಕಾಣ್ಕೆಯನಿಕ್ಕು ಚೋಳ ಮಲೆಯಾಳ ತುಟಿಲ್ಗೊಳ್ಳು ಗೌಳ ವಾಕ್ಯಮಂ
ಮಾಣ್ಕೆಲಸಾರ್ಕಳಿಂಗ ಮಗಧಾಧಿಪ ಬಿನ್ನವಿಸೆಳ್ದು ರತ್ನಮಂ।
ಮೇಣ್ಕೊಡು ಸಿಂಹಳೇಶ ಯೆನುತಂ ಜಡಿವ ಪ್ರತಿಹಾರರಾವದಾ
ಜಾಣ್ಕಡುಪೆರ್ಚಿತುದ್ಭಟನ ಮಂಜುಳಮಾದ ಸಭಾಂತರಾಳದೊಳ್ ॥ ೨೧ ॥

ಇಂತನಂತಸಂರಂಭಮಂ ತಳೆದು ಮನಂಗೊಳಿಪ ತತ್ಸಭಾಮಂಟಪಮಧ್ಯಸ್ಥಿತಮಂಜುಳ ಮಣಿಖಚಿತ ಸಿಂಹಾಸನಾಸೀನನಾಗಿ ಸಮಸ್ತನೃಪಾಲಕೋಟೀರ ಕೋಟಿಸಂಘಷ್ಟ ವಿಶಿಷ್ಟಚರಣಪಲ್ಲವನುದ್ಭಟಕ್ಷಿತೀಂದ್ರ ಚಂದ್ರಮಂ ಪೇರೋಲಗಂಗೊಟ್ಟು ವಿರಾಜಿಸುತ್ತಿರಲಾಸಮಯದಲ್ಲಿ,

ವಿಲಸತ್ಕೃಷ್ಣಾಜಿನಂ ಕೆಂಜೆಡೆ ಲಲಿತವಿಭೂತಿತ್ರಿಪುಂಡ್ರಂ ಸಮಂತು
ಜ್ವಲರುದ್ರಾಕ್ಷಾಗ್ರಹಾರಂ ಮಿನುಪ ಕನಕಯಜ್ಞೋಪವೀತಂ ಮಹಾಮಂ
ಜುಲಮಾದುಚ್ಚುಭ್ರದಂತಂ ದರಹಸಿತಮುಖಾಂಭೋರುಹಂ ರಾಜಿಸಲ್ಮೇ
ಣ್ಣಲವಿಂದಂ ಬಂದನೊರ್ವಂ ಸುರುಚಿರಋಷಿಪುತ್ರಂ ಚಿದಂಚಚ್ಚರಿತ್ರಂ ॥ ೨೨ ॥

ಉದ್ಭಟಮಹಾರಾಜನು ಪೂರ್ಣಚಂದ್ರನಾಗಲು ಆ ಸಭೆಯು ರಾತ್ರಿಯೋಪಾದಿಯಲ್ಲಿ ಅತಿಶಯವಾಗಿ ಶೋಭಿಸುತ್ತಿತ್ತು. ೨೦. ವೇಶ್ಯೆಯರ ಚಂಚಲವಾದ ಕಣ್ಣುಗಳು ಮೀನುಗಳ ಮೊತ್ತವಾಗಿಯೂ, ಸಕಲ ರಾಜರುಗಳ ಸಮೂಹವು ಶಿರದಲ್ಲಿ ಧರಿಸಿದ ಆಭರಣಗಳು ನಾನಾ ರತ್ನಗಳ ಸಮೂಹವಾಗಿಯೂ, ಅಸಂಖ್ಯ ಯೋಧರು ಹೊಳೆವ ಸರ್ಪನ ಹೆಡೆಯಂತೆ ಉದ್ರಿಕ್ತವೂ ಕಾಂತಿಪೂರ್ಣವೂ ಆದ ತೆರೆಗಳಾಗಿಯೂ ಭೂಮಿಯ ಮೇಲಣ ಅರಸರುಗಳಿಗೆ ಸಿಂಹಪ್ರಾಯನಾದ ಉದ್ಭಟನ ಸಭಾಮಂದಿರವು ಸಮುದ್ರವೆನ್ನುವಂತೆಯೂ ವೈಭವದಿಂದ ಕೂಡಿ ಶೋಭಿಸಿದ್ದಿತು. ವ॥ ಮತ್ತೆ ಆ ಸಭೆಯಲ್ಲಿ, ೨೧. ಚೋಳನೆ ಕಾಣಿಕೆಯನ್ನು ಕೊಡು, ಮಲೆಯಾಳನೆ ವಂದನೆ ಸಲ್ಲಿಸು, ಗೌಳನೆ ಮಾತು ನಿಲ್ಲಿಸು, ಕಳಿಂಗನೆ ಪಕ್ಕಕ್ಕೆ ಸರಿ, ಮಗಧರಾಜನೆ ಬಿನ್ನವಿಸು, ಸಿಂಹಳೇಶನೆ ಮೇಲೆದ್ದು ರತ್ನವನ್ನು ಕೊಡು ಎನ್ನುತ್ತ ಗದರಿಸುವ ದ್ವಾರಪಾಲಕರ ಮಾತಿನ ಜಾಣ್ಮೆ ಉದ್ಭಟನ ಮಂಜುಳವಾದ ಸಭಾಮಧ್ಯದಲ್ಲಿ ಅಧಿಕವಾಯಿತು. ವ॥ ಹೀಗೆ ಅನಂತ ಉತ್ಸಾಹವನ್ನು ಹೊಂದಿ ಮನಸ್ಸನ್ನು ಸೆರೆಹಿಡಿದ ಆ ಸಭಾಮಂಟಪದ ಮಧ್ಯೆ ಇಡಲಾಗಿರುವ ಮನೋಹರ ಮಣಿಗಳಿಂದ ಕೂಡಿದ ಸಿಂಹಾಸನದಲ್ಲಿ ಸಕಲ ರಾಜರ ಕೋಟಿ ಸಂಖ್ಯೆಯ ಕಿರೀಟಗಳ ತಾಕಾಟದಿಂದ ವಿಶಿಷ್ಟ ಪಾದಪಲ್ಲವನಾದ ಉದ್ಭಟ ಮಹಾರಾಜನು ಒಡ್ಡೋಲಗಗೊಟ್ಟು ಶೋಭಿಸುತ್ತಿರಲು, ಆ ಸಮಯದಲ್ಲಿ, ೨೨. ಹೊಳೆಯುವ ಜಿಂಕೆಯ ಚರ್ಮ, ಕೆಂಜೆಡೆ, ಚೆಲುವಾದ ವಿಭೂತಿಯ ತ್ರಿಪುಂಡ್ರಗಳು, ಚೆನ್ನಾಗಿ ಹೊಳೆಯುವ ದಪ್ಪರುದ್ರಾಕ್ಷಿಗಳ ಮಾಲೆ, ಮಿನುಗುವ ಚಿನ್ನದ

ಉಚ್ಚಾಸನಮಂ ಕೊಟ್ಟಮ
ದುರ್ಚಛ್ವವದಿಂದರ್ಘ್ಯಪಾದ್ಯಮಂ ವಿರಚಿಸಿ ಭಾ।
ಸ್ವಚ್ಚರಿತಂ ಬೆಸಗೊಂಡಂ
ಸಚ್ಚಿನ್ಮತಿಯಿಂ ತದೀಯಋಷಿನಂದನನಂ ॥ ೨೩ ॥

ಆವುದು ತಾಣಮೇಂ ಕಥನದಿಂ ನಡೆತಂದಿರಿಯುರ್ವಕಜ್ಜಮಂ
ತಾವುದು ಪೇಟ್‌ಮಾಟ್ಪೆನೆನಲಿರ್ಪುದು ಪಂಪೆ ಮದೀಯದೇಶಿಕಂ।
ದೇವಲನೆಂಬವರ್ವಿರಚಿಪಧ್ವರಮಂ ಕಿಡಿಪಂ ನಿಘರ್ಜನೆಂ
ಬಾವಿಬುಧಾರಿಗಳ್ಕಿ ಗುರು ಪೋಗೆನೆ ಬಂದೆವು ಕೇಳ್ನರಾಧಿಪಾ ॥ ೨೪ ॥

ಧಾತ್ರಿಯೊಳುದ್ಭಟನಿಂದಂ
ಕ್ಷತ್ರಿಯರೊಳ್ ಶ್ರೇಷ್ಠನಾತನೆಮ್ಮಧ್ವರಮಂ।
ನೇತ್ರತ್ರಯಂಗೆ ಸಲಿಸ
ಲ್ಪಾತ್ರನೆನಲ್ಕೇಳ್ದು ಬಂದೆವವನೀಪಾಲಾ ॥ ೨೫ ॥

ಧರಣೀಸುರರಂ ವಿಮಲಾ
ಧ್ವರಮಂ ಸಜ್ಜನರನಮರ್ದಗೋವುಗಳಂ ಭೂ।
ವರರೊಲ್ದು ರಕ್ಷಿಸದೊಡಾ
ರ್ಪೊರೆವವರುಸಿರವಿಳಧರ್ಮವಾರಿಧಿತೀರಾ ॥ ೨೬ ॥

ಯಜ್ಞೋಪವೀತ, ಮನೋಹರವಾದ ಬಿಳಿಯ ಹಲ್ಲುಗಳು, ಮಂದಹಾಸದಿಂದ ಕೂಡಿದ ಮುಖಕಮಲ - ಇವು ಶೋಭಿಸಿರಲು ಜ್ಞಾನಿಯೂ ಸಚ್ಚಾರಿತ್ರನೂ ಅತಿಮನೋಹರನೂ ಆದ ಋಷಿಕುಮಾರನೊಬ್ಬನು ಸಂತೋಷದಿಂದ ಕೂಡಿ [ಆ ಸಭೆಗೆ] ಬಂದನು. ವ॥ ಹೀಗೆ ಆ ಸಂದರ್ಭದಲ್ಲಿ ಬಂದ ಋಷಿಕುಮಾರನನ್ನು ನೋಡಿ ಆಶ್ಚರ್ಯ ಹಾಗೂ ಸಂತೋಷಗಳಿಂದ ಕೂಡಿ ಉಬ್ಬಿ ಎದುರುಬಂದು ನಮಸ್ಕರಿಸಿ ಅವನ ಆಶೀರ್ವಾದವನ್ನು ಸ್ವೀಕರಿಸಿ ಪ್ರೀತಿಯಿಂದ ಅವನನ್ನು ಕರೆದುತಂದು ಸಿಂಹಾಸನದ ಮೇಲೆ ಕುಳ್ಳಿರಿಸಿ ಅತಿಶಯವಾದ ಭಕ್ತಿರಸಾಮೃತ ಸಮುದ್ರದಲ್ಲಿ ಮೂಡಿ ಮುಳುಗಾಡುತ್ತ ಉದ್ಭಟ ಮಹಾರಾಜ ಚಂದ್ರಮನು ಮತ್ತೆ, ೨೩. ಎತ್ತರವಾದ ಪೀಠವನ್ನು ಕೊಟ್ಟು ಉತ್ಸಾಹದಿಂದ ಕೂಡಿ ಅರ್ಘ್ಯಪಾದ್ಯಗಳನ್ನು ಅಣಿಮಾಡಿ ಪರಿಶುದ್ಧ ಚರಿತನಾದ ಉದ್ಭಟನು ಸದ್ಭಾವನೆಯಿಂದ ಆ ಋಷಿಕುಮಾರನನ್ನು [ಹೀಗೆ] ಪ್ರಶ್ನಿಸಿದನು. ೨೪. [ತಮ್ಮ] ಸ್ಥಳವಾವುದು? ಏನು ಕಾರಣ ಬಂದಿರಿ? ವಿಶೇಷ ಕಾರ್ಯವಾವುದು? ತಿಳಿಸಿದ್ದಾದರೆ [ನನ್ನಿಂದಾಗುವುದನ್ನು] ಮಾಡುವೆನು ಎನ್ನಲು [ಅದಕ್ಕೆ ಆ ಋಷಿಕುಮಾರನು] ಮಹಾರಾಜನೇ ಕೇಳು, ನಮ್ಮ ವಾಸಸ್ಥಾನ ಹಂಪೆ, ನಮ್ಮ ಗುರು ದೇವಲ ಎನ್ನುವವರು ಮಾಡುವ ಯಜ್ಞವನ್ನು ನಿಘರ್ಜನೆಂಬ ಬ್ರಾಹ್ಮಣವೈರಿಯು ಕೆಡಿಸುತ್ತಿರುವನು. ಅವನಿಗೆ ಹೆದರಿದ ನಮ್ಮ ಗುರುಗಳು [ನಿನ್ನಲ್ಲಿಗೆ] ಹೋಗೆನ್ನಲು ನಾವು ಬಂದೆವು. ೨೫. ಮಹಾರಾಜಾ, ಭೂಮಂಡಲದಲ್ಲಿಂದು ಉದ್ಭಟನು ಕ್ಷತ್ರಿಯರಲ್ಲಿ ಶ್ರೇಷ್ಠನಾಗಿರುವನು. ಆತನು ನಮ್ಮ ಯಜ್ಞವನ್ನು ಮೂರುಕಣ್ಣುಳ್ಳ ಶಿವನಿಗೆ ಸಲ್ಲಿಸಲು ಯೋಗ್ಯನು ಎನ್ನಲು [ಅದನ್ನು] ಕೇಳಿದ ನಾವು [ನಿನ್ನಲ್ಲಿಗೆ] ಬಂದೆವು. ೨೬. ಬ್ರಾಹ್ಮಣರನ್ನು, ಪವಿತ್ರವಾದ ಯಜ್ಞವನ್ನು, ಸಜ್ಜನರನ್ನು, ಜೊತೆಯಿರುವ

ಎನೆ ಕೇಳ್ದುದ್ಭಟಭೂಮಿಪಾಲಕಮೃಗೇಂದ್ರಂ ನೋಡಿ ಸಂತೋಷದಿಂ
ಮುನಿನಾಥೋತ್ತಮ ಪೇಳ್ದ ತಕ್ಕುಚಿತಕಾರ್ಯಾಳಾಪಮಂ ಮಾಳ್ಪೆನೆಂ।
ದೆನೆ ನೀಂ ಪಂಪೆಗೆ ಬಂದು ಮದ್ಗುರುವಿನುದ್ಯದ್ಯಾಗಮಂ ನುರ್ಗುವಾ
ದನುಜಾಧೀಶನನೊಲ್ದು ತೀರ್ಚಿ ಮಖಮಂ ರಕ್ಷಿಪ್ಪುದುರ್ವೀಧವಾ ॥ ೨೭ ॥

ಎಂದಿಂತು ಋಷಿಕುಮಾರನುಚ್ಚವಂಬಟ್ಟು ಒರೆದುಚಿತಾಲಾಪಮಂ ಕೇಳ್ದಾನುಡಿಯಂ ಕೈಕೊಂಡು ಪುಣ್ಯಂ ಪುರುಷಾರ್ಥಮೆರಡುಂ ಸಮನಿಸಿತ್ತೆನಗೆಂದುರ್ಬಿ ಮುಕುಳಿತಕರಸರೋಜನಾಗಿ ಯಾಗಹತಿಗೆ ಬಂದದನುಜನಂ ತೀರ್ಚಿ ತನ್ಮುನೀಶ್ವರನ ಯಾಗಸಂರಕ್ಷಣಮಂ ಮಾಳ್ಪೆನೆಂದಾವರ್ಣವರೇಣ್ಯನನುಪಚರಿಸಿ ಬೀಳ್ಕೊಟ್ಟೋಲಗಮಂ ಪರೆಯವೇಳ್ದು ಅಮಾತ್ಯನಂ ಕರೆದವಿಳಸೇನೆಯಂ ನೆಱಪೆಂದುಸಿರ್ದು ಕಳುಪಿ ಯಂತಃಪುರಮಂ ಪೊಕ್ಕುದ್ಭಟಕ್ಷಿತೀಂದ್ರಚಂದ್ರಮಂ ಚಂದ್ರಶೇಖರಧ್ಯಾನಾನುಸಂಧಾನದಿಂದಮಿರೆಯಿರೆ,

ಅವನಿಪನಂ ಬೀಳ್ಕೊಂಡಾ
ಶಿವಭದ್ರಂ ಬಂದು ಸಕಲಸೇನೆಯನೆಲ್ಲಂ।
ತವೆ ನೆಱಪಿದ ತತ್ಸಮಯದೊ
ಳವಿರಳನಯನುದ್ಭಟಾಂಕನುಱು ಪೊಱಮಟ್ಟಂ ॥ ೨೮ ॥

ಮಂಗಳಪಾಠಕರವ ವಾ
ದ್ಯಂಗಳ ರವಮಖಿಳಕಂಚುಕಿಗಳ ನಿನಾದಂ।
ಪೊಂಗೆ ನಡೆತಂದು ಮದಮಾ
ತಂಗಮನಡರ್ದೆಸೆದನುದ್ಭಟಕ್ಷಿತಿಪಾಲಂ ॥ ೨೯ ॥

ಗೋವುಗಳನ್ನು ಭೂಪಾಲರು ಪ್ರೀತಿಯಿಂದ ರಕ್ಷಿಸದಿದ್ದಲ್ಲಿ ಮತ್ತಾರು ರಕ್ಷಿಸುವರು? ಧರ್ಮವೆಂಬ ಸಾಗರಕ್ಕೆ ದಡದಂತಿರುವ ಮಹಾರಾಜನೇ, ಹೇಳು. ೨೭. ಹೀಗೆನ್ನಲು, ಕೇಳಿದ ಉದ್ಭಟಮಹಾರಾಜಸಿಂಹನು ಋಷಿಕುಮಾರನನ್ನು ನೋಡಿ ಸಂತೋಷದಿಂದ "ಮುನಿನಾಥೋತ್ತಮರೇ, ನೀವು ಹೇಳಿದ ಯೋಗ್ಯವೂ ಉಚಿತವೂ ಆದ ಕಾರ್ಯವನ್ನು ಮಾಡುವೆನು" ಎಂದನು. [ಋಷಿಕುಮಾರನು ಮತ್ತೆ ರಾಜನನ್ನು ಕುರಿತು] ಭೂಕಾಂತನೆ, ನೀನು ಹಂಪೆಗೆ ಬಂದು ನಮ್ಮ ಗುರುಗಳ ಶ್ರೇಷ್ಠವಾದ ಆ ಯಜ್ಞವನ್ನು ಕೆಡಿಸುವ ರಾಕ್ಷಸನನ್ನು ಸಂತೋಷದಿಂದ ಕೊಂದು ಯಾಗವನ್ನು ರಕ್ಷಿಸುವುದು. ವ॥ ಹೀಗೆ ಋಷಿಕುಮಾರನು ಸಂಭ್ರಮದಿಂದ ಹೇಳಿದ ಉಚಿತವಾದ ಮಾತುಗಳನ್ನು ಕೇಳಿ, ಆ ಮಾತನ್ನು ಸ್ವೀಕರಿಸಿ, ಪುಣ್ಯ-ಪುರುಷಾರ್ಥಗಳೆರಡೂ [ನನಗೆ] ಲಭಿಸಿದುವು ಎಂದು ಉಬ್ಬಿ ಕರಕಮಲಗಳನ್ನು ಮುಗಿದು ನಮಸ್ಕರಿಸಿ ಯಾಗವನ್ನು ಕೆಡಿಸಲು ಬರುವ ರಾಕ್ಷಸನನ್ನು ಕೊಂದು ಆ [ನಿಮ್ಮ] ಮುನೀಶ್ವರನ ಯಾಗಸಂರಕ್ಷಣೆಯನ್ನು ಮಾಡುವೆನೆಂದು ಆ ತಾಪಸಶ್ರೇಷ್ಠನನ್ನು ಉಪಚರಿಸಿ ಬೀಳ್ಕೊಟ್ಟು, ಓಲಗವನ್ನು ಚದುರಲು ಹೇಳಿ, ಮಂತ್ರಿಯನ್ನು ಕರೆದು ಸಕಲ ಸೈನ್ಯವನ್ನು ಸಜ್ಜುಗೊಳಿಸಲು ತಿಳಿಸಿ [ಋಷಿಕುಮಾರನನ್ನು] ಕಳುಹಿಸಿ, ಅಂತಃಪುರವನ್ನು ಪ್ರವೇಶಿಸಿದ ಉದ್ಭಟಮಹಾರಾಜಚಂದ್ರಮನು ಚಂದ್ರನನ್ನು ಧರಿಸಿರುವ ಶಿವನ ಧ್ಯಾನ - ಅನುಸಂಧಾನಗಳನ್ನು ಮಾಡುತ್ತಲಿರಲು, ೨೮. ಮಹಾರಾಜನಿಂದ ಅಪ್ಪಣೆಯನ್ನು ಪಡೆದು ಹೊರಟ ಆ ಶಿವಭದ್ರನು ಬಂದು ಸಕಲ ಸೈನ್ಯವನ್ನೆಲ್ಲ ಚೆನ್ನಾಗಿ ಸಜ್ಜುಗೊಳಿಸಿದ ಆ ಸಮಯದಲ್ಲಿ ನಯವನ್ನು ಬಿಡದ ಪ್ರಸಿದ್ಧನಾದ ಉದ್ಭಟನು ಸನ್ನದ್ಧನಾಗಿ ಹೊರಟನು. ೨೯. ಸ್ತುತಿಪಾಠಕರ

ಶತಮುಖನುಜ್ವಳಿಪೈರಾ
ವತಮಮಂ ಮಿಗೆ ಬೆಂಗೆ ಪಾಯ್ದು ಬರ್ಪಂತೆ ಮಹೋ।
ನ್ನತವಿಭವದಿನುದ್ಭಟಭೂ
ಪತಿ ಪೂಜಾಗಜಮನಡರ್ದು ಮೆಲ್ಲನೆ ತಳರ್ದಂ ॥ ೩೦ ॥

ನೀಲಾಭ್ರಾಗ್ರದೆ ಚಂದ್ರಸಂಭವಮಯೂಖಾನೀಕಮತ್ಯುಲ್ಲಸ
ಚ್ಛ್ರೀಲಾವಣ್ಯಮನೀಯುತುಂ ಪರಿವಪ್ಪೊಲ್ದಂತಾವಳಾರೂಢಭೂ।
ಪಾಲಂಗಿಕ್ಕುವ ಚಾಮರದ್ವಿತಯಮಾಸ್ಯಾಂಭೋಜದಿರ್ಪಕ್ಕದೊಳ್
ಲೋಲತ್ವಂಬಡೆದಿರ್ದುವಂಚಿತಸಮುದ್ಯಚ್ಛೋಭೆಯಂ ಬೀಱುತುಂ ॥ ೩೧ ॥

ಚಿಮ್ಮುವಚಾಮರಂಗಳಮರ್ದೆತ್ತಿದ ಬೆಳ್ಗೊಡೆಗಳ್ಚಲತ್ಪತಾ
ಕಂ ಮಿಸುಪಿರ್ಕೆಗಲಂಗಳೊಳಪಾರವಿಳಾಸದಿನೈದೆ ಬರ್ಪ ಘೋ।
ಟಂ ಮದದಂತಿ ವಿಕ್ರಮಭಟಾವಳಿ ರಾಜಕುಮಾರರೇಳ್ಗೆಯಿಂ
ದಂ ಮದನಾಭನುದ್ಭಟಮಹೀಧವನೊಯ್ಯನೆ ಬಂದನೊಲ್ಮೆಯಿಂ ॥ ೩೨ ॥

ಉತ್ತರದಯನಮನರ್ಕಂ
ಮತ್ತಂ ಮಾಣ್ದಂದು ದಕ್ಷಿಣಾಯನನಾದಂ
ತುತ್ತಮನುದ್ಭಟಭೂಮಿಪ
ನುತ್ತರದಿಂ ಕೂರ್ತು ತೆಂಕಲಭಿಮುಖನಾದಂ ॥ ೩೩ ॥

ದನಿ, ಮಂಗಳವಾದ್ಯಗಳ ಮೊಳಗು, ಅಂತಃಪುರದ ಎಲ್ಲ ಸೇವಕರ ಜಯಧ್ವನಿ ಹರಡಲು [ಅವುಗಳ ನಡುವೆ ನಡೆದು] ಬಂದು ಮದ್ದಾನೆಯನ್ನು ಏರಿದ ಉದ್ಭಟ ಮಹಾರಾಜನು ಶೋಭಿಸಿದನು. ೩೦. ದೇವೇಂದ್ರನ ಹೊಳೆವ ಐರಾವತವನ್ನು ಚೆನ್ನಾಗಿ ಹಿಂದೆ ಸರಿಸಿ ಬರುವಂತೆ ಅತಿಶಯವಾದ ವೈಭವದಿಂದ ಉದ್ಭಟಭೂಪತಿಯು ಪೂಜೆಗೊಂಡ ಪಟ್ಟದಾನೆಯನ್ನು ಏರಿ ಮೆಲ್ಲ ಮೆಲ್ಲನೆ ನಡೆದನು. ೩೧. ನೀಲ ಆಗಸದ ಅಗ್ರಭಾಗದಲ್ಲಿ ಚಂದ್ರನಿಂದುಂಟಾದ ಬೆಳಗಿನ ಮೊತ್ತವು ಹೆಚ್ಚಿನ ಉಲ್ಲಾಸವನ್ನೂ, ಮಿಗಿಲಾದ ಸೊಗಸನ್ನೂ ನೀಡುತ್ತ ಹರಡುವಂತೆ ಹಲ್ಲುಗಳ ಸಾಲು ಹಾಗೂ ಮೇಲೆತ್ತಿ ಬೀಸುವ ಚಾಮರಗಳೆರಡೂ ಮುಖಕಮಲದ ಎರಡೂ ಪಕ್ಕದಲ್ಲಿ ಸುಂದರವಾದ ಚಂದ್ರನ ಶೋಭೆಯನ್ನು ಪ್ರಕಟಿಸುತ್ತಾ ಚಾಂಚಲ್ಯವನ್ನು ಪಡೆದಿದ್ದುವು. ೩೨. ಅಲೆದಾಡುವ ಚಾಮರಗಳು, ಮೇಲೆತ್ತಿ ಹಿಡಿದ ಬೆಳ್ಳನೆಯ ಕೊಡೆಗಳು; ಹಾರಾಡುವ ಬಾವುಟಗಳು, ಕಾಂತಿ ಬೀರುತ್ತಾ ಎರಡೂ ಪಕ್ಕಗಳಲ್ಲಿ ಅಪಾರ ಸೌಂದರ್ಯದಿಂದ ಚೆನ್ನಾಗಿ ಶೋಭಿಸಿ ಬರುತ್ತಿರುವ ಕುದುರೆ ಮದ್ದಾನೆ ಸಾಹಸೀ ಸೈನಿಕರ ಸಮೂಹ, ರಾಜಕುಮಾರರ ಉನ್ನತಿಕೆ-ಇವುಗಳಿಂದ [ಕೂಡಿ] ಮದನವಿಜಯಿ-ಯಾದ ಉದ್ಭಟಮಹಾರಾಜನು ಮೆಲ್ಲನೆ ಪ್ರೀತಿಯಿಂದ ಬಂದನು. ೩೩. ಉತ್ತರದಿಂದ [ದಕ್ಷಿಣಕ್ಕೆ] ಹೊರಟ ಸೂರ್ಯನು [ಉತ್ತರವನ್ನು] ತ್ಯಜಿಸಿ ದಕ್ಷಿಣದತ್ತ ನಡೆಯುವಂತೆ

ಇಂತನಂತವೈಭವದಿಂ ದಕ್ಷಿಣಾಭಿಮುಖನಾಗಿ ಯಖಿಳದೇಶಂಗಳಂ ಸಮಸ್ತತೀರ್ಥಂಗಳಂ ಸಕಲದೇವಾಗಾರಂಗಳಂ ನಾನಾಪರ್ವತಂಗಳಂ ವಿವಿಧಗ್ರಾಮಂಗಳಂ ಪಟ್ಟಣಂಗಳಂ ಖೇಡಂಗಳಂ ಖರ್ವಟಂಗಳಂ ದಾಂಟಿ ಪಲವುಪಯಣಗತಿಯಿಂ ಬರೆವರೆ ಮುಂದೆ ಧರಿತ್ರಿಗೆ ಪರಮಪವಿತ್ರೆಯಪ್ಪ ರೇವಾನದೀತೀರದೊಳೋಂಕಾರೇಶ್ವರನಾಲಯಂ ಕಾಣಿಸಲಾನೆಯಿಂದಿೞಿತಂದಾದೇಗುಲಮಂ ಪೊಕ್ಕು ಓಂಕಾರೇಶ್ವರನಂ ಕಂಡಭಿವಂದಿಸಿ ಮಗುೞ್ದೆೞ್ದು ಅತಿಭಕ್ತಿಯುತಾಂತಃಕರಣನುದ್ಭಟರಾಜೇಂದ್ರಚಂದ್ರಂ ಕೈಮುಗಿದುಕೊಂಡು ಸ್ತೋತ್ರವಂ ಮಾಡಲುದ್ಯುಕ್ತನಾಗಿ,

ಜಯ ಜಯ ಶಿವಾರಮಣ
ಜಯ ಜಯ ನಿರಾವರಣ।
ಜಯ ಜಯ ಶಶಾಂಕಧರ
ಜಯ ಜಯ ಕೃಪಾಬ್ಧಿ ॥ ೩೪ ॥

ಜಯ ಜಯ ಜಗದ್ಭರಿತ
ಜಯ ಜಯ ಹರಿಪ್ರಣುತ।
ಜಯ ಜಯ ವಿಯಚ್ಚಿಕುರ
ಜಯ ಜಯ ಜಿತಾಕ್ಷ ॥ ೩೫ ॥

ಜಯ ಜಯ ಪಿನಾಕಕರ
ಜಯ ಜಯ ಪುರಪ್ರಹರ।
ಜಯ ಜಯ ಮಹಾಮಹಿಮ
ಜಯ ಜಯ ಚಿದಾತ್ಮ ॥ ೩೬ ॥

ಉತ್ತಮನಾದ ಉದ್ಭಟ ಮಹಾರಾಜನು ಪ್ರೀತಿಪಟ್ಟು ಉತ್ತರದಿಂದ ದಕ್ಷಿಣದತ್ತ ಮುಖಮಾಡಿದನು. ವ॥ ಹೀಗೆ ಅನಂತ ವೈಭವದಿಂದ ದಕ್ಷಿಣದತ್ತ ಮುಖಮಾಡಿ ಸಕಲ ದೇಶಗಳನ್ನು, ಸಮಸ್ತ ತೀರ್ಥಕ್ಷೇತ್ರಗಳನ್ನು, ಸರ್ವ ದೇವಾಲಯಗಳನ್ನು, ನಾನಾ ಪರ್ವತಗಳನ್ನು, ವಿವಿಧ ಗ್ರಾಮಗಳನ್ನು, ಪಟ್ಟಣಗಳನ್ನು, ಜಲ ಮುಂತಾದವುಗಳಿಂದ ಸಮೃದ್ಧಿಯಾಗಿರುವ ಗ್ರಾಮಗಳನ್ನು, ಎರಡು ನೂರು ಗ್ರಾಮಗಳ ಕೇಂದ್ರಗಳನ್ನು ದಾಟಿ ಹಲವು ದಿವಸಗಳ ಪ್ರಯಾಣ ಮಾಡಿ ಬರುತ್ತಿರಲು ಮುಂದೆ ಭುವಿಗೆ ಪರಮ ಪವಿತ್ರೆಯಾದ ರೇವಾನದಿಯ ತೀರದಲ್ಲಿದ್ದ ಓಂಕಾರೇಶ್ವರನ ಆಲಯ ಕಾಣಿಸಲು ಆನೆಯಿಂದ ಇಳಿದುಬಂದು ಆ ದೇಗುಲವನ್ನು ಪ್ರವೇಶಿಸಿ, ಓಂಕಾರೇಶ್ವರನನ್ನು ಕಂಡು ಅಡ್ಡಬಿದ್ದು ಮತ್ತೆ ಮೇಲೆದ್ದು ಅತಿಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾದ ಉದ್ಭಟ ರಾಜೇಂದ್ರಚಂದ್ರಮನು ಕೈಮುಗಿದು ಸ್ತೋತ್ರವನ್ನು ಮಾಡಲು ತೊಡಗಿ, ೩೪. ಲೋಕದೊಡೆಯನಾದ ಶಿವನೆ ಜಯ ಜಯ, ಚಂದ್ರಧರನೆ ಜಯ ಜಯ, ಕೃಪಾಸಮುದ್ರನೆ ಜಯ ಜಯ, ೩೫. ಲೋಕವನ್ನೆಲ್ಲಾ ವ್ಯಾಪಿಸಿರುವವನೆ ಜಯ ಜಯ, ವಿಷ್ಣುವಂದಿತನೆ ಜಯ ಜಯ, ಮುಡಿಯಲ್ಲಿ ಗಂಗೆಯನ್ನು ಧರಿಸಿರುವವನೆ ಜಯ ಜಯ, ನಾಗಗಳನ್ನು ಒಲಿಸಿ ಅವನ್ನು ಆಭರಣವಾಗುಳ್ಳವನೆ ಜಯ ಜಯ. ೩೬. ತ್ರಿಶೂಲವನ್ನು ಕೈಯಲ್ಲಿ ಹಿಡಿದಿರುವವನೇ ಜಯ ಜಯ, ತ್ರಿಪುರ ಸಂಹಾರನೆ

ಜಯ ಜಯ ಸಮಸ್ತಗತ
ಜಯ ಜಯ ಗಣೇಶಪಿತ।
ಜಯ ಜಯ ಸುಪಂಚಮುಖ
ಜಯ ಜಯ ಮಹೇಶ ॥ ೩೭ ॥

ಅಚಲಾತ್ಮಕ ಶೈಲಸುತಾನನಚಂ
ದ್ರಚಕೋರ ನಿರಾಮಯ ನಿರ್ಮಳ ಶ।
ಕ್ರಚತುರ್ಮೂವಂದಿತ ಬಾಲಸುಧಾ
ರುಚಿಶೇಖರ ಶಂಕರ ಶಾಂತ ನಮೋ ॥ ೩೮ ॥

ಹಾಟಕಶೈಲಮನೋಹರಚಾಪಾ
ಜೂಟವಿಲಾಸಿತಚಂದ್ರಕಲಾಪಾ।
ಕೋಟಿದಿನೇಶಸಮುಜ್ವಳರೂಪಾ
ಘೋಟಕವೇದ ನಮೋ ಜಿತಪಾಪಾ ॥ ೩೯ ॥

ಇಂತೋಂಕಾರೇಶ್ವರನಂ
ಸಂತಸದಿಂದಂ ಪೊಗಟ್ಟು ಬೀಟುಕ್ಕೊಂಡು ಮಗು।
ಟ್ದಿಂತಾದಂತಿಯನಡರ್ದೋ
ರಂತುದ್ಭಟಭೂಮಿಪಾಲಕಂ ನಡೆತಂದಂ ॥ ೪೦ ॥

ಮುಂದೆ ಬರೆವರೆ,

ನಾನಾವೃಕ್ಷಂಗಳಿಂದಂ ಪರಿವನದಿಗಳಿಂದಂ ಗುಹಾನೀಕದಿಂದಂ
ಭಾನುಗ್ರೌಕಾಂತಿಯಿಂದಂ ಖಗಮೃಗತತಿಯಿಂ ನಿರ್ಝರಶ್ರೇಣಿಯಿಂದಂ
ಧ್ಯಾನಂ ಪೆರ್ಚಲ್ ಸಮಂತಾರ್ಭಟಿಸುವತುಳಕಂಠೀರವವ್ರಾತದಿಂದಂ
ತಾನೊಪ್ಪಂಬೆತ್ತುದುರ್ವೀಧರನಿಕರವರೇಣ್ಯಂ ಸುವಿಂಧ್ಯಾದ್ರಿಯೆಂದುಂ ॥ ೪೧ ॥

ಜಯ ಜಯ, ಮಹಾಮಹಿಮನೆ ಜಯ ಜಯ, ಚಿದಾತ್ಮನೆ ಜಯ ಜಯ. ೩೭. ಸರ್ವಸ್ವವನ್ನೂ ತನ್ನಲ್ಲಿ ಅಡಗಿಸಿಕೊಂಡಿರುವವನೆ ಜಯ ಜಯ, ಗಣೇಶನ ತಂದೆಯೆ ಜಯ ಜಯ, ಪಂಚಮುಖನೆ ಜಯ ಜಯ, ಮಹೇಶನೆ ಜಯ ಜಯ. ೩೮. ಅಚಲಾತ್ಮಕನೆ, ಗಿರಿಜೆಯ ಮುಖವೆಂಬ ಚಂದ್ರನ ಬೆಳಗನ್ನು ಸವಿಯುವ ಚಕೋರನೆ, ರೋಗರಹಿತನೆ, ನಿರ್ಮಳನೆ, ದೇವೇಂದ್ರ ಹಾಗೂ ಬ್ರಹ್ಮರಿಂದ ವಂದಿಸಲ್ಪಡುವವನೆ, ಬಾಲಚಂದ್ರನನ್ನು ಧರಿಸಿರುವವನೆ, ಶಾಂತನೆ, ಶಂಕರನೆ ನಿನಗೆ ವಂದನೆ. ೩೯. ಸುವರ್ಣಗಿರಿಯವನೆ, ಜಡೆಯಲ್ಲಿ ಮನೋಹರನಾದ ಚಂದ್ರನ ಕಾಂತಿಯ ಪುಂಜವನ್ನು ಧರಿಸಿದವನೆ, ಕೋಟಿ ಸೂರ್ಯರ ಪ್ರಕಾಶವೆ ರೂಪುಗೊಂಡಂತಿರುವವನೆ, ಕುದುರೆಯ ಮುಖದಿಂದ ವೇದವನ್ನು ಉದ್ಧರಿಸಿದವನೆ, ಪಾಪಗಳನ್ನು ಗೆದ್ದವನೆ ನಿನಗೆ ವಂದನೆ. ೪೦. ಹೀಗೆ ಓಂಕಾರೇಶ್ವರನನ್ನು ಸಂತಸದಿಂದ ಸ್ತುತಿಸಿ [ಅವನಿಗೆ] ಅಡ್ಡಬಿದ್ದು [ಅಲ್ಲಿಂದ] ಹಿಂತಿರುಗಿ ಬಂದು ಆನೆಯನ್ನು ಏರಿ ಅಂದಗೊಂಡು ನಡೆದನು. ವ॥ ಮುಂದೆ ಬರುತ್ತಿರಲು ೪೧. ನಾನಾ ಬಗೆಯ ಮರಗಳಿಂದಲೂ, ಹರಿವ ನದಿಗಳಿಂದಲೂ, ಗುಹೆಗಳ

ನೆಲ್ಲಿ ತಿಲಕಂ ಹುಣಿಸೆ ಜಂಬು ಪನಸಂ ಕದಳಿ ಯಿಪ್ಪೆ ವಕುಳಂ ಕರಿಯವೀಳೆ ಚಿಱುಗುಳ್ಳಂ
ಕೆಲ್ಲಿ ಜಟೆ ಮಟ್ಟಿ ಪಿಚುಮಂದವರಳಿ ಕ್ರಮುಕವರ್ಕಮೆಲವಂ ಕಡವು ತೆಂಗು ಮಧುಪರ್ಣಂ।
ಚಿಲ್ಲವಗಿಲಂಬಟೆ ಕರಂಜ ಪಿಚುಮಂದ ಶಮಿ ಪಾಟಳಿ ಕಪಿತ್ಥಮಿನಿಮಾವು ಮೊದಲಾದು
ತ್ಪುಲ್ಲತರುಸಂತತಿಗಳಿಂದೆಸೆವುದುಚ್ಚಳಿತನಿರ್ಝರವಿಪುಂಜತತಿ ರಂಜಿಸುವಬಿಂಜಂ ॥ ೪೨ ॥

ಪಿಂಗಳೆ ಗೋಣಿ ಭಲ್ಲ ಶಶ ಜಂಬುಕ ವಾನರ ಪುಂಡರೀಕ ಸಾ
ರಂಗ ನಿಹಾಕೆ ರೋಹಿತ ತರಕ್ಷು ಲುಲಾಯವೃಕಾಳಿ ಖಡ್ಗಿ ಮಾ।
ತಂಗ ಮೃಗೇಂದ್ರಮುಖ್ಯಮೃಗಸಂಚಯದುಂಚಗಾಡಿಯಿಂ
ಕಂಗೆಸೆದತ್ತು ತುಂಗಬಹುಶೃಂಗವಿರಾಜಿತವಿಂಧ್ಯಭೂಧರಂ ॥ ೪೩ ॥

ಕಳಹಂಸಂ ಚರಣಾಯುಧಂ ಪ್ರವಿಲಸತ್ಪಾರಾವತಂ ಖಂಜನಂ
ಕಳಕಂಠಂ ಚಟಕಂ ಚಕೋರಕಮುಲೂಕಂ ಸ್ವರ್ಣಚೂಳಂ ಸಮು।
ಜ್ವಳಚಕ್ರಂ ಕೃಕಣಂ ಕರೇಟು ಬಲಿಭುಕ್ಶ್ಯೇನಂ ಕಳಿಂಗಂ ಶಿಖಾ
ವಳಿಮುಖ್ಯಾಂಡಜಜಾಲಸಂಚರಣದಿಂದೊಪ್ಪಿತ್ತು ವಿಂಧ್ಯಾಚಳಂ ॥ ೪೪ ॥

ಮತ್ತಮದಲ್ಲದೆ,

ಆಡುವ ಕೇಕಿಗಳ್ಕುವಹಿ ಗರ್ಜಿಪ ಪೆರ್ಬುಲಿಯಬ್ಬರಕ್ಕೆ ಬಿ
ಟ್ಟೋಡುವ ಪುಲ್ಲೆ ಸಿಂಗದ ಕಠೋರನಿನಾದಕೆ ಬೆರ್ಚುವಾನೆ ಪಾ।
ಱಾಡುವ ಸಾಳ್ವನಂಘ್ರಿಗತಿಗೇಳ್ದುಱಿ ಪಾಱುವನೇಕಪಕ್ಷಿಯಿಂ
ಕೂಡಿ ವಿರಾಜಿಸಿತ್ತತುಳಬಂಧುರವಿಂಧ್ಯಮನೋಜ್ಞಭೂಧರಂ ॥ ೪೫ ॥

ಸಮೂಹದಿಂದಲೂ, ಸೂರ್ಯಚಂದ್ರರ ಕಾಂತಿಯಿಂದಲೂ, ಪಕ್ಷಿ ಮೃಗಗಳ ಸಮೂಹದಿಂದಲೂ, ಕಾಡ ಹೊಳೆಗಳ ಗುಂಪಿನಿಂದಲೂ, ಭಯಂಕರವಾಗಿ ಆರ್ಭಟಿಸುವ ಸಿಂಹಗಳ ಮೊತ್ತದಿಂದಲೂ ಶಬ್ದವು ತೀವ್ರವಾಗಿರಲು ಪರ್ವತಗಳಲ್ಲಿ ಯಾವಾಗಲೂ ಅತ್ಯಂತ ಶ್ರೇಷ್ಠವಾದುದು ವಿಂಧ್ಯ ಪರ್ವತವೇ ಎಂಬ [ಹಿರಿಮೆಯಿಂದ] ಶೋಭೆಯನ್ನು ಪಡೆದಿದ್ದಿತು. ೪೨. ನೆಲ್ಲಿ, ತಿಲಕ, ಹುಣಸೆ, ಜಂಬುನೇರಿಳೆ, ಹಲಸು, ಬಾಳೆ, ಇಪ್ಪೆ, ಬಕುಳ, ಕರಿಯ, ಕಿತ್ತಳೆ, ಚಿರುಗುಳ್ಳ, ಕೆಲ್ಲಿ, ಜಟೆ, ಮತ್ತಿ, ಬೇವು, ಅರಳಿ, ಅಡಕೆ, ಎಕ್ಕೆ, ಬೂರುಗ, ಕದಂಬ, ತೆಂಗು, ಈಚಲ, ಚಿಲ್ಲ, ಧೂಪದಮರ, ಅಂಬಟೆ, ಕರಂಜ, ಬೇವು, ಬನ್ನಿ, ಪಾದರಿ, ಬೇಲ, ಸಿಹಿಮಾವು - ಇವೇ ಮೊದಲಾದ ಫಲಭರಿತ ವೃಕ್ಷ ಸಮೂಹಗಳಿಂದ, ತುಂಬಿ ಹರಿವ ಅಬ್ಬಿಗಳ ಮೊತ್ತದಿಂದ ವಿಂಧ್ಯಪರ್ವತವು ಮೆರೆದಿರುವುದು. ೪೩. ಪಿಂಗಳೆ, ಗೋಣಿ, ಕರಡಿ, ಮೊಲ, ನರಿ, ಕೋತಿ, ಗಿಳಿ, ಸಾರಂಗ, ನಿಹಾಕೆ (?), ರೋಹಿತ (?), ಹುಲಿ, ಕಾಡುಕೋಣ, ಖಡ್ಗಮೃಗ, ಆನೆ, ಸಿಂಹ - ಈ ಮುಖ್ಯ ಮೃಗ ಸಮೂಹದ ಅತಿಶಯ ಸೌಂದರ್ಯದಿಂದ [ಹಾಗೂ] ಎತ್ತರವಾದ ಶಿಖರಗಳಿಂದ ಶೋಭಿಸಿರುವ ವಿಂಧ್ಯಪರ್ವತವು ಕಣ್ಣಿಗೆ ಅಂದವಾಗಿದ್ದಿತು. ೪೪. ರಾಜಹಂಸ, ಕೋಳಿ, ಅತ್ಯಂತ ಚೆಲುವಾದ ಪಾರಿವಾಳ, ಮಡಿವಾಳ ಹಕ್ಕಿ, ಇಂಪಾದ ಕಂಠವುಳ್ಳ ಕೋಗಿಲೆ, ಗುಬ್ಬಿ, ಚಕೋರ, ಗೂಬೆ, ಸುವರ್ಣ ಚೂಳ, ಮನೋಹರವಾದ ಚಕ್ರವಾಕ, ಗಂಡುನವಿಲು, ಹೆಣ್ಣಾನೆ, ಬಲಿಭುಕ್ಶ್ಯೇನ, ಕಳಿಂಗ, ಶಿಖಾವಳಿ- ಈ ಮುಖ್ಯ ಪಕ್ಷಿಗಳ ಸಂಚಾರದಿಂದ ವಿಂಧ್ಯಪರ್ವತವು ಶೋಭಿಸಿದ್ದಿತು. ೪೫. ಆಡುವ ನವಿಲುಗಳಿಗೆ ಹೆದರುವ ಹಾವು,

ರವಿಚಂದ್ರಾಶ್ಮಂಗಳಿಂದಂ ನಟಿಪಶಿಖಿಗಳಿಂದ್ಯೆದೆ ಸೌಮ್ಯತ್ವವಾಂತೊ
ಪ್ಪುವ ಜೀವಂಜೀವಕಾದ್ಯುಜ್ವಳಕವಿತತಿಯಿಂ ಕ್ರೋಡಸಂಚಾರದಿಂದಂ
ತವೆ ಶಂಭದ್ದಂದಶೂಕಂಗಳಿನತುಳಮಧೂಕದ್ರುವಿಂದಂ ಗ್ರಹಾಂಚ
ನ್ನಿವಹಂ ತಾನೆಂಬವೊಲ್ಕಣ್ಗೆಡೆವಿಡದೆಸೆದತ್ತಂತು ವಿಂಧ್ಯಾಚಳೇಂದ್ರಂ ॥ ೪೬ ॥

ಮತ್ತಮದಲ್ಲದೆ ಅಗ್ನಿಯಂತೆ ಉಲ್ಕಾನ್ವಿತಂ, ಸ್ವರ್ಲೋಕದಂತೆ ದೇವವಲ್ಲಭಾನ್ವಿತಂ, ರಥದಂತೆ ನೇಮ್ಯನ್ವಿತಂ, ಮಂತ್ರಜಾಳದಂತೆ ಶಾಬರಾನ್ವಿತಂ, ಜ್ಯೋತಿಶ್ಶಾಸ್ತ್ರದಂತೆ ಸರ್ವತೋಭದ್ರಾನ್ವಿತಂ ಪೂರ್ವದಿಕ್ಕಿನಂತ್ಯೆರಾವತಾನ್ವಿತಂ, ನಂದನದಂತೆ ಮಂದಾರಾನ್ವಿತಂ, ಮಖದಂತೆ ಯೂಪಾನ್ವಿತಂ, ರೇವತಿಯಂತೆ ಹರಿಪ್ರಿಯಾನ್ವಿತಂ, ಕೀರ್ತಿಯಂತೆ ಯರ್ಜುನಾನ್ವಿತಂ, ವಾರಿಜಾಸನನಂತೆ ಭಾರತ್ಯನ್ವಿತಂ, ದ್ವಿಜನಾನನದಂತೆ ಗಾಯತ್ರ್ಯನ್ವಿತಂ, ಜಿನಾಗಮದಂತೆ ವರ್ಧಮಾನಾನ್ವಿತಂ, ದೇಶಭೇದದಂತೆ ಕರಹಾಟಕಾನ್ವಿತಂ, ಗಗನಮಂಡಲದಂತೆ ರಾಜಾರ್ಕಬಿಂಬಾನ್ವಿತಂ, ಕಾರ್ಗಾಲದಂತೆ ಕರಕಾನ್ವಿತಂ, ಶ್ರೀಮತ್ಪಾಂಚರಾತ್ರಿಕದಂತೆ ಜಯಂತಾನ್ವಿತಂ, ನಕ್ಷತ್ರದಂತೆ ಚಿತ್ರಾನ್ವಿತಂ, ರಾಮಚಂದ್ರನಂತೆ ವೈದೇಹ್ಯನ್ವಿತಂ, ಕಪಿಬಲದಂತೆ ಸುಷೇಣಾನ್ವಿತಂ, ವರ್ಷರ್ತುವಿನಂತೆ ಜೀಮೂತಾನ್ವಿತಂ, ಕಾಂಚಿಯಂತೆ ಕಿಂಕಿಣ್ಯನ್ವಿತಂ, ತರಂಗಿಣಿಯಂತೆ ಝುಷಾನ್ವಿತಂ, ಜಮದಗ್ನಿಯಂತೆ ರೇಣುಕಾನ್ವಿತಂ, ಮಾತೃಕೆಯರಂತೆ ಬ್ರಾಹ್ಮಣ್ಯನ್ವಿತಂ ಗ್ರಹತತಿಯಂತೆ ಜೀವಾನ್ವಿತಂ, ಪದ್ಮಾಕ್ಷನಂತೆ ಪದ್ಮಾನ್ವಿತಂ, ದಿಳೀಪನಂತಿಕ್ಷ್ವಾಕುವಂಶಾನ್ವಿತಂ, ನೃಪಾಲನಂತೆ ಛತ್ರಾನ್ವಿತಂ ನವರತ್ನದಂತೆ ಕುರುವಿಂದಾನ್ವಿತಂ, ಕಾಂತಾಳಿಕದಂತೆ ತಿಲಕಾನ್ವಿತಂ, ಕೋಶಗೃಹದಂತೆ ಕಾಂಚನಾನ್ವಿತಂ, ಸುರಸ್ತ್ರೀಯರಂತೆ ರಂಭಾನ್ವಿತಮಾಗಿ ವಿಂಧ್ಯಾಚಳಂ ವಿರಾಜಿಸುತ್ತಮಿರ್ದುದು

ಗರ್ಜಿಸುವ ಹೆಬ್ಬುಲಿಯ ಆರ್ಭಟಕ್ಕೆ ಬಿದ್ದೋಡುವ ಜಿಂಕೆಗಳು, ಸಿಂಹದ ಭಯಂಕರ ಗರ್ಜನೆಗೆ ಬೆಚ್ಚುವ ಆನೆ, ಹಾರಾಡುವ ಗಿಡುಗನ ಆಗಮನವನ್ನರಿತು ತೀವ್ರವಾಗಿ ಹಾರಿಹೋಗಬಯಸುವ ಅನೇಕ ಪಕ್ಷಿಗಳು - ಇವುಗಳಿಂದ ಕೂಡಿ ಮನೋಹರವೂ, ಸಕಲ ಪರ್ವತಗಳಲ್ಲಿ ಮನೋಜ್ಞವೂ ಆದ ವಿಂಧ್ಯಪರ್ವತವು ಶೋಭಿಸಿದ್ದಿತು. ೪೬. ಸೂರ್ಯ ಚಂದ್ರರೆನ್ನುವ ಕಲ್ಲುಗಳಿಂದ, ಅಭಿನಯಿಸುತ್ತಿರುವ ಅಗ್ನಿಯಿಂದ (ಭೀಕರ ಕಾಡ್ಗಿಚ್ಚಿನಿಂದ), ಸೌಮ್ಯಗುಣವನ್ನು ಹೊಂದಿ ಶೋಭಿಸುವ ಸಮಸ್ತ ಜೀವಿಗಳಿಗೂ ಬದುಕಾಗಿರುವ ಶ್ರೇಷ್ಠ ನೀರಿನ ಕೊಳಗಳಿಂದ, ಹಂದಿಗಳ ಓಡಾಟದಿಂದ, ಕೆಟ್ಟ ಹಾವುಗಳಿಂದ, ಹೋಲಿಕೆಯಿಲ್ಲದ ಜೇನಿನ ಪುಟ್ಟಿಗಳಿಂದ ಗ್ರಹಗಳ ಸಮೂಹವೆನ್ನುವಂತೆ ವಿಂಧ್ಯ ಪರ್ವತವು ಕಣ್ಣಿಗೆ ಎಡೆಬಿಡದೆ ಶೋಭಿಸಿತ್ತು (ಇಲ್ಲಿ ಕವಿ ವಿಂಧ್ಯಪರ್ವತದಲ್ಲಿನ ಚರಾಚರ ವಸ್ತುಗಳನ್ನು ನವಗ್ರಹಗಳಿಗೆ (ರವಿ-ರವಿ, ಚಂದ್ರ-ಚಂದ್ರ, ಕುಜ-ಶಿಖಿ, ಬುಧ-ಕವಿ, ಗುರು-ಕ್ರೋಢ (=ಹಂದಿ), ಶುಕ್ರ-?, ಶನಿ-ಶುಂಭ (=ಕೆಟ್ಟ), ರಾಹು-ಹಾವು, ಕೇತು-ಮಧೂಕದ್ರು (=ಜೇನಿನ ಪುಟ್ಟಿ) ಹೋಲಿಸಿರುವುದು ಗಮನಿಸಬೇಕಾದ ಸಂಗತಿ). ವ॥ ಮತ್ತೆ ಅದಲ್ಲದೆ, ವಿಂಧ್ಯಾಚಲವು ಅಗ್ನಿಯಂತೆ ಉಲ್ಕೆಗಳಿಂದ ಕೂಡಿದವನೂ, ದೇವಲೋಕದಂತೆ ದೇವೇಂದ್ರನಿಂದ ಕೂಡಿದವನೂ, ರಥದಂತೆ ಚಕ್ರದಿಂದ ಕೂಡಿದವನೂ, ಮಂತ್ರಸಮೂಹದಂತೆ ಬೇಡರುಗಳಿಂದ ಕೂಡಿದವನೂ, ಜ್ಯೋತಿಶ್ಶಾಸ್ತ್ರದಂತೆ ಸಕಲ ಮಂಗಳಗಳಿಂದ ಕೂಡಿದವನೂ, ಪೂರ್ವದಿಕ್ಕಿನಂತೆ ಐರಾವತವನ್ನು ಕೂಡಿದವನೂ, ಉದ್ಯಾನದಂತೆ ಮಂದರಪರ್ವತದಿಂದ ಕೂಡಿದವನೂ, ಯಜ್ಞದಂತೆ ಯಜ್ಞಪಶುವನ್ನು ಕಟ್ಟುವ ಚಿನ್ನದ ಕಂಬದಂತೆ ಕೂಡಿದವನೂ, ರೇವತಿಯಂತೆ ವಿಷ್ಣುವನ್ನು ಕೂಡಿದವನೂ, ಕೀರ್ತಿಯಂತೆ ಅರ್ಜುನನನ್ನು ಕೂಡಿದವನೂ,

ಅಂತುಮಲ್ಲದೆಯುಂ

ಫಲದಳಿಗೊಂಚಲಿಂದ್ರಧನು ಕಾರ್ಮುಗಿಲಲ್ಲಿಯ ಬಂಭರಾಳಿಯು
ಜ್ವಳಕರಿಬೃಂಹಿತಂ ಜಲಧರಧ್ವನಿ ಮಲ್ಲಿಗೆಬಳ್ಳಿ ಮಿಂಚು ನ।
ಲ್ಲಲರ್ವುಡಿಯಾಲಿಗಲ್ಲೊಸರ್ವ ಜೇಂಗೊಡದಿಂಬನಿ ವರ್ಷಮಾಗಲ
ಗ್ಗಲಿಸಿದುದಾಮಹೀಧ್ರವಿಭು ನೀರದಕಾಲಮದೆಂಬ ಮಾಟ್ಕೆಯಿಂ ॥ ೪೭ ॥

ಇಂತೊಪ್ಪುವ ವಿಂಧ್ಯಮಂ ಪೊಕ್ಕುದ್ಭಟಕ್ಷಿತೀಂದ್ರಚಂದ್ರಮಂ ಅತಿವಿಜೃಂಭಣದಿಂದೆ ತದ್ಗಿರಿಯಲಂಪಿನ ಪೆಂಪಂ ತಾಂ ಪದೆದೀಕ್ಷಿಸುತ್ತುಂ ಬರವರಲಾಕಾಲದೊಳೊರ್ವಬೇಡಪಡೆಯೊಡೆಯನೊಂದುಕಡೆಯೊಳ್ಬೇಂಟೆ ಯಾಡುತ್ತಮೆಸೆದಿರ್ದಂ॥

ಬ್ರಹ್ಮನಂತೆ ಭಾರತಿಯನ್ನು ಕೂಡಿದವನೂ, ಬ್ರಾಹ್ಮಣನ ಮುಖದಂತೆ ಗಾಯತ್ರಿ ಮಂತ್ರದಿಂದ ಕೂಡಿದವನೂ, ಜಿನಾಗಮದಂತೆ ವರ್ಧಮಾನಸ್ವಾಮಿಯನ್ನು ಕೂಡಿದವನೂ, ದೇಶಭೇದದಂತೆ ಕರಹಾಟವನ್ನು ಕೂಡಿದವನೂ, ಆಕಾಶಮಂಡಲದಂತೆ ಸೂರ್ಯಬಿಂಬವನ್ನು ಕೂಡಿದವನೂ, ಮಳೆಗಾಲದಂತೆ ಆಲಿಕಲ್ಲನ್ನು ಕೂಡಿದವನೂ, ಮಂಗಳಕರವಾದ ಪಾಂಚರಾತ್ರಿಕದಂತೆ ಜಯಂತನನ್ನು ಕೂಡಿದವನೂ, ನಕ್ಷತ್ರದಂತೆ ಕುತೂಹಲದಿಂದ ಕೂಡಿದವನೂ, ರಾಮಚಂದ್ರನಂತೆ ವೈದೇಹಿ (=ಸೀತೆ)ಯನ್ನು ಕೂಡಿದವನೂ, ಹನುಮಂತನ ಸೈನ್ಯದಂತೆ ಸುಷೇಣನನ್ನು ಕೂಡಿದವನೂ, ಮಳೆಗಾಲದಂತೆ ಮೋಡಗಳನ್ನು ಹೊಂದಿದವನೂ, ಸುವರ್ಣದ ಸೊಂಟಪಟ್ಟಿಯಂತೆ ಕಿಣಿಕಿಣಿಧ್ವನಿಯನ್ನು ಹೊಂದಿದವನೂ, ತರಂಗಿಣಿಯಂತೆ ಮೀನುಗಳಿಂದ ಕೂಡಿದವನೂ, ಜಮದಗ್ನಿಯಂತೆ ರೇಣುಕೆಯನ್ನು ಕೂಡಿದವನೂ, ಸಪ್ತಮಾತೃಕೆಯರಂತೆ ಬ್ರಾಹ್ಮಿಯನ್ನು ಕೂಡಿದವನೂ, ಗ್ರಹಗಳ ಸಮೂಹದಂತೆ ಜೀವಾವಳಿಯನ್ನು ಹೊಂದಿರುವವನೂ, ಪದ್ಮಾಕ್ಷನಂತೆ ಪದ್ಮದಿಂದ ಕೂಡಿದವನೂ, ದಿಲೀಪನಂತೆ ಇಕ್ಷ್ವಾಕುವಂಶದಿಂದ ಕೂಡಿದವನೂ, ಮಹಾರಾಜನಂತೆ ಬೆಳ್ಗೊಡೆಯನ್ನು ಹೊಂದಿರುವವನೂ ನವರತ್ನದಂತೆ ಕುರುವಿಂದವನ್ನು ಹೊಂದಿದವನೂ, ವಿರಾಟಮಹಾರಾಜನಂತೆ ಕೀಚಕನನ್ನು ಕೂಡಿದವನೂ, ಸ್ತ್ರೀಯರ ಹಣೆಯಂತೆ ತಿಲಕವನ್ನು ಹೊಂದಿದವನೂ, ಭಂಡಾರದಂತೆ ಹೊನ್ನನ್ನು ಹೊಂದಿರುವವನೂ, ದೇವ ಸ್ತ್ರೀಯರಂತೆ ರಂಭೆಯನ್ನು ಹೊಂದಿದವನೂ ಆಗಿ (ವಿಂಧ್ಯಪರ್ವತವು) ವಿಶೇಷವಾಗಿ ಶೋಭಿಸುತ್ತಿದ್ದಿತು.
೪೭. ಭ್ರಮರಗಳ ಸಾಲುಗಳೇ ಇಂದ್ರ ಧನುಸ್ಸು, ತುಂಬಿಗಳ ಸಮೂಹವೇ ಕಾರ್ಮುಗಿಲು, ಆನೆಗಳ ಘೀಂಕಾರವೇ ಮೋಡಗಳ ಗುಡುಗು, ಮಲ್ಲಿಗೆಯ ಬಳ್ಳಿಗಳೇ ಮಿಂಚು, ಚೆಲುವಾದ ಹೂವುಗಳು ಉದುರುತ್ತಿರುವುದೇ ಆಲಿಕಲ್ಲು, ಜೇನುಗೂಡಿನಿಂದ ಜಿನುಗುವ ಇನಿದಾದ ಜೇನಿನ ಹನಿಯೇ ಮಳೆಹನಿಗಳಾಗಿರಲು ಆ ಪರ್ವತರಾಜನಾದ ವಿಂಧ್ಯವು ಮಳೆಗಾಲವೊ ಎಂಬಂತೆ ಅತಿಶಯವಾಗಿದ್ದಿತು. ವ॥ ಹೀಗೆ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ವಿಂಧ್ಯಪರ್ವತವನ್ನು ಪ್ರವೇಶಿಸಿದ ಉದ್ಭಟ ಮಹಾರಾಜನು ಹೆಚ್ಚಿನ ಆಡಂಬರದಿಂದ ಆ ಪರ್ವತದ ಅತಿಶಯವಾದ ಪ್ರಸಿದ್ಧಿಯನ್ನು ತಾನು ಪ್ರೀತಿಯಿಂದ ಅವಲೋಕಿಸುತ್ತ ಬರುತ್ತಿರಲು

ಅದೆಂತೆಂದೊಡೆ,

ಧನುಟಂಕಾರಂ ವನಾಭ್ಯಂತರಮನಿರದೆ ಮೇಣ್ತೀವಲುಚ್ಚಂಡಕಂಠ
ಧ್ವನಿ ಚಂಚತ್ಪಕ್ಷಿನಾನಾಮೃಗದರ್ದೆಗೆಡಿಸಲ್ನೀಲಜೀಮೂತಮಂ ತ।
ತ್ತನುವರ್ಣಂ ಪುಟ್ಟಿಸಲ್ಧೀವರರತಿಮುದದಿಂ ಬೇಂಟೆಯಾಡುತ್ತಮಿರ್ದ
ರ್ಮನವೊಲ್ದುತ್ತುಂಗಕುಂಭಿಪ್ರಮುಖಮನಱಸುತ್ತುಂ ಮನೋಲ್ಲಾಸದಿಂದಂ ॥ ೪೮ ॥

ಇದೆ ಹರಿಣಂ ಬಿಗುರ್ತು ಪೊಣರ್ದಿಕ್ಕಿದೆ ಮೇಣ್ಣೆಗೆದಲ್ಲಿ ಕುಂಜರಂ
ಪುದಿದೆಳಗೊಂಬನೊಲ್ದು ಮುಱಿದೊಟ್ಟಿದೆ ಪಂದಿ ಪೊರಳ್ದಪಂಕಮಿಂ।
ತಿದೆ ಘನಸೈರಿಭೋನ್ನತವಿಷಾಣವಿಘಾತದೆ ನೊಂದ ಕುಂಜಮಿಂ
ತಿದೆಯೆನುತುರ್ಬುತುಂ ನಡೆದು ಬೇಂಟೆಯನಾಡಿದರಂದು ಧೀವರರ್ ॥ ೪೯ ॥

ಬಿಡು ನಾಯಂ ಪೊಸಪುಲ್ಲೆಗೊಡ್ಡು ಬಲೆಯಂ ಕ್ರೋಢಂಗೆ ತಂದಾನೆಯಂ
ಕೆಡಪಾಕಪ್ಪಿನೊಳೆಚ್ಚು ತೋಱ ಬಲವದ್ಭಲ್ಲೂಕಮಂ ನೋಡಿ ನ।
ಲ್ವಡಿಕೋಲಿಂದಿಡು ಪೋಗುತಿರ್ಪ ಮೊಲನಂ ಬೆನ್ನಟ್ಟು ಶಾರ್ದೂಲಮಂ
ಬಿಡಿದಿರ್ಸಿಂಹಮನೆಂದು ಬೊಬ್ಬೆಗುಡುತುಂ ಬಂದರ್ ಪಲರ್ ಧೀವರರ್ ॥ ೫೦ ॥

ಕುಪ್ಪಿಗೆಯಂ ಕಳಲ್ಚಿ ಬಿಡು ಸಾಳ್ವನನೇಳಿಸಿ ಪಕ್ಷಿಜಾಳಮಂ
ಕುಪ್ಪುವ ಪುಲ್ಲೆಗಳ್ಗುರುಳನೊಯ್ಯನೆ ಸೇರಿಸು ಚಿತ್ರಕಾಯನಂ।
ತಪ್ಪಿಸಿ ತಂದು ತೋಱಬಿಡು ಪೋಪ ಮೃಗಾಳಿಗೆನುತ್ತೆ ಬೊಬ್ಬಿಡು
ತ್ತೊಪ್ಪಿದರಂದು ಸಂತಸದೆ ಧೀವರರಾವಿಪಿನಾಂತರಾಳದೊಳ್ ॥ ೫೧ ॥

ಆ ಸಮಯದಲ್ಲಿ ಓರ್ವ ಬೇಡ ಪಡೆಯ ಮುಖ್ಯಸ್ಥನು ಒಂದೆಡೆಯಲ್ಲಿ ಬೇಟೆಯಾಡುತ್ತ ಅಂದಗೊಂಡಿದ್ದನು. ಅದು ಹೇಗೆಂದರೆ, ೪೮. ಬಿಲ್ಲಿನ ಝೇಂಕಾರವು ಕಾಡಿನ ಅಂತರಾಳವನ್ನೂ ಬಿಡದೆ ಆವರಿಸಿರಲು, ಅತಿಬಲಯುತವಾದ ಕಂಠಧ್ವನಿಯು ಹಾರಾಡುವ ಪಕ್ಷಿ ಹಾಗೂ [ಓಡಾಡುವ] ನಾನಾ ಮೃಗಗಳ ಧೈರ್ಯಗುಂದಿಸಿರಲು, ದೇಹಕಾಂತಿಯು ಆ ನೀಲಪರ್ವತವನ್ನು ನಿರ್ಮಿಸಿರಲು ಬೇಡರು ಅತ್ಯಾನಂದದಿಂದ ಬೇಟೆಯಾಡುತ್ತಿದ್ದರು. [ಅವರು] ಮನಮೆಚ್ಚಿ ಅತ್ಯುನ್ನತವಾದ ಆನೆಗಳನ್ನು, [ಕಾಡಿನ] ಪ್ರಮುಖ ಪ್ರಾಣಿಗಳನ್ನು ಮನಸ್ಸಿಗೆ ಮುದವಾಗುವಂತೆ ಹುಡುಕುತ್ತಲಿದ್ದರು. ೪೯. ಇದೀಗ ತಾನೆ ಭಯಗೊಂಡ ಜಿಂಕೆಯು ಹೋರಾಡಿ ಪ್ರಾಣಬಿಟ್ಟಿದೆ; ಆನೆಯು ನೆಗೆದು ಬೆಳೆದ ಎಳೆಯ ದಂತವನ್ನು ಸ್ವಇಚ್ಛೆಯಿಂದ ಮುರಿದುಹಾಕಿದೆ; ಹಂದಿಯು ಹೊರಳಾಡಿದ ಕೆಸರು ಇಲ್ಲಿದೆ; ಭಾರೀ ಕೋಣನ ಉದ್ದವಾದ ಕೋಡಿನ ಚುಚ್ಚುವಿಕೆಯ ಪರಿಣಾಮವಾಗಿ ನೊಂದ ಆನೆಯ ಗತಿ ಹೀಗಿದೆ - ಎಂದು ಉಬ್ಬುತ್ತ ನಡೆದ ಬೇಡರು ಅಂದು ಬೇಟೆಯನಾಡಿದರು. ೫೦. ನಾಯಿಯನ್ನು ಬಿಡು, ಎಳೆಯ ಜಿಂಕೆ ಹಾಗೂ ಹಂದಿಗೆ ಬಲೆಯನ್ನೊಡ್ಡು, ಆನೆಗುಳಿಯಲ್ಲಿ ಆನೆಯನ್ನು ತಂದು ಕೆಡುಹು, ಬಲಶಾಲಿಯಾದ ಕರಡಿಗೆ ಬಾಣಪ್ರಯೋಗಿಸಿ ನೋಡು, ಓಡುತ್ತಿರುವ ಮೊಲಕ್ಕೆ ಚೆನ್ನಾಗಿ ಗುರಿಯಿಟ್ಟು ಹರಿತವಾದ ಬಾಣದಿಂದ ಹೊಡೆ, ಹೆಬ್ಬುಲಿಯನ್ನು ಬೆನ್ನಟ್ಟು, ಸಿಂಹವನ್ನು [ಕೊಲ್ಲದೆ] ಬಿಡಬೇಡ ಎಂದು ಬೊಬ್ಬೆಯಿಡುತ್ತ ಹಲವರು ಬೇಡರು ಬಂದರು. ೫೧. ಪಕ್ಷಿಸಮೂಹವನ್ನು ಎಬ್ಬಿಸಿ ಹಕ್ಕಿಯ ಬೇಟೆಗೆ

ಆ ನಿರ್ಘೋಷಮದುರ್ವಿ ಪರ್ವಿ ನೆಗೆದಲ್ಕೆಱ್ದಿಟ್ಟು ನಿಷ್ಯಂದಿತ
ದ್ದಾನಾಸಕ್ತಿಯಿನೊಲ್ದೆಱಪ್ಪಳಿಗಳಂ ಕರ್ಣಾಗ್ರದಿಂ ಸೋವುತುಂ।
ತಾನಾಲೋಕಿಸುತೊಯ್ಯನಿರ್ಕೆಲನನಂಚತ್ಪಲ್ಲವಾನೀಕಮಂ
ಸಾನಂದಂ ಬಿಡದಂದು ಭುಂಜಿಸುತೆ ಬಂದತ್ತೊಂದು ಮತ್ತದ್ವಿಪಂ ॥ ೫೨ ॥

ಇದೆ ಪೊಱಮೆಟ್ಟುದಾನೆ ಯಡಗಟ್ಟಿಸು ಪೊಕ್ಕಿಱು ಮುಂದೆ ವಹ್ನಿಯಂ
ಪದೆದಿಡು ಸಿಂಹನಾದಮನೆ ನಿಲ್ಲದೊಡರ್ಚೆರದ್ಯೆದೆ ವೇಗದಿಂ।
ಪದಪಿನಿನೊಲ್ದಡರ್ದು ಮಿಗೆ ಪೋಪೆಡೆಯಂ ನಡೆ ನೋಡೆನುತ್ತಲಾ
ಮದಗಜಮಂ ಕರಂ ಬಿಡದೆ ಮುತ್ತಿ ಮುಸುಂಕಿದರಂದು ಧೀವರರ್ ॥ ೫೩ ॥

ಮುತ್ತಿದ ಬೇಡರಂ ತಗುಳ್ದು ಸಿಕ್ಕಿದರಂ ತಿವಿದೆತ್ತಿ ಸೊರ್ಕಿನಿಂ
ಮತ್ತೆ ಕನಲ್ದು ನಿಲ್ತೆಡಬಲಂಗಳನೀಕ್ಷಿಸುತ್ಯೆದೆ ಧೂಳಿಯಂ।
ನೆತ್ತಿಯ ಮೇಲೆ ಚೆಲ್ಲಿಕೊಳುತುರ್ದುತೆ ಪೆರ್ಮರನಂ ಶರೀರದಿಂ
ಮತ್ತಗಜಂ ಮನಂಗೊಳಿಸುತುನ್ನತಮಾದ ವಿಗುರ್ವನೀಯುತುಂ ॥ ೫೪ ॥

ಆ ಪೊಸತಾಗಿ ಸೊರ್ಕಿದಿಭಮಂ ಪದೆದೀಕ್ಷಿಸಿ ಯೊರ್ವ ಧೀವರಂ
ಕೋಪದೊಳೊಯ್ಯನೊಯ್ಯನುಱು ಹೊಂಚಿ ನಿಕುಂಜಮನೊತ್ತುಗೊಂಡು ಮೇ।
ಣ್ಚಾಪಮನಾರ್ದು ನೋಡಿ ತೆಗೆದಂದಿಸೆ ಮಸ್ತಕಮಂ ಕನಚ್ಛರಂ
ವ್ಯಾಪಿಸೆ ಪೆರ್ಚು ಬೆರ್ಚೆ ಕರಿ ಚಚ್ಚರದಿಂ ಬೆರಸಿತ್ತು ಬೇಡನಂ ॥ ೫೫ ॥

ಬಳಸುವ ಗಿಡುಗನ ಚೌರಿಯ ಕಟ್ಟನ್ನು ಬಿಚ್ಚಿಬಿಡು, ಹಾರುವ ಜಿಂಕೆಗಳಿಗೆ ಹಗ್ಗದ ಕುಣಿಕೆ ಬೀರಿ ಮೆಲ್ಲನೆ [ಅವನ್ನು] ಕಟ್ಟಿಹಾಕು, ಚಿರತೆಯನ್ನು [ದಾರಿ] ತಪ್ಪಿಸಿ ತಂದು ಸುಳಿವ ಜಿಂಕೆಗಳತ್ತ ಛೂಬಿಡು ಎಂದು ಸಂತಸದಿಂದ ಆರ್ಭಟಿಸುವ ಬೇಡರು ಆ ಕಾಡಿನ ಮಧ್ಯಭಾಗದಲ್ಲಿ ಶೋಭಿಸಿದರು. ೫೨. ಆ ಶಬ್ದವು ಉಬ್ಬಿ ಹಬ್ಬಿ ವ್ಯಾಪಿಸಲು, ಸೋರುವ ಆ ಮದಧಾರೆಯನ್ನು ಸವಿಯ ಬಯಸಿ ಮೇಲೆರಗಿದ ದುಂಬಿಗಳನ್ನು ತಮ್ಮ ಕಿವಿಯನ್ನು ಅಲುಗಾಡಿಸಿ ಅದರ ಅಗ್ರಭಾಗದಿಂದ ಹೊಡೆದೋಡಿಸುತ್ತ, ಮೆಲ್ಲನೆ ಅತ್ತ ಇತ್ತ ನೋಡುತ್ತ, ಮನೋಹರವಾದ ಚಿಗುರುಗಳನ್ನು ಆನಂದದಿಂದ ಕೂಡಿ ಸ್ವಲ್ಪವೂ ಬಿಡದೆ ತಿನ್ನುತ್ತ ಮದ್ದಾನೆಯೊಂದು ಬಂದಿತು. ೫೩. ಇದೋ ಆನೆ ಹೊರಟಿತು. ಅಡ್ಡಗಟ್ಟು, ಅದರೊಡನೆ ಎದುರಾಗಿ ಸೆಣಸು, ಅದರ ಮುಂದೆ ಬೆಂಕಿ ಹಚ್ಚು, ಸಿಂಹದ ಆರ್ಭಟವನ್ನು ಮಾಡಿ ಬಿಡದೆ ಅತ್ಯುತ್ಸಾಹದಿಂದ ವೇಗವಾಗಿ ಅದರ ಮೇಲೇರಿ ಅದು ಹೋಗುವ ದಿಕ್ಕನ್ನು ಚೆನ್ನಾಗಿ ಗಮನಿಸು ಎಂದು ಹೇಳುತ್ತ ಅಂದು ಆ ಬೇಡರು ಮದ್ದಾನೆಯನ್ನು ಬಿಡದೆ ಚೆನ್ನಾಗಿ ಮುತ್ತಿ ಕವಿದರು. ೫೪. ತನ್ನನ್ನು ಮುತ್ತಿದ ಬೇಡರನ್ನು ದೂಡಿ, ಸಿಕ್ಕಿದವರನ್ನು ಕೊಂಬಿನಿಂದ ತಿವಿದು, ಸೊಂಡಿಲಿನಿಂದ ಮೇಲೆತ್ತಿ ಹಾಕಿ, [ಕಾಲಿನಿಂದ] ತೀಡಿ ಮತ್ತೆ ಕೆರಳಿ ನಿಂತು ಎರಡೂ ಕಡೆ ನೋಡಿ ಧೂಳನ್ನು ತನ್ನ ನೆತ್ತಿಯ ಮೇಲೆ ಚೆಲ್ಲಿಕೊಳ್ಳುತ್ತ, ಹೆಮ್ಮರವನ್ನು ತನ್ನ ದೇಹದಿಂದ ಉಜ್ಜುತ್ತ, ಅತಿಶಯವಾದ ಅಚ್ಚರಿಯನ್ನುಂಟುಮಾಡುತ್ತ, ಮನಸ್ಸನ್ನು ಸೂರೆಗೊಳ್ಳುತ್ತ ಆ ಮದ್ದಾನೆಯು ನಡೆಯಿತು. ೫೫. ಹೊಸದಾಗಿ ಸೊಕ್ಕಿದ ಆನೆಯೊಂದನ್ನು ಆಸೆಯಿಂದ ನೋಡಿದ ಓರ್ವ ಬೇಡನು ಮುಳಿದು ಚೆನ್ನಾಗಿ ಹೊಂಚುಹಾಕಿ ಮೆಲ್ಲಮೆಲ್ಲನೆ ಆನೆಯನ್ನು ಸಮೀಪಿಸಿ ನೋಡಿ ಗರ್ಜಿಸುತ್ತಾ ಬಿಲ್ಲನ್ನು ತೆಗೆದು ಆನೆಯ ಶಿರಕ್ಕೆ ಗುರಿಯಿಟ್ಟು

ನೀಡಿದ ಸುಂಡಿಲೆಟ್ಟಿನವಿರೆತ್ತಿದ ಬಾಲಮೊಸರ್ವ ಲಾಲೆಯ
ಲ್ಲಾಡದ ಕರ್ಣತಾಳ ಮಲೆದೀಕ್ಷಿಪ ದಿಟ್ಟಿಗಳೊಪ್ಪೆ ಕಂಗೆಡು।
ತ್ತೋಡುವ ಬೇಡನಂ ಬೆರಸಿ ಬರ್ಪ ಮದೇಭಮನಂದು ಕಾಣುತಂ
ಕೂಡೆ ಕನಲ್ದು ಮುತ್ತಿ ಕೆಡವಂತಿರಲೆಚ್ಚರರಣ್ಯಸಂಚರರ್ ॥ ೫೬ ॥

ಶಂಕಿಸದಸ್ವಪ್ನೇಂದ್ರನೆ
ಅಂಕೆಗಳಂ ಕಡಿಯಲಂಜನಾಚಲಮಿಳೆಯೊಳ್।
ಭೋಂಕನೆ ಬಿದ್ದಿಂತೆ ಮದೇ
ಭಂ ಕೆಡೆದುದು ಬೇಂಟೆವಳರ ಮಾರ್ಗಣಹತಿಯಿಂ ॥ ೫೭ ॥

ಅದಟಿಂದಡಸಿ ಪಿಡಿದು ತಂ
ಗದಿರ್ವಟ್ಟನ ಲೇಖೆಗರ್ಚಿ ಧರೆಗಿಳಿವ ವಿಧುಂ।
ತುದನೆನೆ ಘೀಳಿಡುತುಂ ಬಿ
ರ್ದುದು ನಿಡುಗೋಡೂಱಿ ಮತ್ತಕುಂಜರನಾಗಳ್ ॥ ೫೮ ॥

ಇಳೆಯೊಳ್ಬಿಟ್ಟಿಭಕುಂಭ
ಸ್ಥಳಮೊಡೆದಲ್ಲಿರ್ದ ಮೌಕ್ತಿಕಂಗಳ್ ಸೂಸಲ್।
ಘಟಿಲನೆ ಪುಳಿಂದಕಾಂತೆಯ
ರಳವಟ್ಟಾಯುತ್ತಮೊಪ್ಪಿದರ್ಮುದದಿಂದಂ ॥ ೫೯ ॥

ಉಡುನಿಕರಮುಮಂ ಮುನ್ನೀ
ರ್ಗೆಡೆವತ್ತಿದ ಚಂದ್ರಲೇಖೆಯಾವರಿಸುವವೋಲ್।
ಕಡು ಮಿಱುಪ ಸೆಳ್ಳುಗುರ್ವೆಳ
ಗಿಡಿಯಲ್ಬೇಡಿತಿಯರಾಯ್ದರೆಳಮುತ್ತುಗಳಂ ॥ ೬೦ ॥

ಹೊಡೆಯಲು ಹರಿತವಾದ ಆ ಬಾಣವು ತಾಗಿ ನಾಟಲು ಬಹಳ ಹೆದರಿದ ಆನೆಯು ಥಟ್ಟನೆ ಆ ಬೇಡನ ಮೇಲೆ ಧಾಳಿ ಮಾಡಿತು. ೫೬. ಚಾಚಿದ ಸೊಂಡಿಲು, ಮೇಲೆದ್ದ ರೋಮ, ಎತ್ತಿದ ಬಾಲ, ಸುರಿವ ಲಾಲಾರಸ, ಚಲಿಸದ ಕಿವಿ, ಕೋಪದಿಂದ ನೋಡುವ ದೃಷ್ಟಿ - ಇವುಗಳಿಂದ ಶೋಭಿಸಿರಲು ಕಂಗೆಟ್ಟು ಓಡುವ ಬೇಡನನ್ನು ಅಟ್ಟಿಕೊಂಡು ಬರುತ್ತಿರುವ ಮದ್ದಾನೆಯನ್ನು ಕಂಡು ಅರಣ್ಯದಲ್ಲಿ ಸಂಚರಿಸುವ ಬೇಡರು ಕೆರಳಿ ಒಟ್ಟುಗೂಡಿ ಮುತ್ತಿ ಸಾಯುವಂತೆ ಬಾಣ ಪ್ರಯೋಗಿಸಿದರು. ೫೭. ಕನಸಿನಲ್ಲೂ ಶಂಕಿಸದ ಇಂದ್ರನು ರೆಕ್ಕೆಗಳನ್ನು ಕತ್ತರಿಸಲು ಅಂಜನ ಪರ್ವತವು ಒಮ್ಮೆಲೆ ಭೂಮಿಯ ಮೇಲೆ ಬಿದ್ದಂತೆ ಬೇಟೆಗಾರರ ಬಾಣದ ಹೊಡೆತದಿಂದಾಗಿ ಆ ಮದಿಸಿದ ಆನೆಯು ಕೆಳಗುರುಳಿತು. ೫೮. ದರ್ಪದಿಂದ ಮೇಲೆ ಕವಿದು ಹಿಡಿದು ಚಂದ್ರಮಂಡಲದ ಚಂದ್ರಕಲೆಯನ್ನು ಕಚ್ಚಿ ಭೂಮಿಗೆ ಇಳಿಯುತ್ತಿರುವ ರಾಹುವೋ ಎನ್ನುವಂತೆ ಆ ಮದಿಸಿದ ಆನೆಯು ಘೀಂಕರಿಸುತ್ತ ತನ್ನ ನೀಳವಾದ ಸೊಂಡಿಲನ್ನು ನೆಲಕ್ಕೆ ಊರಿ ಉರುಳಿತು. ೫೯. ಭೂಮಿಗೆ ಉರುಳಿದ ಆನೆಯ ಕುಂಭಸ್ಥಲವು ಒಡೆದು, ಅಲ್ಲಿದ್ದ ಮುತ್ತುಗಳೆಲ್ಲಾ ಹೊರಚೆಲ್ಲಲು ಬೇಡತಿಯರು [ಅವುಗಳಿಗೆ] ಆಸೆಪಟ್ಟು ಸಂತಸದಿಂದ ಬೇಗ ಬೇಗನೆ ಅವನ್ನು ಆಯುತ್ತ ಶೋಭಿಸಿದರು. ೬೦: ನಕ್ಷತ್ರಗಳ ಮೊತ್ತವನ್ನು ಸಮುದ್ರಕ್ಕೆ ಎಡೆ ಎತ್ತಿದ ಚಂದ್ರಕಲೆಯು [ಎಲ್ಲೆಡೆ] ಆವರಿಸುವಂತೆ ಅತಿಶಯವಾಗಿ ಪ್ರಕಾಶಿಸುವ

ಮತ್ತಮದಲ್ಲದೆಯುಂ,

ಬಿಲ್ಗಳನೊಲ್ದು ನೀಡಿ ಕುಡುತುಂ ಪತಿಗಳ್ಗೆ ಮನೋನುರಾಗದಿಂ
ಕಲ್ಗಳನೊತ್ತಿಮೆಟ್ಟಿ ಪರಿಲಂಘಿಸಿ ತಾಂಕುತೆ ತಮ್ಮನಲ್ಲರಂ।
ನಲ್ನುಡಿಗುಂಜಿಯೊರ್ಚರಮನೊಯ್ಯನೆ ನೇರ್ಪಡಿಸುತ್ತುಮೆತ್ತಲುಂ
ಪಲ್ಗಳ ಕಾಂತಿಯಂ ಪರಪುತುಂ ನಗುತುಂ ನಡೆದರ್ ಪುಳಿಂದಿಯರ್ ॥ ೬೧ ॥

ಬೇಟದ ಸೊಗಸಂ ಪ್ರಿಯರೊ
ಳ್ನಾಟಿಸುತುಂ ಬೇಂಟೆವಳರ ಚಿತ್ತಕ್ಕತಿಚ।
ಲ್ಲಾಟಮನಿರದೀಯುತ್ತುಂ
ಮಿಾಟುಂಜವ್ವನದ ಶಬರಿಯರ್ ನಡೆತಂದರ್ ॥ ೬೨ ॥

ಕಣ್ಣೆಳಮೀನನಂಘ್ರಿತಳಮೊಪ್ಪುವ ಪಲ್ಲವಮಂ ತೊಳಪ್ಪ ಮೈ
ವಣ್ಣಮುದಂಚಿತಾಂಚಿತಪಯೋಧರಮಂ ಮೊಲೆಗಳ್ ರಥಾಂಗಮಂ।
ತಣ್ಣಸಗೆಯ್ಯವಟ್ಟನಮದರ್ಾನನವೇಳಿಸೆ ತಮ್ಮ ನಲ್ಲರಂ
ಬಣ್ಣಿಸುತಲ್ಲಿಗಲ್ಲಿಗುಪಚಾರಿಸುತುಂ ನಡೆದರ್ಪುಳಿಂದಿಯರ್ ॥ ೬೩ ॥

ಗುಂಜಿಯ ದಂಡೆ ಬಟ್ಟಮೊಲೆಗಳ್ಗೆ ಪೊದಟ್ಟಿ ಬೆಡಂಗನೀಯೆ ಸ
ನ್ಮಂಜುಳಕಾಚಕಂಕಣಮುದಂಚಿತಪಾಣಿಗೆ ಚೆಲ್ವದಾಗೆ ಯಾ।
ರಂಜಿತವೇಣಿಯಪ್ಪಳಿಸೆ ಬೆನ್ನನತೀವವಿಲಾಸದೇಬ್ಬೆಗಿಯಿಂ
ದಂ ಜವೆಯಾನಭಾಸಿತಪುಳಿಂದಿಯರೊಪ್ಪಿದರಂದು ಬೇಂಟೆಯೊಳ್ ॥ ೬೪ ॥

ಬೇಡಿತಿಯರ ನಿಡಿದಾದ ಉಗುರುಗಳ ಬೆಳಗು ವ್ಯಾಪಿಸಿರಲು [ಅವರು] ಎಳೆಯದಾದ ಮುತ್ತುಗಳನ್ನು ಆಯ್ದರು. ವ॥ ಅಷ್ಟಲ್ಲದೇ, ೬೧. ಬಿಲ್ಲುಗಳನ್ನು ತಮ್ಮ ಗಂಡಂದಿರಿಗೆ ಕೈನೀಡಿ ಕೊಡುತ್ತ, ಮನದಲ್ಲುಂಟಾದ ಅನುರಾಗದಿಂದ ಕಲ್ಲುಗಳನ್ನು ಒತ್ತಿ ಮೆಟ್ಟಿ ಜಿಗಿದು ತಮ್ಮ ಪ್ರಿಯರನ್ನು ಸಮೀಪಿಸುತ್ತ, ಇನಿಮಾತುಗಳನ್ನು ಬಹುಮಲ್ಲಗೆ ಆಡಿ ಧ್ವನಿಯನ್ನು ಹೊಂದಿಸುತ್ತ, ನಗುತ್ತ ಎಲ್ಲೆಡೆ ಹಲ್ಲುಗಳ ಬೆಳಗನ್ನು ಚೆಲ್ಲುತ್ತ ಬೇಡಿತಿಯರು ನಡೆದರು. ೬೨. ಕಾಮಲಾಲಸೆಯ ಸೊಗಸನ್ನು ತಮ್ಮ ಪ್ರಿಯರಲ್ಲಿ ಬಿತ್ತುತ್ತ, ಬೇಟೆಗಾರರ ಮನಕ್ಕೆ ಹೆಚ್ಚಿನ ವಿಲಾಸವನ್ನು ಒದಗಿಸುತ್ತ, ಯೌವನ ಮಿಡಿಯುವ ಬೇಡಿತಿಯರು ನಡೆದು ಬಂದರು. ೬೩. ಕಣ್ಣುಗಳು ಎಳೆಯ ಮೀನನ್ನೂ, ಪಾದತಳವು ಚೆನ್ನಾದ ಚಿಗುರನ್ನೂ, ಉಬ್ಬಿದ ಸುಂದರವಾದ ಮೊಲೆಯು ತೊಳಗುವ ಮೈಬಣ್ಣವನ್ನೂ, ಮೊಲೆಗಳು ಚಕ್ರವಾಕಗಳನ್ನೂ, ಮುಖವು ತಣ್ಣನೆಯ ಕಿರಣಗಳನ್ನು ಹೊಂದಿರುವ ಚಂದ್ರನನ್ನೂ ತಿರಸ್ಕರಿಸುತ್ತಿರಲು ತಮ್ಮ ಪ್ರಿಯರನ್ನು ವರ್ಣಿಸುತ್ತ ಅಲ್ಲಲ್ಲಿ ನಿಂತು ವಿಶ್ರಮಿಸುತ್ತ ಬೇಡಿತಿಯರು ನಡೆದರು. ೬೪. ದುಂಡು ಮೊಲೆಗಳಿಗೆ ಗುಲಗಂಜಿಯ ಮಾಲೆಯು ಅತಿಶಯವಾದ ಬೆಡಗನ್ನುಂಟುಮಾಡಿರಲು, ಎದ್ದು ಕಾಣುವ ಸುಂದರವಾದ ಕೈಗಳಿಗೆ ಗಾಜಿನ ಬಳೆಗಳು ಚೆಲುವು ಮೂಡಿಸಿರಲು, ಮನೋಹರವಾದ ಕೂದಲು ಬೆನ್ನನ್ನು ಅಪ್ಪಳಿಸುತ್ತಿರಲು ಮಾಟವಾದ ದೇಹವನ್ನು ಬಳುಕಿಸುತ್ತ ವೇಗವಾಗಿ ಚಲಿಸುವ ಸುಂದರಿಯರಾದ

ಕಂಪಿಸೆ ನೆಲೆಮೊಲೆ ತೊಳಪ ಕ
ದಂಪಂ ಪಚ್ಚೋಲೆ ಯಲೆಯಲಳಕಂ ಪಣೆಯೊ।
ಳ್ತಾಂ ಪಿರಿದುಂ ನರ್ತಿಸೆ ಭರ
ದಿಂ ಪದೆದಡಿಯಿಟ್ಟರಂದುಪಾಮರಸತಿಯರ್ ॥ ೬೫ ॥

ಚಚ್ಚರದೆ ಕಿವಿವರಂ ತೆಗೆ
ದೆಚ್ಚು ಕಿರಾತರ್ಕಳ್ಳೆದೆ ಕೆಡಪಿದ ಮೃಗಮಂ
ಬೆಚ್ಚದೆ ಪಿಡಿಪಿಡಿದೊದಗಿಸು
ತುಚ್ಚವದಿಂ ನಡೆದರಂದು ಶಬರಾಂಗನೆಯರ್ ॥ ೬೬ ॥

ಇಂತತಿವಿಳಾಸದಿಂ ಬಳಿವಳಿಯೊಳ್ ಬರ್ಪೆಳವೆಂಡಿರನಲ್ಲಿಗಲ್ಲಿ ಗುಪಚರಿಸುತ್ತುಂ ಬೇಂಟೆಯಾಡುತುಂ ಬೇಂಟೆಕಾಱರ್ ಬರೆವರೆ,

ಹಂಚಿಯ ಕಡ್ಡಿಯಂ ಪೊಡೆದು ನೋಡುತೆ ದಂಷ್ಟ್ರದ ಕೂರ್ಪನುರ್ಬಿ ರೋ
ಮಾಂಚವನಾಂತು ಕೆಕ್ಕಳಿಸುತಲಿರ್ಕೆಲನಂ ಮಲೆದೀಕ್ಷಿಸುತ್ತೆ ಮೇ।
ಣುಂಚದಗುರ್ವಿನಿಂ ಪೊದರಿನಬ್ಬರದಿಂ ಪೊಱಮಟ್ಟುದೊಂದು ಕೋ
ಲಂ ಚರಿಸುತ್ತಮಿರ್ಪ ಶಬರರ್ಕಳನಂಜಿಸುತಂದರಣ್ಯದೊಳ್ ॥ ೬೭ ॥

ಪಂದಿ ಪೊಱಮಟ್ಟುದಿದೆ ತಿವಿ
ಯೆಂದೆನುತುಂ ಮುಸುಱ ಮುತ್ತಿದಾಧೀವರರಂ।
ಕೊಂದಿಕ್ಕಿ ಪೆರ್ಚಿ ತೋರ್ಪಾ
ಪಂದಿಯನಾರ್ದೆಚ್ಚು ಕೆಡಪಿದಂ ಭಟನೊರ್ವಂ ॥ ೬೮ ॥

ಬೇಡಿತಿಯರು ಅಂದು ಬೇಟೆಯಲ್ಲಿ ಶೋಭಿಸಿದರು. ೬೫. ಭಾರವಾದ ಮೊಲೆಗಳು ಅಲುಗಾಡುತ್ತಿರಲು, ವಿಭಾಗಿಸಿದ ಓಲೆಗಳು ಹೊಳೆವ ಕೆನ್ನೆಗಳನ್ನು ಪೀಡಿಸುತ್ತಿರಲು, ಮುಂಗುರುಳು ಹಣೆಯಲ್ಲಿ ಸೊಗಸಾಗಿ ನಾಟ್ಯವಾಡುತ್ತಿರಲು ಆ ಅಸಂಸ್ಕೃತ ಸ್ತ್ರೀಯರು ಚುರುಕು ನಡಿಗೆಯಿಂದ ನಡೆದರು. ೬೬. ಶೀಘ್ರವಾಗಿ ಬಾಣವನ್ನು ಕಿವಿಯವರೆವಿಗೂ ಸೆಳೆದು ಪ್ರಯೋಗಿಸಿ ಕಿರಾತರು ಕೊಂದು ಕೆಡಹಿದ ಪ್ರಾಣಿಗಳನ್ನು ಹೆದರದೆ ಹಿಡಿದುಕೊಂಡು ಬೇಡಿತಿಯರು ಸಂತಸದಿಂದ ಮುನ್ನಡೆದರು. ವ॥ ಹೀಗೆ ನವೋಲ್ಲಾಸದಿಂದ ತಮ್ಮ ಬೆನ್ನ ಹಿಂದೆಯೇ ಬರುತ್ತಿರುವ ಎಳೆಯ ಪ್ರಾಯದ ಹೆಂಡಿರನ್ನು ಅಲ್ಲಲ್ಲಿ ಉಪಚರಿಸುತ್ತ ಬೇಟೆಯಾಡುತ್ತ ಬೇಟೆಕಾರರು ಬರುತ್ತಿರಲು, ೬೭. ಕೋರೆಹಲ್ಲಿನ ತೀಕ್ಷ್ಣತೆಯನ್ನು ಪರೀಕ್ಷಿಸಲು ಹಂಚಿಯ ಕಡ್ಡಿಯನ್ನು ಹೊಡೆದು ನೋಡಿ ಉಬ್ಬಿ ರೋಮಾಂಚನಗೊಂಡು ದುರುಗುಟ್ಟಿ ನೋಡುತ್ತ, ಸುತ್ತಮುತ್ತ ಗರ್ವದಿಂದ ನೋಡುತ್ತ ಭಯಂಕರವಾದ ಎತ್ತರದ ದನಿಯಲ್ಲಿ [ಘೂಂಕರಿಸುತ್ತ] ಪೊದೆಯಿಂದ ಹಂದಿಯೊಂದು ಹೊರಬರುತ್ತ ಕೋಲು ಹಿಡಿದು ಸುತ್ತಾಡುವ ಬೇಡರುಗಳನ್ನು ಅಂದು ಅರಣ್ಯದಲ್ಲಿ ಅಂಜಿಸಿತು. ೬೮. ಇದೋ ಹಂದಿ ಹೊರಬಂದಿತು ತಿವಿ ಎಂದೆನ್ನುತ ಮೇಲೆ ಬಿದ್ದು ಕವಿದ ಆ ಬೇಡರನ್ನು ಕೊಂದುಹಾಕಿ ಭಯಂಕರವಾಗಿ ಕಾಣುವ ಆ ಹಂದಿಯನ್ನು ವೀರನೋರ್ವನು ಆರ್ಭಟಿಸಿ ಬಾಣ ಪ್ರಯೋಗಿಸಿ

ನಲವಿಂ ಪಂದಿಯ ಬೇಂಟೆಯಾಡಿ ಮಗುಟ್ದಿತ್ಯಾನಂದದಿಂ ಭಿಲ್ಲಸಂ
ಕುಳಮಂದೆಟ್ತಿರೆ ಪೆರ್ಚ್ಚಿ ಬೆರ್ಚ್ಚಿ ಪೊದಟ್ದಾಶಾನೀಕಮಂ ನೋಡುತಿ।
ರ್ಕಲನಂ ಕೋಡಿನೊಳಿರ್ದು ತೋರ್ದು ಪಸರ್ವುಲ್ಲಂ ಮೇಯುತುಂ ಮಂಜುಶಾ
ಡ್ವಲದೊಳ್ ಕಣ್ಗೊಳಿಸಿರ್ದುದೊಂದು ಹರಿಣಂ ಸುತ್ತೆತ್ತಿ ಲಾಂಗೂಲಮಂ ॥ ೬೯ ॥

ಬಿಡಿಸುತ್ತುಂ ಬೆಳ್ಳಾರಮ
ನಡಿಯಿಡು ಕಾಣದವೊಲೊಯ್ಯನಿಸು ನಾಯಿಗಳಂ।
ಸಡಿಲಿಸು ಹಾಸಮನೆನುತು
ಗ್ಗಡದಿಂ ಮುತ್ತಿದುದು ಪುಲ್ಲೆಯಂ ಭಿಲ್ಲೌಘಂ ॥ ೭೦ ॥

ಮುತ್ತಿದ ಕಿರಾತರಂ ಕಾ
ಣುತ್ತುಂ ನಾಲ್ದೆಸೆಗೆ ಪಾಯ್ವ ಮಿಗಮಂ ಕೆಡೆಯೆ।
ಚ್ಚೊತ್ತಿ ಕಿಕಿಲಿಱಿದು ಬೇಡ
ರ್ಮತ್ತಂ ಸಂತೋಷದಿಂದೆ ಬರುತಿರ್ಪನೆಗಂ ॥ ೭೧ ॥

ಕೆಂಪಿಡಿದಕ್ಷಿ ರೌದ್ರವದನಂ ಮಿಗೆ ಪೊಣ್ಮುವ ನಿಷ್ಠುರಸ್ವನಂ
ಕಂಪಿಪ ಮೀಸೆ ನೀಡಿ ನಿಮಿರ್ದಿಕ್ಕುವ ಕಾಲ್ಮಹಿಯಂ ಮಹೋಗ್ರದಿಂ
ದಂ ಪೊಡೆವುಗ್ರವಾಲಮಿರದೆಟ್ವಿ ಕೊಡಂಕೆಗಳಿಂ ನಿಕುಂಜದಿಂ
ತಾಂ ಪೊಱಮಟ್ಟುದೊಂದು ಪುಲಿ ಗರ್ಜಿಸುತುಂ ಬಿರಿವಂತೆ ದಿಕ್ಚಯಂ ॥ ೭೨ ॥

ಪುಲಿ ಯಿಂತಿದೆ ಪೊಱಮಟ್ಟುದು
ತೊಲಗದಿರಡ್ಡಗಟ್ಟು ಜಾಯಿಲನ ಹಾಸಮನ।
ಗ್ಗಲಿಸಿ ಕವಿಯೆನುತೆ ಭಿಲ್ಲಾ
ವಲಿ ಯಾರ್ಭಟಿಸುತ್ತೆ ಕವಿದು ಮುತ್ತಿದುದಾಗಳ್ ॥ ೭೩ ॥

ಕೆಳಗೆ ಕೆಡವಿದನು. ೬೯. ಅಂದು ಬೇಡರ ಸಮೂಹವು ಸಂತಸದಿಂದ ಹಂದಿಯ ಬೇಟೆಯಾಡಿ ಅತ್ಯಾನಂದದಿಂದ ಹಿಂದಿರುಗಿ ಬರುತ್ತಿರಲು, ಮನೋಹರವಾದ ಹಸಿರು ಹುಲ್ಲುಗಾವಲಿನಲ್ಲಿ ಹಸಿರು ಹುಲ್ಲನ್ನು ತಿನ್ನುತ್ತ ಕಣ್ಣಿಗೆ ಅಂದವಾಗಿದ್ದ ಜಿಂಕೆಯೊಂದು ಇವರನ್ನು ಕಂಡು ತನ್ನ ಬಾಲವನ್ನು ಸುತ್ತಿ ಮೇಲೆತ್ತಿ, ಬಹಳವಾಗಿ ಹೆದರಿ, ವ್ಯಾಪಿಸಿದ ಎರಡೂ ಕಡೆಯ ದಿಕ್ಕುಗಳನ್ನು ನೋಡಿ ಭಯದಿಂದ ಕೂಡಿದ್ದು ಅದನ್ನು ಪ್ರಕಟಪಡಿಸುತ್ತಿದ್ದಿತು. ೭೦. ಬಲೆಯನ್ನು ಸುತ್ತಲೂ ಹರಡು, ಕಾಣದಂತೆ ಹೆಜ್ಜೆಯಿಡು, ಮೆಲ್ಲನೆ ನಾಯಿಗಳನ್ನು ಛೂಬಿಡು, ಪಾಶವನ್ನು ಸಡಿಲಿಸು - ಹೀಗೆಂದು ಬಿಲ್ಲಾರರ ಸಮೂಹವು ಆ ಜಿಂಕೆಯನ್ನು ಉತ್ಕಟತೆಯಿಂದ ಮುತ್ತಿತು. ೭೧. ತನ್ನನ್ನು ಮುತ್ತಿದ ಬೇಡರನ್ನು ನೋಡಿ ನಾಲ್ಕೂ ದಿಕ್ಕುಗಳಿಗೆ ಓಡತೊಡಗಿದ ಆ ಜಿಂಕೆ ಕೆಳಗೆ ಬೀಳುವಂತೆ ಬಾಣಪ್ರಯೋಗಿಸಿ ಕೊಂದ ಬೇಡರು ಪರಸ್ಪರ ತಮಾಷೆ ಮಾಡುತ್ತ ಸಂತೋಷದಿಂದ ಬರುತ್ತಿರಲು, ೭೨. ಕೆಂಪಾದ ಕಣ್ಣು, ಭಯಂಕರವಾದ ಮುಖ, ಅತಿಶಯವಾಗಿ ಹೊಮ್ಮಿ ಬರುವ ಘನಗರ್ಜನೆ, ಅಲುಗಾಡುವ ಮೀಸೆ, ಮುಂದೆ ಚಾಚಿದ ಕಾಲಿನಿಂದ ಭೂಮಿಯನ್ನು ಅಪ್ಪಳಿಸುವ, ಮಹಾ ಕೋಪದಿಂದ ನೆಲಕ್ಕೆ ಬಡಿಯುವ ಬಾಲ, ಬಿಡದೆ ಮೇಲೆದ್ದ ಕಿವಿಗಳು - [ಹೀಗೆ ಭಯಾನಕವಾಗಿ] ಪೊದೆಯೊಂದರಿಂದ ದಿಗಂತವನ್ನೇ ಬಿರಿಯುವಂತೆ ಗರ್ಜಿಸುತ್ತ ಹುಲಿಯು ಹೊರಬಂದಿತು. ೭೩. ಇದೋ ಹುಲಿ

ಕವಿದಡಗಟ್ಟಿದ ಲುಬ್ಧಕ
ನಿವಹಮನುಱೆ ನೋಡಿ ಗರ್ಜಿಸುತ್ತುಂ ನಿಮಿರ್ದು।
ಪ್ಲವದಿಂ ಲಂಘಿಸೆ ಕೆಲರಂ
ತವೆ ಕೊಂದೊಟ್ಟಿದುದು ಚಿತ್ರಕಾಯಂ ವನದೊಳ್ ॥ ೭೪ ॥

ಮುಸುಱುವ ಜಾಯಿಲನಂ ಗ
ರ್ಜಿಸಿ ಲಂಘಿಸಿ ಪಾಯ್ದು ಸೀಳ್ದಪುಲಿ ಗಾಣುತೆ ಸಾ।
ಧ್ವಸದಿಂದೋಡುವ ಶಬರ
ಪ್ರಸರದೊಳಿದಿರಾದನೊರ್ವನುತ್ತುಂಗಬಲಂ ॥ ೭೫ ॥

ಅರುಣಕಿಸಲಯದ ರಸಮಂ
ಜರಿಯಂ ಬಾಳ್ಗಿತ್ತು ಕುಸಿದು ನಿಟ್ಟಿಸಿ ತಿವಿದಾ।
ದುರ್ಗರುತರಮುದದಿಂ ಪುಲಿಯಂ
ಧರೆಯೊಳ್ಕೆಡೆಗಿಡಿಪಿ ಯುರ್ಬಿ ಯುಱೆ ಬೊಬ್ಬಿಟ್ಟಂ ॥ ೭೬ ॥

ಪುಲಿಯೊಳ್ ಪೋಣರ್ದಾನಲ್ಲನ
ನಲವಿಂ ನಡೆನೋಡಿ ತೂಪಿಱಿದು ಕೆಂಬಾಯ್ದಂ।
ಬುಲಮಿತ್ತಾಲಂಗಿಸಿದಳ್
ಜಲರುಹದಳನೇತ್ರೆ ಶಬರಕಾಮಿನಿಯೊರ್ವಳ್ ॥ ೭೭ ॥

ಇಂತು ಸಂತಸದಿಂದಂ ಪುಲಿವೇಂಟೆಯಾಡಿ ತಮ್ಮ ತಮ್ಮ ಕಾದಲೆಯರ್ವೆರಸು ಮತ್ತಾ ಕಾಂತಾರದೊಳ್ ಸಮಸ್ತಮೃಗಂಗಳನಱಸುತ್ತುಂ ಬೇಂಟೆಕಾಱರ್ಬರೆವರೆ,

ಹೊರಬಂದುದು, ಸರಿಯಬೇಡ ಬೇಟೆನಾಯಿಯಿಂದ ಅಡ್ಡಗಟ್ಟು, ಪಾಶವನ್ನು ದೊಡ್ಡದಾಗಿ ಹರಡು ಎಂದು ಬಿಲ್ಲಾಗರರ ಮೊತ್ತವು ಆರ್ಭಟಿಸುತ್ತ ಆ ಹುಲಿಯನ್ನು ಕವಿದು ಮುತ್ತಿತು. ೭೪. ಅದ್ಭುತ ದೇಹವನ್ನು ಹೊಂದಿದ್ದ [ಆ ಹುಲಿಯು ತನ್ನನ್ನು] ಕವಿದು ಅಡ್ಡಗಟ್ಟಿದ ಬೇಡರ ಸಮೂಹವನ್ನು ಚೆನ್ನಾಗಿ ನೋಡಿ ಗರ್ಜಿಸುತ್ತ ಸಡಗರದಿಂದ ಕೂಡಿ ಮುಂದಕ್ಕೆ ಹಾರಿ ಆ ಕಾಡಿನಲ್ಲಿ ಹಲವರನ್ನು ಚೆನ್ನಾಗಿ ಕೊಂದು ಹಾಕಿತು. ೭೫. ತನ್ನ ಮೇಲೆ ಬೀಳಹೊರಟ ಬೇಟೆ ನಾಯಿಯನ್ನು ಕಂಡು ಆರ್ಭಟಿಸಿ ಅದರ ಮೇಲೆ ನೆಗೆದು ಬಿದ್ದು ಸೀಳಿಹಾಕಲು [ಅದನ್ನು ನೋಡಿ] ಭಯದಿಂದ ಓಡುವ ಬೇಡರ ಗುಂಪಿಗೆ ಶ್ರೇಷ್ಠ ಪರಾಕ್ರಮಿಯೋರ್ವನು ಇದಿರಾದನು. ೭೬. ಕೆಂಪಾದ ಚಿಗುರಿನ ರಸವನ್ನು [ತನ್ನ] ಕತ್ತಿಗೆ ಕೊಟ್ಟು, ಬಾಗಿ ನೋಡಿ ತಿವಿದು ಗರ್ಜಿಸಿ ಅತ್ಯುತ್ಸಾಹದಿಂದ ಹುಲಿಯನ್ನು ಕೊಂದು ಭೂಮಿಗೆ ಉರುಳಿಸಿ ಉಬ್ಬಿ ಚೆನ್ನಾಗಿ ಬೊಬ್ಬೆ ಹಾಕಿದನು. ೭೭. ಹುಲಿಯೊಡನೆ ಹೋರಾಡಿದ ತನ್ನ ಪ್ರಿಯನನ್ನು ಕಮಲಾಕ್ಷಿಯಾದ ಬೇಡಿತಿಯೋರ್ವಳು ಪ್ರೀತಿಯಿಂದ ಕಣ್ಣಾರೆ ನೋಡಿ, ದೃಷ್ಟಿ ಪರಿಹರಿಸಿ, ಕೆಂಪಾದ ತುಟಿಯಿಂದ ತಂಬುಲವಿತ್ತು ಆಲಂಗಿಸಿದಳು. ವ॥ ಹೀಗೆ ಸಂತೋಷದಿಂದ ಹುಲಿ ಬೇಟೆಯಾಡಿ ತಮ್ಮ ತಮ್ಮ ಪ್ರೇಯಸಿಯರ ಜೊತೆ ಆ ಕಾಡಿನಲ್ಲಿ ಬೇಟೆಗಾರರು

ನೆವವಿಟ್ಟು ಮೊಲೆವಣಿಗಳಂ
ತವಕದಿನಂದಱಸುವಂತೆ ಬಲ್ಮೆಳೆಗೊಲ್ದು।
ತ್ಸವದಿಂ ಮೆಲ್ಲನೆ ಪೋದಂ
ಯುವತಿಯನೊಡಗೊಂಡು ಶಬರಕಾಮುಕನೊರ್ವಂ ॥ ೭೮ ॥

ಮೆಳೆಯಂ ಶೋಧಿಸಿ ಮೆಲ್ಲನೆಣ್ದೆಸೆಯನಂದಾರೈದು ಮೇಣುಟ್ಟುದಂ
ಸೆಳೆದುತ್ಕೋಮಲಪಲ್ಲವಾಸ್ತರಣದೊಳ್ ಕುಳ್ಳಿರ್ದು ತಳ್ಕೈಸಿ ಮಂ।
ಜುಳಬಿಂಬಾಧರಪಾನಸೌಖ್ಯಭರದಿಂದಂ ಕೂರ್ತು ತಾಂ ಕೂಡಿದರ್
ಪುಳಕಂಬೆತ್ತು ಪುಳಿಂದ ದಂಪತಿಗಳಾಕಾಂತಾರದೊಳ್ಕೂರ್ಮೆಯಿಂ ॥ ೭೯ ॥

ಮತ್ತಮೊಂದೆಡೆಯೊಳು,

ಲೋಚನಯುಗ್ಮದಿಂದೆಡಬಲಂಗಳನೀಕ್ಷಿಸಿ ತನ್ನ ನಲ್ಲನಂ
ಸೂಚನೆಗೈದು ಕೂಡೆ ಕರೆದೊಯ್ಯನೆ ಬಲ್ಕೆಲೆಯುತ್ತುಮಾತನೊಳ್।
ಕಾಚವಿನೂತ್ನ ಕಂಕಣರವಂ ಕಿವಿಗಳ್ಗಿನಿದಾಗಿ ಪೊಯ್ಯೆ ಮ
ತ್ತಾಚಟುಳಾಕ್ಷಿಯೋಪನೊಡಗೂಡಿದಳತ್ಯಧಿಕಪ್ರಮೋದದಿಂ ॥ ೮೦ ॥

ಬೆರ್ಚಿದಪುಲ್ಲೆಗಂಣ್ಗಳೆಳೆಜವ್ವನೆಯೊರ್ವಳತೀವರಾಗದಿಂ
ಚರ್ಚರಮೊಲ್ದು ಬಂದು ನಿಜವಲ್ಲಭನಂ ವಿಲಸತ್ಪಲಾಟುವಿಂ।
ದರ್ಚಿಗೊಳಲ್ಕೆ ನೋಡಿ ಪದೆದಿಟ್ಟುಱುೞ ಸೂಸಿದಪಳ್ ನಿಕುಂಜಮಂ
ಮುಚ್ಚಿ ಮುಸುಂಕಿಯಪ್ರಚುರಕಾತರದಿಂ ಮಱುಗೊಂಡು ವೃಕ್ಷಮಂ ॥ ೮೧ ॥

ಸಕಲ ಮೃಗಗಳನ್ನು ಹುಡುಕಿಕೊಂಡು ಬರುತ್ತಿರಲು, ೭೮. ಮೊಲೆಯ ಮಣಿಗಳನ್ನು ಕುತೂಹಲದಿಂದ ಹುಡುಕುವ ನೆಪವೊಡ್ಡಿ ದೊಡ್ಡದಾದ ಪೊದರಿನ ಕಡೆಗೆ ಬೇಡ ಕಾಮುಕನೋರ್ವನು ಯುವತಿಯೋರ್ವಳನ್ನು ಮೆಲ್ಲನೆ ಸಂಭ್ರಮದಿಂದ ಕರೆದೊಯ್ದನು. ೭೯. ಬೇಡ ದಂಪತಿಗಳು ಆ ಕಾಡಿನಲ್ಲಿ ಪೊದರನ್ನು ಶೋಧಿಸಿ, ಮೆಲ್ಲನೆ ಎಂಟೂ ದಿಕ್ಕುಗಳನ್ನು ವಿಮರ್ಶಿಸಿ, ಉಟ್ಟ ವಸ್ತ್ರವನ್ನು ಕಳೆದು, ಕೋಮಲವಾದ ಚಿಗುರಿನ ಹಾಸುಗೆಯಲ್ಲಿ ಕುಳಿತು ಒಬ್ಬರು ಮತ್ತೊಬ್ಬರನ್ನು ತಬ್ಬಿ, ಇನಿದಾದ ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯನ್ನು ಸವಿದು, ತುಂಬಿಬಂದ ಸುಖದಿಂದ ಮೋಹಿಸಿ, ರೋಮಾಂಚನಗೊಂಡು ಅಧಿಕವಾಗಿ ದೇಹಸೌಖ್ಯವನ್ನು ಪಡೆದರು. ವ॥ ಮತ್ತೊಂದೆಡೆಯಲ್ಲಿ, ೮೦. ಎರಡೂ ಕಣ್ಣುಗಳಿಂದ ಎಡಬಲಗಳನ್ನು ನೋಡಿ ತನ್ನ ನಲ್ಲನಿಗೆ ಸೂಚನೆ ನೀಡಿ ಜೊತೆಯಲ್ಲಿ ಕರೆದೊಯ್ದು ಪ್ರಿಯನೊಡಗೂಡಿ, ಹೊಸದಾದ ಗಾಜಿನ ಬಳೆಗಳ ದನಿ ಕಿವಿಗೆ ಇನಿದಾಗುತ್ತಿರಲು ಆ ಚಪಲನೇತ್ರೆಯು ತನ್ನ ಪ್ರಿಯನೊಡನೆ ಅತ್ಯಧಿಕ ಹಿಗ್ಗಿನೊಡನೆ ಕೂಡಿದಳು. ೮೧. ಹೆದರಿದ ಜಿಂಕೆಯ ಕಣ್ಗಳ ಎಳೆಯ ಪ್ರಾಯದವಳೊಬ್ಬಳು ಅತ್ಯಧಿಕ ಮೋಹದಿಂದ ಪತಿಯನ್ನು ಸೇರಬಯಸಿ ತೀವ್ರಗತಿಯಲ್ಲಿ ಬಂದು ವಿಲಾಸಯುಕ್ತವಾದ ಹಲವು ಕಾಮ ಕ್ರೀಡೆಗಳಿಂದ ಇಂದ್ರಿಯಸುಖಪಡೆಯಲು ಅತ್ಯಾತುರದಿಂದ ಪೊದರನ್ನು ಮುಚ್ಚಿ, ವೃಕ್ಷವನ್ನು ಮರೆಗೊಂಡು [ಅಕ್ಕ ಪಕ್ಕ] ನೋಡಿ ಕಾಮಲಾಲಸೆಯಿಂದ [ತನ್ನ ವಸ್ತ್ರವನ್ನು] ಚೆನ್ನಾಗಿ ಹರಡಿದಳು.

ಸನ್ನೆಯನೊಲ್ದು ಮಾಡಿ ಕರೆದಂಬುಜನೇತ್ರೆಯ ಸದ್ವಿಲಾಸಮಂ
ಮುನ್ನಱಿದೆಲ್ಲರಂ ಬಿಡದೆ ವಂಚಿಸಿ ಬಂದಮರ್ದಪ್ಪಿ ಯಾತಪ।
ಕ್ಕುನ್ನತಪಾಣಿಯೊಳ್ಪಿಡಿದ ಪಲ್ಲವಮಂ ಮಱೆಮಾಡಿ ಚುಂಬಿಸು
ತ್ತುಂ ನಿಬಿಡಪ್ರಮೋದಮನೆ ತಾಳ್ದುವನೇಚರನೊರ್ವನೊಪ್ಪಿದಂ || ೮೨ ||

ಮತ್ತಮದಲ್ಲದಟ್ಟಿ ಮುಟ್ಟಿ ತೊಟ್ಟನೆ ತೊಱಲ್ದು ಕಟ್ಟೆಸಕದಿಂದಂ ಬೇಂಟೆಯಾಡಿ ಬೞಲ್ದಿನಿಯರ್ಕಳನಲ್ಲಿಗಲ್ಲಿಗುಪಚರಿಸುತ್ತುಂ ಬಿಡದೆ ಪರ್ಪಮಿಂಡಿವೇಡಿತಿಯರ ತಂಡಂ ಬೆರಸುೞಿದ ಮಿಗಂಗಳನಱಸುತ್ತುಂ ಬೇಂಟೆಕಾಱರ್ಬರೆವರೆ,

ಪೊಡೆಯುತ್ತುಂ ಖುರದಿಂ ಶಿಲಾವಿತತಿಯಂ ಕುಂಜಂಗಳಂ ಬಿರ್ಚುತುಂ
ತಡೆವುರ್ವೀರುಹಮಂ ಪೊದಟ್ಟಿಱಿಯುತುಂ ಕೋಡಿಂದೆ ಲಾಂಗೂಲಮಂ।
ಬಿಡದಂತೆತ್ತಿಯರಣ್ಯದೊಳ್ ಚರಿಪಘೋಟಂಗೆಲ್ದು ಱೋಡಾಡುತುಂ
ನಡೆತಂದತ್ತು ಕನಲ್ದು ಕೆಕ್ಕಳಿಸಿ ನೋಡುತ್ತೊಂದುವಾಹದ್ವಿಷಂ || ೮೩ ||

ಕೋಣನಿದೆ ಬಂದುದೆನುತುಂ
ಬಾಣಂಗಳನೆಸೆಯುತಡ್ಡಗಟ್ಟಿದ ಶಬರ।
ಶ್ರೇಣಿಯದೊಂದಬ್ಬರಮಂ
ಕಾಣುತೆ ಪರಿದಟ್ಟಿ ಮುಟ್ಟಿ ಸವರಿತ್ತಾಗಳ್ || ೮೪ ||

ಇದೆ ಪೋದತ್ತಿಲ್ಲಿ ಬಂದತ್ತಿದೆ ಮಿಗೆ ಬೆರಸಿತ್ತಿಲ್ಲಿ ಸೀಳ್ದತ್ತು ದಾಂಟಿತ್ತಿದೆ
ಕೋಡಿಟ್ಟೆತ್ತಿ ಪೊತ್ತೆತ್ತಿದೆ ಖುರಪುಟದಿಂ ಪೊಯ್ದುದಿಂತಿಲ್ಲಿ ಪಾಯ್ದು।
ತ್ತಿದೆ ಮುಟ್ಟಿತ್ತಟ್ಟಿ ಬಂದತ್ತಿದೆಯಿದೆ ಯೆನುತುಂ ಬಿಲ್ಲನೀಡಾಡಿ ಬೇಡ
ರ್ಬೆದಱುತ್ತುಂ ಬೆಲ್ಲಿತೆಲ್ಲಂ ವಿಪುಳತರಲುಲಾಯೋಗ್ರರೌದ್ರತ್ವದಿಂದಂ || ೮೫ ||

೮೨. ಕಮಲಾಕ್ಷಿಯನ್ನು ಪ್ರೀತಿಯಿಂದ ಸನ್ನೆ ಮಾಡಿ ಕರೆದು, ಒಳ್ಳೆಯ ವಿನೋದಗಳನ್ನು ಮುನ್ನವೇ [ಮನದಲ್ಲಿ] ನಿಶ್ಚಯಿಸಿ, ಬೇರೆಲ್ಲರನ್ನೂ ವಂಚಿಸಿ ಬಂದು [ಪ್ರೇಯಸಿಯನ್ನು] ಬಿಗಿಯಾಗಿ ಅಪ್ಪಿ, ಚಿಗುರನ್ನು ವಿಶಾಲವಾದ ಹಸ್ತದಲ್ಲಿ ಹಿಡಿದು ಮರೆಮಾಡಿ ಚುಂಬಿಸುತ್ತ ಅತಿಶಯವಾದ ಸಂತೋಷವನ್ನು ಹೊಂದಿದ ಬೇಡನೊರ್ವನು ಶೋಭಿಸಿದನು. ವ|| ಮತ್ತೆ ಅದಲ್ಲದೆ ಅಟ್ಟಿಕೊಂಡು ಹೋಗಿ, ಸಮೀಪಿಸಿ, ತೀವ್ರವಾಗಿ ಸುತ್ತಾಡಿ ಮಹಾಸಾಹಸ ಕಾರ್ಯಗಳನ್ನು ಬೇಟೆಯಲ್ಲಿ ತೋರಿ ಆಯಾಸಗೊಂಡ ಪ್ರಿಯರನ್ನು ಅಲ್ಲಲ್ಲಿ ನಿಂತು ಉಪಚರಿಸುತ್ತ ಬರುತ್ತಿರುವ ಪ್ರಾಯದ ಬೇಡಿತಿಯರ ತಂಡದೊಂದಿಗೆ ಉಳಿದ ಪ್ರಾಣಿಗಳನ್ನು ಹುಡುಕುತ್ತ ಬೇಟೆಗಾರರು ಬರುತ್ತಿರಲು, ೮೩. ಕೋಣನೊಂದು ಕೆರಳಿ, ದುರುಗುಟ್ಟಿ ನೋಡುತ್ತ, ಕಲ್ಲುಗಳ ರಾಶಿಯನ್ನು ಗೊರಸಿನಿಂದ ಕೆದಕುತ್ತ, ಲತಾಗೃಹಗಳನ್ನು ಹಾಳುಮಾಡುತ್ತ, ತಡೆವ ವೃಕ್ಷಗಳನ್ನು ಕೊಂಬಿನಿಂದ ಕಾಣುವಂತೆಯೇ ನೆಲಕ್ಕುರುಳಿಸುತ್ತ, ಬಾಲವನ್ನು ಮೇಲೆತ್ತಿಕೊಂಡು ಕಾಡಿನಲ್ಲಿ ಓಡಾಡುವ ಕುದುರೆಗಳನ್ನು ಓಡಿಸಿ ಕಾಡುತ್ತ ನಡೆದುಬಂದಿತು. ೮೪. ಇದೋ ಕೋಣ ಬಂದಿತು ಎಂದು ಬಾಣಗಳನ್ನು ಬಿಡುತ್ತ ಅಡ್ಡಗಟ್ಟಿದ ಬೇಡರ ಗುಂಪಿನ ಅಬ್ಬರವನ್ನು ಕಂಡು ಅವರ ಮೇಲೆ ಹಾಯ್ದುಬಂದು ಅಟ್ಟಿ, ಸಮೀಪಿಸಿ ಧ್ವಂಸ ಮಾಡಿತು. ೮೫. ದೊಡ್ಡದಾದ ಕಾಡುಕೋಣವೊಂದು ಉಗ್ರಕೋಪದಿಂದ

ಓಡುವ ಬಿಲ್ಲರೊಳರೆಬರ್
ನಾಡೆ ಪಚಾರಿಸಿಕೊಳುತ್ತೆ ಬಂದತಿಭರದಿಂ।
ದೋಡಾಡುವ ಸೈರಿಭಮಂ
ಕೂಡೆ ಕಱುತ್ತಿಱಿದು ಕೆಡಪಿದರ್ಮುದದಿಂದಂ ॥ ೮೬ ॥

ಕೋಣನ ಬೇಂಟೆಯಾಡಿ ಕಡು ನೊಂದು ವಿಜೃಂಭಿಪ ತಮ್ಮ ನಲ್ಲರಂ
ಕಾಣುತೆ ಬಂದು ಮುದ್ದಿಸಿ ವಿಷಾಣವಿಘಾತದಿನಾದ ಗಾಯಮಂ।
ಮಾಣದೆ ಹಸ್ತಪಲ್ಲವದೆ ಮುಟ್ಟಿ ನಿರೀಕ್ಷಿಸುತೊಪ್ಪಿದರ್ಸಮಂ
ತೇಣಕಿಶೋರನೇತ್ರೆಯರತೀವಮನೋಮುದದಿಂದರಣ್ಯದೊಳ್ ॥ ೮೭ ॥

ಇಂತುಪಚರಿಪ ಪುಳಿಂದಾಂಗನೆಯರ್ವೆರಸುತನಂತಸಂತೋಷದಿಂದಖಿಳವಿಹಂಗಮೃಗಂಗಳಂ ಸಂಹರಿಸಿ ಸಂಫುಲ್ಲೋಲ್ಲಾಸದಿಂದಂ ಭಿಲ್ಲರ್ಬೇಂಟೆಯಾಡಿ ಬೞಲ್ದು,

ನಾನಾವಿಧದಿಂ ಪಕ್ಷಿಮೃ
ಗಾನೀಕಮನಂದು ವಧಿಸಿ ಕೆಲವಂ ಪಿಡಿದ।
ತ್ಯಾನಂದದಿನಡಿಯಿಟ್ಟರ್
ಕಾನನದೊಳ್ತಮ್ಮ ಪಕ್ಕಣಕ್ಕೆ ಪುಳಿಂದರ್ ॥ ೮೮ ॥

ನವಿಲ ಕಲಾಪಮಂ ಕಿಟಿಯ ದಾಡೆಯನಂಚಿತಮತ್ತಕುಂಭಿಯೊ
ಕ್ಕುವ ತಲೆಮುತ್ತನುನ್ನತತರಕ್ಷುವ ಚರ್ಮವನುಳ್ಳವಸ್ತುವಂ।
ತವೆ ಬಿಡದಾಂತು ಪಕ್ಕಣಕೆ ಬರ್ಪ ವನೇಚರರಂ ನಿರೀಕ್ಷಿಸು
ತ್ತವೆ ಯಿದಿರ್ವಂದರಂದು ಕಿಱುವೆಂಗಳತೀವಮನೋನುರಾಗದಿಂ ॥ ೮೯ ॥

ಎಲ್ಲವನ್ನೂ ಚೆಲ್ಲುತ್ತ ಬರುತ್ತಿರಲು ಇದೋ ಹೋಗುತ್ತಿದೆ, ಇದೋ ಇಲ್ಲಿ ಬರುತ್ತಿದೆ, ಇದೋ ಚೆನ್ನಾಗಿ ಕೂಡಿತು, ಇದೋ ಇಲ್ಲಿ ಸೀಳಿ ಹಾಕಿತು, ಇದೋ ದಾಟಿತು, ಇದೋ ಕೊಂಬಿನಲ್ಲಿ ತಿವಿದು ಮೇಲೆತ್ತಿದೆ, ಇದೋ ಗೊರಸಿನಿಂದ ಹೊಡೆಯಿತು, ಇದೋ ಇಲ್ಲಿ ಹಾಯುತ್ತಿದೆ, ಇದೋ ಸಮೀಪಿಸಿ ಅಟ್ಟಿಕೊಂಡು ಬರುತ್ತಿದೆ ಎಂದೆಲ್ಲಾ ಬೆದರಿದ ಬೇಡರು ಬಿಲ್ಲನ್ನು ಬಿಸಾಡಿದರು. ೮೬. ಓಡುವ ಬಿಲ್ಲರಲ್ಲಿ ಕೆಲವರು ಚೆನ್ನಾಗಿ ಉಪಚಾರ ಪಡೆದು ಬಂದು ಜೋರಾಗಿ ಓಡಾಡುವ ಕೋಣನ ಮೇಲೆ ಒಮ್ಮೆಲೆ ಲಕ್ಷ್ಯವಿಟ್ಟು ಸಂತಸದಿಂದ ಕೊಂದು ಕೆಡವಿದರು. ೮೭. ಆ ಅರಣ್ಯದಲ್ಲಿ ಎಳೆಯ ಜಿಂಕೆಯ ಕಣ್ಣೋಟದ ಸುಂದರಿಯರು ಕೋಣನ ಬೇಟೆಯಾಡಿ ಹೆಚ್ಚಾಗಿ ನೊಂದು ಆಯಾಸಗೊಂಡು ಶೋಭಿಸುತ್ತಿರುವ ತಮ್ಮ ಪ್ರಿಯರನ್ನು ಕಂಡು [ಅವರಲ್ಲಿಗೆ] ಬಂದು ಮುದ್ದಿಸಿ ಕೊಂಬಿನಿಂದಾದ ಗಾಯವನ್ನು ಬಿಡದೆ ಮೃದುವಾದ ಕೈಗಳಿಂದ ಮುಟ್ಟಿ ನೋಡುತ್ತ ಅತ್ಯಾನಂದದಿಂದ [ಕೂಡಿದ] ಅವರು ಕಣ್ಣಿಗೆ ಅಂದವಾದರು. ವ॥ ಹೀಗೆ ಉಪಚರಿಸುವ ಬೇಡಸ್ತ್ರೀಯರ ಜೊತೆಗೂಡಿ ಅತ್ಯಾನಂದದಿಂದ ಸಕಲಮೃಗಗಳನ್ನು ಕೊಂದು ಅರಳಿದ ಮನದಿಂದ ಬಿಲ್ಗಾರರು ಬೇಟೆಯಾಡಿ ಆಯಾಸಗೊಂಡು, ೮೮. ನಾನಾ ಬಗೆಯ ಪಕ್ಷಿ ಮೃಗ ಸಮೂಹಗಳನ್ನು ಕೊಂದು, ಕೆಲವನ್ನು ಹಿಡಿದು ಬೇಡರು ತಮ್ಮ ಹಳ್ಳಿಗೆ ಅತ್ಯಾನಂದದಿಂದ ನಡೆದರು. ೮೯. ನವಿಲಿನ ಗರಿಗಳನ್ನು, ಕಾಡುಹಂದಿಯ ದಂತಗಳನ್ನು, ಮದ್ದಾನೆಯ ಕುಂಭಸ್ಥಳದಿಂದ ಹೊರಬಂದ ಸುಂದರವಾದ

ತಂದ ಸಮಸ್ತಪಕ್ಷಿಮೃಗಮಂ ನಲಿದಿಟ್ಟುಕೊಳುತ್ತೆ ತೀವಿದಾ
ನಂದದೆ ತಮ್ಮ ಕಾದಲರನಾದರಿಸುತ್ತುಮುಲೂಖಲಂಗಳೊಳ್।
ಚಂದದ ನಿಗ್ಗವಂಗಳ ಲಸನ್ಮುಸಲಂಗಳನಾಂತು ಪಾಡುತುಂ
ಕುಂದದೆ ವೈಣವಂಗಳನೆ ಕುಟ್ಟುತೆ ಕಣ್ಗೆಸೆದರ್ ಪುಳಿಂದಿಯರ್ ॥ ೯೦ ॥

ಅಂತು ವಿಪುಳವಿಳಾಸಮಂ ನೆಗಟ್ಚುತೆ ಮನಂಗೊಳಿಪ ಪುಳಿಂದಾಂಗನೆಯರೊಳೆಳ ವೆಣ್ಮಣಿಯೊರ್ವಳ್,

ಚಳಿಸಿದ ವೈಣವಮಂ ಚೆಂ
ದಳದಿಂ ಪಿಡಿದೊಯ್ದು ನೋಡಿ ಕೆಂಪಾಗಿರೆ ನಿ।
ರ್ಮಳಮಾದುದಿಲ್ಲೆನುತ್ತುಂ
ಚಳಿಸುತೆ ಕಿಱುಬಿಯದಿ ಪತಿಯನೇಂ ನಗಿಸಿದಳೋ ॥ ೯೧ ॥

ಶಶಿಕಾಂತದೊರಲೊಳಕ್ಕಿಯ
ನೊಸೆದಮರಿಸಿ ನೋಡಿ ನೀಳ್ದ ಕಣ್ಬೆಳಗಾಗಳ್।
ಪಸರಿಸೆ ಬೆಳ್ಪಾಗಿರೆ ಕಂ
ಡಸಿಯಳ್ತೆಗೆದೇಂ ಪುಳಿಂದನಂ ನಗಿಸಿದಳೋ ॥ ೯೨ ॥

ಮತ್ತಮೊಂದೆಡೆಯೊಳ್,

ಲೋಚನರೋಚಿ ಪೊಚ್ಚಪೊಸಜೊನ್ನಮನುಣ್ಮಿಸೆ ಯಂಗಕಾಂತಿ ಸ
ನ್ಮೇಚಕಮೇಘಮಂ ಪಡೆಯೆ ಸಾಲಿಡೆ ನುಣ್ಗುರುಳೋಳಿ ದುಂಬಿಯಂ।
ಕೀಚಕದೊಪ್ಪುವಿಂಚರಮನೊಯ್ಯನೆ ಮೇಣ್ ಶ್ರುತಿಗೂಡಿಕೊಂಡು ನ
ಲ್ಮೇಚಪದಂಗಳಂ ನಲಿದು ಪಾಡುತೆ ಬೇಡಿತಿಯೊರ್ವಳೊಪ್ಪಿದಳ್ ॥ ೯೩ ॥

ದುಂಡನೆಯ ಮುತ್ತನ್ನು, ಶ್ರೇಷ್ಠವಾದ ಹುಲಿಯ ಚರ್ಮವನ್ನು, ಕಾಡಿನಲ್ಲಿ ದೊರೆಯುವ ವಸ್ತುಗಳನ್ನು ಸಂಪೂರ್ಣವಾಗಿ ಬಿಡದೆ ಪಡೆದು ಹಳ್ಳಿಗೆ ಹಿಂತಿರುಗಿ ಬರುವ ಬೇಡರನ್ನು ನೋಡುತ್ತಲೆ [ಅವರ] ಎಳೆಯ ಪ್ರಾಯದ ಬೇಡಿತಿಯರು ಅತ್ಯಾನಂದದಿಂದ ಇದಿರುಗೊಂಡರು. ೯೦. [ಕಾಡಿನಿಂದ] ತಂದ ಸಕಲ ಪಕ್ಷಿ ಮೃಗಗಳನ್ನು ಸಂತೋಷದಿಂದ ತೆಗೆದಿಡುತ್ತ ತುಂಬಿದ ಆನಂದದಿಂದ ತಮ್ಮ ಪ್ರಿಯರನ್ನು ಆದರಿಸುತ್ತ, ಒರಳುಕಲ್ಲಿನಲ್ಲಿ ಸುಂದರವಾದ ಆನೆಯ ದಂತದಿಂದ ಮಾಡಿದ ಒನಕೆಯನ್ನು ಹಿಡಿದು ಹಾಡುತ್ತ, ಸತತವಾಗಿ ಬಿದಿರಕ್ಕಿಯನ್ನು ಕುಟ್ಟುತ್ತ ಬೇಡಿತಿಯರು ಕಣ್ಣಿಗೆ ಅಂದವಾದರು. ವ॥ ಹಾಗೆ ಬಹಳ ಲಾವಣ್ಯವನ್ನು ಪ್ರಕಟಪಡಿಸುತ್ತ ಮನಸ್ಸನ್ನು ಸೆಳೆವ ಬೇಡಿತಿಯರಲ್ಲಿ ಎಳೆಯಳೋರ್ವಳು, ೯೧. ಹರಡಿದ ಬಿದಿರಕ್ಕಿಯನ್ನು ಕೆಂಪನೆಯ ಅಂಗೈಯಲ್ಲಿ ಹಿಡಿದುಕೊಂಡು ಹೋಗಿ ಪರೀಕ್ಷಿಸಲು [ಅದು] ಕೆಂಪಾಗಿರಲು ಇನ್ನೂ ಶುದ್ಧವಾಗಿಲ್ಲವೆಂದು ಭಾವಿಸಿ ಕೈಯಾಡುತ್ತ ಕಿರಿವಯಸಿನ ಬೇಡಿತಿಯೋರ್ವಳು ತನ್ನ ಪತಿಯನ್ನು ಹೀಗೆ ನಗಿಸಿದಳು. ೯೨. ಚಂದ್ರಕಾಂತ ಶಿಲೆಯ ಒರಳಿನಲ್ಲಿ ಅಕ್ಕಿಯನ್ನು ಪ್ರೀತಿಯಿಂದ ಇರಿಸಿ ನೋಡಲು, [ಅವಳ] ವಿಶಾಲವಾದ ಕಣ್ಣ ಬೆಳಗು ಪಸರಿಸಿತು. [ಅದು] ಬೆಳ್ಳಗಿರಲು ಅಕ್ಕಿಯೆಂದೇ ಬಗೆದು [ಕುಟ್ಟಿ] ಬೇಡನನ್ನು ಅದೇನು ನಗಿಸಿದಳೋ. ೯೩. ಕಣ್ಣಕಾಂತಿಯು ಹೊಚ್ಚ ಹೊಸ ಬೆಳುದಿಂಗಳನ್ನು

ಪಂಚಮಮಂ ಪೊರೆದಮರ್ದ ಪು
ಳಿಂಚೆಯ ನುಣ್ಚರಮಗಲ್ದ ಪುಂಸ್ಕೋಕಿಲಗಳ್।
ತಾಂ ಚೇಗದೆ ಪೆಣ್ಕೋಗಿಲೆ
ಯಿಂಚರಮೆಂದಲ್ಲಿ ಸುತ್ತಿ ಮುತ್ತುಗುಮನಿಶಂ ॥ ೯೪ ॥

ಮತ್ತಮೊರ್ವಳ್,

ಪುಲ್ಲೆಯ ಮಱಿಯಂ ಮೇಗ
ಣ್ಣುಲ್ಲಾಸದಿನೆತ್ತಿ ಧರೆಗಿೞಿಪೆ ಮೊಗಸಸಿ ತ।
ನ್ನಲ್ಲಿ ಪೊರೆದಿರ್ದ ಕಱಿಯಂ
ನಿಲ್ಲದೆ ತೆಗೆದಿರಿಸುವಂತಿದಾದುದು ವನದೊಳ್ ॥ ೯೫ ॥

ಚೆಂದಳಿರನುಟ್ಟು ಚಾರುಪು
ಳಿಂದಿ ವಿರಾಜಿಸಿದಳೊರ್ವಳಿಳಪವಳಮಣಿಯ।
ಮಂದಾಲವಾಲದೆಡೆಯೊ
ಳ್ಕುಂದದೆ ಜೃಂಭಿಪ ತಮಾಲಲತೆ ಯೆಂಬಿನೆಗಂ ॥ ೯೬ ॥

ಮತ್ತಂ ಪೊಸಮೀನಂ ತಳೆ
ದೆತ್ತಿ ಲಸದ್ದೋರ್ಲತಿಕೆಯನಂದೆಸೆದಿರ್ದ।
ಳ್ಮತ್ತಗಜಗಮನೆ ಯೊರ್ವಳ್
ಚಿತ್ತಜಭೂವರನ ಕೇತನಮದೆಂಬಿನೆಗಂ ॥ ೯೭ ॥

ಹೀಲಿಯನಡ್ಡಗಟ್ಟಿ ಬಿಡದಾಡುವ ಪೆಣ್ಣವಿಲೆಂದು ಕೇಕಿ ಬಂ
ದಾಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ ಕಂಡು ಬೆರ್ಚಿ ಮೇ।
ಣ್ಮೇಲೆ ನಿರೀಕ್ಷಿಸಲ್ಬರಿವ ಕಣ್ಗದಿರಂಗಜಬಾಣದಂತೆವೋ
ಲ್ಲಾಲಿಡೆ ಸೋಗೆ ತಲ್ಲಣಿಸೆ ನೋಡುತೆ ಬೇಡಿತಿಯೊರ್ವಳೊಪ್ಪಿದಳ್ ॥ ೯೮ ॥

ಹೊಮ್ಮಿಸಲು, ದೇಹಕಾಂತಿಯು ಕಡುನೀಲಿಯ ಮೋಡದ ಬಣ್ಣವನ್ನು ಹೊಂದಿರಲು, ನುಣ್ಣನೆಯ ಮುಂಗುರುಳುಗಳ ಸಮೂಹ ದುಂಬಿಯಂತೆ ಸಾಲಾಗಿರಲು ಕೊಳಲಿನ ಇನಿದನಿಯನ್ನು ಮೆಲ್ಲಗೆ ಶ್ರುತಿಗೂಡಿಸಿಕೊಂಡು ಚೆಲುವಾದ ಬೆಳುದಿಂಗಳ ಪದವ ಸಂತಸದಿಂದ ಬೇಡಿತಿಯೋರ್ವಳು ಹಾಡುತ್ತ ಶೋಭಿಸಿದಳು. ೯೪. ಪಂಚಮ ಸ್ವರವನ್ನು ಹೊರಳಿಸಿ ಸೇರಿಸಿದ ಶಬರಿಯ ಇನಿದನಿಯು ಅಗಲಿದ ಗಂಡು ಕೋಗಿಲೆಗಳು ಹೆಣ್ಣು ಕೋಗಿಲೆಯ ಮಧುರ ಧ್ವನಿಯೆಂದು ಆ ಸಾರವತ್ತಾದ ದನಿಯಿಂದ [ಭ್ರಮೆಗೊಂಡು] ಎಡೆಬಿಡದೆ ಸುತ್ತಿಮುತ್ತುವುವು. ವ॥ ಮತ್ತೆ ಓರ್ವಳು, ೯೫. ಆ ಕಾಡಿನಲ್ಲಿ ಜಿಂಕೆಯ ಮರಿಯನ್ನು ಸಂತೋಷದಿಂದ ಮೇಲಕ್ಕೆತ್ತಿ ಭೂಮಿಗಿಳಿಸಲು ಮುಖವೆಂಬ ಚಂದ್ರನು ತನ್ನಲ್ಲಿನ ಕಪ್ಪನ್ನು ತಡಮಾಡದೆ ತೆಗೆದಿರಿಸಿದಂತಾಯಿತು. ೯೬. ಒಳ್ಳೆಯ ಚಿಗುರುಡುಗೆ ಧರಿಸಿದ ಸುಂದರಾಂಗಿ ಬೇಡಿತಿಯೋರ್ವಳು ಹವಳಮಣಿಯ ಪಾತಿಯಲ್ಲಿ ಬಾಡದೆ ಅರಳಿದ ಹೊಂಗೆಯ ಬಳ್ಳಿಯೆನ್ನುವಂತೆ ಶೋಭಿಸಿದಳು. ೯೭. ಮತ್ತೆ, ಮದಿಸಿದ ಆನೆಯ ನಡಿಗೆಯುಳ್ಳ ಓರ್ವಳು ಹೊಳೆವ ಬಾಹುವೆಂಬ ಬಳ್ಳಿಯನ್ನು ಮೇಲೆತ್ತಿ, ಅದಾಗತಾನೆ ಹಿಡಿದ ಮೀನನ್ನು [ಕೈಯಲ್ಲಿ] ಹಿಡಿದಿರಲು [ಅದು] ಮನ್ಮಥರಾಜನ ಬಾವುಟವೆನ್ನುವಂತೆ ಅವಳು ಅಂದಗೊಂಡಿದ್ದಳು. ೯೮. ಗರಿಗಳನ್ನು ಕೆದರಿ ಸಂತಸದಿಂದ ಕುಣಿವ ಹೆಣ್ಣುನವಿಲೆಂದು

ಇಂತತಿವಿಲಾಸಮಂ ತಳೆದು ಕಣ್ಗೊಳಿಪ ಪುಳಿಂದಾಂಗನೆಯರ್ವೆರಸು ಪಕ್ಕಣಂಗಳೊಳ್ತೆಕ್ಕನೆ ತೀವಿ ಮಿಕ್ಕು ಸೊಕ್ಕಿಪ ಶಬರಸಂಕುಳದ ಬೇಂಟೆಮೊದಲಾದಖಿಳವಿನೋದಂಗಳನುದ್ಭಟಕ್ಷಿತೀಂದ್ರ ಚಂದ್ರಮನಾಲೋಕಿಸುತ್ತುಂ ಮುಂತಣ್ಗೆ ಬರೆವರೆ,

ತೆಕ್ಕನೆ ತೀವಿ ವಿಜೃಂಭಿಪ
ಪಕ್ಕಣತತಿಯಿಂ ಸಮಸ್ತ ಮಹಿಜಾವಳಿಯಿಂ।
ಮಿಕ್ಕೆಸೆವ ಮಿಗಗಳಿಂ ಸ
ಮ್ಯಕ್ಕೌತೂಹಲಮನಾಂತೆಸೆದುದಾವಿಂಧ್ಯಂ ॥ ೯೯ ॥

ತುಱುಗಿದ ಪೆರ್ಮರಂಗಳಿನುದಂಚಿತಗಂಡಶಿಲಾನಿಕಾಯದಿಂ
ದುಱು ಪೊನಲೆಟ್ಟು ಮೇಣ್ಪರಿವ ನಿರ್ಝರಸಂಚಯದಿಂ ತೊಳಪ್ಪ ಪಾ।
ಸಱುಗಳಿನುಗ್ರಗಹ್ವರನಿಕಾಯದಿನಂದು ವಿರಾಜಿಸಿತ್ತು ಬೆ
ಟ್ಟೆಱುಯನೆನಿಪ್ಪ ವಿಂಧ್ಯಧರಣೀಧರಮೊಯುತೆ ಕಣ್ಗೆ ಚಿತ್ರಮಂ ॥ ೧೦೦ ॥

ತೀವಿದ ಸೊಂಪಂ ತಳೆದೆಸೆ
ವಾವಿಂಧ್ಯಾಚಳಮನುದ್ಭಟಕ್ಷಿತಿಪಾಲಂ।
ಪಾವನಚರಿತಂ ನಿಜಸೇ
ನಾವೃತನೊಲವಿಂದೆ ನೋಡುತುಂ ನಡೆತಂದಂ ॥ ೧೦೧ ॥

ಉರುತರವಿಪಿನಮನೀಕ್ಷಿಸು
ತಿರದುದ್ಭಟಭೂಮಿಪಾಲಕಂ ವಿಂಧ್ಯೋರ್ವೀ।
ಧರಮಂ ದಾಂಟಿಯಲಂಪಿಂ
ಪಿರಿದುಂ ಪಯಣಂಗಳಿಂ ಸಮಂತೆಟ್ಟಿಂದಂ ॥ ೧೦೨ ॥

ಭಾವಿಸಿದ ಗಂಡುನವಿಲು ಸಮೀಪಿಸಿ ಬಂದು ಆ ಮನೋಹರವಾದ ಹೊಳೆವ ಹೆರಳಿಗೆ [ತನ್ನ ಗರಿಗಳನ್ನು] ಹೊಂದಿಸಿದಾಗ ಅದನ್ನು ಕಂಡು ಹೆದರಿದ ಮತ್ತು ಮೇಲೆ ನೋಡಲು ಎಲ್ಲೆಡೆ ಹರಡಿದ ಕಣ್ಣ ಬೆಳಗು ಕಾಮನಬಿಲ್ಲಿನಂತಿರಲು ನವಿಲುಗಳು [ಸಂಭ್ರಮದಿಂದ] ಸಾಲುಗೊಳ್ಳಲು ಗಾಬರಿಗೊಂಡು ನೋಡುತ್ತ ಓರ್ವ ಬೇಡಿತಿ ಶೋಭಿಸಿದಳು. ವ॥ ಹೀಗೆ ಹೆಚ್ಚಿನ ಚೆಲುವನ್ನು ಹೊಂದಿ ಕಂಗೊಳಿಸುವ ಬೇಡಿತಿಯರೊಡನೆ ಹಳ್ಳಿಗಳೊಳಗೆ ಥಕ್ಕನೆ ಆವರಿಸಿ ಅತಿಕ್ರಮಿಸಿ ಬೀಗುವ ಬೇಡರ ಗುಂಪಿನ ಬೇಟೆಯೇ ಮೊದಲಾದ ವಿವಿಧ ವಿನೋದಗಳನ್ನು ಉದ್ಭಟ ಭೂಪಾಲಚಂದ್ರಮನು ನೋಡುತ್ತಾ ಮುಂದೆ ಬರುತ್ತಿರಲು, ೯೯. ಥಕ್ಕನೆ ಸುತ್ತುವರಿಯಲ್ಪಟ್ಟು ಶೋಭಿಸುವ ಹಳ್ಳಿಗಳಿಂದ, ಸಕಲ ವೃಕ್ಷಾವಳಿಗಳಿಂದ, ಅತಿಶಯವಾಗಿ ಒಪ್ಪುವ ಪ್ರಾಣಿಗಳಿಂದ ಪೂರ್ಣ ಕುತೂಹಲವನ್ನು ಹೊಂದಿ ಆ ವಿಂಧ್ಯಪರ್ವತವು ಶೋಭಿಸಿತು. ೧೦೦. ಒತ್ತಾಗಿ ಬೆಳೆದ ಬೃಹತ್ ವೃಕ್ಷಗಳಿಂದ, ಎದ್ದು ಕಾಣುವ ಶ್ರೇಷ್ಠವಾದ ಕಲ್ಲುಗಳ ಮೊತ್ತದಿಂದ, ತುಂಬಿ ಹರಿವ ನದಿ ಹಾಗೂ ಜಲಪಾತಗಳಿಂದ, ಹೊಳೆವ ಹಾಸುಗಲ್ಲುಗಳಿಂದ, ಭಯಂಕರ ಗುಹೆಗಳಿಂದ ಅಂದು ಗಿರಿರಾಜನೆನಿಸುವ ವಿಂಧ್ಯ-ಪರ್ವತವು ಕಣ್ಣುಗಳಿಗೆ ಆಶ್ಚರ್ಯವನ್ನುಂಟುಮಾಡುತ್ತ ಶೋಭಿಸಿದ್ದಿತು. ೧೦೧. ಚೆಲುವು ಆವರಿಸಿರಲು [ಅದನ್ನು ತನ್ನಲ್ಲಿ] ಧರಿಸಿ ಶೋಭಿಸುವ ಆ ವಿಂಧ್ಯಪರ್ವತವನ್ನು ಪವಿತ್ರಚರಿತ್ರನಾದ ಉದ್ಭಟಮಹಾರಾಜನು ತನ್ನ ಸೇನೆಯಿಂದ ಸುತ್ತುವರಿಯಲ್ಪಟ್ಟು ಸಂತಸದಿಂದ [ಅದನ್ನು] ನೋಡುತ್ತ ನಡೆದನು. ೧೦೨. ಉದ್ಭಟ ಭೂಪಾಲನು ವಿಸ್ತಾರವಾದ

ಇಂತು ಪಯಣಗತಿಯಿಂದೆಟ್ಟಿಂದುರ್ವಿಗೆ ಪರಮಪವಿತ್ರೆಯಪ್ಪ ಗೋದಾವರಿಯ ತೀರದೊಳೊಂದು ಮನಂಗೊಳಿಪ ಪರಿಮಳಾಭಿಕಲಿತನವಾಂಕುರಕುಸುಮಕಿಸಲಯಪಲಾಶಶಲಾಟುಫಲಪುಂಜಮಂಜುಳಮಂ ಜರೀಭರನಮಿತರಂಜಿತಶಾಖಾಸಂಚಯಾಂಚಿತಮನೋಹರವಿಶಾಲರಸಾಲಚ್ಛಾಯೆಯೊಳ್ ಬಟಿಲ್ವಾನೆಯಿಂ ದಿೞಿದಿೞಿದು ಶಿವಭದ್ರಂ ಬೆರಸಿ ಪಲ್ಲವಾಚ್ಛಾದಿತಪುಳಿನವೇದಿಕಾಗ್ರದೊಳೊಲವಿಂದಂ ಮಂಡಿಸಿ ಸದಾ ಶಿವಧ್ಯಾನದಿಂದುದ್ಭಟಕ್ಷಿತೀಂದ್ರಚಂದ್ರಮನೆಸೆದಿರ್ದಂ॥

ಅಂತುಮಲ್ಲದೆಯುಂ,

ಸೂಳಱಿದೊಯ್ಯನೊಯ್ಯನೆ ಮಹೀಧರನಂದನರೊಲ್ದು ಬೀಸುವಾ  
ಬಾಳದ ಪೊಚ್ಚಬಿಚ್ಚಳದ ತಂಬೆಲರಿಂಪಿಗೆ ಮೆಯ್ಯನಿತ್ತು ಪೊಂ।  
ಬಾಳೆಯ ಕಂಗೊಳಿಪ್ಪ ತಿರುಳೊಳ್ಳೆಲೆವಾಸಿನೊಳಂದು ಸರ್ವಭೂ  
ಪಾಳಕಮಸ್ತಕಸ್ಥಿತಪದಾಂಬುಜನುದ್ಭಟದೇವನೊಪ್ಪಿದಂ ॥ ೧೦೩ ॥

ಬಣ್ಣಿಸಲರಸಂ ನಿಱಿಗನ  
ತಣ್ಣೆಳಲೊಳ್ ಕುಳಿತುಚಿತಗೋಷ್ಠಿಗಳಿಂದ।  
ಕ್ಷುಣ್ಣಮುದಂ ಬಡೆದುಱಿ ಮು  
ಕ್ಕಣ್ಣನನೆಡೆವಿಡದೆ ನೆನೆಯುತುಂ ರಂಜಿಸಿದಂ ॥ ೧೦೪ ॥

ಇಂತಮೃತಕರಕಲಾಪನ ಚರಣಸ್ಮರಣಾಸಕ್ತನುದ್ಭಟಕ್ಷಿತೀಂದ್ರಂ ಶಿವಭದ್ರಂಬೆರಸುತತಿವಿಲಾಸದಿಂದಿರು ತಿರ್ಪಿನಮಾಸಮಯದಲ್ಲಿ,

ಕಾಡನ್ನು ನೋಡುತ್ತ, ಬಿಡದೆ ವಿಂಧ್ಯ ಪರ್ವತವನ್ನು ದಾಟಿ, ಸಂತಸದಿಂದ ಘನವಾದ ಪ್ರಯಾಣ ಮಾಡುತ್ತ ಹಾಗೆಯೇ ದಂಡೆತ್ತಿ ಬಂದನು. ವ॥ ಹೀಗೆ ದಂಡೆತ್ತಿ ಪ್ರಯಾಣ ಮಾಡುತ್ತ ಭೂಮಂಡಲಕ್ಕೆ ಅತ್ಯಂತ ಪವಿತ್ರೆಯಾದ ಗೋದಾವರಿಯ ದಡದಲ್ಲಿ ಮನಸೆಳೆವ ಒಂದು ಪರಿಮಳಯುಕ್ತವಾದ, ಹೊಸದಾಗಿ ಹೂವು ಕಚ್ಚಿದ, ಚಿಗುರು, ಎಲೆ, ಮಿಡಿ, ಹಣ್ಣುಗಳನ್ನೂ ಮನೋಹರ ಗುಚ್ಛಗಳನ್ನೂ [ಹೊಂದಿ] ತುಂಬಿ ಬಾಗಿ ರಂಜಿಸಿರುವ, ಟೊಂಗೆಗಳಿಂದ ಕೂಡಿ ಮನೋಹರವಾಗಿರುವ ವಿಶಾಲವಾದ ಮಾವಿನ ಮರದ ನೆರಳಿನಲ್ಲಿ ಬಳಲಿದ ಆನೆಯಿಂದಿಳಿದು ಮಂತ್ರಿ ಶಿವಭದ್ರನೊಡಗೂಡಿ ಸಂತಸದಿಂದ ಚಿಗುರು ಹರಡಿದ ಮಣ್ಣಿನ ದಿಣ್ಣೆಯಲ್ಲಿ ಕುಳಿತು ಸದಾಶಿವನ ಧ್ಯಾನಮಾಡುತ್ತ ಉದ್ಭಟಮಹಾರಾಜ ಚಂದ್ರಮನು ಶೋಭಿಸಿದ್ದನು. ಅದಲ್ಲದೆ, ೧೦೩. ಭೂಪಾಲರ ಮಕ್ಕಳು ಸರದಿ ಪ್ರಕಾರ ಪ್ರೀತಿಪಟ್ಟು ಮೆಲ್ಲಮೆಲ್ಲನೆ ಬೀಸುವ ಮುಡಿವಾಳದ ವಿಶಾಲವಾಗಿ ಹರಡಿದ ತಣ್ಣನೆಯ ಗಾಳಿಗೆ ದೇಹವನ್ನು ಕೊಟ್ಟು, ಅಂದು ಮನೋಹರವಾದ ಹೊಂಬಾಳೆಯ ಸಾರಯುಕ್ತವಾದ ಎಲೆಯ ಹಾಸುಗೆಯಲ್ಲಿ ಸಕಲ ರಾಜರುಗಳ ಶಿರವನ್ನು ತನ್ನ ಪಾದಕಮಲಗಳ ಮೇಲೆ ಹೊಂದಿದ್ದ ಉದ್ಭಟದೇವನು ಶೋಭಿಸಿದನು. ೧೦೪. ಬಣ್ಣಿಸುವುದಾದರೆ ಅರಸನು ಇಮ್ಮಾವಿನ ತಣ್ಣೆಳಲಿನಲ್ಲಿ ಕುಳಿತು ಯೋಗ್ಯವಾದ ಸಭೆಗಳಿಂದ ಅತಿಶಯವಾದ ಆನಂದವನ್ನು ಹೊಂದಿ, ಮೇಲಾಗಿ ಶಿವನನ್ನು ಸದಾ ನೆನೆಯುತ್ತ ಶೋಭಿಸಿದನು. ವ॥ ಹೀಗೆ ಶಿವನ ಪಾದವನ್ನು ನೆನೆಯುವುದರಲ್ಲಿ ಆಸಕ್ತನಾದ ಉದ್ಭಟಮಹಾರಾಜನು ಮಂತ್ರಿ ಶಿವಭದ್ರನ ಜೊತೆಗೂಡಿ

ಸೋರ್ಮುಡಿ ಕೇಕಿಯಂ ನಯನಮುತ್ಪಲಮಂ ನಡು ಸಿಂಹಪೋತಮಂ
ಪೆರ್ಮೊಲೆ ಪೊಚ್ಚಪೊಂಗಳಸಮಂ ತುಟಿ ವಿದ್ರುಮಮಂ ಸುಧಾಂಶುಮಂ
ನಿರ್ಮಳವಕ್ತ್ರಬಿಂಬಮಿರದೇಳಿಸೆ ಮೆಲ್ಲನೆ ಗಾಣವೆಂಗಳಿ
ರ್ವರ್ಮಿಗೆ ಬಂದರಂದು ನೃಪಕುಂಜರನಿರ್ದೆಡೆಗೈದೆ ರಾಗದಿಂ ॥ ೧೦೫ ॥

ತರಳಾಪಾಂಗಮರೀಚಿ ತುಳ್ಕೆ ರುಚಿಯಂ ವಾಮಾಂಘ್ರಿಮಾಣಿಕ್ಯನೂ
ಪುರಚಂಚದ್ಧ್ವನಿ ಪೆರ್ಚೆ ಬೆನ್ನನುರೆ ಧಮ್ಮಿಲ್ಲಂ ಕರಂ ಪೊಯ್ಯೆ ಪಂ
ಕರುಹಾಸ್ಯಂ ದರಹಾಸಮಂ ಪರಪೆ ಯುತ್ತುಂಗಸ್ತನಂ ಮೇಲುದಂ
ಭರದಿಂ ನೂಂಕೆ ಸಮಂತು ಬಂದರೊಸೆದಿರ್ವರ್ಗಾನನಿಷ್ಣಾತೆಯರ್ ॥ ೧೦೬ ॥

ಇಂತೊಬ್ಬುಳಿಗೊಂಡುರ್ಬಿ ಪುರ್ಬುವ ಬಿಬ್ಬೋಕಂ ಪಸರಿಸುತೆಟ್ಟಿಂದನುನಯದಿಂದಂ ಮನಂಬುಗೆ ಪೊಗಟ್ದಿದಿರೊಳ್ನಿಲ್ತು ವಿರಾಜಿಪ ತದ್ಗಾನಾಂಗನೆಯರನುದ್ಭಟರಾಜೇಂದ್ರಚಂದ್ರಮಂ ಕಂಡು,

ಕೇಳ್ದವರೆಟ್ಟಿಂದೆಡೆಯಂ
ತಾಳ್ದು ಮಹೋಲ್ಲಾಸಮಂ ತದುರ್ವೀಪಾಲಂ।
ನೀಳ್ದ ಮುದದಿಂದೆ ಪಾಡ
ಲ್ವೇಟ್ದಿಂ ತದ್ಗಾನಕಾಂತೆಯರ್ಕಳನಾಗಳ್ ॥ ೧೦೭ ॥

ಮತ್ತಮಾನೃಪನನುಜ್ಞೆಯಂ ಕೈಕೊಂಡಿದಿರೊಳ್ಕುಳ್ಳಿರ್ದುದ್ಭಟ ದೇವಂಗಾನಂದದಿಂ ತಮ್ಮ ಮೃತೋಪಮಾನಗಾನಂ ತದ್ಗಾನಾಂಗನೆಯರ್ಕೇಳಿಸಲೆಂದುಮುದ್ಯುಕ್ತೆಯರಾಗಿ,

ಉಲ್ಲಾಸದಿಂದಿರುವ ಸಮಯದಲ್ಲಿ, ೧೦೫. ಬಳಲ್ಮುಡಿಯು ನವಿಲನ್ನು, ಕಣ್ಣುಗಳು ಕಮಲವನ್ನು, ನಡುವು ಸಿಂಹದ ಮರಿಯನ್ನು, ತುಂಬು ಮೊಲೆಗಳು ನವೀನವಾದ ಹೊನ್ನಿನ ಕಳಶವನ್ನು, ತುಟಿಯು ಹವಳವನ್ನು, ನಿರ್ಮಲವಾದ ಮುಖವು ಚಂದ್ರನನ್ನು ಬಿಡದೆ ತಿರಸ್ಕರಿಸುವಂತಹ ಈರ್ವರು ಹಾಡುಗಾರ್ತಿಯರು ಸಂತಸದಿಂದ ಮೆಲ್ಲನೆ ರಾಜರುಗಳಲ್ಲಿ [ಬಲಿಷ್ಠ] ಗಜದಂತೆ ಇದ್ದ ಉದ್ಭಟನಿದ್ದಲ್ಲಿಗೆ ಬಂದರು. ೧೦೬. ಚಂಚಲವಾದ ಕಡೆಗಣ್ಣೋಟದ ಕಾಂತಿಯು ತನ್ನ ಬೆಳಗನ್ನು ಚೆಲ್ಲುತ್ತಿರಲು, ಎಡಗಾಲಿನ ಮಾಣಿಕ್ಯದ ಕಾಲಂದುಗೆಯ ಘಲ್‌ಘಲ್ ಧ್ವನಿ ಹೆಚ್ಚುತ್ತಿರಲು, ಮುಡಿಯು ಬೆನ್ನನ್ನು ಚೆನ್ನಾಗಿ ಅಪ್ಪಳಿಸುತ್ತಿರಲು, ಕಮಲದಂತಹ ಮುಖವು ಮಂದಹಾಸವನ್ನು ಚೆಲ್ಲುತ್ತಿರಲು, ಉನ್ನತವಾದ ಮೊಲೆಯು ಸೀರೆಯ ಸೆರಗನ್ನು ತೀವ್ರವಾಗಿ ಸರಿಸುತ್ತಿರಲು ಹಾಡುವುದರಲ್ಲಿ ನಿಪುಣೆಯರಾದ ಆ ಇಬ್ಬರು ಹಾಡುಗಾರ್ತಿಯರು ಓರಣಗೊಂಡು ಸಂತಸದಿಂದ ಬಂದರು. ವ॥ ಹೀಗೆ ಗುಂಪುಗೂಡಿ ಮೇಲ್ವರಿವ ಔದಾಸೀನ್ಯವನ್ನು ವಿಸ್ತರಿಸುತ್ತ ನಡೆದುಬಂದು ನಯವಾದ ಮಾತುಗಳಿಂದ ಮನವೊಲಿಸುತ್ತ, ಮನಮುಟ್ಟುವಂತೆ ಹೊಗಳುತ್ತ ಇದಿರಿನಲ್ಲಿ ನಿಂತು ಶೋಭಿಸಿರುವ ಆ ಹಾಡುಗಾರ್ತಿಯರನ್ನು ಉದ್ಭಟಮಹಾರಾಜ ಚಂದ್ರಮನು ನೋಡಿ, ೧೦೭. ಅವರು ಬಂದ ಸ್ಥಳದ ಬಗೆಗೆ ವಿಚಾರಿಸಿ, ಅತ್ಯಾನಂದವನ್ನು ಹೊಂದಿದ ಮಹಾರಾಜನು ಅತಿಶಯವಾದ ಮುದದಿಂದ ಆ ಹಾಡುಗಾರ್ತಿಯರಿಗೆ ಹಾಡಲು ಅಪ್ಪಣೆ ಮಾಡಿದನು. ವ॥ ಮತ್ತೆ, ಆ ರಾಜನ ಅಪ್ಪಣೆಯನ್ನು ಸ್ವೀಕರಿಸಿ ಇದಿರಿನಲ್ಲಿ ಕುಳಿತು ಉದ್ಭಟದೇವನಿಗೆ ಆ ಹಾಡುಗಾರ್ತಿಯರು ಆನಂದದಿಂದ ತಮ್ಮ ಅಮೃತಸಮಾನವಾದ

ದಂಡಿಗೆಗಳ ಸುತಿಯಂ ನೆಱೆ
ಕಂಡಿರದಾರ್ಕೆದು ಕೂಡಿ ಪೊದಟ್ಟಿಂಚರದಿಂ
ಕೊಂಡಾಡೆ ಪಾಡಿದರ್ ತುಱು
ಮಿಂಡಿಯರಮೃತೋಪಮಾನಗಾನಮನೊಲವಿಂ ॥ ೧೦೮ ॥

ತತ್ಸಾಮ್ಯೋದ್ಭಟದೇವಮುಖ್ಯಪದವಿಶ್ರಾಂತಾಖಿಳೋರ್ವೀಧರರ್
ತತ್ಸೌಖ್ಯಾಮೃತವಾರ್ಧಿಯೊಳ್ ಬಿಡದೆ ತೇಂಕಾಂಡಲ್ಬೆಡಂಗಿಂ ವಿಜೃಂ।
ಭತ್ಸರ್ಪಿಸ್ಫುಟದಂತಕೋರಕರುಚಿವ್ರಾತಂ ಲಸಚ್ಚಂದ್ರಿಕಾಂ
ಚತ್ಸರ್ವಸ್ವಮನೀಯೆ ಬಾಯ್ದೆಱೆದು ಪಂಕೇಜಾಕ್ಷಿಯರ್ ಪಾಡಿದರ್ ॥ ೧೦೯ ॥

ಚಂದ್ರಾನನೆಯರ್ವಿಲಸ
ಚ್ಚಂದ್ರಿಕೆಯಂ ಪಡೆದು ಮಧುರಮಾದಿಂಚರದಿಂ
ಮಂದ್ರಸಮಧ್ಯಮತಾರೆಯ
ಮಂದ್ರರವಂ ಮಿನುಗೆ ಪಾಡಿದರ್ ನಲವಿಂದಂ ॥ ೧೧೦ ॥

ಸಲೆ ಷಡ್ಜಋಷಭಗಾಂಧಾ
ರಲಸನ್ಮಧ್ಯಮಮನೋಜ್ಞಪಂಚಮಕೌತೂ
ಹಲದೈವತಸುನಿಷಾದೋ
ಜ್ವಳಮಿಳಿತಸ್ವರಮನಱಿದು ಪಾಡಿದರೊಲವಿಂ ॥ ೧೧೧ ॥

ಗಾಡಿಯಮರ್ದಪ್ಪೆ ಗೌಡವ
ರಾಡವಸಂತೋದ್ಧುರಾಗಮಂ ತಿಳಿದೊಲವಿಂ।
ನಾಡೆ ಪೊದಟ್ಟಿಂಚರದಿಂ
ಪಾಡಿದರೆಳವೆಣ್ಗಳುದ್ಭಟೋರ್ವಿಪನಿದಿರೊಳ್ ॥ ೧೧೨ ॥

ಕಂಠಶ್ರೀಯನ್ನು ಕೇಳಿಸಲು ಇಚ್ಛಿಸಿ ಸಿದ್ಧರಾಗಿ, ೧೦೮. ಆ ಗೊಲ್ಲ ತರುಣಿಯರು ದಂಡಿಗೆಗಳನ್ನು ಚೆನ್ನಾಗಿ ಶ್ರುತಿಗೊಳಿಸಿ ಹೊಮ್ಮಿ ಬಂದ ಇನಿದಾದ ಕಂಠಶ್ರೀಯನ್ನು ಆಲಿಸಿ, ವಿಚಾರಮಾಡಿ, ತಾವು ಬೇರೆಲ್ಲೂ ಕೇಳಿಲ್ಲವೆಂದು ಕೊಂಡಾಡುವಂತೆ ತಮ್ಮ ಅಮೃತ ಸಮಾನವಾದ ಕಂಠದಿಂದ ಪ್ರೀತಿಪೂರ್ವಕವಾಗಿ ಹಾಡಿದರು. ೧೦೯. ಉದ್ಭಟದೇವ ಹಾಗೂ ಅವನ ಪಾದಗಳ ಬಳಿ ಆರಾಮವಾಗಿ ಕುಳಿತ ಸಕಲ ರಾಜರುಗಳು, ಆ ಸೌಖ್ಯಾಮೃತ ಸಮುದ್ರದಲ್ಲಿ ಬಿಡದೆ ತೇಲಾಡುವಂತೆ ಬೆಡಗಿನಿಂದ ವಿಶೇಷವಾಗಿ ಶೋಭಿಸುತ್ತಿರುವ ಸ್ಫುಟವಾದ ದಂತ ಹಾಗೂ ಮುಖಕಮಲಗಳ ಬೆಳಗಿನ ಮೊತ್ತವು ಹೊಳೆಯುವ ಬೆಳುದಿಂಗಳಿನಂತೆ [ಕೂಡಿ] ಸಕಲವನ್ನೂ ಕೊಡುವಂತೆ ಬಾಯಿತೆರೆದು ಕಮಲಮುಖಿಯರು ಹಾಡಿದರು. ೧೧೦. ಚಂದ್ರಮುಖಿಯರು ಉಜ್ವಲವಾದ ಬೆಳುದಿಂಗಳನ್ನು ಪಡೆದು, ಮಧುರವಾದ ಕಂಠದಿಂದ ಮಂದ್ರ ಮಧ್ಯಮ ತಾರೆಯ ಗಂಭೀರ ಧ್ವನಿಯು ಮಿನುಗುವಂತೆ ಸಂತಸದಿಂದ ಹಾಡಿದರು. ೧೧೨. ಸೊಗಸು ಕೂಡಿರಲು ಗೌಡ, ವರಾಡ, ವಸಂತ -ಈ ಶ್ರೇಷ್ಠ ರಾಗಗಳನ್ನು ತಿಳಿದು ಲವಲವಿಕೆಯಿಂದ ಕೂಡಿ ಹೊಮ್ಮಿ ಬಂದ ಕಂಠಶ್ರೀಯಿಂದ

ಕಣ್ಣಟ್ಟುಲತ್ವಮಂ ನಟಿಸೆ ಮೆಲ್ಲಗೆ ನೋಡುತೆ ವಾಮಪಾಣಿಯಿಂ
ಮೇಣ್ಣದುರಿಂದೆ ಹಾರ್ದಮುಮನಂಗುಳಿ ಕೂರ್ತಭಿನಯ್ಸಿ ತೋಱುತುಂ
ಮೇಣ್ಣಿರಮಾಗೆ ಪೊಚ್ಚಪೊಸಬಂದಿಗೆ ಬಾಯ್ದೆಱೆದಂದು ಪಾಡಿದರ್
ನುಣ್ಣರವೆತ್ತಿ ಪೂರ್ಣಹಿಮದೀಧಿತಿಬಿಂಬಸಮಾನವಕ್ತ್ರೆಯರ್ ॥ ೧೧೩ ॥

ಪಂಚಮದಿಂಚರಮಂ ಬಿಡ
ದಂಚಿತರಾಗಪ್ರಪಂಚಮಂ ತಿಳಿದೊಲವಿಂ।
ತಾಂ ಚೆಲ್ವಿಂ ಗೀತಂಗಳ
ನುಂಚಮುದಂ ಬಡೆದು ಪಾಡಿದರ್ಕೋಮಲೆಯರ್ ॥ ೧೧೪ ॥

ವರನಾಟಿಗೌಳದೊಳ್ ಸುರು
ಚಿರಮಾದ ವರಾಳಿಮುಖ್ಯರಾಗಂಗಳೊಳೊ।
ಲ್ದುರುಗೀತಮುಮಂ ಪಾಡುತೆ
ಕರಮೊಪ್ಪಿದರಮೃತಕಿರಣಬಿಂಬಾನನೆಯರ್ ॥ ೧೧೫ ॥

ಆರಭಿ ಮೇಘರಂಜಿ ಶಶಿಮಂಜರಿ ಗುರ್ಜರಿ ದೇಸಿ ದೇವಗಾಂ
ಧಾರಿ ವಸಂತಪದ್ಮ ಶಶಿಭಾಸ್ಕರ ಸಿಂಹರವಂ ಸುರೇಶ್ವರಂ।
ಮಾರಜಯಂತ ಭೌಳಿ ಮಧುಮಾಧವಿ ಭೈರವಿ ಸಾಳಗಾದಿವಿ
ಸ್ತಾರಮದಾದ ರಾಗತತಿಯಂ ನೆಱೆ ಪಾಡಿದರಂಬುಜಾಕ್ಷಿಯರ್ ॥ ೧೧೬ ॥

ಉದ್ಭಟದೇವನ ಇದಿರಿನಲ್ಲಿ ಚಿಕ್ಕಪ್ರಾಯದ ಸ್ತ್ರೀಯರು ಹಾಡಿದರು. ೧೧೩. ಕಣ್ಣು ಚಾಂಚಲ್ಯವನ್ನು ಪ್ರದರ್ಶಿಸಲು ಮೆಲ್ಲಗೆ ನೋಡುತ್ತ, ಎಡಹಸ್ತವು ಜಾಣತನದಿಂದ ಆತ್ಮೀಯವಾದುದನ್ನು ಬೆರಳುಗಳ ಮೂಲಕ ಉತ್ಸಾಹದಿಂದ ಅಭಿನಯಿಸಿ ತೋರುತ್ತ, ಶಾಶ್ವತವೆನ್ನುವಂತೆ ನವ ನವೀನವಾದ ಬಂದೂಕ ಪುಷ್ಪದಂತೆ ಬಾಯಿ ತೆರೆದು ಕೋಮಲ ಕಂಠದಿಂದ ದನಿಯೆತ್ತಿ ಪೂರ್ಣಚಂದ್ರನ ಬೆಳಗನ್ನು ಬಿಂಬಿಸುವ ಸಮಾನ ಮುಖವುಳ್ಳ ಸುಂದರಿಯರು ಹಾಡಿದರು. ೧೧೪. ಪಂಚಮದ ಮಧುರ ಧ್ವನಿಯನ್ನು ಬಿಡದೆ, ಪ್ರಸಿದ್ಧ ರಾಗಪ್ರಪಂಚವನ್ನು ತಿಳಿದು ಪ್ರೀತಿಯಿಂದ ಆಕರ್ಷಕವಾಗಿ ಗೀತಗಳನ್ನು ಎತ್ತರದ ದನಿಯಲ್ಲಿ ಸಂತಸಯುಕ್ತರಾಗಿ ಕೋಮಲೆಯರು ಹಾಡಿದರು. ೧೧೫. ಶ್ರೇಷ್ಠವಾದ ನಾಟಿ, ಗೌಳ [ರಾಗ]ಗಳಲ್ಲಿ ಮನೋಹರವಾದ ವರಾಳಿಯೇ ಮುಖ್ಯವಾದ ರಾಗಗಳಲ್ಲಿ ಪ್ರೀತಿಪಟ್ಟು ಉತ್ತಮವಾದ ಗೀತಗಳನ್ನು ಹಾಡುತ್ತ ಚಂದ್ರಾನನೆಯರು ಚೆನ್ನಾಗಿ ಶೋಭಿಸಿದರು. ೧೧೬. ಆರಭಿ, ಮೇಘರಂಜಿನಿ, ಶಶಿಮಂಜರಿ, ಗುರ್ಜರಿ, ದೇಸಿ, ದೇವಗಾಂಧಾರಿ, ವಸಂತಪದ್ಮ, ಶಶಿಭಾಸ್ಕರ, ಸಿಂಹರವ, ಸುರೇಶ್ವರ, ಮಾರಜಯಂತ, ಭೌಳಿ, ಮಧುಮಾಧವಿ, ಭೈರವಿ, ಸಾಳಗ - ಇವೇ ಮೊದಲಾದ ವಿಪುಲ ರಾಗಸಮೂಹವನ್ನು

ಕೋಗಿಲೆ ಯೊಪ್ಪುವಿಂಚರಮನೇಳಿಪ ನುಣ್ಚರದಿಂ ಮನಕ್ಕೆ ತ
ಣ್ಪಾಗಿರೆ ಪಾಡುವಂಗನೆಯರುಜ್ವಳಗೀತಮನೊಲ್ದು ಕೇಳ್ವ ಮ।
ತ್ತಾಗುಣಭೂಷಣೋದ್ಭಟನ ಚಿತ್ತಸರೋರುಹಮಧ್ಯರಾಜಿತ
ಶ್ರೀ ಗುರುಪಂಪೆಯಾಣ್ಮ ಸಲೆ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೧೭ ॥

ಇದು ಸಮಸ್ತ ಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾತ
ಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾವನ
ಪಾದನಖೋಚ್ಛಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣಶ್ರೀಸೋಮರಾಜೇಂ
ದ್ರವಿರಚಿತಮಪ್ಪ ಶೃಂಗಾರಸಾರಮಹಾಪ್ರಬಂ
ಧದೊಳ್ ವಿಂಧ್ಯಾಚಳವರ್ಣನಂ
ಎರಡನೆಯ ಆಶ್ವಾಸಂ ಮುಗಿದುದು.

ಅಂಬುಜಾಕ್ಷಿಯರು ಚೆನ್ನಾಗಿ ಹಾಡಿದರು. ೧೧೭. ಕೋಗಿಲೆಯ ಮಧುರಧ್ವನಿಯನ್ನು ಹೀಯಾಳಿಸುವಂತೆ ಮಂಜುಳ ಧ್ವನಿಯಿಂದ ಮನಸ್ಸಿಗೆ ತಂಪಾಗುವಂತೆ ಹಾಡುವ ಸ್ತ್ರೀಯರ ಅತಿಶಯವಾದ ಗೀತವನ್ನು ಪ್ರೀತಿಯಿಂದ ಕೇಳುವ, ಹಾಗೆಯೇ, ಆ ಗುಣಭೂಷಣನಾದ ಉದ್ಭಟದೇವನ ಮನಸ್ಸೆಂಬ ಸರೋವರದ ಮಧ್ಯೆ ಶೋಭಿಸಿರುವ ಶ್ರೀ ಗುರು ಪಂಪಾಪತಿ ಅಲ್ಲಮಪ್ರಿಯನು ಚೆನ್ನಾಗಿ ನಮ್ಮನ್ನು ರಕ್ಷಿಸುವುದು. ವ॥ ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ [ಅವರ] ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತುರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಎರಡನೆಯ ಆಶ್ವಾಸವಾದ ವಿಂಧ್ಯಾಚಳ ವರ್ಣನವು ಮುಗಿದುದು.

ಕೊಳನೆಲ್ಲಂ ಪೊಸಪೂಗೊಳಂ ನೆಗಟ್ದಿ ನಾನಾ ವೃಕ್ಷಮೆಲ್ಲಂ ಮಿಳ
ತ್ಫಳವೃಕ್ಷಂ ಮಿಗೆ ಶಾಳಿಕಾವನಮದೆಲ್ಲಂ ಗಂಧಶಾಲೀವನಂ।
ಜಳಮೆಲ್ಲಂ ವಿಳಸಜ್ಜಳಂ ಲತೆಗಳೆಲ್ಲಂ ಪೆಂಪುಗುಂಪಿಂಪುಪೂ
ಗಳನಾಂತೊಳ್ಲತೆಯಲ್ಲದಿಲ್ಲಮಮರ್ದೊಪ್ಪಂಬೆತ್ತ ತದ್ದೇಶದೊಳ್ ॥ ೭ ॥

ಕೆಱೆಯಿಲ್ಲದ ಪಳ್ಳಿಗಳೊ
ಳ್ದೊಱೆಯಿಲ್ಲದ ಭೂಮಿ ಸಜ್ಜನರ್ಸತ್ಕವಿಗಳ್।
ನೆಱೆ ಜಾಣರ್ಘನವಿಬುಧರ್
ತಱಿಸಂದಿರದೂರ್ಗಳಿಲ್ಲವಂತಾನಾಡೊಳ್ ॥ ೮ ॥

ಮುದಮನೊಡರ್ಚದಿಂಪುನುಡಿ ಮೂರ್ಛೆಯೊಳೊಂದಿಸದಿರ್ಪ ಪಾಡು ಬೇ
ಟದ ಕಡು ಸೊಂಪಿನಿಂಪಿನ ಪಳಂಚುವಲಂಪಿನಲಂಪನೊಲ್ದು ಮಾ।
ಡದ ಬೆಲೆವೆಣ್ಗಳುನ್ನತಲಸತ್ಕೃತಿಯಂ ಸಲೆ ಕೇಳದುತ್ತಮ
ರ್ಮದದೊಡೆ ವೆರ್ಚರಿಲ್ಲ ಪದೆದೀಕ್ಷಿಪೊಡಾಕಮನೀಯದೇಶದೊಳ್ ॥ ೯ ॥

ಸಲ್ಲಲಿತಮಾದ ತೂರ್ಯಮ
ದಿಲ್ಲದ ದೇವಾಲಯಂಗಳಧ್ವರಪದದೊ।
ಳ್ಪಿಲ್ಲದ ವಿಪ್ರರ್ಚಿನ್ಮುದ
ವಿಲ್ಲದ ಯತಿಪತಿಗಳಿಲ್ಲ ತದ್ಧಾರಿಣಿಯೊಳ್ ॥ ೧೦ ॥

ಕವಿಗಮಕಿವಾದಿವಾಗ್ಮಿಗ
ಳವಿರಳಪಂಡಿತರನೇಕಶಾಸ್ತ್ರಜ್ಞರ್ ಧ।
ರ್ಮವಿದರ್ನಾನಾಕಲೆಗಳ
ತವೆ ಬಲ್ಲವರಲ್ಲದಿಲ್ಲವಂತಾನಾಡೊಳ್ ॥ ೧೧ ॥

ಪಟ್ಟಣ, ಚೆನ್ನಾದ ಪಟ್ಟಣಗಳಿಲ್ಲದ ಭೂಭಾಗ ಆ ರಾಜ್ಯದಲ್ಲಿಲ್ಲ. ೭. ಆ ದೇಶದಲ್ಲಿ ಕೊಳಗಳೆಲ್ಲ ಹೊಸದಾದ ಹೂವಿನ ಕೊಳಗಳು, ಪ್ರಖ್ಯಾತವಾದ ನಾನಾ ಬಗೆಯ ವೃಕ್ಷಗಳೆಲ್ಲ ಫಲಭರಿತ ವೃಕ್ಷಗಳು, ಭತ್ತದ ಗದ್ದೆಗಳೆಲ್ಲಾ ಸುವಾಸನೆಯಿಂದ ಕೂಡಿದ ಭತ್ತದ ಗದ್ದೆಗಳು, [ಹರಿವ] ನೀರೆಲ್ಲ ಪವಿತ್ರ ಜಲ, ಲತೆಗಳೆಲ್ಲ ಮಧುರವಾದ ಸುವಾಸನೆಯಿಂದ ಕೂಡಿದ ಹೂಗಳಿಂದ ತುಂಬಿದ ಲತೆಗಳು - [ಹೀಗೆ ಇವು] ವ್ಯಾಪಿಸಿ ಸೊಗಸು ಪಡೆದಿದ್ದುವು. ೮. ಆ ನಾಡಿನಲ್ಲಿ ಕೆರೆಯಿಲ್ಲದ ಹಳ್ಳಿಗಳು; ಒಳ್ಳೆಯ ತೊರೆಯಿಲ್ಲದ ನೆಲ; ಸಜ್ಜನರು, ಸತ್ಕವಿಗಳು, ಅತಿಜಾಣರು, ಘನವಿದ್ವಾಂಸರು ನಿಶ್ಚಯಿಸಿ ವಾಸಿಸದೆ ಇರುವ ಊರುಗಳು ಅಲ್ಲಿ ಇಲ್ಲ. ೯. ಚೆನ್ನಾಗಿ ವಿಚಾರಮಾಡಿ ಹೇಳುವುದಾದರೆ ಆ ಸುಂದರ ದೇಶದಲ್ಲಿ ಸಂತೋಷವನ್ನುಂಟುಮಾಡದ ಇನಿದಾದ ಮಾತು; ಮೈಮರೆಸದ ಹಾಡು; ಅತಿಶಯವಾದ ಕಾಮಾನುರಾಗವನ್ನೂ, ಚೆಲುವು-ಮಾಧುರ್ಯಗಳನ್ನೂ, ಮನಮುಟ್ಟುವ ಸುಖದ ಪರಾಕಾಷ್ಠೆಯನ್ನೂ ಪ್ರೀತಿಪಟ್ಟು ಒದಗಿಸದ ಸೂಳೆಯರು; ಶ್ರೇಷ್ಠ ಕೃತಿಯನ್ನು ಮನವಿಟ್ಟು ಕೇಳದೆ, ಸಂತಸದಿಂದ ರೋಮಾಂಚನಗೊಂಡು ಉಬ್ಬದೆ ಇರುವವರು ಅಲ್ಲಿ ಇಲ್ಲ. ೧೦. ಮನಸ್ಸಿಗೆ ಮುದವೀವ ಮಂಗಳವಾದ್ಯವಿಲ್ಲದ ದೇವಾಲಯಗಳು, ಯಜ್ಞಕಾರ್ಯಗಳಲ್ಲಿ ಶೋಭಿಸದ ಬ್ರಾಹ್ಮಣರು, ಅಲೌಕಿಕ ಆನಂದ ಹೊಂದದ ಯತಿಶ್ರೇಷ್ಠರು ಆ ಭೂಭಾಗದಲ್ಲಿ ಇಲ್ಲ. ೧೧. ಆ ನಾಡಿನಲ್ಲಿ ಕವಿ ಗಮಕಿ ವಾದಿ ವಾಗ್ಮಿಗಳು, ಅಸಂಖ್ಯ ಪಂಡಿತರು,

ಇಂತತಿಮನಂಬುಗೆ ಪಾಡುವಂಬುಜಾನನೆಯರ ಇಂಬುವಡೆದಮೃತೋಪಮಾನಗಾನಕ್ಕೆ ಮೆಚ್ಚಿ ಯವರ ಇಟ್ಟಣೆಕೆಗಳವಡದಂಗಚಿತ್ತಮಂ ಕೊಟ್ಟು ತಣಿವಿನಂ ಮೃದುಮಧುರೋಕ್ತಿಗಳನಾಡಿ ತದ್ಗಾಯಕಿಯರಂ ಬೀಱುಳ್ಕೊಟ್ಟುರ್ವೀಜನಕಲ್ಪಭೂಜನುದ್ಭಟಕ್ಷಿತೀಂದ್ರಂ ಮಗುಟ್ದಾನೆಯ ಬೆಂಗೆ ವಾಯ್ದಾನಂದದಿಂದಂ ಗೋದಾವರಿಯನುತ್ತುರಿಸಿ ಬರೆವರೆ ಕುಂತಳದೇಶಂ ವಿರಾಜಿಸುತ್ತಿರ್ದುದೆಂತೆನೆ,

ಪೊಸಪರಿಕಾಲ್ಗಳಿಂ ತಿಳಿಗೊಳಂಗಳಿನಚ್ಛತಟಾಕಜಾಳದಿಂ
ಪಸುರ್ವೆಳಗಂ ಪಳಂಚುವ ವನಂಗಳಿನುದ್ಘನದೀನದಂಗಳಿಂ।
ಪಸರಿಸಿದಿಂಪಿನಾರವೆಗಳಿಂ ಪಲದೇಗುಲದಿಂ ಸಮಂತು ರಂ
ಜಿಸಿದುದು ಮಂಜುದೇಶವತಿಪುಣ್ಯದ ಕೋಶಮನೂನಸಂಪದಂ ॥ ೪ ॥

ಅಳವಟ್ಟಿರ್ಪ ಪೊಟಿಲ್ಗಳಿಂ ಸುರುಚಿರಗ್ರಾಮಂಗಳಿಂ ರಂಜಿಪ
ಗ್ಗಳ ಕಾಲ್ವಳ್ಳಿಗಳಿಂ ಪುರಂಗಳಿನನೇಕೋಚ್ಚಾಗ್ರಹಾರಂಗಳಿಂ।
ವಿಳಸತ್ಪರ್ವಟಜಾಳದಿಂ ತೊಳಪ ರಂಗಾನೀಕದಿಂ ನಿರ್ಮಳ
ಸ್ಥಳದಿಂದಂ ಪಿರಿಯೂರ್ಗಳಿಂದೆಸೆದುದಾದೇಶಂ ಕರಂ ಸೊಂಪಿನಿಂ ॥ ೫ ॥

ಅಂಚೆಗಳಿಲ್ಲದಂಬುರುಹವಂಬುಜಮಿಲ್ಲದ ಪಂಕಜಾಕರಂ
ಮಿಂಚುವ ಪಂಕಜಾಕರಮದಿಲ್ಲದ ನಲ್ವನಮುಲ್ಲಸದ್ವನೌ।
ಘಾಂಚಿತಮಾಗದೂರ್ಗ್ಗಳುಮವಿಲ್ಲಮವಿಲ್ಲದ ಪಟ್ಟಣಂ ಸಮಂ
ತುಂಚ ಪೊಟಿಲ್ಗಳಿಲ್ಲದ ಮಹೀತಳಮಿಲ್ಲ ತದೀಯರಾಜ್ಯದೊಳ್ ॥ ೬ ॥

ಅಂದವಾದ, ಕಾಂತಿಯುಕ್ತರಾದ ಸಂಗೀತ ವಿದುಷಿಯರು ಹಾಡಿದರು. ವ॥ ಹೀಗೆ ಮನಮುಟ್ಟುವಂತೆ ಹಾಡುವ ಕಮಲಮುಖಿಯರ ಇಂಪಾದ ಅಮೃತ ಸಮಾನವಾದ ಹಾಡಿಗೆ ಮೆಚ್ಚಿ ಅವರಿಗೆ ಸೊಗಸಾದ ಬಹುಮಾನವನ್ನಿತ್ತು, ಮನಸಾರೆ ಮೃದುಮಧುರವಾದ ನುಡಿಗಳನ್ನಾಡಿ ಆ ಗಾಯಕಿಯರನ್ನು ಕಳುಹಿಸಿ ಪ್ರಜೆಗಳಿಗೆ ಕಲ್ಪವೃಕ್ಷನಾದ ಉದ್ಭಟ ಮಹಾರಾಜನು ಹಿಂತಿರುಗಿ ಆನೆಯ ಮೇಲೆ ಏರಿ ಆನಂದದಿಂದ ಗೋದಾವರಿಯನ್ನು ದಾಟಿ ಬರುತ್ತಿರಲು ಕುಂತಳ ದೇಶವು ಶೋಭಿಸುತ್ತಿದ್ದಿತು. ಅದು ಹೇಗೆಂದರೆ, ೪. ಹೊಸದಾದ ಹರಿವ ಕಾಲುವೆಗಳಿಂದ, ತಿಳಿಯಾದ ಕೊಳಗಳಿಂದ, ಸ್ವಚ್ಛವಾದ ಕೆರೆಗಳ ಸಮೂಹದಿಂದ, ಹಸಿರಿನ ಕಾಂತಿಯಿಂದ, ಥಳಥಳಿಸುವ ಕಾಡುಗಳಿಂದ, ಶ್ರೇಷ್ಠವಾದ ಹೆಣ್ಣು-ಗಂಡು ಹೊಳೆಗಳಿಂದ, ಹರಡಿಕೊಂಡಿರುವ ಸಿಹಿಯಾದ ತೋಟಗಳಿಂದ, ಹಲವು ದೇವಮಂದಿರಗಳಿಂದ ಮನೋಹರವಾಗಿ, ಪುಣ್ಯದ ಆಗರವಾಗಿ ಕೊರತೆಯಿಲ್ಲದಷ್ಟು ಸಂಪದ್ಭರಿತವಾಗಿ ಕುಂತಳ ದೇಶವು ಚೆನ್ನಾಗಿ ಶೋಭಿಸುತ್ತಿತ್ತು. ೫. ಹೊಂದಿಕೊಂಡಿರುವ ಪಟ್ಟಣಗಳಿಂದ, ಮನೋಹರ ಗ್ರಾಮಗಳಿಂದ, ಶೋಭಿಸುವ ಕಾಲುದಾರಿಯ ಹಳ್ಳಿಗಳಿಂದ, ಪುರಗಳಿಂದ, ಅನೇಕ ಶ್ರೇಷ್ಠ ಅಗ್ರಹಾರಗಳಿಂದ, ಮೂರೂ ಕಡೆ ಬೆಟ್ಟಗಳಿಂದ ಸುರಕ್ಷಿತವಾಗಿ ರಂಜಿಸುವ ನಗರ ಸಮೂಹದಿಂದ, ಬೆಳಗುವ ರಂಗಮಂದಿರಗಳಿಂದ, ಪವಿತ್ರ ಸ್ಥಳಗಳಿಂದ, ಹಿರಿಯ ಊರುಗಳಿಂದ ಆ ದೇಶವು ಹೆಚ್ಚಿನ ಚೆಲುವನ್ನು ಪಡೆದು ಅಂದಗೊಂಡಿದ್ದಿತು. ೬. ಹಂಸಗಳಿಲ್ಲದ ನೀರು, ಕಮಲಗಳಿಲ್ಲದ ಕೊಳ, ಶೋಭಿಸುವ ಕೊಳಗಳಿಲ್ಲದ ಸುಂದರ ತೋಟ, ಸುಂದರ ತೋಟಗಳ ಸಮೂಹದಿಂದ ರಂಜಿಸದ ಊರುಗಳು, ಊರುಗಳಿಲ್ಲದ

# ಮೂರನೆಯ ಆಶ್ವಾಸಂ

ಶ್ರೀರಾಗಂ ಮೆಲ್ಲೆರ್ದೆಗಂ
ಶ್ರೀರಾಗಮನೀಯೆ ಪಾಡಿದರ್ ಶಶಿಮುಖಿಯರ್।
ಭೂರಮಣಾಗ್ರಣಿ ಯುದ್ಭಟ
ಭೂರಮಣಂ ನಾಡೆ ಸಂತಸಂಬಡುವಿನೆಗಂ ॥ ೧ ॥

ಕಪ್ಪುರಗಂಪನೆಣ್ದೆಸೆಗೆ ಸಾರಿಡೆ ಪಣ್ಣಿನೆ ಸುಯ್ಯಲರ್ ಸಮಂ
ತುಪ್ಪುಳಗಣ್ಣೊಳಪ್ಪ ಕುಡುಮಿಂಚಿನ ಮಂಜರಿಯೊಳ್ಬಳಂಚೆ ಶೋ।
ಭಿಪ್ಪ ಮುಖಂ ಮನೋಜ್ಞಶಶಿಯಂ ಸಲೆ ನಾಣ್ಚಿಸೆ ನಾಡೆ ಗಾಡಿ ವೆ
ತ್ತೊಪ್ಪಿರೆ ಪಾಡಿದರ್ ನಲಿದು ಗಾಯಿನಿಯರ್ ನವಗೀತಜಾಳಮಂ ॥ ೨ ॥

ಮಿಗುವಾಯಂ ಜತಿ ತಾಳಮುಜ್ವಳಿಪ ಮಿಶ್ರಂ ತತ್ಪ್ರಮಾಣಂ ಕರಂ
ಬಗೆಗೊಂಬಾಶ್ರುತಿ ಮೇಣ್ಬಜಾವಣೆ ಲಸದ್ವಾಮಂಗಳೌಚಿತ್ಯದಿಂ।
ಪುಗೆ ಪಕ್ಕಾದ ನವೀನತಾನತತಿಯೊಪ್ಪಲ್ ಪಾಡಿದರ್ ಶುದ್ಧಸಾ
ಳಗಸಂಕೀರ್ಣಮನಂದು ಕಂಗೊಳಿಪ ಭಾಸ್ವದ್ಗಾನನಿಷ್ಣಾತೆಯರ್ ॥ ೩ ॥

೧. ಶ್ರೀರಾಗವು ಮೃದುವಾದ ಮನಸ್ಸಿಗೆ ಮಂಗಳಮಯವಾದ ಆನಂದವನ್ನುಂಟುಮಾಡಿರಲು ಚಂದ್ರಮುಖಿಯರು ರಾಜರಲ್ಲಿ ಅಗ್ರಗಣ್ಯನಾದ ಉದ್ಭಟ ಮಹಾರಾಜನು ಅತ್ಯಾನಂದವನ್ನು ಹೊಂದುವಂತೆ ಹಾಡಿದರು. ೨. ಕರ್ಪೂರದ ಸುವಾಸನೆಯನ್ನು ಎಂಟೂ ದಿಕ್ಕುಗಳಿಗೆ ಹರಡಿರಲು, ಮಾಗಿದ ಮಂದವಾದ ಗಾಳಿಯು ಚೆನ್ನಾಗಿ ಮೋಡದ ಮರೆಯಲ್ಲಿ ಮಿಂಚುವ ಮಿಂಚಿನ ಗೊಂಚಲಿನೊಂದಿಗೆ ರಭಸದಿಂದ ತಾಗಲು, ಅಂದಗೊಂಡಿರುವ ಮುಖವು ಮನೋಹರನಾದ ಚಂದ್ರನನ್ನು ಚೆನ್ನಾಗಿ ನಾಚಿಸಿರಲು, ಅಧಿಕವಾದ ಸೌಂದರ್ಯದಿಂದ ಕೂಡಿರಲು ಗಾಯಕಿಯರು ಹೊಸ ಹೊಸ ಗೀತೆಗಳನ್ನು ನಲಿದು ಹಾಡಿದರು. ೩. ಜತಿ ತಾಳಗಳು ಹೆಚ್ಚಾಗದೆ ತೂಕ ತಪ್ಪದೆ, ಮಿಶ್ರತಾಳವು ಪ್ರಮಾಣಕ್ಕೆ ತಕ್ಕಂತೆ, ಶ್ರುತಿ ವಿಶೇಷವಾಗಿ ಮನಸ್ಸನ್ನು ಸೂರೆಗೊಳ್ಳುವಂತೆ, ಸಮೂಹ ವಾದ್ಯಗಳ ನುಡಿಸುವಿಕೆಯಲ್ಲಿ ಔಚಿತ್ಯ ಕಾಣುವಂತೆ ಒಂದರೊಡನೊಂದು ಬೆರೆತು ಒತ್ತಾಸೆಗೊಂಡ ಹೊಸದಾದ ಸ್ವರವಿಸ್ತಾರ ಶೋಭಿಸಲು ಶುದ್ಧ ಸಾಳಂಗ ಸಂಕೀರ್ಣವನ್ನು ಅಂದು ಕಣ್ಣಿಗೆ

ಅಭವಾರ್ಚಕರತಿಶೈಶವ
ಸುಭಗರ್ಚತುರರ್ಸಮಸ್ತವಿದ್ಯಾಕುಶಲ।
ಪ್ರ್ಪಭುಗಳ್ ಜ್ಞಾನಿಗಳುನ್ನತ
ವಿಭವರ್ತಾವಿಲ್ಲದೂರ್ಗಳಿಲ್ಲಾ ನಾಡೊಳ್ ॥ ೧೨ ॥

ಇಂತು ಕಣ್ಮನಕತ್ಯಾಶ್ಚರ್ಯಮಂ ಮಾಟ್ಪಿ ಕುಂತಳದೇಶದ ಸಿರಿಯಂ ಪೆಂಪಂ ತಾಂ ಪಡೆದೀಕ್ಷಿಸುತ್ತೆ ಗಣಿಕಾಜನಮಧ್ಯದೊಳುದ್ಭಟಕ್ಷಿತೀಂದ್ರಚಂದ್ರಮಂ ಮಹೋಲ್ಲಾಸಂಬಡೆದೊಲವಿನಿಂದಂ ಬರೆವರೆ,

ಭೂವಧೂಮಣಿ ವಿಳಾಸದಿಂ ಸಮಂ
ತಾವಗಂ ಬಿಡದೆ ತೊಟ್ಟ ಪಚ್ಚೆಯಾ।
ಶ್ರೀವಿರಾಜಿತಕಳಾಪಮೆಂಬವೋಲ್
ತೀವಿ ಮೇಣ್ಬೆಳೆದ ಗರ್ದ್ದೆಯೊಪ್ಪುಗುಂ ॥ ೧೩ ॥

ಕಳಮಕ್ಷೇತ್ರಾಂಗನೆ ತ
ತ್ಫಳಗರ್ಭಿಣಿ ಗತರಜೋವಿಕೃತೆ ಜಡಭಾವಾ।
ಕಳಿತೆ ಮನಂಗೊಳಿಸಿದಳ
ಗ್ಗಳಿಸುವ ಮೈಸಿರಿಗಳಂತೆ ಪಸುರ್ವೆಳಸೆಸೆಗುಂ ॥ ೧೪ ॥

ಪೊಸಬನದೆಸಳ್ಗಳ ಬೆಳಸುಜು಼
ಪಸರಿಸಿ ಪಸುರೇಜು಼ ಮಿಸುಪ ತಿಳಿಗೊಳದೊಳ್ಬಿಂ।
ಬಿಸಿದುರುವಿಸರಮದೆನೆ ರಂ
ಜಿಸಿದುದು ತನಿಗರ್ದ್ದೆಯೊಳ್ಬಲಾಕಕದಂಬಂ ॥ ೧೫ ॥

ಅನೇಕ ಶಾಸ್ತ್ರಗಳನ್ನು ಬಲ್ಲವರು, ಧರ್ಮವನ್ನು ತಿಳಿದವರು, ನಾನಾ ಕಲೆಗಳನ್ನು ಅರಿತವರು ಇವರಲ್ಲದೆ ಮತ್ತೋರ್ವರಿಲ್ಲ. ೧೨. ಆ ನಾಡಿನಲ್ಲಿ ಶಿವನ ಪೂಜಕರು, ಎಳೆಯ ಪ್ರಾಯದಲ್ಲಿಯೇ ಮಾನ್ಯರಾದವರು, ಚತುರರೂ ಸಕಲವಿದ್ಯಾಪಾರಂಗತರೂ ಆಗಿರುವವರು, ಸ್ವಾಮಿಗಳು, ಜ್ಞಾನಿಗಳು, ಹೆಚ್ಚಿನ ವೈಭವದಿಂದಿರುವವರು - ಇವರುಗಳಿಲ್ಲದ ಊರುಗಳಿಲ್ಲ. ವ॥ ಹೀಗೆ ಕಣ್ಣು ಮನಗಳಿಗೆ ಹೆಚ್ಚಿನ ಆಶ್ಚರ್ಯವನ್ನುಂಟುಮಾಡುವ ಕುಂತಳದೇಶದ ಸಂಪತ್ತನ್ನೂ ಹಿರಿಮೆಯನ್ನೂ ಪ್ರೀತಿಯಿಂದ ನೋಡುತ್ತ ಉದ್ಭಟರಾಜ ಚಂದ್ರಮನು ವೇಶ್ಯಾಸ್ತ್ರೀಯರ ಮಧ್ಯೆ ಅತಿಶಯವಾದ ಆನಂದದಿಂದ ಕೂಡಿ ಸಂಭ್ರಮದಿಂದ ಬರುತ್ತಿರಲು, ೧೩. ಭೂಕಾಂತೆಯು ಉಲ್ಲಾಸದಿಂದ ಸದಾ ಬಿಡದೆ ಧರಿಸಿರುವ ಪಚ್ಚೆಯ ಕಾಂತಿಭರಿತವಾದ ಒಡ್ಯಾಣವೆನ್ನುವಂತೆ ಎಲ್ಲಾ ಕಡೆ ಚೆನ್ನಾಗಿ ತುಂಬಿದಂತೆ ಬೆಳೆದ ಭತ್ತದ ಗದ್ದೆಗಳು ಅಂದವಾಗಿರುವವು. ೧೪. ಭತ್ತ ಬೆಳೆವ ಭೂಕಾಂತೆಯು ಫಲಭರಿತಳಾಗಿ ಮೈದುಂಬಿದ ಗರ್ಭಿಣಿಯಂತೆ ರಜೋಗುಣಗಳಿಂದ ಮುಕ್ತಳಾಗಿ, ಜಡಸ್ವಭಾವದಿಂದ ಕೂಡಿ ಮನಸ್ಸನ್ನು ಸೆಳೆದಳು. ಅವಳ ಅವಯವಗಳ ಸಂಪತ್ತಿನಂತೆ ಹಸಿರನ್ನು [ಮುಕ್ಕುಳಿಸುವ] ಬೆಳಸು ಶೋಭಿಸುವುದು. ೧೫. ಹೊಸದಾದ ತೋಟದ ಹೂವಿನ ದಳಗಳ ಬೆಳಸು ಸಮೃದ್ಧವಾಗಿ ಹರಡಿ ಹಸುರು ತಬ್ಬಿರಲು ಅದು ಹೊಳೆವ ತಿಳಿಯಾದ ಕೊಳದಲ್ಲಿ ಪ್ರತಿಬಿಂಬಿಸಿ ವಿಸ್ತಾರವಾಗಿ ಹಬ್ಬಿತೋ ಎನ್ನುವಂತೆ ಬಿಡಿಯಾದ ಗದ್ದೆಗಳಲ್ಲಿ ಬೆಳ್ಳಕ್ಕಿಗಳ

ಮತ್ತಮದಲ್ಲದೆ,

ತೊಳಪ ಪಸುರ್ವಣಿಯ ಬೆಳಗು
ಚ್ಚಳಿಸಲ್ತನ್ಮಧ್ಯದೊಳ್ವಿಜೃಂಭಿಪ ಸೂತ್ರೋ।
ಜ್ವಳರೇಖೆಯಂತೆ ಪೊಸಪೊಡೆ
ಯಳವಟ್ಟಿರಲೆಸೆದುದಮರ್ದ ಕಳಮಕ್ಷೇತ್ರಂ ॥ ೧೬ ॥

ತುಂಬಿದ ಕಣಿಶದಲಂಪಿನ
ಳುಂಬಕ್ಕೆಱಗುವ ಮದಾಳಿಗಳ್ಸೊಗಯಿಸುಗುಂ।
ತಣ್ಬೆಳಗಿನ ರುಚಿತತಿಯಂ
ಚುಂಬಿಪ ಕಾರ್ಮುಗಿಲ ಮಱಿಗಳಿರವೆಂಬಿನೆಗಂ ॥ ೧೭ ॥

ಪಚ್ಚೆಯ ಪಾಸಱೆಯೊಳ್ಭಾ
ಸ್ವಚ್ಛಾರುಮರೀಚಿರಾಜಿ ಪಡಲಿಟ್ಟಾಗಳ್।
ಬೆಚ್ಚರದಿಂ ಪುಟನೆಗೆದವೊ
ಲಚ್ಚಿಗೆ ಸೊಬಗಿತ್ತುದಮರ್ದ ಕೆಂದೆನೆಗೊಂಚಲ್ ॥ ೧೮ ॥

ಭೂತರುಣೀಮಣಿ ವಿಪುಳ
ಪ್ರೀತಿಯೊಳುಱೆ ತೊಟ್ಟ ಪೊಂಬೆಳಗನೀವ ಲಸ
ತ್ಪೀತಾಂಬರಕಂಚುಕಮೆನೆ
ಸಾತಿಶಯಾರುಣದಿನೊಪ್ಪಿದುದು ಶಾಳಿವನಂ ॥ ೧೯ ॥

ಮತ್ತಮದಲ್ಲದಮಳಪರಿಕಲಿತಕಣಿಶಮಂಜರೀಭರನಮಿತಮಂಜುಳ ಗಂಧಶಾಳಿವನಂಗಳಲ್ಲಿ,

ಮಿಂಚುವ ಪಾಲ್ದನೆಯಂ ನಿಜ
ಚಂಚುವಿನಿಂ ಕದ್ರುಂಕಿ ಯುಣೆ ವಿರಸಮಂ ಮೇ

ಗುಂಪು ರಂಜಿಸಿತು. ವ॥ ಮತ್ತೆ ಅದಲ್ಲದೆ, ೧೬. ಹೊಳೆವ ಹಸಿರುಮಣಿಯ ಕಾಂತಿ ಹೊಮ್ಮಿಬಂದು ಅದರ ಮಧ್ಯೆ ಶೋಭಿಸಿರುವ ಉಜ್ವಲವಾದ ಸೂತ್ರರೇಖೆಯಂತೆ ಹೊಸದಾಗಿ ಹೊಡೆ ಕಚ್ಚಿರಲು [ಹಸಿರನ್ನು] ಎಲ್ಲಾ ಕಡೆ ಹರಡಿಕೊಂಡಿರುವ ಭತ್ತದ ಗದ್ದೆಯು ಕಣ್ಣಿಗೆ ಸುಂದರವಾಗಿದ್ದಿತು. ೧೭. ತುಂಬಿದ ತೆನೆಯ ಚೆಲುವಿನ ಹೆಚ್ಚಳಕ್ಕೆ [ಆಕರ್ಷಣೆಗೊಂಡು] ಮೇಲೆ ಕವಿಯುವ ದುಂಬಿಗಳು ಚಂದ್ರನ ಕಿರಣಗಳ ಸಮೂಹವನ್ನು ಚುಂಬಿಸುವ ಕಪ್ಪು ಮೋಡದ ಮರಿಗಳ ಸ್ಥಿತಿಯನ್ನು ಹೋಲುತ್ತವೆಯೋ ಎನ್ನುವಂತೆ ಶೋಭಿಸಿರುವುವು. ೧೮. ಪಚ್ಚೆಯ ಕಲ್ಲಿನ ಮೇಲೆ ಹೊಳೆವ ಮನೋಹರ ಕಿರಣಗಳ ಸಮೂಹ ಚೆಲ್ಲಾಪಿಲ್ಲಿಯಾಗಿ ಬೀಳಲು ತಬ್ಬಿಬ್ಬುಗೊಂಡು ಚಿಮ್ಮಿದಂತೆ ಕೆಂಪಾದ ಭತ್ತದ ತೆನೆಯ ಗೊಂಚಲು ನೋಟಕ್ಕೆ ಸೊಬಗನ್ನು ತಂದಿತು. ೧೯. ಭೂಕಾಂತೆಯು ಅತ್ಯಾನಂದದಿಂದ ಧರಿಸಿದ ಹೊಂಬೆಳಗಿನ ಕಾಂತಿಯನ್ನು ಚೆಲ್ಲುವ ಹೊಳೆವ ಪೀತಾಂಬರದ ಕುಪ್ಪಸವೆನ್ನುವಂತೆ ಭತ್ತದ ಗದ್ದೆಯು ಅಸಾಧಾರಣವಾದ ಕೆಂಬಣ್ಣದಿಂದ ಕಣ್ಣಿಗೆ ಅಂದವಾಯಿತು. ವ॥ ಮತ್ತೆ, ಅದಲ್ಲದೆ, ಪರಿಶುದ್ಧತೆಯಿಂದ ಕೂಡಿದ ಭತ್ತದ ತೆನೆಯ ಜೊಂಪೆಯ ಭಾರದಿಂದ ಬಾಗಿರುವ ಮನೋಹರವಾದ ಭತ್ತದ ಗದ್ದೆಗಳಲ್ಲಿ, ೨೦. ಹೊಳೆವ ಹಾಲುತುಂಬಿದ ತೆನೆಯನ್ನು ತನ್ನ ಕೊಕ್ಕಿನಿಂದ ಕುಕ್ಕಿ ಅದರ ಮಧುರ ರಸವನ್ನು ಸವಿದು ಅತ್ಯಾನಂದವನ್ನು ಹೊಂದಿ ಅದರ ಸವಿಯಿಂದ ಥಳಥಳಿಸುವ ಗಿಳಿಯ ಮರಿಗಳು ಅದೇನು ಮನಸ್ಸನ್ನು ಸೆರೆಹಿಡಿಯುವವೋ!

ಣುಂಚಮುದಂಬಡೆದುಂಡು ಪ
ಳಂಚುವ ಪುರಳಿಗಳದೇಂ ಮನಂಗೊಳಿಸಿದುದೋ ॥ ೨೦ ॥

ಚಪ್ಪರಿದೀಂಟಿ ನೂತ್ನಕಣಿಶೋದ್ಭವಸಾರಮನುಕ್ಕಿ ಸೊಕ್ಕಿ ನು
ಣ್ಣುಪ್ಪುಳನೊಲ್ದಲರ್ಚಿಸುತುಮಂಚಿತಕುಂಚಿತಚಂಚುಕೋಟಿಯಂ।
ತಪ್ಪದೆ ನೆಲ್ಲ ನಿಟ್ಟೆಸಳೊಳಿಟ್ಟಲೆದುರ್ಬಿ ಮನೋನುರಾಗವಾಂ
ತೊಪ್ಪಿದುದಂದು ಕುಂದದೆ ವಿರಾಜಿತರಾಜಶುಕಾರ್ಭಕೋತ್ಕರಂ ॥ ೨೧ ॥

ಇಂತತಿವಿರಾಜಿತಗಂಧಶಾಲಿವನಂಗಳೊಳ್ಳಳನಳಿಸಿ ಬೀಗಿ ಬೆಳೆದ ಪಾಲ್ದೆನೆ ಗೊಂಚಲ್ಗಳ್ಗೆಱಗುವಱಗಿಳಿಗಳ ವಿಂಡಂ ಮನೋಜಮಂತ್ರಮಂಪಟಿವ ನಿನಾದದಿಂಚರದಿಂ ಕೈಪಜುಗುಟ್ಟಿ ಸೋವುತುಂ ಕಾವೆಳವೆಣ್ಗಳ ರೆಬರೆಸೆದಿರ್ದರದೆಂತೆಂದೊಡೆ,

ಮೊಲೆಬಿಣ್ಪಂ ನಡು ಬಳ್ಕೆ ಮಂಜುಳವಿಲೋಲಾಪಾಂಗರುಗ್ರಾಜಿ ನಿ
ರ್ಮಲಚಂದ್ರಾತಪದೊಳ್ಪಳಂಚೆ ಘನಧಮ್ಮಿಲ್ಲಂ ವಿರಾಜಚ್ಛಿಖಾ।
ವಳನೊಳ್ಪೆರ್ಚೆ ಸಮಂತು ಮಚ್ಚರಿಸೆ ಕೀರಾನೀಕಮಂ ಸೋವುತುಂ
ನಲವಿಂದೊಪ್ಪಿದರೈದೆ ಜೃಂಭಿಸುವ ಕೇದಾರಂಗಳೊಳ್ ಕಾಂತೆಯರ್ ॥ ೨೨ ॥

ನಲ್ಲರಗಲ್ಕೆಯೊಳ್ ಕುಸುಮಧನ್ವಿಗೆ ಕೂರ್ಗಣೆಯಾಗಿ ಬಂದು ತಾಂ
ಮೆಲ್ಲೆರ್ದೆಯಂ ಸಮಂತು ಸಲೆ ತಾಗಿ ಮದೀಯಮನಕ್ಕೆ ತಾಪಮಂ।
ನಿಲ್ಲದೆ ಮಾಳ್ಕುಮೀಕಮಲಮೆಂದುಱುಕಿಟ್ಟೊಡುವಂತೆ ನೋಡಿ ಸಂ
ಫುಲ್ಲಸರೋಜದಿಂದೆ ಗಿಳಿವಿಂಡನಿಡುತ್ತೆಸೆದರ್ಲತಾಂಗಿಯರ್ ॥ ೨೩ ॥

೨೧. ಎಳೆಯ ತೆನೆಯಿಂದ ಹೊರಬಂದ ಸಾರವನ್ನು ಸವಿದು ಉಕ್ಕಿ ಸೊಕ್ಕಿ ನುಣ್ಣನೆಯ ತುಪ್ಪಳವನ್ನು ಪ್ರೀತಿಯಿಂದ ಅರಳಿಸಿ ಬಾಗಿದ ತಮ್ಮ ಅಸಂಖ್ಯ ಕೊಕ್ಕುಗಳನ್ನು ಬಿಡದೆ ಭತ್ತದ ನಿಡಿದಾದ ತೆನೆಯಲ್ಲಿ ಊರಿ, ಪೀಡಿಸಿ, ಉಬ್ಬಿ ಚಪ್ಪರಿಸಿ ಸವಿದೂ ಮನವು ಕುಗ್ಗದ ಗಿಳಿಯ ಮರಿಗಳ ಸಮೂಹವು ಶೋಭಿಸಿತು. ವ॥ ಹೀಗೆ ಶೋಭಿಸಿರುವ ಭತ್ತದ ಗದ್ದೆಗಳಲ್ಲಿ ಚೆನ್ನಾಗಿ ಬೀಗಿ ಬೆಳೆದ ಹಾಲು ತೆನೆಯ ಗೊಂಚಲುಗಳ ಮೇಲೆ ಎರಗುವ ಅರಗಿಳಿಗಳ ಸಮೂಹವನ್ನು ಮನ್ಮಥಮಂತ್ರವನ್ನು ಹೀಯಾಳಿಸುವ ಧ್ವನಿಯ ಮಾಧುರ್ಯದಿಂದ ಕೈತಟ್ಟಿ ಅವುಗಳನ್ನು ಅಟ್ಟುತ್ತ ಗದ್ದೆಗಳನ್ನು ಕಾಯುತ್ತಿದ್ದ ಹಲವರು ಎಳೆಯ ಪ್ರಾಯದ ಹೆಣ್ಣುಗಳು ಅಂದಗೊಂಡಿದ್ದರು. ಅದು ಹೇಗೆಂದರೆ, ೨೨. ಮೊಲೆಗಳ ಭಾರದಿಂದ ನಡುವು ಬಾಗಲು, ಮನೋಹರವಾದ ಕಡೆಗಣ್ಣಿನ ಚಂಚಲಯುತ ತೀಕ್ಷ್ಣನೋಟವು ಶುಭ್ರವಾದ ಚಂದ್ರನ ಕಾಂತಿಯೊಂದಿಗೆ ತಾಗಲು, ತುಂಬಿದ ತುರುಬು ಶೋಭಾಯಮಾನವಾದ ಶಿರೋಭಾಗದಲ್ಲಿ ವೃದ್ಧಿಗೊಂಡು ವಿಶೇಷ ಅಸೂಯೆಗೆ ಪಾತ್ರವಾಗಿರಲು ಗಿಳಿಗಳ ಸಮೂಹವನ್ನು ಗದ್ದೆಗಳಲ್ಲಿ ಅಟ್ಟುತ್ತ ಶೋಭಾಯಮಾನರಾದ ಸ್ತ್ರೀಯರು ಮುದಗೊಂಡು ಚೆಲುವಿಕೆಯನ್ನು ಪಡೆದರು. ೨೩. ಪ್ರಿಯರ ವಿರಹದಲ್ಲಿ ಮನ್ಮಥನಿಗೆ ಹರಿತವಾದ ಬಾಣವಾಗಿ ಬಂದು ಮಿದುವಾದ ಹೃದಯವನ್ನು ಚೆನ್ನಾಗಿ ತಾಗಿ, ಆ ಮನಸ್ಸಿಗೆ ಈ ಕಮಲವು ತಾಪವನ್ನು ಬಿಡದೆ ಉಂಟುಮಾಡುವುದೆಂದು [ಭಾವಿಸಿ] ಅದನ್ನು ಚೆನ್ನಾಗಿ ಕಿತ್ತುಹಾಕುವಂತೆ [ಸುತ್ತ] ನೋಡುತ್ತ

ಮತ್ತಮಾಪಾಮರಿಯರಿಟ್ಟಂಬುಜಕುಟ್ಮಳಕ್ಕಂ ಬೆರ್ಚಿ ಬೆಚ್ಚರದಿಂದಚ್ಚಸಲ್ದೆನೆಗಳಂ ಕರ್ಚಿ ನಭಕ್ಕೇಳ್ವ ಗಿಳಿವಿಂಡಾಶಾಲಿವನಲಕ್ಷ್ಮಿಗೆ ಗಗನಾಂಗನೆ ಸಂತಸದಿಂ ಕೊಡಲೆಂದೆಳೆವಿಟ್ಟ ಪೊಚ್ಚಪೊಸಪೊಂಜರಿಗೆ-ಯೊಳ್ತೆತ್ತಿಸಿದ ಮರಕತಮಣಿಮಾಲೆಯಂತೆಸೆದಿರ್ದುದು॥

ಅಂತುಮಲ್ಲದೆಯುಂ,

ಆಗಸಕಡರ್ವರಗಿಳಿಗಳ
ನಾಗಲ್ನಿಟ್ಟಿಸಲದೊರ್ವಳಕ್ಷಿದ್ಯುತಿ ಮೇ।
ಣ್ಪಾಗೆ ವನಲಕ್ಷ್ಮಿಯಾಡಿಪ
ಜಾಗದೆಲರ್ಪಟದ ರಾಗಮೆನೆ ಸೊಗಯಿಸುಗುಂ ॥ ೨೪ ॥

ಅಂತುಮಲ್ಲದೆಯುಂ,

ಅಂಬುಜಮುಖಿಯೊರ್ವಳ ನಿಡು
ಗಣ್ಬೆಳಗಿನೊಳೊಂದು ಸಿಲ್ಕಿದರಗಿಳಿ ಯೆಸೆಗುಂ।
ತಣ್ಬೆಳಗುವಣಿಯಪೇಟಿಯೊ
ಳಿಂಬಾಗಿ ಮನಂಗೊಳಿಪ್ಪ ಮರಕತಮಣಿವೋಲ್ ॥ ೨೫ ॥

ಆರೆಯಲೀಕ್ಷಿಸಲ್ಪರಿವ ಕಾಮಿನಿಯೊರ್ವಳ ದೃಙ್ಮರೀಚಿಯಂ
ಸಾರಿಕೆ ಬಿಟ್ಟಗಲ್ದ ಗಿಳಿವಿಂಡಿನಿವಿಲ್ಲನ ಮಲ್ಲಿಕಾಸ್ತ್ರಸಂ।
ಚಾರಮದೆಂದು ಬೆರ್ಚಿ ನೆಱಿ ಪಾಱಿ ವಿಯತ್ಸತಿ ತೊಟ್ಟ ನೂತನ
ಶ್ರೀರುಚಿರೋಲ್ಲಸದ್ಭರಿತಕಂಚುಕದಂತೆಸೆದತ್ತನಂತದೊಳ್ ॥ ೨೬ ॥

[ತಮ್ಮ ನೋಟವೆಂಬ] ಅರಳಿದ ಕಮಲದಿಂದ ಗಿಳಿಗಳ ಸಮೂಹವನ್ನು ಹೊಡೆದೋಡಿಸುತ್ತ ಬಳ್ಳಿಯಂತೆ ಬಳುಕುವ ಸುಂದರಿಯರು ಶೋಭಿಸಿದರು. ವ॥ ಮತ್ತೆ ಆ ಒಕ್ಕಲಗಿತ್ತಿಯರು ಹೊಡೆದ ಕಮಲದ ಅರೆಬಿರಿದ ಮೊಗ್ಗಿಗೆ ಹೆದರಿ ತಬ್ಬಿಬ್ಬುಗೊಂಡು ಶುಭ್ರವಾದ ಹಾಲು ತುಂಬಿದ ತೆನೆಗಳನ್ನು ಕಚ್ಚಿ ಆಕಾಶಕ್ಕೆ ಹಾರುವ ಗಿಳಿಗಳ ಸಮೂಹವನ್ನು ಭತ್ತದಗದ್ದೆಯೆಂಬ ಲಕ್ಷ್ಮಿಗೆ ಗಗನಾಂಗನೆಯು ಸಂತೋಷದಿಂದ ಕೊಡಲೆಂದು ಇಳಿಯಬಿಟ್ಟ, ಕೊರಳಿನಲ್ಲಿ ಧರಿಸುವ, ಹೊಚ್ಚ ಹೊಸದಾದ ಚಿನ್ನದ ಆಭರಣದಲ್ಲಿ ಜೋಡಿಸಿದ, ಪಚ್ಚೆಯ ಮಾಲೆಯಂತೆ ಶೋಭಿಸಿದ್ದಿತು. ವ॥ ಅಷ್ಟಲ್ಲದೆ, ೨೪. ಆಕಾಶಕ್ಕೆ ಏರಹೊರಟ ಅರಗಿಳಿಗಳನ್ನು ನೋಡಿದ ಓರ್ವಳ ಕಣ್ಣಕಾಂತಿಯು ತಾಗಲು ಅವು ವನಲಕ್ಷ್ಮಿಯು ಆಡುವೆಡೆಯಲ್ಲಿ ಗಾಳಿಪಟದ ರಂಗೋ ಎನ್ನುವಂತೆ ಕಂಗೊಳಿಸಿರುವವು. ವ॥ ಅಷ್ಟಲ್ಲದೆ, ೨೫. ಕಮಲಮುಖಿಯೋರ್ವಳ ವಿಶಾಲವಾದ ಕಣ್ಣಿನ ಬೆಳಗಿನಲ್ಲಿ ಸೆರೆಯಾದ ಅರಗಿಳಿಯೊಂದು ತಣ್ಣನೆಯ ಕಾಂತಿಭರಿತವಾದ ಮಣಿಯ ಪೆಟ್ಟಿಗೆಯಲ್ಲಿ ಆಶ್ರಯ ಪಡೆದು ಮನಸೆಳೆವ ಪಚ್ಚೆ ಮಣಿಯ ರೀತಿಯಲ್ಲಿ ಶೋಭಿಸಿರುವುದು. ೨೬. ವಿಚಾರ ಮಾಡಲು, ಗದ್ದೆಯಲ್ಲಿ ಸುತ್ತಾಡುತ್ತಲಿರುವ ಕಾಮಿನಿಯೋರ್ವಳು ನೋಡಿದ ಮಾತ್ರಕ್ಕೇ ಅವಳ ದೃಷ್ಟಿಯ ಬೆಳಗಿಗೆ ಹೆಣ್ಣು ಗಿಳಿಗಳನ್ನು ಬಿಟ್ಟು ಅಗಲಿದ ಗಂಡುಗಿಳಿಗಳ ಸಮೂಹವು ಮನ್ಮಥನ ಮಲ್ಲಿಗೆಯ ಬಾಣದ ಸಂಚಾರವೆಂದು ಬಗೆದು ಬೆದರಿ ವೇಗವಾಗಿ ಹಾರಿಹೋಗುತ್ತಿರಲು ಅವು ಆಗಸವೆಂಬ

ಇಂತತಿವಿಳಾಸದಿಂ ನಳನಳಿಸಿ ಬೆಳೆದ ಕಳಮೆದೆನೆಗಳಂ ಕಚ್ಚಿ ನಭಕ್ಕೇೞ್ವರಗಿಳಿಗಳಾನಂದಮಂ ತಚ್ಛುಕಸಂಚಯವಂ ಸೋವುತ್ತೆಳವೆಣ್ಗಳ ವಿಳಾಸಮಂ ನಿರೀಕ್ಷಿಸುತ್ತುದ್ಭಟಕ್ಷಿತೀಂದ್ರಚಂದ್ರಮಂ ನೋಡುತ್ತುಂ ಬರೆವರೆ,

ಬಾಳದ ಕಾವಣಂ ಪಳುಕಿನಚ್ಚಗೊಡಂಗಳ ಸೀತವಾರಿ ಪೊಂ
ಬಾಳೆಯ ಬಿಜ್ಜಣಂ ಪಸಿಯ ಪೂವಿನ ಪಾಸು ಪಾನಕಾಳಿ ತ।
ಣ್ಣಾಳಿಯ ಸೊಂಕಿನಿಂ ಬಿರಿದೊಸರ್ವಿನಿಗರ್ಬುಗಳೊಪ್ಪೆ ಲಸತ್ಪ್ರಪಾ
ಶಾಲೆಗಳಂದು ತದ್ವಿಷಯದೊಳ್ಪಗೆಗೊಂಡುವಲಂಪನೀಯುತುಂ ॥ ೨೭ ॥

ಮತ್ತಮಾಪಾನೀಯಶಾಲೆಗಳೊಳ್ ಬೞಲ್ದು ಬರ್ಪ ಬಟ್ಟೆಗರ್ಗೆ ನೀರನೆಱೆಯುತ್ತೆಳವೆಣ್ಗಳ್ವಿ ರಾಜಿಸುತ್ತಿರ್ದರ್॥

ಅಂತುಮಲ್ಲದೆಯುಂ,

ಚಂದ್ರನಿಭಾನನೆಯರ್ನಿ
ಸ್ತಂದ್ರಾಲಾಪೆಯರಲರ್ದಕೈರವದೃಶೆಯರ್।
ಸಾಂದ್ರಾಮೋದಂ ಬಡೆದತಿ
ರುಂದ್ರಾಂಬುವನೆಱೆಯುತಧ್ವಗರ್ಗಿರದೆಸೆದರ್ ॥ ೨೮ ॥

ಮೊಗರಸಮಂ ನಿಡುಗಣ್ಗಾ
ಳ್ಗೊಗುಮಿಗೆಯೆನೆ ವಚನರಸಮನೊಪ್ಪುವ ಕಿವಿಗ।
ಳ್ಗಗಲದೆ ಬೇಂಟದ ರಸಮಂ
ಬಗೆಗೆಱೆಯುತ್ತೆಸೆದರಬಲೆಯರ್ಘನರಸಮಂ ॥ ೨೯ ॥

ಹೆಣ್ಣು ಧರಿಸಿದ ಹೊಸದಾದ ಹೊಳೆವ ಕುಪ್ಪಸದಂತೆ ಆಕಾಶದಲ್ಲಿ ಶೋಭಿಸಿದುವು. ವ॥ ಹೀಗೆ ಹೆಚ್ಚಿನ ವಿಲಾಸದಿಂದ ಚೆನ್ನಾಗಿ ಬೆಳೆದ ಭತ್ತದ ತೆನೆಗಳನ್ನು ಕಚ್ಚಿ ಆಕಾಶಕ್ಕೆ ಹಾರುತ್ತಿರುವ ಅರಗಿಳಿಗಳ ಸಂಭ್ರಮವನ್ನೂ, ಆ ಗಿಳಿಗಳ ಸಮೂಹವನ್ನು ಹೊಡೆದೋಡಿಸುವ ಎಳೆ ಜವ್ವನದ ಹೆಣ್ಣುಗಳ ಸೊಬಗನ್ನೂ ಇದಿರು ನೋಡುತ್ತಾ ಉದ್ಭಟಮಹಾರಾಜ ಚಂದ್ರಮನು ಬರುತ್ತಿರಲು, ೨೭. ಮುಡಿವಾಳದ ಚಪ್ಪರ, ಸ್ಫಟಿಕದ ಶುದ್ಧವಾದ ಕೊಡಗಳಲ್ಲಿ ತಣ್ಣನೆಯ ನೀರು, ಹೊಂಬಾಳೆಯ ಬೀಸಣಿಗೆ, ಎಳೆಯ ಹೂವಿನ ಹಾಸು, ಪಾನಕಗಳು, ತಣ್ಣನೆಯ ಗಾಳಿಯ ಸ್ಪರ್ಶದಿಂದ ಒಡೆದು ಒಸರುವ ಸಿಹಿಗಬ್ಬುಗಳು - ಇವುಗಳನ್ನು ಹೊಂದಿದ ಅಂದವಾದ ಅರವಟ್ಟಿಗೆಗಳು ಸಂತಸವನ್ನುಂಟುಮಾಡುತ್ತ ಆ ದೇಶದಲ್ಲಿ ಮನಸ್ಸನ್ನು ಸೂರೆಗೊಂಡವು. ವ॥ ಮತ್ತೆ ಆ ಪಾನೀಯಶಾಲೆಗಳಿಗೆ ಆಯಾಸಗೊಂಡು ಬರುವ ದಾರಿಹೋಕರಿಗೆ ನೀರನ್ನು ಬಿಡುತ್ತ ಎಳೆವಯಸ್ಸಿನ ಹೆಣ್ಣುಗಳು ಶೋಭಿಸುತ್ತಿದ್ದರು. ಅಷ್ಟಲ್ಲದೆ, ೨೮. ಚಂದ್ರನಿಗೆ ಸಮಾನವಾದ ಮುಖವುಳ್ಳವರು, ಚುರುಕಾಗಿ ಮಾತನಾಡುವವರು, ಅರಳಿದ ಕಮಲದ ನೋಟವುಳ್ಳವರು, ಹೆಚ್ಚಿನ ಆನಂದವನ್ನು ಹೊಂದಿ ದೀರ್ಘವಾಗಿ ದಾರಿಹೋಕರಿಗೆ ನೀರನ್ನು ಬಿಡುತ್ತ ಶೋಭಿಸಿದರು. ೨೯. ಮುಖದ ರಸವನ್ನು ವಿಶಾಲವಾದ ಕಣ್ಣುಗಳಿಗೆ, ಅಧಿಕವಾಗಿ ಮಾತೆಂಬ ರಸವನ್ನು ಕಿವಿಗಳಿಗೆ, ಬಿಡದೆ ಶೃಂಗಾರ ರಸವನ್ನು ಮನಸ್ಸಿಗೆ [ಹೀಗೆ ಅರವಟ್ಟಿಗೆಯ] ಸುಂದರಿಯರು ಕೊಡದಲ್ಲಿ ತುಂಬಿದ ರಸವನ್ನು

ಇಂತತಿವಿಳಾಸದಿಂ ಬಟಿಲ್ದ ಬಟ್ಟೆಗರ್ಗೆ ನೀರೆಱೆವೆಳವೆಣ್ಮಾಣೆಗೊರ್ವ ಪಥಿಕಂ ಸೋಲ್ತು ತೃಷೆ ತೀರ್ದೊಡಂ ಮನದಟ್ಕಿರ್ತೀರದೆ ಲವಲವಿಸುತ್ತುಮವಳನೊಡಂಬಡಿಸಲ್ಕಂಜಿ ಮೊಗಮಂ ನಿಟ್ಟಿಸುತ್ತಿರ್ಪ ಪಾಂಥನ ಮನದಳವನಱಿದವನೊಳ್ನೆರೆಯಲಿಚ್ಚೈಸಿ ಯುಚ್ಚವದಿಂ ಸತಿ ಮೇಲ್ವರಿವುದನುಚಿತವಿವನುಪಾಯ ದಿಂದೆರ್ದೆಗೊಳಿಸಲ್ವೇಳ್ಕು ಮೆಂದುಮಿಲ್ಲಿ ನೀರಿಲ್ಲಮೆಂದೆನಲಿರ್ದುಂ ನೀರಿಲ್ಲೆಂಬುದಚ್ಚರಿಯೆನುತಾ ಪಲ್ಲವಿಕಂ ಬಿಟ್ಟಗಲಲಾರದೆ ಕಟ್ಟಾಸೆಯಿಂ ನುಡಿಯಲವನೊಳೀಷನ್ಮಂದಹಾಸವದನಾರವಿಂದೆಯಾಗಿ ಮಗುಟ್ದಿಂತೆಂದಳ್॥

ಊರತಿದೂರಂ ಸನಿಯದೊ
ಳಾರ್ಯೆವೊಡಮಾರುಮಿಲ್ಲ ಬೇಡೆಂದೆನೆ ನೀಂ।
ಬೋರನೆ ಬಡಿದೆನ್ನನೆ ಯೊ
ನೀರಂ ನೀಂ ಸೆಳೆದುಕೊಳೆ ವಿಚಾರಮದುಂಟೇ ॥ ೩೦ ॥

ಎಂದಿಂತು ಏಕಾಂತಮಂ ಸೂಚಿಸಿ ಯೊಡಂಬಟ್ಟಿರ್ಪ ಬಟ್ಟೆಗಂ ಪೆಱೆಮೊಗದಂಗನೆ ಯೊಳಳವಟ್ಟಂಗಜಕೇಳಿಯಂ ನೆಗಟ್ಚಿ ತೃಪ್ತಿಪಟ್ಟು ಮಗಟ್ದಾಬಟ್ಟೆಗಂ ಪಥಂಪಿಡಿದು ಪೋಗೆ ಮತ್ತೊಂದೆಡೆಯೊಳ್,

ನೀರೆಱೆವಳ ವದನಂ ಕೈ
ನೀರೊಳ್ಮಾರ್ಪೊಳೆಯಲಿಂದು ಸಿಕ್ಕಿದನೆನುತುಂ।
ಭೋರೆನೆ ಕೈಯ್ಯಂ ಮುಚ್ಚು
ತ್ತಾರಮಣಿಯನೊರ್ವನೈದೆ ನಗಿಸಿದನಾಗಳ್ ॥ ೩೧ ॥

[ದಾರಿಹೋಕರಿಗೆ] ಬಿಡುತ್ತ ಶೋಭಿಸಿದರು. ವ॥ ಹೀಗೆ ಆಯಾಸಗೊಂಡ ದಾರಿಹೋಕರಿಗೆ ಹೆಚ್ಚಿನ ಸೊಬಗಿನಿಂದ ನೀರನ್ನು ಬಿಡುವ ಎಳೆಯ ಪ್ರಾಯದ ಹೆಣ್ಣೊಬ್ಬಳಿಗೆ ಓರ್ವ ದಾರಿಗನು ಮನಸೋತು ಬಾಯಾರಿಕೆ ಆರಿದರೂ ಮನದ ಆಸೆ ತೀರದಿರಲು ಹುರುಪಿನಿಂದ ಕೂಡಿ ಅವಳನ್ನು ಒಪ್ಪಿಸಲು ಹೆದರಿ ಮುಖವನ್ನು ನೋಡುತ್ತಿರುವ ಅವನ ಮನದಿಂಗಿತವನ್ನು ತಿಳಿದು ಅವನೊಡನೆ ಕೂಡಲು ಇಚ್ಛಿಸಿ 'ಉತ್ಸಾಹದಿಂದ ಹೆಣ್ಣಾದವಳು ತಾನೇ ಮುಂದುವರಿಯುವುದು ಅನುಚಿತ. ಇವನನ್ನು ಉಪಾಯದಿಂದ ಉತ್ತೇಜನಗೊಳಿಸಬೇಕು' ಎಂದು [ನಿರ್ಧರಿಸಿ] 'ಇಲ್ಲಿ ನೀರಿಲ್ಲ' ಎನ್ನಲು, 'ಇದ್ದೂ ನೀರಿಲ್ಲವೆಂಬುದು ಆಶ್ಚರ್ಯ' ಎಂದು ಹೇಳುತ್ತ ಆ ವಿಟನು ಬಿಟ್ಟು ಹೋಗಲಾರದೆ ಪೇರಾಸೆಯಿಂದ ಮಾತನಾಡಲು, ಅವನಲ್ಲಿ ಆಸಕ್ತಳಾಗಿ ಮಂದಹಾಸ ಚೆಲ್ಲುವ ಮುಖಕಮಲದ ಆಕೆ ಮತ್ತೆ ಹೀಗೆಂದಳು- ೩೦. ಊರು ಬಹಳ ದೂರದಲ್ಲಿದೆ. ಪಕ್ಕದಲ್ಲಿ ವಿಚಾರಿಸಲು ಯಾರೂ ಇಲ್ಲ. ಬೇಡ ಎಂದರೆ ನೀನು ತಕ್ಷಣ ನನ್ನನ್ನೇ ಬಡಿದು ಈ ನೀರನ್ನು ಸೆಳೆದುಕೊಳ್ಳುವ ವಿಚಾರವಿದೆಯೆ? ವ॥ ಎಂದು ಹೀಗೆ ಏಕಾಂತವನ್ನು ಸೂಚಿಸಿ ಒಪ್ಪಿಗೆ ಕೊಟ್ಟಿರಲು ದಾರಿಹೋಕನು ಆ ಚಂದ್ರಮುಖಿಗೆ ವಶನಾಗಿ [ಅವಳೊಡನೆ] ಮನ್ಮಥಲೀಲೆಯಲ್ಲಿ ವಿಹರಿಸಿ ತೃಪ್ತಿಹೊಂದಿ ಮರಳಿ ದಾರಿಹಿಡಿದು ಆ ದಾರಿಹೋಕನು ಹೋದನು. ಮತ್ತೊಂದೆಡೆಯಲ್ಲಿ, ೩೧. ನೀರು ಬಿಡುವವಳ ಮುಖವು ಬೊಗಸೆ ನೀರಲ್ಲಿ ಪ್ರತಿಬಿಂಬಿಸಲು ಚಂದ್ರನು ದೊರೆತನೆಂದು ತಕ್ಷಣ

ಮತ್ತಮದಲ್ಲದೆ,

ಕಳಶಮನೆತ್ತಿ ನೀರೆಱೆ‌ವ ಕಾಂತೆಯ ಲೋಲವಿಲೋಚನಾಂಶು ಸಂ
ಕುಳಮನೆ ವಾರಿಧಾರೆ ಯೆನುತುಂ ನಿಜತೋಯಮನೀಂಟದೊಯ್ಯನಂ।
ಜಳಿಯನಮರ್ಚಿ ಬಾಯ್ಗೆ ಮೊಗಮಂ ಬಱಿಗೊಂಡೆಡಕಂ ಬಲಕ್ಕ
ಮುಜ್ವಳ ತೃಷೆಯಿಂದೆ ತಂದರಕೆ ಪಿಂಗದೆ ನಾಣ್ಚಿದನೊರ್ವ ಬಟ್ಟೆಗಂ ॥ ೩೨ ॥

ಇಂತುಪಾನೀಯಶಾಲೆಗಳಲ್ಲಿ ಚಾರುಪಾಂಥರೊಳತಿವಿಳಾಸಮನೆಸಗುತ್ತೆಸೆದಿರ್ಪೆಳವೆಣ್ಗಳ ಚಲ್ಲಾಟಮಂ ನೋಡುತ್ತುದ್ಭಟಕ್ಷಿತೀಂದ್ರ ಚಂದ್ರಮಂ ಬರೆವರೆ,

ಅಲ್ಲಲ್ಲಿಗಿಕ್ಷುವಾಟಿಗ
ಳಲ್ಲಲ್ಲಿಗೆ ಪೊಸಬನಂಗಳಲರ್ದೋಟಗಳಂ।
ತಲ್ಲಲ್ಲಿಗೆ ತೀವಿರೆ ಕ
ಣ್ಗುಲ್ಲಾಸಮನೀವುತೊಪ್ಪಿದುದು ತದ್ವಿಷಯಂ ॥ ೩೩ ॥

ಇಂತವನೀಕಾಂತಾಮಣಿಯ ಕುಂತಳಮೆಂದೆನಿಸಿ ಮನಂಗೊಳಿಪ ತತ್ಕುಂತಳದೇಶಮಧ್ಯದೊಳ್ ಮಂಗಳಮಂದಿರಂ ಪುಣ್ಯದ ಪುಂಜಂ ಧರ್ಮದ ಹರ್ಮ್ಯಂ ಮುಕ್ತಿಯ ಮೂಲಂ ಭಕ್ತಿಯ ಬೈತ್ರಂ ಜ್ಞಾನದ ನಿಧಾನಂ ಮಹಿಮೆಗಳ ಮಹಾರ್ಣವಂ ಸಮಸ್ತಸಿದ್ಧಿಗಳ ಸೀಮೆಯೆನಿಸಿ ನೆಗೞ್ತೆವೆತ್ತಖಿಳಕ್ಷೇತ್ರಶಿಖಾಮಣಿಯಪ್ಪ ಪಂಪಾಕ್ಷೇತ್ರಂ ವಿರಾಜಿಸುತ್ತಿರ್ದುದು ॥ ೩೪ ॥

ಕೈಯನ್ನು ಮುಚ್ಚಿ ಆ ಸುಂದರಿಯನ್ನು ಓರ್ವನು ಚೆನ್ನಾಗಿ ನಗಿಸಿದನು. ವ॥ ಮತ್ತೆ ಅದಲ್ಲದೆ, ೩೨. ಕಳಶವನ್ನೆತ್ತಿ ನೀರನ್ನು ಬಿಡುವ ಸುಂದರಿಯ ಚಂಚಲವಾದ ಕಣ್ಣ ಬೆಳಗಿನ ಸಂಚಯವನ್ನು ನೀರಿನ ಧಾರೆ ಎಂದು ಬಗೆದು ನಿಜವಾದ ನೀರನ್ನು ಕುಡಿಯದೆ, ಮೆಲ್ಲನೆ ಬೊಗಸೆಯನ್ನು ಮುಚ್ಚಿ, ಎಡಕ್ಕೂ ಬಲಕ್ಕೂ ಬಾಯಿಗೆ ಮುಖವನ್ನು ನೆಲೆಗೊಳಿಸಿರಲು ಹೆಚ್ಚಿನ ದಾಹದಿಂದ ಸುಂದರಿಯು ಸುರಿದ ಜಲದಿಂದ ಬಾಯಾರಿಕೆ ಹಿಂಗದಿರಲು ಓರ್ವ ದಾರಿಹೋಕನು ನಾಚಿಕೆ ಹೊಂದಿದನು. ವ॥ ಹೀಗೆ ಪಾನೀಯ ಶಾಲೆಗಳಲ್ಲಿ ಸುಂದರಾಂಗರಾದ ದಾರಿಹೋಕರೊಡನೆ ಹೆಚ್ಚಿನ ವಿನೋದವನ್ನು ಮಾಡುತ್ತ ಶೋಭಿಸಿರುವ ಎಳೆಯ ಪ್ರಾಯದ ಚೆನ್ನೆಯರ ಚೆಲ್ಲಾಟವನ್ನು ನೋಡುತ್ತ ಉದ್ಭಟಮಹಾರಾಜ ಚಂದ್ರಮನು ಬರುತ್ತಿರಲು, ೩೩. ಅಲ್ಲಲ್ಲಿ ಕಬ್ಬಿನ ತೋಟಗಳು, ಅಲ್ಲಲ್ಲಿ ಹೊಸ ತೋಟಗಳು, ಅಲ್ಲಲ್ಲಿ ಹೂವಿನ ತೋಟಗಳು ಸುತ್ತುವರಿದಿರಲು ಕಣ್ಣಿಗೆ ಹಿತವನ್ನುಂಟುಮಾಡುತ್ತ ಆ ದೇಶವು ಮನೋಹರವಾಗಿದ್ದಿತು. ವ॥ ಹೀಗೆ ಭೂಕಾಂತೆಯ ಶಿರೋಭಾಗವೆಂಬಂತೆ ಚಿತ್ತವನ್ನು ಸೆಳೆವ ಆ ಕುಂತಳದೇಶದ ಮಧ್ಯದಲ್ಲಿ ಮಂಗಳ ನಿವಾಸ, ಪುಣ್ಯದ ಮೊತ್ತ, ಧರ್ಮದ ಮಂದಿರ, ಮುಕ್ತಿಯ ಮೂಲ, ಭಕ್ತಿಯ ನಾವೆ, ಜ್ಞಾನದ ನಿಧಿ, ಮಹಿಮೆಗಳ ಸಾಗರ, ಸಕಲ ಸಿದ್ಧಿಗಳ ಗಡಿ ಎನಿಸಿ ಪ್ರಖ್ಯಾತಿ ಪಡೆದ ಸಕಲ ಕ್ಷೇತ್ರಗಳಿಗೆ ಶಿರೋಭೂಷಣವಾದ

ಅಂತುಮಲ್ಲದೆಯುಂ,

ಅಂಪಯ್ಸಲ್ಬಾರದಂಚತ್ಪರಮಪದದ ಸೂತ್ರಂ ಶಿವಜ್ಞಾನನೇತ್ರಂ
ಸಂಪದ್ಧರ್ಮಾರ್ಥಕಾಮಾಂಬುರಹವನಜಮಿತ್ರಂ ಧರಿತ್ರೀಸುವಕ್ತ್ರಂ।
ಲಂಪಂಬೆತ್ತೈದೆ ಕಣ್ಗೊಪ್ಪಿದುದು ಭವಲತೋದ್ಯಲ್ಲವಿತ್ರಂ ವಿಚಿತ್ರಂ
ಪಂಪಾಕ್ಷೇತ್ರಂ ವಿರಾಜಚ್ಛ್ರುತಿತತಿಮಕುಟಸ್ತೋತ್ರಪಾತ್ರಂ ಪವಿತ್ರಂ॥

ಇಂತತಿಮಹಿಮೆಗಳನೊಳಕೊಂಡು ಮನಂಗೊಳಿಪ ಸಮಸ್ತಕ್ಷೇತ್ರಶಿಖಾಮಣಿಯಪ್ಪ ಪಂಪಾಕ್ಷೇತ್ರಮಂ ಪೊಕ್ಕುದ್ಭಟಕ್ಷಿತೀಂದ್ರಚಂದ್ರಮನಾನಂದಾಬ್ಧಿಯೊಳ್ಮೂಡಿ ಮುಱುಂಗಾಡುತ್ತುಂ ಬರೆವರೆ,

ಫಣಿಪೋತಂಗಳನೆತ್ತಿ ಸಾವಗಿಪ ರಾಜನ್ನೀಲಕಂಠಂಗಳಿಂ
ಪೊಣರ್ವೆಣೇನಿಕುರುಂಬದೊಳ್ಚರಿಪ ಶಾರ್ದೂಲಂಗಳಿಂ ಮತ್ತಮಾ
ರಣದೊಳ್ಕ್ರೀಡಿಪ ಸಿಂಹದಿಂ ಗಿಳಿಗಳಿಂ ಕೂಡಿರ್ಪ ಸಾಲ್ವಂಗಳು
ಬ್ಬಣದಿಂದಂ ಘನಶಾಂತಿಯಂ ತಳೆದು ಪಂಪಾಕ್ಷೇತ್ರಮಾರಾಜಿಕುಂ ॥ ೩೫ ॥

ಇಂತು ಜಾತಿವೈರಮಂ ಬಿಟ್ಟು ಕೂಡಿ ಸಂಚರಿಪ ಸಮಸ್ತ ಮೃಗಂಗಳಿಂ ಸಕಳತೀರ್ಥಂಗಳಿಂ ಪವಿತ್ರಗೋತ್ರಂಗಳಿಂದೆ ನಾನಾದೇವಸ್ಥಾನಂಗಳಿಂ ನವೀನೋದ್ಯಾನಂಗಳಿಂ ಮನೋಹರಪುಷ್ಕರಣಿಗಳಿಂ ಪುಣ್ಯತಟಾಕಂಗಳಿಂ ವರ್ಣಿಗಳ ಪರ್ಣಶಾಲೆಗಳಿಂ ವಿಮಳತಪಸ್ವಿಗಳಿಂ ಕಣ್ಗೆ ಮಂಗಳಮಾಗಿ ಮನಂಗೊಳಿಪ ತತ್ಪಂಪಾಕ್ಷೇತ್ರದಲಂಪಂ ನಡೆನೋಡುತ್ತುರುತರ ಭಕ್ತಿರಸಭರಿತಾಂತಃಕರಣನಾಗಿ ಬರೆವರೆ ಮುಂದೆ ಮೂಱು ಲೋಕಮಾತೆಯಪ್ಪ ಬಾಲಪಂಪಾದೇವಿಯಾಲಯಮಂ ಕಾಣಿಸಲಾನೆಯಿಂದೆಟ್ಟಿಂದು ಮಾದೇಗುಲದುಪಕಂಠಸ್ಥಿತಮುದಿತ ವಿಮಳಕಮಳಕಹ್ಲಾರಕೈರವಸಂಚಯದ ಸಮಂಚಿತಸುಗಂಧಮಿಳಿತಾಂಚನ್ಮ ಕರಂದಧೂಳೀಪಟಲ ಕ್ರೀಡೋಲ್ಲೀಢಭಮದ್ಭ್ರಮರೀಪುಂಜಸಂಜನಿತಮಂಜುಳಝೇಂಕಾರ ಪರಿಪೂರ್ಣ

ಪಂಪಾಕ್ಷೇತ್ರವು ಶೋಭಿಸುತ್ತಿತ್ತು. ಅಷ್ಟಲ್ಲದೆ, ೩೪. ಅಳಿಯಲಾಗದ ಪ್ರಸಿದ್ಧವಾದ ಪರಮಪದದ ಸೂತ್ರವೂ, ಶಿವಜ್ಞಾನನೇತ್ರವೂ, ಪುರುಷಾರ್ಥ ಸ್ವರೂಪವೂ, ಬ್ರಹ್ಮನ ಬಂಧುವೂ, ಭೂಮಿಗೆ ಮುಖದಂತೆಯೂ, ಭವವೆಂಬ ಬಳ್ಳಿಯನ್ನು ಕತ್ತರಿಸುವ ಕುಡುಗೋಲಿನಂತೆಯೂ ಇರುವ ವಿಚಿತ್ರಮಯವಾಗಿರುವ ಪಂಪಾಕ್ಷೇತ್ರವು ಸೊಗಸನ್ನು ಹೊಂದಿ ಕಣ್ಣಿಗೆ ಅಂದವಾಗಿ ವೇದಗಳ ಸಮೂಹಕ್ಕೆ ಮಕುಟಪ್ರಾಯವಾಗಿ ಹೊಗಳಿಕೆಗೆ ಪಾತ್ರವಾಗಿ ಪವಿತ್ರ ಕ್ಷೇತ್ರವಾಗಿ ವಿರಾಜಿಸಿರುವುದು. ವ॥ ಹೀಗೆ ಹೆಚ್ಚಿನ ಮಹಿಮೆಗಳನ್ನು ಹೊಂದಿ ಮನಸೆಳೆಯುವ, ಸಕಲ ಕ್ಷೇತ್ರಗಳಿಗೂ ಶಿರೋಭೂಷಣವಾಗಿರುವ ಪಂಪಾಕ್ಷೇತ್ರವನ್ನು ಪ್ರವೇಶಿಸಿದ ಉದ್ಭಟ ಮಹಾರಾಜಚಂದ್ರಮನು ಆನಂದಸಾಗರದಲ್ಲಿ ಮೂಡಿ ಮುಳುಗಾಡುತ್ತ ಬರುತ್ತಿರಲು, ೩೫. ಹಾವಿನ ಮರಿಗಳನ್ನೆತ್ತಿ ಸರಿಪಡಿಸಿಡುವ ನವಿಲುಗಳಿಂದ, ಜಿಗಿದಾಡುವ ಜಿಂಕೆಗಳ ಸಮೂಹದಲ್ಲಿ ಓಡಾಡುವ ಹುಲಿಗಳಿಂದ, ಮದಿಸಿದ ಆನೆಗಳೊಡನೆ ಆಟವಾಡುವ ಸಿಂಹಗಳಿಂದ, ಗಿಳಿಗಳೊಡನೆ ಕೂಡಿ ಇರುವ ಸಾಲ್ವಗಳಿಂದ ಅತಿಶಯವಾದ ಶಾಂತಿಯನ್ನು ಹೊಂದಿ ಆ ಪಂಪಾಕ್ಷೇತ್ರವು ಶೋಭಿಸಿರುವುದು. ವ॥ ಹೀಗೆ ಜಾತಿವೈರವನ್ನು ಮರೆತು ಜೊತೆಗೂಡಿ ಸಂಚರಿಸುವ ಸಕಲ ಮೃಗಗಳಿಂದ, ಸಕಲ ತೀರ್ಥಗಳಿಂದ, ಪವಿತ್ರ ಗೋತ್ರಗಳಿಂದ, ನಾನಾ ದೇವಸ್ಥಾನಗಳಿಂದ, ಹೊಸದಾದ ಉದ್ಯಾನಗಳಿಂದ, ಮನೋಹರವಾದ ಕೊಳಗಳಿಂದ, ಪವಿತ್ರ ಜಲಭರಿತವಾದ ಕೆರೆಗಳಿಂದ, ಬ್ರಹ್ಮಚಾರಿಗಳ

ರಂಜಿತಕಂಜಾತಾಕರಾಬ್ಜೋದಕದೊಳ್ ಕರಚರಣಪ್ರಕ್ಷಾಳನಮಂ ಮಾಡಿಕೊಂಡಾನಂದದಿಂದುದ್ಭಟಕ್ಷಿತೀಂದ್ರ ಚಂದ್ರಮಂ ಪದ್ಮಕುಟೀರಮಂ ಪುಗುವ ರಾಜಹಂಸನಂತೆ ದೇವಾಗಾರಮಂ ಪೊಕ್ಕು ಪಂಪಾಂಬಿಕೆಯಂ ಕಾಣ್ಬ ತವಕದಿಂದಂ ಬರೆವರೆ,

ಮಿಸುಪ ಶಶಿಸೂರ್ಯಮಂಡಲ
ವಿಸರಮನೇಳಿಸುವನನೂನತೇಜಮನಂದೆ।
ಣ್ದೆಸೆಯೊಳ್ಪಸರಿಸುತುಂ ರಂ
ಜಿಸಿದುದು ಕಮನೀಯಮೂರ್ತಿ ಪಂಪಾಂಬಿಕೆಯಾ ॥ ೩೬ ॥

ವೇದಂಗಳಱಿವಿಗಳವಡ
ದಾದಿಪರಬ್ರಹ್ಮನೊಲ್ದು ರೂಪಂ ತಾಳ್ದಾ।
ಹ್ಲಾದದಿನೊಪ್ಪುವುದೆನಲಿಂ
ಬಾದುದು ನಿಡುಗಣ್ಗೆ ಮೂರ್ತಿ ಪಂಪಾಂಬಿಕೆಯಾ ॥ ೩೭ ॥

ತೊಳಗುವ ಷಟ್ಚಕ್ರಾಬ್ಜಂ
ಗಳನೊಡೆದುಱ್ಚಿ ನಿಮಿರ್ದ ಬಳ್ಳಿಮಿಂಚಿನ ತೆಱದಿಂ।
ದಳವಟ್ಟು ವಿಜೃಂಭಿಪ ಚಿ
ತ್ಕಳೆಯೆನಲೊಪ್ಪಿದುದು ಮೂರ್ತಿ ಪಂಪಾಂಬಿಕೆಯಾ ॥ ೩೮ ॥

ಎಲೆಮನೆಗಳಿಂದ, ವಿಮಲ ತಪಸ್ವಿಗಳಿಂದ ಕಣ್ಣಿಗೆ ಮಂಗಳವಾಗಿ ಮನಸ್ಸನ್ನು ಸೂರೆಗೊಳ್ಳುವ ಆ ಪಂಪಾಕ್ಷೇತ್ರದ ಸೊಗಸನ್ನು ಚೆನ್ನಾಗಿ ನೋಡುತ್ತ ಶ್ರೇಷ್ಠ ಭಕ್ತಿರಸಭರಿತ ಅಂತಃಕರಣವುಳ್ಳವನಾಗಿ ಬರುತ್ತಿರಲು ಮುಂದೆ ಮೂರು ಲೋಕಗಳಿಗೂ ಮಾತೆಯಾದ ಬಾಲ ಪಂಪಾದೇವಿಯ ಮಂದಿರವು ಕಾಣಿಸಲು ಆನೆಯಿಂದ ಇಳಿದು ಬಂದು ಆ ದೇಗುಲದ ಸಮೀಪದಲ್ಲಿರುವ ಕೊಳದಲ್ಲಿ ಮೂಡಿದ ಪರಿಶುದ್ಧವಾದ ಕಮಲ, ಕಹ್ಲಾರ, ಬಿಳಿಯ ನೈದಿಲೆಗಳ ಮೊತ್ತದಿಂದ, ಕೂಡಿಬಂದ ಸುಗಂಧ ಬೆರೆತ ಮಕರಂದ ಪರಾಗದ ಧೂಳಿನಲ್ಲಿ ಕ್ರೀಡೆಯಾಡಬಯಸಿದ ಚಂಚಲವಾದ ದುಂಬಿಗಳ ಸಮೂಹದಿಂದುಂಟಾದ ಮಂಜುಳ ಝೇಂಕಾರದಿಂದ ಕೂಡಿ, ಮನೋಹರವಾದ ಕಮಲಗಳ ಜನ್ಮಸ್ಥಳವಾದ ಕೊಳದ ಪರಿಶುದ್ಧ ನೀರಿನಲ್ಲಿ ಕೈಕಾಲುಗಳನ್ನು ತೊಳೆದು ಆನಂದದಿಂದ ಉದ್ಭಟ ಮಹಾರಾಜ ಚಂದ್ರಮನು ಪದ್ಮಕುಟೀರವನ್ನು ಪ್ರವೇಶಿಸುವ ರಾಜಹಂಸನಂತೆ ದೇವಮಂದಿರವನ್ನು ಪ್ರವೇಶಿಸಿ ಪಂಪಾಂಬಿಕೆಯನ್ನು ಕಾಣುವ ಉತ್ಸಾಹದಿಂದ ಬರುತ್ತಿರಲು, ೩೬. ಕೊರತೆಯಿಲ್ಲದ ತೇಜಸ್ಸನ್ನು ಅಂದು ಎಂಟೂ ದಿಕ್ಕುಗಳಿಗೆ ಹರಡಿ, ಪ್ರಕಾಶಿಸುತ್ತಿರುವ ಚಂದ್ರ ಸೂರ್ಯಮಂಡಲಗಳ ಹಿಂಡನ್ನು ತಿರಸ್ಕರಿಸುತ್ತ ಪಂಪಾಂಬಿಕೆಯ ಆ ಮನೋಹರ ಮೂರ್ತಿಯು ಶೋಭಿಸಿತು. ೩೭. ವೇದಗಳ ತಿಳಿವಿಗೆ ಬಾರದ ಆದಿಪರಬ್ರಹ್ಮನು ಪ್ರೀತಿಯಿಂದ ರೂಪುಧರಿಸಿ ಚೆನ್ನಾಗಿ ಒಪ್ಪುತ್ತದೆನ್ನುವಂತೆ ವಿಶಾಲ ನೇತ್ರಗಳಿಗೆ ಪಂಪಾಂಬಿಕೆಯ ಆ [ದಿವ್ಯ]ಮೂರ್ತಿಯು ಸೊಗಸುಗೊಂಡಿತು. ೩೮. ಪ್ರಜ್ವಲಿಸುವ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಹಾಗೂ ಆಜ್ಞಗಳೆಂಬ ಷಟ್ಚಕ್ರ ಕಮಲಗಳನ್ನು ಅರಳಿಸಿ ಅತಿಶಯವಾಗಿ ಹಬ್ಬಿದ ಬಳ್ಳಿ ಮಿಂಚನ್ನು ಹೋಲಿಕೆ ಪಡೆದು

ನಿಜಭಕ್ತಜನದಭೀಷ್ಟ
ವ್ರಜಮಂ ಬಿಡದೊಲ್ದು ಪೊಂಗಿ ಕೊಡುವ ಸುಪರ್ವ।
ವ್ರಜದಿನಿವೆಣ್ಣೆನೆ ನೇತ್ರಾಂ
ಬುಜಕೆಡ್ಡಮದಾಯ್ತು ಮೂರ್ತಿ ಪಂಪಾಂಬಿಕೆಯಾ ॥ ೩೯ ॥

ಸುರುಚಿರಭಕ್ತಿರಸಂ ಸ್ರುತಿ
ಯುರುದುಃಖಮನುಜಿದು ನಿಜಸುಖಮನೆರ್ದೆವನೆಯೊಳ್।
ಪರುತವಿಸುವ ಸುಜ್ಞಾನದ
ತಿರುಳೆನಲೆಸೆದತ್ತು ಮೂರ್ತಿ ಪಂಪಾಂಬಿಕೆಯಾ ॥ ೪೦ ॥

ಪುದಿದಜ್ಞಾನದ ಪೆಂಪಂ
ಸದೆದೋಡಿಸಿ ಸಕಲಭಕ್ತಸಂಚಯದ ಲಸ।
ದ್ಧೃದಯಾಬ್ಜದೊಳೊಪ್ಪುವ ಚಿ
ನ್ಮುದವೆನಲೆಸೆದತ್ತು ಮೂರ್ತಿ ಪಂಪಾಂಬಿಕೆಯಾ ॥ ೪೧ ॥

ಧ್ರುವಮಂಡಲದೊಸರ್ವಮರ್ದಂ
ಸುವಿಲಾಸದಿನುಂಡು ಯೋಗಿಗಳ ಚೇತನದೊಳ್।
ತವೆ ತೊಳಗಿ ತೊಳಗಿ ಬೆಳಗೊ
ಪ್ಪುವ ನಿಜವೆನಿಸಿದುದು ಮೂರ್ತಿ ಪಂಪಾಂಬಿಕೆಯಾ ॥ ೪೨ ॥

ಇಂತು ವಾಙ್ಮನಸಾಗೋಚರಮಪ್ಪ ಪಂಪಾಂಬಿಕೆಯ ಮೂರ್ತಿಯಂ ಕಂಡಿಂದುವಿನ ಲೇಖೆಯಂ ಕಂಡಿಂಗದಿರ್ವಕ್ಕಿಯಂತೆ ಪೊಂಗಿ ತುಂಗಾನಂದದಿಂದುದ್ಭಟಕ್ಷಿತೀಂದ್ರಚಂದ್ರಮಂ ಭಯಭರಿತಭಕ್ತಿಯಿಂದಂ ಸಾಷ್ಟಾಂಗಪ್ರಣತನಾಗಿ ಮಗುಟ್ದೆಟ್ಟು ಕರಸರೋಜಂಗಳಂ ಮುಗಿದುಕೊಂಡು ಸ್ತೋತ್ರಮಂ ಮಾಡಲುದ್ಯುಕ್ತನಾಗಿ.

ಹೊಳೆಯುವ ಚಿತ್ಕಳೆ ಎನ್ನುವಂತೆ ಪಂಪಾಂಬಿಕೆಯ ಆ [ದಿವ್ಯ] ಮೂರ್ತಿಯು ಶೋಭಿಸಿತು. ೩೯. ತನ್ನ ಭಕ್ತರ ಇಷ್ಟಾರ್ಥಗಳನ್ನು ತಪ್ಪದೆ ಸಂತಸದಿಂದ ಅನುಗ್ರಹಿಸುವ ಜಾತ್ರಾದಿ ಹಬ್ಬಗಳ ಇಷ್ಟದೇವತೆಯೋ ಎನ್ನುವಂತೆ ಪಂಪಾಂಬಿಕೆಯ ಆ ದಿವ್ಯಮೂರ್ತಿಯು ಕಣ್ಣುಗಳೆಂಬ ಕಮಲಗಳಿಗೆ ಸೊಗಸಾಯಿತು. ೪೦. ಉಜ್ವಲವಾದ ಭಕ್ತಿರಸವು ಹರಿದು ಅತಿಶಯವಾದ ದುಃಖವನ್ನು ನಿವಾರಿಸಿ ನಿಜ ಸುಖವನ್ನು ಹೃದಯ ನಿವಾಸದಲ್ಲಿ ಹರಡುವ ಸುಜ್ಞಾನದ ತಿರುಳು ಎನ್ನುವಂತೆ ಪಂಪಾಂಬಿಕೆಯ ಆ [ದಿವ್ಯ] ಮೂರ್ತಿಯು ಶೋಭಿಸುವುದು. ೪೧. ಹುಟ್ಟಿದ ಅಜ್ಞಾನದ ಹೆಚ್ಚಳವನ್ನು ಹೊಡೆದಟ್ಟಿ ಸಕಲ ಭಕ್ತ ಸಮೂಹದ ಜ್ವಲಿಸುವ ಹೃದಯ ಕಮಲದಲ್ಲಿ ಶೋಭಿಸುವ ಶಿವಜ್ಞಾನದ ಆನಂದವೆನ್ನುವಂತೆ ಪಂಪಾಂಬಿಕೆಯ ಆ [ದಿವ್ಯ]ಮೂರ್ತಿಯು ಅಂದಗೊಂಡಿರುವುದು. ೪೨. ಆಕಾಶಮಂಡಲದಲ್ಲಿ ತೊಟ್ಟಿಕ್ಕುವ ಅಮೃತವನ್ನು ಸಂತೋಷದಿಂದ ಸವಿದು ಯೋಗಿಗಳ ಅಂತರಂಗದಲ್ಲಿ ಚೆನ್ನಾಗಿ ಪ್ರಜ್ವಲಿಸಿ ಪಂಪಾಂಬಿಕೆಯ ಆ [ದಿವ್ಯ] ಮೂರ್ತಿಯು ಚೆಲುವಿನ ಪರಬ್ರಹ್ಮವೆನಿಸಿದುದು. ವ॥ ಹೀಗೆ ಮಾತು ಮನಗಳಿಗೆ ಸಿಲುಕದ ಪಂಪಾಂಬಿಕೆಯ ಮೂರ್ತಿಯನ್ನು ಕಂಡು ಚಂದ್ರನ ಕಿರಣಗಳನ್ನು ಕಂಡ ಜಕ್ಕವಕ್ಕಿಯಂತೆ ಉಬ್ಬಿ ಅತ್ಯಾನಂದದಿಂದ ಉದ್ಭಟ ಮಹಾರಾಜಚಂದ್ರಮನು ಭಯ

ಶ್ರೀನಾಥಬ್ರಹ್ಮಶಕ್ರಪ್ರಮುಖವಿಬುಧಸಂದೋಹಕೋಟೀರಮಾಣಿ
ಕ್ಯಾನೀಕೋದ್ಭೂತಕಾಂತ್ಯಾವೃತಚರಣಸರೋಜಾತೆ ವಿಖ್ಯಾತೆ ಶುಂಭ।
ದ್ಭಾನುವ್ರಾತಾಚ್ಛತೇಜೋಮಯೆ ಶಶಿಶಕಲೋತ್ತಂಸೆ ಸರ್ವೇಷ್ಟದೆ ಜ್ಞಾ
ನಾನಂದಾಂಭೋಧಿಯೆನ್ನಂ ಪೊರೆಗೆ ಕರುಣದಿಂ ತಾಯೆ ಪಂಪಾಭವಾನೀ ॥ ೪೩ ॥

ಮುನ್ನೊರ್ವಂ ದಾನವೇಂದ್ರಂ ಪ್ರಕುಪಿತಮಹಿಷಾಕಾರಮಂ ತಾಳ್ದುಗರ್ವೋ
ತ್ಪನ್ನಂ ನಾನಾಜಗತ್ತಂ ಬಿಡದೆ ಸುಡೆ ಸುರಶ್ರೇಣಿಯಾಗಳ್ಬೆಗಟ್ಟಿಂ।
ನಿನ್ನಂ ಕೂರ್ತರ್ಚಿಸಲ್ತದ್ದನುಜನ ತನುವಂ ಸೀಳ್ದು ಲೋಕಂಗಳಂ ನಿ
ರ್ಭಿನ್ನಾನಂದಾಬ್ಧಿಯೊಳ್ಮುಡಿಸಿದಳೆ ಜಯ ಮನ್ಮಾತೆ ಪಂಪಾಭವಾನೀ ॥ ೪೪ ॥

ಮದನೋದ್ಯದ್ದರ್ಪಮಂ ಗೆಲ್ದನುಪಮಮುದದಿಂದೂರ್ಧ್ವರೇತಂ ದಲಾದಾ
ಮದನಪ್ರಧ್ವಂಸಿಯಂ ನಿನ್ನ ತೊಳಪಕುಡುವುರ್ವೆಂಬಕೋದಂಡದೊಳ್ಪಾ
ರ್ಚಿದ ಚಂಚತ್ಪಕ್ಷಮೌರ್ವೀಪರಿಕಲಿತವಿಲೋಲಾಯುತಾಪಾಂಗರುಗ್ಬಾ
ಣದಿನೆಚ್ಚರ್ಧಾಂಗಮಂ ಕೊಂಡಗಸುತೆ ಜಯ ಮನ್ಮಾತೆ ಪಂಪಾಭವಾನೀ ॥ ೪೫ ॥

ನಿಚ್ಚಂ ಬಾಗಿರ್ಪ ಯೋಗೀಶ್ವರರ ಹೃದಯಸಂಶುದ್ಧಪಂಕೇಜಪತ್ರಂ
ಬೆಚ್ಚಾರಾಜದ್ಧ್ವಜತ್ಪಾದತಳಮದನಿಶಂ ಪದ್ಮರೇಖಾಂಕವಂತಾ।
ಳ್ದುಚ್ಚಶ್ರೀಲಕ್ಷಣಂ ಚಿತ್ತಿರಲೆಸೆವ ಮಹಾದೇವಿ ರುದ್ರಾಣಿ ಜ್ರಂಭ
ತ್ಸಚ್ಚಿನ್ಮೋದಾಬ್ಧಿ ಯೆನ್ನಂ ಪೊರೆಗೆ ಕರುಣದಿಂ ತಾಯೆ ಪಂಪಾಭವಾನಿ ॥ ೪೬ ॥

ಭಕ್ತಿಗಳಿಂದ ಕೂಡಿ ಸಾಷ್ಟಾಂಗ ನಮಸ್ಕಾರ ಮಾಡಿ ಮೇಲೆದ್ದು ಕರಕಮಲಗಳನ್ನು ಮುಚ್ಚಿ ಸ್ತೋತ್ರವನ್ನು ಮಾಡಲು ತೊಡಗಿ, ೪೩. ವಿಷ್ಣು ಬ್ರಹ್ಮ ದೇವೇಂದ್ರರೇ ಮೊದಲಾದ ಪ್ರಮುಖ ದೇವತೆಗಳ ಸಮೂಹದ ಕಿರೀಟಗಳ ಮಾಣಿಕ್ಯಗಳಿಂದ ಹೊಮ್ಮಿದ ಕಾಂತಿಯಿಂದ ಆವೃತವಾದ ಪಾದಕಮಲಗಳನ್ನು ಹೊಂದಿರುವವಳೂ, ಪ್ರಸಿದ್ಧಳೂ, ಪ್ರಕಾಶಮಾನವಾದ ಸೂರ್ಯನ ಕಿರಣಗಳ ಶುಭ್ರ ತೇಜದಿಂದ ಬೆಳಗುವವಳೂ, ಚಂದ್ರನ ಅಂಶವನ್ನು ಶಿರೋಭೂಷಣವಾಗುಳ್ಳವಳೂ, ಎಲ್ಲರ ಇಷ್ಟಾರ್ಥಗಳನ್ನು ಪೂರೈಸುವವಳೂ, ಜ್ಞಾನ ಆನಂದಗಳ ಸಮುದ್ರವಾದ ತಾಯಿ ಪಂಪಾಂಬಿಕೆ ಕರುಣೆಯಿಂದ ಕಾಪಾಡು. ೪೪. ಹಿಂದೆ ರಾಕ್ಷಸರ ಅಧಿಪತಿಯೋರ್ವನು ಕೆರಳಿದ ಕೋಣನ ಆಕಾರವನ್ನು ಧರಿಸಿ ಗರ್ವದಿಂದ ಕೂಡಿದವನಾಗಿ ಲೋಕವನ್ನೆಲ್ಲ ಬಿಡದೆ ಸುಡುತ್ತಿರಲು, ಆಗ ದೇವತೆಗಳ ಗುಂಪು ಭಯದಿಂದ ತಾಯಿ ಪಂಪಾಭವಾನೀ, ನಿನ್ನನ್ನು ಪೂಜಿಸಲು ಆ ರಾಕ್ಷಸನ ದೇಹವನ್ನು ಸೀಳಿ ಲೋಕವೆಲ್ಲವನ್ನು ಸಂತೋಷ ಸಾಗರದಲ್ಲಿ ಮುಳುಗಿಸಿದೆ. ತಾಯೇ ನಿನಗೆ ಜಯವಾಗಲಿ. ೪೫. ಪ್ರಯತ್ನಶೀಲನಾದ ಮನ್ಮಥನ ಅಹಂಕಾರವನ್ನು ಎಣೆಯಿಲ್ಲದ ಸಂತಸದಿಂದ ಆ ಬ್ರಹ್ಮಚಾರಿಯು ಗೆದ್ದನಲ್ಲವೆ! ಆ ಮನ್ಮಥನನ್ನು ಚೆನ್ನಾಗಿ ಸುಟ್ಟವನನ್ನು ನಿನ್ನ ಹೊಳೆವ ಬಾಗಿದ ಹುಬ್ಬೆಂಬ ಬಿಲ್ಲಿನಿಂದ ಕಡೆಗಣ್ಣೋಟವೆಂಬ ಬಾಣವನ್ನು ಪ್ರಯೋಗಿಸಿ, ಚಾಚಿದ ಚಂಚಲವಾದ ರೆಪ್ಪೆಯನ್ನು ಹೊರಳಿಸಿ ಬಡಬಾಗ್ನಿಯನ್ನು ಕರಗಿಸಿ [ಪತಿಯ] ಅರ್ಧಭಾಗವನ್ನು ಪಡೆದ ಗಿರಿಸುತೆಯೆ, ನನ್ನ ತಾಯಿ ಪಂಪಾಂಬಿಕೆಯೇ, ನಿನಗೆ ಜಯವಾಗಲಿ. ೪೬. ನಿತ್ಯವೂ ಕೊಂಕಿರುವ ಯೋಗೀಶ್ವರರ ಪರಿಶುದ್ಧವಾದ ಹೃದಯಕಮಲವು ಬೆದರಿ,

ದೇವಿ ತ್ವತ್ಪಾದಪಂಕೇಜಮನನವರತಂ ಧ್ಯಾನಿಸುತ್ತಿರ್ಪ ಭಕ್ತರ್
ಸಾವುಂ ಪುಟ್ಟೆಂಬ ವಿದ್ಯಾದ್ವಯಮನಱಿಯದಿರ್ಪರ್ ಕರಂ ಚಿತ್ರಮಲ್ತೇ
ಈವಿಶ್ವಾಕೀರ್ಣಮಾದೀಸಕಲಕಲೆಗಳಂ ಬಲ್ಲವರ್ತಾವೆನಿಪ್ಪರ್
ಶ್ರೀವಾಣೀಸ್ತೋತ್ರಪಾತ್ರಾಮಳತರವಿಳಸನ್ಮೂರ್ತಿ ಪಂಪಾಭವಾನೀ ॥ ೪೭ ॥

ವನಿತಾವೃಂದಂ ಧನಂ ಧಾನ್ಯಮಖಿಳಮಣಿ ದಂತ್ಯಶ್ವಮೊಳ್ಪಾಸಿವೆಲ್ಲಂ
ಜನಿಯಿಕ್ಕುಂ ತ್ವತ್ಪದಾಬ್ಜಾರ್ಚನೆಯ ಮಹಿಮೆಯಿಂ ನಿನ್ನ ಪಾದಂಗಳೊಳ್ಳೇ।
ತನಮಂ ಮೇಣ್ಬೆಚ್ಚೊಡೆಲ್ಲಂ ಬಱಿಯ ಬಯಲೊಳಂದೊಂದಿಚಿದ್ವ್ಯೋ ಮವೇತಾಂ
ತನುವಕ್ಕುಂ ಸರ್ವಸೌಖ್ಯಪ್ರದೆ ಭವದುರುಭಕ್ತರ್ಗೆ ಪಂಪಾಭವಾನೀ ॥ ೪೮ ॥

ಪಂಚಬ್ರಹ್ಮಂಗಮೈದಲ್ಕರಿದೆನಿಪ ಭವತ್ಪಾದಮಂ ಕೀರ್ತಿಸಲ್ಕೀ
ಪಂಚಾಶತ್ಕೋಟಿಭೂಮಂಡಲದೊಳಳವದಾರ್ಗಕ್ಕು ಮೇಣ್ಭಾವಿಸಲ್ತಾಂ
ಪಂಚಂಕೂರ್ತಾಂ ವಲಂ ಬಲ್ಲವೊಲುಱು ಪೊಗಟ್ಟಿಂ ತಾಯೆ ರಕ್ಷಿಪ್ಪುದೆನ್ನಂ
ಪಂಚಾಸ್ಯಶ್ರೀವಿರೂಪಾಕ್ಷನ ತೊಳತೊಳಪರ್ಧಾಂಗಿ ಪಂಪಾಭವಾನೀ ॥ ೪೯ ॥

ಎಂದಿಂತು ಪೊಗಟ್ಟು ಮಗುಱ್ದೆಟ್ಟಿಂದುದ್ಭಟಕ್ಷಿತೀಂದ್ರಚಂದ್ರಮಂ ಬರೆವರೆ,

ಸುರುಚಿರಜಪಮಾಲಾಂಚಿತ
ಕರವೀಷನ್ಮುಕುಳಿತಾಕ್ಷಿ ಪೂಸಿದ ಭಸಿತಂ।
ಪರಿದೊಪ್ಪಿರೆ ನಿಜಯೋಗದೊ
ಳಿರದೊಪ್ಪಿದನೊಂದುತಾಣದೊಳ್ಮುನಿನಾಥಂ ॥ ೫೦ ॥

ಹೊಳೆವ ತಮ್ಮ ಪಾದತಳವು ಸದಾ ಪದ್ಮರೇಖೆಯನ್ನು ಧರಿಸಿ, ಸಂಪದ್ಭರಿತವಾಗಿ ಶೋಭಿಸುವ, ಮಹಾದೇವಿ ಪಾರ್ವತಿಯ ಅರಳಿದ ಜ್ಞಾನಸ್ವರೂಪವಾಗಿರುವ, ಆನಂದಸಾಗರದಂತಿರುವ ತಾಯಿ ಪಂಪಾಭವಾನಿಯು ಕರುಣೆಯಿಂದ ನನ್ನನ್ನು ಕಾಪಾಡಲಿ. ೪೭. ದೇವೀ ಪಂಪಾಭವಾನಿ, ನಿನ್ನ ಪಾದಕಮಲಗಳನ್ನು ಸದಾ ಧ್ಯಾನಿಸುವ ಭಕ್ತರು ಹುಟ್ಟು ಸಾವುಗಳೆಂಬ ಎರಡು ಅವಿದ್ಯೆಗಳನ್ನು ತಿಳಿಯದೆ ಇರುವರು. [ಇದು] ಅತ್ಯಾಶ್ಚರ್ಯವಲ್ಲವೇ! ವಿಶ್ವವ್ಯಾಪಿಯಾದ, ಸರ್ವ ಕಲೆಗಳನ್ನು ತಿಳಿದವಳಾದ, ಸರಸ್ವತಿಯ ಸ್ತೋತ್ರಕ್ಕೆ ಯೋಗ್ಯಳಾದ ನೀನು ಪರಿಶುದ್ಧ ಹಾಗೂ ಶೋಭಾಯಮಾನವಾದ ಶರೀರವುಳ್ಳವಳು. ೪೮. ಸ್ತ್ರೀಯರು, ಧನ-ಧಾನ್ಯಗಳು, ಬೆಲೆಬಾಳುವ ಮಣಿಗಳು, ಆನೆ-ಕುದುರೆಗಳು, ಮೃದುವಾದ ಸುಪ್ಪತ್ತಿಗೆ - ಇವೆಲ್ಲ ನಿನ್ನ ಪಾದಗಳನ್ನು ಪೂಜಿಸುವುದರ ಮಹಿಮೆಯಿಂದ ಪ್ರಾಪ್ತವಾಗುತ್ತವೆ. ನಿನ್ನ ಪಾದಗಳಿಂದ ಚೈತನ್ಯವನ್ನೂ ಭಯದ ನಿವಾರಣೆಯನ್ನೂ ಪಡೆಯಬಹುದು. ಬಯಲೇ ನಿನ್ನ ದೇಹವಾಗಿರುವುದು. ನಿನ್ನ ಭಕ್ತರಿಗೆ ಸಕಲ ಸೌಖ್ಯವನ್ನು ಅನುಗ್ರಹಿಸುವ ಪಂಪಾಭವಾನೀ, ಬಯಲೇ ನಿನ್ನ ದೇಹವಾಗಿರುವುದು. ೪೯. ಬ್ರಹ್ಮನಿಗೆ ಹೊಂದಲು ಅಸಾಧ್ಯವಾದ ನಿನ್ನ ಪಾದಗಳನ್ನು ಸ್ತುತಿಸಲು ಐದುನೂರು ಕೋಟಿ ಭೂಮಂಡಲದಲ್ಲಿ ಯಾರಿಗೆ ತಾನೇ ಸಾಧ್ಯ? ಮನದಲ್ಲಿ ಭಾವಿಸಲು ನೀನು ವಿಶಾಲಳಾಗಿರುವೆ. ನನಗೆ ತಿಳಿದಂತೆ ಚೆನ್ನಾಗಿ ಹೊಗಳಿರುವೆನು. ತಾಯೇ, ಪಂಚಮುಖನಾದ ಶ್ರೀ ವಿರೂಪಾಕ್ಷನ ಜ್ವಲಿಸುವ ಅರ್ಧಾಂಗಿಯಾದ ಪಂಪಾಭವಾನೀ ನನ್ನನ್ನು [ನೀನು] ರಕ್ಷಿಸುವುದು. ವ॥ ಹೀಗೆ ಹೊಗಳಿ ಮರಳಿ ಮೇಲೆದ್ದು ಉದ್ಭಟಮಹಾರಾಜಚಂದ್ರಮನು ಬರುತ್ತಿರಲು, ೫೦. ಮನೋಹರವಾದ ಜಪಮಾಲೆಗಳಿಂದ ಕೂಡಿದ ಕೈಗಳು, ಅರೆಮುಚ್ಚಿದ ಕಣ್ಣುಗಳು, ಭಸ್ಮೋದ್ಧೂಳಿತ ದೇಹ- ಇವುಗಳಿಂದ

ಇಂತು ನಿಜಯೋಗಾನಂದದಿಂದಂ ಕೃಷ್ಣಾಜಿನಬ್ರುಸಿಯ ಮೇಲೆ ಪದ್ಮಾಸನನಾಗಿ ಮನಂಗೊಳಿಪ ಜತಿಯಂ ಕಂಡತಿಭಕ್ತಿಯಿಂದಂ ಕುಮಾರಪಾಲಘೂರ್ಜರಂ ಬಂದಭಿವಂದಿಸಲೆಚ್ಚಿತ್ತಕ್ಷಿಗಳನೊಯ್ಯನೆ ತೆರೆದೀಕ್ಷಿಸಿ ತನ್ನೃಪಾಲಕನಂ ಮುನಿನಾಥಂ ಕಂಡಿಂತೆಂದಂ॥

ಆವುದು ನೆಲೆ ನಿನ್ನಯ ಪೆಸ
ರಾವುದು ನೀಂ ಬಂದ ಕಜ್ಜವೇನೆಂದು ತದು
ರ್ವೀವರನಂ ಬೆಸಗೊಳಲಾ
ಪಾವನಯತಿಪತಿಗೆ ಮಗುಟ್ದು ನೃಪನಿಂತೆಂದಂ ॥ ೫೧ ॥

ಯತಿ ಕೇಳ್ನೆಲೆ ಬಲ್ಲಕಿ ಯೆಂ
ಬತುಳನಗರಮುದ್ಭಟಾಂಕನೆನ್ನಯ ಪೆಸರ್ಭೂ।
ನುತದೇವಲಮುನಿ ಬರಿಸ
ಲ್ಕತಿಮುದದಿಂ ಬಂದೆನಿಲ್ಲಿಗೆಲೆ ಮುನಿನಾಥಾ ॥ ೫೨ ॥

ಎಂದಿಂತುದ್ಭಟರಾಜೇಂದ್ರಚಂದ್ರಮಂ ಬಿನ್ನವಿಸಿದತಿಮೃದುಮಧುರಾಲಾಪಂಗಳಂ ಕೇಳಿ ಪಂಪಾಕ್ಷೇತ್ರಮಂ ಕಾಣ್ಬುದನಂತತಪಃಫಲಮಿಲ್ಲದೆ ಸಮನಿಸದು ನೀಂ ಬಿಟ್ಟಿಯಂ ಬಂದು ಕಟಕಮಂ ಕಂಡ ತೆರನಾಯ್ತೆನಲಾಮುನಿನಾಥಂಗೆ ಜನನಾಥಂ ಕೈಗಳಂ ಮುಗಿದುಕೊಂಡು ವಿನಯೋಕ್ತಿಗಳಿಂದಿಂತೆಂದಂ॥

ಈ ಪಂಪೆಯ ಮಹಿಮೆಯನಾ
ಲಾಪಿಸಿ ಯೆನ್ನಂಕೃತಾರ್ಥನಂ ಮಾಡೆಲೆ ಚಿ।
ದ್ರೂಪತಪಸ್ವಿಯೆ ಯೆನಲಾ
ಭೂಪಶಿರೋಮಣಿಗೆ ಮುನಿಪನಿಂತೆಂದುಸುರ್ದಂ ॥ ೫೩ ॥

ಶೋಭಿಸಿದ ಓರ್ವ ಮುನಿಶ್ರೇಷ್ಠನು, ಒಂದೆಡೆಯಲ್ಲಿ ಆತ್ಮಯೋಗದಲ್ಲಿ ಕೂಡಿ ಅಂದಗೊಂಡನು. ವ॥ ಹೀಗೆ ಆತ್ಮಯೋಗಾನಂದದಿಂದ ಕೂಡಿ, ಜಿಂಕೆಯ ಚರ್ಮದಿಂದ ಸಿದ್ಧವಾದ ಚಾಪೆಯ ಮೇಲೆ ಪದ್ಮಾಸನದಲ್ಲಿ ಕುಳಿತು ಮನಸ್ಸನ್ನು ಸೆಳೆಯುವ ಆ ಸನ್ಯಾಸಿಯನ್ನು ಕಂಡು ಹೆಚ್ಚಿನ ಭಕ್ತಿಯಿಂದ ಕುಮಾರಪಾಲ ಘೂರ್ಜರನು ಬಂದು ನಮಸ್ಕರಿಸಲು, ಎಚ್ಚೆತ್ತ ಮುನಿನಾಥನು ಕಣ್ಣುಗಳನ್ನು ಮೆಲ್ಲನೆ ತೆರೆದು ನೋಡಿ ಮಹಾರಾಜನನ್ನು ಕಂಡು ಹೀಗೆಂದನು: ೫೧. ಸ್ಥಳವಾವುದು? ಹೆಸರೇನು? ಬಂದ ಕಾರ್ಯವೇನು? ಎಂದು ಮಹಾರಾಜನನ್ನು ಪ್ರಶ್ನಿಸಲು, ಅದಕ್ಕೆ ಉತ್ತರವಾಗಿ ಆ ಪವಿತ್ರ ಮುನಿನಾಥನಿಗೆ ಅರಸನು ಹೀಗೆಂದನು- ೫೨. ಮುನಿಯೇ ಕೇಳು, ನನ್ನ ಸ್ಥಳವು ಬಲ್ಲಕಿ ಎಂಬ ವಿಶಾಲ ನಗರ. ಉದ್ಭಟನೆನ್ನುವುದು ನನ್ನ ಹೆಸರು. ಮುನಿನಾಥಾ, ಲೋಕವೆಲ್ಲ ಹೊಗಳುವ ದೇವಲಮುನಿಯು ಕರೆಸಲು ಹೆಚ್ಚಿನ ಸಂತಸದಿಂದ ನಾನು ಇಲ್ಲಿಗೆ ಬಂದೆನು. ವ॥ ಎಂದು ಹೀಗೆ ಉದ್ಭಟಮಹಾರಾಜಚಂದ್ರಮನು ಹೇಳಿದ ಮೃದುಮಧುರವಾದ ಮಾತುಗಳನ್ನು ಕೇಳಿ ಪಂಪಾಕ್ಷೇತ್ರದರ್ಶನವು ಅಪಾರ ತಪಸ್ಸಿನ ಫಲದಿಂದಲ್ಲದೆ ಸಾಧ್ಯವಿಲ್ಲ. ನೀನು ಬಿಟ್ಟಿಯನ್ನು ಮಾಡಲು ಬಂದು ರಾಜಧಾನಿಯನ್ನು ಕಂಡ ರೀತಿಯಂತಾಯಿತು ಎನ್ನಲು, ಆ ಮುನಿನಾಥನಿಗೆ ಮಹಾರಾಜನು ಕೈಮುಗಿದು ವಿನಯಪೂರ್ವಕವಾಗಿ ಹೀಗೆಂದನು: ೫೩. ಎಲೆ ಚಿದ್ರೂಪ ತಪಸ್ವಿಯೆ, ಈ ಹಂಪೆಯ ಮಹಿಮೆಯನ್ನು ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡು ಎನ್ನಲು, ಆ ರಾಜಶಿಖಾಮಣಿಗೆ

ಪಂಪಾಕ್ಷೇತ್ರದ ಮಹಿಮೆಯ
ಲಂಪಟ್ಟಿದಹಿಪಂಗೆ ಬಿತ್ತರಿಸಲರಿದನಿತಂ।
ನೀಂ ಪದೆದೆಲೆ ಭೂಪತಿ ಕೇ
ಳಾಂ ಪೇಟ್ದಿಪೆನೆಂದು ಮಗುಟ್ದು ಮುನಿ ಯಿಂತೆಂದಂ ॥ ೫೪ ॥

ನರರೆಲ್ಲಂ ನಿರ್ಜರರ್ ನಿರ್ಮಳತರಜಲಮೆಲ್ಲಂ ವಿಯತ್ಸಿಂಧು ಭೂಮೀ
ಧರಮೆಲ್ಲಂ ಮೇರು ತತ್ಪ್ರಸ್ತರನಿಕರಮದೆಲ್ಲಂ ಲಸನ್ನಾಕರತ್ನಂ।
ತರುವೆಲ್ಲಂ ಕಲ್ಪವೃಕ್ಷಂ ಪಚನಶಿಖಿಯದೆಲ್ಲಂ ಮಖಂ ಬೆಂಚಿಯೆಲ್ಲಂ
ವರತೀರ್ಥಂ ಕ್ಷೇತ್ರಚೂಡಾಮಣಿ ಯೆನಲೆಸೆವೀಪಂಪೆಯೊಳ್ಕೇಳ್ನರೇಂದ್ರಾ ॥ ೫೫ ॥

ಕಡುನಲವಿಂ ಪಂಪಾಂಬಿಕೆ
ಬಿಡದೋವುವ ಕಥನದಿಂದೆ ಪಂಪಾಪುರಮೆಂ।
ದೆಡೆವಿಡದೀಕ್ಷೇತ್ರಂ ಪೆಸ
ರ್ವಡೆದೊಪ್ಪುವುದಾಲಿಸುದ್ಭಟಕ್ಷಿತಿಪಾಲಾ ॥ ೫೬ ॥

ಮತ್ತಮದಲ್ಲದೆ,

ಪ್ರಾಚಿಯೊಳುರುಕಿನ್ನರಪನ
ವಾಚಿಯೊಳಭಿಜಂಬುಕೇಶ್ವರಂ ಪಶ್ಚಿಮದೊ।
ಳ್ಮೇಚಗಳಂ ಸೋಮೇಶನು
ದೀಚಿಯೊಳಾವಾಣಿಭದ್ರರುಜ್ರ್ಂ ನೆಲಸಿಪ್ಪರ್ ॥ ೫೭ ॥

ಇಂತು ನಾಲ್ಕುಲಿಂಗಂಗಳೊಳ್ ನಾಲ್ಕುಂ ದ್ವಾರಂಗಳಿರ್ದಖಿಳಭಕ್ತರ್ಗಭೀಪ್ಸಾರ್ಥಂಗಳಂ ಕೊಡುತೊಪ್ಪಂಬೆತ್ತಿರೆ ತನ್ಮಧ್ಯದೊಳ್ ಸಾರ್ದಯೋಜನವಿಶಾಲಭೂಮಿಯಲ್ಲಿರ್ದ ಮಹಾಲಿಂಗಗಳ

ಮುನಿಯು ಹೀಗೆಂದನು. ೫೪. ಪಂಪಾಕ್ಷೇತ್ರದ ಮಹಿಮೆಯ ವಿಶೇಷತೆಯನ್ನು ತಿಳಿದ ನಾಗರಾಜನಿಗೂ [ಅದನ್ನು] ವಿವರಿಸಿ ಹೇಳಲು ಸಾಧ್ಯವಿಲ್ಲ. ಎಲೆ ಮಹಾರಾಜನೇ, ನನಗೆ ತಿಳಿದಿರುವಷ್ಟನ್ನು ನಾನು ಹೇಳುವೆನು. ಪ್ರೀತಿಯಿಂದ ಕೇಳುವವನಾಗು ಎಂದು ಹೇಳಿ ಮತ್ತೆ ಮುನಿಯು ಹೀಗೆಂದನು. ೫೫. ಮಹಾರಾಜನೇ ಕೇಳು, ಮನುಷ್ಯರೆಲ್ಲ ದೇವತೆಗಳು, ನಿರ್ಮಳ ಜಲವೆಲ್ಲ ದೇವಗಂಗೆ, ಬೆಟ್ಟಗಳೆಲ್ಲ ಮೇರುಪರ್ವತಗಳು, ಕಲ್ಲುಗಳೆಲ್ಲ ಹೊಳೆಯುವ ಸ್ವರ್ಗದ ರತ್ನಗಳು, ವೃಕ್ಷಗಳೆಲ್ಲ ಕಲ್ಪವೃಕ್ಷಗಳು, ಹಚ್ಚುವ ಬೆಂಕಿಯೆಲ್ಲ ಯಜ್ಞಗಳು, ಕೊಳಗಳೆಲ್ಲ ಶ್ರೇಷ್ಠ ತೀರ್ಥಗಳು [ಹೀಗೆ] ಕ್ಷೇತ್ರಗಳಿಗೆಲ್ಲಾ ಶಿರೋರತ್ನವಾಗಿ ಈ ಹಂಪೆಯು ಶೋಭಿಸಿರುವುದು. ೫೬. ಅತ್ಯಾನಂದದಿಂದ ಪಂಪಾಂಬಿಕೆಯು ತಪ್ಪದೆ ಕಾಪಾಡುವ ಕಾರಣದಿಂದ ಪಂಪಾಪುರವೆಂದು ಯಾವಾಗಲೂ ಈ ಕ್ಷೇತ್ರವು ಹೆಸರು ಪಡೆದು ಶೋಭಿಸಿರುವುದು. ಉದ್ಭಟ ಮಹಾರಾಜನೇ ಕೇಳು, ಅಷ್ಟಲ್ಲದೆ, ೫೭. ಪೂರ್ವದಲ್ಲಿ ಅಸಂಖ್ಯ ಕಿನ್ನರರು, ಪಶ್ಚಿಮದಲ್ಲಿ ಜಂಬುಕೇಶ್ವರ, ದಕ್ಷಿಣದಲ್ಲಿ ನೀಲಕಂಠ ಸೋಮೇಶ, ಉತ್ತರದಲ್ಲಿ ವಾಣಿ ಭದ್ರರು ವಿಜೃಂಭಣೆಯಿಂದ ವಾಸವಾಗಿರುವರು. ವ॥ ಹೀಗೆ ನಾಲ್ಕು ಲಿಂಗಗಳಲ್ಲಿ ನಾಲ್ಕು ಬಾಗಿಲುಗಳಿದ್ದು, ಸಕಲ ಭಕ್ತರಿಗೆ ಅವರವರ ಇಷ್ಟಾರ್ಥಗಳನ್ನು ಅನುಗ್ರಹಿಸುತ್ತ ಶೋಭಿಸಿರಲು ಅದರ ಮಧ್ಯಭಾಗದಲ್ಲಿ ನಾಲ್ಕು ಮೈಲಿ ವಿಶಾಲ

ನೊಂದೊಂದಾಗಿ ಪೆಸರ್ಗೊಂಡುಸುರ್ವೆನೆಂಬೊಡೆ ಬಿಸಜಾಸನಂಗಸದಳಮಾಗಿ ನೆಗಳ್ತೆವೆತ್ತಗಣಿತ ಶಿವಲಿಂಗಂಗಳ ಬೆಡಂಗಿಂ ತುಂಗಮಹಿಮೆಯಂ ತಳೆದು ಮಂಗಳಮಪ್ಪ ಪಂಪಾಕ್ಷೇತ್ರಂ ವಿರಾಜಿಸುತಿರ್ದುದು॥

ಅಂತುಮಲ್ಲದೆಯುಂ,

ಕಲ್ಲೆಲ್ಲಂ ಪರುಸದ ಕಣಿ
ಪುಲ್ಲೆಲ್ಲಂ ಮೂಲಿಕೆಗಳಮರ್ದ ಗೋತತಿ ತಾ
ನೆಲ್ಲಂ ಸುರಭಿಗಳುದಕಮ
ದೆಲ್ಲಂ ಕೇಳ್ ನೃಪತಿ ಪಂಪೆಯೊಳ್ ಸಿದ್ಧರಸಂ ॥ ೫೮ ॥

ಜನ್ಮಾದಿದುಃಖಮಂ ಕಳೆ
ದನ್ಮನದಾನಂದಮೀವ ಪಂಪಾಪುರದೊಳ್।
ಮನ್ಮಖತೀರ್ಥಪ್ರಮುಖೋ
ದ್ಯನ್ಮಂಗಳತೀರ್ಥಮೆಸೆವುದುರ್ವೀಪಾಲಾ ॥ ೫೯ ॥

ಪೆಸರ್ಗೊಂಡೊಂದೊಂದಂ ಲೆ
ಕ್ಕಿಸಿ ಪೇಳ್ದಪೆನೆಂದೊಡೀಮಹಾಕ್ಷೇತ್ರದೊಳು।
ಳ್ಳಸದೃಶತೀರ್ಥಾವಳಿಯಾ
ಬಿಸಜಭವಂಗಸದಳಂ ಧರಿತ್ರೀಪಾಲಾ ॥ ೬೦ ॥

ಮಡುವೆಲ್ಲಂ ತೀರ್ಥಂಗಳ್
ಗಿಡುವೆಲ್ಲಂ ಮರುಜೆವಣೆಗಳರೆಗಲ್ಲೆಲ್ಲಂ।
ಕಡು ಮಿಸುಪಸಿದ್ಧಪೀಠಂ
ಬಿಡದೆಸೆವೀಪಂಪೆಯೊಳ್ನರೇಂದ್ರಮೃಗೇಂದ್ರಾ ॥ ೬೧ ॥

ಭೂಮಿಯಲ್ಲಿದ್ದ ಮಹಾಲಿಂಗಗಳನ್ನು ಒಂದೊಂದಾಗಿ ಹೆಸರುಹಿಡಿದು ಹೇಳುವೆನೆಂದರೆ ಬ್ರಹ್ಮನಿಗೂ ಅಸಾಧ್ಯವೆಂದು ಖ್ಯಾತಿಪಡೆದು ಯಥೇಚ್ಛ ಶಿವಲಿಂಗಗಳ ರಹಸ್ಯದಿಂದಾಗಿ ಅಪಾರ ಮಹಿಮೆಯನ್ನು ಹೊಂದಿ ಚೆಲುವಾಗಿರುವ ಪಂಪಾಕ್ಷೇತ್ರವು ಶೋಭಿಸುತ್ತಿದ್ದಿತು. ಅಷ್ಟಲ್ಲದೆ, ೫೮. ಮಹಾರಾಜನೇ ಕೇಳು, ಹಂಪೆಯಲ್ಲಿನ ಕಲ್ಲುಗಳೆಲ್ಲ ಪರುಷದ ಗಣಿ, ಹುಲ್ಲೆಲ್ಲ ಮೂಲಿಕೆಗಳು, ಕೂಡಿರುವ ಗೋವುಗಳೆಲ್ಲ ಕಾಮಧೇನುಗಳು, ನೀರೆಲ್ಲ ಸಿದ್ಧರಸವು. ೫೯. ಮಹಾರಾಜಾ, ಜನ್ಮಗಳ ದುಃಖವನ್ನು ನಿವಾರಿಸಿ, ವಿಷಯ ವ್ಯಾಮೋಹವಿಲ್ಲದ ಶುದ್ಧ ಆನಂದವನ್ನೀಯುವ ಪಂಪಾಪುರದಲ್ಲಿ ಮನ್ಮುಖತೀರ್ಥವೇ ಮೊದಲಾದ ಮುಖ್ಯ ತೀರ್ಥಗಳು, ಪ್ರಮುಖವಾದ ಮಂಗಳ ತೀರ್ಥಗಳು ಶೋಭಿಸುವುವು. ೬೦. ಮಹಾರಾಜಾ, ಒಂದೊಂದನ್ನೂ ಹೆಸರುಗೊಂಡು ನೋಡಿ ಈ ಮಹಾಕ್ಷೇತ್ರದಲ್ಲಿರುವ ಅಸಮಾನವಾದ ತೀರ್ಥಗಳನ್ನು ಹೇಳೋಣವೆಂದರೆ ಬ್ರಹ್ಮನಿಗೂ ಸಾಧ್ಯವಿಲ್ಲ. ೬೧. ಮಹಾರಾಜ ಸಿಂಹನೇ, ಬಿಡದೆ ಶೋಭಿಸುವ ಈ ಹಂಪೆಯಲ್ಲಿರುವ ನದಿಗಳೆಲ್ಲ ತೀರ್ಥಗಳು, ಗಿಡಗಳೆಲ್ಲ ಮರುಜೇವಣೆಗಳು, ಬಂಡೆಗಲ್ಲುಗಳೆಲ್ಲ ವಿಶೇಷವಾಗಿ ಪ್ರಕಾಶಿಸುವ ಸಿದ್ಧ ಪೀಠಗಳಾಗಿವೆ.

ಇಂತನಂತತೀರ್ಥಂಗಳಿಂ ಸಕಲಲಿಂಗಂಗಳಿಂ ನಾನಾಪುಣ್ಯಪರ್ವತಂಗಳಿಂ ಸಮಸ್ತಾಶ್ರಮಂಗಳಿಂ ನೆಗಟ್ದೆಸೆವೆತ್ತ ಪಂಪಾಕ್ಷೇತ್ರದೊಳ್ ನೆನೆದವಂ ನಿಷ್ಪಾಪಂ ಪೆಸರ್ಗೊಂಡವಂ ಪಿರಿದುಂ ಪವಿತ್ರಾಂಗಂ ಕಂಡವಂ ಕಲ್ಯಾಣಮಯಂ ಕೊಂಡಾಡಿದವಂ ಕೋಟಿಯಜ್ಞಫಲಯುತಂ ಮುಳುಗಿದವಂ ಮೋಕ್ಷಾತ್ಮಕಮೆನಲಸಮ ಮಹಿಮೆಯಂ ತಳೆದು ಪರಿವ ತುಂಗಭದ್ರಾನದಿ ವಿರಾಜಿಸುತಿರ್ದುದು॥

ಅದೆಂತೆಂದೊಡೆ,

ತತ್ತಟನಿಕರಂ ಬಿಡದೆಸೆ
ದುತ್ತಮತೀರ್ಥಂಗಳಿಂ ವಸಿಷ್ಠ ಪ್ರಮುಖ।
ಪ್ರೋತ್ತುಂಗಋಷಿಗಳಾಶ್ರಮ
ದೊತ್ತೊತ್ತಿಂ ತುಂಗಭದ್ರೆ ತಾನೆಸೆದಿರ್ಕುಂ ॥ ೭೨ ॥

ಇಂತು ಮಂಗಳಮಯೆಯಪ್ಪ ತುಂಗಭದ್ರಾನದೀತೀರದಲ್ಲಿ,

ಮಿಗೆ ಜೃಂಭತ್ಕ್ಷೋಣಿಯೆಂಬಂಗನೆಯಮರ್ದ ಲಲಾಟಂ ಸ್ಮರನ್ಮಾನಸಾಟಂ
ತ್ರಿಗುಣಾತ್ಮರ್ಗಾವಗಂ ತಾಂ ಸೊಗಸುವ ಪೊಸನೋಟಂ ಮಹಾಕರ್ಮದೋಟಂ।
ನಿಗಮಾಂತಾರ್ಥಂಗಳುದ್ಯದ್ವಚನತತಿಯ ಕೂಟಂ ನಿಜಶ್ರೀಯ ಬೇಟಂ
ಬಗೆಗೊಂಡೊಪ್ಪಿರ್ಪುದುರ್ವೀಧರನಿಕರಕಿರೀಟಂ ಕರಂ ಹೇಮಕೂಟಂ ॥ ೭೩ ॥

ಎಂದಿಂತು ಮನಂಗೊಳಿಪ ಹೇಮಕೂಟಾಗ್ರದೊಳ್ ಮಧುಮಥನ ವಿಧಿವಿಬುಧಪತಿಮುಖ್ಯವಿವಿಧ ಬುಧಕೋಟೀರಕೋಟಿನವಶಾಣಾಕ್ಷೀಣ ಕಷಣೋಲ್ಲಣನಿಖಿಳಮಣಿಗಣವಿರಾಜಿತ ಚರಣಾರುಣತರುಣ ಪಲ್ಲವಂ ಪಂಪಾಂಬಿಕಾವಲ್ಲಭಂ ನಿಗಮದುರ್ಲಭಂ ಜಗದುದಯಸ್ಥಿತಿಲಯಕಾರಣ ಸ್ವರೂಪಂ ಶ್ರೀ ವಿರೂಪಾಕ್ಷಂ ಸಂತಸಮನೆಸೆದಾಂತುಮಿರ್ಪಂ॥

ವ॥ ಹೀಗೆ, ಅಸಂಖ್ಯ ತೀರ್ಥಗಳಿಂದ, ಸಕಲ ಲಿಂಗಗಳಿಂದ, ನಾನಾ ಪುಣ್ಯಪರ್ವತಗಳಿಂದ, ಸಮಸ್ತ ಆಶ್ರಮಗಳಿಂದ ಪ್ರಖ್ಯಾತವಾದ ಪಂಪಾಕ್ಷೇತ್ರದಲ್ಲಿ ಹರಿಯುವ ತುಂಗಭದ್ರಾನದಿಯನ್ನು ನೆನೆದವನ ಪಾಪಗಳು ಇಲ್ಲವಾಗುತ್ತವೆ, ಹೆಸರನ್ನು ಧ್ಯಾನಿಸಿದವನ ದೇಹವು ಪವಿತ್ರವಾಗುತ್ತದೆ, ನೋಡಿದವನಿಗೆ ಶುಭವಾಗುತ್ತದೆ, ಕೊಂಡಾಡಿದವನು ಕೋಟಿಯಜ್ಞಗಳ ಫಲ ಹೊಂದುವನು, ಮುಳುಗುಹಾಕಿದವನು ಮೋಕ್ಷ ಪಡೆಯುವನು ಎನ್ನುವಂತೆ ಎಣೆಯಿಲ್ಲದ ಮಹಿಮೆಯನ್ನು ಹೊಂದಿ [ಅದು] ಶೋಭಿಸುತ್ತಿದ್ದಿತು. ವ॥ ಅದು ಹೇಗೆಂದರೆ, ೭೨. ಅದರ ದಡಗಳನ್ನು ಬಿಡದೆ ಹೊಂದಿ ಅಂದಗೊಂಡಿರುವ ಒಳ್ಳೆಯ ತೀರ್ಥಗಳಿಂದ ಕೂಡಿ, ವಸಿಷ್ಠನೇ ಮೊದಲಾದ ಮುಖ್ಯ ಋಷಿಗಳ ಆಶ್ರಮಗಳನ್ನು ಅಪ್ಪಿಕೊಂಡು, ತುಂಗಭದ್ರೆಯು ಶೋಭಿಸಿರುವಳು. ವ॥ ಹೀಗೆ ಮಂಗಳವಾಗಿರುವ ತುಂಗಭದ್ರಾನದೀ ದಡದಲ್ಲಿ, ೭೩. ಹೆಚ್ಚಾಗಿ ವಿಜೃಂಭಿಸಿರುವ ಭೂಕಾಂತೆಯ ಹಣೆ, ಮನ್ಮಥನ ಮನದ ಆಟ, ಸತ್ವ, ರಜ, ತಮ ಎಂಬ ಮೂರು ಗುಣಗಳುಳ್ಳವರಿಗೆ ಮನೋಹರವಾದ ಹೊಸ ನೋಟ, ಮಹಾಕರ್ಮದ ಓಟ, ಉಪನಿಷದರ್ಥಗಳ ಶ್ರೇಷ್ಠ ವಚನ ಸಮೂಹದ ಕೂಟ, ಆತ್ಮಶ್ರೀಯ ಬೇಟ - ಹೀಗೆ ಬೆಟ್ಟಗಳ ಸಮೂಹಕ್ಕೆ ಕಿರೀಟಪ್ರಾಯವೂ ಕಾಂತಿಪೂರ್ಣವೂ ಆದ ಹೇಮಕೂಟವು ಮನಸ್ಸನ್ನು ಆಕರ್ಷಿಸುವಂತೆ ಅಂದಗೊಂಡಿರುವುದು. ವ॥ ಹೀಗೆ ಮನಸ್ಸನ್ನು ತನ್ನತ್ತ ಸೆಳೆಯುವ ಹೇಮಕೂಟದ ತುದಿಯಲ್ಲಿ ವಿಷ್ಣು ಬ್ರಹ್ಮ ದೇವೇಂದ್ರ ಹಾಗೂ ನಾನಾ

ಅಂತುಮಲ್ಲದೆಯುಂ,

ಪೊಣರ್ವಖಿಳಕ್ಷೇತ್ರಶಿಖಾ
ಮಣಿಯಾದೀಪಂಪೆಯೊಳ್ವಿರೂಪಾಕ್ಷಂ ನಿ।
ರ್ಗುಣರೂಪಂ ದೇವಕುಲಾ
ಗ್ರಣಿಯನಿಶಂ ಕಂಗೊಳಿಪ್ಪನೆಲೆ ಭೂಪಾಲಾ ॥ ೬೪ ॥

ವೇದಾಂತಸ್ತುತಿಗಚ್ಛಯೋಗಿಗಳ ಚೇತೋದೃಷ್ಟಿಗಬ್ಜಾಸನೇಂ
ದ್ರಾದಿಪ್ರೋನ್ನತದೇವವೃಂದಸದ್ಭಾವಕ್ಕೆ ಮೈದೋಱದಿ।
ರ್ಪಾದೇವಂ ಶಶಿಶೇಖರಂ ಗುರುವಿರೂಪಾಕ್ಷಂ ಭವಾನೀಪ್ರಿಯಂ
ಮೋದಂಬೆತ್ತಿರೆ ತಾಳ್ದು ರಂಜಿಪುದು ಪಂಪಾಕ್ಷೇತ್ರಮುರ್ವೀಧವಾ ॥ ೬೫ ॥

ಇಂತವಾಙ್ಮನಸಗೋಚರನಂ ನಾದಬಿಂದುಕಲಾತೀತನಂ ದೇವಶಿಖಾಮಣಿಯಂ ಸಮಸ್ತದೇವತಾ ಚಕ್ರವರ್ತಿಯಂ ಶರಣಜನಮೋದನಂ ವಾಂಛಿತಫಲಪ್ರದಕಲ್ಪವೃಕ್ಷನಂ ಶ್ರೀಗುರುವಿರೂಪಾಕ್ಷನಂ ಚಿಂತಾಮಣಿಯಂ ತಳೆದು ಮನಂಗೊಳಿಪ ರತ್ನಸಾನುಸ್ಥಲಿಯೆನೆ ಪಂಪಾಪುರಂ ವಿರಾಜಿಸುತ್ತಿರ್ದುದು॥

ಅಂತುಮಲ್ಲದೆಯುಂ,

ಈಪರಿ ರಂಜಿಪ ವರಪಂ
ಪಾಪುರದುತ್ತುಂಗಮಾದ ನಿರುಪಮಮಹಿಮಾ।

ದೇವತೆಗಳ ಕೋಟಿಸಂಖ್ಯೆಯ ಕಿರೀಟಗಳನ್ನು ಒರೆಗಲ್ಲು ಕೊರತೆಯಿಲ್ಲದಂತೆ ತೀವ್ರವಾಗಿ ಮಸೆಯುವುದರಿಂದುಂಟಾದ ಮಣಿಗಳ ಕಾಂತಿಯಿಂದ ಪ್ರಕಾಶಿಸುವ ಕೆಂಪಾದ ಹವಳದಂತಿರುವ ಪಾದಗಳ ಪಂಪಾಂಬಿಕೆಯ ಒಡೆಯನೂ, ವೇದಗಳಿಗೆ ನಿಲುಕದವನೂ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕರ್ತೃವೂ ಆದ ಶ್ರೀ ವಿರೂಪಾಕ್ಷನು ಸಂತಸವನ್ನು [ಎಲ್ಲೆಡೆ] ಚೆಲ್ಲಿ ಆಹ್ಲಾದದಿಂದಿರುವನು. ಅಷ್ಟಲ್ಲದೆ, ೬೪. ಎಲೆ ಭೂಪಾಲಾ, ಸಂಧಿಸುವ ಸಕಲ ಕ್ಷೇತ್ರಗಳಿಗೆ ಶಿರೋರತ್ನವಾಗಿರುವ ಈ ಹಂಪೆಯಲ್ಲಿ ನಿರ್ಗುಣನೂ ದೇವಕುಲಕ್ಕೆ ಮುಖ್ಯನೂ ಆದ ವಿರೂಪಾಕ್ಷನು ಸದಾ ನೋಟಕ್ಕೆ ಆಪ್ಯಾಯಮಾನನಾಗಿರುವನು. ೬೫. ಮಹಾರಾಜಾ, ವೇದಾಂತಗಳ ಸ್ತುತಿಗೆ, ಪರಿಶುದ್ಧರಾದ ಯೋಗಿಗಳ ಅಂತರ್ ದೃಷ್ಟಿಗೆ, ಬ್ರಹ್ಮ ಇಂದ್ರ ಇವರೇ ಮೊದಲಾದ ಮುಖ್ಯ ದೇವತೆಗಳ ಸದ್ಭಾವಕ್ಕೆ ಕಾಣಿಸಿಕೊಳ್ಳದಿರುವ ದೇವನಾದ ಚಂದ್ರಶೇಖರನೂ, ಗುರುವಾದ ವಿರೂಪಾಕ್ಷನೂ, ಪಾರ್ವತೀಪ್ರಿಯನಾದ ಶಂಕರನೂ ಸಂತಸಗೊಂಡಿರಲು ಅವನನ್ನು ಹೊಂದಿ ಪಂಪಾಕ್ಷೇತ್ರವು ಶೋಭಿಸಿರುವುದು. ವ॥ ಹೀಗೆ ಮಾತು ಮನಗಳಿಗೆ ಕಾಣದಿರುವವನನ್ನು, ನಾದ-ಬಿಂದು-ಕಲೆಗಳಿಗೆ ಮೀರಿರುವವನನ್ನು, ದೇವತೆಗಳಿಗೆ ಶಿರೋರತ್ನದಂತಿರುವವನನ್ನು, ಸಕಲ ದೇವತೆಗಳ ಚಕ್ರವರ್ತಿಯನ್ನು, ಶರಣಜನರಿಗೆ ಸಂತಸವೀಯುವವನನ್ನು, ಬಯಸಿದ ಫಲವನ್ನು ಅನುಗ್ರಹಿಸುವ ಕಲ್ಪವೃಕ್ಷನನ್ನು, ಶ್ರೀಗುರು ವಿರೂಪಾಕ್ಷನನ್ನು, ಚಿಂತಾಮಣಿಯನ್ನು ಹೊಂದಿ ಮನಸೆಳೆಯುವ ರತ್ನಗಳಿರುವ ಬೆಟ್ಟದ ತಪ್ಪಲು ಪ್ರದೇಶವೆನ್ನುವಂತೆ ಪಂಪಾಪುರವು ಶೋಭಿಸಿದ್ದಿತು. ವ॥ ಅಷ್ಟಲ್ಲದೆ, ೬೬. ಮಹಾರಾಜಾ, ಹೀಗೆ ಶೋಭಿಸುವ ಶ್ರೇಷ್ಠವಾದ ಪಂಪಾಪುರದ ಹೋಲಿಸಲಾಗದ

ಕೂಪಾರಮನುಸುರ್ವೆನೆನ
ಲ್ಕಾಪದ್ಮಭವಂಗೆ ತೀರದುರ್ವೀಪಾಲಾ || ೬೬ ||

ಪಂಪಾಕ್ಷೇತ್ರದ ಮಹಿಮೆಗ
ಳಂ ಪದೆದಾಲಿಸಿದವರ್ ಮಗುಟ್ದ್ದೊರೆಕೇಳರ್।
ತಾಂ ಪಿತೃಪತಿಸೈರಿಭಗಳ
ಕಂಪಿತಘಂಟಾಕಠೋರಘಣಘಣರವಮಂ || ೬೭ ||

ವಿಲಸತ್ಪಂಪಾಕ್ಷೇತ್ರಮ
ನೊಲವಿಂದಂ ಬಂದು ಮೆಟ್ಟಿದರ್ ಮೆಟ್ಟರ್ದುರ್।
ಮ್ಮಲಮಪ್ಪ ನಿರಯಮಾರ್ಗದ
ನೆಲನಂ ಕೇಳ್ ನಿಗಮವಚನಕರ್ಣಾಭರಣಾ || ೬೮ ||

ಕಂತುಮದಧ್ವಂಸಂ ಕಡು
ಸಂತಸದಿಂದಿರ್ಪ ಪಂಪೆಯಂ ಕಂಡರ್ಮೆ।
ಣಂತಕಭಟಭೀಷಣರೂ
ಪಂ ತಾವೆಂದುಂ ನಿರೀಕ್ಷಸರ್ಜನಪಾಲಾ || ೬೯ ||

ಮನಮೊಲ್ದಾಕ್ಷೇತ್ರದೊಳೊಂ
ದಿನಿಸಾನುಂ ಜಲಮನೀಂಟಿದರ್ ಮಗುಟೀಂಟರ್।
ಜನನಿಯ ಮೊಲೆವಾಲಂ ಕೇ
ಳ್ಮನಸಿಜಸಂಕಾಶರೂಪ ಕೀರ್ತಿಕಲಾಪಾ || ೭೦ ||

ನುತಿವಡೆದೀಕ್ಷೇತ್ರದೊಳಾ
ಶಿತಿಕಂಠಾರ್ಪಿತಸುಧೂಪವರಗಂಧಘ್ರಾ।
ಣಿತರ್ವೈದರ್ವೈತರಣಿಯ
ತತದುರ್ಗಂಧವನೆ ವಾಸಿಸರ್ ಜನನಾಥಾ || ೭೧ ||

ಉನ್ನತ ಮಹಿಮೆಯನ್ನು ಹೊಂದಿರುವ ಸಾಗರವನ್ನು ವರ್ಣಿಸಲು ಆ ಬ್ರಹ್ಮನಿಗೂ ಸಾಧ್ಯವಿಲ್ಲ. ೬೭. ಪಂಪಾಕ್ಷೇತ್ರದ ಮಹಿಮೆಗಳನ್ನು ಪ್ರೀತಿಯಿಂದ ಕೇಳಿದವರು ತಂದೆ, ಒಡೆಯ [ಹಾಗೂ] ಆನೆಗಳ ಘಂಟೆಯ ಘಣ ಘಣವೆನ್ನುವ ಕಂಪಿತ ಕರ್ಕಶ ಧ್ವನಿಯನ್ನು ಮತ್ತೆ ಮತ್ತೆ ಪರೀಕ್ಷಿಸಲೆಂದು ಕೇಳರು. ೬೮. ವೇದ ವಚನಗಳನ್ನು ಕಿವಿಗೆ ಆಭರಣವನ್ನಾಗಿ ಧರಿಸಿರುವವನೇ ಕೇಳು, ಸುಂದರವಾದ ಪಂಪಾಕ್ಷೇತ್ರಕ್ಕೆ ಬಂದು [ಅದರ ನೆಲವನ್ನು] ತುಳಿದವರು, ಹೇಸಿಕೆಯಿಂದ ಕೂಡಿರುವ ನರಕದ ದಾರಿಯ ನೆಲವನ್ನು ತುಳಿಯಲಾರರು. ೬೯. ಮಹಾರಾಜಾ, ಮನ್ಮಥನ ಗರ್ವವನ್ನು ಭಂಗಮಾಡಿ ಅತ್ಯಾನಂದದಿಂದ ಕೂಡಿ ಶಿವನಿರುವ ಹಂಪೆಯನ್ನು ನೋಡಿದವರು ಯಮನ ಸೇವಕರ ಭೀಕರ ರೂಪನ್ನು ತಾವೆಂದೂ ನೋಡಲಾರರು. ೭೦. ಮನ್ಮಥನಂತೆ ಕಾಂತಿಪೂರ್ಣನೆ, ಕೀರ್ತಿಯಿಂದ ಅಲಂಕರಿಸಲ್ಪಟ್ಟವನೆ, ಕೇಳು ಮನಮೆಚ್ಚಿ ಆ ಕ್ಷೇತ್ರದಲ್ಲಿ ಸ್ವಲ್ಪ ನೀರನ್ನು ಕುಡಿದವರು ತಾಯಿಯ ಮೊಲೆ ಹಾಲನ್ನು ಮತ್ತೆ ಕುಡಿಯಲಾರರು. ೭೧. ಮಹಾರಾಜಾ, ಪ್ರಖ್ಯಾತವಾದ ಈ ಕ್ಷೇತ್ರದಲ್ಲಿ

ಪಂಚೇಂದ್ರಿಯಂಗಳದಟಂ
ವಂಚಿಸುವಾಯಾಸವೇಕೆ ಕೂರ್ತೀಸ್ಥಲದೊಳ್।
ಪಂಚಾಕ್ಷರಿಯಂ ಸಲೆ ಸಂ
ದಂಚಿತಗೃಹಿಯಾಗೆ ಸಾಕು ಕೇಳ್ಜನನಾಥಾ ॥ ೭೨ ॥

ಮತ್ತಮಹಲ್ಲದೆ,

ಘನಪಂಚಭೂತಮಯಸಂ
ಹನನಮನುಜಿ಼ ತಳೆಯದಾಭವಕ್ಕಳ್ಕಿದ ಸ।
ಜ್ಜನರೀಪೆಂಪಿನ ಪಂಪೆಯೊ
ಳನಿಶಂ ಕೂರ್ತಿರ್ದು ಮುಕ್ತಿವಡೆವರ್ಭೂಪಾ ॥ ೭೩ ॥

ಪಂಪಾಕ್ಷೇತ್ರದ ಭೂಮಿಯೊಳ್ಧರೆ ಮಹಾತೀರ್ಥಂಗಳೊಳ್ ವಾರಿ ನ
ಲ್ವೆಂಪಂಬೆತ್ತಮಖಾಗ್ನಿಯೊಳ್ ಶಿಖಿ ವಿರೂಪಾಕ್ಷಂಗೆ ಕೂರ್ತಿಕ್ಕುವಾ।
ಸಂಪದ್ವೀಜನದಿಂಪುಗಾಳಿಯೊಳಿರಲ್ ಚಿದ್ವ್ಯೋಮದೊಳ್ವ್ಯೋಮಮೊ
ಳ್ಪಂ ಪೊಂದಿರ್ಕುಮಿವಿಲ್ಲಿ ಪಂಚತೆಯನ್ನೈದಲ್ ಜೀವಿಗಳ್ಭೂವರಾ ॥ ೭೪ ॥

ಕಾಮಂ ಕೈವಲ್ಯದೊಳ್ ಕ್ರೋಧಮದಘತತಿಯೊಳ್ ಪುಣ್ಯದೊಳ್ಸಂದಲೋಭಂ
ಶ್ರೀಮೋಹಂ ಶಂಭುಭಕ್ತಾವಳಿಯೊಳತಿಮದಂ ಚಂಡಕೀನಾಶನೊಳ್ಮ।
ತ್ತಾಮಾತ್ಸರ್ಯಂ ಮಲಂ ಮಾಯೆಯೊಳಿರಲರಿಷಡ್ವರ್ಗದೊಳ್ ಕೂಡಿತೋರ್ಪ
ಪ್ರೇಮಂಬೆತ್ತಿಲ್ಲಿಕೂರ್ತಿರ್ಪ್ಪಮಳಿನಶಿವಭಕ್ತರ್ಧರಿತ್ರೀಂದ್ರಚಂದ್ರಾ ॥ ೭೫ ॥

ಆ ನೀಲಕಂಠನಿಗೆ ಅರ್ಪಿಸಲ್ಪಟ್ಟ ಒಳ್ಳೆಯ ಧೂಪ, ಶ್ರೇಷ್ಠವಾದ ಗಂಧ - ಇವುಗಳನ್ನು ಆಘ್ರಾಣಿಸಿದವರು ನರಕದ ಹಾದಿಯಲ್ಲಿ ಸಿಗುವ ನದಿಯಾದ ವೈತರಣಿಯ ಆ ದುರ್ಗಂಧವನ್ನು ಸಹಿಸಲಾರರು. ೭೨. ಮಹಾರಾಜಾ ಕೇಳು, ಪಂಚೇಂದ್ರಿಯಗಳ ಅಬ್ಬರವನ್ನು ನಿವಾರಿಸುವ ಆಯಾಸವೇಕೆ? ಪ್ರೀತಿಯಿಂದ ಈ ಜಾಗದಲ್ಲಿ ಪಂಚಾಕ್ಷರೀ ಮಂತ್ರವನ್ನು ಚೆನ್ನಾಗಿ ಹೊಂದಿಸಿ ಪೂಜಿಸಲ್ಪಟ್ಟ ಗೃಹವಾದರೆ ಸಾಕು. ವ॥ ಮತ್ತೆ ಅಷ್ಟಲ್ಲದೆ, ೭೩. ಮಹಾರಾಜಾ, ಮುಂದಣ ಜನ್ಮಕ್ಕಂಜಿ ಬಲಯುತವಾದ ಪಂಚಭೂತಗಳಿಂದಾದ ಈ ಶರೀರದ ನಾಶಕ್ಕೆ ಮನವೀಯದೆ ಸಜ್ಜನರು ಈ ಪ್ರಖ್ಯಾತವಾದ ಹಂಪೆಯಲ್ಲಿ ಸದಾ ಪ್ರೀತಿಯಿಂದ ನೆಲೆಸಿ ಮುಕ್ತಿ ಪಡೆಯುವರು. ೭೪. ಮಹಾರಾಜಾ, ಈ ಪಂಪಾಕ್ಷೇತ್ರದ ಜೀವಿಗಳು ಮರಣವನ್ನಪ್ಪಲು ಒಳಿತನ್ನು ಅವಲಂಬಿಸಿ ಇರುವಂತೆ ಇದರ ನೆಲದಲ್ಲಿ ಪೃಥ್ವಿಯ ಅಂಶವೂ, ಮಹಾತೀರ್ಥಗಳಲ್ಲಿ ಅಪ್ಪುವಿನ ಅಂಶವೂ, ಪ್ರಸಿದ್ಧವಾದ ಯಜ್ಞದ ಅಗ್ನಿಯಲ್ಲಿ ತೇಜದ ಅಂಶವೂ, ಬೆಲೆಬಾಳುವ ಬೀಸಣಿಗೆಯಿಂದ ವಿರೂಪಾಕ್ಷನಿಗೆ ಗಾಳಿ ಬೀಸುವ ಬೀಸಣಿಗೆಯ ಕಂಪಿಡಿದ ಗಾಳಿಯಲ್ಲಿ ವಾಯುವಿನ ಅಂಶವೂ, ಚಿದಾಕಾಶದಲ್ಲಿ ಆಕಾಶದ ಅಂಶವೂ ಕೂಡಿ ಇರುವುವು. ೭೫. [ಇಲ್ಲಿ] ಶುದ್ಧರಾದ ಶಿವಭಕ್ತರು ಕಾಮವು ಮುಕ್ತಿಯ ಮೇಲೆ, ಕ್ರೋಧವು ಪಾಪಗಳ ಮೊತ್ತದ ಮೇಲೆ, ಲೋಭವು ಪ್ರಸಿದ್ಧವಾದ ಪುಣ್ಯದ ಮೇಲೆ, ಮೋಹವು ಶಿವಭಕ್ತರ ಸಮೂಹದ ಮೇಲೆ, ತೀವ್ರವಾದ ಮದವು ಕ್ರೂರಿಯಾದ ಯಮನ ಮೇಲೆ. ಮಾತ್ಸರ್ಯವು

ಉದಕಮನೀಂಟಿದಲ್ಲದೆ ಸಮಂತಳೆದಲ್ಲದೆ ಕೂರ್ತು ನೋಡಿದ
ಲ್ಲದಿತರನಿರ್ಮಲಸ್ಥಳದೊಳುನ್ನತಚಿತ್ಸುಖಮೀವ ಶುದ್ಧಮೋ।
ಕ್ಷದ ನೆಲೆದೋಱದೊರ್ಮೆ ನಿಜಭಕ್ತಿಯೊಳಿರ್ದೆಡೆಯಲ್ಲಿ ಪಂಪೆಯಂ
ಪದೆದತಿಮೋದದಿಂ ಸ್ಮರಿಸಲಾಗಳೆ ಮುಕ್ತಿ ನರರ್ಗೆ ಭೂವರಾ ॥ ೭೬ ॥

ತನುವಂ ದಂಡಿಸಲೇಕೆ ಸತ್ತಪದೊಳಾಯಾಸಂ ಬಡಲ್ಕೇಕೆ ಮಿ
ಕ್ಕಿನ ತೀರ್ಥಂಗಳನೈದೆ ನೋಟ್ಪಭರದಿಂ ಸಂಸಾರಮಂ ನೂಂಕಲೇ।
ಕೆ ನಿಜಾನಂದಮನಾಸೆಮಾಡಿ ಮನವೊಲ್ದೀಪಂಪೆಯೊಳ್ಭಕ್ತಿಯಿಂ
ಮನೆಗಟ್ಟಿರ್ಪ ನರಂಗೆ ಮುಕ್ತಿ ಘನಮೇ ಕೇಳುದ್ಭಟೋರ್ವೀಶ್ವರಾ ॥ ೭೭ ॥

ಭವವೆಂಬಾವನಮಂ ದಹಿಪ್ಪ ಬಲವದ್ದಾವಾಗ್ನಿತೋರ್ಪ್ಪಾಜವಂ
ಜನವೆಂಬಬ್ಧಿಯನೈದೆ ದಾಂಟಿಸುವ ಬೈತ್ರಂ ಸರ್ವಕರ್ಮಂಗಳಂ।
ಬವನೀಧ್ರೌಘಮನಿಕ್ಕಿ ಸೀಳ್ವ ಪವಿ ದುಃಖಾನೀಕಮೆಂಬಂಧಕಾ
ರವನೆಬ್ಬಿಟ್ಟುವ ಭಾನು ವಿಪ್ರವಿಲಸತ್ಪಂಪಾಪುರಂ ಭೂಮಿಪಾ ॥ ೭೮ ॥

ನಾಗೇಂದ್ರಂಗಾದೊಡೆ ಮೇ
ಣೇಗುರುಪಂಪಾಮಹಾಪುರದ ಮಹಿಮೆಯನಿಂ।
ಬಾಗಿ ವಚಿಸಲ್ಕೆ ಗೋಚರ
ಮಾಗದೆನಲ್ಗೋಚರಿಪ್ಪುದಾರ್ಗೆ ನೃಪಾಲಾ ॥ ೭೯ ॥

ಎಂದಿಂತು ಪಂಪಾಕ್ಷೇತ್ರದ ಮಹಿಮೆಗಳಂ ಕಂಡನಿತಂ ಪೇೞ್ದು ತನ್ಮುನೀಶ್ವರಂಗೆ ಕುಮಾರಪಾಲಘೂರ್ಜರಂ ಕೈಮುಗಿದು ಕೊಂಡು,

ನಿಶ್ಚಯವಾಗಿ ಮಾಯೆಯ ಮೇಲೆ ಇರುವಂತೆ ಅರಿಷಡ್ವರ್ಗಗಳೊಡನೆ ಹೊಂದಿಕೊಂಡು ಪ್ರೇಮದಿಂದ ಮೆಚ್ಚಿ ಇರುವಂತೆ ತೋರುವರು. ೭೬. ಮಹಾರಾಜಾ, ನೀರನ್ನು ಕುಡಿಯದೆ, ಸುಖ-ದುಃಖವನ್ನು ಸಮಾನವಾಗಿ ಸ್ವೀಕರಿಸದೆ, ಪ್ರೀತಿಯಿಂದ ಕಾಣದೆ, ಇತರ ನಿರ್ಮಲ ಸ್ಥಳಗಳಲ್ಲಿ ಅತ್ಯಾನಂದವನ್ನೀಯುವ ಪರಮ ಮೋಕ್ಷದ ನೆಲೆ ಕಾಣಿಸದೆ ಇರುವೆಡೆಯಲ್ಲೇ ಒಮ್ಮೆ ಶುದ್ಧಭಕ್ತಿಯಿಂದ, ಆಸೆಯಿಂದ, ತುಂಬಿದ ಆನಂದದಿಂದ ಹಂಪೆಯನ್ನು ನೆನೆಯಲು ಆ ಕ್ಷಣವೆ ಮುಕ್ತಿ ಪ್ರಾಪ್ತಿಯಾಗುವುದು. ೭೭. ಉದ್ಭಟಮಹಾರಾಜನೇ ಕೇಳು, ದೇಹವನ್ನು ದಂಡಿಸುವುದೇಕೆ? ತಪಸ್ಸಿನಲ್ಲಿ ಆಯಾಸ ಹೊಂದುವುದೇಕೆ? ಅನ್ಯ ತೀರ್ಥಕ್ಷೇತ್ರಗಳನ್ನು ಚೆನ್ನಾಗಿ ನೋಡುವ ಉತ್ಸಾಹದಲ್ಲಿ ಸಂಸಾರವನ್ನು ತ್ಯಜಿಸುವುದೇಕೆ? ಆತ್ಮಾನಂದವನ್ನು ಬಯಸಿ ಮನಸಾ ಈ ಹಂಪೆಯಲ್ಲಿ ಭಕ್ತಿಯಿಂದ ಕೂಡಿ ಮನೆಕಟ್ಟಿ ವಾಸಿಸುವ ಮನುಷ್ಯನಿಗೆ ಮುಕ್ತಿ ಹಿರಿದೇ? ೭೮. ಮಹಾರಾಜಾ, ಜನ್ಮಾಂತರವೆಂಬ ಕಾಡನ್ನು ದಹಿಸುವ ಉಗ್ರವಾದ ಕಾಡ್ಗಿಚ್ಚನ್ನು ಯಮನು ತೋರುವನು. ಆ ಯಮನೆಂಬ ಸಮುದ್ರವನ್ನು ದಾಟಿಸುವ ನಾವೆಯೂ, ಸಕಲ ಕರ್ಮಗಳೆನ್ನುವ ಬೆಟ್ಟಗಳನ್ನು ಕೆಡವಿ ಸೀಳುವ ವಜ್ರಾಯುಧವೂ, ದುಃಖವೆನ್ನುವ ಕಗ್ಗತ್ತಲೆಯನ್ನು ಅಟ್ಟುವ ಸೂರ್ಯನೂ ಜ್ಞಾನಸಂಪನ್ನವಾದ ಪಂಪಾಪುರವಾಗಿದೆ. ೭೯. ಮಹಾರಾಜಾ, ಈ ಪಂಪಾಪುರದ ಮಹಿಮೆಯನ್ನು ಚೆನ್ನಾಗಿ ವರ್ಣಿಸಲು ನಾಗೇಂದ್ರನಿಗೂ ಸಾಧ್ಯವಿಲ್ಲವೆನ್ನುವಂತೆ ಎಲ್ಲರಿಗೂ ತೋರುವುದು. ವ॥ ಎಂಬುದಾಗಿ ಹೀಗೆ ಪಂಪಾಕ್ಷೇತ್ರದ ಮಹಿಮೆಗಳಲ್ಲಿ ತನಗೆ ತಿಳಿದಷ್ಟನ್ನು ಹೇಳಿದ ಆ

ಉರಗಾಧಿಪಂಗೆ ತೀರದ
ವರಪಂಪಾಪುರದ ಮಹಿಮೆಗಳನಾಂ ಕೇಳ್ದಂ।
ತುರುಪುಣ್ಯಾತ್ಮಕನಾದೆಂ
ಶರಣು ಕೃಪಾಂಬುಧಿಯೆ ಯೆಂದನಂದವನೀಶಂ || ೮೦ ||

ಇಂತೆಂದು ಸಂತಸಂಬಡು
ವಂತಾಜನನಾಥನಂ ಪರಸಿ ಬಿಟ್ಟುಕೊಟ್ಟೊ।
ಲ್ದಂತಕಮದಮಥನಧ್ಯಾ
ನಂತಪ್ಪದೆ ಶೋಭಿಸಿರ್ದನಾಮುನಿನಾಥಂ || ೮೧ ||

ಇಂತು ಪಂಪಾಪುರದ ಪೆಂಪಿನ ಮೈವೆಳಗುಂ ಪೇಳ್ದು ಕೃತಾರ್ಥನಂ ಮಾಡಿದ ಮುನೀಶ್ವರನಡಿದಾವರೆಗಳ್ಗಭಿವಂದಿಸಿ ಬೀಳ್ಕೊಂಡು ವಿರೂಪಾಕ್ಷನಂ ಕಾಣ್ಬುರುತರಭಕ್ತಿರಸಭರದುರುವಣೆಯಿಂದಂಜನಾಚಳಮನ ಪಸವ್ಯಕ್ಕಿಕ್ಕಿಕೊಂಡುದ್ಭಟಕ್ಷಿತೀಂದ್ರಚಂದ್ರಂ ಬರೆವರೆ,

ಸುೞಿಯಿಂ ಬುದ್ಬುದದಿಂ ಮೀ
ನ್ಗಳ ಸೊಂಪಿಂ ಕಿಱುದೆಱೆಗಳ ಚೆಲ್ವಿಂದೆ ಸಮು।
ಜ್ವಳಶೀಕರತತಿಯಿಂ ಕಂ
ಗೊಳಿಸಿತ್ತಾ ತುಂಗಭದ್ರೆ ತುಳ್ಕುತೆ ಸೊಗಸಂ || ೮೨ ||

ಮಡುಗಳೊಳ್ಪೊಣ್ಮಿ ಮುೞಿಗೊಂಡೇಳ್ವ ಸುೞಿಗಳಿಂ
ಬಿಡದೆ ತೀಡುವ ತಂಬೆಲರಿನೊಗೆವ ವಳಿಗಳಿಂ।
ತೆರೆವೊಯ್ಲಿನಿಂ ಚಿಮ್ಮುವಂಬುಕಣಜಾಲದಿಂ
ಭರದಿ ತಾಂ ಕಲ್ಮೀನ್ಗಳೊಗೆವ ಕಲ್ಲೋಲದಿಂ || ೮೩ ||

ಮುನೀಶ್ವರನಿಗೆ ಕುಮಾರಪಾಲ ಘೂರ್ಜರನು ನಮಸ್ಕರಿಸಿ, ೮೦. ನಾಗೇಂದ್ರನಿಗೂ [ವರ್ಣಿಸಲು] ಸಾಧ್ಯವಿಲ್ಲದ ಶ್ರೇಷ್ಠವಾದ ಪಂಪಾಪುರದ ಮಹಿಮೆಗಳನ್ನು ನಾನು ಕೇಳಿ ಅಪಾರ ಪುಣ್ಯಗಳಿಸಿದೆ. [ಎಲೈ] ಕೃಪಾಸಮುದ್ರನೆ ನಿನಗೆ ವಂದನೆಗಳು ಎಂದು ಮಹಾರಾಜನು ಹೇಳಿದನು. ೮೧. ಹೀಗೆಂದ ಮಹಾರಾಜನನ್ನು ಸಂತೋಷದಿಂದ ಆಶೀರ್ವದಿಸಿ ಪ್ರೀತಿಯಿಂದ ಬೀಳ್ಕೊಟ್ಟು, ಯಮನ ಅಹಂಕಾರವನ್ನು ನಾಶಮಾಡಿದ ಶಿವನನ್ನು ಬಿಡದೆ ಧ್ಯಾನಿಸುತ್ತ ಆ ಮುನಿನಾಥನು ಶೋಭಿಸಿದನು. ವ|| ಹೀಗೆ ಘನತೆವೆತ್ತ ಪಂಪಾಪುರದ ಒಳಗಣ ಸೊಬಗನ್ನು ವರ್ಣಿಸಿ ಧನ್ಯನನ್ನಾಗಿ ಮಾಡಿದ ಮುನೀಶ್ವರನ ಪಾದಕಮಲಗಳಿಗೆ ವಂದಿಸಿ ಬೀಳ್ಕೊಂಡು, ವಿರೂಪಾಕ್ಷನನ್ನು ಕಾಣಲು ಹೆಚ್ಚಿನ ಭಕ್ತಿರಸೋದ್ರೇಕದಿಂದ ಕೂಡಿ ಹಂಪೆಯಲ್ಲಿರುವ ಅಂಜನಾದ್ರಿಯನ್ನು ಬಲಗಡೆಯಿಂದ ಪ್ರದಕ್ಷಿಣೆ ಮಾಡಿ ಉದ್ಭಟಮಹಾರಾಜಚಂದ್ರಮನು ಬರುತ್ತಿರಲು, ೮೨. ಸುಳಿಗಳಿಂದ, ನೊರೆಯಿಂದ, ಮೀನುಗಳ ಹಿಗ್ಗಿನಿಂದ, ಪುಟ್ಟ ತೆರೆಗಳ ಚೆಲುವಿನಿಂದ, ಚೆನ್ನಾಗಿ ಹೊಳೆವ ತುಂತುರು ಹನಿಗಳಿಂದ ಆ ತುಂಗಭದ್ರೆಯು ಸೊಗಸನ್ನು ಎಲ್ಲೆಡೆ ಚೆಲ್ಲುತ್ತ ಕಣ್ಣಿಗೆ ಮೋಹಕವಾಗಿದ್ದಿತು. ೮೩. ಕೊಳಗಳಲ್ಲಿ ಉಬ್ಬಿ ಬಾಗಿ ಮೇಲೇಳುವ, ಸುಳಿಗಳಿಂದ, ಬಿಡದೆ ಸುಳಿವ ತಣ್ಣನೆಯ ಗಾಳಿಯಿಂದುಂಟಾದ ಅಲೆಗಳಿಂದ, ತೆರೆಯ ಹೊಡೆತದಿಂದ ಚಿಮ್ಮುವ ನೀರಿನ ತುಂತುರುಗಳಿಂದ, ತೆರೆಗಳ ಚಲನೆಯಿಂದಾಗಿ ಮೇಲೆ

ವೀಚಿಯ ಪೊಯಲ್ಗಳಡೆಸಿಲ್ಕುವೆಳಮೀನ್ಗಳಿಂ
ವೀಚಿಗಳನೊಡೆದುರ್ಬಿ ಪರಿವ ಬಲ್ಮೀನ್ಗಳಿಂ।
ಪುಟನೆಗೆದು ಮಗುೞ್ಚಿವ ಚಿಳಿಚಿಮಾನೀಕದಿಂ
ಲಟಕಟಿಸಿ ನೆಱೆಯಲನುಗೆಯ್ವ ನವಕೋಕದಿಂ ॥ ೮೪ ॥

ಮಿಂಚುವ ಮಳಲ್ವಿಂಟೆಗಳ ತಣ್ಣೆಳಲೊಳಂದು
ಸಂಚಶರಕೇಳೀಪ್ರಪಂಚದೊಳ್ಮೆಱೆದಂದು।
ಕಂಜಮಿತ್ರನ ಬೆಂಗದಿರ್ಗಳಳವಂ ಕಂಡು
ಮಂಜುಳತರಾನಂದಮಂ ನಾಡೆ ಕೈಕೊಂಡು ॥ ೮೫ ॥

ನಲಿದು ಕೂಡುವ ಚಕ್ರಯುತಕಂಜಪುಂಜದಿಂ
ವಿಲಸದುದ್ವರ್ತವಿಮಳಾವರ್ತಪುಂಜದಿಂ।
ಪೊಸತೆಱೆಗಳೊಳ್ಸಿಲ್ಕಿ ತೇಲ್ವ ಹಂಸಂಗಳಿಂ
ಮಿಸುಪ ಮಡುಗಳೊಳಮರ್ದ ಬಾಲಹಂಸಂಗಳಿಂ ॥ ೮೬ ॥

ತತ್ತಟಂಬಿಡದೆಸೆವ ಚಾರುದ್ರುಮಂಗಳಿಂ
ಉತ್ತಮಸುಗಂಧವಂ ಕೊಡುವ ವೃಕ್ಷಂಗಳಿಂ।
ಜೊಂಚಕಂಗಳ ಭರದಿನೊಂದಿನಿಸು ತೂಗುತುಂ
ಪ್ರಾಚೀನಮಾದೆಲರ್ದೊಲೆದೊಲೆದು ಬಾಗುತುಂ ॥ ೮೭ ॥

ಕಣ್ಗೆ ಮಂಗಳಮಾದ ತೆಂಗುಗಳ ಸಾಲ್ಗಳಿಂ
ತಣ್ಗಂಪನೀವ ಪೂವಲ್ಲಿಗಳ ಮೇಲ್ಗಳಿಂ।
ಫಳಮಂಜರೀಭರವಿನಮಿತಫೂಗಂಗಳಿಂ
ಮಿಳಿರ್ವ ಕುಹಳಾನೀಕಮಮರ್ದಪೂಗಂಗಳಿಂ ॥ ೮೮ ॥

ಕಾಣಿಸಿಕೊಳ್ಳುವ ಕಲ್ಲು, ಮೀನುಗಳಿಂದ, ೮೪. ಅಲೆಯ ಹೊಡೆತದ ಮಧ್ಯೆ ಸಿಕ್ಕುವ ಎಳೆಯ ಮೀನುಗಳಿಂದ, ಅಲೆಗಳನ್ನು ಸೀಳಿಕೊಂಡು ಉಬ್ಬಿ ಚಲಿಸುವ ದೊಡ್ಡ ಮೀನುಗಳಿಂದ, ಚಿಮ್ಮಿ ಮರಳಿ ಕೆಳಗಿಳಿವ ಜಂಬುಮೀನುಗಳಿಂದ, ಉದ್ವೇಗದಿಂದ ಸೇರಲು ಸನ್ನದ್ಧವಾಗಿರುವ ಎಳೆಯ ಚಕ್ರವಾಕಗಳಿಂದ, ೮೫. ಹೊಳೆವ ಮಳಲ ಹಿಂಟೆಗಳ ತಣ್ಣೆಳಲಲ್ಲಿ ಏಕಾಂತದಲ್ಲಿ ಮನ್ಮಥಲೀಲೆಯಲ್ಲಿ ಮೈಮರೆತು, ಸುಡುವ ಸೂರ್ಯನ ಕಿರಣಗಳ ಶಕ್ತಿಗೆ ಸ್ಪಂದಿಸಿ, ಮಹದಾನಂದವನ್ನು ಹೊಂದಿ, ೮೬. ಸಂಭ್ರಮದಿಂದ ಕೂಡುವ ಚಕ್ರವಾಕ ಪಕ್ಷಿಗಳ ಸಮೂಹದಿಂದ, ಮನೋಹರವಾದ ಒಳ್ಳೆಯ ಸುಳಿಗಳಲ್ಲಿ ಮೇಲೇರಿ ಹೊಸ ತೆರೆಗಳ ನಡುವೆ ಸಿಲುಕಿ ತೇಲುವ ಹಂಸಗಳಿಂದ, ಸುಂದರವಾದ ಮಡುಗಳಲ್ಲಿ [ವಿಹರಿಸುವ] ಬಾಲಹಂಸಗಳಿಂದ, ೮೭. ಅಲ್ಲಿನ ದಡಗಳಲ್ಲಿ ಚೆನ್ನಾಗಿ ಶೋಭಿಸಿರುವ ಸುಂದರ ವೃಕ್ಷಗಳಿಂದ, ಒಳ್ಳೆಯ ಸುವಾಸನೆಯನ್ನು ಹರಡುವ ಮರಗಳಿಂದ; ಗೊಂಚಲುಗಳ ಭಾರದಿಂದ ತುಸು ಅಲುಗಾಡುತ್ತ ಮಂದವಾದ ಗಾಳಿಗೆ ತೂಗಿ ಬಾಗುತ್ತ ೮೮. ಕಣ್ಣಿಗೆ ಅಂದವಾದ ತೆಂಗುಗಳ ಸಾಲಿನಿಂದ, ನವಿರಾದ ಕಂಪನ್ನೀಯುವ ಹೂವಿನ ಬಳ್ಳಿಗಳ ಚಪ್ಪರಗಳಿಂದ, ಹಣ್ಣುಗಳ ಭಾರದಿಂದ ಜಗ್ಗಿರುವ ಗಿಡಮರಗಳಿಂದ, ನೀಳವಾದ ಅಡಕೆಯ ಮರಗಳಲ್ಲಿ ತುಂಬಿರುವ

ಕಂಪುಂಡು ಸೊಕ್ಕಿ ಸಲೆ ಬೀಳ್ವ ಮತ್ತಾಳಿಯಿಂ
ಸೊಂಪಿನರಲ್ಗಳನಾಂತ ಸಂಪಗೆಗಳೋಳಿಯಿಂ।
ಸಲ್ಲಲಿತಪಲ್ಲವಾವಳಿಯ ಕಡು ಸೊಂಪಿನಿಂ
ಮೆಲ್ಲೆಲರ್ಗೊಲೆವ ಸೆಳೆಗೊಂಬುಗಳಲಂಪಿನಿಂ ॥ ೮೯ ॥

ನಸುಗಾಳಿಗೊಡೆದೊಸರ್ವ ಮಂಜುಳಫಲಂಗಳಿಂ
ದೆಸೆದೆಸೆಗೆ ನಱುಗಂಪನೀವ ಕುಸುಮಂಗಳಿಂ।
ಕಡು ಸೊಂಪುವಡೆದೆಸೆವ ನವರಸಾಲಂಗಳಿಂ
ಬಿಡದತಿಮನಂಬೊಗುವ ಚಾರುಪನಸಂಗಳಿಂ ॥ ೯೦ ॥

ನಳನಳಿಸಿ ಬೆಳೆದೆಸೆವ ರಸವಾಳೆಯೋಳಿಯಿಂ
ವಿಳಸದಾಮೋದಮಂ ಪಸರಿಪ ಲತಾಳಿಯಿಂ।
ಮಂಜುಳಫಲೋಚ್ಚಂಡಮಾದ ಕಿತ್ತೀಳೆಯಿಂ
ಕೆಂಜಿಗುರಲಪ್ಪಣ್ಗಳಮರ್ದ ಹೇರೀಳೆಯಿಂ ॥ ೯೧ ॥

ಶೋಣಾಂಶುವಂ ಪಸರಿಪಚ್ಚಪುಷ್ಪಂಗಳಿಂ
ಮಾಣದಂತೆಸೆವ ಶಾಖಾಸಮೂಹಂಗಳಿಂ।
ತಳೆದು ಕಂಗೊಳಿಪ ಕಂಕೇಳಿವಿತಾನದಿಂ
ಫಳಭರಿತಕಮನೀಯವಿಟಪಿಗಳನೂನದಿಂ ॥ ೯೨ ॥

ಪಾಟಳಿಗಳೆಸಕದಿಂ ನಿಂಬೆಗಳಳುಂಬದಿಂ
ಮೊಟುವಡೆದೆಸೆವ ಸುರಹೊನ್ನೆಯ ಕದಂಬದಿಂ।
ಪೊಚ್ಚಪೊಸಗಂಪಮರ್ದಚಂದನಕುಜಂಗಳಿಂ
ಅಚ್ಚಿಗೊಳಿಸುವನಂತತಿಲಕದ ಕುಜಂಗಳಿಂ ॥ ೯೩ ॥

ಹೂವುಗಳಿಂದ, ೮೯. ಪರಿಮಳವನ್ನು ಚೆನ್ನಾಗಿ ಸವಿದು ಸೊಕ್ಕಿ ಬೀಳುವ ಮದಿಸಿದ ದುಂಬಿಗಳಿಂದ, ದಟ್ಟವಾಗಿ ಎಲ್ಲೆಡೆ ಹೂವುಗಳನ್ನು ಹೊಂದಿರುವ ಸಂಪಗೆಯ ಮರಗಳಿಂದ; ಮನೋಹರವಾದ ಚಿಗುರಿನ ಹೆಚ್ಚಳವನ್ನು ಹೊಂದಿ ಮಂದವಾದ ಗಾಳಿಗೆ ತೂಗಾಡುವ ಪುಟ್ಟ ರೆಂಬೆಗಳ ಸೊಗಸಿನಿಂದ, ೯೦. ಮೆಲುಗಾಳಿಗೆ ಒಡೆದು ಜಿನುಗುವ ಮನೋಹರ ಫಲಗಳಿಂದ, ದಿಕ್ಕುದಿಕ್ಕಿಗೆ ಸುವಾಸನೆಯನ್ನು ಚೆಲ್ಲುವ ಹೂವುಗಳಿಂದ, ಶೋಭಾಯಮಾನವಾಗಿ ಚೆಲುವಿಕೆಯನ್ನು ತಾಳಿರುವ ಮಾವಿನ ಮರಗಳಿಂದ, ಬಿಡದೆ ಮನಸ್ಸನ್ನು ಸೆಳೆವ ಸುಂದರವಾದ ಹಲಸಿನ ಮರಗಳಿಂದ, ೯೧. ಕೋಮಲವಾಗಿ ಬೆಳೆದು ಕಣ್ಣಿಗೆ ಆನಂದವನ್ನೀಯುವ ರಸಬಾಳೆಯ ಗಿಡದ ಸಾಲುಗಳಿಂದ, ಅತಿಶಯವಾದ ಆನಂದವನ್ನು ಹಬ್ಬಿಸುವ ಲತೆಗಳಿಂದ, ಮನೋಹರವಾದ ಫಲಗಳಿಂದ ತುಂಬಿದ ಕಿತ್ತಳೆ ಗಿಡಗಳಿಂದ, ಕೆಂಜಿರುವೆಗಳಿಂದ ತುಂಬಿದ ನಿಂಬೆಯ ಗಿಡಗಳಿಂದ, ೯೨. ಕೆಂಬಣ್ಣವನ್ನು ಹರಡುವ ಎಳೆಯ ಹೂವುಗಳಿಂದ, ಬಿಡದೆ ಶೋಭಿಸುವ ಕೊಂಬೆಗಳ ಮೊತ್ತದಿಂದ, ಚಿಗುರಿ ಕಂಗೊಳಿಸುವ ಅಶೋಕ ವೃಕ್ಷಗಳಿಂದ, ಮನೋಹರವಾಗಿರುವ ಅಸಂಖ್ಯ ಫಲಭರಿತ ವೃಕ್ಷಗಳಿಂದ, ೯೩. ಪಾದರಿಯ ಮರ ಹಾಗೂ ಅದರ ಹೂವುಗಳ ಚೆಲುವಿನಿಂದ, ನಿಂಬೆಯ

ಕಮನೀಯಮಾದನಾನಾಭೂಮಿಜಂಗಳಿಂ
ವಿಮಲವಲ್ಲರಿಗಳಿಂ ಪೊಂಗಿ ಪೊಂಪುಳಿಯೋಗಿ।
ಪೊದಟ್ದು ನುಣ್ಚರವೆತ್ತಿ ಝೇಂಕರಿಸುವಳಿಗಳಿಂ
ಕದಳೀಫಲಂಗಳಂ ಸವಿದುಲಿವ ಗಿಳಿಗಳಿಂ ॥ ೯೪ ॥

ದಾಳಿಂಬದೊಳ್ವಣ್ಣನೊಡೆದು ಬೆಂಮೂಗಿಟ್ಟು
ಹೇಬಿಲಳವಡದ ಸಲ್ಲೀಲೆಯೊಳಗಳವಟ್ಟು।
ತೊಱದೆಚ್ಚು ಪಾಯ್ವ ತನಿರಸಮನುಂಡುಱ ತಣಿದು
ಪೊಱಯೇಱ ಪೊಂಗಿ ತಚ್ಛಾಖಾಗ್ರದೊಳ್ ಕುಣಿದು ॥ ೯೫ ॥

ಗಳಪುವರಗಿಳಿಯಚ್ಚಪೊಚ್ಚ ಪುರುಳಿಗಳಿಂದೆ
ತಳಿರ್ಗೊಂಚಲಂ ಕದ್ಕಿ ಯುರ್ಬಿ ಸಂತೋಷದಿಂ।
ಚೂತದೆಳಗೊಂಬನಡರ್ದುಲಿವ ಕೋಗಿಲೆಗಳಿಂ
ನೂತನಲತಾಭವನಮನಮರ್ದ ಬಾಗಿಲುಗಳಿಂ ॥ ೯೬ ॥

ಪೂಗೊಳಂಗಳೊಳಚ್ಚದಾವರೆಯೊಳಳವಟ್ಟು
ರಾಗದಿಂ ಕೂಡುತುಂ ಮೂರ್ಛೆಯಿಂ ಮುಂದಿಟ್ಟು।
ಮೆಲ್ಲನೆಟ್ಟೆತ್ತು ಸಂಚರಿಪ ಹಂಸಂಗಳಿಂ
ನಿಲ್ಲದಾಡುವ ಮಂಜುಪಾರಾವತಂಗಳಿಂ ॥ ೯೭ ॥

ಪೊಣರ್ವ ಪುಂಛಗಳುಂಚದಿಂ ಕೆದಱ ಮುದದಿಂದೆ
ದಣುವಿಲ್ಲದೊಲ್ದು ಕುಣಿವಚ್ಚಕೇಕಿಗಳಿಂ।
ಸೊಂಪಮರ್ದು ಕಂಗೊಳಿಪ ಪೊಸಬನದಲಂಪಿನಿಂ
ಪೆಂಪಮರ್ದು ಬೆಳೆದ ಕೇದಾರಂಗಳಿಂಪಿನಿಂ ॥ ೯೮ ॥

ಮನೋಹರತೆಯಿಂದ, ಚೆನ್ನಾಗಿ ಬೆಳೆದು ಅಂದಗೊಂಡಿರುವ ಸುರಹೊನ್ನೆಯ ಮರಗಳ ಮೊತ್ತದಿಂದ, ಮಧುರವಾದ ಸುವಾಸನೆಯನ್ನು ತಳೆದ ಶ್ರೀಗಂಧದ ಮರಗಳಿಂದ, ಕಣ್ಸೆಳೆವ ಅಸಂಖ್ಯ ತಿಲಕ ವೃಕ್ಷಗಳಿಂದ, ೯೪. ಮನೋಹರವಾದ ನಾನಾ ಬಗೆಯ ವೃಕ್ಷಗಳಿಂದ, ಎಳೆಯ ಬಳ್ಳಿಗಳಿಂದ, ಹಿಗ್ಗಿ ಮದವೇರಿ ಹರಡಿ ಮಧುರವಾಗಿ ಝೇಂಕರಿಸುವ ದುಂಬಿಗಳಿಂದ; ಬಾಳೆಯ ಹಣ್ಣುಗಳನ್ನು ತಿಂದು ಚಿಲಿಪಿಲಿಗುಟ್ಟುವ ಗಿಳಿಗಳಿಂದ, ೯೫. ಸೊಗಸಾದ ದಾಳಿಂಬದ ಹಣ್ಣನ್ನು ಒಡೆದು ಒಳಗೆ ಕೆಂಪಾದ ಕೊಕ್ಕನ್ನು ಸೊಗಸಾಗಿ ಊರಿ ತುಂಬಿ ಸೂಸಿ ಹರಿವ ತನಿರಸವನ್ನು ಸವಿದು ತಣಿದು ಮೈಮುಟ್ಟಿ ಹಿಗ್ಗಿ ಆ ಕೊಂಬೆಯ ಮೇಲೆ ಕುಣಿದು ೯೬. ನುಣ್ದನಿಮಾಡುವ ಅರಗಿಳಿ [ಹಾಗೂ] ಎಳೆಯ ಗಿಳಿಮರಿಗಳಿಂದ, ಚಿಗುರಿನ ಗೊಂಚಲನ್ನು ಕುಕ್ಕಿ ಸಂತಸದಿಂದ ಉಬ್ಬಿ ಮಾವಿನಮರದ ಎಳೆಯ ಕೊಂಬೆಯನ್ನು ಏರಿ ಮಧುರವಾಗಿ ಕೂಗುವ ಕೋಗಿಲೆಗಳಿಂದ, ಹೊಸದಾದ ಬಳ್ಳಿ ಮನೆಗಳಲ್ಲಿ ಬಾಗಿಲುಗಳನ್ನು ಭದ್ರವಾಗಿ ಸೇರಿಸಿ, ೯೭. ಹೂಗೊಳಗಳಲ್ಲಿ ಸುಂದರವಾದ ತಾವರೆಯೊಡನೆ ಪ್ರೀತಿಯಿಂದ ಕೂಡಿ ಸುಖಮೂರ್ಛೆಹೋಗಿ ಮೆಲ್ಲನೆ ಎಚ್ಚರಗೊಂಡು, ಸಂಚರಿಸುವ ಹಂಸಗಳೊಡನೆ ನಿಲ್ಲದೆ ವಿಹರಿಸುವ ಮನೋಹರವಾದ ಪಾರಿವಾಳಗಳಿಂದ, ೯೮. ಮುಚ್ಚಿದ ಗರಿಗಳನ್ನು ಎತ್ತರಿಸಿ ಸಂತಸದಿಂದ ಕೆದರಿ ಆಯಾಸಗೊಳ್ಳದೆ ನಲಿದು ಕುಣಿಯುವ ನವಿಲಿನ

ಚಂದ್ರಕಿರಣಸ್ಪರ್ಶನದಿನೊಸರ್ದು ಪರಿತರ್ಪ
ಚಂದ್ರಕಾಂತದ ರಸಮನುಂಡು ಬೆಳೆದೆಸೆದಿರ್ಪ।
ಮಂಜುಮಧುರೇಕ್ಷುವಾಟಿಗಳ ಪೊಸಲಂಪಿನಿಂ
ರಂಜಿಸುವ ಪುಷ್ಪವಾಟಿಗಳ ಕಡು ಸೊಂಪಿನಿಂ ॥ ೯೯ ॥

ಅಳವಟ್ಟು ರಂಜಿಪಿರ್ತ್ತಡಿಗಳ ಬೆಡಂಗಿನಿಂ
ತಿಳಿದು ಪರಿವಂಬುಧಾರಾಳಿಯ ಬೆಡಂಗಿನಿಂ।
ಮುಟ್ಟಿದವರಂ ಮುಮುಕ್ಷುಗಳನುಱ್ ಮಾಡುತುಂ
ಮೆಟ್ಟಿದವರಂ ಘನಪವಿತ್ರರಂ ಮಾಡುತುಂ ॥ ೧೦೦ ॥

ರಂಜಿಸಿದುದುರುಪುಣ್ಯದೊಬ್ಬುಳಿಯಲಂಪಿನಿಂ।
ಮಂಜುಳಾವೃತತುಂಗಭದ್ರೆ ಕಡುಸೊಂಪಿನಿಂ ॥ ೧೦೧ ॥*

ಮಿಸುಪ ಘನಪ್ರವಾಹರವದಿಂ ತಟಸಂಸ್ಥಿತಮಾದ ತೋಂಟದೊಳ್
ಪಸರಿಸಿದಂಡಜಂಗಳುಳಿಯಿಂ ಕಿಱುಮೀನ್ಗಳಱಂಕೆಯೋಲ್ಗಳೊಂ।
ದೆಸಕದಿನುಣ್ಮಿ ಪೊಣ್ಮುವ ಲಸಜ್ಜಳ ಸಂಜನಿತಪ್ರಣಾದದಿಂ
ದೆಸೆದುದು ತುಂಗಭದ್ರೆ ನಿಜನಿಮ್ನಜಿತೋರುಸಮುದ್ರೆ ಪೆಂಪಿನಿಂ ॥ ೧೦೨ ॥

ಇಂತತಿಪುಣ್ಯಪುಂಜಪ್ರವಾಹಮೆಂದೆನಿಸಿ ಭೋರ್ಗರೆಯುತುಂ ಪರಿವ ತುಂಗಭದ್ರಾನದಿಯಂ ಕಂಡತ್ಯಾನಂದಂಬಡೆದು ತತ್ತರಂಗಿಣಿಯಣೆಯರಮಾಗುತ್ತರಿಸಿ ಮೆಲ್ಲನೆ ನಡೆತಂದು ವಸಿಷ್ಠಾಮಪ್ರಾಂತದೊಳ್

ನೃತ್ಯದಿಂದ, ಅರಳಿದ ವನದ ಹಿರಿಮೆಯಿಂದ; ಹಿರಿದಾಗಿ ಬೆಳೆದ ಉದ್ಯಾನಗಳು [ಕೊಡುವ] ಹಿತದಿಂದ; ೯೯. ಚಂದ್ರನ ಕಿರಣಗಳ ಸ್ಪರ್ಶದಿಂದ ಕರಗಿ ಹರಿದುಬರುವ ಚಂದ್ರಕಾಂತಶಿಲೆಯ ರಸವನ್ನು ಉಂಡು ಬೆಳೆದು ಶೋಭಿಸಿ ಮನೋಹರವಾಗಿರುವ ಇನಿಗಬ್ಬಿನ ರಸವನ್ನು ದಾರಿಹೋಕರಿಗೆ ನೀಡುವ ಪ್ರಪಾಶಾಲೆಗಳ; ನವೀನವಾದ ಸೊಗಸಿನಿಂದ ರಂಜಿಸಿರುವ ಪುಷ್ಪಶಾಲೆಗಳ, ಅತಿ ಚೆಲುವಿಕೆಯನ್ನು ೧೦೦. ಹೊಂದಿ ಶೋಭಿಸಿರುವ ನದಿಯ ಎರಡೂ ಕಡೆಯ ದಡಗಳ ಮನೋಹರತೆಯಿಂದ, ಹರಿವ ಸಮೃದ್ಧ ತಿಳಿಜಲದ ಮಂಜುಳತೆಯಿಂದ, ಸ್ಪರ್ಶಿಸಿದವರ, ಮೋಕ್ಷ ಬಯಸುವವರ [ಆಸೆಯನ್ನು] ಚೆನ್ನಾಗಿ ಪೂರೈಸುವುದರಿಂದ, ಮೆಟ್ಟಿದವರನ್ನು ಅತ್ಯಂತ ಪವಿತ್ರರನ್ನಾಗಿ ಮಾಡುವುದರಿಂದ ೧೦೧. ಅತಿ ಮನೋಹರಳಾದ, ಎಲ್ಲೆಡೆ ಆವರಿಸಿರುವ ತುಂಗಭದ್ರೆಯು ಅತಿಶಯ ಪುಣ್ಯದ ರಾಶಿಯ ಸೌಭಾಗ್ಯದಿಂದ ರಂಜಿಸಿದಳು. ೧೦೨. ಹರಿವ ಹೊನಲಿನ ಭೋರ್ಗರೆತದಿಂದ, ದಡದ ತೋಟದಲ್ಲಿನ ಪ್ರಾಣಿಗಳ ಕೂಗಾಟದಿಂದ, ಪುಟ್ಟ ಮೀನುಗಳು ರೆಕ್ಕೆಗಳನ್ನು ಹೊಂದಿವೆಯೊ ಎನ್ನುವಂತೆ ಉಬ್ಬಿ ಹೊಮ್ಮಿ ಹೊಳೆಯುವಾಗ ಜಲದಲ್ಲಾದ ಶಬ್ದದಿಂದ, ಆಳವೂ ವಿಶಾಲವೂ ಆಗಿ ಸಮುದ್ರವನ್ನು ಮೀರುವ ಹಿರಿಮೆಯಿಂದ ತುಂಗಭದ್ರೆಯು ಶೋಭಿಸಿತು. ವ॥ ಹೀಗೆ ಹಿರಿಯ ಪುಣ್ಯದ ಪುಂಜವು ಪ್ರವಾಹ ರೂಪದಲ್ಲಿದೆ ಎನ್ನುವಂತೆ ಭೋರ್ಗರೆದು ಹರಿಯುವ ತುಂಗಭದ್ರಾ ನದಿಯನ್ನು ಕಂಡು ಅತ್ಯಾನಂದವನ್ನು ಹೊಂದಿ, ಆ ನದಿಯನ್ನು ಸಂಭ್ರಮದಿಂದ ದಾಟಿ, ಮೆಲ್ಲನೆ ನಡೆದುಬಂದು ವಶಿಷ್ಠಾಶ್ರಮದ ಭಾಗದಲ್ಲಿ ಸ್ನಾನವನ್ನು ಮಾಡಿ ಶುಭ್ರವಾದ ಬಿಳಿಯ ವಸ್ತ್ರ[ಹಾಗೂ] ಪಂಚೆಯನ್ನುಟ್ಟು ವಿಭೂತಿ ರುದ್ರಾಕ್ಷಿಗಳಿಂದಲಂಕೃತನಾಗಿ ಯತಿಗಳು,

* ಪದ್ಯ ೧೦೧ರ ಎರಡು ಸಾಲು ಮೂಲದಲ್ಲಿರುವುದು ಬಿಟ್ಟುಹೋಗಿದೆ.

ವರಸ್ನಾನಮಂ ಮಾಡಿ ಬೆಳ್ವಟ್ಟೆಯ ಧೋತ್ರಮಂ ತೆಗೆದುಟ್ಟು ವಿಭೂತಿ ರುದ್ರಾಕ್ಷಾಲಂಕೃತನಾಗಿ ಯತಿಪವಿತ್ರಚರಿತ್ರತ್ರಿನೇತ್ರಭಕ್ತರೆನಿಸಿದ ಬ್ರಾಹ್ಮಣೋತ್ತಮರ್ಗಖಿಳದಾನಂಗಳಂ ಕೊಟ್ಟು ಸಂತಸದಿಂದೆಯ್ತಿಂದು ವಿರೂಪಾಕ್ಷನರ್ಧಾಂಗಿಯಪ್ಪ ಹಿರಿಯಹಂಪಾದೇವಿಯ ಮಣಿಮಂದಿರಮಂ ಪೊಕ್ಕು ಪರಮೇಶ್ವರ ಮೂರ್ತಿಯಂ ಕಂಡು ಪೊಂಗಿ ಪೊರೆಯೇಱಿ ಪೊಂಪುಟಿವೋಗಿ ಭಯಭಕ್ತಿಯಿಂ ಸಾಷ್ಟಾಂಗಪ್ರಣತನಾಗಿ ಮಗುೞ್ದೆೞ್ದುನಿಲ್ತು ಸ್ತೋತ್ರಮಂ ಮಾಡಲೆಂದು ಗದ್ಗದಕಂಠನುದ್ಭಟಕ್ಷಿತೀಂದ್ರಚಂದ್ರಮಂ ಉದ್ಯುಕ್ತನಾಗಿ ಕೈಗಳಂ ಮುಗಿದುಕೊಂಡು,

ವಿರಿಂಚ್ಯಾಚ್ಯುತೇಂದ್ರಾದಿಗೀರ್ವಾಣವೃಂದ
ಸ್ಫುರನ್ಮೌಳಿಮಾಣಿಕ್ಯಚಂಚನ್ಮರೀಚ್ಯು।
ತ್ಕರಾಲಂಕೃತಾಂಚದ್ಭವತ್ಪಾದಶುಂಭ
ತ್ಸರೋಜಂಗಳೊಲ್ದೋವುಗೆನ್ನಂ ಭವಾನಿ ॥ ೧೦೩ ॥

ತ್ರಿಗುಣಾತ್ಮಕರಾಡಿಪ ಬೊಂ
ಬೆಗಳಾಗಿರಲೆಸೆವ ಶಂಭು ನಿನ್ನರೆಮೆಯ್ಯೊ।
ಳ್ಬಗೆಗೊಂಡಗಲದೆ ಬೆಟ್ಟರ
ಲಗಸುತೆಯಾಂ ನಿನ್ನ ಘನವನಿನ್ನೇನೆಂಬೆಂ ॥ ೧೦೪ ॥

ಭವದಧರಪುಟಾಂಚಚ್ಛೋಣದಿಂ ರಾಜಸಂ ತ್ವ
ತ್ರವಿಮಲಹಸನಾಂಶುಶ್ವೇತದಿಂ ಸಾತ್ವಿಕಂ ನಿ।
ನ್ನೆವೆಗಳ ನಿಡುಗರ್ಪಿಂ ತಾಮಸಂ ಪುಟ್ಟಿತೆಂದಾ
ಡುವರಖಿಳಮುನೀಂದ್ರರ್ಕೂರ್ತು ಪಂಪಾಭವಾನೀ ॥ ೧೦೫ ॥

ಶುದ್ಧ ಚಾರಿತ್ರರು, ಶಿವನ ಭಕ್ತರು ಎನಿಸಿದ ಬ್ರಾಹ್ಮಣಶ್ರೇಷ್ಠರಿಗೆ ಸರ್ವದಾನಗಳನ್ನು ಕೊಟ್ಟು ಸಂತಸದಿಂದ ಬಂದು ವಿರೂಪಾಕ್ಷನ ಧರ್ಮಪತ್ನಿಯಾದ ಹಿರಿಯ ಪಂಪಾಂಬಿಕೆಯ ಮಣಿಮಂದಿರವನ್ನು ಪ್ರವೇಶಿಸಿ, ಪರಮೇಶ್ವರನ ಅರ್ಧಾಂಗಿಯನ್ನು ಕಂಡು ಮೈಯುಬ್ಬಿ ಉತ್ಸಾಹಗೊಂಡು ಸಂತೋಷದಿಂದ ಮೈಮರೆತು, ಭಯಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ, ಮೇಲೆದ್ದು ನಿಂತು ಗದ್ಗದ ಕಂಠದಿಂದ ಕೂಡಿ ಸ್ತೋತ್ರವನ್ನು ಮಾಡಲೆಂದು ಉದ್ಭಟ ಮಹಾರಾಜ ಚಂದ್ರಮನು ಸನ್ನದ್ಧನಾಗಿ ಕೈಮುಗಿದು, ೧೦೩. ಪಾರ್ವತೀಮಾತೆ, ವಿಷ್ಣು ಬ್ರಹ್ಮ ಇಂದ್ರ ಇವರೇ ಮೊದಲಾದ ದೇವತೆಗಳ ಸಮೂಹದ ಕಿರೀಟಗಳಲ್ಲಿನ ಹೊಳೆವ ಮಾಣಿಕ್ಯಗಳ ಚಂಚಲವಾದ ಬೆಳಗಿನ ಮೊತ್ತದಿಂದ ಅಲಂಕಾರಗೊಂಡು ಹೊಳೆವ ಕಮಲಗಳನ್ನು ಹೋಲುವ ನಿಮ್ಮ ಸುಂದರವಾದ ಪಾದಗಳು ನನ್ನನ್ನು ಕಾಪಾಡಲಿ. ೧೦೪. ಶೋಭಾಯಮಾನನಾದ ಶಿವನೇ, ಸತ್ವ ತಮ ರಜಸ್ಸುಗಳೆಂಬ ಮೂರು ಗುಣಗಳಿಂದ ನೀನು ಆಡಿಸಿದಂತೆ ಆಡುವ ಬೊಂಬೆಗಳಾಗಿರಲು ಪರ್ವತರಾಜನ ಕುಮಾರಿ ಪಾರ್ವತಿಯು ನಿನ್ನ ಅರ್ಧಾಂಗದಲ್ಲಿ ಮನಃಪೂರ್ವಕವಾಗಿ ಅಗಲದೆ ಕೂಡಿ ಇರುತ್ತಿರಲು ನಾನು ನಿನ್ನ ಮಹಿಮೆಯನ್ನು ಇನ್ನೇನೆಂದು ವರ್ಣಿಸಲಿ. ೧೦೫. ಪಂಪಾಭವಾನೀ, ಪ್ರೀತಿಯಿಂದ ಸಕಲ ಮುನಿಶ್ರೇಷ್ಠರು, ನಿನ್ನ ಹೊಳೆಯುವ ತುಟಿಗಳ ಕೆಂಪಿನಿಂದ ರಾಜಸವೂ, ನಿನ್ನ ಪರಿಶುದ್ಧವಾದ ಬೆಳ್ಳಿನಗೆಯೆಂಬ ಬೆಳಗಿನಿಂದ ಸಾತ್ವಿಕವೂ, ನಿನ್ನ ಕಣ್ಣ ರೆಪ್ಪೆಗಳ

ಜಗಮಂ ಗರ್ಭದೊಳಿಟ್ಟಾ
ಜಗದೊಳಗುಂ ಪೊಱಗುಮಾನಿರೀಕ್ಷಿಸುತುಂ ತ।
ಜ್ಜಗಮಂ ಪರಿರಂಜಿಪ ಸ
ರ್ವಗತೆ ಭವನ್ಮಹಿಮೆ ಕೂರ್ತು ಪೊಗಟಲಶಕ್ಯಂ ॥ ೧೦೬ ॥

ಸಸಿಗದಿರ್ಸಕಲಾಚಲಂಗಳೊಳುರ್ವಿ ಪರ್ವಿ ಭರಾಟ್ಟಿಲಾ
ವಿಸರಮಂ ಸಲೆ ತುಳ್ಕುವಂತೆ ಚರಾಚರಾತ್ಮಿಕೆಯಾಗಿ ಜ್ಯಂ।
ಭಿಸುತೆ ನೀಂ ಭವದಂಘ್ರಿಯಂ ನೆಱೆ ನಂಬಿದಾ ನಿಜಭಕ್ತಮಾ
ನಸಸರೋಜಮನೊಲ್ದಲರ್ಚುವೆ ಸಂತತಂ ಪರಮೇಶ್ವರೀ ॥ ೧೦೭ ॥

ಶಿಲೆಯೊಳ್ ಶಿಖರಿಯುಮಗಲದೆ
ತಿಲದೊಳ್ನವತ್ಯೆಲಮಗಲದಿರ್ಪಂತೆ ಸಮು।
ಜ್ವಲಿಪ ಚರಾಚರನಿಕರದೊ
ಳೊಲವಿಂ ನೀನಿಲ್ಲದೆಡೆಯದೊಂದುಂಟೆ ಶಿವೇ ॥ ೧೦೮ ॥

ಕ್ಷೋಣಿಯೊಳ್ಪಗೆಗೊಳ್ವ ಲೆಖ್ಖಿಗಳೆಲ್ಲಮುಜ್ವಳಿಪೊಂದಱೊಳ್
ಮೇಣಡಂಗಿದವೊಲ್ಸಮಸ್ತಚರಾಚರಂ ನಿಜಗರ್ಭದೊ।
ಳ್ಕಾಣೆಸಲ್ಪನವೃಕ್ಷಮಂ ಧರಿಸಿರ್ಪ ನಿರ್ಮಳಬೀಜದಂ
ತೇಣಲೋಚನೆ ನೀನೆ ರಾಜಿಪೆ ಸರ್ವಮಂ ತಳೆದಂಬಿಕೇ ॥ ೧೦೯ ॥

ಶಿವಭಕ್ತರ್ತಾಯೆನೆ ತ
ತ್ವವಿಚಾರರ್ಚಿತ್ತಿನಮಳರೂಪೆನೆ ಶಾಸ್ತ್ರಾ।
ಳಿ ವಿರಾಜತ್ಪ್ರಕೃತಿಯೆನ
ಲ್ಸುವಿಲಾಸದೆ ನೀನೆ ಸರ್ವಮಾಗಿರ್ಪೆ ಶಿವೆ ॥ ೧೧೦ ॥

ವಿಶಾಲವಾದ ಕಪ್ಪಿನಿಂದ ತಾಮಸವೂ ಹುಟ್ಟಿತೆಂದು ಹೇಳುವರು. ೧೦೬. ಲೋಕವನ್ನು ನಿನ್ನ ಗರ್ಭದಲ್ಲಿಟ್ಟುಕೊಂಡು ಆ ಜಗತ್ತಿನ ಒಳಹೊರಗುಗಳನ್ನು ನೋಡುತ್ತ ಅದನ್ನು ಚೆನ್ನಾಗಿ ಸಂತೋಷಗೊಳಿಸುವ ಸರ್ವಾಂತರ್ಯಾಮಿಯಾದ ನಿನ್ನ ಮಹಿಮೆಯನ್ನು ಮೆಚ್ಚಿ ಹೊಗಳುವುದು ಅಸಾಧ್ಯ. ೧೦೭. ಪರಮೇಶ್ವರಿ, ಚಂದ್ರನ ಕಿರಣಗಳು ಪರ್ವತಗಳ ಮೇಲೆಲ್ಲಾ ಚೆನ್ನಾಗಿ ಹರಡಿ ಶಿಲೆಗಳ ಸಮೂಹದ ಮೇಲೆ ಸಮನಾಗಿ ಸೂಸುವಂತೆ ಚರಾಚರವಸ್ತುಗಳಲ್ಲಿ ನೀನು ಸೇರಿ ಶೋಭಿಸಿರುವೆ. ನಿನ್ನ ಪಾದಗಳನ್ನು ಬಲವಾಗಿ ನಂಬಿರುವ ನಿನ್ನ ಭಕ್ತರ ಮನಸ್ಸೆಂಬ ಕಮಲವನ್ನು ಪ್ರೀತಿಯಿಂದ ಸದಾ ಅರಳಿಸುವೆ. ೧೦೮. ಪಾರ್ವತೀಮಾತೆ, ಕಲ್ಲಿನಲ್ಲಿ ಅಗ್ನಿಯೂ, ಎಳ್ಳಿನಲ್ಲಿ ಎಣ್ಣೆಯೂ ಅಗಲದೆ ಇರುವಂತೆ ಅತಿಶಯವಾಗಿ ಮೆರೆವ ಚರಾಚರ ವಸ್ತುಗಳಲ್ಲಿ ಪ್ರೀತಿಯಿಂದ ನೀನು ನೆಲೆಸದೆ ಇರುವ ಸ್ಥಳವೊಂದಿದೆಯೆ? ೧೦೯. ಭೂಮಿಯಲ್ಲಿ ಚಿತ್ತವನ್ನು ಸೆರೆಹಿಡಿವ ಸಕಲ ವಸ್ತುಗಳೆಲ್ಲ ಅತಿಶಯವಾಗಿ ಪ್ರಕಾಶಿಸುವ ಏಕವಸ್ತುವಿನಲ್ಲಿ ಅಡಗಿದಂತೆ ಸಕಲ ಚರಾಚರವಸ್ತುಗಳೆಲ್ಲವೂ ನಿನ್ನ ಗರ್ಭದಲ್ಲಿ ಅಡಗಿರಲು, ದೊಡ್ಡ ವೃಕ್ಷವನ್ನು ತನ್ನೊಳಗೆ ಧರಿಸಿರುವ ಶುದ್ಧವಾದ ಬೀಜದಂತೆ, ಜಿಂಕೆಯ ನೋಟದಂತೆ ಚಂಚಲ ದೃಷ್ಟಿಯುಳ್ಳ ಪಾರ್ವತೀಮಾತೆ ಸರ್ವಸ್ವವನ್ನೂ ನೀನು ನಿನ್ನಲ್ಲಿಯೇ ಹೊಂದಿ ಶೋಭಿಸಿರುವೆ. ೧೧೦. ಪಾರ್ವತೀಮಾತೆ, ಶಿವಭಕ್ತರೇ ತಾಯಿ ಎನ್ನುವಂತೆ, ಶಿವತತ್ವವನ್ನು

ಎಂದಿಂತಖಿಳಬ್ರಹ್ಮಾಂಡನಾಯಿಕೆಯಂ ನಾದಬಿಂದುಕಲಾತ್ಮಿಕೆಯಂ ಸಕಲದೇವಶಿಖಾಮಣಿಯಂ ನಿಜಭಕ್ತಜನಮನಃಕೈರವಸುಧಾಮರೀಚಿಯಂ ನತಜನಸುರಧೇನುವಂ ಪ್ರಣತಜನಚಿಂತಾಮಣಿಯಂ ಶರಣಜನಸುರಭೂಜಾತೆಯಂ ಮಾಡಿ ತಣಿಯದೆಟ್ಟಿಂದು ಗರ್ಭಾಗಾರಮಂ ಪೊಕ್ಕತ್ಯಾನಂದದಿಂದಿದಿರೊಳ್ ಪದ್ಮಾಸನಾಸೀನನಾಗಿಯುದ್ಭಟಕ್ಷಿತೀಂದ್ರ ಚಂದ್ರಮನರ್ಚಿಸಲೆಂದಟ್ಟೈಸುತ್ತು,

ಸಮಸ್ತಯೋಗೀಂದ್ರರ ಚೇತನಾಗ್ರದೊಳ್
ಭ್ರಮತ್ಪ್ರಪಂಚಂಗಳನಿಕ್ಕಿ ಮೆಟ್ಟುತುಂ।
ಸಮುದ್ಭವಾನಂದವ ಮಾಡುತೊಪ್ಪುವು
ತ್ತಮಾಂಗಿಯಂ ಜಾನಿಸಿದಂ ನೃಪಾಲಕಂ ॥ ೧೧೧ ॥

ವೇದಶಾಸ್ತ್ರ ನಿಕಾಯದೊಳ್ನುಡಿಗೈಯ್ದದಾಪರಬೊಮ್ಮಮಂ
ಮೋದಿಪಾ ಶಿವೆ ಬಾ ಚಿದಂಬುಧಿ ಬಾ ಮಹೋಜ್ವಳೆ ಬಾ ಸಮಂ।
ತಾದಿಭಕ್ತೆಯೆ ಬಾ ಜಗನ್ನುತೆ ಬಾ ನಿರಂಜನೆ ಬಾರೆನು
ತ್ತೋದುತುದ್ಭಟಭೂಮಿಪಂ ಕರೆದಂ ಭವಾನಿಯನಕ್ಕರಿಂ ॥ ೧೧೨ ॥

ಇಂತುದ್ಭಟಕ್ಷಿತೀಂದ್ರಚಂದ್ರಮಂ ಪಂಪಾಬಿಕೆಯನಾವಾಹನಂಮಾಡಿ,

ಯತಿಪತಿಜನವಿಮಳಮನ
ಶ್ಶತಪತ್ರಾಸನದೊಳೊಲ್ದು ಮಂಡಿಸಿ ತೋರ್ಪು।
ನ್ನತೆಗೆ ನವರತ್ನಪೀಠಮ
ನತಿಮುದದಿಂದರ್ಪಿಸಿದನನೇಕಕಲಾಢ್ಯಂ ॥ ೧೧೩ ॥

ವಿಚಾರಮಾಡುವವರೇ ಅಂತರಂಗದ ಪರಿಶುದ್ಧ ರೂಪು ಎನ್ನುವಂತೆ, ಶಾಸ್ತ್ರಗಳ ಮೊತ್ತವೇ ವಿರಾಜಿಸುವ ಪ್ರಕೃತಿ ಎನ್ನುವಂತೆ ಅತಿ ಸೊಗಸಿನಿಂದ ನೀನೆ ಸಕಲವೂ ಆಗಿರುವೆ. ವ॥ ಹೀಗೆಂದು ಸಕಲ ಬ್ರಹ್ಮಾಂಡ ನಾಯಕಿಯನ್ನು, ನಾದಬಿಂದು ಕಲೆಗಳೇ ರೂಪುಗೊಂಡಿರುವವಳನ್ನು, ಸಕಲ ದೇವತೆಗಳ ಶಿರೋರತ್ನವನ್ನು, ತನ್ನ ಭಕ್ತ ಜನರ ಮನಸ್ಸೆಂಬ ಕಮಲವನ್ನು ಅರಳಿಸುವ ಚಂದ್ರನ ಕಿರಣದಂತಿರುವವಳನ್ನು, ಬೇಡಿದವರ [ಪಾಲಿಗೆ] ಕಾಮಧೇನುವಾದವಳನ್ನು, ಶ್ರೀ ವಿರೂಪಾಕ್ಷನ ಅರ್ಧಾಂಗಿಯಾದ ಪಂಪಾಭವಾನಿಯನ್ನು ಸ್ತುತಿಸಿಯೂ ತೃಪ್ತಿಗೊಳ್ಳದೆ ಅಲ್ಲಿಂದ ಎದ್ದು ಬಂದು ಗರ್ಭಗೃಹವನ್ನು ಪ್ರವೇಶಿಸಿ ಅತ್ಯಾನಂದದಿಂದ ಪಾರ್ವತೀಮಾತೆಯ ಇದಿರಲ್ಲಿ ಪದ್ಮಾಸನ ಹಾಕಿ ಕುಳಿತು ಉದ್ಭಟಮಹಾರಾಜ ಚಂದ್ರಮನು ಪೂಜೆಮಾಡಲು ಬಯಸಿ, ೧೧೧. ಸಕಲ ಯೋಗಿ ಶ್ರೇಷ್ಠರ ಚೇತನಾಗ್ರದಲ್ಲಿ ಮಾಯಾಪ್ರಪಂಚವನ್ನು ನಾಶಮಾಡುತ್ತ, ಅಂತರಂಗಕ್ಕೆ ದಿವ್ಯಾನಂದವನ್ನು ಉಂಟುಮಾಡುತ್ತ ಶೋಭಿಸುವ ಪವಿತ್ರಶರೀರೆಯಾದ ಪಂಪಾಂಬಿಕೆಯನ್ನು ಮಹಾರಾಜನು ಧ್ಯಾನಿಸಿದನು. ೧೧೨. ವೇದಶಾಸ್ತ್ರಗಳ ಮಾತಿಗೆ ನಿಲುಕದ ಆ ಪರಬ್ರಹ್ಮನನ್ನು ಸಂತೋಷಪಡಿಸುವ ಪಾರ್ವತಿಯೇ ಬಾ, ಚೈತನ್ಯ ಸಮುದ್ರವೆ ಬಾ, ಅತ್ಯಂತ ಪ್ರಕಾಶ ಸ್ವರೂಪಳೇ ಬಾ, ಆದಿಭಕ್ತೆಯೇ ಬಾ, ಜಗನ್ನಿವಾಸಿಗಳಿಂದ ಹೊಗಳಿಸಿಕೊಂಡವಳೇ ಬಾ, ಪರಮಾತ್ಮ ಸ್ವರೂಪಳೇ ಬಾ ಎಂದು ಹೇಳುತ್ತ ಪಾರ್ವತೀದೇವಿಯನ್ನು ಉದ್ಭಟಮಹಾರಾಜನು ಪ್ರೀತಿಯಿಂದ ಸಂಬೋಧಿಸಿದನು. ವ॥ ಹೀಗೆ ಮಹಾರಾಜ ಚಂದ್ರಮನು ಪಂಪಾಂಬಿಕೆಯನ್ನು ಮಂತ್ರಪೂರ್ವಕವಾಗಿ ಪ್ರಾರ್ಥಿಸಿ, ೧೧೩. ಯತಿಶ್ರೇಷ್ಠರ ಪರಿಶುದ್ಧವಾದ ಅಂತಃಕರಣವೆಂಬ ಕಮಲಪತ್ರದ ಮೇಲೆ ಪ್ರೀತಿಯಿಂದ ಕುಳಿತು ತನ್ನ

ದೇವನಿಕಾಯಕಿರೀಟಕನದ್ರ
ತ್ನಾವಳಿಸಂಜನಿತಾಂಶುವಜಸ್ರಂ।
ತೀವಿ ವಿರಾಜಿಪ ದೇವಿಯ ಪಾದ
ಕ್ಕಾವಸುಧಾಪತಿ ಪಾದ್ಯಮನಿತ್ತಂ ॥ ೧೧೪ ॥

ಶ್ರೋತ್ರಿಯಪಾತ್ರಮೆನಿಪ ಗಾ
ಯತ್ರಿಮಹಾಮಂತ್ರದೇವಿಯೊಲ್ದು ನುತಿಸುವಾ।
ನೇತ್ರತ್ರಯನರ್ಧಾಂಗಿಗೆ
ಧಾತ್ರೀಧವನುದ್ಭಟಾಂಕನರ್ಘ್ಯಮನಿತ್ತಂ ॥ ೧೧೫ ॥

ಮತ್ತಮದಖಿಳನಿಳಿಂಪಸೀಮಂತಿನೀಸೀಮಂತರತ್ನನೂತ್ನಮರೀಚಿಸಂಚಯಾಲಂಕೃತಪಾವನ ಪಾದಪಯೋಜನುದ್ಭಟಕ್ಷಿತೀಂದ್ರ ಚಂದ್ರಮನತಿಭಕ್ತಿಯಿಂದರ್ಘ್ಯಮಂ ಕೊಟ್ಟು,

ಪ್ರವಿಮಳಯೋಗಿನಿಕಾಯ
ಧ್ರುವಬಿಂಬಸ್ಯಂದಮಾನಪರಮಾಮೃತದೊ।
ಪ್ಪುವ ನಿರ್ಮಲಾಭಿಷೇಕೋ
ತ್ಸವೆಗರಸೆಂ ಸ್ನಾನಮಂ ಸಮಂತೊಡರಿಸಿದಂ ॥ ೧೧೬ ॥

ಬಿಡದೆ ಸಮಂತು ಜಾನಿಸುವ ಯೋಗಿಗಳುನ್ನತಚಿತ್ತಭಿತ್ತಿಯೊಳ್ ಮೇ
ಣೆಡೆವಿಡಿದುರ್ವಿ ಪರ್ವಿ ನಿಮಿರ್ದೊಪ್ಪುವ ಕಾಯಕೆ ವಸ್ತ್ರಮಾಗಿ ಯು।
ಗ್ಗಡವ ಬೆಡಂಗನಾಂತು ಪರಿರಂಜಿಪ ಪಾರ್ವತಿಗೈದೆ ಮೋದದಿಂ
ಕಡುಮಿಱುಪುತ್ತಮಾಂಬರವನರ್ಪಿಸಿದಂ ನೃಪರಾಜಕುಂಜರಂ ॥ ೧೧೭ ॥

ಹಿರಿಮೆಯನ್ನು ತೋರುವ ಪಂಪಾಂಬಿಕೆಗೆ ಅನೇಕ ಕಲೆಗಳಲ್ಲಿ ಬಲ್ಲಿದನಾದ ಮಹಾರಾಜನು ಅತ್ಯಾನಂದದಿಂದ ನವರತ್ನಪೀಠವನ್ನು ಅರ್ಪಿಸಿದನು. ೧೧೪. ದೇವತೆಗಳ ಸಮೂಹದ ಕಿರೀಟಗಳ ಹೊಳೆವ ರತ್ನಗಳಿಂದ ಹುಟ್ಟಿದ ಕಿರಣಗಳ ರಾಶಿ ಸದಾ ಕವಿದು ವಿರಾಜಿಸುವ ದೇವಿಯ ಪಾದಗಳಿಗೆ ಆ ಮಹಾರಾಜನು ಪಾದ್ಯವನ್ನು ಕೊಟ್ಟನು. ೧೧೫. ಆಲಿಸಲು ಕಿವಿಗೆ ಯೋಗ್ಯವೆನ್ನಿಸುವ ಮಹಾಮಂತ್ರವಾದ ಗಾಯತ್ರಿಯಿಂದ ಆನಂದದಿಂದ ಸ್ತುತಿಸುವ ಆ ಮುಕ್ಕಣ್ಣನ ಧರ್ಮಪತ್ನಿಗೆ ಭೂಕಾಂತನಾದ ಉದ್ಭಟದೇವನು ಅರ್ಘ್ಯವನ್ನು ಕೊಟ್ಟನು. ವ॥ ಮತ್ತೆ ಸಕಲ ದೇವತಾ ಸ್ತ್ರೀಯರ ಬೈತಲೆಯ ಚೂಡಾರತ್ನದ ನವೀನ ಕಿರಣಜಾಲದಿಂದ ಅಲಂಕೃತವಾದ ಪವಿತ್ರ ಪಾದಕಮಲಗಳಿಗೆ ಉದ್ಭಟಮಹಾರಾಜ ಚಂದ್ರಮನು ವಿಶೇಷ ಭಕ್ತಿಯಿಂದ ಅರ್ಘ್ಯವನ್ನು ಕೊಟ್ಟು, ೧೧೬. ಪರಿಶುದ್ಧರಾದ ಯೋಗಿಗಳ ಅಚಲಿತ ದೃಷ್ಟಿಯೋಗದಿಂದ ಲಭ್ಯವಾದ ಪರಮಾನಂದವೆಂಬ ಪವಿತ್ರ ಜಲದಿಂದ ಅಭಿಷೇಕವನ್ನು ಪಡೆದು ಅಂದಗೊಂಡಿರುವ ಪಾರ್ವತೀದೇವಿಗೆ ಮಂಗಳಾಭಿಷೇಕವನ್ನು ಚೆನ್ನಾಗಿ ಮಾಡಿದನು. ೧೧೭. ಬಿಡದೆ ಚೆನ್ನಾಗಿ ಧ್ಯಾನಿಸುವ ಯೋಗಿಗಳ ಉನ್ನತವಾದ ಚಿತ್ತಭಿತ್ತಿಯಲ್ಲಿ ಎಡೆಬಿಡದೆ ಉಬ್ಬಿ ಹಬ್ಬುವ, ನಿಮಿರಿ ಶೋಭಿಸುವ ದೇಹಕ್ಕೆ ವಸ್ತ್ರವಾಗಿ ಅತಿಶಯ ಸೊಬಗನ್ನು ಹೊಂದಿ ಚೆನ್ನಾಗಿ ಒಪ್ಪುವ, ಪಾರ್ವತೀದೇವಿಗೆ ಅತ್ಯಾನಂದದಿಂದ

ಎಣಿಕೆಗಳವಡದ ಮಹಿಮೆಗೆ
ಗಣಭೂಷಣೆಗೊಲ್ದು ರತ್ನಕೀಲಿತನವಭೂ।
ಷಣಜಾಲಮನರ್ಪಿಸಿದಂ
ಪೊಣರ್ವ ಮುದಂಬೆತ್ತು ಘೂರ್ಜರಕ್ಷಿತಿಪಾಲಂ ॥ ೧೧೮ ॥

ಮುನಿನಾಥೋತ್ತಮರೊಲವಿಂ
ದನುಪಮನಿಜಭಕ್ತಿಚಂದನಮನೊಲ್ದಡಿಗ।
ಳ್ಗನಿಶಂ ಮೆಣೊರೆವಗಜಾಂ
ಗನೆಗರ್ಪಿಸಿದಂ ನೃಪಾಲಕಂ ಮಲಯಜಮಂ ॥ ೧೧೯ ॥

ಮತ್ತಮದಲ್ಲದಕ್ಷಯಮೂರ್ತಿಗುದ್ಭಟಕ್ಷಿತೀಂದ್ರಚಂದ್ರಂ ತೊಳ ತೊಳಗಿ ಬೆಳಗುವೆಳೆಮುತ್ತನಕ್ಷತೆಯಂ ಸಮರ್ಪಿಸಿ,

ಪಱಿಮೆಗಳೆಱಗದ ಕುಂದದ
ಮಿಱುಗೞ್ದಿರದಚ್ಚಪೊಚ್ಚಪೊಸಪೂವುಗಳಂ।
ಪೆಱ್ಯಂ ಸೂಡಿದನರಸಿಯ
ನುಱ್ ಪೂಜಿಸುತೆಸೆದನುದ್ಭಟಕ್ಷಿತಿಪಾಲಂ ॥ ೧೨೦ ॥

ಮತ್ತಮಾವಿಕಸಿತಸರೋರುಹಾನನೆಯಂ ವಿಕಸಿತಸರೋರುಹದಿಂಸ್ಫುರಿತಾಚ್ಛನೀಲೋತ್ಪಲಲೋಚನೆಯಂ ಸ್ಫುರಿತಾಚ್ಛನೀಲೋತ್ಪಲದಿಂಸಂ ಪಚ್ಚಾಂಪೇಯಮಂಜುಳನಾಸಿಕೋಜ್ವಲೆಯಂ ಸಂಪಚ್ಚಾಂಪೇಯ ಮುಕುಳದಿಂ ವಿನೂತ್ನಮರಂದಸ್ಯಂದಬೃಂದಕುಂದಕೋರಕಸಮಾನದಂತಪಜ್ಞ್ತಿವಿರಾಜಿತೆಯಂ ವಿನೂತ್ನಮರಂದಸ್ಯಂದಬೃಂದಕುಂದಕೋರಕದಿಂ ಮಿಸುಪಲಸದಮರಸಾಲಕಿಸಲಯಾಧರೆಯಂ ಮಿಸುಪಲಸದಮರಸಾಲಕಿ

ಪ್ರಜ್ವಲಿಸುವ ಶ್ರೇಷ್ಠವಾದ ವಸ್ತ್ರವನ್ನು ಮಹಾರಾಜರುಗಳ [ನಡುವೆ] ಆನೆಯಂತಿರುವ ಉದ್ಭಟನು ಅರ್ಪಿಸಿದನು. ೧೧೮. ಎಣಿಕೆಗೆ ಅಸಾಧ್ಯವಾದ ಮಹಿಮೆಗಳಿಂದ ಕೂಡಿರುವವಳಿಗೆ, ಶಿವಗಣಗಳ ನಡುವೆ ಆಭರಣದಂತೆ ಒಪ್ಪುವವಳಿಗೆ ನವೀನವಾದ ರತ್ನಾಭರಣಗಳನ್ನು ಪ್ರೀತಿಯಿಂದ ತುಂಬಿಬಂದ ಸಂತಸದಿಂದ ಘೂರ್ಜರ ಮಹಾರಾಜನು ಅರ್ಪಿಸಿದನು. ೧೧೯. ಮುನಿಶ್ರೇಷ್ಠರು ಸದಾ ಪ್ರೀತಿಯಿಂದ ತಮ್ಮ ಎಣೆಯಿಲ್ಲದ ಭಕ್ತಿಯೆಂಬ ಶ್ರೀಗಂಧವನ್ನು ಲೇಪಿಸುವ ಪಾರ್ವತೀದೇವಿಗೆ ಮಹಾರಾಜನು ಚಂದನವನ್ನು ಅರ್ಪಿಸಿದನು. ವ॥ ಅಷ್ಟಲ್ಲದೆ, ಅಕ್ಷಯಮೂರ್ತಿಗೆ ಉದ್ಭಟ ಮಹಾರಾಜ ಚಂದ್ರಮನು ಲಕಲಕನೆ ಹೊಳೆಯುವ ಎಳೆಯ ಮುತ್ತಿನ ಅಕ್ಷತೆಯನ್ನು ಸಮರ್ಪಿಸಿ, ೧೨೦. ದುಂಬಿಗಳಿಂದ ಎಂಜಲಾಗದ, ಕಾಂತಿಗುಂದದೆ ಅಂದಗೊಂಡಿರುವ ನವನವೀನವಾದ ಹೂವುಗಳಿಂದ ಚಂದ್ರಧಾರಿ ಶಿವನ ಪತ್ನಿಯನ್ನು ಉದ್ಭಟಮಹಾರಾಜನು ಚೆನ್ನಾಗಿ ಪೂಜಿಸಿ ಶೋಭಿಸಿದನು. ವ॥ ಮತ್ತೆ, ಆ ಅರಳಿದ ಮುಖಕಮಲವನ್ನು ಹೊಂದಿರುವವಳನ್ನು ಅರಳಿದ ಕಮಲಗಳಿಂದ, ಹೊಳೆಯುವ ನೀಲಕಮಲದಂತೆ ಕಣ್ಣುಳ್ಳವಳನ್ನು ಪ್ರಕಾಶಿಸುವ ಶುದ್ಧವಾದ ನೀಲ ಕಮಲಗಳಿಂದ, ಮನೋಹರವಾದ ಸಂಪಿಗೆಯ ಎಸಳಿನಂತಿರುವ ಮೂಗಿನಿಂದ ಕಾಂತಿಪೂರ್ಣಳಾದವಳನ್ನು ಒಳ್ಳೆಯ ಸಂಪಿಗೆಯ ಎಸಳಿನಿಂದಲೂ, ಪರಿಮಳಯುಕ್ತವಾದ

ಸಲಯದಿಂ ಫುಲ್ಲಮಲ್ಲಿಕಾಮಂಜುಮಂಜರೀಪುಂಜಪ್ರತೀಕಾಶಮಂದಸ್ಮಿತಭಾಸಿತೆಯಂ ಫುಲ್ಲಮಲ್ಲಿಕಾಮಂಜು ಮಂಜರೀಪುಂಜದಿಂ ಶುಂಭಚ್ಛಾತಕುಂಭಾಂಭೋಜಕುಟ್ಮಲಕುಚಮಂಡಲೆಯಂ ಜೃಂಭಚ್ಛಾತಕುಂಭಾಂಭೋಜ ಕುಟ್ಮಲದಿಂ ಭಾಸ್ವಚ್ಛಿರೀಷಸುಮಸ್ನಿಗ್ಧಸೌಕುಮಾರ್ಯಪ್ರವಿಮಲದೋರ್ವಲ್ಲಿಯಂ ಭಾಸ್ವಚ್ಛಿರೀಷಕುಸುಮದಿಂ ತರುಣಾರುಣಕೋಕನದ ಕೋಮಲಪಾಣಿಯಂ ತರುಣಾರುಣಕೋಮಲಕೋಕನದದಿಂ ನೂತನ ಪೂತಶಾತಕೇತಕೀದಳನಖಪ್ರಕರೆಯಂ ನೂತನಪೂತಶಾತಕೇತಕೀದಳದಿಂ ಮಾಣಿಕ್ಯಶೋಣಾಕ್ಷೂಣ ಪ್ರಭಾಕಲಿತಕಂಕೇಳೀಪಲ್ಲವತಳೆಯಂ ಮಾಣಿಕ್ಯಶೋಣಾಕ್ಷೂಣಪ್ರಭಾಕಲಿತಕಂಕೇಳೀಪಲ್ಲವದಿಂ ಸಮಸ್ತಗಂಧ ಬಂಧುರಲತಾಂತಮೂರ್ತಿಯೆನಿಸಿ ಮನಂಗೊಳಿಪ ಪಂಪಾಂಬಿಕೆಯಂ ಸಮಸ್ತಗಂಧಬಂಧುರಲತಾಂತದಿಂದು ದ್ಭಟಕ್ಷಿತೀಂದ್ರಚಂದ್ರಮನರ್ಚಿಸುತ್ತೆಸೆದಿರ್ದಂ॥

ಅಂತುಮಲ್ಲದೆಯುಂ,

ಸುರಗಿ ಸುರಹೊನ್ನೆ ಮಲ್ಲಿಗೆ
ಯಿರವಂತಿಗೆ ಜಾಜಿಮುಖ್ಯಮಾದಲತಾಂತೋ।
ತ್ಕರದಿಂದಂ ಗಿರಿಜಾತೆಯ
ಚರಣಂಗಳನವನಿಪಾಲಕಂ ಪೂಜಿಸಿದಂ ॥ ೧೨೧ ॥

ಮತ್ತಮದಲ್ಲದೆ,

ಮಲ್ಲಿಗೆಯ ಮೊಗ್ಗುಗಳಂತೆ ಹೊಳೆಯುವ ಹಲ್ಲುಗಳ ಸಾಲಿನಿಂದ ಕೂಡಿ ಶೋಭಾಯಮಾನಳಾದವಳನ್ನು ಸುವಾಸನಾಯುಕ್ತವಾದ ಮಲ್ಲಿಗೆಯ ಮೊಗ್ಗುಗಳಿಂದಲೂ, ಕಲ್ಪವೃಕ್ಷದ ಚಿಗುರಿನಂತಿರುವ ತುಟಿಗಳನ್ನು ಹೊಂದಿರುವವಳನ್ನು ಹೊಳೆಯುವ ಕಲ್ಪವೃಕ್ಷದ ಚಿಗುರಿನಿಂದಲೂ, ಅರಳಿ ಮನೋಹರವಾದ ಮಲ್ಲಿಗೆಗಳ ಪ್ರತಿರೂಪದಂತಿರುವ ಮಂದಹಾಸದಿಂದ ಬೆಳಗುವವಳನ್ನು ಅರಳಿ ಮನೋಹರವಾಗಿರುವ ಮಲ್ಲಿಗೆಯ ಹೂವುಗಳಿಂದಲೂ, ಹೊಳೆವ ಚೂಪಾದ ಕಳಶದಂತಿರುವ ಕಮಲದ ಮೊಗ್ಗುಗಳನ್ನು ಹೋಲುವ ಮೊಲೆಗಳುಳ್ಳವಳನ್ನು ಹೊಳೆವ ಚೂಪಾದ ಕಳಶದಂತಿರುವ ಕಮಲದ ಮೊಗ್ಗುಗಳಿಂದಲೂ, ಕೋಮಲವೂ ಪರಿಶುದ್ಧವೂ ಆದ ಮಿನುಗುವ ಶಿರೀಷಪುಷ್ಪದ ಬಳ್ಳಿಯಂತಿರುವ ತೋಳುಗಳುಳ್ಳವಳನ್ನು ಹೊಳೆವ ಶಿರೀಷಪುಷ್ಪಗಳಿಂದಲೂ, ಅರಳಿದ ಕೋಮಲವಾದ ಕೆಂದಾವರೆಯಂತಹ ಕೈಗಳನ್ನು ಹೊಂದಿರುವವಳನ್ನು ಅರಳಿದ ಕೋಮಲವಾದ ಕೆಂದಾವರೆ ಹೂವುಗಳಿಂದಲೂ, ನವೀನವಾದ ಪರಿಶುದ್ಧವಾದ ನವಿರಾದ ಕೇದಗೆ ಹೂವಿನ ದಳದಂತಿರುವ ಉಗುರುಗಳನ್ನು ಹೊಂದಿರುವವಳನ್ನು ನವೀನವಾದ ಪರಿಶುದ್ಧವಾದ ನವಿರಾದ ಕೇದಗೆ ಹೂವಿನ ದಳಗಳಿಂದಲೂ, ಕಾಂತಿಯುಕ್ತವಾದ ಮಾಣಿಕ್ಯದ ಕೆಂಪನ್ನು ಹೊಂದಿರುವ ಅಶೋಕವೃಕ್ಷದ ಚಿಗುರನ್ನು ಹೋಲುವ ಅಂಗೈಯವಳನ್ನು ಕಾಂತಿಪೂರ್ಣವಾದ ಮಾಣಿಕ್ಯದ ಕೆಂಪನ್ನು ಹೊಂದಿರುವ ಅಶೋಕ ವೃಕ್ಷದ ಚಿಗುರಿನಿಂದಲೂ ಸುವಾಸನಾಭರಿತವೂ ಮನೋಹರವೂ ಆದ ಬಳ್ಳಿಯಂತೆ ಬಳುಕುವ ದೇಹದಿಂದ ಮನಸ್ಸನ್ನು ಸೂರೆಗೊಳ್ಳುವ ಪಂಪಾಂಬಿಕೆಯನ್ನು ಉದ್ಭಟ ಮಹಾರಾಜ ಚಂದ್ರಮನು ಪೂಜಿಸುತ್ತ ಶೋಭಿಸಿದನು. ಅಷ್ಟಲ್ಲದೆ, ೧೨೧. ಸುರಗಿ, ಸುರಹೊನ್ನೆ, ಮಲ್ಲಿಗೆ, ಇರವಂತಿಗೆ, ಜಾಜಿ - ಇವೇ ಮೊದಲಾದ ಹೂವುಗಳಿಂದ ಪಾರ್ವತಿಯ ಪಾದಗಳನ್ನು ಮಹಾರಾಜನು

ಕುಸುಮಂಗಳ ಕಂಪಂ ಪೊ
ತ್ತೆಸಗಲ್ಪವಧೂಮಪರಿಮಳಾನಿಲನಗರಾ।
ಜಸುಪುತ್ರಿಗೆ ಕೂರ್ತು ಸಮ
ರ್ಪಿಸಿದಂ ಕಮನೀಯಧೂಪಮಂ ಭೂಪಾಲಂ ॥ ೧೨೨ ॥

ಯುಂಜಾನರ ಹೃದಯಸ್ಥಿತ
ಮಂಜುಳಚಿದ್ದೀಪವಮರ್ದಬೆಳಗಿನೊಳನಿಶಂ।
ರಂಜಿಪ ಗಿರಿಪುತ್ರಿಗೆ ನೀ
ರಾಂಜನಮಂ ಬೆಳಗಿದಂ ಧರಿತ್ರೀಪಾಲಂ ॥ ೧೨೩ ॥

ಸಮಯದೆ ತೃಪ್ತಿಗೆ ನೈವೇ
ದ್ಯಮನರ್ಪಿಸಿ ವಿಮಲೆಗಿತ್ತು ಕೈನೀರಂ ರಾ।
ಗಮಯೆಗೆ ಪರಿಮಳತಾಂಬೂ
ಲಮನರ್ಪಿಸಿದಂ ಸಮಸ್ತವಿದ್ಯಾಕುಶಲಂ ॥ ೧೨೪ ॥

ಉಂಚಮಾದ ಸಮಸ್ತಯೋಗಿಗಳುಜ್ವಲಧ್ರುವಬಿಂಬಮಂ
ಬಂಚಿತಾಚ್ಚಸಹಸ್ರಪತ್ರಸರೋಜದೊಳ್ಪೊಳೆದಿಂಪಿನೊ
ಳ್ಮಿಂಚಿನೊಬ್ಬುಳಿಯಂತೆ ರಂಜಿಪ ಶೈಲಪುತ್ರಿಗೆ ಮೋದದಿಂ
ಮಿಂಚುವಾಧವಲಾತಪತ್ರಮನಾಗಳರ್ಪಿಸಿದಂ ನೃಪಂ ॥ ೧೨೫ ॥

ಶಂಕರನ ವರಜಟಾಜೂ
ಟಾಂಕಿತಶುಭ್ರಾಂಶುವಿರ್ಕ್ಕೆಲದೊಳುಚುಂ ಚಲಿಸ।
ಲ್ತಾಂ ಕಡು ರಂಜಿಪ ಗಿರಿಜೆಗೆ
ಮುಂಕೊಂಡರ್ಪಿಸಿದನವನಿಪತಿ ಚಾಮರಮಂ ॥ ೧೨೬ ॥

ಪೂಜಿಸಿದನು. ವ॥ ಮತ್ತೆ ಅಷ್ಟಲ್ಲದೆ, ೧೨೨. ಹೂವುಗಳ ಸುವಾಸನೆಯನ್ನು ಹೊತ್ತು ತಂಗಾಳಿ ಬೀಸುತ್ತಿರಲು ಪರ್ವತ ರಾಜನ ಮಗಳು ಪಾರ್ವತೀದೇವಿಗೆ ಮಹಾರಾಜನು ಕಂಪುಳ್ಳ ಧೂಪವನ್ನು ಸಮರ್ಪಿಸಿದನು. ೧೨೩. ತಪಸ್ವಿಗಳ ಹೃದಯದಲ್ಲಿನ ಮನೋಹರವಾದ ಚೈತನ್ಯದೀಪವನ್ನು ಸೇರಿದ ಬೆಳಗಿನಲ್ಲಿ ಸದಾ ಶೋಭಿಸುವ ಪಾರ್ವತಿಗೆ ಮಹಾರಾಜನು ಆರತಿಯನ್ನೆತ್ತಿ ಬೆಳಗಿದನು. ೧೨೪. ಆ ಸಮಯದಲ್ಲಿ [ಪಾರ್ವತಿಯ] ತೃಪ್ತ್ಯರ್ಥವಾಗಿ ನೈವೇದ್ಯವನ್ನು ಅರ್ಪಿಸಿ, ಪಾರ್ವತೀದೇವಿಗೆ ಕೈತೊಳೆಯಲು ನೀರಿತ್ತು, ಸಂತೋಷಮಯಿಯಾದ ಆಕೆಗೆ ಪರಿಮಳಭರಿತವಾದ ತಾಂಬೂಲವನ್ನು ಸಕಲ ವಿದ್ಯಾಪಾರಂಗತನಾದ ಮಹಾರಾಜನು ಅರ್ಪಿಸಿದನು. ೧೨೫. ಸಕಲ ಯೋಗಿಗಳ ಸ್ಥಿರವಾದ, ತೀಕ್ಷ್ಣವಾದ ದೃಷ್ಟಿಯೋಗವೆಂಬ ಸುಂದರ ಶುಭ್ರ ಸಹಸ್ರದಳ ಕಮಲದಲ್ಲಿ ಹೊಳೆದ ಮನೋಹರವಾದ ಮಿಂಚಿನ ರಾಶಿಯಂತೆ ರಂಜಿಸುವ ಪಾರ್ವತೀದೇವಿಗೆ ಆಗ ಮಹಾರಾಜನು ಹೊಳೆವ ಬಿಳಿಯ ಕೊಡೆಯನ್ನರ್ಪಿಸಿದನು. ೧೨೬. ಶಿವನ ಜಡೆಯಲ್ಲಿನ ಚಂದ್ರನ ಶುಭ್ರ ಕಿರಣಗಳು ಎರಡೂ ಕಡೆಗಳಲ್ಲಿ ಚೆನ್ನಾಗಿ ಚಲಿಸಲು ಅದರಿಂದಾಗಿ ಅತಿಶಯ ಸೌಂದರ್ಯದಿಂದ ಶೋಭಿಸುವ ಗಿರಿಜೆಗೆ ಅರಸನು ಚಾಮರವನ್ನು ಕೈಗೆ ತೆಗೆದುಕೊಂಡು

ನಿಜಯೋಗೀಂದ್ರರ್ ಹೃನ್ನೀ
ರಜದೊಳ್ತೊಳತೊಳಗಿನೊಳ್ಪೆಳಗುತಿರ್ಪುರುಲೋ।
ಕಜನನಿಗೊಲವಿಂ ರತ್ನ
ವ್ರಜಮಯದರ್ಪಣವನರ್ಪಿಸಿದನಂದರಸಂ ॥ ೧೨೭ ॥

ಇಂತಮರ್ದ ಷೋಡಶೋಪಚಾರಂಗಳಿಂ ತಣಿಯದೆ ಪಂಪಾಭವಾನಿಯಂ ಗುರುತರಮೋದಕ್ಷೀರ ವಾರಾಶಿಯೊಳ್ಮೊಡಿ ಮುಳುಂಗಾಡುತ್ತುದ್ಭಟಕ್ಷಿತೀಂದ್ರಚಂದ್ರಮನಿರೆಯಿರೆ,

ನೋಡುವನರೆಗಣ್ಮುಚ್ಚುವ
ನಾಡುವನುಬ್ಬಿ ಪೊಂಗುವಂ ಮಹಾಮುದದಿಂ ಕೊಂ।
ಡಾಡುವನುರುಸೌಖ್ಯದೊಳೋ
ಲಾಡುವನರ್ಚಿಸುತೆ ಭೂಮಿಪಂ ಪಾರ್ವತಿಯಂ ॥ ೧೨೮ ॥

ತುಂಬಿದ ಮೋಹದಿಂ ನಿಗಮಜಾಲಶಿಖಾಮಣಿಯಂ ನಿರೀಹೆಯಂ
ತ್ರ್ಯಂಬಕನೊಪ್ಪಮಂ ತ್ರಿಗುಣೆಯಂ ನಿಜಭಕ್ತಿಯೆ ಸೌಖ್ಯಮೂರ್ತಿಪಂ।
ಪಾಂಬಿಕೆಯಂ ಸಮರ್ಚಿಸುತೆ ಕಣ್ಗೊಳಿಪುದ್ಭಟದೇವನಚ್ಛ ಚಿ
ತ್ತಾಂಬುಜದೊಳ್ತೊಳಪ್ಪ ಶಿವ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೨೯ ॥

ಅರ್ಪಿಸಿದನು. ೧೨೭. ಶ್ರೇಷ್ಠ ಯೋಗಿಗಳ ಹೃದಯಕಮಲದಲ್ಲಿ ಜ್ವಾಜ್ವಲ್ಯಮಾನವಾಗಿ ಬೆಳಗುತ್ತಿರುವ, ವಿಶಾಲಲೋಕಕ್ಕೆ ತಾಯಿಯಂತಿರುವ ಪಾರ್ವತಿಗೆ ರತ್ನಖಚಿತವಾದ ಕನ್ನಡಿಯನ್ನು ಪ್ರೀತಿಯಿಂದ ಅಂದು ಅರಸನು ಅರ್ಪಿಸಿದನು. ವ॥ ಹೀಗೆ ಷೋಡಶೋಪಚಾರಗಳಿಂದ ಕೂಡಿದ ಪೂಜೆಯಿಂದ ತೃಪ್ತನಾಗದೆ ಉದ್ಭಟಮಹಾರಾಜ ಚಂದ್ರಮನು ಪಂಪಾಂಬಿಕೆಯನ್ನು ಅತಿಶಯವಾದ ಆನಂದದಿಂದ ಹಾಲಿನ ಹೊಳೆಯಲ್ಲಿ ಮಾಡಿ ಮುಳುಗಾಡಿಸಿ ಇರುತ್ತಿರಲು, ೧೨೮. ಮಹಾರಾಜನು ಪಾರ್ವತೀದೇವಿಯನ್ನು ಪೂಜಿಸುತ್ತ, ನೋಡುವನು, ಅರೆಗಣ್ ಮುಚ್ಚುವನು, ಆಡುವನು, ಅತಿಶಯವಾಗಿ ಉಬ್ಬುವನು, ಅತ್ಯಾನಂದದಿಂದ ಕೊಂಡಾಡುವನು, ಅತಿಶಯ ಸೌಖ್ಯದಿಂದ ಓಲಾಡುವನು. ೧೨೯. ತುಂಬಿದ ಮೋಹದಿಂದ ವೇದಗಳ ಶಿರೋಮಣಿಯನ್ನು, ಲಾವಣ್ಯಮೂರ್ತಿಯನ್ನು, ಮುಕ್ಕಣ್ಣನ ಸೊಗಸುಗಾತಿಯನ್ನು, ಸತ್ವ-ರಜ-ತಮಗಳೆಂಬ ಮೂರುಗುಣಗಳುಳ್ಳವಳನ್ನು ಸಹಜ ಭಕ್ತಿಯೆ ಸೌಖ್ಯ ರೂಪಾಗಿರುವ ಪಂಪಾಂಬಿಕೆಯನ್ನು ಪೂಜಿಸುತ್ತ ಶೋಭಿಸಿರುವ ಉದ್ಭಟದೇವನ ಶುದ್ಧವಾದ ಮನಸ್ಸೆಂಬ ಕಮಲದಲ್ಲಿ ತೊಳಗಿ ಬೆಳಗುವ ಅಲ್ಲಮಪ್ರಿಯನಾದ ಶಿವನು ನನ್ನನ್ನು ರಕ್ಷಿಸಲಿ.

ಇದು ಸಮಸ್ತ ಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನ ಪುಂಜ
ಸಂಜಾತಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿ
ರೂಪಾಕ್ಷ ಪಾವನಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರ
ಸಾಂದ್ರಚಂದ್ರಿಕಾಪಟಲಪಟುಲಂಪಟಚಕೋರಾಯ
ಮಾಣಶ್ರೀಸೋಮರಾಜೇಂದ್ರವಿರಚಿತಮಪ್ಪ
ಶೃಂಗಾರಸಾರಮಹಾಪ್ರಬಂಧದೊಳ್
ಪಂಪಾಕ್ಷೇತ್ರವರ್ಣನಂತೃತೀ
ಯಾಶ್ವಾಸಂ ಮುಗಿದುದು.

ಇದು ಸಮಸ್ತ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ ಕಿರೀಟಗಳ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳಿಂದುಂಟಾದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪವಿತ್ರವಾದ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತುರನಾಗಿರುವ ಸೋಮರಾಜನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಪಂಪಾಕ್ಷೇತ್ರ ವರ್ಣನೆಯುಳ್ಳ ಮೂರನೇ ಆಶ್ವಾಸವು ಮುಗಿಯಿತು.

# ನಾಲ್ಕನೆಯ ಆಶ್ವಾಸಂ

ಶ್ರೀಪಂಪಾಂಬಿಕೆಯಂ ಚಿ
ದ್ರೂಪಿಣಿಯಂ ಲೋಕಮಾತೆಯಂ ಶಾಂಭವಿಯಂ।
ತಾಪತ್ರಯವಿರಹಿತೆಯಂ
ಭೂಪಾಲಕನುದ್ಭಟಂ ಸಮರ್ಚಿಸುತೆಸೆದಂ ॥ ೧ ॥

ಪ್ರಣವದ ಮೂಲಮೂರ್ತಿಯನಜಾತೆಯನುಜ್ವಳವೇದಚೂಳಿಕಾ
ಮಣಿಯನನಂತಭಾನುರುಚಿಸಂಯುತಗಾತ್ರೆಯನಿಂದುಖಂಡಭೂ।
ಷಣೆಯನಪಾರಸತ್ಕರುಣವಾರಿಧಿಯಂ ಶಿವನೊಪ್ಪಮಂ ಜಗ
ತ್ಪ್ರಣುತೆಯನೊಲ್ದು ಪೂಜಿಸುತೆ ಕಣ್ಗೆಸೆದಂ ನೃಪರಾಜಕುಂಜರಂ ॥ ೨ ॥

ತಕ್ಕುಕಡಂಗಿದಚ್ಚಸವಿನೋಟಕೆ ಸಿಲ್ಕಿದ ದಿಟ್ಟಿ ಮೂರ್ಛೆಗೊ
ಳ್ದಿಕ್ಕುವ ಚೇತನಂ ಸಲೆ ಸಮುನ್ನತಸನ್ನುತಿಗಳ್ಗೆ ಮೀಱಿದು।
ದ್ವಾಕ್ಕಳಿಕಾಳಿ ಪೊಂಪುಳಿಗೆ ತೆತ್ತೊಡಲಂಚಿತಪೂಜೆಗಿತ್ತ ಸ
ಮ್ಯಕ್ಕರಕಂಜಮೊಪ್ಪೆ ಶಿವೆಯಂ ನಲಿದರ್ಚಿಸುತೊಪ್ಪಿದಂ ನೃಪಂ ॥ ೩ ॥

೧. ಸಂಪದ್ಭರಿತಳಾದ ಪಂಪಾಂಬಿಕೆಯನ್ನು, ಮನದಲ್ಲಿ ರೂಪುಗೊಂಡಿರುವವಳನ್ನು, ಲೋಕಮಾತೆಯನ್ನು, ತಾಪತ್ರಯಗಳಿಂದ ಮುಕ್ತಳಾದವಳನ್ನು, ಪಾರ್ವತಿಯನ್ನು ಉದ್ಭಟ ಮಹಾರಾಜನು ಪೂಜಿಸುತ್ತ ಶೋಭಿಸಿದನು. ೨. ಓಂಕಾರದ ಮೂಲಮೂರ್ತಿಯನ್ನು, ಹುಟ್ಟು ಕಳೆದುಕೊಂಡವಳನ್ನು, ಉಜ್ವಲವಾದ ವೇದಗಳಿಗೆ ತಲೆಮಣಿಯಾದವಳನ್ನು, ಅನಂತ ಸೂರ್ಯಕಿರಣಗಳ ಮೊತ್ತವೇ ಒಂದುಗೂಡಿ ಆಕಾರಗೊಂಡವಳನ್ನು, ಚಂದ್ರನನ್ನು ಧರಿಸಿದವಳನ್ನು, ಅಪಾರವಾದ ಕರುಣಾಸಮುದ್ರೆಯನ್ನು, ಶಿವನ ಸೊಬಗಿಯನ್ನು, ಜಗತ್ತೇ [ಭಕ್ತಿಯಿಂದ] ನಮಿಸುವವಳನ್ನು ಮಹಾರಾಜರುಗಳ ನಡುವೆ ಆನೆಯಂತಿರುವವನೂ [ಉದ್ಭಟದೇವನು] ಪ್ರೀತಿಯಿಂದ ಪೂಜಿಸುತ್ತ ಅಂದಗೊಂಡನು. ೩. ಪ್ರೀತಿ ಉತ್ಸಾಹಗಳ ಹಾಗೂ ಪರಿಶುದ್ಧವೂ ಇನಿಯದೂ ಆದ ನೋಟದಿಂದ ಸುಖಮೂರ್ಛೆಗೆ ಒಳಗಾಗಿಸುವ ಚೇತನ, ಅತಿಶಯವಾದ ಹೊಗಳಿಕೆಗೆ ಮೀರಿದ ಮಾತೆನ್ನುವ ಭ್ರಮರಗಳ ವಿಜೃಂಭಣೆ - ಇವುಗಳಿಗೆ ಅರ್ಪಿಸಿದ ಒಡಲು, ಸುಂದರವಾದ ಪೂಜೆಗೆಂದು ಮೊಸಲಿಟ್ಟ ಕರಕಮಲಗಳು ಶೋಭಿಸಿರಲು ಮಹಾರಾಜನು ಪಾರ್ವತಿಯನ್ನು ಸಂತಸದಿಂದ ಪೂಜಿಸಿ ಅಂದಗೊಂಡನು.

ಇಂತಖಿಳಲೋಕಮಾತೆಯಪ್ಪ ಪಂಪಾಭವಾನಿಯನತ್ಯಾನಂದದಿಂದಂ ಪೂಜೆಯಂಮಾಡಿ ನಮಸ್ಕರಿಸಿ ಬೀೞ್ಕೊಂಡು ತದ್ದೇವಾಗಾರಮಂ ಪೊಱಮಟ್ಟು ವಿರೂಪಾಕ್ಷಲಿಂಗಮಂ ಕಾಣ್ಬ ತವಕದಿಂದುದ್ಭಟಕ್ಷಿತೀಂದ್ರ ಚಂದ್ರಮಂ ಬರೆವರೆ,

ವರತತ್ವಾರ್ಥಮನೊಳಕೊಂ
ಡಿರದೆ ಮನಂಗೊಳಿಪುಪನಿಷದಕ್ಷರದುರುಮಂ।
ಜರಿಯೆನೆ ಪಂಪಾಧಿಪನಂ
ಧರಿಸಿ ವಿರಾಜಿಸಿದುದೊಂದುದೇಗುಲಮಿದಿರೊಳ್ ॥ ೪ ॥

ನಿಗಮಾರ್ಥಜ್ಞರ ಸನ್ಯಾ
ಸಿಗಳ ಯತೀಶ್ವರರ ಮಾಂತ್ರಿಕರ ನಿರ್ಮಲಯೋ।
ಗಿಗಳ ಸಮೂಹದಿನೊಪ್ಪಿದು
ದಗಲದೆ ಗುರುಪಂಪೆಯಾಣ್ಮನುಜ್ವಳಸದನಂ ॥ ೫ ॥

ಬಣ್ಣಿಪೊಡಸದಳವಾನುಡಿ
ವೆಣ್ಣೆಱೆಯಂಗೆನಿಪಲಂಪಿನೇೞ್ಗೆಯನಾಂತ।
ಕ್ಷುಣ್ಣಪ್ರಭನನಿಶಂ ಮು
ಕ್ಕಣ್ಣವಿರೂಪಾಕ್ಷನಾಲಯಂ ರಂಜಿಸುಗುಂ ॥ ೬ ॥

ಇಂತತಿಕಣ್ಮನಕತ್ಯಾನಂದಂಬೊಕ್ಕುರುತರಭಕ್ತಿರಸಭರದುರುವಣೆಯಿಂದೆೞ್ದು ಧ್ರುವಮಂಡಲದೊಳ್ವಿಜೃಂಭಿಪ ಓಂಕಾರಮೂರ್ತಿಯಂ ಕಾಣ್ಬ ಸದ್ವಿವೇಕದಂತೆ ಸಮಸ್ತಚರಾಚರಗತನಪ್ಪ ಶ್ರೀವಿರೂಪಾಕ್ಷಲಿಂಗಮನುದ್ಭಟರಾಜೇಂದ್ರಚಂದ್ರಮಂ ಕಂಡು,

ವ॥ ಹೀಗೆ ಸಕಲ ಲೋಕಗಳಿಗೆ ತಾಯಿಯಂತಿರುವ ಪಂಪಾಭವಾನಿಯನ್ನು ಅತ್ಯುತ್ಸಾಹದಿಂದ ಪೂಜೆಮಾಡಿ ನಮಸ್ಕರಿಸಿ, ಅಲ್ಲಿಂದ ಹೊರಟು, ಆ ದೇವಾಲಯದಿಂದ ಹೊರಬಂದು ವಿರೂಪಾಕ್ಷ ಲಿಂಗವನ್ನು ಕಾಣಬೇಕೆಂಬ ಸಡಗರದಿಂದ ಉದ್ಭಟಮಹಾರಾಜ ಚಂದ್ರಮನು ಬರುತ್ತಿರಲು, ೪. ಶ್ರೇಷ್ಠ ತತ್ವಾರ್ಥಗಳನ್ನು ಒಳಗೊಂಡು ಬಿಡದೆ ಮನಸ್ಸನ್ನು ಸೂರೆಗೊಳ್ಳುವ ಉಪನಿಷತ್ ವಾಕ್ಯಗಳೊ ಎನ್ನುವಂತೆ ಹಂಪೆಯ ಒಡೆಯನನ್ನು ತನ್ನಲ್ಲಿ ಹೊಂದಿದ ದೇವಾಲಯವೊಂದು [ಮಹಾರಾಜನ] ಕಣ್ಣೆದುರಿನಲ್ಲಿ ಶೋಭಿಸಿತು. ೫. ವೇದಗಳಿಗೆ ಅರ್ಥ ಹೇಳುವವರ, ಸನ್ಯಾಸಿಗಳ, ಯತಿಶ್ರೇಷ್ಠರ, ಮಂತ್ರವಾದಿಗಳ, ಪರಿಶುದ್ಧರಾದ ಯೋಗಿಗಳ ಸಮೂಹದಿಂದ ಲೋಕಗುರು ಪಂಪಾಪತಿಯ ಮನೋಹರವಾದ ಗೃಹವು ಬಿಡದೆ ಕಣ್ಣಿಗೆ ಅಂದ ತಂದಿತು. ೬. ಬಣ್ಣಿಸುವುದಾದರೆ ಆ ಸರಸ್ವತಿಯ ಗಂಡನಾದ ಬ್ರಹ್ಮನಿಗೂ ಅಸಾಧ್ಯವೆನ್ನುವಂತೆ ಹೆಚ್ಚಿನ ಸೊಬಗನ್ನು ಪಡೆದು, ಕೊರತೆಯಿಲ್ಲದ ಪ್ರಕಾಶದಿಂದ ಕೂಡಿ, ವಿರೂಪಾಕ್ಷನ ಆಲಯವು ಸದಾ ಬೆಳಗುತ್ತಿರುವುದು. ವ॥ ಹೀಗೆ ಕಣ್ಣು ಮನಗಳಿಗೆ ಅತ್ಯಾನಂದವು ತುಂಬಿ, ಭಕ್ತಿರಸೋದ್ರೇಕದಿಂದ ಮನ ಉಬ್ಬಿ, ಗಗನಮಂಡಲದಲ್ಲಿ ಶೋಭಿಸಿರುವ ಓಂಕಾರಮೂರ್ತಿಯನ್ನು ಕಾಣುವ ಸದ್ವಿವೇಕದಂತೆ ಸಮಸ್ತ ಚರಾಚರ ವಸ್ತುಗಳಲ್ಲಿ ಅಡಗಿರುವ ಶ್ರೀ ವಿರೂಪಾಕ್ಷ ಲಿಂಗವನ್ನು ಉದ್ಭಟ ರಾಜೇಂದ್ರ ಚಂದ್ರಮನು

ಅನುಪಮನೀತನಾನತಜನಾಮಲಚಿತ್ತಚಕೋರಚಂದ್ರನೀ
ತನೆ ಯಖಿಳಾಮರಪ್ರಕರಸನ್ಮಕುಟಾಂಚಿತರತ್ನಪುಂಜಸಂ।
ಜನಿತವಿನೂತ್ನದೀಧಿತಿವಿಜೃಂಭಿತಪಾವನಪಾದಪದ್ಮನೀ
ತನೆ ಯೆನುತುಂ ನಮಸ್ಕರಿಸಿದಂ ನಿಜಭಕ್ತಿಯೊಳಾಮಹೀಧವಂ ॥ ೭ ॥

ಇಂತು ಸಮುನ್ನತಭಕ್ತಿರಸಭಾವದಿಂದಂ ಮೈಯ್ಯನೀಡಾಡಿದ ಮಹೋಲ್ಲಾಸದಿಂದುದ್ಭಟರಾಜೇಂದ್ರ ಚಂದ್ರಮಂ ಮಗುಟ್ದ್ದೆಟ್ದು ಮುಕುಳಿತಕರಸರೋಜನಾಗಿ,

ಶತಮಖಿಮುಖಿಸುರಗಣನತಪದನಂ
ಸಿತಕರಹುತವಹತರಣಿನಯನನಂ।
ನತಜನತತಿನುತಪದಸರಸಿಜನಂ
ಜಿತಮದನನನುಱೆ ಪೊಗಟ್ದನವನಿಪಂ ॥ ೮ ॥

ವಿಧೀಂದ್ರಾದಿಪ್ರೌಢಾಮರಗಣನುತಂ ಬಾಲವಿಚಲ
ದ್ವಿಧು ಪ್ರಾಂಚತ್ಕೋಟೀರಮಹಿಮನಜಾತಂ ನಿರುಪಮಂ
ಸುಧಾಂಶುಪ್ರದ್ಯೋತಾನಳಸುನಯನೋದ್ಧೂತಕುಸುಮಾ
ಯುಧಾಂಗಂ ಮೇಣೆನ್ನಂ ಪೊರೆಗೆ ಗುರುಪಂಪಾಪುರವರಂ ॥ ೯ ॥

ಶೈಲಜಾಮುಖಾಬ್ಜಗಂಧಲುಬ್ಧ ಚಂಚರೀಕ ದಿ
ಕ್ಚೇಲ ಸರ್ವಲೋಕಪಾಲ ಭಕ್ತಜಾಲಲೋಲ ಸ।
ದ್ಬಾಲಚಂದ್ರಚಾರುಜೂಟ ಸಿದ್ಧಕೂಟವಂದಿತಾ
ಕಾಲಕಾಲ ಕಾಲಕಂಠ ರಕ್ಷಿಸೆನ್ನನೀಶ್ವರಾ ॥ ೧೦ ॥

ಕಂಡು, ೭. ಈತ ಸರಿಸಾಟಿಯಿಲ್ಲದವನು, ಈತನೇ ಬೇಡುವವರ ಪರಿಶುದ್ಧಾಂತಃಕರಣವೆಂಬ ಚಕೋರಪಕ್ಷಿಗೆ ಚಂದ್ರನಂತಿರುವವನು, ಈತನೇ ಸಕಲ ದೇವತೆಗಳ ಹೊಳೆವ ರತ್ನಖಚಿತ ಕಿರೀಟದಿಂದ ಹೊಮ್ಮಿದ ವಿನೂತನ ದೀಪ್ತಿಯಿಂದ ಶೋಭಿಸಿರುವ ಪವಿತ್ರ ಪಾದಗಳನ್ನು ಹೊಂದಿರುವವನು ಎನ್ನುತ್ತ ಪರಿಶುದ್ಧ ಭಕ್ತಿಯಿಂದ ಮಹಾರಾಜನು ನಮಸ್ಕರಿಸಿದನು. ವ॥ ಹೀಗೆ ಶ್ರೇಷ್ಠ ಭಕ್ತಿಭಾವದಿಂದ ಮೈಚೆಲ್ಲಿ, ಅತ್ಯುತ್ಸಾಹದಿಂದ ಉದ್ಭಟರಾಜೇಂದ್ರ ಚಂದ್ರಮನು ಮತ್ತೆ ಮೇಲೆದ್ದು ಕೈಗಳನ್ನು ಮುಗಿದು, ೮. ಇಂದ್ರನೇ ಆದಿಯಾದ ಪ್ರಮುಖ ದೇವತೆಗಳಿಂದ ವಂದಿಸಿಕೊಳ್ಳುತ್ತಿರುವವನೂ, ಚಂದ್ರ-ಅಗ್ನಿ-ಸೂರ್ಯರನ್ನು ಕಣ್ಣಾಗಿ ಉಳ್ಳವನೂ, ಭಕ್ತರ ಸಮೂಹವು ಹೊಗಳಲು ಯೋಗ್ಯವಾದ ಪಾದಕಮಲಗಳನ್ನು ಹೊಂದಿರುವವನೂ, ಮನ್ಮಥನನ್ನು ಜಯಿಸಿದವನೂ ಆದ ಶಿವನನ್ನು ಮಹಾರಾಜನು ವಿಶೇಷವಾಗಿ ಹೊಗಳಿದನು. ೯. ವಿಧಿ, ಇಂದ್ರ ಇವರೇ ಮೊದಲಾದ ಹಿರಿಯ ದೇವಗಣಗಳಿಂದ ಸ್ತುತಿಸಲ್ಪಡುವವನೂ, ವಿಶೇಷವಾಗಿ ಪ್ರಕಾಶಿಸುವ ಬಾಲಚಂದ್ರನನ್ನು ಜ್ವಾಜ್ವಲ್ಯಮಾನವಾಗಿ ಬೆಳಗುವ ಕಿರೀಟದೋಪಾದಿಯಲ್ಲಿ ಶಿರದಲ್ಲಿ ಧರಿಸಿದ ಮಹಿಮಾಪೂರ್ಣನೂ, ಹುಟ್ಟೇ ಇಲ್ಲದವನೂ, ಉಪಮೆಗೆ ಸಿಗದವನೂ, ಕಾಂತಿಭರಿತ ಅಮೃತಕಿರಣಗಳನ್ನು ಹೊಂದಿರುವವನೂ, ಅಗ್ನಿನೇತ್ರನೂ, ಗುರುವೂ ಆದ ಪಂಪಾಪತಿಯು ತನ್ನನ್ನೂ ಪ್ರಸಿದ್ಧನಾದ ಮನ್ಮಥನನ್ನೂ ರಕ್ಷಿಸಲಿ. ೧೦. ಪಾರ್ವತಿಯ ಮುಖಕಮಲದ

ಶ್ರೀ ಹೇಮಕೂಟೋನ್ನತಕ್ಷೋಣಿಭೃಚ್ಛೂಳಿಕಾವಾಸ ಸರ್ವೇಶಪಂಪಾಂಬಿಕಾವಕ್ತ್ರಸಂಪೂರ್ಣ ಶೀತಾಂಶುಸಂಜಾತ ಮಂದಸ್ಮಿತಜ್ಯೋತ್ಸ್ನಿಕಾಪುಂಜಭುಂಜಚ್ಚಕೋರಾಯಮಾಣ ಸ್ತುತಾಮ್ನಾಯಸಂತಾನ ಚಂಚಚ್ಛಿರಶ್ಚಂದ್ರಲೇಖಾಮಯೂಖಾವಲೀಛ್ಛಾದಿತಸ್ವಚ್ಛಗೀರ್ವಾಣಗಂಗಾತರಂಗೌಘಸಂಘಟ್ಟನೋದ್ಭೂತ ವಾರ್ಬಿಂದುಸಂದೋಹ ಸದ್ಧೌತ ಸಮ್ಯಗ್ಜಟಾಜೂಟಕೋಟೀರಭಾರ ಪ್ರಸೂನಾಸ್ತ್ರ ಸಂಹಾರ ಶುಂಭತ್ಸುಧಾಸೂತಿ ತಿಗ್ಮಾಂಶುವಹ್ನಿಸ್ಫುರನ್ನೇತ್ರ ಲೋಕತ್ರಯಸ್ತೋತ್ರ ಶುಭ್ರಾರುಣಶ್ಯಾಮ ಪಿಂಗಾಚ್ಛತೇಜಶ್ಚಯಸ್ನಿಗ್ಧಪಂಚಾಸ್ಯ ಭಿಂದತ್ಫಣೀಂದ್ರಾರ್ಭಕಾಲಂ ಕೃತಶ್ರೋತ್ರಕದ್ವಂದ್ವ ನಿರ್ದ್ವಂದ್ವ।

ನೀಲಾತ್ಮಲೋಲಾಂಶುಮನ್ಮೇಚಕಗ್ರೀವ ಚಿದ್ಭಾವ ಸಂಫುಲ್ಲಮಲ್ಲೀಮತಲ್ಲೀಚಲತ್ಕೋರಕಸ್ಪಂದ ಕುಂದೇಂದುಮಂದಾಕಿನೀಮಂದಕಲ್ಲೋಲಮಂದಾರ ಪುಷ್ಪೋಲ್ಲಸನ್ಮಂಜರೀಸ್ಫಾರನೀಹಾರಕರ್ಪೂರ ಪೂರೋರುತಾರಾಮಲಕ್ಷೀರವಾರಾಕರಸ್ಫಾಟಿಕಸ್ವಚ್ಛಚಂದ್ರಾತಪೋಚ್ಚಂಡ ಹೀರಾಮರಾಹಾರತಾರಾಚಳೈರಾವತಾ ದಭ್ರಶುಭ್ರಾಭ್ರನಿಭ್ರಾಜಿತಸ್ಥೂಲ ಮುಕ್ತಾಫಲಾಹೀಂದ್ರವಿದ್ಯುಲ್ಲತಾಕಂಬುಕಾದಂಬಕಶ್ರೇಣಿ ಸಂಕಾಶಸೌಮ್ಯಾಂಗ ಭಾಸ್ವತ್ಕೃಪಾಪಾಂಗ ನಂದೀಶ್ವರಾದಿ ಪ್ರಸನ್ನಾನನವ್ರಾತಸಂಶುದ್ಧತೇಜಸ್ಸರೋಜಾತಮಾರ್ತಾಂಡ ಕಂಜಾತಕೋದಂಡ ವಜ್ರಾಭಯಾಂಚತ್ಕರೋದ್ಯದ್ವಿಲಾಸಾಢ್ಯ ಪಾಶಾಂಕುಶೋಲ್ಲಾಸ ಪುಂಡ್ರಾಸಿಕಾಂಚತ್ಕರಾಂ ಭೋಜ ಭಕ್ತಾಮರೋರ್ವೀಜ ಪಂಕೇಜಜಾತಾಂಡಸಂಘಾತ ಮಾಲಾಧರೋಲ್ಲಾಸ ಸಚ್ಚಿನ್ಮುದಾವೇಶ।

ಪರಿಮಳಕ್ಕೆ ಅತ್ಯಾಸೆಪಟ್ಟ ದುಂಬಿಯೆ, ದಿಗಂಬರನೆ, ಸಕಲ ಲೋಕಪಾಲನೆ, ಭಕ್ತರ ಸಮೂಹದಲ್ಲಿ ವಿಹರಿಸುವವನೆ, ಸುಂದರವಾದ ಶಿರಸ್ಸಿನಲ್ಲಿ ಬಾಲಚಂದ್ರನನ್ನು ಧರಿಸಿದವನೆ, ಸಿದ್ಧರುಗಳಿಂದ ನಮಸ್ಕರಿಸಲ್ಪಡುವವನೆ, ಯಮನಿಗೇ ಮೃತ್ಯುಸ್ವರೂಪವಾದವನೆ, ನೀಲಕಂಠನೆ, ಈಶ್ವರನೆ ನನ್ನನ್ನು ರಕ್ಷಿಸು. ವ॥ ಸಂಪದ್ಭರಿತ ಹೇಮಕೂಟದ ಎತ್ತರ ಪ್ರದೇಶದಲ್ಲಿನ ಪರ್ವತಭಾಗದಲ್ಲಿ ವಾಸಿಸುವವನೆ, ಸರ್ವೇಶನೆ, ಪಂಪಾಂಬಿಕೆಯ ಮುಖವೆನ್ನುವ ಪೂಣಚಂದ್ರನಿಂದುಂಟಾದ ಮಂದಹಾಸವೆನ್ನುವ ಕಾಂತಿಯ ಮೊತ್ತವನ್ನು ಸವಿವ ಚಕೋರಪಕ್ಷಿಯಂತಿರುವವನೆ, ವೇದಗಳಿಂದ ಹೊಗಳಲ್ಪಡುವವನೆ, ಶಿರದಲ್ಲಿ ಹೊಳೆಯುತ್ತಿರುವ ಚಂದ್ರನ ಕಾಂತಿಯ ಪುಂಜದಿಂದ ಮರೆಮಾಡಲ್ಪಟ್ಟ ಪರಿಶುದ್ಧನಾದ ದೇವನೆ; ಗಂಗೆಯ ತೆರೆಗಳ ಹೊಡೆತದಿಂದ ಉದ್ಭವವಾದ ನೀರಹನಿಗಳ ಮೊತ್ತದಿಂದ ಶುಭ್ರಗೊಂಡ ಪವಿತ್ರ ಜಟಾಸಮೂಹದಲ್ಲಿ ಕಿರೀಟ ಧರಿಸುವವನೆ, ಮನ್ಮಥನನ್ನು ಸಂಹರಿಸಿದವನೆ; ಮಂದವಾದ [ಕಿರಣಗಳಿಂದ ಕೂಡಿದ] ಚಂದ್ರ, ತೀಕ್ಷ್ಣವಾದ ಕಿರಣಗಳಿಂದ ಕೂಡಿದ ಸೂರ್ಯ, ಹೊಳೆವ ಅಗ್ನಿ ನೇತ್ರ - ಇವುಗಳಿಂದ ಕೂಡಿದವನೆ, ಮೂರು ಲೋಕಗಳಿಂದ ಸ್ತುತಿಸಲ್ಪಡುವವನೆ, ಶುಭ್ರವಾದ ಅರುಣ, ಕಡುನೀಲಿ, ಕಂದುಬಣ್ಣಗಳ ಅಪೂರ್ವ ಕಾಂತಿಯಿಂದ ಮನೋಹರವಾದ ಪಂಚಮುಖ ಉಳ್ಳವನೆ, ಎಳೆಯ ನಾಗಗಳನ್ನು ಎರಡೂ ಕಿವಿಗಳಿಗೆ ಅಲಂಕಾರವಾಗಿ ಹೊಂದಿರುವವನೆ; ಅದ್ವಯನೆ ಎರಡಿಲ್ಲದೆ ಏಕವಾದವನೆ.

ನೀಲಮಣಿಯಂತೆ ಚಂಚಲವಾದ ಕಿರಣಗಳುಳ್ಳ ನೀಲಕಂಠನೆ, ಚಿದ್ಭಾವನೆ, ಅರಳಿದ ಮಲ್ಲಿಗೆಯಂತೆ, ಹೊಳೆವ ಮುಗುಳಿನಂತೆ ಚಲಿಸುವ [ಬಾನಿನ] ಚಂದ್ರನನ್ನು ಶಿರದಲ್ಲಿ ಧರಿಸಿದವನೆ, ದೇವಗಂಗೆಯ ಮಂದವಾದ ತೆರೆಗಳನ್ನೂ ದೇವಲೋಕದ ಮಂದಾರ ಪುಷ್ಪಗಳ

ನಾನಾಮಹಾಮಂತ್ರಬೀಜಾಕ್ಷರಾನೀಕರಾಟ್ತಾರಕಬ್ರಹ್ಮಸಲ್ಲೋಲ ದಿಕ್ಚೇಲ ಪದ್ಮಾಂಬಕಬ್ರಹ್ಮಪರ್ಜನ್ಯ ಮುಖ್ಯಾದಿತೇಯೋಚ್ಚಕೋಟೀರಮಾಣಿಕ್ಯರೋಚಿರ್ಗಣಾಕೀರ್ಣರಾಜತ್ಪದಾಬ್ಜಾತ ವಿಖ್ಯಾತ ಸೂರ್ಯಾನಿಲಾಂಭೋವನೀಸೋಮಪಾವ್ಯೋಮಜೈವಾತೃಕಜ್ವಾಲಭೃದ್ರೂಪ ಚಿದ್ರೂಪತಾಪತ್ರಯಸ್ತೋಮನೀಲಾಭ್ರನಿರ್ವಾಪಣೋದ್ಯಜ್ಜಗತ್ರಾಣ ಮೋಕ್ಷಾಂಗನಾತ್ರಾಣಜನ್ಮಾದಿದುಃಖಾಂಧಕಾರಾಪನೋದಾರ್ಕಯಕ್ಷೇಶ ಸಂಪರ್ಕ ದುರ್ವಾರಕೀನಾಶಗರ್ವೌಘಸರ್ವಸ್ವವಿಧ್ವಂಸ ವಹ್ನಿತ್ರಯಾಧೀಶ ದೇಹತ್ರಯಾತೀತ ವೇದತ್ರಯಾಖ್ಯಾತ ರಾತ್ರೀಶ್ವರೋತ್ತಂಸನಾದ...... ಕಲಾತೀತ ಷಡ್ವರ್ಗನಿರ್ಧೂತ ವಾಙ್ಮನಸಾಭೇದ್ಯ ಶಾಸ್ತ್ರವ್ರಜಾಸಾಧ್ಯ ಷಟ್ಚಕ್ರಸಂಚಾರ ಸಿದ್ಧಾಂತಿಮಾಗಾರ ಶಕ್ತಿತ್ರಯಾಧಾರ ಮೂರ್ತಿತ್ರಯಾಕಾರ ವರ್ಣತ್ರಯಾವಾಸ ಕರ್ಮತ್ರಯಾಚ್ಛಿನ್ನ ಕಾಲತ್ರಯಾಭಿನ್ನ।

ರಾರಾಜಿತಾಷ್ಟಾಂಗಯೋಗಪ್ರತಿಷ್ಠಾಪನಾಚಾರ್ಯ ಯೋಗೀಂದ್ರ ಹೃದ್ಧಾಮ ನಿಸ್ಸೀಮ ನಿಷ್ಕಾಮ ನಿರ್ನಾಮ ನಿಶ್ಚಿಂತ ನಿರ್ಭ್ರಾಂತ ನಿಸ್ಸಂಗ ನಿರ್ಲಿಂಗ ನಿರ್ಲೇಪ ನಿಷ್ಪಾಪ ನಿಷ್ಪುಣ್ಯ ನಿರ್ಗಣ್ಯ ನಿರ್ಮಾಯ ನಿಷ್ಕಾಯ ನಿರ್ಮೋಹ ನಿರ್ಗೇಹ ನಿರ್ವಾದ ನಿರ್ಭೇದ ನಿಷ್ಕಾಲ ನಿಸ್ಥೂಲ ನಿಸ್ಸೂಕ್ಷ್ಮ ನಿರ್ಜಾತ ನಿರ್ನೀತ ನಿಸ್ತರ್ಷ ನಿಸ್ಪರ್ಶ ನಿರ್ವಾಚ್ಯ ನಿಶ್ಶೋಚ್ಯ ನಿಷ್ಕ್ರೋಧ ನಿರ್ಬೋಧ ನಿರ್ವಾಣ ನಿರ್ಮಾಣ ನಿರ್ನಾಥ

ಮಂಜಿನ ತುಂತುರವನ್ನೂ, ಕರ್ಪೂರದಂತೆ ತಾರೆಗಳಂತೆ, ಪರಿಶುದ್ಧವಾದ ಹಾಲಿನ ಸಮುದ್ರದಂತೆ, ಸ್ಫಟಿಕದಂತೆ ಸ್ಪಷ್ಟವಾಗಿ ಹೊಳೆಯುವ ಚಂದ್ರನ ಪ್ರಭೆಯಂತೆ, ದೇವತೆಗಳು ಧರಿಸುವ ವಜ್ರದ ಹಾರದಂತೆ, ಬೆಳ್ಳಿಯ ಬೆಟ್ಟದಂತೆ, ಇಂದ್ರನ ಆನೆಯಾದ ಐರಾವತದಂತೆ, ಆಕಾಶದ ಶುಭ್ರವಾದ ಮೋಡದಂತೆ, ಪ್ರಜ್ವಲಿಸುವ ಮುತ್ತಿನಂತೆ, ನಾಗೇಂದ್ರನ ಹೆಡೆಯ ಮಣಿಯ ಉಜ್ವಲ ಕಾಂತಿಯಂತೆ ಹೊಳೆಯುವ ಸೌಮ್ಯವಾದ ಶರೀರವನ್ನು ಹೊಂದಿರುವವನೆ, ಜ್ವಲಿಸುವ ಕೃಪೆಯೆನ್ನುವ ಕಡೆಗಣ್ಣೋಟವುಳ್ಳವನೆ, ನಂದೀಶ್ವರರೇ ಮೊದಲಾದವರ ಪ್ರಸನ್ನ ಮುಖಗಳ ಪರಿಶುದ್ಧವಾದ ಕಾಂತಿಯೆನ್ನುವ ಸರೋವರದಲ್ಲಿ ಹುಟ್ಟಿದ ಸೂರ್ಯನೆ, ಕಮಲದಂತಹ ಬಿಲ್ಲನ್ನೂ ವಜ್ರಾಯುಧದಂತೆ ಭಯವನ್ನುಂಟುಮಾಡುವ [ಆಯುಧವನ್ನೂ] ಹೊಂದಿರುವವನೆ, ಶ್ರೇಷ್ಠವಾದ ಹಾಗೂ ವಿಲಾಸಯುಕ್ತವಾದ ಪಾಶ, ಅಂಕುಶಗಳನ್ನು ಧರಿಸಿದವನೇ, ಹೊಳೆಯುವ ಉಲ್ಲಾಸದಿಂದ ಕೂಡಿದ ಹರಿತವಾದ ಕತ್ತಿಯನ್ನು ಕೈಯಲ್ಲಿ ಹಿಡಿದವನೆ, ಭಕ್ತರಿಗೆ ಕಲ್ಪವೃಕ್ಷದಂತಿರುವವನೆ, ಬ್ರಹ್ಮಾಂಡವನ್ನು ಪೀಡಿಸುವವರನ್ನು ಸಂಹರಿಸಿ ಅವರ ಶಿರೋಮಾಲೆಯನ್ನು ಸಂತೋಷದಿಂದ ಧರಿಸಿದವನೆ, ಸತ್ ಚಿತ್ ಆನಂದ ಸ್ವರೂಪನೆ, ನಾನಾ ಬಗೆಯ ಮಹಾಮಂತ್ರ ಬೀಜಾಕ್ಷರಗಳನ್ನು ಹೊಂದಿರುವವನೆ, ತಾರಕಾಸುರಬ್ರಹ್ಮಾಸುರರೆನ್ನುವ ರಾಕ್ಷಸರನ್ನು ಸಂಹರಿಸಿ, ಲೀಲೆಯನ್ನು ಪ್ರಕಟಪಡಿಸಿದವನೆ, ದಿಕ್ಕನ್ನೇ ವಸ್ತ್ರವಾಗಿ ಧರಿಸಿದವನೆ, ಕಮಲನೇತ್ರನೆ, ಬ್ರಹ್ಮ ಇಂದ್ರಾದಿ ಪ್ರಮುಖ ದೇವತೆಗಳ ಕಿರೀಟಗಳಲ್ಲಿ ಕೇವಣಿಸಿದ ಮಾಣಿಕ್ಯದ ಕಾಂತಿಪುಂಜದಿಂದ ಆವೃತವಾದ ಪಾದಕಮಲಗಳುಳ್ಳವನೆ, ಪ್ರಸಿದ್ಧರಾದ ಸೂರ್ಯ, ವಾಯು, ಜಲ, ಭೂಮಿ, ಕುಬೇರ, ಆಕಾಶ, ಚಂದ್ರ - ಈ ದೇವತೆಗಳಿಗೆ ಆಶ್ರಯದಾನಾಗಿರುವವನೆ, ಚಿದ್ರೂಪನೆ, ತಾಪತ್ರಯ ನಿವಾರಕನೆ, ನೀಲಾಕಾಶವನ್ನೆಲ್ಲ ವ್ಯಾಪಿಸಿರುವವನೆ, ಲೋಕವನ್ನು ಉಜ್ಜೀವಿಸುವವನೆ ಮೋಕ್ಷಾಂಗನೆಗೆ ಶಕ್ತಿ ಸ್ವರೂಪನೆ, ಜನ್ಮ ಜನ್ಮಗಳ ದುಃಖವೆನ್ನುವ ಕತ್ತಲೆಯನ್ನು ನಿವಾರಿಸುವಲ್ಲಿ ಸೂರ್ಯನಂತಿರುವವನೆ, ಯಕ್ಷರುಗಳ ಒಡೆಯನ ಸಂಪರ್ಕ

ನಿರ್ವ್ಯಾಥ ನಿರ್ಲೋಕ ನಿಸ್ತೋಕ ನಿರ್ಮುಕ್ತ ನಿಶ್ಛೋದ್ಯ ನಿಸ್ಸಾಧ್ಯ ನಿಷ್ಕರ್ಮ ನಿಷ್ಪತ್ರ ನಿರ್ಗೋತ್ರ ನಿರ್ಮೌಲ್ಯ ನಿಸ್ತೌಲ್ಯ ನಿಷ್ಕಾಷ್ಠ ನಿರ್ಗೋಷ್ಠ ನಿರ್ವರ್ಣ ನಿಷ್ಕರ್ಣ ನಿಶ್ಶಬ್ದ ನಿರ್ಲ್ಲಬ್ಧ ನಿಶ್ಶೂನ್ಯ ನಿರ್ಮಾನ್ಯ ನಿರ್ಲಕ್ಷ್ಯ ನಿರ್ದಕ್ಷ ಪಂಪಾವಿರೂಪಾಕ್ಷ........ ಸದ್ಭಕ್ತಸಂತಾನಸಂರಕ್ಷ ಘೋರಾಷ್ಟಪಾಶಾದಿಭಿರ್ಮೋಕ್ಷ ದಕ್ಷಾಧ್ವರಾರೇ ಪುರಾರೇ ಖಣಾರೇ ರುಜಾರೇ ಭವಾರೇ ನಮಸ್ತೇ ನಮಸ್ತೇಽಸ್ತು||

ಸುಪರ್ಣಾರೂಢಾರಾಧ್ಯಮಮಳಮನಿರ್ವಾಚ್ಯಮನಘಂ
ಕ್ಷಪಾಧೀಶಾದಿತ್ಯಾಗಣಿತಘನತೇಜೋಮಯಮಜಂ।
ಪ್ರಪೂರ್ಣಾನಂದಾತ್ಮಂ ನಿಗಮನುತನೆನ್ನಂ ಬಿಡದೆ ಕೂ
ರ್ತಪರ್ಣಾಪ್ರಾಣೇಶಂ ಪೊರೆಗೆ ಗುರುಪಂಪಾಪುರವರಂ ॥ ೧೧ ॥

ಹೊಂದಿರುವವನೆ, ನಿವಾರಿಸಲಾಗದ ಯಮನ ಗರ್ವವನ್ನು ಧ್ವಂಸಮಾಡಿದವನೆ, ಮೂರು ಬಗೆಯ ಅಗ್ನಿಗಳಿಗೆ ಒಡೆಯನಾದವನೆ, ಮೂರು ಬಗೆಯ ದೇಹಗಳಿಗೆ ಅತೀತನಾದವನೆ, ಋಗ್ ಯಜುರ್, ಸಾಮವೇದಗಳಲ್ಲಿ ಪ್ರಸಿದ್ಧವನಾದವನೆ, ರಾತ್ರೀಶ್ವರನೆ, (=ಚಂದ್ರನಂತೆ ಬೆಳಗುವವನೆ) ಕಲಾತೀತನೆ, ಅರಿಷಡ್ವರ್ಗಗಳನ್ನು ಧ್ವಂಸಮಾಡಿದವನೆ, ಮಾತು ಮನಗಳಿಗೆ ಅಭೇದ್ಯನಾದವನೆ, ಶಾಸ್ತ್ರ ಸಮೂಹಗಳ [ಗ್ರಹಿಕೆಗೆ] ಷಟ್ಚಕ್ರಗಳಲ್ಲಿ ಸಂಚರಿಸುವವನೆ, ಸಿದ್ಧಾಂತಗಳಿಗೆ ನೆಲೆಯಾದವನೆ, ಶಕ್ತಿತ್ರಯಗಳ ಆಧಾರ ಸ್ವರೂಪನೆ, ಸಿಕ್ಕದವನೆ, ತ್ರಿಮೂರ್ತಿಯೆ, ಮೂರು ವರ್ಣಗಳಿಗೆ ನೆಲೆಯಾದವನೆ, ಕರ್ಮತ್ರಯಗಳಿಂದ ಆವೃತನಾದವನೆ, ಕಾಲತ್ರಯಗಳಿಗೆ ಅಭಿನ್ನನಾದವನೆ, ಶೋಭಾಯಮಾನವಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಎಂಬ ಯೋಗಸಾಧನೆಯ ಅಂಗಗಳನ್ನು ನೆಲೆಗೊಳಿಸಿದ ಗುರುವೆ, ಶ್ರೇಷ್ಠ ಯೋಗಿಗಳ ಹೃದಯ ನಿವಾಸಿಯೆ, ಮೇರೆಯಿಲ್ಲದವನೆ, ಕಾಮರಹಿತನೆ, ನಾಮಾತೀತನೆ, ಚಿಂತಾವಿಮುಕ್ತನೆ, ಭ್ರಾಂತಿಯಿಲ್ಲದವನೆ, ಸಂಗರಹಿತನೆ, ಗಣನೆಗೆ ಸಿಗದವನೆ, ಮಾಯಾರಹಿತನೆ, ಕಾಯವಿಲ್ಲದವನೆ, ಮೋಹರಹಿತನೆ, ನೆಲೆಯೇ ಇಲ್ಲದವನೆ, ವಾದಾತೀತನೆ, ಭೇದಿಸಲು ಆಗದವನೆ, ಕಾಲಾತೀತನೆ, ಸ್ಥೂಲ-ಸೂಕ್ಷ್ಮ ರಹಿತನೆ, ಲಕ್ಷಣಗಳಿಲ್ಲದವನೆ, ಅವ್ಯಕ್ತನೆ, ಒಡೆಯನಿಲ್ಲದವನೆ, ಅಪೇಕ್ಷಾರಹಿತನೆ, ಸ್ಪರ್ಶಕ್ಕೆ ಸಿಗದವನೆ, ಕಣ್ಣಿಗೆ ಕಾಣಿಸದವನೆ, ದುಃಖದಿಂದ ದೂರಾದವನೆ, ಕ್ರೋಧವಿಲ್ಲದವನೆ, ಬೋಧರಹಿತನೆ, ಮರಣವಿಲ್ಲದವನೆ, ಸೃಷ್ಟಿಕರ್ತನೆ, ನಾಯಕ ರಹಿತನೆ, ವ್ಯಥೆಯಿಂದ ಮುಕ್ತನಾದವನೆ, ಲೋಕಕ್ಕತೀತನೆ, ಪುಣ್ಯರಹಿತನೆ, [ಸೃಷ್ಟಿ ಕಾರ್ಯದಿಂದ] ಬಿಡುಗಡೆ ಇಲ್ಲದವನೆ, ಸೋಜಿಗವಿಲ್ಲದವನೆ, ಅಸಾಧ್ಯನೆ, ಕರ್ಮರಹಿತನೆ, ಖಡ್ಗರಹಿತನೆ, ಗೋತ್ರರಹಿತನೆ, ಭಾವನಾರಹಿತನೆ, ನಿಸ್ತೌಲ್ಯನೆ, ಮೂರ್ಖನಲ್ಲದವನೆ, ಒಡನಾಟವಿಲ್ಲದವನೆ, ವರ್ಣರಹಿತನೆ, ಚುಕ್ಕಾಣಿ ಇಲ್ಲದವನೆ, ಶಬ್ದರಹಿತನೆ, ಅದೃಷ್ಟರಹಿತನೆ, ಶೂನ್ಯವಿಲ್ಲದವನೆ, ಪೂಜೆಗೆ ಸಿಗದವನೆ ಲಕ್ಷಣರಹಿತನೆ, ದಕ್ಷ ಸಂಹಾರಿಯೆ, ಪಂಪಾವಿರೂಪಾಕ್ಷನೆ, ....... ಸದ್ಭಕ್ತರನ್ನು ಚೆನ್ನಾಗಿ ರಕ್ಷಿಸುವವನೆ, ಘೋರವಾದ ಎಂಟು ಪಾಶಗಳನ್ನು ಕತ್ತರಿಸಿ ಕೈವಲ್ಯವನ್ನು ಅನುಗ್ರಹಿಸುವವನೆ, ದಕ್ಷನ ಯಜ್ಞವನ್ನು ಧ್ವಂಸಮಾಡಿದವನೆ, ತ್ರಿಪುರ ಸಂಹಾರಿಯೆ, ಯಾವ ಹಂಗೂ ಇಲ್ಲದವನೆ, ರೋಗರಹಿತನೆ, ಭವ ಸಂಹಾರಿಯೆ, ನಿನಗೆ ವಂದನೆ, ನಿನಗೆ ವಂದನೆ. ೧೧. ಗರುಡ ವಾಹನನಾದ ವಿಷ್ಣುವಿನ ಆರಾಧ್ಯಮೂರ್ತಿಯೆ, ಪರಿಶುದ್ಧನೆ, ಅವ್ಯಕ್ತನೆ, ಪಾಪರಹಿತನೆ,

ಜಯ ಜನನಭವಧ್ವಂಸಾ ಮೃಗಾಂಕಾವತಂಸಾ
ಜಯ ಭುಜಗಕಲಾಪಾ ಕಾಂಚನೋರ್ವೀಧ್ರಚಾಪಾ।
ಜಯ ವಿಬುಧವರೇಣ್ಯಾ ವೇದಶಾಸ್ತ್ರಾರ್ಥಗಣ್ಯಾ
ಜಯ ವಿಮಳಚಿದಂಗಾ ಶ್ರೀ ವಿರೂಪಾಕ್ಷಲಿಂಗಾ. ॥ ೧೨ ॥

ಇಂತಾದಿಮಧ್ಯಾವಸಾನರಹಿತನಂ ನಾದಬಿಂದುಕಲಾತೀತನಂ ದೇವಚೂಡಾಮಣಿಯಂ ಸಮಸ್ತದೇವತಾ ಸಾರ್ವಭೌಮನಂ ಬ್ರಹ್ಮೇಂದ್ರಾದಿ ಕುಲಸ್ವಾಮಿಯಂ ಜಗದುದಯಸ್ಥಿತಿಲಯಕಾರಣಸ್ವರೂಪನಂ ತಾರಕ ಬ್ರಹ್ಮಸ್ತೋತ್ರಪಾತ್ರನಂ ಸಕಲಚರಾಚರಗತನಂ ನಿಜಭಕ್ತಜನಾನಂದಾಬ್ಧಿವರ್ಧಿಷ್ಣುಸಂಪೂರ್ಣಚಂದ್ರನಪ್ಪ ವಿರೂಪಾಕ್ಷನಂ ಕೊಂಡಾಡಿ ತಣಿಯದೆಟ್ಟಿಂದೊಯ್ಯನೆ ಸಾರ್ದನಂತಭಕ್ತಿರಸಸುಧಾವಾರಾಶಿಯೊಳ್ಮೂಡಿ ಮುಳುಂಗಾಡುತ್ತುಂ ಪೂಜೆಯಂ ಮಾಡಿ ನೋಡಿ ಘನಸುಖದೊಳೋಲಾಡಿ ಮಗುಳ್ದು ಪಂಚಾಕ್ಷರೀವಲ್ಲಭನಂ ಬೀಳ್ಕೊಂಡು ತದ್ದೇವಾಗಾರಮಂ ಪೊಱಮಟ್ಟಾನಂದದಿಂದುದ್ಭಟಕ್ಷಿತೀಂದ್ರಚಂದ್ರಮಂ ತನ್ನಂ ಬರಿಸಿದ ದೇವಲಮಹಾಋಷೀಶ್ವರನಾಶ್ರಮಕ್ಕಭಿಮುಖನಾಗಿ ಬರೆವರೆ,

ಸುವಿವೇಕದಿಕ್ಕೆ ಪರಮೋ
ತ್ಸವದಾಡುಂಬೊಲನತೀವಪುಣ್ಯದ ತಾಣಂ।
ಶಿವಚರಣಭಕ್ತಿವಲ್ಲಿ ಬೆ
ಳೆವ ಧರೆಯೆನಲೆಸೆದುದಾಶ್ರಮಂ ದೇವಲನಾ ॥ ೧೩ ॥

ಚಂದ್ರ-ಸೂರ್ಯರಂತೆ ಅಗಣಿತವಾದ ಅತಿಶಯ ತೇಜಸ್ಸಿನಿಂದ ಕೂಡಿರುವವನೆ, ಪರಿಪೂರ್ಣ ಆನಂದ ಸ್ವರೂಪಿಯೆ, ವೇದಗಳಿಂದ ಸ್ತುತಿಸಲ್ಪಟ್ಟವನೆ, ಪಾರ್ವತಿಗೆ ವಲ್ಲಭನಾದ ಗುರು ಪಂಪಾಧಿನಾಥನೆ ನನ್ನನ್ನು ಪ್ರೀತಿಯಿಂದ ಸಲಹುವವನಾಗು, ೧೨. ಹುಟ್ಟು-ಸಾವುಗಳನ್ನು ಮೀರಿದವನೆ ನಿನಗೆ ಜಯವಾಗಲಿ, ಚಂದ್ರನನ್ನು ಆಭರಣವಾಗುಳ್ಳವನೆ ನಿನಗೆ ಜಯವಾಗಲಿ, ನಾಗಗಳನ್ನು ಧರಿಸಿದವನೆ, ಪೊಂಬೆಟ್ಟಕ್ಕೆ ಇಂದ್ರಚಾಪದಂತಿರುವವನೆ ನಿನಗೆ ಜಯವಾಗಲಿ, ದೇವತೆಗಳಲ್ಲಿ ಶ್ರೇಷ್ಠನೆ, ವೇದಶಾಸ್ತ್ರಾರ್ಥಗಳಲ್ಲಿ ಗಣ್ಯನಾದವನೆ ನಿನಗೆ ಜಯವಾಗಲಿ, ಪರಿಶುದ್ಧವಾದ ಆತ್ಮನೆ, ಶ್ರೀ ವಿರೂಪಾಕ್ಷಲಿಂಗನೆ ನಿನಗೆ ಜಯವಾಗಲಿ. ವ॥ ಹೀಗೆ ಆದಿ-ಮಧ್ಯ-ಅಂತ್ಯಗಳಿಲ್ಲದವನೂ, ನಾದ-ಬಿಂದು-ಕಲೆಗಳಿಗೆ ಅತೀತನೂ; ದೇವತೆಗಳ ತಲೆಮಣಿಯೂ, ಸಕಲ ದೇವತೆಗಳಿಗೆ ಸಾರ್ವಭೌಮನೂ, ಬ್ರಹ್ಮ-ಇಂದ್ರಾದಿಗಳ ಕುಲದೈವವೂ, ಜಗದ ಉತ್ಪತ್ತಿ-ಸ್ಥಿತಿ-ಲಯ ಕಾರಣ ಸ್ವರೂಪನೂ, ಬ್ರಹ್ಮನನ್ನು [ಸಂಕಟದಿಂದ] ಪಾರುಮಾಡಿ [ಅವನ] ಸ್ತೋತ್ರಕ್ಕೆ ಪಾತ್ರನಾದವನೂ; ಸಕಲ ಚರಾಚರ ವಸ್ತುಗಳಲ್ಲಿ ಅಡಗಿರುವವನೂ, ತನ್ನ ಭಕ್ತಜನರ ಆನಂದ ಸಾಗರವನ್ನು ಉಕ್ಕಿಸುವ ಪೂರ್ಣಚಂದ್ರನೂ ಆದ ವಿರೂಪಾಕ್ಷನನ್ನು ಕೊಂಡಾಡಿ ತೃಪ್ತನಾಗದೆ ಅಲ್ಲಿಂದ ಎದ್ದುಬಂದು ಸ್ವಾಮಿಯ ಬಳಿಬಂದು ತುದಿಮೊದಲಿಲ್ಲದ ಭಕ್ತಿರಸವೆಂಬ ಅಮೃತಸಾಗರದಲ್ಲಿ ಮೂಡಿ ಮುಳುಗಾಡುತ್ತ ಪೂಜೆಯನ್ನು ಮಾಡಿ, ಸ್ವಾಮಿಯನ್ನು ನೋಡಿ ಘನಸುಖದಲ್ಲಿ ಓಲಾಡಿ, ಅನಂತರ ಶಿವನಿಂದ ಬೀಳ್ಕೊಂಡು ಆ ದೇವಮಂದಿರದಿಂದ ಆನಂದದಿಂದ ಹೊರಬಂದ ಉದ್ಭಟಮಹಾರಾಜ ಚಂದ್ರಮನು ತನ್ನನ್ನು ಬರಮಾಡಿದ ದೇವಲಮಹರ್ಷಿಯ ಆಶ್ರಮಕ್ಕಿದಿರಾಗಿ ಬರುತ್ತಿರಲು, ೧೩. ಒಳ್ಳೆಯ ವಿವೇಕದ ವಾಸಸ್ಥಾನ, ಅತ್ಯಾನಂದದ

ಪುಣ್ಯಾಬ್ಧಿಯೆನಿಸಿ ವರ್ಣಿವ
ರೇಣ್ಯಾಶ್ರಮವೆಸೆಯಲಂದು ನೋಡುತ್ತುಂ ಲಾ।
ವಣ್ಯಮಯಂ ಪೊಕ್ಕುಜ್ವಲ
ಗಣ್ಯಾತೀತಪ್ರಮೋದದಿಂ ನಡೆತಂದಂ ॥ ೧೪ ॥

ಬರಬರಲು,

ಕೆಂಜೆಡೆ ಭದ್ರವಿದ್ರುಮಲತಾವಳಿ ಪೂಸಿದ ಭೂತಿ ಜತ್ತುಳಂ
ಮಂಜುಕಮಂಡುಲುಂ ಸುಟಿ ತರಂಗಚಯಂ ನಿಡುದೋಳದಾಗೆ ತಾಂ।
ರಂಜಿಸಿದಂ ಸುರೇಂದ್ರನುತದೇವಲನಿಂಗಡಲೆಂಬ ಪಾಂಗಿನಿಂ
ಸಂಜನಿತಪ್ರಮೋದನೆನಿಪುದ್ಭಟಭೂಭುಜನಗ್ರಭಾಗದೊಳ್ ॥ ೧೫ ॥

ಇಂತತಿಸತ್ಯಂ ಸಾಕಾರಂ ಬಡೆದೆಸೆವಂತೆ ಮನಂಗೊಳಿಪ ದೇವಲಮಹರ್ಷೀಶ್ವರನಂ ಕಂಡುನ್ನತ ಭಕ್ತಿಭರದಿಂದೆಟ್ಟಿಂದಡಿದಾವರೆಗಳ್ಗಭಿವಂದಿಸಿ ಮಗುಳ್ದು ನಿಲ್ತು ಮುಕುಳಿತಕರಸರೋಜನಾಗಿರ್ಪುದ್ಭಟ ಕ್ಷಿತೀಂದ್ರಚಂದ್ರಮನ ಸದ್ಭಾವಮಂ ಭಾವಿಸಿ ನೋಡಿ ಕೈವಿಡಿದತೀವ ಮಧುರೋಕ್ತಿಗಳಿಂ ನಿಜಾಸನೋಪ ಕಂಠದೊಳ್ಕುಳ್ಳಿರಿಸಿಕೊಂಡಮಲಿನದಂತದ್ಯುತಿ ಸಭಾಂತರಾಳಮಂ ತೀವೆ ತನ್ಮುನೀಂದ್ರನಿಂತೆಂದಂ॥

ಎಮ್ಮಂತೇವಾಸಿಯ ಮಾ
ತಂ ಮೀಱದೆ ಕಡು ಬಟಲ್ದು ನೀಂ ಬಂದೆಯೆನು।
ತ್ತಂ ಮುನಿನಾಥಂ ನೃಪವರ
ನಂ ಮಧುರೋಕ್ತಿಗಳಿನುಪಚರಿಸುತಿಂತೆಂದಂ ॥ ೧೬ ॥

ಆಶ್ರಯಸ್ಥಾನ, ಹೆಚ್ಚಿನ ಪುಣ್ಯದ ನೆಲೆ, ಶಿವನ ಪಾದಗಳಲ್ಲಿ ಭಕ್ತಿಯೆಂಬ ಬಳ್ಳಿ ಬೆಳೆಯುವ ಭೂಮಿ ಎನ್ನುವಂತೆ ಆ ದೇವಲನ ಆಶ್ರಮ ಶೋಭಿಸಿತು. ೧೪. ಪುಣ್ಯಸಾಗರವೆನ್ನಿಸಿ ವರ್ಣನೆಗೆ ಶ್ರೇಷ್ಠವಾದ ಆಶ್ರಮವು ಅಂದು ಶೋಭಿಸಿರಲು ಅದನ್ನು ನೋಡುತ್ತ ಸುಂದರಾಂಗನಾದ ಉದ್ಭಟನು ಪ್ರವೇಶಿಸಿ, ಉಜ್ವಲವೂ ಎಣೆಯಿಲ್ಲದ್ದೂ ಆದ ಸಂತಸದಿಂದ ನಡೆದುಬಂದನು. ವ॥ [ಹೀಗೆ] ಬರುತ್ತಿರಲು, ೧೫. ದೇವೇಂದ್ರನಿಂದ ವಂದಿತನೂ ಪ್ರಖ್ಯಾತನೂ ಆದ ಆ ದೇವಲಮುನಿಯ ಕೆಂಜೆಡೆಯೆ ಶ್ರೇಷ್ಠವಾದ ಹವಳದ ಬಳ್ಳಿ, ಧರಿಸಿದ ವಿಭೂತಿಯೆ ನೊರೆ, ಮಂಜುಳವಾದ ಕಮಂಡಲುವೆ ಸುಳಿ, ನೀಳ ತೋಳುಗಳೇ ಅಲೆಗಳು ಎನ್ನುವಂತೆ ಸಮುದ್ರದೋಪಾದಿಯಲ್ಲಿ ಇರುತ್ತ ಸಂತೋಷವೇ ಮೈತಳೆದು ಬಂದಂತಿರುವ ಉದ್ಭಟ ಮಹಾರಾಜನ ಇದಿರಿನಲ್ಲಿ ಶೋಭಿಸಿದನು. ವ॥ ಹೀಗೆ ಸತ್ಯವೇ ಸಾಕಾರಗೊಂಡಂತೆ ಮನಸೆಳೆವ ದೇವಲಮಹರ್ಷಿಯನ್ನು ಕಂಡು, ಹೆಚ್ಚಿನ ಭಕ್ತಿಭಾವದಿಂದ ನಡೆದುಬಂದು ಪಾದಕಮಲಗಳಿಗೆ ನಮಿಸಿ, ಕರಕಮಲಗಳನ್ನು ಮುಗಿದು ನಿಂತಿರುವ ಉದ್ಭಟಮಹಾರಾಜ ಚಂದ್ರಮನ ಸದ್ಭಾವವನ್ನು ಚೆನ್ನಾಗಿ ನೋಡಿ, ಕೈಹಿಡಿದು ಅತಿ ಮಧುರವಾದ ಮಾತುಗಳಿಂದ ತನ್ನ ಪೀಠದ ಬಳಿ ಕುಳ್ಳಿರಿಸಿಕೊಂಡು ಪರಿಶುದ್ಧವಾದ ಹಲ್ಲಿನ ಕಾಂತಿ ಸಭೆಯ ನಡುಭಾಗದಲ್ಲಿ ಹರಡಿರಲು ಆ ಮುನೀಂದ್ರನು ಹೀಗೆಂದನು: ೧೬. ನಮ್ಮ ಶಿಷ್ಯನ ಮಾತನ್ನು ಕಡೆಗಣಿಸದೆ ಹೆಚ್ಚಿನ ಆಯಾಸಗೊಂಡು ನೀನಿಲ್ಲಿಗೆ ಬಂದೆ ಎಂದು ಮುನಿಗಳೊಡೆಯನು ಮಹಾರಾಜನನ್ನು

ಇನಿತುದಿನಂ ಜನ್ನಮನೊ
ಯ್ಯನೆ ತೊಡಗಲ್ಬಂದು ಪೀಡಿಸುವ ದಾನವನಾ।
ತನ ಗರ್ಜನವನೆ ಯಡಗಿಸಿ
ಘನಮಖಮಂ ಮಾಡಿಸಲ್ಕೆ ನೀಂ ಬಂದೆ ನೃಪಾ ॥ ೧೭ ॥

ನಿನ್ನ ಸಹಾಯತೆಯಿಂದಾಂ
ಜನ್ನಮನಿನ್ನೆಸಗಿ ಶಂಕರಂಗರ್ಪಿಪೆನೆಂ।
ದುನ್ನತಹರ್ಷದಿನೆನಲಾ
ಸನ್ನುತಮುನಿವರನೊಳರಸನಂದಿಂತೆಂದಂ ॥ ೧೮ ॥

ಆನೇತರವಂ ದಿವ್ಯ
ಜ್ಞಾನಿಯೆ ಭವದೀಯಕರುಣದಿಂದಂ ಗೆಲ್ದಾ।
ದಾನವನಂ ತನ್ಮಖಮಂ
ಸಾನಂದದೆ ಕಾವೆನೆಂದನುದ್ಭಟದೇವಂ ॥ ೧೯ ॥

ಇಂತೆನೆ ಮುನೀಶ್ವರಂ ಮೆಚ್ಚಿ ನಿಚ್ಚಂ ವಿರೂಪಾಕ್ಷನಡಿದಾವರೆಗಳಂ ಸೇವಿಸಿಕೊಂಡಿಲ್ಲಿ ಕೆಲವುದಿನವಿದ್ದೆಮ್ಮ ಮಖಮಂ ರಕ್ಷಿಸಿತದ್ರಾಕ್ಷಸನಂ ಶಿಕ್ಷಿಸಿ ಜಗಕ್ಕೆ ಶಾಂತಿಯಂ ಮಾಡಿ ಸತ್ಕೀರ್ತಿಗಳಂ ಪಡೆವುದೆಂದತಿವಿನಯೋಕ್ತಿಗಳಿಂದುದ್ಭಟಕ್ಷಿತೀಂದ್ರಚಂದ್ರಮನಂ ಪರಸಿ ಬೀಟ್ಕೊಂಡು ಬೀಡಿಂಗಾನಂದದಿಂ ಸಮಸ್ತಕುಶಲವರ್ಧಕಿಗಳಂ ಕರೆಯಿಸಿ ಬಟಿಕವರ್ಗಣಿಕೆಗಸದಳಮಾದ ಪಸದನಮನಿತ್ತು ತಮ್ಮಾಚಾರ್ಯ್ಯರಂ ಕೂಡಿಸಿ ಯುತ್ತುಂಗತುಂಗಭದ್ರಾನದೀತೀರದೊಳಾಮ್ನಾಯೋಕ್ತದಿಂ ಯಾಗಮಂಟಪಮಂ ವಿರಚಿಸೆಂದು ನೇಮಿಸಿ ಕಳುಪಿ ತದ್ದೇವಲಮ ಹರ್ಷೀಶ್ವರಂ ಪಂಚಾಕ್ಷರೀಮಂತ್ರತತ್ಪರನಾಗಿ ತೊಳಗಿ ಬೆಳಗುತ್ತಿರೆ,

ಮಧುರವಾದ ಮಾತುಗಳಿಂದ ಉಪಚರಿಸಿ [ಮತ್ತೆ] ಹೀಗೆಂದನು: ೧೭. ಮಹಾರಾಜಾ, ಇಷ್ಟು ದಿವಸ ಯಜ್ಞವನ್ನು ಮೆಲ್ಲನೆ ಪ್ರಾರಂಭಿಸಿರಲು ನಮ್ಮೀ ಯಜ್ಞಶಾಲೆಗೆ ಬಂದು ತೊಂದರೆ ಮಾಡುತ್ತಿರುವ ರಾಕ್ಷಸನ ಆ ಗರ್ಜನೆಯನ್ನು ಅಡಗಿಸಿ ಹಿರಿದಾದ ಈ ಯಜ್ಞವನ್ನು ನಡೆಸಲು ನೀನು ಬಂದಿರುವೆ. ೧೮. ನಿನ್ನ ಸಹಾಯದಿಂದ ನಾನು ಯಜ್ಞವನ್ನು ಇನ್ನು ಮಾಡಿ [ಅದನ್ನು] ಶಿವನಿಗರ್ಪಿಸುವೆನು ಎಂದು ಅತ್ಯಾನಂದದಿಂದ ಮುನಿಯು ಹೇಳಲು, [ಅದಕ್ಕೆ ಪ್ರತಿಯಾಗಿ] ಹೊಗಳಲ್ಪಡುವ ಮುನಿಗಳೊಡೆಯನಿಗೆ ಅರಸನು ಆಗ ಹೀಗೆಂದು ಹೇಳಿದನು: ೧೯. ದಿವ್ಯಜ್ಞಾನಿಯೆ, ನಾನೆಷ್ಟರವನು. ತಮ್ಮ ಕರುಣದಿಂದ ಆ ರಾಕ್ಷಸನನ್ನು ಗೆದ್ದು ಆ ಮೂಲಕ ಯಜ್ಞವನ್ನು ಸಂತಸದಿಂದ ರಕ್ಷಿಸುವೆನು ಎಂದು ಉದ್ಭಟನು ಹೇಳಿದನು. ವ॥ ಹೀಗೆ ಹೇಳಲು, ಮುನೀಶ್ವರನು ಆ ಮಾತಿಗೆ ಮೆಚ್ಚಿ, ನಿತ್ಯವೂ ವಿರೂಪಾಕ್ಷನ ಪಾದಕಮಲಗಳನ್ನು ಸೇವಿಸಿಕೊಂಡು ಕೆಲವು ಕಾಲ ನಮ್ಮಲ್ಲಿದ್ದು ನಮ್ಮ ಯಜ್ಞವನ್ನು ರಕ್ಷಿಸಿ ಆ ರಾಕ್ಷಸನನ್ನು ಶಿಕ್ಷಿಸಿ ಲೋಕಕ್ಕೆ ನೆಮ್ಮದಿಯನ್ನುಂಟುಮಾಡಿ ಸತ್ಕೀರ್ತಿಯನ್ನು ಪಡೆಯುವುದು ಎಂದು ಅತಿ ವಿನಯದಿಂದ ನುಡಿದು ಉದ್ಭಟಮಹಾರಾಜ ಚಂದ್ರಮನನ್ನು ಆಶೀರ್ವದಿಸಿ ಕಳುಹಿಸಿ, ಬೀಡಿಗೆ ಆನಂದದಿಂದ [ಬಂದು] ಚತುರರಾದ ಎಲ್ಲಾ ಬಡಗಿಗಳನ್ನು ಕರೆಯಿಸಿ ಅವರಿಗೆ ಎಣಿಸಲಸಾಧ್ಯವಾದ ಸಂಪತ್ತನ್ನಿತ್ತು, ವೇದಗಳಲ್ಲಿ ಹೇಳಿರುವಂತೆ ಪವಿತ್ರವಾದ ತುಂಗಭದ್ರೆಯ ದಡದಲ್ಲಿ ಯಾಗಶಾಲೆಯನ್ನು ನಿರ್ಮಿಸಿ ಎಂದು ಆಜ್ಞೆಮಾಡಿ [ಅವರನ್ನು]

ಜಟಿ ಜನವರನಂ ಬಿಟ್ಟುಕ್ಕೊಂಡು ಸಂರಂಭದಿಂದು
ದ್ಭಟಮಹಿಪತಿ ಬಂದೊಂದುಜ್ವಳಸ್ಥಾನದೊಳ್ ತಾಂ।
ಕಟಕಮನೊಲವಿಂದಂ ಬಿಟ್ಟು ಸಂತೋಷದಿಂದಂ
ನಿಟಿಲನಯನನಂ ಕೂರ್ತರ್ಚಿಸುತ್ತಿರ್ದನೊಳ್ಪಿಂ ॥ ೨೦ ॥

ಶ್ರೀಪಂಪಾಪುರಪತಿಯಂ
ತಾಪತ್ರಯದೂರನಂ ನಿರಂಜನನಂ ಚಿ।
ದ್ರೂಪನನರ್ಚಿಸುತನಿಶಂ
ಭೂಪಕುಲಾಗ್ರೇಶನುದ್ಭಟಂ ರಂಜಿಸಿದಂ ॥ ೨೧ ॥

ಮತ್ತಮಾಸಮಸ್ತಲೋಕೈಕನಾಯಕನಪ್ಪ ಶ್ರೀಗುರುವಿರೂಪಾಕ್ಷನಂ ತ್ರಿಕಾಲದೊಳ್ನಿಚ್ಚಂ ಪೂಜೆಯಂ ಮಾಡಿ ಮಗುಟ್ದಿ ಬಂದಾದೇವಲ ಋಷೀಶ್ವರನಿಂದಗಣಿತಶೈವಾಗಮಂಗಳಂ ಕೇಳುತ್ತುಂ ಮಹಾಧ್ವರ ಕಾಲಂ ಬರ್ಪನ್ನೆವರಂ ದಿವಸಂಗಳಂ ಬಂಜೆಯಿಲ್ಲದುತ್ತುಂಗದಾನಂಗಳಂ ಮಾಡುತ್ತುದ್ಭಟಕ್ಷಿತೀಂದ್ರಚಂದ್ರಮನಿರೆಯಿರೆ,

ಸುತ್ತಿ ಮುಗುಳ್ತ ಜಾದಿಯನಲರ್ಚಿಸಿ ಧೂಳಿಯಿನಿಂದುಕಾಂತಿಯಂ
ಮುತ್ತಿ ಪಿಕಪ್ರಣಾದಮನಡಂಗಿಸಿ ನೈದಿಲ ಕಂಪನೈದೆ ಪೊ।
ತ್ತೆತ್ತಿ ಸರೋಜದೈಸಿರಿಯನೊಯ್ಯನೆ ಸಣ್ಣಿಸಿ ಪಶ್ಚಿಮಾನಿಲೋ
ದ್ವೃತ್ತಿಯನೊಲ್ದುತೀಡಿದುದು ಮೂಡಣಗಾಳಿ ಹಿಮಪ್ರವೇಶದೊಳ್ ॥ ೨೨ ॥

ಅತಿಶೀತಳಕಂದು ಹಿಮ
ಕ್ಷಿತಿಧರಮಂ ಸಾರ್ದು ನಡೆಯಲಳ್ಕಿ ನಡೆದನು।
ನ್ನತದಕ್ಷಿಣಾಯನದೊಳಾ
ತತತುಹಿನಾಚಳದೊಳೊಪ್ಪುವಂಬುಜಮಿತ್ರಂ ॥ ೨೩ ॥

ಕಳುಹಿಸಿ ಆ ದೇವಲ ಮಹರ್ಷಿಯು ತಮ್ಮ ಗುರುಗಳೊಡನೆ ಪಂಚಾಕ್ಷರೀಮಂತ್ರದಲ್ಲಿ ಆಸಕ್ತನಾಗಿ ತೇಜಸ್ಸಿನಿಂದ ಬೆಳಗುತ್ತಿರಲು, ೨೦. ಋಷಿಶ್ರೇಷ್ಠನಿಂದ ಬೀಳ್ಕೊಂಡು ಸಂಭ್ರಮದಿಂದ ಬಂದ ಉದ್ಭಟಮಹಾರಾಜನು ಒಂದು ಸುಂದರವಾದ ತಾಣದಲ್ಲಿ ಸೈನ್ಯವನ್ನು ಸಂತಸದಿಂದ ಬೀಡುಬಿಡಿಸಿ ಹಣೆಗಣ್ಣನಾದ ಶಿವನನ್ನು ಹೆಚ್ಚಿನ ಸಂಭ್ರಮದಿಂದ ಪೂಜಿಸುತ್ತಿದ್ದನು. ೨೧. ಶ್ರೀಪಂಪಾಪುರದ ಒಡೆಯನನ್ನು, ತಾಪತ್ರಯಗಳಿಂದ ಮುಕ್ತನಾದವನನ್ನು, ಪರಮಾತ್ಮನನ್ನು, ಚಿದ್ರೂಪನನ್ನು, ಎಡೆಬಿಡದೆ ಪೂಜಿಸುತ್ತ ರಾಜವಂಶದಲ್ಲಿ ಶ್ರೇಷ್ಠನಾದ ಉದ್ಭಟನು ಶೋಭಿಸಿದನು. ವ॥ ಮತ್ತೆ ಆ ಸಕಲ ಲೋಕಕ್ಕೆ ಏಕಮಾತ್ರ ಒಡೆಯನಾದ ಶ್ರೀಗುರು ವಿರೂಪಾಕ್ಷನನ್ನು ದಿನವೂ ಮೂರು ಕಾಲಗಳಲ್ಲಿ ಪೂಜಿಸಿ ಹಿಂದಿರುಗಿ ಬಂದು ಆ ದೇವಲ ಮಹರ್ಷಿಯಿಂದ ಅಸಂಖ್ಯವಾದ ಶೈವಾಗಮಗಳನ್ನು ಕೇಳುತ್ತ ಮಹಾಯಜ್ಞದ ಕಾಲವು ಬರುವವರೆಗೆ ದಿವಸಗಳು ಬಂಜೆಯಾಗದಂತೆ ಶ್ರೇಷ್ಠ ದಾನಗಳನ್ನು ಮಾಡುತ್ತ ಉದ್ಭಟ ಮಹಾರಾಜಚಂದ್ರಮನಿರುತ್ತಿರಲು, ೨೨. ಶಿಶಿರ ಋತುವಿನ ಆಗಮನವಾಗುತ್ತಿದ್ದಂತೆ ಮೂಡಣ ಗಾಳಿಯು ಮೆಲ್ಲನೆ ತೀಡಿ ಮುಚ್ಚಿದ ಜಾಜಿಯನ್ನು ವಿಕಸಿಸಿ, ಧೂಳಿನಿಂದ ಚಂದ್ರನ ಕಾಂತಿಯನ್ನು ಮುತ್ತಿ ಕವಿದು, ಕೋಗಿಲೆಯ ಕೂಜನವನ್ನು ಅಡಗಿಸಿ, ಸುವಾಸನೆಯನ್ನು ಚೆನ್ನಾಗಿ ಹೊತ್ತುಕೊಂಡು, ತಾವರೆಯ ಸಂಪತ್ತನ್ನು ಮೆಲ್ಲನೆ ಬಡವಾಗಿಸಿ, ಪಶ್ಚಿಮದಿಕ್ಕಿನ ಗಾಳಿಯ ಸೊಕ್ಕನ್ನು ಇಷ್ಟಪಟ್ಟು ಹೊಸಕಿ ಹಾಕಿತು. ೨೩. ಹಿಮಾಲಯದಲ್ಲಿ ಸೂರ್ಯನು ದಕ್ಷಿಣದಿಕ್ಕಿಗೆ ಚಲಿಸುವ ಕಾಲದಲ್ಲಿ ಹೈಮಾಚಲದ

ಘನತರಶೀತದೇಟಿಗ್ಗಿಗುಱು ತನ್ನ ಮನಃಪ್ರಿಯೆಯಾದ ಪದ್ಮಿನೀ
ವನಿತೆ ಬಿಗುರ್ತು ತಾಂ ಕ್ಷಯಮನೈದಿರೆ ಕಂಡು ತದೀಯಚಿಂತೆಯಿಂ।
ತನು ಪರಿಪಾಂಡುರತ್ವಮನೆ ತಾಳ್ದುದೊ ಮೇಣೆರದೆಂಬವೊಲ್ತುಪಾ
ರನಿಕರಲಿಪ್ತಮಾದ ರವಿಮಂಡಲಮೊಪ್ಪುಗುಮಂದು ಮಾಗಿಯೊಳ್ ॥ ೨೪ ॥

ನೇಸರ ಬಿಂಬಂ ಮಂಜುಱು
ಬಾಸಣಿಸಲ್ಮೇಲುದಿನೊಳಡಂಗಿ ವಿಯತ್ತೆಂ।
ಬಾಸತಿಯ ರನ್ನದಾಳಿಯ
ಮೈಸಿರಿಯನೆ ಪೋಲ್ತು ಮಾಗಿಯೊಳ್ ಶೋಭಿಸುಗುಂ ॥ ೨೫ ॥

ಚಳಿಗಳ್ಕಿ ತರಣಿ ರಥಮಂ
ಘಳಿಲನೆ ನಡೆಸಲ್ಕಮಂತು ಪೆರ್ಚಿತು ನಿಶೆಯು।
ಜ್ವಳಿಪ ದಿವದಲ್ಲಿ ಸರಿದುವು
ಗಳಿಗೆಗಳೊಂದೆರಡುತೋರ್ಪ ಮಾಗಿಯ ದಿನದೊಳ್ ॥ ೨೬ ॥

ಅವಿವೇಕಿಯಾದ ನೃಪನೊ
ಪ್ಪುವ ಪುಣ್ಯಂ ತೀರ್ದು ದೋಷಮುಂ ಪೊಂಗುವವೋಲ್।
ದಿವಸಂ ಘೋಂಕೆನೆ ತೀರ್ದೋ
ಡುವುದು ನಿಶೀಥಿನಿಯದೈದೆ ತುಹಿನಾಗಮದೊಳ್ ॥ ೨೭ ॥

ಪೊಸಪನ್ನೀರೊಳ್ ಲತಾಂತಸ್ತಬಕಮನೊಲವಿಂ ತೊಯ್ದು ಭರ್ತಾರನಾದ
ಬ್ಜಸಖಂ ಮೇಣ್ಬೆಟ್ಟಗಲ್ದಾದಿವಸವಧುಗೆ ತೋರ್ಪೆಲ್ಲಕೋಪಾಗ್ನಿಯಂಶೋ।
ಭಿಸುವಸ್ವಪ್ನೇಂದ್ರದಿಗ್ಭಾಮಿನಿಯುಪಶಮನಂ ಗೆಯ್ಯಲೊಲ್ದಾಂತಳೆಂಬಂ
ತೆಸೆಗುಂ ಮುಮ್ಮಾಗಿಯೊಳ್ಮೂಡುವ ಹಿಮರುಚಿಬಿಂಬಂ ತಮಶ್ಶೈಲ ಶಂಬಂ ॥ ೨೮ ॥

ತೀವ್ರವಾದ ಶೀತಬಾಧೆಗೆ ಹೆದರಿ ಅದನ್ನು ಸಮೀಪಿಸಿ ಹೋಗಲಾರದೆ ನಡೆದನು. ೨೪. ಹೆಚ್ಚಿನದಾದ ಶೀತಬಾಧೆಗೆ ತನ್ನ ಪ್ರೇಯಸಿಯಾದ ಕಮಲಿನಿಯು ಬಹಳವಾಗಿ ಹೆದರಿ ಕ್ಷೀಣಿಸಿರಲು ಅದನ್ನು ನೋಡಿ, ಅವಳ ಚಿಂತೆಯಿಂದಾಗಿ ದೇಹವು ಇರಲಾರದೆ ಕಾಮಾಲೆರೋಗವನ್ನು ಪಡೆಯಿತೋ ಎನ್ನುವಂತೆ ಹಿಮದಿಂದ ಕವಿಯಲ್ಪಟ್ಟ ಸೂರ್ಯಮಂಡಲವು ಅಂದು ಶಿಶಿರ ಋತುವಿನಲ್ಲಿ [ಮಂಕಾಗಿ] ಬೆಳಗುತ್ತಿದ್ದಿತು. ೨೫. ಮಾಗಿಯ ಕಾಲದಲ್ಲಿ ಸೂರ್ಯಬಿಂಬವನ್ನು ಮಂಜು ವಿಶೇಷವಾಗಿ ಕವಿದಿರಲು ಆಕಾಶವೆಂಬ ಹೆಣ್ಣಿನ ಸೀರೆಯ ಸೆರಗಿನಲ್ಲಿ ಅಡಗಿದ ರತ್ನಖಚಿತ ಮಾಂಗಲ್ಯದ ಶೋಭೆಯನ್ನು ಹೋಲಿಕೆ ಪಡೆದು [ಸೂರ್ಯಬಿಂಬವು] ಶೋಭಿಸಿರುವುದು. ೨೬. ಮಾಗಿಯ ದಿನಗಳಲ್ಲಿ ಸೂರ್ಯನು ಚಳಿಗೆ ಹೆದರಿ ತನ್ನ ರಥವನ್ನು ಬೇಗ ಬೇಗನೆ ನಡೆಸಲಾಗಿ ಕತ್ತಲೆಯು ಚೆನ್ನಾಗಿ ಹಬ್ಬಿತು. ಪ್ರಕಾಶಮಾನವಾದ ಹಗಲು ಒಂದೆರಡು ಗಳಿಗೆ ಕಾಣಿಸಿಕೊಂಡು ಸರಿಯಿತು. ೨೭. ಮಹಾರಾಜನ ಮೂರ್ಖತನದಿಂದ ಹಿರಿದಾದ ಪುಣ್ಯವು ಮುಗಿದು ದೋಷಗಳು ಹೆಚ್ಚುವ ರೀತಿಯಲ್ಲಿ, ಹಿಮವು ಕವಿಯುತ್ತಿದ್ದಂತೆ ದಿನವು ಬಹುಬೇಗನೆ ಮುಗಿದು ದೌಡಾಯಿಸಲು ಸರಿರಾತ್ರಿಯು ಸಮೀಪಿಸುತ್ತಿದ್ದಿತು. ೨೮. ಮಾಗಿಯು ಹೊಸ ಪನ್ನೀರಿನಲ್ಲಿ

ತಂಗೊಳದೊಳಾಡಿ ತೊಯ್ದು ಮ
ನಂಗೊಳಿಪರಸಂಚೆಯಂತೆ ನವಶೀತಳದು।
ತ್ತುಂಗತೆಯಂ ಪಸರಿಸುತುಂ
ಕಂಗೆಸೆವುದು ಮಾಗಿಯೊಳ್ಸುಧಾಕರಬಿಂಬಂ ॥ ೨೯ ॥

ಮಂಜು ಮುಸುಂಕೆ ಮಗುಟ್ದಿತಿ
ಭಂಜಿಸುವುವು ಮಧುರವಾಕ್ತತಿಗೆ ಕುಜನರ ಹೃ।
ತ್ಕಂಜಂಗಳ್ ಕೊಱಗುವವೋಲ್
ಮಂಜುಳಶಿಶಿರಾತಿರೇಕದೊಳ್ಕಮಲಂಗಳ್ ॥ ೩೦ ॥

ಮುಚ್ಚಿ ಮುಸುಂಕಿದಿಬ್ಬನಿಯ ನುಣ್ಪನಿಗಳ್ಮಿಗೆ ಸಿಲ್ಕೆ ತೋಱುವಾ
ಪಚ್ಚೆಪಸುರ್ಪಳಂಚುವೆಲೆಯಾಂತು ವಿರಾಜಿಸುಗುಂ ಕುಜೋತ್ಕರಂ।
ನಿಚ್ಚಮಲಂಪಿನಿಂಪಿನ ವಸಂತಮನಂದುಱೆ ಪಾರ್ದು ನೊಂದು ತಾಂ
ಬೆಚ್ಚನೆ ಬಾಷ್ಪವಾರಿಯನೆ ತುಂಬಿ ವಿಜೃಂಭಿಸುವಂತೆ ಮಾಗಿಯೊಳ್ ॥ ೩೧ ॥

ನುತಪುಣ್ಯಫಲಂ ತೀರ್ದಾ
ಕ್ಷಿತಿಪನ ಸಿರಿ ಮೆಲ್ಲಮೆಲ್ಲನೊಳಗಾಗುವವೋಲ್।
ವಿತತತಟಾಕೋದರಸಂ
ಚಿತಸಲಿಲಂ ತೀರ್ದುದಮಮ ಶಿಶಿರಾಗಮದೊಳ್ ॥ ೩೨ ॥

ಹೂಗಳನ್ನು ಪ್ರೀತಿಯಿಂದ ಒದ್ದೆಮಾಡಿರಲು ದಿನಪತಿಯಾದ ಸೂರ್ಯನು [ತನ್ನ ಪ್ರಿಯೆಯನ್ನು] ಅಗಲಬೇಕಾದಾಗ, ಆ ದಿವಸ ವಧುವಿನ ಮೇಲೆ ಮುನಿದು [ಸೂರ್ಯನು] ಕೋಪಾಗ್ನಿಯನ್ನು ಪ್ರಕಟಪಡಿಸಲು ಶೋಭಾಯಮಾನವಾದ ಪೂರ್ವದಿಕ್ಕೆಂಬ ಸುಂದರಿಯು [ಅವನನ್ನು] ಸಮಾಧಾನಿಸಲು ಕಾರ್ಯಪ್ರವೃತ್ತಳಾದಳೆಂಬಂತೆ ಮಾಗಿಯ ಪ್ರಾರಂಭದಲ್ಲಿ ಕಾಣಿಸಿಕೊಳ್ಳುವ ಕತ್ತಲೆಯೆಂಬ ಪರ್ವತಕ್ಕೆ ವಜ್ರಾಯುಧದಂತಿರುವ ಚಂದ್ರಬಿಂಬವು ಶೋಭಿಸಿರುವುದು. ೨೯. ತಣ್ಣನೆಯ ಕೊಳಗಳಲ್ಲಿ ಓಲಾಡಿ ಒದ್ದೆಯಾಗಿ ಮನಸೆಳೆಯುವ ರಾಜಹಂಸದಂತೆ ಹೊಸದಾದ ಶೈತ್ಯದ ಹೆಚ್ಚಳವನ್ನು ಎಲ್ಲೆಡೆ ಹರಡುತ್ತ ಮಾಗಿಯಲ್ಲಿ ಚಂದ್ರಬಿಂಬವು ಕಣ್ಣಿಗೆ ಅಂದವಾಗಿ ಕಾಣಬರುವುದು. ೩೦. ದುಷ್ಟರ ಹೃದಯ ಕಮಲವು ಮಧುರವಾದ ಮಾತುಗಳಿಗೆ ಬಾಡುವಂತೆ ಮಂಜು ಮುಸುಕಲು ಮನೋಹರವಾದ ಶಿಶಿರದ ಅತಿರೇಕಕ್ಕೆ ಒಳಗಾದ ಕಮಲಗಳು ಅಡಿಮೇಲಾಗಿ ಬಾಗುವವು. ೩೧. ಮಾಗಿಯ ಕಾಲದಲ್ಲಿ ದಟ್ಟವಾಗಿ ಕವಿದ ಇಬ್ಬನಿಯ ಸುಂದರ ಹನಿಗಳು ಅಧಿಕವಾಗಿ ಕಣ್ಣಿಗೆ ಕಾಣುವ ಚಿಗುರೆಲೆಗಳ ಮೇಲೇರಿ ತೊಡರಿಕೊಂಡು ಥಳಥಳಿಸುವ ಗಿಡಗಳು ನಿತ್ಯವೂ ಸಂತಸವನ್ನುಂಟುಮಾಡುವ, ಹಿತವನ್ನೀಯುವ ವಸಂತನ ಆಗಮನವನ್ನು ಕಾತುರದಿಂದ ನಿರೀಕ್ಷಿಸುತ್ತ [ಮಾಗಿಯ ಚಳಿಗೆ] ನೊಂದು ಬೆಚ್ಚನೆಯ ಕಣ್ಣೀರನ್ನು ತುಂಬಿಕೊಂಡು ಶೋಭಿಸುವಂತೆ ಅಂದು ಅವು ನೋಡಲು ಅಂದವಾಗಿದ್ದವು. ೩೨. ಸ್ತುತ್ಯರ್ಹವಾದ ಪುಣ್ಯದ ಫಲವು ಮುಗಿದ ಮಹಾರಾಜನ ಸಂಪತ್ತು ಮೆಲ್ಲಮೆಲ್ಲನೆ ಮಾಯವಾಗುವ ರೀತಿಯಲ್ಲಿ ವಿಶಾಲವಾದ ಕೆರೆಯಲ್ಲಿ ತುಂಬಿದ ನೀರು

ಮತ್ತಮದಲ್ಲದೆ,

ಕೊಂಕಿಸಿ ಗೋಣ್ಗಳನೊಯ್ಯನೆ
ಜುಂಕೆಗಳಂ ಮುತ್ತುತಿರ್ಬನಿಗೆ ಬೆಚ್ಚುತ್ತುಂ।
ತಾಂ ಕಣ್ಗೆಸೆದುವು ಪಕ್ಷಿಕು
ಳಂ ಕುಜಕೋಟರಮನಿಂಬುಗೊಂಡಾದಿನದೊಳ್ ॥ ೩೩ ॥

ಜುಂಜೆಟ್ಟಿನವಿಲ್ಗಳ್ ಮಿಗೆ
ಮಂಜುಳತನುವಿನೊಳಡಂಗಿಸಿದ ತುಂಡದಿನಾ।
ರಂಜಿಸಿದುವು ಗಿರಿತಟದ ನಿ
ಕುಂಜಮನೆಡೆಗೊಂಡು ಮಿಗಗಳುರ್ವಿದ ಹಿಮದೊಳ್ ॥ ೩೪ ॥

ಜಳಧಿಗೆ ಜತ್ತುಳಂ ಕುಸುಮರಾಜಿಗೆ ಚಾರುಪರಾಗಮುರ್ವಿಜಾ
ವಳಿಗಲರ್ಗೊಂಚಲಾಗಸಕೆ ಶಾರದನೀರದಮಷ್ಟದಿಗ್ವಧೂ।
ಕುಳಕುಚಮಂಡಲಕ್ಕಮರ್ದ ನೂತ್ನದುಕೂಲದ ಮೇಲುದಾಗಿ ಕು
ಪ್ಪಳಿಸಿದುದಗ್ರಮಂಜು ಶಿಶಿರಾಕರಮಾದುದು ಮಾಘಮಾಸದೊಳ್ ॥ ೩೫ ॥

ಬೀಜಂ ಮೊದಲೆಂದಬ್ಜಜ
ನಾಜವ್ವನೆಯರ ಮೊಲೆಗಳೊಳಾಲದ ನೆಳಲೊಳ್
ರಾಜಿಪ ಕೂಪದ ಸಲಿಲದೊ
ಳೋಜೆಯೊಳಾದಿನದೊಳುಷ್ಣಮಂ ಬೈತಿಟ್ಟಂ ॥ ೩೬ ॥

ಇಂತೆಡೆವಿಡದಖಿಲಲೋಕಮಂ ತೆಕ್ಕನೆ ತೀವಿ ಸೊಕ್ಕುಂಜವ್ವನೆಯರ ತಕ್ಕೆಗೆ ನೂತ್ನಯೌವನಿಗರಂ ಚಕ್ಕನೆ ಸಿಲ್ಕಿಸಿ ಮಿಕ್ಕು ಮನಂಗೊಳಿಪ ಹೇಮಂತದೊಳ್,

ಶಿಶಿರದ ಪ್ರವೇಶವಾಗುತ್ತಿದ್ದಂತೆಯೆ ಅಯ್ಯಯ್ಯೋ ಮುಗಿದೇ ಹೋಯಿತೆ! ವ॥ ಮತ್ತೆ ಅಷ್ಟಲ್ಲದೆ, ೩೩. ಆ ಕಠಿಣವಾದ ಮಾಗಿಯ ದಿನಗಳಲ್ಲಿ ಕತ್ತನ್ನು ಬಾಗಿಸಿ, ಮೆಲ್ಲನೆ ರೆಕ್ಕೆಗಳ ಮೇಲೆ ಬೀಳುವ ಮಂಜಿಗೆ ಬೆಚ್ಚುತ್ತ ಮರಗಳ ಪೊಟರೆಗಳನ್ನು ಆಶ್ರಯಿಸುತ್ತ ಪಕ್ಷಿಗಳು ಕಣ್ಣಿಗೆ ಒಪ್ಪಿದವು. ೩೪. ಹಬ್ಬಿದ ಹಿಮದಲ್ಲಿ ನವಿಲುಗಳ ಗರಿಗಳು ಮೇಲೇಳಲು ಅವನ್ನು [ಮತ್ತೆ] ತಮ್ಮ ಚೆಲುವಾದ ದೇಹದಲ್ಲಿ ಕೊಕ್ಕಿನಿಂದ ಚೆನ್ನಾಗಿ ಮುಚ್ಚಿ ಸೇರಿಸಿದವು. ಜಿಂಕೆಗಳು ಪರ್ವತದ ತಪ್ಪಲಿನ ಮೆಳೆಗಳನ್ನು ಆಶ್ರಯಿಸಿ ಶೋಭಿಸಿದವು. ೩೫. ಸಮುದ್ರಕ್ಕೆ ನೊರೆ, ಹೂವುಗಳಿಗೆ ಸುಂದರವಾದ ಪರಾಗ, ವೃಕ್ಷಗಳಿಗೆ ಹೂಗಳಗೊಂಚಲು, ಆಕಾಶಕ್ಕೆ ಬಿಳಿಯ ಮೋಡಗಳು, ಅಷ್ಟ ದಿಗ್‌ವನಿತೆಯರ ಕುಚಗಳಿಗೆ ಸರಿಹೋಗುವ ನೂತನ ಮೇಲುವಸ್ತ್ರ -ಹೀಗೆ [ಹೊಂದಿಕೆಯಾಗಿ] ಚಳಿಗಾಲದಲ್ಲಿ ಹೆಚ್ಚಾಗಿ ಕವಿದ ಮಂಜು ತಂಪಾದ ಕಿರಣಗಳನ್ನುಳ್ಳ ಚಂದ್ರನಂತಿದ್ದಿತು. ೩೬. ಆ ದಿನಗಳಲ್ಲಿ [ಇವೇ] ಬೀಜರೂಪವೆಂದು [ಭಾವಿಸಿದ] ಅಬ್ಜಜನು ಯೌವನೆಯರ ಮೊಲೆಗಳಲ್ಲಿ, ಆಲದ ನೆಳಲಿನಲ್ಲಿ, ಮನೋಹರವಾದ ಕೊಳದ ನೀರಿನಲ್ಲಿ [ಹೀಗೆ] ಕ್ರಮವಾಗಿ ಬೇಗೆಯನ್ನು ಅಡಗಿಸಿಟ್ಟನು. ವ॥ ಹೀಗೆ ಎಡೆಬಿಡದೆ ಸಕಲ ಲೋಕವನ್ನು ಚೆನ್ನಾಗಿ ಕವಿದು, ಸೊಕ್ಕು ಬರಿಸುವ ಯೌವನೆಯರ ತೆಕ್ಕೆಗೆ ಎಳೆಯ ಪ್ರಾಯದ ಜವ್ವನಿಗರನ್ನು

ನವಕಸ್ತೂರಿಜವಾದಿಕುಂಕುಮದ ಲೇಪಂ ನವ್ಯತಾಂಬೂಲಮೊ
ಪ್ಪುವಗುರ್ವೆತ್ತುಣಿಸಿಂಪು ಪಾಸು ಪರಿಜೃಂಭನ್ಮಂದಿರಂ ಪಟ್ಟವ।
ಸ್ತ್ರವಿಶೇಷಂ ಪೊಸಪೊನ್ನ ಪಚ್ಚಮಮರ್ದೊಪ್ಪಲ್ಕಾಮಿನೀಸಂಗಸೌ
ಖ್ಯವನಾಂತ್ಯದೆ ವಿರಾಜಿಕುಂ ವಿಪುಳಭೋಗಿವ್ರಾತಮಾಮಾಗಿಯೊಳ್ ॥ ೩೭ ॥

ನಸುಸವಿದಿತ್ತಪೊಚ್ಚಪೊಸಗಂಪಮರ್ದಿಂಪಿನ ತಂಬುಲಂ ಸುಧಾ
ರಸಮೊಸರ್ವೋಷ್ಠ ಚುಂಬನಮುರುಸ್ತನದಪ್ಪುಗೆ ಬೆಂಗೆ ಮೂಡಲಂ।
ಟುಸಡಿಲದೊತ್ತಿ ಪತ್ತಿದಿನಿದಕ್ಕೆ ಮನಂಗೊಳೆ ತಾಂ ಜಿಗುರ್ತು ರಂ
ಜಿಸಿದುದು ಭೋಗಿರಾಜಿಮಣಿದಡ್ಡಿಗಳೊಳ್ ಪತಿಗೂಡಿ ಮೋದದಿಂ ॥ ೩೮ ॥

ಚಳಿಗಳ್ಕಿ ಭೋಗಿಗಳ್ಕೂ
ರ್ತೆಳವೆಣ್ಗಳ ತುಂಗಕುಚಮನಾಶ್ರಯಿಸಿ ತದಾ।
ಕಳಿತೋಷ್ಣದಿಂದೆ ಪರ್ವಿದ
ಕುಳಿರಂ ಕಳಿವರ್ಪೊದಟ್ಟಿ ಶಿಶಿರಾಗಮದೊಳ್ ॥ ೩೯ ॥

ಆಲಿಂಗನಮಿನಿಸಗಲಲ್
ಕೀಲಿಸುಗುಂ ಪೊಸಕುಳಿರ್ಶರೀರಮನೆನುತುಂ।
ಬಾಲವಿಟರಳ್ಕಿ ತಕ್ಕೆಯೊ
ಳಾಲೀಢಿತರಪ್ಪರಮರ್ದ ಶಿಶಿರಾಗಮದೊಳ್ ॥ ೪೦ ॥

ಒಮ್ಮೆಗೇ ಸಿಲುಕಿಸಿದ ಮನೋಹರವಾದ ಹೇಮಂತ ಋತುವಿನಲ್ಲಿ. ೩೭. ಹೊಸದಾದ ಕಸ್ತೂರಿ, ಜವಾದಿ, ಕುಂಕುಮಗಳ ಲೇಪ, ನವೀನವಾದ ತಾಂಬೂಲ, ಒಳ್ಳೆಯ ಸುಗಂಧ ಮಿಶ್ರಿತವಾದ ಆಹಾರ, ಹಿತವಾದ ಹಾಸು, ವಿಶಾಲವಾಗಿ ಶೋಭಾಯಮಾನವಾದ ಮನೆ;, ರೇಶ್ಮೆಯ ನವಿರಾದ ಉಡುಗೆ, ನವೀನವಾದ ಚಿನ್ನಾಭರಣ - ಇವು ಚೆನ್ನಾಗಿ ಹೊಂದಿ-ಕೊಂಡಿರಲು ವಿಲಾಸಿಗಳ ಸಮೂಹವು ಸುಂದರಿಯರ ಸಂಗಸುಖವನ್ನು ಆ ಮಾಗಿಯಲ್ಲಿ ಹೊಂದಿ ಶೋಭಿಸುತ್ತಿರುವುದು. ೩೮. ಸ್ವಲ್ಪವೇ ಸವಿದು ಕೊಟ್ಟ ಸುವಾಸನಾ- ಭರಿತವಾದ ಇನಿದಾದ ತಾಂಬೂಲ, ಅಮೃತ ರಸ ಒಸರುವ ಅಧರ ಚುಂಬನ, ವಿಸ್ತಾರವಾದ ಮೊಲೆಯ ಅಪ್ಪುಗೆ - [ಇವುಗಳಿಂದ] ಮದನತಾಪವೇರಿ ಪೂರ್ವದಿಕ್ಕಿನತ್ತ ಅಪ್ಪುಗೆ ಸಡಿಲದಂತೆ ಪರಸ್ಪರ ತೆಕ್ಕೆಗೊಂಡ ವಿಲಾಸಿಗಳ ಹಾಗೂ ಮನೆಯ ಮಾಳಿಗೆಯಲ್ಲಿ ಪತಿಯೊಡನೆ ಒಲವಿನಿಂದ ಕೂಡಿರುವ ಗೃಹಿಣಿಯರ ಸಮೂಹವು ಶೋಭಿಸಿತು. ೩೯. ತೀವ್ರವಾಗಿ ಚಳಿಗಾಲ ಪ್ರವೇಶಿಸುತ್ತಿದ್ದಂತೆ ವಿಷಯಾಸಕ್ತರು ಚಿಕ್ಕಪ್ರಾಯದ ಹೆಣ್ಣುಗಳ ಮೇಲೆ ಆಸೆಪಟ್ಟು ಅವರ ಮೊಲೆಗಳನ್ನು ಆಶ್ರಯಿಸಿ ಅದರಿಂದ ಉದ್ಭವವಾದ ಬಿಸುಪಿನಿಂದ ಕವಿದ ಚಳಿಯನ್ನು ನಿವಾರಿಸಿಕೊಳ್ಳುತ್ತಿದ್ದರು. ೪೦. ಶಿಶಿರದ ಪ್ರವೇಶವಾಗುತ್ತಿದ್ದಂತೆ ಪ್ರೇಯಸಿಯ ಅಪ್ಪುಗೆ ಸ್ವಲ್ಪ ಸಡಿಲಗೊಂಡರೆ ಹೊಸದಾಗಿ ಚಳಿಯು ಶರೀರವನ್ನು ಕವಿಯುವುದೆಂದು ಎಳೆಯ ವಯಸ್ಸಿನ ವಿಟರು ಹೆದರಿ ಅಪ್ಪುಗೆಯನ್ನು ಮತ್ತಷ್ಟು ಬಿಗಿಗೊಳಿಸಿ [ಅದರ] ಸವಿ ನೋಡುವವರಾದರು.

ಇಂತಿನಿಯರ್ಕಳನಾಲಿಂಗದಿಂದಗಲಲರಿಯದುರ್ವಿ ಪರ್ವಿದ ಶಿಶಿರಕಾಲದೊಳ್ ತದೀಯಋತು ಧರ್ಮಕ್ಕೆ ಹಿತಮಾದುಪಚಾರದೊಳ್ ಪಿರಿದು ಶ್ರೀವಿರೂಪಾಕ್ಷನಂ ಪೂಜೆಯಂ ಮಾಡಿ ಬೀಱುಕೊಂಡು ಮಗುೞ್ದಿಂದಿನಂತೆ ನಡೆತಂದು ದೇವಲಮಹರ್ಷೀಶ್ವರನುಪಕಂಠದೊಳ್ಕುಂಡಿಸಿ ತನ್ಮುನೀಂದ್ರನ ವದನಾರವಿಂದ ಸಂಜನಿತಮಂಜುಳಸುಧಾರಪ್ರವಾಹದೊಳ್ಮೂಡಿ ಮುೞುಂಗಾಡುತ್ತುದ್ಭಟರಾಜೇಂದ್ರ ಚಂದ್ರಮನಿರೆಯಿರೆ,

ಮುನಿನಾಥಂ ಮುಂಬೆಸವೇ
ೞ್ದಿನುನಯದಿಂ ಕಳುಪಿದುತ್ತಮಾಚಾರ್ಯರ್ಭೋಂ
ಕೆನೆ ವರ್ಧಕಿಗಣದೊಡವಂ
ದು ನಮಿಸಿ ಕೈಮುಗಿದು ಮಗುೞ್ದಿಂತೆಂದರ್ ॥ ೪೧ ॥

ಸ್ವಾಮಿ ನೀಂ ಬೆಸನಿತ್ತು ಬೀಱುಕೊಡೆ ಪೋಗಿ ವೇದಮುಸಿರ್ದವೋಲ್
ಭೂಮಿಗುತ್ತಮಮಾದ ತಾಣದೊಳೊಲ್ದೊಡರ್ಚಿದೆಯೊಪ್ಪುವು
ದ್ದಾಮಕಾಂತಿಯಲಂಪಿನಿಂಪಿನ ಪೆಂಪನೆಣ್ದೆಸೆಗೀಯುತುಂ
ಶ್ರೀಮಹಾಮಖಶಾಲೆಯಾದುದು ಕೇಳ್ಮುನೀಂದ್ರಸುಧಾಕರಾ ॥ ೪೨ ॥

ಎಂದಿಂತಲಂಪಿನ ಪೆಂಪಂ ತಳೆದಧ್ವರಶಾಲೆಯಾದುದೆಂದು ಮನಂಬೊಗೆ ಬಿತ್ತರಿಸಿ ಪೇೞ್ದ ಕುಶಲವರ್ಧಕಿಗಳ್ಗಸದಳಮಾದ ಪಸದನಮನಿತ್ತುಮರ್ದ ಮೃದುಮಧುರವಚನಂಗಳಿಂದುಪಚರಿಸಿ ಬೀಱುಕೊಟ್ಟುದ್ಭಟ ರಾಜೇಂದ್ರಚಂದ್ರಮಂಬೆರಸು ಶ್ರೀವಿರೂಪಾಕ್ಷನಾಲಯಕ್ಕೆೞ್ತಿಂದು ಆಪಂಪಾಪತಿಯಂ

ವ॥ ಹೀಗೆ ಪ್ರೇಮಿಗಳು ಅಪ್ಪುಗೆಯಿಂದ ಅಗಲಲು ತಿಳಿಯದೆ [ಇರುತ್ತಿರಲು] ಉಬ್ಬಿ ಹಬ್ಬಿದ ಚಳಿಗಾಲದಲ್ಲಿ ಉದ್ಭಟಮಹಾರಾಜ ಚಂದ್ರಮನು ಆ ಋತುಧರ್ಮಕ್ಕೆ [ಅನುಗುಣವಾದ] ಹಿತವಾದ ಸೇವೆ ಸಲ್ಲಿಸಿ ಚೆನ್ನಾಗಿ ಶ್ರೀ ವಿರೂಪಾಕ್ಷನ ಪೂಜೆಯನ್ನು ಮಾಡಿ ದೇವಾಲಯದಿಂದ ಮರಳಿ ಬಂದು ನಿತ್ಯದಂತೆ ದೇವಲ ಮಹರ್ಷಿಯ ಬಳಿ ಕುಳಿತು ಆ ಮುನೀಂದ್ರನ ಮುಖಕಮಲದಿಂದ ಹೊಮ್ಮಿ ಬಂದ ಮಂಜುಳ ಅಮೃತರಸವಾಹಿನಿಯಲ್ಲಿ ಮೂಡಿ ಮುಳುಗಾಡುತ್ತಲಿರಲು, ೪೧. ಮುನಿಶ್ರೇಷ್ಠನು ಹಿಂದೆಯೇ ಆಜ್ಞೆಮಾಡಿ ನಯವಾದ ಮಾತುಗಳಿಂದ ಮನವೊಲಿಸಿ ಕಳುಹಿಸಿದ್ದ ಶ್ರೇಷ್ಠ ಆಚಾರ್ಯರು ಬಡಗಿಗಳೊಂದಿಗೆ ಒಮ್ಮೆಲೆ ಬಂದು ಅಡ್ಡಬಿದ್ದು ಕೈಮುಗಿದು ಮತ್ತೆ ಹೀಗೆಂದರು: ೪೨. ಮುನೀಂದ್ರ ಚಂದ್ರನೆ ಕೇಳುವವನಾಗು, ಸ್ವಾಮಿ, ನೀವು ಆಜ್ಞೆಮಾಡಿ ಕಳುಹಿಸಲು ನಾವು ಹೋಗಿ ವೇದಗಳಲ್ಲಿ ಹೇಳಿರುವಂತೆ ಭೂಲೋಕದಲ್ಲಿ ಯೋಗ್ಯವಾದ ಸ್ಥಳದಲ್ಲಿ, ಚೆಲುವಾದ, ಉತ್ತಮವಾದ, ಕಾಂತಿಯುಕ್ತವಾದ, ಸೊಗಸಿನಿಂದ ಕೂಡಿದ, ಪ್ರಿಯವಾದ, ತನ್ನ ಹಿರಿಮೆಯನ್ನು ಎಂಟೂ ದಿಕ್ಕುಗಳಿಗೆ ಪರಿಚಯಿಸುವ ಔನ್ನತ್ಯಪೂರ್ಣವಾದ ಮಹಾಯಜ್ಞಶಾಲೆಯು ಸಿದ್ಧವಾಗಿದೆ. [ನಾವು ಅದನ್ನು] ಪ್ರೀತಿಯಿಂದ ಸಿದ್ಧಮಾಡಿರುವೆವು. ವ॥ ಎಂದು, ಹೀಗೆ ಚೆನ್ನಾಗಿ ಅಲಂಕೃತವಾದ ಯಜ್ಞಶಾಲೆ ನಿರ್ಮಾಣವಾಯಿತೆಂದು ಮನಮುಟ್ಟುವಂತೆ ವಿವರಿಸಿ ಹೇಳಿದ ಕುಶಲಿಗರಾದ ಬಡಗಿಗಳಿಗೆ ಎಣೆಯಿಲ್ಲದ ವಸ್ತು ಒಡವೆಗಳನ್ನಿತ್ತು, ಮೃದುಮಧುರವಾದ ಮಾತುಗಳಿಂದ ಉಪಚರಿಸಿ, ಅವರನ್ನು ಕಳುಹಿಸಿ, ಉದ್ಭಟ ಮಹಾರಾಜ ಚಂದ್ರಮನೊಡನೆ ಶ್ರೀ ವಿರೂಪಾಕ್ಷ ದೇವಾಲಯಕ್ಕೆ ಬಂದು, ಆ ಪಂಪಾಪತಿಯನ್ನು ಪೂಜಿಸಿ, ಅತಿಶಯವಾದ

ಪೂಜೆಯಂಮಾಡಿ ಸಮುನ್ನತಭಕ್ತಿಭರದಿಂದಭಿವಂದಿಸಿ ತನ್ಮಹಾದೇವನ ಪಾದುಕೆಗಳಂ ಶಿರಸಾ ವಹಿಸಿ ಕೊಂಡಲ್ಲಿರ್ದೆಲ್ಲಾ ಶಿವಭಕ್ತರನುಜ್ಞೆಯಂ ಪಡೆದಾಹ್ಲಾದದಿಂದೆ ಮಗುಟ್ದು ಬಂದು ತನ್ನ ಪರ್ಣಶಾಲೆಯಂ ಪೊಕ್ಕ ಮಲಿನಸುಮುಹೂರ್ತದೊಳಯತ್ನ ಸಹಪತ್ನೀರತ್ನನೂತ್ನವಿಲಾಸಂಬ್ರಹ್ಮರಥಾರೂಢನಾಗಿ ಗಣಿಕೆಗಳ ವಡದನಂತತುಂಗಮಂಗಳಮಯಮಪ್ಪ ಸಂರಂಭದಳುಂಬದ ಮಧ್ಯದಲ್ಲಿ ದೇವಲಮಹರ್ಷೀಶ್ವರಂ ಮುಖಶಾಲಾಭಿಮುಖಮಾಗಿ ಬರೆವರೆ,

ಕಾಂಚನತೋರಣಾವಳಿಯಿನುನ್ನತಪಟ್ಟಪಟೀವಿತಾನದಿಂ
ದಂ ಚಲಿಪ ಧ್ವಜಂಗಳನಮರ್ಚಿದ ಮಂಜುಳಕಾಯಮಾನದಿಂ
ದಂಚಿತತನ್ಮಖೋಪಕರಣೋತ್ಕರಸಂಸ್ಥಿತಗೇಹಜಾಲದಿಂ
ದುಂಚಬೆಡಂಗನಾಂತು ಕರಮೊಪ್ಪಿದುದಾ ನವಯಜ್ಞಮಂಟಪಂ || ೪೩ ||

ಪಿರಿದೆನೆ ಪರಿರಂಜಿಸುವ
ಧ್ವರಶಾಲೆಯನೀಕ್ಷಿಸುತ್ತೆ ತದ್ದರ್ಶನದಿಂ।
ಪರಮಾನಂದಂ ಬಡೆದುರು
ತರವೈಭವದಿಂದೆ ಬಂದು ಮೆಲ್ಲನೆ ಸಾರ್ದಂ || ೪೪ ||

ಬಂದು ಮಖಶಾಲೆಯಂ ಸಾ
ರ್ದಂದುಚ್ಚಬ್ರಹ್ಮರಥಮನಿಟಿ॑ದಾಮುನಿಯಾ
ನಂದದೆ ನೃಪಂಬೆರಸು ನಡೆ
ತಂದಧ್ವರಶಾಲೆಯಂ ಪ್ರವೇಶಿಸುವಾಗಳ್ || ೪೫ ||

ಭಕ್ತಿವಿಶೇಷದಿಂದ ನಮಸ್ಕರಿಸಿ, ಆ ಮಹಾದೇವನ ಪಾದುಕೆಗಳನ್ನು ತಲೆಯ ಮೇಲಿಟ್ಟುಕೊಂಡು ಅಲ್ಲಿದ್ದ ಎಲ್ಲ ಶಿವಭಕ್ತರ ಅಪ್ಪಣೆ ಪಡೆದು ಸಂತೋಷದಿಂದ ಹಿಂತಿರುಗಿ ಬಂದು ತನ್ನ ಎಲೆಮನೆಯನ್ನು ಪ್ರವೇಶಿಸಿ, ಒಳ್ಳೆಯ ಮುಹೂರ್ತದಲ್ಲಿ ಅಪ್ರಯತ್ನದಿಂದ ಸಹಧರ್ಮಿಣೀರತ್ನದೊಂದಿಗೆ ನೂತನ ವಿಲಾಸದಿಂದ ಕೂಡಿ ಬ್ರಹ್ಮರಥವನ್ನು ಏರಿ ಕುಳಿತು, ಎಣಿಕೆಗಸದಳವಾದ ಕೊನೆಯಿಲ್ಲದ ಮಿಗಿಲಾದ ಸಂತೋಷವನ್ನುಂಟುಮಾಡುವ ಅತಿಶಯ ಸಂಭ್ರಮದ ನಡುವೆ ದೇವಲ ಮಹರ್ಷಿಯ ಯಜ್ಞಶಾಲೆಗೆ ಇದಿರಾಗಿ ಬರುತ್ತಿರಲು, ೪೩. ಚಿನ್ನದ ತೋರಣಗಳಿಂದ, ಒಳ್ಳೆಯ ರೇಶ್ಮೆ ಬಟ್ಟೆಯ ಪರದೆಗಳಿಂದ, ಹಾರಾಡುತ್ತಿರುವ ಬಾವುಟಗಳನ್ನು ಸೇರಿಸಿದ ಮನೋಹರವಾದ ಚಪ್ಪರಗಳಿಂದ, ಪ್ರಸಿದ್ಧವಾದ ಆ ಯಜ್ಞಕ್ಕೆ ಬೇಕಾದ ಉಪಕರಣಗಳ ರಾಶಿಯನ್ನು ಹೊಂದಿರುವ ಮನೆಗಳಿಂದ ಉತ್ಕೃಷ್ಟವಾದ ಚೆಲುವನ್ನು ಹೊಂದಿ ಹೊಸದಾಗಿ ನಿರ್ಮಿಸಲ್ಪಟ್ಟ ಆ ಯಜ್ಞಮಂಟಪವು ಹೆಚ್ಚಿನ ಶೋಭೆಯನ್ನು ಪಡೆದಿದ್ದಿತು. ೪೪. ಚೆನ್ನಾಗಿ ಕಾಣುತ್ತಿರುವ ಯಜ್ಞಶಾಲೆಯನ್ನು ನೋಡುತ್ತ, ಅದರ ದರ್ಶನದಿಂದ ಪರಮಾನಂದವನ್ನು ಪಡೆದು, ವಿಶೇಷ ವೈಭವದಿಂದ ಬಂದು, ಅದನ್ನು ಮೆಲ್ಲನೆ ಸಮೀಪಿಸಿದನು. ೪೫. ಬಂದು, ಯಜ್ಞಶಾಲೆಯನ್ನು ಸಮೀಪಿಸಿ ಶ್ರೇಷ್ಠವಾದ ಬ್ರಹ್ಮರಥದಿಂದ ಇಳಿದ ಆ ಮುನಿಯು, ಆನಂದದಿಂದ ಮಹಾರಾಜನೊಡಗೂಡಿ

ವೇದನಿನಾದದಿಂ ಪಿರಿದುಮುಚ್ಚರಿತಾಖಿಲಮಂತ್ರಶಾಸ್ತ್ರಜಾ
ಲೋದಿತರಾವದಿಂದೆ ಸಲೆ ಕೇಳ್ವ ಪುರಾಣಘೋಷದಿಂದೆ ಸಂ।
ಪಾದಿತಯಜ್ಞಸಂಗ್ರಹಜನೋದ್ಭವನಿಸ್ವನದಿಂದೆ ಚಿತ್ತಕಿಂ
ಬಾದುದು ಯಜ್ಞಶಾಲೆ ಮುನಿಲೀಲೆ ಸುಪುಣ್ಯದ ಮಾಲೆಯೆಂಬಿನಂ ॥ ೪೬ ॥

ಇಂತತಿಮನಂಗೊಳಿಪ ಮಂಗಳಮಯಮಾದ ಮಖಮಂಟಪಮಂ ಮಹಾನಂದದಿಂದುದ್ಭಟ ಮಹಿಪಂಬೆರಸು ತನ್ಮುನೀಶ್ವರಂ ನೋಡುತುಂ ಮೆಲ್ಲಮೆಲ್ಲನೆ ಬರೆವರೆ,

ಪ್ರಾಗ್ವಂಶಾಲಯದಿಂ ಜುಹೂನಿಕರದಿಂ ಕುಂಭಾಳಿಯಿಂ ತೋರ್ಪ ಸ
ಮ್ಯಗ್ವೇದೀಸ್ಥಲದಿಂ ವಷಟ್ಕೃತಬಹುದ್ರವ್ಯಂಗಳಿಂ ಪ್ರೋಲ್ಲಸ
ತ್ಸೃಗ್ವಾರಸ್ಥಿತಿಯಿಂ ಧವಿತ್ರತತಿಯಿಂ ಹವ್ಯೌಘದಿಂ ಯೂಪದಿಂ
ದೃಗ್ವಾರ್ಜಾತಕಲಂಪನೀಯುತೆಸೆದತ್ತುತ್ತುಂಗಯಜ್ಞಾಲಯಂ ॥ ೪೭ ॥

ತುಪ್ಪಗೊಡಂಗಳಿಂ ಧರಣೆಯೊಟ್ಟಜೆಯಿಂ ಪೃಷದಾಜ್ಯದಿಂ ವಿರಾ
ಜಿಪ್ಪಮನೋಜ್ಞಪಾಯಸದ ಪಾತ್ರೆಗಳಿಂ ದಧಿಮಿಶ್ರದುಗ್ಧದಿಂ।
ತಪ್ಪದೆ ಜೊನ್ನಮಂ ಕಱುವ ಪಾಲ್ಮೊಸರಿಪ್ಪ ಕಟಾಹಕೋಟಿಯಿಂ
ದೊಪ್ಪಿದುದಂದನೂನವಿಭವಂ ಬಡೆದಾವರಯಜ್ಞಮಂಟಪಂ ॥ ೪೮ ॥

ನಡೆದುಬಂದು ಯಜ್ಞಶಾಲೆಯನ್ನು ಪ್ರವೇಶಿಸುತ್ತಿರುವಲ್ಲಿ, ೪೬. ವೇದಘೋಷದಿಂದ, ಎತ್ತರದ ದನಿಯಲ್ಲಿ ಪಠಿಸುತ್ತಿರುವ ಸಕಲ ಮಂತ್ರಶಾಸ್ತ್ರಗಳಿಂದ, ಚೆನ್ನಾಗಿ ಕೇಳುವ ಪುರಾಣ ಪಠನದಿಂದ, ಯಜ್ಞ ಮಾಡಲು ತೊಡಗಿರುವಾಗ ಅದನ್ನು ನೋಡಲು ಸೇರಿದ ಜನರಿಂದಾದ ಸಪ್ಪಳದಿಂದ ಕೂಡಿ ಮುನಿಯ ಲೀಲೆಯಾದ ಆ ಯಜ್ಞಶಾಲೆಯು ಪುಣ್ಯದ ಪುಂಜವೆನ್ನುವಂತೆ ಮನಸ್ಸಿಗೆ ಮುದವನ್ನುಂಟುಮಾಡಿತು. ವ॥ ಹೀಗೆ ಚೆನ್ನಾಗಿ ಮನಸೆಳೆವ, ಶೋಭಾಯಮಾನವಾದ ಯಜ್ಞಮಂಟಪವನ್ನು ಅತ್ಯಾನಂದದಿಂದ ಆ ಮುನೀಶ್ವರನು ಉದ್ಭಟ ಮಹಾರಾಜ-ನೊಡಗೂಡಿ ನೋಡುತ್ತ ಮೆಲ್ಲನೆ ಬರುತ್ತಿರಲು, ೪೭. ಪ್ರಾಚೀನ ವಂಶಸ್ಥರ ಮನೆಗಳಿಂದ, ಯಾಗದಲ್ಲಿ ತುಪ್ಪವನ್ನು ಸುರಿಯಲು ಬಳಸುವ ಸೌಟುಗಳಿಂದ, ಮಡಕೆಗಳಿಂದ, ಎದ್ದು ಕಾಣುವ ಶುಭ್ರವಾದ ಜಗುಲಿಗಳಿಂದ, ಹವಿಸ್ಸನ್ನು ಅಗ್ನಿಗೆ ಅರ್ಪಿಸುವಾಗ ಹೇಳುವ ಮಂತ್ರಫಲದಿಂದ ಬಂದ ಅಪಾರ ಸಂಪತ್ತಿನಿಂದ, ಹೆಚ್ಚಾಗಿ ಹೊಳೆಯುವ ಸೃಗ್ವಾರ ಸ್ಥಿತಿಯಿಂದ, ಬೀಸಣಿಗೆಗಳಿಂದ, ಅಗ್ನಿಗೆ ಆಹುತಿಕೊಡಲು ಯೋಗ್ಯ ವಸ್ತುಗಳಿಂದ, ಯಜ್ಞಪಶುವನ್ನು ಕಟ್ಟುವ ಕಂಬದಿಂದ ಕೂಡಿ ಆ ಶ್ರೇಷ್ಠವಾದ ಯಜ್ಞಶಾಲೆಯು ಕಣ್ಣೆಂಬ ಕಮಲಕ್ಕೆ ಆನಂದವನ್ನೀಯುತ್ತ ಶೋಭಿಸಿದ್ದಿತು. ೪೮. ತುಪ್ಪದ ಕೊಡಗಳಿಂದ, ಭೂಮಿಯಲ್ಲಿ ಮೈಮೇಲೆ ಸೊಗಸಾದ ಚುಕ್ಕೆಗಳಿರುವ ಜಿಂಕೆಯ ತುಪ್ಪದಿಂದ, ಶೋಭಾಯಮಾನವಾದ ಆಕರ್ಷಕ ಪಾಯಸದ ಪಾತ್ರೆಗಳಿಂದ, ಮೊಸರು ಮಿಶ್ರವಾದ ಹಾಲಿನಿಂದ, ಬೆಳುದಿಂಗಳನ್ನು ನಿಜಕ್ಕೂ ಚೆಲ್ಲುವಂತಿರುವ ಹಾಲು ಮೊಸರಿನ ಕೋಟಿ ಸಂಖ್ಯೆಯ ಕಡಾಯಿಗಳಿಂದ ಅಂದು ಮಹತ್ವಪೂರ್ಣವಾದ ಯಜ್ಞಮಂಟಪವು ಕೊರತೆಯಿಲ್ಲದ ಸೊಗಸನ್ನು ಪಡೆದು ಕಣ್ಣಿಗೆ

ಇಂತಾಮ್ನಾಯೋಕ್ತದಿಂದಂ ಸಮೆದನಂತಯಜ್ಞಪರಿಕರಂಗಳಿಂ ಹರವರಿಯಿಂದಂ ಮನಂಗೊಳಿಪ ತಚ್ಛಾಲಾಮಧ್ಯದೊಳ್ ಅಧ್ವರ್ಯೂದ್ಗಾತೃಹೋತೃಗಳ ತಿಂಥಿಣಿಯಿಂ ಮನೋಜ್ಞಋತ್ವಿಕ್ಕುಗಳ ಸಮಾಜದಿಂ ಪ್ರತಿಷ್ಠಾತೃಗಳ ಪ್ರಸನ್ನತೆಯಿಂ ಸದಸ್ಯರ ಸಂಭ್ರಮದಿಂ ಸಮಸ್ತಶಾಸ್ತ್ರಗಳ ಸಲ್ಲಾಪೋಲ್ಲಾಸದಿಂದು ಕಣ್ಗೆ ಕಾತರಮಂ ಮಾಟ್ಟಿ ಮಂಜುಳಮಖಶಾಲೆಯಲಂಪಂ ದೇವಲಋಷೀಶ್ವರಂ ನಡೆನೋಡುತ್ತಾನಂದವಾರಾಸಿಯೊಳ್ ಮೂಡಿ ಮುಱುಂಗಾಡುತ್ತುಂ ಬರೆ,

ಮತ್ತಮಾಮಖಶಾಲೆಯಲ್ಲಿ,

ಸಕಲಾಮ್ನಾಯವಿದರ್ಶಾ
ಸ್ತ್ರಕುಶಲರುಚ್ಛ್ರಾತಕೋವಿದರ್ಬುಧರಮಲಾ।
ತ್ಮಕರೆನಿಪ ಚಾರುವಿಪ್ರ
ಪ್ರಕರಂ ರಂಜಿಸಿದುದಂದು ಮಖಮಂಟಪದೊಳ್ ॥ ೪೯ ॥

ಷಟ್ಕರ್ಮನಿರತರಮೃತ
ತ್ವಿಟ್ಕರದಂತಾಂಶುಯುಕ್ತರಧಿಕಬಲರ್ದೇ।
ವೇಟ್ಟುಜವದಾನ್ಯರುರುಬುಧ
ರಾಟ್ಕುಲಮೊಪ್ಪಿದುದು ಸಪ್ತತಂತುಸ್ಥಲದೊಳ್ ॥ ೫೦ ॥

ವೇದಾಂತಾರ್ಥಜ್ಞರ್ಚಿ
ನ್ಮೋದರ್ಕರ್ಮಾಂಧಕಾರರಹಿತ ರ್ಮಾಯಾ।
ಭೇದಕರನಂತವರವಿ
ದ್ವಾಧರರೆಸೆದರ್ತದೀಯಮಖಮಂಟಪದೊಳ್ ॥ ೫೧ ॥

ಅಂದವಾಯಿತು. ವ॥ ಹೀಗೆ ವೇದೋಕ್ತವಾಗಿ ನಿರ್ಮಿಸಿದ, ಅಸಂಖ್ಯ ಯಜ್ಞ ಸಾಮಗ್ರಿಗಳಿಂದ, ನಿವಾಸಗಳಿಂದ ಮನಸೆಳೆಯುವ ಆ ಯಜ್ಞಶಾಲೆಯ ಮಧ್ಯಭಾಗದಲ್ಲಿ ವಿಜೃಂಭಿಸಿರುವ ಶ್ರೇಷ್ಠರಾದ ಹೋಮ ಮಾಡುವವರುಗಳ ಸಮೂಹದಿಂದ, ಪಂಡಿತರಾದ ಯಜ್ಞ ಪುರೋಹಿತರ ಗುಂಪಿನಿಂದ, ಪ್ರತಿಷ್ಠಿತ ವ್ಯಕ್ತಿಗಳ ಕೃಪೆಯಿಂದ, ಸದಸ್ಯರ ಸಂಭ್ರಮದಿಂದ, ಸಕಲ ಪ್ರಾಣಿಗಳ ಮೈತ್ರಿಪೂರ್ಣವಾದ ಸರಸ ಮಾತುಕತೆಗಳಿಂದ, ಕಣ್ಣಿಗೆ ಆನಂದವನ್ನುಂಟುಮಾಡುವ ಮನೋಹರವಾದ ಯಜ್ಞಶಾಲೆಯ ಸೊಬಗನ್ನು ಶ್ರೇಷ್ಠನಾದ ದೇವಲ ಋಷಿಯು ಚೆನ್ನಾಗಿ ನೋಡುತ್ತ ಸಂತೋಷ ಸಾಗರದಲ್ಲಿ ಮೂಡಿ ಮುಳುಗಾಡುತ್ತ ಬರುತ್ತಿರಲು, ಮತ್ತೆ ಆ ಯಜ್ಞಶಾಲೆಯಲ್ಲಿ, ೪೯. ಸಕಲ ವೇದಗಳಲ್ಲೂ ಪಾಂಡಿತ್ಯ ಹೊಂದಿರುವವರೂ, ಶಾಸ್ತ್ರದಲ್ಲಿ ಬಲ್ಲಿದರೂ, ಉನ್ನತೋನ್ನತ ವಿದ್ವಾಂಸರೂ, ಪಂಡಿತರೂ, ಪರಿಶುದ್ಧಾತ್ಮರೂ ಆದ ಬ್ರಾಹ್ಮಣರ ಸಮೂಹವು ಯಜ್ಞಮಂಟಪದಲ್ಲಿ ಶೋಭಿಸಿತು. ೫೦. ಷಟ್ಕರ್ಮ ನಿರತರೂ, ಚಂದ್ರನ ಕಿರಣಗಳಂತೆ ಹೊಳೆಯುವ ದಂತಗಳುಳ್ಳವರೂ, ಅಧಿಕ ಶಕ್ತಿಯುತರೂ, ಭೂಮಿಯ ಮೇಲಣ ದೇವತೆಗಳೂ, ಅಮೋಘ ವಿದ್ವಾಂಸರೂ ಆದವರ ಸಮೂಹವು ಏಳು ಉಪಾಯಸ್ಥಳಗಳಲ್ಲಿ ಶೋಭಿಸಿತು. ೫೧. ವೇದಾಂತದ ಅಂತರಾರ್ಥವನ್ನು ತಿಳಿದವರೂ, ಪರಬ್ರಹ್ಮನಲ್ಲಿ ಪ್ರೀತಿಯುಳ್ಳವರೂ, ಕರ್ಮವೆಂಬ ಕತ್ತಲೆಯಿಂದ ಬಿಡುಗಡೆ ಹೊಂದಿದವರೂ, ಮಾಯೆಯನ್ನು ಭೇದಿಸುವವರೂ ಆದ ಅಸಂಖ್ಯ

ಯಂತ್ರಶಾಸ್ತ್ರಜಾಲಲೋಲರಾಗಮಜ್ಞರುಲ್ಲಸ
ತ್ತಂತ್ರಸಾರಸಾರ್ವಭೌಮರುತ್ತಮರ್ಸುಪಂಡಿತರ್।
ಜಂತ್ರವಲ್ಲಕೀಕಲಾಪ್ರವೀಣರುದ್ಧಗಾಯಕರ್
ಮಂತ್ರಶೂರರೊಪ್ಪಿದರ್ ತದೀಯಯಾಗಶಾಲೆಯೊಳ್ ॥ ೫೨ ॥

ಎಟಿಲ್ವ ಧೋತ್ರಂ ನಿಟಿಲತ್ರಿಪುಂಡ್ರಕಂ
ಚಳತ್ಸುರುದ್ರಾಕ್ಷಗಳಚ್ಛಭೂಷಣಂ।
ತೊಳಪ್ಪ ಯಜ್ಞೋನ್ನತಸೂತ್ರಮೊಪ್ಪಲು
ಜ್ವಳೋತ್ತಮರ್ಶೋಭಿಪರಲ್ಲಿ ಶ್ರೋತ್ರಿಯರ್ ॥ ೫೩ ॥

ನವಸಿಂಧೂರದ ಬೊಟ್ಟನಿಟ್ಟು ಮಣಿಭೂಷಾನೀಕಮಂ ತೊಟ್ಟು ಮಿಂ
ಚುವ ಪಟ್ಟಾಂಬರಮಂ ಸಮಂತು ತೆಗೆದುಟ್ಟಾಮೋದದಿಂ ನಾಡೆ ಸೂ।
ಸುವ ನೂತ್ನೋದ್ಗಮಮಂ ತುಱುಂಬಿ ವಿಪುಳಾನಂದಾಬ್ಧಿಯೊಳ್ತೊಯ್ದುತೊ
ಪ್ಪುವ ನಿಟ್ಟೈದೆಯರೊಗ್ಗು ರಂಜಿಸಿದುದಾಶುಂಭನ್ಮಖಾಗಾರದೊಳ್ ॥ ೫೪ ॥

ನೂಪುರದಿಂಚರಂ ನೆಗೞೆ ವಕ್ತ್ರಸುಧಾರುಚಿ ತುಳ್ಕೆ ಕಾಂತಿಯಂ
ಚಾಪಲಲೋಚನಂ ಪರಪೆ ಬೆಳ್ಗದಿರಂ ಪೊಸಪೊಂಬೊಗರ್ಗಳಂ।
ವ್ಯಾಪಿಸೆ ಕಾಯವಲ್ಲಿ ಜನರಂ ಸಲೆ ಮೋಹಿಸೆ ನೋಟದಿಂದೆ ಸ
ಲ್ಲಾಪಿನಿಯರ್ವಿರಾಜಿಸಿದರಾಪರಿರಂಜಿಪಯಜ್ಞಶಾಲೆಯೊಳ್ ॥ ೫೫ ॥

ಶ್ರೇಷ್ಠ ಬ್ರಾಹ್ಮಣರು ಆ ಯಾಗಮಂಟಪದಲ್ಲಿ ಅಂದಗೊಂಡಿದ್ದರು. ೫೨. ಯಂತ್ರಶಾಸ್ತ್ರದಲ್ಲಿ ಅತ್ಯಾಸಕ್ತಿಯುಳ್ಳವರೂ, ಆಗಮಗಳನ್ನು ತಿಳಿದವರೂ, ಸೊಗಸಾದ ತಂತ್ರಸಾರದಲ್ಲಿ ರಾಜಾಧಿರಾಜರೂ, ಉತ್ತಮರೂ, ಒಳ್ಳೆಯ ಪಂಡಿತರೂ, ಯಂತ್ರಯುಕ್ತವಾದ ತಂತೀವಾದ್ಯವನ್ನು ನುಡಿಸುವ ಕಲೆಯಲ್ಲಿ ಪ್ರವೀಣರಾದವರೂ, ಶ್ರೇಷ್ಠ ಗಾಯಕರೂ, ಮಂತ್ರ ಹೇಳುವಲ್ಲಿ ಗಟ್ಟಿಗರೂ ಆದ ಅವರು ಆ ಯಾಗಶಾಲೆಯಲ್ಲಿ ಮೆಚ್ಚುಗೆಗೆ ಪಾತ್ರರಾದರು. ೫೩. ನೇತಾಡುವ ಪಂಚೆ, ಹಣೆಯಲ್ಲಿ ಮೂರು ರೇಖಿನ ವಿಭೂತಿ, ಅಲುಗಾಡುವ ಒಳ್ಳೆಯ ರುದ್ರಾಕ್ಷಿಗಳು, ಶುಭ್ರವಾದ ಅಲಂಕರಣ, ಹೊಳೆವ ಯಜ್ಞೋಪವೀತ - ಇವು ಶೋಭಿಸಿರಲು ಕಾಂತಿಪೂರ್ಣರಾದ ಉತ್ತಮ ಬ್ರಾಹ್ಮಣರು ಅಲ್ಲಿ ಚೆಲುವಿಕೆಯಿಂದ ಕೂಡಿ ಇರುವರು. ೫೪. ಹೊಸದಾದ ಕೇಸರಿ ಬಣ್ಣದ ಬೊಟ್ಟನಿಟ್ಟು, ಮಣಿಭೂಷಣಗಳನ್ನು ತೊಟ್ಟು, ಚೆನ್ನಾಗಿ ಶೋಭಿಸಿರುವ ರೇಷ್ಮೆ ವಸ್ತ್ರವನ್ನು ಉಟ್ಟು, ಸಂತಸದಿಂದ ಮೋಹಕವಾದ ಸುವಾಸನಾಭರಿತ ಪುಷ್ಪಗಳನ್ನು ಮುಡಿದು ಸಂತೋಷ ಸಾಗರದಲ್ಲಿ ಮುಳುಗಿ ಶೋಭಿಸಿರುವ ಮುತ್ತೈದೆಯರ ಸಮೂಹವು ಚೆಲುವಾದ ಯಾಗಶಾಲೆಯಲ್ಲಿ ಶೋಭೆಗೊಂಡಿತು. ೫೫. ಕಾಲಂದುಗೆಯ ಮಧುರ ನಿನಾದ ಹೊಮ್ಮಿರಲು, ಮುಖವೆಂಬ ಚಂದ್ರನು ಕಾಂತಿಯನ್ನು ಚೆಲ್ಲಿರಲು, ಚಂಚಲವಾದ ಕಣ್ಣುಗಳು ಚೆಲುವನ್ನು ಹರಡಿರಲು, ಬಳ್ಳಿಯಂತಿರುವ ದೇಹವು ಬೆಳ್ಳನೆಯ ಹಾಗೂ ಸುವರ್ಣದ ಕಾಂತಿಯನ್ನು ಚೆಲ್ಲಿರಲು, ತಮ್ಮ ಕಟಾಕ್ಷದಿಂದ ನೋಡುಗರ ಮನಸ್ಸನ್ನು ಚೆನ್ನಾಗಿ ಸೂರೆಗೊಂಡಿರಲು ಪ್ರಕಾಶಮಾನವಾಗಿ ಬೆಳಗುವ ಆ ಯಾಗಶಾಲೆಯಲ್ಲಿ ಸರಸದಿಂದ

ಮಂಜೀರಧ್ವನಿಗಂಚೆವಿಂಡು ನುಡಿಗಂಚದ್ರಾಜಕೀರೋತ್ಕರಂ
ಮಂಜುಧ್ವಾನಕೆ ಗಂಡುಗೋಗಿಲೆಯ ಮೊತ್ತಂ ನೀಟ್ಟಿ ಧಮ್ಮಿಲ್ಲಕಾ।
ರಂಜತ್ಕೇಕಿಯ ತಂಡಮೊಲ್ದು ಸೆಱೆಯಾಗಲ್ಕಾಡೆ ನಿಟ್ಟೈದೆಯ
ರ್ಕಂಜಾತಾನನೆಯರ್ತದೀಯಮಖಶಾಲಾಮಧ್ಯದಲ್ಲೊಪ್ಪಿದರ್ ॥ ೫೬ ॥

ಇಂತನಂತಸಂರಂಭದಿಂದಂ ಮನಂಗೊಳಿಪ ತನ್ಮಖಶಾಲೆಯ ಪ್ರವೇಶಮಂ ಮಾಡಿ ಸಮಸ್ತಶಾಸ್ತ್ರಪ್ರತಿಜ್ಞಾತೃಗಳಪ್ಪಾಚಾರ್ಯರನುಜ್ಞೆಯಂ ಪಡೆದು ವೇದೋಕ್ತಮಾರ್ಗಮಂ ಪರಿವಿಡಿದು ಸುಮುಹೂರ್ತದೊಳ್ ಭದ್ರಾಕೃತಶ್ಮಶ್ರುತಿರೋಜಸಮಾಜನುಂ ವಿಪುಳತರಕೃಷ್ಣಾಜಿನೋತ್ತರೀಯನುಂ ತದೀಯಶೃಂಗಾಸ್ಖಲಿತಕಮನೀಯಕರಾಂಬುಜ ನುಂನವನೀತವಿಲೇಪಿತಪರಿಪೂರ್ಣ ಪವಿತ್ರಗಾತ್ರನುಂ ಯಜ್ಞದೀಕ್ಷೆಯಂ ಕೈಕೊಂಡು ಶ್ರೀವಿರೂಪಾಕ್ಷಪ್ರೀತ್ಯರ್ಥಮಾಗಿ ದೇವಲಮಹಾಋಷೀಶ್ವರಂಪಶುವಿಶಸನಾದಿ ಕರ್ಮಂಗಳಂ ತೀರ್ಚಿ ಮನೋಹರಾಧ್ವರಮಂ ಮಾಡುತ್ತೆಸೆದಿರ್ದಂ॥

ಅಂತುಮಲ್ಲದೆಯುಂ,

ಚಂದ್ರಂಗೆ ನೂತ್ನಕಾಂತಿಯು
ಪೇಂದ್ರಂಗುಱೆ ಪೆಂಪು ವಿಬುಧತತಿಗಳ್ಗೆವೆ ದೇ।
ವೇಂದ್ರಂಗೆ ನಲವು ಶಂಭುಗೆ
ಸಾಂದ್ರಮುದಂ ಪುಟ್ಟೆ ಮಾಡಿದಂ ಮುನಿ ಮಖಮಂ ॥ ೫೭ ॥

ಸಜ್ಜನರುರ್ವೆ ಶಾಸ್ತ್ರದಱಿವುಳ್ಳವರಾಯೆನೆ ವೇದವಿಜ್ಞನರ್
ಪಜ್ಜಳಿಪಟ್ಟಸಂತಸದೊಳೊಂದಿರೆ ಪಂಡಿತರುರ್ಕೆ ಯೋಗಿಗಳ್।
ಬಿಜ್ಜೆಗೆ ತಾನೆ ಮಾರ್ಗಮೆನೆ ದೀಕ್ಷಿತರಾಯೆನೆ ಸರ್ವವಿಪ್ರಯೋ
ಷಿಜ್ಜನಮುತ್ಸವಂಬಡೆಯೆ ಮಾಡಿದನಧ್ವರಮಂ ಮುನೀಶ್ವರಂ ॥ ೫೮ ॥

ಮಾತನಾಡುತ್ತಿರುವ ಬೆಡಗಿಯರು ಅಂದಗೊಂಡಿದ್ದರು. ೫೬. ಕಾಲಂದುಗೆಯ ಝಲ್ ಝಲ್ ನಾದಕ್ಕೆ ಹಂಸಗಳು, ಮಾತಿಗೆ ಪ್ರಸಿದ್ಧ ರಾಜಗಿಳಿಗಳು, ಮೋಡಗಳ ಮಧುರವಾದ ಗುಡುಗಿಗೆ ನವಿಲುಗಳು ಮೆಚ್ಚಿ ಬಂದಿಯಾಗಿರಲು ವಿಶೇಷವಾಗಿ ಮುತ್ತೈದೆಯರು, ಕಮಲಮುಖಿಯರು ಆ ಯಾಗಶಾಲೆಯ ಮಧ್ಯದಲ್ಲಿ ಶೋಭಿಸಿದರು. ವ॥ ಹೀಗೆ ಅತಿಶಯ ಸಂಭ್ರಮದಿಂದ ಮನಸ್ಸನ್ನು ಆಕರ್ಷಿಸುವ ಆ ಯಜ್ಞಶಾಲೆಯನ್ನು ಹೊಕ್ಕು ಸಕಲ ಶಾಸ್ತ್ರ ಪಾರಂಗತರಾದ ಆಚಾರ್ಯರ ಅನುಮತಿ ಪಡೆದು ವೇದೋಕ್ತ ರೀತಿಯಲ್ಲಿ ನಡೆದು ಒಳ್ಳೆಯ ಮುಹೂರ್ತದಲ್ಲಿ ಮಂಗಳಕರವಾದ ಮೀಸೆ ಹಾಗೂ ತಲೆಗೂದಲನ್ನು ಹೊಂದಿರುವವನೂ, ವಿಶಾಲವಾದ ಜಿಂಕೆಯ ಚರ್ಮವನ್ನು ಮೇಲುಹೊದಿಕೆಯಾಗುಳ್ಳವನೂ, ಜಿಂಕೆಯ ಕೊಂಬಿನಂತೆ ಅಲುಗಾಡದ ಮನೋಹರವಾದ ಕಮಲದಂತಹ ಕೈಗಳನ್ನು ಹೊಂದಿರುವವನೂ, ಬೆಣ್ಣೆಯನ್ನು ಲೇಪಿಸಿದ, ಪುಷ್ಟವಾದ, ನಿರ್ಮಲವಾದ ದೇಹವುಳ್ಳವನೂ ಆದ ದೇವಲ ಮಹಾಋಷಿಯು ಯಜ್ಞದೀಕ್ಷೆಯನ್ನು ಸ್ವೀಕರಿಸಿ ಶ್ರೀ ವಿರೂಪಾಕ್ಷನ ತೃಪ್ತಿಗಾಗಿ ಗೋವಧೆಯೇ ಮೊದಲಾದ ಕರ್ಮಗಳನ್ನು ತೀರಿಸಿ ಮನೋಹರವಾದ ಯಾಗವನ್ನು ಮಾಡುತ್ತ ಒಪ್ಪಿದ್ದನು. ಅಷ್ಟು ಮಾತ್ರವಲ್ಲದೆ, ೫೭. ಚಂದ್ರನಿಗೆ ನೂತನವಾದ ಕಾಂತಿಯನ್ನೂ, ಇಂದ್ರನ ತಮ್ಮನಿಗೆ ಅತಿಶಯವಾದ ಘನತೆಯನ್ನೂ, ವಿದ್ವಾಂಸರಿಗೆ ಕೃಪಾದೃಷ್ಟಿಯನ್ನೂ, ದೇವೇಂದ್ರನಿಗೆ ಸಂತೋಷವನ್ನೂ, ಶಿವನಿಗೆ ಅತ್ಯಾನಂದವನ್ನೂ ತರುವಂತೆ ಮುನಿಯು ಯಾಗವನ್ನು ಮಾಡಿದನು. ೫೮. ಸಜ್ಜನರು ಉಬ್ಬಲು, ಶಾಸ್ತ್ರಜ್ಞಾನವುಳ್ಳವರು ಆಹಾ! ಎನ್ನಲು, ವೇದಗಳನ್ನು

ಇಂತು ಸಮಸ್ತಜನಸಂಚಯಂ ಸಂತಸಂಬಡೆಯಲಧ್ವರಮನತಿ ಸಂಭ್ರಮದಿಂದಂ ಮಾಡಿ ಸಕಲನಿಳಿಂಪನಿಕರಂ ದಣ್ಣನೆ ದಣಿಯಲಾದೇವಲಮಹಾಋಷೀಶ್ವರನತಿಸಂಭ್ರಮದಿಂ ಋತ್ವಿಜರ್ಗಳ್ವೆರಸಿ ನಿಗಮ ಮಂತ್ರಾನುವಾಕ್ಕುಗಳಿಂದಂ ಸ್ಮರಿಸಿ ಪೂರ್ಣಾಹುತಿಯಂ ಬೇಳ್ವಸಮಯದಲ್ಲಿ॥

ಪುಟ್ಟುವ ಘರ್ಮಬಿಂದು ಪೊಡೆವಳ್ಳೆಗಳ್ಳೆದೆ ದಿಶಾಂತರಾಳಮಂ
ನಿಟ್ಟಿಪ ದಿಟ್ಟಿ ಕಂಪಿಪೊಡಲಂಟಿಪ ಧೂಳಿಯೊಜಿಲ್ವನಿಸ್ವನಂ।
ನಿಟ್ಟುಸುರಂದು ವಿಸ್ಮಯಮನಾಗಿಸೆ ತಾಂ ಪರಿತಂದು ಕೂಡೆ ಕೂ
ಗಿಟ್ಟುಸುರ್ದಂ ಸಮಸ್ತಋಷಿಗಳ್ ಜರಿವೋಲ್ಚರನೊರ್ವನಳ್ಕುತುಂ ॥ ೫೯ ॥

ಎತ್ತಣಯಾಗ ವೆತ್ತಣ ಸುರಾರ್ಚನೆ ಯೆತ್ತಣ ಮಂತ್ರದೇಟ್ಟ್ರಿ ಮೇ
ಣೆತ್ತಣ ವೇದದುಚ್ಚರಣೆ ಯೆತ್ತಣಶಾಸ್ತ್ರದ ಬೊಬ್ಬೆ ಸಾರ್ದು ಬಂ।
ದತ್ತಿದೆ ಭೀಕರಾಕೃತಿಯದಾಂತಿರದೊಂದು ಕೃತಾಂತಮೂರ್ತಿಯೆಂ
ದುತ್ತಮರೆಲ್ಲರಳ್ಕಲುಸುರ್ದಂಚರನಂದುಱು ಬೆರ್ಚಿ ಬೀಱುತುಂ ॥ ೬೦ ॥

ಚರವಚಮಂ ಕೇಳ್ದಿಲ್ಲರ್
ಜರಿದಾಹಾ ಕೆಟ್ಟೆವೆಲ್ಲಿಯದು ಕೇಳೀ ಭೀ।
ಕರಮೆಂದವನಂ ಕೇಳ
ಲ್ಬಿರಿದುಂ ಭಯದಿಂದವರ್ಗೆ ಮಗುಟ್ದಿಂತೆಂದಂ ॥ ೬೧ ॥

ಬಲ್ಲವರು ಪ್ರಜ್ವಲಿಸುವ ನಿರ್ಮಲಾನಂದವನ್ನು ಹೊಂದಿರಲು, ಪಂಡಿತರು ಉತ್ಸಾಹಗೊಳ್ಳಲು, ಯೋಗಿಗಳು ವಿದ್ಯೆಗೆ ತಾವೇ ಮಾರ್ಗಧಾರಿಗಳು ಎನ್ನುವಂತಿರಲು, ದೀಕ್ಷೆ ಸ್ವೀಕರಿಸಿದವರು ಆಹಾ! ಎನ್ನಲು, ಬ್ರಾಹ್ಮಣ ಸ್ತ್ರೀಯರೆಲ್ಲಾ ಸಂತೋಷಗೊಂಡಿರಲು ಮುನಿಶ್ರೇಷ್ಠನು ಯಾಗವನ್ನು ಮಾಡಿದನು. ವ॥ ಹೀಗೆ ಸಕಲ ಜನರು ಸಂತೋಷಗೊಂಡಿರಲು ಯಾಗವನ್ನು ಹೆಚ್ಚಿನ ಸಂಭ್ರಮದಿಂದ ಮಾಡಿ ಸಕಲ ದೇವತೆಗಳೂ ತೃಪ್ತಿಯಿಂದ ತಣಿಯಲು ದೇವಲ ಮಹರ್ಷಿಯು ಸಡಗರದಿಂದ ಪುರೋಹಿತರುಗಳೊಡಗೂಡಿ ವೇದ ಮಂತ್ರಗಳ ಮೂಲಕ ಪೂರ್ಣಾಹುತಿಯನ್ನು ಕೊಡುವ ಸಂದರ್ಭದಲ್ಲಿ, ೫೯. ಹೊರಸೂಸುವ ಬೆವರು, ಹೊಡೆದುಕೊಳ್ಳುವ ಎದೆ, ದಿಕ್ಕುಗಳತ್ತ ದೃಷ್ಟಿ ಚೆಲ್ಲುವ ನೋಟ, ಕಂಪಿಸುವ ದೇಹ, ಅಂಟಿದ ಧೂಳು, ನೋವಿನಿಂದ ಕೂಗುವ ಧ್ವನಿ, ನಿಡಿದಾದ ಉಸಿರು - [ಇವು] ಅಂದು ಆಶ್ಚರ್ಯವನ್ನುಂಟುಮಾಡಿರಲು ಚರನೋರ್ವನು ಬಂದು ಒಮ್ಮೆಲೆ ಎತ್ತರದ ದನಿಯಲ್ಲಿ ಸಕಲ ಋಷಿಗಳು ದೂರಸರಿಯುವಂತೆ ಹೆದರುತ್ತ ಹೇಳತೊಡಗಿದನು. ೬೦. "ಎಲ್ಲಿಯ ಯಾಗ, ಎಲ್ಲಿಯ ದೇವತಾರ್ಚನೆ, ಎಲ್ಲಿಯ ಮಂತ್ರೋನ್ನತಿ, ಎಲ್ಲಿಯ ವೇದಮಂತ್ರಘೋಷ, ಎಲ್ಲಿಯ ಶಾಸ್ತ್ರದ ಬೊಬ್ಬೆ, ಇದೊ ಯಮನಂತಿರುವ ಭೀಕರಾಕೃತಿಯೊಂದು ಬಿಡದೆ ಸಮೀಪಿಸುತ್ತಿದೆ" ಎಂದು ಸೇವಕನು ಉತ್ತಮರೆಲ್ಲರೂ ಹೆದರಿರಲು ಹೆಚ್ಚಿನ ಭೀತಿಗೊಳಗಾಗಿ ಹೇಳಿದನು. ೬೧. ಸೇವಕನ ಆ ಮಾತು ಕೇಳಿದವರೆಲ್ಲಾ ಅಲ್ಲಿಂದ ಸರಿದು "ಆಹಾ! ಕೆಟ್ಟೆವು, ಭಯವನ್ನುಂಟುಮಾಡುವುದು ಎಲ್ಲಿಯದು? ಹೇಳು" ಎಂದು ಅವನನ್ನು ಪ್ರಶ್ನಿಸಲು

ಬಂದಂ ನಿರ್ಘರ್ಜನೆನಿಪಾ
ಬೃಂದಾರಕವೈರಿ ಯೆಂದೆನುತ್ತುಂ ಭಯದೊಳ್।
ಸಂದು ನುಡಿದವನ ನುಡಿಗೇ
ಳ್ದಂದೆಲ್ಲರ್ ಕಂದಿ ಕುಂದಿ ಕಣ್ಗೆಡುವಾಗಳ್ ॥ ೬೨ ॥

ಶರನಿಧಿಗಳ್ಘೂರ್ಮಿಸೆ ದಿ
ಕ್ಕರಿಗಳ್ ಘೀಂಟಿಡೆ ನಿಳಿಂಪರಳ್ಕೆ ಸಮಸ್ತೋ।
ರ್ವರೆಯೆಲ್ಲಂ ಕಂಪಿಸೆ ಬೇ
ಡರ ನಾದಮದೊಂದು ಪರ್ವಿದುದು ದಿಕ್ಚಯಮಂ ॥ ೬೩ ॥

ಇಂತು ಪುಟ್ಟ ದಿಶಾಚಕ್ರಮಂ ಕೊರ್ವಿ ಪರ್ವಿದ ತನ್ನಾದಮಂ ಕೇಳುತುಂ ಋತ್ವಿಜರುಬ್ಬೆಗಂಗೊಳೆ ಹೋತೃಗಳಾಕರಿಸೆ ಸಾಮಾಜಿಕರ್ ಸಂಕ್ಲೇಶಂ ಬಡೆಯೆ ಆಚಾರ್ಯರಡಂಗೆ ಋಗ್ವೇದಿಗಳ್ ಜಗ್ಗನೆ ಜರಿಯೆ ಯಜುರ್ವೇದಿಗಳ್ ಗಜಬಜಿಸೆ ಸಾಮವೇದಿಗಳ್ಸಂತಾಪಿಸೆ ಅಥರ್ವಣವೇದಿಗಳಳ್ಕೆ ಇತಿಹಾಸಜ್ಞರ್ಮತಿಗೆಡೆ ವೇದಾಂತಿಗಳ್ವ್ಯಾಕುಲಂಗೊಳೆ ಶ್ರೌತಜ್ಞರ್ಶಂಕಿಸೆ ಪೌರಾಣಿಕರ್ಪೂರ್ಣ ಭಯರಾಗೆದೀಕ್ಷಿತರ್ಕೂಗಿಡೆ ನಿಟ್ಟೈದೆಯರ್ಕೆಟ್ಟೆವೆಂದೆನೆ ತರ್ಕಿಗಳ್ತಳ್ಳಂಕಗೊಳೆ ವ್ಯಾಕರಣಿಗಳ್ ವಿಹ್ವಲರಾಗೆ ಆಲಂಕಾರಿಕರಳವಳಿಯೆ ಪಿರಿದುಂ ಶಾಸ್ತ್ರಿಗಳ್ ಪರವಶರಾಗೆ ಕವಿಗಳ್ಕಳವಳಿಸೆ ಗಮಕಿಗಳ್ಭ್ರಮಿತರಾಗೆ ವಾದಿಗಳ್ಮೋದಂಗುಂದೆ ವಾಗ್ಮಿಗಳೊಳಗಾಗೆ ಸಕಲಪರಿಚಾರಕರ್ವಿಕಳರಾಗೆ ಮುನಿಗಳ್ಮಂದುಗೆಡೆ ಬಾಲೆಯರ್ಲೀಲೆಗುಂದೆ ಮುಗ್ಧೆಯರ್ಮೂರ್ಛೆಯೊಳೊಂದೆ ಪ್ರೌಢೆಯರ್ಪ್ರಳಾಪಿಸೆ ಲೋಲೆಯರ್ಲೋಲಚಿತ್ತೆಯರಾಗೆ ವೃದ್ಧೆಯರ್ ಕರಿಗರಿಗಂದಲ್ ಅಧ್ವರಕ್ಕೆ ಬಂದಖಿಳಸತ್ಪುರುಷಸಂಚಯಮೆಲ್ಲಂ ವಿಸ್ಮಯಗೊಂಡು ಕಳವಳಿದು ಕಂದಿ ಕಣ್ಗೆಡುವ ಸಮಯದಲ್ಲಿ,

ಹೆಚ್ಚಿನ ಭಯಕ್ಕೊಳಗಾದ [ಅವನು] ಅವರಿಗೆ ಮತ್ತೆ ಹೀಗೆಂದನು. ೬೨. "ನಿರ್ಘರ್ಜನೆಂಬ ರಾಕ್ಷಸನು ಬರುತ್ತಿರುವನು" ಎಂದು ಹೇಳಲು, ಭಯಮಿಶ್ರವಾದ ಅವನ ಆ ಮಾತನ್ನು ಕೇಳಿ ಎಲ್ಲರೂ ಕಂದಿ ಕುಂದಿ ಕಂಗೆಟ್ಟಿರುವಾಗ, ೬೩. ಸಮುದ್ರವು ಭೋರ್ಗರೆಯಲು, ದಿಗ್ದಂತಿಗಳು ಘೀಂಕಾರ ಮಾಡಲು, ದೇವತೆಗಳು ಹೆದರಲು, ಸಕಲ ಭೂಮಂಡಲವೆಲ್ಲ ಕಂಪಿಸಲು ಬೇಟೆಗಾರರ ಧ್ವನಿಯು ದಿಕ್ಕುದಿಕ್ಕುಗಳನ್ನೆಲ್ಲಾ ವ್ಯಾಪಿಸಿತು. ವ॥ ಹೀಗೆ ಜನಿಸಿ ದಿಕ್‌ಚಕ್ರವನ್ನು ಕೊಬ್ಬಿ ಹಬ್ಬಿದ ಆ ಧ್ವನಿಯನ್ನು ಕೇಳುತ್ತ ಯಜ್ಞದ ಪುರೋಹಿತರುಗಳು ಕಳವಳಗೊಳ್ಳಲು, ಯಜ್ಞಮಾಡುವವರು ಗುಂಪುಗೂಡಿರಲು, ಸಭಿಕರು ಚಿಂತೆಗೊಂಡಿರಲು, ಆಚಾರ್ಯರು ಹಿಂದೆ ಸರಿದಿರಲು, ಋಗ್ವೇದಿಗಳು ಥಟ್ಟನೆ ಕುಸಿದು ಬೀಳಲು, ಯಜುರ್ವೇದಿಗಳು ಗಲಭೆಮಾಡುತ್ತಿರಲು, ಅಥರ್ವವೇದಿಗಳು ಹೆದರಿರಲು, ಇತಿಹಾಸಜ್ಞರು ಬುದ್ಧಿಗೆಟ್ಟಿರಲು, ವೇದಾಂತಿಗಳು ಚಿಂತೆಗೊಂಡಿರಲು, ಶ್ರೌತಜ್ಞರು ಶಂಕಿಸುತ್ತಿರಲು, ಪೌರಾಣಿಕರು ಪೂರ್ಣ ಭಯಗೊಂಡಿರಲು, ದೀಕ್ಷಿತರು ಗೋಳಾಡುತ್ತಿರಲು, ಮುತ್ತೈದೆಯರು ತಾವು ಹಾಳಾದೆವು ಎನ್ನುತ್ತಿರಲು, ತಾರ್ಕಿಕರು ಬೆದರಿರಲು, ವ್ಯಾಕರಣಿಗಳು ದಿಗ್ಭ್ರಮೆಗೊಂಡಿರಲು, ಅಲಂಕಾರಿಗಳು ಶಕ್ತಿಗುಂದಿರಲು, ಹಿರಿಯ ಶಾಸ್ತ್ರಿಗಳು ಎಚ್ಚರ ತಪ್ಪಿರಲು, ಕವಿಗಳು ಕಳವಳಗೊಂಡಿರಲು, ಗಮಕಿಗಳು ಮರುಳುಗೊಂಡಿರಲು, ವಾದಿಗಳು ಸಂತೋಷಗುಂದಿರಲು, ವಾಗ್ಮಿಗಳು ಅಧೀರರಾಗಿರಲು, ಎಲ್ಲ ಸೇವಕರು ಗಾಬರಿ ಗೊಂಡಿರಲು, ಮುನಿಗಳು ಭ್ರಾಂತಿಗೊಂಡಿರಲು, ಬಾಲೆಯರು ವಿಲಾಸರಹಿತೆಯರಾಗಿರಲು,

ಸುಜನಜನಪ್ರಮೋದಘನಕುಂಜನಿಕಾಯಮನೊತ್ತಿ ಮೆಟ್ಟುತಂ
ಬುಜದಳಲೋಲಲೋಚನೆಯರೆಂಬೆಳವಳ್ಳಿಗಳಂ ಕಡಂಗಿ ಯ।
ಕ್ಕಜದಿನಡಂಗಿಸುತ್ತೆ ಮುನಿಶಾಂತಿಜಳೌಘಮನೀಂಟುತ್ತೈದೆ ಖು
ತ್ವಿಜರೆರ್ದೆಬೆಂಚೆಯಂ ಮಿಗೆ ಕಲಂಕುತೆ ಬಂದುದು ದೈತ್ಯಕುಂಜರಂ ॥ ೬೪ ॥

ನೀಲಮಹೀಧರಮುಱು' ಕೈ
ಕಾಲಂ ಮೇಣ್ತೊಳೆದು ಸುಳಿದುದೋ ಯೆನೆ ದೀರ್ಘ।
ಸ್ಥೂಲಸ್ವರೂಪದಿಂದಂ
ಕಾಲನಿಭಂ ಬಂದನಲ್ಲಿಗಂದು ನಿಘರ್ಜಂ ॥ ೬೫ ॥

ಸ್ಫುರಿತೋದ್ಯದ್ಭೀಮದಂಷ್ಟ್ರಂಪೃಥುಲತರಭುಜಂ ದೀರ್ಘರೋಮಂ ಮಹಾಭೀ
ಕರವಕ್ತ್ರಂ ಕಾಳಮೇಘಚ್ಛವಿನಿಭಘನಗಾತ್ರಂ ಚಲದ್ವಿಸ್ಫುಲಿಂಗೋ।
ತ್ಕರಕೀರ್ಣಾಂದೋಳನೇತ್ರಂ ಪ್ರಬಲಗಳಬಿಲಂ ಭೀಷಣಾಟ್ಟಪ್ರಹಾಸಂ
ಪಿರಿದುಂ ತಾಂ ಭೀತಿಯಂ ಪುಟ್ಟಿಸುತುಱು' ನಡೆತಂದಂ ನಿಘರ್ಜಾಸುರೇಂದ್ರಂ ॥ ೬೬ ॥

ಇಂತುಗ್ರಾಕಾರದಿಂ ಬರ್ಪ ದನುಜೇಂದ್ರನಾರ್ಭಟೆಯಂ ಕೇಳ್ದು ಮೊಬಿಗಂ ಕೇಳ್ದ ಕಳಹಂಸನಂತೆ ಸಮಸ್ತಬ್ರಾಹ್ಮಣೋತ್ತಮರ್ಬೆಗಡುಗೊಂಡು ಎಳವೆಣ್ಗಳ್ಕಳೆಯಬಿ'ದಖಿಳಜನಂ ವಿಕಳಂಗೊಂಡೋಡಲ್ ಅತಿ ಪ್ರತಾಪನಿಳಯನೆನಿಪ್ಪುದ್ಭಟದೇವ ನಾಲೋಕನಂ ಗೈದು ಎಲ್ಲರುಮನಂಜದಿರೆಂದಭಯಂ ಗೊಟ್ಟು

ಮುಗ್ಧೆಯರು ಮೂರ್ಛೆಹೋಗಿರಲು, ಪ್ರೌಢೆಯರು ಗೋಳಾಡುತ್ತಿರಲು, ಚಂಚಲೆಯರು ಡೋಲಾಯಮಾನ ಚಿತ್ತರಾಗಿರಲು, ವೃದ್ಧೆಯರು ಕರಿಮುರಿಗೊಂಡಿರಲು, ಯಾಗಕ್ಕೆ ಬಂದ ಸಕಲ ಸತ್ಪುರುಷರುಗಳೆಲ್ಲ ಅಚ್ಚರಿಗೊಂಡು, ದುಃಖಿಸಿ, ಬಾಡಿ ಕಂಗೆಟ್ಟಿರಲು ಆ ಸಮಯದಲ್ಲಿ, ೬೪. ಸಜ್ಜನರ ಸಂತೋಷವೆಂಬ ಲತಾಮಂಟಪವನ್ನು ಒತ್ತಿ ಮೆಟ್ಟುತ್ತ, ಚಾಂಚಲ್ಯವನ್ನೊಳ-ಗೊಂಡ ಕಮಲಲೋಚನೆಯರೆಂಬ ಎಳೆಯ ಬಳ್ಳಿಗಳನ್ನು ಅತ್ಯುತ್ಸಾಹದಿಂದ ನಾಶಮಾಡುತ್ತ, ಮುನಿಗಳ ಶಾಂತಿಯೆಂಬ ಮೋಡವನ್ನು ಚೆನ್ನಾಗಿ ಸವಿಯುತ್ತ, ಯಜ್ಞದ ಪುರೋಹಿತರ ಹೃದಯ ಸರೋವರವನ್ನು ಚೆನ್ನಾಗಿ ಕಲಕುತ್ತ ರಾಕ್ಷಸನೆಂಬ ಆನೆಯು ಬಂದಿತು. ೬೫. ನೀಲಪರ್ವತವು ಚೆನ್ನಾಗಿ ಕೈಕಾಲು ತೊಳೆದು ಕಾಣಿಸಿಕೊಂಡಿತೋ ಎನ್ನುವಂತೆ ದೀರ್ಘವೂ ಸ್ಥೂಲವೂ ಆದ ಆಕಾರದಿಂದ ಯಮನಿಗೆ ಎಣೆಯಾದ ನಿಘರ್ಜನು ಅಲ್ಲಿಗೆ ಅಂದು ಬಂದನು. ೬೬. ಹೊಳೆಯುವ ದಪ್ಪ ಕೋರೆಹಲ್ಲುಗಳು, ವಿಶಾಲವಾದ ಭುಜಗಳು, ಉದ್ದನೆಯ ಕೂದಲು, ಅತಿ ಭೀಕರವಾದ ಮುಖ, ಕಪ್ಪು ಮೋಡವನ್ನು ಹೋಲುವ ಸ್ಥೂಲ ಶರೀರ, ಹೊಳೆಯುವ ಕೆಂಗಿಡಿ ಕಾರುವ ಚಂಚಲ ಕಣ್ಣುಗಳು, ದೊಡ್ಡ ಬಿಲದೋಪಾದಿಯಲ್ಲಿರುವ ಕಂಠ, ಭಯಂಕರವಾದ ಅಟ್ಟಹಾಸ, ಹೀಗೆ ನಿಘರ್ಜನೆಂಬ ರಾಕ್ಷಸನು ಹೆಚ್ಚಿನ ಭಯವನ್ನುಂಟುಮಾಡುತ್ತ ಅತಿಶಯವಾಗಿ ನಡೆದುಬಂದನು. ವ॥ ಹೀಗೆ ಭೀಕರಾಕೃತಿಯನ್ನು ಧರಿಸಿ ಬರುತ್ತಿರುವ ರಾಕ್ಷಸನ ಗರ್ಜನೆಯನ್ನು ಕೇಳಿ ಗುಡುಗಿನ ದನಿಯನ್ನು ಕೇಳಿದ ರಾಜಹಂಸದಂತೆ ಸರ್ವ ಬ್ರಾಹ್ಮಣ ಶ್ರೇಷ್ಠರು ಹಿಂದೆಗೆದು, ಎಳೆಯ ಪ್ರಾಯದ ಸ್ತ್ರೀಯರು ಕಾಂತಿಗುಂದಿ, ಸಕಲ ಜನರು ಗಾಬರಿಗೊಂಡು ಓಡಲು, ಅತಿಶಯ ಶೌರ್ಯಕ್ಕೆ ನೆಲೆಮನೆಯಾದ ಉದ್ಭಟದೇವನು [ಸಂದರ್ಭವನ್ನು] ವಿಚಾರಮಾಡಿ ಎಲ್ಲರನ್ನೂ

ಸಂತವಿಸಿ ನಿಲಿಸಿ ತದ್ದೇವಲಮಹಾಋಷೀಶ್ವರನ ಪರಕೆಗಳಂ ಕೈಕೊಂಡು ಅಧ್ವರಶಾಲೆಯಂ ಪೊಱಮಟ್ಟಾನಂದದಿಂದಾನೆಯ ಬೆಂಗೆ ವಾಯ್ದು ಗಜತುರಗಪದಾತಿವೆರಸೆಟ್ಟಿಂದು ಜಂಭಂದಿಗಿರ್ವಪ್ಪ ಜಂಭಾರಿಯಂತುರುತರಭೀಕರಾಕೃತಿಯಂ ಧರಿಸಿ ಬರ್ಪರಕ್ಕಸನನಲ್ಪಹಾಸಸ್ಫುರಿತಮುಖಾರವಿಂದನುದ್ಭಟ ಕ್ಷಿತೀಂದ್ರಚಂದ್ರಮಂ ಕಂಡು,

ಇವನೇ ಬರ್ಪವನುರ್ವಿಗುತ್ಕಳನಿಘರ್ಜಂ ದೇವಲಾಚಾರ್ಯನು
ತ್ಸವದಿಂ ಮಾಡುವ ಯಾಗಮಂ ತವಿಪನೆಂದಲ್ಪಸ್ಮಿತಾಸ್ಯಾಂಬುಜಂ।
ಸುವಿಲಾಸಂಬಡೆದಂದು ತನ್ನ ನಿಜಸೇನಾಚಕ್ರಮಂ ನೋಡೆ ಕಂ
ಡವನೀಶಾಜ್ಞೆಯನಾಂತು ಮುತ್ತಿದುದು ತತ್ಸೈನ್ಯಂ ಮಹಾದೈತ್ಯನಂ ॥ ೬೭ ॥

ಇಂತುದ್ಭಟರಾಜೇಂದ್ರಚಂದ್ರಮನನುಜ್ಞೆಯಿಂದಂ ಮುತ್ತಿ ಮುಸುಂಕಿದಖಿಳಸೇನಾಚಕ್ರಮಂ ಕಂಡುಕ್ಕಿ ರಕ್ಕಸರೆಱೆಯಂ ಲೆಕ್ಕಿಸದೆ ಮಿಕ್ಕು ಬರೆವರೆ,

ನೀಡಡಿಯಿಟ್ಟು ತಳ್ವಿ ಬಿಡದೆತ್ತಿ ಭುಜಾಗ್ರಮನೈದೆ ಲಕ್ಷ್ಯಮಂ
ನೋಡಿಯುಗುರ್ವಿನಂ ಕಿವಿವರಂ ತೆಗೆದುನ್ನತಚಾಪಮಂ
ಕೋಡದೆ ನಿಲ್ತುಬೊಬ್ಬೆಗುಡುತುರ್ಬಿ ನಿಘರ್ಜನ ಮೇಲೆ ರೌದ್ರದಿಂ
ಕೂಡೆ ಶರಾಳಿಯಂ ಕಱೆದರಾಹವದೊಳ್ ಕಡುಬಿಲ್ಲಬಿತ್ತಿಗರ್ ॥ ೬೮ ॥

ಪಿರಿದುಂ ಬಿಲ್ಲವರಿಸೆ ತ
ಚ್ಛರಮಸುರನನೈದೆ ತಾಗೆ ಹಿಮ್ಮೆಟ್ಟುವವಂ।
ದುರುನೀಲಾದ್ರಿಯ ಮೇಲತಿ
ಭರದಿಂ ಪಡಲಿಟ್ಟು ಸಿಡಿವಮಱೆವನಿಗಳವೋಲ್ ॥ ೬೯ ॥

ಅಂಜಬೇಡಿರೆಂದು ಸಮಾಧಾನಿಸಿ, ಅವರಿಗೆ ಧೈರ್ಯತುಂಬಿ [ಓಡದಂತೆ] ಒಂದೆಡೆ ನಿಲ್ಲಿಸಿ ಆ ದೇವಲ ಮಹರ್ಷಿಯ ಆಶೀರ್ವಾದ ಪಡೆದು ಯಾಗಶಾಲೆಯಿಂದ ಹೊರಬಂದು ಆನಂದದಿಂದ ಆನೆಯ ಹಿಂಭಾಗದಿಂದೇರಿ ಆನೆ, ಕುದುರೆ, ಪದಾತಿ ಸೈನ್ಯಗಳಿಂದ ಕೂಡಿ ಸಾಗಿ ಜಂಭನೆಂಬ ರಾಕ್ಷಸನಿಗೆ ಎದುರಾದ ದೇವೇಂದ್ರನಂತೆ ಅತಿ ಭೀಕರಾಕೃತಿಯನ್ನು ತಾಳಿ ಬರುತ್ತಿರುವ ರಾಕ್ಷಸನನ್ನು ಕಿರುನಗೆಯಿಂದ ಬೆಳಗುತ್ತಿರುವ ಮುಖಕಮಲದ ಉದ್ಭಟ ಮಹಾರಾಜಚಂದ್ರಮನು ನೋಡಿ, ೬೭. "ಮುಂದೆ ಬರುತ್ತಿರುವ ಇವನು ಭೂಮಿಗೆ ಅತಿ ದುಷ್ಟನಾದ ನಿಘರ್ಜನು, ದೇವಲ ಗುರುವು ಸಂತೋಷದಿಂದ ಮಾಡುತ್ತಿರುವ ಯಾಗವನ್ನು ಕೆಡಿಸುತ್ತಿರುವವನು" ಎಂದು ಕಿರುನಗೆಯಿಂದ ಕೂಡಿದ ಮುಖಕಮಲವುಳ್ಳ ಉದ್ಭಟನು ಉಲ್ಲಾಸಯುಕ್ತನಾಗಿ ಅಂದು ತನ್ನ ಸೇನಾಸಮೂಹವನ್ನು ನೋಡಲು, ಅದರಿಂದ ಉತ್ತೇಜಿತರಾಗಿ ಒಡೆಯನಾಜ್ಞೆಯನ್ನು ಪಡೆದು ಆ ಸೈನ್ಯವು ಮಹಾರಾಕ್ಷಸನನ್ನು ಮುತ್ತಿತು. ವ॥ ಹೀಗೆ ಉದ್ಭಟ ಮಹಾರಾಜಚಂದ್ರಮನ ಅನುಜ್ಞೆಯಿಂದ ಮುತ್ತಿ ಆವರಿಸಿದ ಸಕಲ ಸೇನಾ ಸಮೂಹವನ್ನು ನೋಡಿ ಗರ್ವಿಸಿ ರಾಕ್ಷಸರೊಡೆಯನಾದ ನಿಘರ್ಜನು ಅದನ್ನು ಗಮನಕ್ಕೆ ತಂದುಕೊಳ್ಳದೆ ಮೀರಿ ಮುತ್ತುತ್ತಿರಲು, ೬೮. ಯುದ್ಧದಲ್ಲಿ ಬಿಲ್ವಿದ್ಯೆಯಲ್ಲಿ ಹೆಚ್ಚಿನ ಪರಿಣತರಾದ ಬಿಲ್ಗಾರರು ನೀಳವಾದ ಪಾದಗಳನ್ನು ಊರಿ ಬಿಲ್ಲನ್ನು ತೆಗೆದುಕೊಂಡು ಕೈಯಲ್ಲಿ ಹಿಡಿದು ಎದುರಾಳಿ ಭಯಗೊಳ್ಳುವಂತೆ ಕಿವಿಯವರೆಗೆ ಎಳೆದು ಗುರಿಯಿಟ್ಟು ಬೆದರದೆ ನಿಂತು ಬೊಬ್ಬೆ ಹಾಕಿ ನಿಘರ್ಜನ ಮೇಲೆ ತಮ್ಮ ಕೋಪ ಪ್ರಕಟಿಸಿ ಬಾಣಗಳನ್ನು ಸುರಿಸಿದರು. ೬೯. ಅನಂತರ ಬಿಲ್ವಿದ್ಯೆಯಲ್ಲಿ ನಿಷ್ಣಾತರಾದ ಬಿಲ್ಗಾರರು ಬಿಟ್ಟ ಬಾಣಗಳು

ನೇಸರ ಕಿರಣಸಮಾಜಂ
ಬಾಸಣಿಸಿದ ಕಾರ್ಮುಗಿಲೊಳಡಂಗುವ ತೆಱದಿಂ।
ಸಾಸಿಗರೆಚ್ಚ ಶರಾವಳಿ
ಮಾಸಿದುದಾದನುಜನಂಗರುಹಸಂಚಯದೊಳ್ ॥ ೭೦ ॥

ಮತ್ತಮದಲ್ಲದಾರ್ದು ಸಾರ್ದಿಸುವ ಬಿಲ್ಲರೇಱ್ಗೆಯನಾದನುಜೇಂದ್ರಂ ಕಂಡು,

ದೆಸೆ ಬಿರಿವಂತಾರ್ದುಱ್ ಮಾ
ಮಸಕದಿನೆಟ್ಟಿಂದು ರಕ್ಕಸಂ ಬಿಲ್ವಡೆಯಂ।
ಪೊಸನೆತ್ತರ ಪೂರಂಗಳ್
ಮಸುಗುವಿನಂ ಕುಸುರಿದಱಿದು ಕೆಡಪಿದನಾಗಳ್ ॥ ೭೧ ॥

ಪರ್ಬಿದ ಶಾಳಿಯನುಱ್ ಪೊ
ಕ್ಕುರ್ಬಿಂ ವಾಹದ್ವಿಷಂ ಪಡಲ್ವಡಿಸುವವೋಲ್।
ಕೊರ್ಬಿದ ಬಿಲ್ವಡೆಗೆ ಪಡ
ಲ್ತೆರ್ಬಿದರೆಟ್ಟಿಂದು ಸಬಳಿಗರ್ಸುರರಿಪುವಂ ॥ ೭೨ ॥

ಅಳ್ಳೆರ್ದೆಗಳಕಟ ಕೊಂತದ
ಹೊಳ್ಳುಗರೆನಗಾಂತು ನಿಲ್ವುದಚ್ಚರಿ ಯೆನುತುಂ।
ದಳ್ಳುರಿಗಳ್ ಕಣ್ಗೊನೆಯೊಳ್
ಮಿಳ್ಳಿಸೆ ಬಿಲ್ತೊಡವುತಸುರನಂದಿದಿರಾದಂ ॥ ೭೩ ॥

ವಿಶಾಲವಾದ ನೀಲಪರ್ವತದ ಮೇಲೆ ಮಳೆಯು ಬಿರುಸಿನಿಂದ ಸುರಿಯುತ್ತಿದ್ದರಿಂದ ಪರ್ವತವು ಸಿಡಿಯಿತೋ ಎನ್ನುವ ತರದಲ್ಲಿ ಆ ರಾಕ್ಷಸನನ್ನು ತಾಗಲು [ಅವುಗಳ] ಹೊಡೆತಕ್ಕೆ ಅವನು ಹಿಮ್ಮೆಟ್ಟಿದನು. ೭೦. ಸೂರ್ಯನ ಕಿರಣಗಳ ಸಮೂಹವು ಕವಿದ ಕಪ್ಪು ಮೋಡದಲ್ಲಿ ಅಡಗುವಂತೆ ಸಾಹಸಿಗಳು ಬಿಟ್ಟ ಬಾಣಗಳ ಸಮೂಹವು ಆ ರಾಕ್ಷಸನ ದೇಹದ ಮೇಲಿನ ಕೂದಲ ರಾಶಿಯಲ್ಲಿ ಕಳೆಗುಂದಿದವು. ವ॥ ಮತ್ತೆ ಅಷ್ಟಲ್ಲದೆ, ಗರ್ಜಿಸಿ ಸಮೀಪಿಸಿ ಬಂದು ಬಾಣವನ್ನು ಬಿಡುವ ಬಿಲ್ಗಾರರ ಮೇಲ್ಮೆಯನ್ನು ಆ ರಾಕ್ಷಸನು ನೋಡಿ, ೭೧. ದಿಕ್ಕುಗಳು ಬಿರಿಯುವಂತೆ ರಾಕ್ಷಸನು ಗರ್ಜಿಸಿ, ಅತ್ಯಂತ ರೋಷದಿಂದ ನಡೆದು ಬಂದು, ಬಿಲ್‌ಪಡೆಯನ್ನು ಹೊಸರಕ್ತದ ಪ್ರವಾಹವು ವ್ಯಾಪಿಸುವಂತೆ ಚೂರುಚೂರಾಗಿ ಕತ್ತರಿಸಿ ಚೆಲ್ಲಿದನು. ೭೨. ವಿಶಾಲವಾದ ಭತ್ತದ ಗದ್ದೆಯನ್ನು ನೀರು ಚೆನ್ನಾಗಿ ಹೊಕ್ಕು ರಭಸದಿಂದ ಚೆಲ್ಲಾಪಿಲ್ಲಿ ಮಾಡುವಂತೆ ಕೊಬ್ಬಿದ ಬಿಲ್‌ಪಡೆಯನ್ನು [ರಾಕ್ಷಸನು] ಚೆದುರಿಸಲು, ಸಬಳ ಹಿಡಿದ ವೀರರು ನಡೆದುಬಂದು ರಾಕ್ಷಸನನ್ನು ತಾಗಿದರು. ೭೩. "ನಡುಗುವ ಎದೆಯುಳ್ಳವರು, ಅಯ್ಯೋ ಸಬಳ ಹಿಡಿದ ಹೇಡಿಗಳು ನನ್ನನ್ನು ಎದುರಿಸಿ ನಿಲ್ಲುವುದು ಆಶ್ಚರ್ಯ" ಎಂದು ಹೇಳುತ್ತ ದಟ್ಟವಾದ ಕೋಪಜ್ವಾಲೆ ಕಣ್ಣ ಕೊನೆಯಲ್ಲಿ ಪುಟಿಯುತ್ತಿರಲು ಬಿಲ್ಲನ್ನು ಹಿಡಿದು

ಬಾಳೆಯ ಬನದೊಳ್ಮದಶುಂ
ಡಾಳಂ ಪೊಕ್ಕಂತೆ ಪೊಕ್ಕು ಸಬಳಿಗರಣಿಯಂ।
ತೂಳೆ ಬೞಿಕ್ಕಡ್ಡಣದ ಬ
ಲ್ಲಾಳಬಲಂ ಮುತ್ತಿ ಪೊಯ್ದುದಾರಕ್ಕಸನಂ ॥ ೭೪ ॥

ಖಣಿಖಟಿಲೆಂಬ ನಿನಾದಮ
ದಣೆಯಲ್ದಿಕ್ತಟಮನಲಗುಗಳ್ಕುರಿವನಮ।
ಡ್ಡಣಗಳೊಳಡಂಗಿ ಯಾಭಟ
ಗಣಮಸುರೇಂದ್ರನನಿದಿರ್ಚಿ ಕಾದಿದರಾಗಳ್ ॥ ೭೫ ॥

ಈತೆಱದಿಂ ಪೊಣರ್ವ ಭಟ
ವ್ರಾತಮನೀಕ್ಷಿಸಿ ನಿಘರ್ಜನುಱು ಕೋಪಿಸಿ ಭೂ।
ಜಾತಮನೊಂದಂ ಕಂಡತಿ
ಕೌತುಕಮೆನೆ ಸವರತೊಡಗಿದಂ ತದ್ಬಲಮಂ ॥ ೭೬ ॥

ಒಡ್ಡಿದ ಮೇಘಮಾಲೆ ಪರಿವಂತೆ ಸಮೀರಣನೇಟ್ಗೆಗಂದು ತೋ
ರ್ಪಡ್ಡಣದಾಳ್ಗಳೆಲ್ಲಮೞಿಯಲ್ಕೆಲಬರ್ಪರಿದೋಡೆ ನೋಡಿ ಭಾ।
ಪೆಡ್ಡಮುಮಾದುದೆಂದು ಕರಿರಾವುತಪಾಯಕರುರ್ಬಿ ಕೊರ್ಬಿ ಬಂ
ದಡ್ಡವಿಸುತ್ತೆ ನಿಲ್ತಸುರನೊಳ್ಮಿಗೆ ಪೋರ್ದರಖರ್ವಗರ್ವದಿಂ ॥ ೭೭ ॥

ಕಂಡು ರಕ್ಕಸರಾಣ್ಮನಾತುರಗವ್ರಜಂಗಳನೈದೆ ಮುಂ
ಕೊಂಡು ಮೇಣ್ಮಱಿವಿಂಡನೀಕ್ಷಿಸಿ ಕೋಳನಗ್ಗಲಿಪಂತೆ ಕೋ।
ದಂಡಮಂ ಮಿಗೆ ತೂಗಿಕೊಂಡೆದೆಪೊಕ್ಕು ತತ್ತುರಗಾಳಿಯಂ
ಖಂಡತುಂಡಮದಾಗೆ ಪೊಯ್ದತಿರೌದ್ರದಿಂ ಬರೆ ಮಾವುತರ್ ॥ ೭೮ ॥

ಅಂದು ರಾಕ್ಷಸನು ಇದಿರಾದನು. ೭೪. ಬಾಳೆಯ ತೋಟವನ್ನು ಮದ್ದಾನೆಯು ಪ್ರವೇಶಿಸಿದಂತೆ ಸಬಳ ಹಿಡಿದ ವೀರರ ಸೈನ್ಯವನ್ನು ಹಿಮ್ಮೆಟ್ಟಿಸಲು, ಅನಂತರ ಗುರಾಣಿ ಹಿಡಿದ ಸಮರ್ಥ ಪದಾತಿ ಸೈನ್ಯವು ಆ ರಾಕ್ಷಸನನ್ನು ಮುತ್ತಿ ಹೊಡೆಯಿತು. ೭೫. ಖಣಿಲ್ ಖಟಿಲ್ ಎಂಬ ದನಿಯು ದಿಕ್ಕು ದಿಕ್ಕುಗಳನ್ನು ಕವಿಯಲು, ಕತ್ತಿಗಳು ಪುಕ್ಕಲು ಮನಸ್ಸಿನ ಯೋಧರ ಗುರಾಣಿಗಳನ್ನು ತಾಗಿರಲು ಆಗ ಆ ವೀರರ ಸಮೂಹವು ರಾಕ್ಷಸನನ್ನು ಇದಿರಿಸಿ ಹೋರಾಡಿತು. ೭೬. ಈ ರೀತಿಯಲ್ಲಿ ಹೋರಾಡುತ್ತಿರುವ ವೀರರ ಸಮೂಹವನ್ನು ನಿಘರ್ಜನು ನೋಡಿ ಭೀಕರ ಕೋಪಗೊಂಡು ವೃಕ್ಷವೊಂದನ್ನು ನೋಡಿ ಅತ್ಯಾಶ್ಚರ್ಯವೆನ್ನುವಂತೆ [ಅದರಿಂದ] ಆ ಸೈನ್ಯವನ್ನು ನಾಶಮಾಡತೊಡಗಿದನು. ೭೭. ಗಾಳಿಯ ರಭಸಕ್ಕೆ ಕವಿದ ಮೋಡಗಳ ಮೊತ್ತವು ಹರಡಿಕೊಳ್ಳುವಂತೆ ಕಣ್ಣಿಗೆ ಬಿದ್ದ ಗುರಾಣಿ ಹಿಡಿದ ವೀರರೆಲ್ಲ ಅಂದು ಸಾಯಲು, ಜೀವದಾಸೆಗಾಗಿ ಕೆಲವರು ಓಡಿಹೋಗಲು, "ಆಹಾ! ಚೆನ್ನಾಯಿತು" ಎಂದು ಆನೆ ಕುದುರೆ ಸವಾರರು ಉಬ್ಬಿ ಕೊಬ್ಬಿ ಬಂದು ಅಡ್ಡಗಟ್ಟಿ ನಿಂತು ಮಹಾಗರ್ವದಿಂದ ರಾಕ್ಷಸನೊಡನೆ ತೀವ್ರವಾಗಿ ಸೆಣಸಾಡಿದರು. ೭೮. ಅವರನ್ನು ನೋಡಿದ ರಾಕ್ಷಸಾಧಿಪತಿಯು ಆ ಕುದುರೆಗಳ ಸಮೂಹವನ್ನು ಮೊದಲಿಗೆ ತಡೆದು, ಮಱಿಗಳ

ತುರಂಗಜಾಳಂ ಪರಿದತ್ತೆನುತ್ತುಂ
ಪುರುಪ್ರಕೋಪಂ ಬಡೆದಂದು ವೇಗದಿಂ।
ಕರಸ್ಥಿತೋ ದ್ಯತ್ಸೃಣಿಯಿಂದೆ ಪೊಯ್ದು ಕುಂ
ಜರಂಗಳಂ ನೂಂಕಿದರಾರ್ದು ಬಲ್ಮೆಯಿಂ ॥ ೭೯ ॥

ಮುಗಿಲಂಗಪ್ರಭೆ ನೀಟ್ಟಿ ರನ್ನದ ಗುಳಂ ಗೀರ್ವಾಣಬಾಣಾಸನಂ
ಮಿಗೆ ದಂತಂ ಕಡು ಮಿಂಚು ಬೃಂಹಿತರವಂ ಮೇಘಸ್ವನಂ ಭೋರೆನು।
ತ್ತೊಗುವಾಸಾರಮೆ ಮಾವುತಂ ಸುರಿವ ಬಾಣಶ್ರೇಣಿ ಮೇಣಾನೆ ನೆ
ಟ್ಟಗೆ ಕಾರ್ಗಾಲಮೆ ಧಾಳಿಯಿಟ್ಟು ಕವಿದಂತಾದತ್ತು ನೀಲಾದ್ರಿಯಂ ॥ ೮೦ ॥

ಈತೆಱದಿಂದೌಂಕಿದಿಭ
ವ್ರಾತಮನೀಕ್ಷಿಸಿ ನಿಘರ್ಜನಾರ್ಭಟಿಸುತ್ತುಂ।
ಪೂತು ಮಜ ಬಾಪೆನುತ್ತುಂ
ಶಾತಾಸಿಯನಾಂತು ಸವರತೊಡಗಿದನಾಗಳ್ ॥ ೮೧ ॥

ಮಂದೈಸಿದಂಧಕಾರಮ
ನಿಂದುದ್ಯುತಿ ಪೊಕ್ಕು ಬಿರ್ಚುವಂತೆ ನಿಘರ್ಜಂ।
ಸ್ಪಂದಾಸಿಯಿಂದ ಸಿಂಧುರ
ವೃಂದಮನಾರ್ದೆಱಗಿ ಕೊಂದನರೆನಿಮಿಷದೊಳಂ ॥ ೮೨ ॥

ಇಂತಸುರೇಂದ್ರನದಟನಳುರ್ಕೆಗಳ್ಕಿ ಸೊಕ್ಕಾನೆಗಳ್ ಪೆಡಂಮೆಟ್ಟಿ ಬರಲಲ್ಲಿಗಲ್ಲಿಗೆ ಚೆಲ್ಲಿದೆಲ್ಲಾದಳಂ ಕೂಡಿ ಮಗುಟ್ದಾರಕ್ಕಸರೆಱೆಯನುರ್ಕಂ ಮುಱಿವೆವೆಂದು ಕನಲ್ದು,

ಸಮೂಹವನ್ನು ನೋಡಿ ಸೆರೆಹಿಡಿಯುವಂತೆ ಬಿಲ್ಲನ್ನು ಚೆನ್ನಾಗಿ ಜೇವೊಡೆದು ಬಾಣವನ್ನು ಸೆಳೆದುಬಿಡಲು ಅದು ಆ ಕುದುರೆಗಳ ಸಮೂಹವನ್ನು ಖಂಡತುಂಡ ಮಾಡಲು, ಕೋಪಾವೇಶದಿಂದ ಮಾವುತರು ಬಂದರು. ೭೯. ಕುದುರೆಗಳ ಮೊತ್ತವು ಹಿಂದೆ ಸರಿಯಿತು ಎಂದು ಭಯಂಕರ ಕೋಪ ತಾಳಿದ ಮಾವುತರು ವೇಗವಾಗಿ ಕೈಯಲ್ಲಿನ ಅಂಕುಶದಿಂದ ಆನೆಗಳನ್ನು ತಿವಿದು ಆರ್ಭಟಿಸಿ ಬಲವಂತವಾಗಿ ಮುಂದೆ ತಳ್ಳಿದರು. ೮೦. ಮೋಡಗಳೇ ದೇಹಕಾಂತಿ, ಕಾಮನಬಿಲ್ಲೇ ಚಾಚಿದ ಚಿನ್ನದ ಪಕ್ಕರಕ್ಷೆ, ಹೊಳೆಯುವ ಮಿಂಚೇ ಉದ್ದವಾದ ದಂತ, ಮೋಡಗಳ ಗುಡುಗೇ ಘೀಂಕಾರ, ಭೋರೆಂದು ಸುರಿವ ಜಡಿಮಳೆಯೇ ಮಾವುತ, ಸುರಿವ ಬಾಣಗಳ ಸಮೂಹವೇ ಆನೆ [ಹೀಗೆ] ನೇರವಾಗಿ ಮಳೆಗಾಲವೆ ನೀಲಪರ್ವತದ ಮೇಲೆ ಧಾಳಿಮಾಡಿ ಆವರಿಸಿದಂತಾಗಿತ್ತು. ೮೧. ಈ ರೀತಿಯಲ್ಲಿ ಬಲವಂತವಾಗಿ ಮುಂದೆ ತಳ್ಳಿದ ಆನೆಗಳ ಸಮೂಹವನ್ನು ನೋಡಿ ನಿಘರ್ಜನು ಆರ್ಭಟಿಸುತ್ತ ಆಹಾ! ಭೇಷ್ ಭೇಷ್!! ಎಂದು ಹೇಳುತ್ತಾ ಹರಿತವಾದ ಕತ್ತಿ ಹಿಡಿದು ನಾಶಮಾಡತೊಡಗಿದನು. ೮೨. ಕವಿದ ಕತ್ತಲೆಯನ್ನು ಸೂರ್ಯಕಿರಣಗಳು ಪ್ರವೇಶಿಸಿ ನಿವಾರಿಸುವಂತೆ ನಿಘರ್ಜನು ಆನೆಗಳ ಸಮೂಹದ ಮೇಲೆ ಆರ್ಭಟಿಸಿ ಬಿದ್ದು ಅತ್ತಿತ್ತ ಚಲಿಸುವ ಕತ್ತಿಯಿಂದ ಅರೆನಿಮಿಷದಲ್ಲಿ ನಾಶಮಾಡಿದನು. ವ॥ ಹೀಗೆ ರಾಕ್ಷಸನ ಪರಾಕ್ರಮದ ಬಿಸಿಗೆ ಹೆದರಿ ಮದಿಸಿದ ಆನೆಗಳು ಹಿಮ್ಮೆಟ್ಟಿ ಬರಲು ಅಲ್ಲಲ್ಲಿ ಹರಡಿದ ಎಲ್ಲಾ ದಳಗಳು ಒಗ್ಗೂಡಿ ಮತ್ತೆ ಆ ರಾಕ್ಷಸರೊಡೆಯನ

ಉರುಸೈನ್ಯೋದಿತಮಾದ ರೇಣುಪಟಲಂ ಬ್ರಹ್ಮಾಂಡಮೆಂದೆಂಬ ಬಂ
ಧುರಚಾಮೀಕರಸತ್ಕರಂಡಕದೊಳಿರ್ದಾಕಾಶಮೆಂದೆಂಬ ಸುಂ।
ದರಿಯಂ ಬಿಟ್ಟ ಮನೋಜ್ಞನೂತನಲಸತ್ಸಿಂದೂರಸಂದೋಹದಂ
ತಿರೆ ಮತ್ತಂ ಕವಿದೊತ್ತಿಮುತ್ತಿದುದು ತಾಂ ಸೇನಾಳಿಯಾದೈತ್ಯನಂ ॥ ೮೩ ॥

ಇಂತೆಡೆವಿಡದೆ ಸುತ್ತಿ ಮುತ್ತಿ ಮುಸುಂಕಿ ಕಾದುವ ತನ್ಮಹಾಸೇನಾಚಕ್ರಮಂ ರಕ್ಕಸರೆಱೆಯಂ ಕಂಡು ಕನಲ್ದು,

ಕೆಂಡಮನಿಱುಂಪೆಗಳ್ ಬಂ
ದಂಡಲೆವುದಿದರಿದೆನುತ್ತೆ ದನುಜೇಂದ್ರಂ ಮುಂ।
ಕೊಂಡು ಬಲಮಂ ಮರುಳ್ಗಳ
ತಂಡಂ ನಲಿವಂತೆ ಕೊಂದನಾಗದಟಿಂದಂ ॥ ೮೪ ॥

ಅಸುರನ ವಿಕ್ರಮಮಂ ಸೈ
ರಿಸದಳ್ಕಿ ಸಮಸ್ತಸೇನೆ ಬಿದ್ದೋಡಲ್ಕಂ।
ಡಸಮಪ್ರತಾಪನಿಲಯಂ
ಶಶಿಕುಲಜನಿದಿರ್ಚಿ ನಿಲ್ತನುದ್ಭಟದೇವಂ ॥ ೮೫ ॥

ಕ್ಷ್ವೇಡೋಪಹತಿಗೆ ಸಗ್ಗಿಗ
ರೋಡಲ್ಕಂಡುಗ್ರನಂದು ನಿಲ್ತವೊಲಾರ್ಪಿಂ।
ಕೂಡೆ ಮಹಾವಾಹಿನಿಯಂ
ಜುಂಡಾಡುವ ರಕ್ಕಸಂಗಿದಿರ್ಚಿದನರಸಂ ॥ ೮೬ ॥

ಹೆಮ್ಮೆಯನ್ನು ಮುರಿಯುವೆವೆಂದು ಗರ್ಜಿಸಿ, ೮೩. ಅಪಾರವಾದ ಆ ಸೈನ್ಯದಿಂದುಂಟಾದ ಧೂಳೀಪಟಲವು ಬ್ರಹ್ಮಾಂಡವೆಂಬ ಮನೋಹರವಾದ ಚಿನ್ನದ ಭರಣಿಯಲ್ಲಿನ ಆಕಾಶಸುಂದರಿಯು ಬಿಟ್ಟ ಸುಂದರವೂ ನೂತನವೂ ಆದ ಮಿನುಗುವ ಆನೆಗಳ ಸಮೂಹವೆನ್ನುವಂತಿರಲು ಎಲ್ಲಾ ದಳವು ಆ ರಾಕ್ಷಸನನ್ನು ಕವಿದು ಒತ್ತಿ ಮುತ್ತಿತು. ವ॥ ಹೀಗೆ ಎಡೆಬಿಡದೆ ಸುತ್ತಿ ಮುತ್ತಿ ಆವರಿಸಿ ಹೋರಾಡುವ ಆ ಮಹಾಸೈನ್ಯವನ್ನು ರಾಕ್ಷಸರೊಡೆಯನು ಕಂಡು ಕೆರಳಿ, ೮೪. 'ಕೆಂಡವನ್ನು ಇರುವೆಗಳು ಬಂದು ಮುತ್ತಿ ಪೀಡಿಸುವುದು ಅಸಾಧ್ಯ' ಎಂದು ಹೇಳುತ್ತಾ ರಾಕ್ಷಸರೊಡೆಯನು ಸೈನ್ಯವನ್ನು ತಡೆದು ನಿಲ್ಲಿಸಿ, ಪಿಶಾಚಿಗಳ ತಂಡವು ಸಂತೋಷ ಹೊಂದುವಂತೆ ಪರಾಕ್ರಮದಿಂದ ಸೈನ್ಯವನ್ನು ನಾಶಗೊಳಿಸಿದನು. ೮೫. ರಾಕ್ಷಸನ ಪರಾಕ್ರಮವನ್ನು ಸಹಿಸಲಾರದೆ ಹೆದರಿ ಎಲ್ಲಾ ಸೈನ್ಯವು ಎದ್ದು ಬಿದ್ದು ಓಡುತ್ತಿರಲು ಎಣೆಯಿಲ್ಲದ ಪರಾಕ್ರಮಕ್ಕೆ ನೆಲೆಯಾಗಿರುವವನೂ ಚಂದ್ರ ವಂಶದಲ್ಲಿ ಜನಿಸಿದವನೂ ಆದ ಉದ್ಭಟನು ಅದನ್ನು ನೋಡಿ [ಆ ರಾಕ್ಷಸನನ್ನು] ಇದಿರಿಸಿ ನಿಂತನು. ೮೬. ಅಮೃತಮಥನದ ಸಮಯದಲ್ಲಿ ಹುಟ್ಟಿದ ವಿಷದ ಹೊಡೆತಕ್ಕೆ [ಹೆದರಿ] ದೇವತೆಗಳು ಓಡಿಹೋಗುತ್ತಿರಲು ಅದನ್ನು ನೋಡಿ ಶಿವನು ಅಂದು [ಲೋಕರಕ್ಷಣೆಗೆ] ನಿಂತಂತೆ ಇಂದು ಮಹಾಸೈನ್ಯವನ್ನು ಪೀಡಿಸಿದ ರಾಕ್ಷಸನಿಗೆ ಇದಿರಾಗಿ ಅರಸನು ನಿಂತನು.

ಇಂತುರ್ವಿ ಪರ್ವಿ ಕೊರ್ವಿದ ಸರ್ವಸೇನೆಯಂ ನಿರ್ವಾಪಣಂಗೈಯ್ಯುತ್ತುತ್ತುಂಗಗರ್ವ ಪರ್ವತಾರೂಢನಾಗಿ ಬರ್ಪ ದುರ್ವಾರಶಾರ್ವರೀ ಚರಂಗುದ್ಭಟೋರ್ವೀಚಂದ್ರಮನಿದಿರ್ಚಿ ನಿಲ್ತು,

ನಿಲ್ಲೆಲವೊ ದೈತ್ಯ ನಿನ್ನಯ
ಪಲ್ಲವಪಾಂಡಿತ್ಯಮಮಂ ದಳದೊಳುಱ ಮೆಱೆದಂ।
ತಿಲ್ಲೆನಗೆ ತೋಱೆನಲ್ಬಳ
ವಲ್ಲಭನಾನುಡಿಗೆ ಮೆಚ್ಚಿ ಮಗುಟ್ದಿಂತೆಂದಂ ॥ ೮೭ ॥

ಗೂಳಿಗೆ ವರ್ತಕವೇ ಸಮ
ಜೋಳಿ ಯೆನಗಮರತತಿಯೊಳೆಣೆಯ ಗಾಣೆಂ ನೀಂ।
ಕಾಳಗಕೆ ಕರೆವುದೆಂತಿದು
ಪಾಳಿಯೆ ನರನಾಥ ಪೋಗು ಜೀವಿಪೊಡೆಂದಂ ॥ ೮೮ ॥

ಎನಲುದ್ಭಟದೇವಂ ಕೇ
ಳ್ದನಲಂಗಾಜ್ಯಮನೆಱೆದವೊಲುರ್ಬುತ್ತುಂ ದೈ।
ತ್ಯನೆ ನೋಡೆಂದೆನುತಾಗ
ಳ್ಧನುವಂ ತೆಗೆದೆಚ್ಚನಮರರಚ್ಚರಿದಳೆಯಲ್ ॥ ೮೯ ॥

ಶ್ರೀಲೋಲನುದ್ಭಟಕ್ಷಿತಿ
ಪಾಲನ ಬಾಹಾಭುಜಂಗಜನಿತೋಗ್ರವಿಷ।
ಜ್ವಾಲೆಗಳೆನೆ ಪರಿದುವು ಶರ
ಜಾಲಂ ತದ್ದನುಜನಂಗದೊಳ್ ಶತಲಕ್ಷಂ ॥ ೯೦ ॥

ವ॥ ಹೀಗೆ ಉಬ್ಬಿ ಹಬ್ಬಿ ಕೊಬ್ಬಿ ಸಕಲ ಸೈನ್ಯವನ್ನು ನಾಶಮಾಡುತ್ತ, ಪರಮೋಚ್ಚವಾದ ಗರ್ವವೆನ್ನುವ ಪರ್ವತವನ್ನು ಏರಿ ಬರುತ್ತಿರುವ ಕಾರಿರುಳ ಪ್ರಾಣಿಯಂತಿರುವ ರಾಕ್ಷಸನನ್ನು ಉದ್ಭಟಮಹಾರಾಜಚಂದ್ರಮನು ಇದಿರಿಸಿ ನಿಂತು, ೮೭. "ಎಲವೊ ರಾಕ್ಷಸಾ ನಿಲ್ಲು, ನಿನ್ನ ಬಾಲಪಾಂಡಿತ್ಯವನ್ನು ಸೈನ್ಯದ ಮೇಲೆ ಚೆನ್ನಾಗಿ ತೋರಿದಂತೆ ಇಲ್ಲಿ ನನ್ನ ಮುಂದೆಯೂ ಅದನ್ನು ತೋರು" ಎನ್ನಲು ದುಷ್ಟರೊಡೆಯನು ಆ ಮಾತಿಗೆ ಮೆಚ್ಚಿ ಹೀಗೆಂದನು. ೮೮. "ಗೂಳಿಗೆ ವರ್ತಕಪಕ್ಷಿಯು ಸರಿಸಮನೆ? ನನಗೆ ದೇವತೆಗಳಲ್ಲಿ ಸಮನಾದವರನ್ನು ಕಾಣೆನು. ನೀನು ಯುದ್ಧಕ್ಕೆ ಕರೆಯುವುದು ಧರ್ಮವೆ? ಮಹಾರಾಜಾ, ಜೀವದಿಂದಿರ-ಬೇಕಾದರೆ ಮರಳಿ ಹೋಗು" ಎಂದನು. ೮೯. ಹಾಗೆ ಹೇಳಲು ಉದ್ಭಟದೇವನು ಅದನ್ನು ಕೇಳಿ ಬೆಂಕಿಗೆ ತುಪ್ಪವನ್ನು ಸುರಿದಂತೆ ಉಬ್ಬುತ್ತ "ಎಲೈ ರಾಕ್ಷಸನೆ ನೋಡು" ಎಂದು ಬಿಲ್ಲನ್ನು ತೆಗೆದು ದೇವತೆಗಳು ಅಚ್ಚರಿಗೊಂಡಿರಲು ಬಾಣವನ್ನು ಪ್ರಯೋಗಿಸಿದನು. ೯೦. ಲಕ್ಷ್ಮೀರಮಣನಾದ ಉದ್ಭಟಮಹಾರಾಜನ ಭುಜಸರ್ಪದಿಂದ ಹುಟ್ಟಿದ ಉಗ್ರ ವಿಷಜ್ವಾಲೆಗಳೊ ಎನ್ನುವಂತೆ ಆ ರಾಕ್ಷಸನ ಶರೀರದ ಮೇಲೆ ನೂರು ಲಕ್ಷ ಬಾಣಗಳು

ಬೆಚ್ಚರಮುದ್ಭಟನೃಪನಾ
ರ್ದೆಚ್ಚಂಬುಗಳಾನಿಘರ್ಜನಂಗಮನುಱ್ ಧ।
ಟ್ಟುರ್ಚಿ ಪರಿದೆಣ್ದೆಸೆಗಂ
ಮುಚ್ಚಿ ಮುಸುಂಕಿದುವು ದಿಗಧಿಪರ್ಬೆಚ್ಚುವಿನಂ ॥ ೯೧ ॥

ಇಂತೆಸೆವುದ್ಭಟಧಾತ್ರೀ
ಕಾಂತನ ಶರಜಾಲದೇೞ್ಗೆಯಂ ಕಂಡಸುರಂ।
ತಾಂ ತಳ್ವದೆ ಧನುವಂ ಕೊಂ
ಡಂತಾನೃಪಬಾಣವಿತತಿಯಂ ಖಂಡಿಸಿದಂ ॥ ೯೨ ॥

ಭೂಮಿಪನುದ್ಭಟನ ಶರ
ಸ್ತೋಮಮನೆಡೆಯಲ್ಲಿ ಕಡಿದು ಕೋಪಾಟೋಪೋ।
ದ್ದಾಮಂ ನಿಸ್ಸೀಮಂ ಸಂ
ಗ್ರಾಮದೊಳಾನೃಪನನೆಚ್ಚು ಪೆರ್ಚಿದನಸುರಂ ॥ ೯೩ ॥

ಮಾಸಿದುದರ್ಕಮಂಡಲವರಂ ದ್ರವಮಾದುದು ಭೂಮಿ ಲೇಖರು
ಲ್ಲಾ ಸಮಡಂಗಿತೆಣ್ದೆಸೆಗಳಿಲ್ಲದೆ ಪೋದುವು ಮೇಘಜಾಳದಿಂ।
ಬಾಸಣಿಸಿರ್ದವೋಲ್ಗಗನಮಾದುದು ಭೂಪನ ಮೇಲೆ ದಾನವಾ
ಗ್ರೇಸರನುರ್ಕಿ ಸೊರ್ಕಿ ಕಡು ಬೆಚ್ಚರಮೆಚ್ಚಶರೌಘದೇೞ್ಗೆಯಿಂ ॥ ೯೪ ॥

ಈಪರಿಯಿಂ ಪರಿವಸ್ತ್ರಮನಂತಾ
ಭೂಪತಿ ನಿಟ್ಟಿಸಿ ತದ್ದನುಜೋದ್ಯ।
ಚ್ಚಾಪಮನಿಕ್ಕಡಿಯಾಗಿರೆ ಕೋಪಾ
ಟೋಪದಿನೆಚ್ಚುಱ್ ಪೆರ್ಚಿದನಾಗಳ್ ॥ ೯೫ ॥

ಹರಡಿದುವು. ೯೧. ಕಂಗೆಡಿಸುವ ಉದ್ಭಟ ಮಹಾರಾಜನ ಶಕ್ತಿಶಾಲಿಯಾದ ಬಾಣಗಳು ನಿಘರ್ಜನ ದೇಹವನ್ನು ಚೆನ್ನಾಗಿ ಭೇದಿಸಿ ದಿಗ್ದೇವತೆಗಳು ಬೆದರುವಂತೆ ಎಂಟೂ ದಿಕ್ಕುಗಳಿಗೆ ಹರಡಿ ಮುಚ್ಚಿ ಮುಸುಕಿದವು. ೯೨. ಹೀಗೆ ಶೋಭಿಸುವ ಉದ್ಭಟ ಮಹಾರಾಜನ ಬಾಣಗಳ ಹಿರಿಮೆಯನ್ನು ಕಂಡು ರಾಕ್ಷಸನು ತಡಮಾಡದೆ ಬಿಲ್ಲನ್ನು ಕೈಗೆ ತೆಗೆದುಕೊಂಡು ಆ ರಾಜನ ಬಾಣಗಳ ಮೊತ್ತವನ್ನು ಕತ್ತರಿಸಿದನು. ೯೩. ಕೋಪಾಟೋಪದಲ್ಲಿ ಉತ್ತಮನೂ, ಎಣೆಯಿಲ್ಲದವನೂ ಆದ ರಾಕ್ಷಸನು ಮಹಾರಾಜ ಉದ್ಭಟದೇವನ ಬಾಣಗಳ ಮೊತ್ತವನ್ನು ಮಾರ್ಗಮಧ್ಯದಲ್ಲಿಯೇ ಕತ್ತರಿಸಿ ಹಾಕಿ ಯುದ್ಧದಲ್ಲಿ ಮಹಾರಾಜನಿಗೆ ಇದಿರಾಗಿ ಬಾಣವನ್ನು ಪ್ರಯೋಗಿಸಿ ಗರ್ವಿಸಿದನು. ೯೪. ರಾಕ್ಷಸರೊಡೆಯನು ಉಕ್ಕಿ ಸೊಕ್ಕಿ ಮಹಾರಾಜನ ಮೇಲೆ ತೀವ್ರವಾಗಿ ಪ್ರಯೋಗಿಸಿದ ಬಾಣಗಳ ವಿಶೇಷತೆಯಿಂದಾಗಿ ಸೂರ್ಯಮಂಡಲದ ವರೆವಿಗೂ ಮಂಕು ಕವಿಯಿತು; ಭೂಮಿ ಕರಗಿತು; ದೇವತೆಗಳ ಸಂತೋಷವು ಅಡಗಿತು; ಎಂಟೂ ದಿಕ್ಕುಗಳು ಇಲ್ಲವಾದವು; ಆಗಸವು ಮೋಡಗಳಿಂದ ಮುಚ್ಚಿದಂತಾಯಿತು. ೯೫. ಈ ರೀತಿಯಿಂದ ಬರುವ ಬಾಣವನ್ನು ಆ ಮಹಾರಾಜನು ನೋಡಿ ಕೋಪಾಟೋಪದಿಂದ ರಾಕ್ಷಸನ ಬಿಲ್ಲು ಎರಡು ತುಂಡಾಗುವಂತೆ ಚೆನ್ನಾಗಿ ಬಾಣ ಪ್ರಯೋಗಿಸಿ

ಕರಧೃತಘನಚಾಪಂ ಭಗ್ನಮಾಗಲ್ಕಿಘರ್ಜಂ
ಸ್ಫುರಿತವಿಪುಳಕೋಪಾಟೋಪದಿಂದಂ ಮಹೋದ್ವೃ।
ತ್ತರುವನದಟಿನಿಂದಂ ಕರಂ ಕಿತ್ತು ಕೊಂಡ
ಬ್ಬರದಿನೆಱಗಿದಂ ಕೋಪದಿಂ ದಾನವೇಂದ್ರಂ ॥ ೯೬ ॥

ಚಂದ್ರನಂ ಘನಾಬ್ಜಮಾಲೆ ಮುಚ್ಚುವಂತೆ ಮುಚ್ಚಿ ನಿ
ಸ್ತಂದ್ರಶೂರನೈದೆ ಪೊಯ್ದು ಭೂಜಮಂ ನೃಪಾಲಕಂ।
ರುಂದ್ರಶಾತಖಡ್ಗದಿಂದೆ ಖಂಡಿಸಲ್ಕೆಗುಟ್ಟಿ ದೈ
ತ್ಯೇಂದ್ರನಾರ್ದು ಕೊಂಡನೊಂದು ಚಂಡಮಂಡಲಾಗ್ರಮಂ ॥ ೯೭ ॥

ಸ್ಫುರಿತೋದ್ಯಲ್ಲೋಚನಂ ಕೆಂಗಿಡಿಯನುಗುಳೆ ರೌದ್ರತ್ವಮಂ ತುಳ್ಕಲುಚ್ಚಂ
ಡರವಂ ಕೆಮ್ಮೀಸೆಗಳ್ಕೌರಿಡೆ ಭ್ರುಕುಟಿ ಕರಂ ಭೀತಿಯಂ ಬೀರೆ ಮೇಣ್ಪೇ।
ಕರಕೋಪಂ ಪೊಂಗಲಂತಾದನುಜಪತಿ ನಿಘರ್ಜಂ ಚಲತ್ಖಡ್ಗಮಂ ಕೊಂ
ಡಿರದುರ್ವೀನಾಥನಂನಿಟ್ಟಿಸಿ ನಸುನಗುತಿಂತೆಂದನಾರ್ದಂದಗುರ್ವಿಂ ॥ ೯೮ ॥

ಆಂ ಪಾದಚಾರಿಯೆಂದೆನು
ತಾಂ ಪದೆದಾನೆಯನಡರ್ದು ಕಾದಿದೊಡೆನ್ನೊಳ್।
ತಾಂ ಪಾರಮೈದುಗುಮೆ ನೃಪ
ನೀಂ ಪೋಪುದೆ ಕಜ್ಜಮೆಂದನಂದು ನಿಘರ್ಜಂ ॥ ೯೯ ॥

ಎನಲಾನುಡಿಯಂ ಕೇಳ್ದಾನೆಯಿಂದಿೞಿದುದ್ಭಟಕ್ಷಿತೀಂದ್ರಚಂದ್ರಮನಾರಾಕ್ಷಸೇಂದ್ರಂಗಿದಿರಾಗಿ ನಡೆತಂದು,

ಹೆಮ್ಮೆಪಟ್ಟನು. ೯೬. ಕೈಯಲ್ಲಿ ಹಿಡಿದ ಬಿಲ್ಲು ಮುರಿಯಲು, ನಿಘರ್ಜನು ಹೆಚ್ಚಿನ ಕೋಪಾಟೋಪದಿಂದ ನಡುಗಿ, ಬೃಹತ್ತಾದ ಮರವೊಂದನ್ನು ದರ್ಪದಿಂದ ಚೆನ್ನಾಗಿ ಕಿತ್ತು ಹಿಡಿದು ಕೋಪದಿಂದ ಆರ್ಭಟಿಸುತ್ತಾ ಆ ರಾಕ್ಷಸರೊಡೆಯನು [ಮಹಾರಾಜನ ಮೇಲೆ] ಕವಿದುಬಿದ್ದನು. ೯೭. ಚಂದ್ರನನ್ನು ದೊಡ್ಡ ಮೋಡಗಳ ಮೊತ್ತವು ಆವರಿಸುವಂತೆ [ಮರದಿಂದ ಉದ್ಭಟನನ್ನು] ಮುಚ್ಚಿ ಹೊರಡಲು, ಆಗ ಅನುಪಮವೀರನಾದ ಮಹಾರಾಜನು ಆ ವೃಕ್ಷವನ್ನು ವಿಶಾಲವಾದ ಹಾಗೂ ಹರಿತವಾದ ಕತ್ತಿಯಿಂದ ಚೆನ್ನಾಗಿ ಹೊಡೆದು ಕತ್ತರಿಸಲು ಮತ್ತೆ ದೈತ್ಯೇಂದ್ರನು ಆರ್ಭಟಿಸಿ ಬಲಿಷ್ಠವಾದ ಮಂಡಲಾಗ್ರವೆಂಬ ಆಯುಧವನ್ನು ಕೈಗೆ ತೆಗೆದುಕೊಂಡನು. ೯೮. ಅಲುಗಾಡುವ ಕಣ್ಣುಗಳು ಕೆಂಪನೆಯ ಕಿಡಿಗಳನ್ನು ಸೂಸಲು, ಭೀಕರ ಧ್ವನಿ ರೋಷವನ್ನು ಪ್ರಕಟಪಡಿಸುತ್ತಿರಲು, ಕೆಮ್ಮೀಸೆಗಳು ಕುಣಿದಾಡುತ್ತಿರಲು, ಹುಬ್ಬುಗಳು ತೀವ್ರ ಭಯವನ್ನುಂಟುಮಾಡುತ್ತಿರಲು, ಭೀಕರ ಕೋಪವು ಉಕ್ಕಿ ರಾಕ್ಷಸರೊಡೆಯನಾದ ನಿಘರ್ಜನು ಅತಿಶಯ ಪರಾಕ್ರಮದಿಂದ ಹೊಳೆಯುವ ಕತ್ತಿಯನ್ನು ಹಿಡಿದು ಉದ್ಭಟ ಮಹಾರಾಜನನ್ನು ನೋಡಿ ನಸುನಕ್ಕು ಹೀಗೆಂದನು. ೯೯. ಅಂದು ನಿಘರ್ಜನು ಉದ್ಭಟದೇವನನ್ನು ಕುರಿತು "ನನ್ನನ್ನು ಪಾದಚಾರಿಯೆಂದು ಭಾವಿಸಿ ಪ್ರೀತಿಯಿಂದ ಆನೆಯನ್ನೇರಿ ನನ್ನೊಡನೆ ಹೋರಾಡಿರುವ ಮಾತ್ರಕ್ಕೆ ನೀನು ಕೊನೆಮುಟ್ಟುತ್ತೀಯಾ? ಮಹಾರಾಜಾ, ನೀನಿನ್ನು ಹೋಗುವುದೆ [ಸರಿಯಾದ] ಕಾರ್ಯ" ಎಂದನು. ವ॥ ಹಾಗೆನ್ನಲು ಆ ಮಾತನ್ನು ಕೇಳಿ ಆನೆಯಿಂದ ಇಳಿದು ಉದ್ಭಟಮಹಾರಾಜಚಂದ್ರಮನು

ನೋಡಿ ತದಸುರನ ಖಾಡಾ
ಖಾಡಿಯನುದ್ಭಟಮಹೀಶನಾರ್ದಸಿಯಂ ಮಾ।
ತಾಡೆಲೆ ಮಾತಾಡೆನುತುಂ
ಕೂಡೆ ನಿಶಾಚರನನೆಱಗಿದಂ ಕಾಯ್ಪಿಂದಂ ॥ ೧೦೦ ॥

ಘಳಿಲನೆ ಧರಣೀಪತಿ ಯ
ಗ್ಗಳಮೆನಲಾರ್ದೆಱಗಿದಸಿವಿಘಾತಮನೊಲವಿಂ।
ತಳೆದು ಬೞಿಕ್ಕಮಗುರ್ವಿಂ
ದಿಳಿಯೆಱಿಯನನೆಱಗಿದಂ ನಿಶಾಚರನಾಥಂ ॥ ೧೦೧ ॥

ದನುಜನೆಱಗಲಾಹಾ ತಪ್ಪಿತೆಂದುದ್ಭಟಂ ಭೋಂ
ಕನೆ ನುಡಿಗುಡುತುಂ ಶಾತಾಸಿಯಂದೊಡ್ಡಿನೀಂ ತ।
ಪ್ಪೆನುತೆ ತಲೆಗೆ ಪೊಯ್ಯಲ್ ನೂಂಕಿ ದೈತ್ಯಂ ಮಗುೞ್ದಾ
ಜನಪನನೆಱಗಲ್ಕಂದೊಡ್ಡಿದಂ ರಾಜಚಂದ್ರಂ ॥ ೧೦೨ ॥

ಶಾತಖಡ್ಗಧಾರೆಯಂ ಕಳಲ್ಚಿ ದಾನವೇಶನಾ
ಭೂತಳೇಂದ್ರನಂ ಮಗುೞ್ದು ಪೊಯ್ಯಲೊರ್ವರೊರ್ವರಂ।
ಶಾತಪತ್ರಿಘಾತದಿಂ ಪೊಣರ್ದರಂದು ನಿರ್ಜರ
ವ್ರಾತಮೊಲ್ದು ಬಂದು ನೋಡಲಂತರಿಕ್ಷಮಾರ್ಗದೊಳ್ ॥ ೧೦೩ ॥

ಒಸೆದಾರ್ದೈದಾನೆಯಂತಾರ್ಭಟಿಸುತೆಱಗಿ ಶಾರ್ದೂಲದಂತೊಯ್ಯನಾಲೋ
ಕಿಸುತುದ್ಯತ್ಕ್ರೋಡದಂತೆತ್ತಿರದೆ ಸುಳಿದು ಮೀನಂತೆ ಸಿಂಹಂಬೊಲುಲ್ಲಂ।
ಘಿಸಿ ಚಂಚಿತ್ಸಾಳುವಂಬೊಲ್ಪಿಡಿದು ಬಿಡದೆ ಮೇಣೌಂಕಿ ಸಪ್ಪಂಬೊಲೊಲ್ದಾ
ಲಿಸಿ ಕೋಪಾಟೋಪದಿಂದಂ ಮೊಱೆಯುತೆ ಪೊಣರ್ದರ್ ಪೊಂಗಿ ವೀರಾಗ್ರಗಣ್ಯರ್ ॥ ೧೦೪ ॥

ಆ ರಾಕ್ಷಸರೊಡೆಯನಿಗೆ ಇದಿರಾಗಿ ನಡೆದುಬಂದು, ೧೦೦. ಆ ರಾಕ್ಷಸನನ್ನು ನೋಡಿ ದ್ವಂದ್ವಯುದ್ಧಕ್ಕೆ ಉದ್ಭಟನು ಸನ್ನದ್ಧನಾಗಿ 'ಕತ್ತಿಯಿಂದ ಮಾತನಾಡು, ಮಾತನಾಡು' ಎನ್ನುತ್ತ ಕೋಪದಿಂದ ಆ ರಾಕ್ಷಸನ ಮೇಲೆ ಎರಗಿಬಿದ್ದನು. ೧೦೧. ಭೂಪತಿಯು ಶೀಘ್ರವಾಗಿ ಅಧಿಕ ಶಕ್ತಿಯಿಂದ ಆರ್ಭಟಿಸಿ ಬೀಸಿದ ಕತ್ತಿಯ ಹೊಡೆತವನ್ನು ಪ್ರೀತಿಯಿಂದ ಸ್ವೀಕರಿಸಿ, ಅನಂತರ, ರಾಕ್ಷಸರೊಡೆಯನು ಅತಿಶಯವಾಗಿ ಭೂನಾಥನ ಮೇಲೆ ಬಿದ್ದನು. ೧೦೨. ರಾಕ್ಷಸನು ಉದ್ಭಟನ ಮೇಲೆ ಎರಗಲು, ಹರಿತವಾದ ಕತ್ತಿಯನ್ನು ಒಡ್ಡಿ 'ಆಹಾ! ತಪ್ಪಿತು' ಎಂದು ಉದ್ಭಟನು ಅದಕ್ಕೆ ಉತ್ತರಗೊಡುತ್ತ 'ನೀನು ಸಾಧ್ಯವಾದರೆ ತಡೆ' ಎಂದು ಹೇಳುತ್ತಾ ತಲೆಗೆ ಹೊಡೆಯಲು ರಾಕ್ಷಸನು ಅದನ್ನು ನೂಕಿ ಮತ್ತೆ ರಾಜನ ಮೇಲೆ ಎರಗಲು ರಾಜೇಂದ್ರನು ಅದನ್ನು ತಡೆದನು. ೧೦೩. ರಾಕ್ಷಸರೊಡೆಯನು ಹರಿತವಾದ ಕತ್ತಿಯನ್ನು ಒರೆಯಿಂದ ತೆಗೆದು ಮಹಾರಾಜನನ್ನು ಮತ್ತೆ ಹೊಡೆದನು. [ಹೀಗೆ] ಒಬ್ಬರು ಮತ್ತೊಬ್ಬರನ್ನು ಹರಿತವಾದ ಕತ್ತಿಯಿಂದ ಇರಿಯಲು ಸೆಣಸಾಡುತ್ತಿರುವುದನ್ನು ನೋಡಲು ಅಂದು ದೇವತೆಗಳ ಸಮೂಹವು ಆಕಾಶಮಾರ್ಗದಲ್ಲಿ ಒಲಿದು ಬಂದು ಸೇರಿತ್ತು. ೧೦೪. ಆ ವೀರಾಗ್ರಣಿಗಳು ಪ್ರೀತಿಯಿಂದ ಯೋಚಿಸಿ, ಆನೆಯಂತೆ ಆರ್ಭಟಿಸಿ, ಹುಲಿಯಂತೆ ಮೆಲ್ಲನೆ ನೋಡಿ,

ಮಿಂಚಿನವೊಲ್ಪೊಳೆಯುತ್ತುಂ
ಮುಂಚುವ ಸಿಡಿಲಂತೆಱಂಗಿ ವಹ್ನಿಜ್ವಾಲಾ।
ಸಂಚಯದವೋಲುಚ್ಚಳಿಸುಱಿ
ತಾಂ ಚಕ್ರದೆ ಪೊಣರ್ದರಂದು ಪಟುತರಶೂರರ್ ॥ ೧೦೫ ॥

ಝೋಂಪಿಸಲ್ತನು ನೂತನಾಯತಶಾತಖಡ್ಗವಿಘಾತದಿಂ
ದಂ ಪಳಂಚುವ ಚಕ್ರತೋಮರಶಕ್ತಿಮುಖ್ಯಸಮಸ್ತ ಶ।
ಸ್ತ್ರಂ ಪೊಗರ್ಗಳ ನೀಲಿಮಾಯುಧಜಾಲಮಂ ತಳೆದುಲ್ಲಸ
ತ್ಸಾಂಪರಾಯಿಕಮಂ ನೆಗಟ್ಚಿದರಂದು ಸಂದಪರಾಕ್ರಮರ್ ॥ ೧೦೬ ॥

ಇಂತುದ್ಭಟಕ್ಷಿತೀಂದ್ರಚಂದ್ರಮಂಗೆ ನಿಘರ್ಜಾಸುರೇಂದ್ರನುತ್ತುಂಗಬತ್ತೀಸಾಯಧಂಗಳಿಂದಸಮ ಕಾಳಗಂಗೊಟ್ಟು ಕಾದುತ್ತಮಿರೆಯಿರೆ,

ಸೋಲಕ್ಕೆಡೆಗುಡದಸುರನ
ನಾಲೋಕಿಸಿ ಯಮಮ ವೀರ ಭಾಪೆನುತುರ್ವೀ।
ಪಾಲಂ ನಡೆನೋಡಿ ಮಹಾ
ಶೂಲದಿನಾರ್ದಿಟ್ಟನಮರಸಂತತಿ ನಲಿಯಲ್ ॥ ೧೦೭ ॥

ಮಂಡಲೇಶನುದ್ಭಟೇಂದ್ರನಿಟ್ಟ ಶೂಲವ್ಯೆದೆ ಮುಂ
ಕೊಂಡು ನಾಟಿ ವಕ್ಷಮಂ ಸುಶಕ್ತಿಯುಕ್ತನಾಗಿಯುಂ।
ಚಂಡಶಕ್ತಿಹೀನನಾಗಿ ಕೂಡೆ ನಿರ್ಜರಾರಿ ಕೈ
ಕೊಂಡು ಪುಲ್ಲೆಯಂದದಿಂದೆ ಕೂರ್ತು ಪೋದನದ್ಭುತಂ ॥ ೧೦೮ ॥

ಹಂದಿಯಂತೆ ಮೇಲೆತ್ತಿ, ಮೀನಿನಂತೆ ಸುಳಿದಾಡಿ, ಸಿಂಹದಂತೆ ನೆಗೆದು, ಹಾರಾಡುವ ಗಿಡುಗನಂತೆ ಆಕ್ರಮಿಸಿ, ಹಾವಿನಂತೆ ಹಿಡಿದು ಅವುಕಿ, ಸಾವಧಾನದಿಂದ ಆಲಿಸಿ, ಕೋಪಾಟೋಪದಿಂದ ಮೊರೆಯುತ್ತ ಉಕ್ಕಿ ಹೋರಾಡಿದರು. ೧೦೫. ಅಂದು ಸಮರ್ಥ ಶೂರರು ಮಿಂಚಿನಂತೆ ಹೊಳೆಯುತ್ತ, ಎದುರಿಗೆ ಸಿಡಿಲಂತೆ ಎರಗಿ, ಅಗ್ನಿಜ್ವಾಲೆಯ ಮೊತ್ತದಂತೆ ಚಿಮ್ಮಿ ಹರಡಿ ಅವರು ಚೆನ್ನಾಗಿ ಚಕ್ರದಂತೆ ಸುತ್ತಿ ಹೋರಾಡಿದರು. ೧೦೬. ಅಂದು ಪ್ರಸಿದ್ಧ ವೀರರು ತಮ್ಮ ಕೈಗೆ ಬಂದ ಹೊಸದಾದ ಹರಿತವಾದ ಕತ್ತಿಯ ಬಲವಾದ ಹೊಡೆತದಿಂದ ಮೈಮರೆಯಿಸಿದರು. ರಭಸದಿಂದ ತಾಗುವ ಚಕ್ರ, ತೋಮರ, ಶಕ್ತಿ ಇವೇ ಮೊದಲಾದ ಸಕಲ ಶಸ್ತ್ರಗಳ ಕಾಂತಿಯ ನೀಲಿಯ ಬಣ್ಣದ ಆಯುಧಗಳ ಮೊತ್ತವನ್ನು ಹೊಂದಿ ಕಾಳಗಕ್ಕೆ ಸಂಬಂಧಿಸಿದಂತೆ ಹೋರಾಡಿದರು. ವ॥ ಹೀಗೆ ಉದ್ಭಟ ಮಹಾರಾಜಚಂದ್ರಮನೊಡನೆ ನಿಘರ್ಜನೆಂಬ ರಾಕ್ಷಸೇಂದ್ರನು ಶ್ರೇಷ್ಠವಾದ ಮೂವತ್ತೆರಡು ಆಯುಧಗಳಿಂದ ಅಸಮಾನವಾದ ಯುದ್ಧವನ್ನು ಹೂಡಿ ಹೋರಾಡುತ್ತಿರಲು, ೧೦೭. ಸೋಲಿಗೆ ಅವಕಾಶ ಕೊಡದ ರಾಕ್ಷಸನನ್ನು ಮಹಾರಾಜನು ನೋಡಿ, 'ಅಹಹಾ, ಶೂರ! ಭೇಷ್! ಎಂದು [ಹೊಗಳಿ], ಚೆನ್ನಾಗಿ ಅವನನ್ನು ನೋಡಿ, ದೇವತೆಗಳು ನಲಿಯುವಂತೆ ಮಹಾಶೂಲದಿಂದ ಬಲವಾಗಿ ಹೊಡೆದನು. ೧೦೮. ಮಂಡಲಾಧಿಪತಿಯಾದ ಉದ್ಭಟನು ಹೊಡೆದ ಶೂಲವು ಮೊದಲಿಗೆ ಎದೆಗೆ ನಾಟಿ, ಬಲಿಷ್ಠನಾಗಿಯೂ

ಓಡುವ ಖಳಪರಿವೃಢನಂ
ನೋಡಿ ಮಹೀನಾಥನಂದು ಧನುವಂ ಕೈಕೊಂ।
ಡೋಡದಿರಿರಿದಿರ್ಚೆನುತ್ತುಂ
ಕೂಡೆ ಪಚಾರಿಸುತೆ ಬೆಂಬಿಡಿದನತಿಜವದಿಂ ॥ ೧೦೯ ॥

ಕವಿದಂಧಕಾರಮಂ ಮೇ
ಣ್ತೆವರುವ ರವಿಯಂತೆ ನಿಲ್ಲದೋಡುವ ತದ್ದಾ।
ನವಪತಿಯನೀಕ್ಷಿಸುತ್ತತಿ
ಜವದಿಂ ಬಟಿಸಂದನುದ್ಭಟಕ್ಷಿತಿಪಾಲಂ ॥ ೧೧೦ ॥

ಗಿರಿಯೆನ್ನದೆ ಮಡುವೆನ್ನದೆ
ದರಿಯೆನ್ನದೆ ದಾನವೇಂದ್ರನೇಣಾಕೃತಿಯಂ।
ದಿರದೋಡಲ್ಕಂಡವನತಿ
ಭರದಿಂ ಬೆಂಬಿಡದೆ ಪರಿದನುದ್ಭಟದೇವಂ ॥ ೧೧೧ ॥

ಮೃಗಧರನನುದಂಚಜ್ಜ್ಯೋತ್ಸ್ನೆ ಪೂವಂ ಸುಗಂಧಂ
ಖಗನನೆಳೆವಿಸಲ್ಮೇಣ್ಬೆಚ್ಚುಬರ್ಪಂತೆ ಕೂರ್ಪಿಂ।
ದಗಲದೆ ಶಿವಭದ್ರಂ ಬೆನ್ನೊಳೊಲ್ದೆಯ್ತರಲ್ನೆ
ಟ್ಟಗೆ ಸುರರಿಪುವಂ ಭೂಪಾಲನಂದಟ್ಟಿ ಪೋದಂ ॥ ೧೧೨ ॥

ಇಂತೇಣಾಕೃತಿಯಂದಳೆದೋಡುವ ರಕ್ಕಸರೆಱೆಯನಂ ಪೊಕ್ಕಲ್ಲಿ ಪೊಕ್ಕುರ್ಕಂ ಮುಱಿವೆನೆಂದತಿ ಪ್ರತಾಪದಿಂದುದ್ಭಟಕ್ಷಿತೀಂದ್ರಚಂದ್ರಮಂ ಬೆಂಬಿಡದೆ ಬೆರಸಿಕೊಂಡು ಪೋಗಲಿತ್ತಸಮಸ್ತ ಜನಮನಕ್ಕನುರಾಗ ಮಾಗಲಲ್ಲಿಗೆ ಚಲ್ಲಿದೆಲ್ಲಾಬ್ರಾಹ್ಮಣೋತ್ತಮರು ಬಂದು ಕೂಡಲಾಗಮೋಕ್ತದಿಂದುದ್ಯೋಗಿಸಿದ ಯಾಗಮಂ ನಾಗಾಭರಣಂಗರ್ಪಿಸಿ ಪೂರ್ಣಾಹುತಿಯಂ ಮಾಡಿ ದುರಿತೌಘಮಂ ಬಿಟ್ಟು ಚಿದಂಬರಮನುಟ್ಟು

ಪ್ರಬಲ ಶಕ್ತಿ ಇಲ್ಲದ್ದರ ಕಾರಣ ಎಲ್ಲರೂ ಚೋದ್ಯಪಡುವಂತೆ ರಾಕ್ಷಸನು ಜಿಂಕೆಯ ರೂಪವನ್ನು ಧರಿಸಿ ಪ್ರಾಣದಾಸೆಯಿಂದ ಓಡಿದನು. ೧೦೯. ಓಡುತ್ತಿರುವ ದುಷ್ಟರೊಡೆಯನನ್ನು ಮಹಾರಾಜನು ನೋಡಿ ಆ ವೇಳೆಯಲ್ಲಿ ಬಿಲ್ಲನ್ನು ಕೈಗೆ ತೆಗೆದುಕೊಂಡು 'ಓಡದಿರು, ಇದಿರಿಸು' ಎಂದು ಹೀಯಾಳಿಸುತ್ತ ತೀವ್ರ ವೇಗದಲ್ಲಿ ಹಿಂಬಾಲಿಸಿದನು. ೧೧೦. ಕವಿಯುತ್ತಿರುವ ಕತ್ತಲೆಯಲ್ಲಿ ಸೂರ್ಯನು ತೆವಳಿ ಸಾಗಿದಂತೆ ಎಲ್ಲಿಯೂ ನಿಲ್ಲದೆ ಓಡುತ್ತಿರುವ ಆ ರಾಕ್ಷಸರೊಡೆಯನನ್ನು ನೋಡಿ ಉದ್ಭಟ ಮಹಾರಾಜನು ಜೋರಾಗಿ ಸಾಗಿ ಹಿಂಬಾಲಿಸಿದನು. ೧೧೧. ಬೆಟ್ಟವೆನ್ನದೆ, ನದಿಯೆನ್ನದೆ, ಪೊದೆಯೆನ್ನದೆ ರಾಕ್ಷಸರೊಡೆಯನು ಜಿಂಕೆಯ ರೂಪಿನಲ್ಲಿ ಬಿಡದೆ ಓಡುತ್ತಿರಲು ಅವನನ್ನು ನೋಡಿದ ಉದ್ಭಟದೇವನು ಬೆನ್‌ಬಿಡದೆ ವೇಗವಾಗಿ ಹಿಂಬಾಲಿಸಿದನು. ೧೧೨. ಜಿಂಕೆಯನ್ನು ಸುಂದರವಾದ ಬೆಳುದಿಂಗಳು, ಹೂವು, ಸುಗಂಧ, ಪಕ್ಷಿ, ಎಳೆಯ ಬಿಸಿಲು ಇವು ಮೆಚ್ಚಿ [ಹಿಂಬಾಲಿಸಿ] ಬರುವಂತೆ ಪ್ರೀತಿಯಿಂದ [ರಾಜನನ್ನು] ಅಗಲದೆ ಮಂತ್ರಿ ಶಿವಭದ್ರನು ಬೆನ್ನ ಹಿಂದೆಯೇ ಬರುತ್ತಿರಲು ಅಂದು ಮಹಾರಾಜನು ರಾಕ್ಷಸನನ್ನು ನೇರವಾಗಿ ಬೆನ್ನಟ್ಟಿ ಹೋದನು. ವ॥ ಹೀಗೆ ಜಿಂಕೆಯಾಕಾರವನ್ನು ತಾಳಿ ಓಡುತ್ತಿರುವ ರಕ್ಕಸರೊಡೆಯನು ಹೊಕ್ಕಲ್ಲಿ ಹೊಕ್ಕು, ಅವನ ಗರ್ವವನ್ನು

ವಿವೇಕಾಭರಣಮಂ ತೊಟ್ಟು ವಾಂಛೆಯಂ ಬಿಟ್ಟವಭೃಥಸ್ನಾನಮಂ ಮಾಡಿ ಶಿವಪ್ರಸಾದಮಂ ಸೂಡಿ ಪುಣ್ಯಪುಂಜಮಂ ಮಾಡಿ ನಿಜಸುಖದೊಳೋಲಾಡಿ ಮಗುಟ್ದಾಮಖಶಾಲೆಯಂ ಯಜ್ಞೇಶ್ವರಂಗರ್ಪಿಸಿ ತ್ರೇತಾಗ್ನಿಯಂ ಕೊಂಡೆಕಣಿಕೆಗಳವಡದಣಿಯರಮಾದ ಸಂರಂಭೋಲ್ಬಣಮಧ್ಯದೊಳ್ ಬ್ರಹ್ಮರಥಾರೂಢನಾಗಿ ಬಂದು ತನ್ನ ಪರ್ಣಶಾಲೆಯಂ ಪೊಕ್ಕು ದೇವಲಮಹಾರುಷೀಶ್ವರನೆಸೆದಿರ್ದಂ॥

ಅಂತುಮಲ್ಲದೆಯುಂ,

ಬಂದಖಿಳದ್ವಿಜೋತ್ತಮರನುತ್ತಮಋತ್ವಿಜರಂ ಸುವೇದವಾ
ಗ್ವೃಂದಸಮಂಚಿತಾನನರನುದ್ಧಸುವಾಸಿನಿಯರ್ಕಳಂ ಮಹಾ।
ನಂದದೊಳೆಲ್ಲರಂ ವಿಮಲವಸ್ತ್ರವಿಭೂಷಣಮಾಲ್ಯಸ
ಚ್ಚಂದನಮುಖ್ಯವಸ್ತುತತಿಯಿಂಮಿಗೆ ಮನ್ನಿಸಿದಂ ಮುನೀಶ್ವರಂ ॥ ೧೧೩ ॥

ಜನ್ನಕೆ ಬಂದವರೆಲ್ಲರ
ನುನ್ನತಮುದದಿಂದೆ ತಣಿಪಿ ಬೀಟ್ಕೊಟ್ಟನಿಶಂ।
ಪನ್ನಗಕಿಶೋರಭೂಷಣ
ನನ್ನೆಱ ಜಾನಿಸುತೆ ಮುನಿಪನಿರುತಿರಲಿತ್ತಲ್ ॥ ೧೧೪ ॥

ಇಳಿಸುವೆನೆಂದು ಹೆಚ್ಚಿನ ಪರಾಕ್ರಮದಿಂದ ಉದ್ಭಟ ಮಹಾರಾಜಚಂದ್ರಮನು ಬೆನ್‌ಬಿಡದೆ ಹಿಂದೆಯೇ ಹೋಗುತ್ತಿರಲು, ಇತ್ತ ಸಕಲ ಜನಮನಕ್ಕೆ ಆನಂದವಾಗಲು ಅಲ್ಲಲ್ಲಿ ಚೆದುರಿಹೋಗಿದ್ದ ಬ್ರಾಹ್ಮಣಶ್ರೇಷ್ಠರೆಲ್ಲಾ ಬಂದು ಸೇರಲು ಆಗಮೋಕ್ತವಾಗಿ ಪ್ರಾರಂಭಿಸಿದ ಯಾಗವನ್ನು ಶಿವನಿಗರ್ಪಿಸಿ ಪೂರ್ಣಾಹುತಿಯನ್ನು ಮಾಡಿ, ಪಾಪಗಳನ್ನು ಪರಿಹರಿಸಿ, ಚಿತ್ ಎಂಬ ವಸ್ತ್ರ ಧರಿಸಿ, ವಿವೇಕವೆಂಬ ಆಭರಣವನ್ನು ತೊಟ್ಟು, ಬಯಕೆಯನ್ನು ಬಿಟ್ಟು, ಯಾಗ ಮುಗಿದ ಮೇಲೆ ಮಾಡುವ ಸ್ನಾನವನ್ನು ಮಾಡಿ, ಶಿವಪ್ರಸಾದವನ್ನು ಧರಿಸಿ, ಪುಣ್ಯವನ್ನು ಮಾಡಿ, ಆತ್ಮಾನಂದದಲ್ಲಿ ಓಲಾಡಿ ಮತ್ತೆ ಯಜ್ಞಶಾಲೆಯನ್ನು ಯಜ್ಞೇಶ್ವರನಿಗರ್ಪಿಸಿ ತ್ರೇತಾಗ್ನಿಯನ್ನು ಸ್ವೀಕರಿಸಿ ಎಣಿಕೆಗೆ ಸಿಗದ ವಿಜೃಂಭಣೆಯಲ್ಲಿ ಬ್ರಹ್ಮರಥದಲ್ಲಿ ಕುಳಿತು ಬಂದು ತನ್ನ ಎಲೆಮನೆಯನ್ನು ಪ್ರವೇಶಿಸಿ ದೇವಲ ಮಹರ್ಷಿಯು ಶೋಭಿಸಿದ್ದನು. ಅಷ್ಟಲ್ಲದೆ, ೧೧೩. ಆಗಮಿಸಿದ ಬ್ರಾಹ್ಮಣಶ್ರೇಷ್ಠರನ್ನು, ಉತ್ತಮ ಯಜ್ಞಪುರೋಹಿತರನ್ನು, ವೇದಘೋಷ ಬಲ್ಲಿದರಾದವರನ್ನು, ಶ್ರೇಷ್ಠ ಸುವಾಸಿನಿಯರನ್ನು - ಹೀಗೆ ಎಲ್ಲರನ್ನೂ ಸಂತೋಷದಿಂದ ಒಳ್ಳೆಯ ವಸ್ತ್ರವಿಭೂಷಣ ಹೂವು ಗಂಧ ಮೊದಲಾದ ವಸ್ತುಗಳಿಂದ ಮುನೀಶ್ವರನು ಚೆನ್ನಾಗಿ ಗೌರವಿಸಿದನು. ೧೧೪. ಯಜ್ಞಕ್ಕೆ ಬಂದ ಎಲ್ಲರನ್ನು ಹೆಚ್ಚಿನ ಸಂತಸದಿಂದ ತೃಪ್ತಿಪಡಿಸಿ ಅವರನ್ನು ಬೀಳ್ಕೊಟ್ಟು ಸದಾ ನಾಗಭೂಷಣನನ್ನು ವಿಶೇಷವಾಗಿ ಧ್ಯಾನಿಸುತ್ತ ಮುನಿಯು ಇರುತ್ತಿರಲು, ಇತ್ತಕಡೆ ೧೧೫. ನಿಲ್ಲದೆ ಓಡುತ್ತಿರುವ ರಾಕ್ಷಸನ ಬೆನ್‌ಬಿಡದೆ ಅರಸನು ಸಾಗಿ "ಎಲವೊ ಇದಿರಿಸು, ಓಡದಿರು" ಎಂದು ಮೇಲಿಂದ ಮೇಲೆ ಹೇಳುತ್ತ ಅಡವಿಯಲ್ಲಿ ವೇಗವಾಗಿ ಬರುತ್ತ ಎದ್ದುಬಿದ್ದು ನಡೆದನು. ವ॥ ಮತ್ತೆ ಅಷ್ಟಲ್ಲದೆ, ಉನ್ನತವಾದ

ಬಿಡದೋಡುವಸುರನಂ ಬೆಂ
ಬಿಡದರಸನಿದಿರ್ಚಿದಿರ್ಚಲವೊ ಪೋಗದಿರೆಂ।
ದಡಿಗಡಿಗೆ ನುಡಿಯುತ್ತೆಟ್ಟಿರ
ಲಡವಿಯೊಳತಿಭರದೆ ಬಿರ್ದು ಮಿಗೆ ನಡೆಗೊಂಡಂ ॥ ೧೧೫ ॥

ಮತ್ತಮದಲ್ಲದುತ್ತುಂಗಘೋರಾರಣ್ಯಮಂ ಪೊಕ್ಕನಂತಗಿರಿದರೀ ಮಡುಗಿಡುಹೊಳೆಮೆಳೆಗಳೆಂದೆನ್ನದೆ ಯತಿದೂರಂ ಬಂದಾವಿಪಿನಾಂತರದೊಳ್ ಬಟಿಲ್ದೊಂದೆಡೆಯೊಳ್ ತದ್ದಾನವೇಂದ್ರಂ ನಿಲೆ,

ಅತುಳಶ್ರಮದಿಂ ದಾನವ
ಪತಿ ಸಿಲ್ಕಿರೆ ಕಂಡು ಸಾರ್ದು ಕೆಡೆಯೆನುತೆಚ್ಚು।
ನ್ನತಸಂತೋಷದಿನಂದಾ
ಕ್ಷಿತಿಪಾಲಕನುದ್ಭಟಂ ಕರಂ ಬೊಬ್ಬಿಟ್ಟಂ ॥ ೧೧೬ ॥

ಶ್ರೀರಾಮನಸ್ತ್ರಹತಿಯಿಂ
ಮಾರೀಚಂ ಬಿಟ್ಟಿವೋಲ್ನಿಘರ್ಜಂ ಬಿಟ್ಟಂ।
ಭೂರಮಣೋದ್ಭಟನುನ್ನತ
ಘೋರತರಕ್ರೂರಶಾತಶರಹತಿಯಿಂದಂ ॥ ೧೧೭ ॥

ಇಳೆ ಜರಿಯಲೆರಲೆಯಂದಮ
ನುಳಿದುಗುವರುಣಾಂಬುಧಾರೆ ಕಾಳ್ಪುರಮಾಗಲ್।
ಖಳನಾದ ನಿಘರ್ಜನೊಡ
ಲ್ಘುಳಿಲನೆ ಕೆಡೆದತ್ತು ಜಗುಟ್ದುದಸುವಾಕ್ಷಣದೊಳ್ ॥ ೧೧೮ ॥

ಘೋರಾರಣ್ಯವನ್ನು ಪ್ರವೇಶಿಸಿ ಅಸಂಖ್ಯ ಗಿರಿ, ದರಿ, ಮಡುಗಿಡು, ಹೊಳೆಮೆಳೆಗಳೆನ್ನದೆ ಬಹುದೂರ ಸಾಗಿಬಂದು ಆ ಕಾಡಿನ ಮಧ್ಯಭಾಗದಲ್ಲಿ ಆಯಾಸಗೊಂಡು ಒಂದೆಡೆಯಲ್ಲಿ ಆ ರಾಕ್ಷಸರೊಡೆಯನು ನಿಲ್ಲಲು, ೧೧೬. ಬಹಳ ಕಷ್ಟದಿಂದ ರಾಕ್ಷಸರೊಡೆಯನು ಸಿಕ್ಕಿರಲು ಕಂಡು ಸಮೀಪಿಸಿ ಕೆಳಗೆ ಬೀಳುವಂತೆ ಬಾಣ ಪ್ರಯೋಗಿಸಿ ಅತ್ಯಾನಂದದಿಂದ ಕೂಡಿ ಉದ್ಭಟಮಹಾರಾಜನು ವಿಶೇಷವಾಗಿ ಬೊಬ್ಬೆಯಿಟ್ಟನು. ೧೧೭. ಶ್ರೀರಾಮನ ಬಾಣದ ಹೊಡೆತದಿಂದ ಮಾರೀಚನು ಕೆಳಗೆ ಬಿದ್ದಂತೆ, ಉದ್ಭಟ ಮಹಾರಾಜನ ಶ್ರೇಷ್ಠವೂ ಘೋರತರವೂ ಕ್ರೂರವೂ ಹರಿತವೂ ಆದ ಬಾಣದ ಹೊಡೆತದಿಂದ ನಿಘರ್ಜನು ಬಿದ್ದನು. ೧೧೮. ಭೂಮಿ ಹಳಿಯುತ್ತಿರಲು, ಜಿಂಕೆಯ ಆಕಾರವನ್ನು ನಿವಾರಿಸಿ ಹೊರಸೂಸುತ್ತಿರುವ ಕೆನ್ನೆತ್ತರು ಪ್ರವಾಹರೂಪದಲ್ಲಿರಲು, ದುಷ್ಟನಾದ ನಿಘರ್ಜನ ದೇಹವು ತಕ್ಷಣ ಕೆಳಗೆ ಬಿದ್ದಿತು, ಆ ಕ್ಷಣವೆ ಅವನ ಪ್ರಾಣವೂ ಹೋಯಿತು. ವ॥ ಹೀಗೆ ರಾಕ್ಷಸ ನಿಘರ್ಜನನ್ನು ಯಮನ ಪಟ್ಟಣಕ್ಕೆ ಬೀಳ್ಕೊಟ್ಟು ಮಂತ್ರಿಶ್ರೇಷ್ಠನಾದ ಶಿವಭದ್ರನೊಡನೆ ಆನಂದದಿಂದ ಬಂದು, ಒಂದು ಕಮಲ ಸರೋವರದಲ್ಲಿ ರಾಕ್ಷಸನಿಂದಾದ ರಕ್ತಸಿಕ್ತ ಶರೀರವನ್ನು ತೊಳೆದುಕೊಂಡು ಬಾಯಾರಿಕೆ ನೀಗುವಷ್ಟು ನೀರನ್ನು ಕುಡಿದು, ಆ ತಣ್ಣನೆಯ ಕೊಳದ ದಡದಲ್ಲಿ ಕಂಗೊಳಿಸುವ ಒಂದು

ಇಂತಸುರನಿರ್ಘರ್ಜನನಂತಕಪುರಿಗೆ ಬೀಱುಗೊಟ್ಟಮಾತ್ಯಶಿಖಾಮಣಿ ಶಿವಭದ್ರಂಬೆರಸಾನಂದದಿಂದಂ ಬಂದೊಂದರವಿಂದಾಕರದೊಳ್ ದನುಜ ತನುಜನಿತರಕ್ತಶರೀರಮಂ ಪ್ರಕ್ಷಾಳಿಸಿಕೊಂಡತಿತೃಷೆತೀರ್ವನ್ನ ಮುದಕಪಾನಮಂ ಮಾಡಿ ಯಾತಣ್ಗೊಳ್ಗದೊಳ್ ಕಣ್ಗೊಳಿಸುವೊಂದು ಪಟುವಟವಿಟಪಿಚ್ಛಾಯೆಯೊಳ್ ಬಟಲ್ದು ಕುಳ್ಳಿರ್ದುದ್ಭಟ ಕ್ಷಿತೀಂದ್ರ ಚಂದ್ರಮನಿರೆಯಿರೆ,

ಬೆಮರ್ವರ್ಗಂಗಂ ರಜಮ್ಮೆದೆ ಪತ್ತಿದ ಮೊಗಂ ಸ್ಕಂಧಸ್ಥಿತೋತ್ಕಾರ್ಮುಕಾ
ಗ್ರಿಮಸಂಬಂಧಿತಲೋಲಜಾಲಗತಕೀರಂ ರಂಜಿಸಲ್ಕಾಡೆ ವಿ।
ಭ್ರಮಚಿತ್ತಾಂಕುರನೊರ್ವ ಬೇಂಟೆವಳನೊರ್ಕೈಗೊಂಡು ಬಿಲ್ಗೋಲ್ಗಳಂ
ಶ್ರಮದಿಂದಂಬುವನೀಂಟಿ ಮಂಡಿಸಿದನೆಬ್ಬಿಂದಾಕುಜಚ್ಛಾಯೆಯೊಳ್ ॥ ೧೧೯ ॥

ಬಿಲ್ಲಕೋಟಿಗೆ ಸಿಲ್ಕಿಸಿರ್ದುರುಕೀರಬಂಧಿತಜಾಲಮಂ
ಮೆಲ್ಲನುರ್ವಿಯ ಮೇಲೆ ಬೈತಡಿಯಲ್ಲಿ ಸಿಲ್ಕಿದ ಮುಳ್ಗಳಂ।
ನಿಲ್ಲದೊತ್ತಿ ಪುಳುಂಬಿನಿಂ ಕಳೆಯುತ್ತೆ ದೇಹಮನೊಡ್ಡುತುಂ
ಮೆಲ್ಲೆಲರ್ಗಿರದಾಯೆನುತ್ತುಮರಣ್ಯಸಂಚರನೊಪ್ಪಿದಂ ॥ ೧೨೦ ॥

ಇಂತತಿದೂರದಿಂದಂ ಬಟಲ್ದು ಬಂದು ತದ್ವಟವಿಟಪಿಚ್ಛಾಯೆಯೊಳ್ ಕುಳ್ಳಿರ್ದು ಬಲೆಯೊಳ್ ಸಿಲ್ಕಿರ್ದರಗಿಳಿಯಂ ಕೆಲದೊಳಿರಿಸಿ ಯಂಗಶ್ರಮಮಂ ತೀರ್ಚಿಕೊಳುತ್ತಾ ಬೇಂಟೆವಳನಿರೆಯಿರೆ,

ಉರಳಲ್ಗಿಗಿವಿನೆಗಂ ಮಿಗೆ
ತಿರುಗುವ ಕಣ್ಣಾಲಿಗಳ್ಚಲಿಸದಂಗಂ ಮೇ।
ಣ್ಸರಿವಸು ಗುರುಗುರುನಾದಂ
ವೆರಸಿದ ಕೊರಲೆಸೆಯಲೆಸೆದುದಂತಾಕೀರಂ ॥ ೧೨೧ ॥

ಈಪರಿಯಿನಟಿವ ಗಿಳಿಯಂ

ಆಲದ ಮರದ ನೆರಳಿನಲ್ಲಿ ಆಯಾಸಗೊಂಡ ಉದ್ಭಟಮಹಾರಾಜಚಂದ್ರಮನು ಕುಳಿತಿರಲು, ೧೧೯. ಬೆವರಿದ ಶರೀರ, ಧೂಳಿಡಿದ ಮುಖ, ಹೆಗಲಿನಲ್ಲಿರುವ ಬಿಲ್ಲ ತುದಿಗೆ ಕಟ್ಟಿದ ತೂಗಾಡುವ ಬಲೆಯಲ್ಲಿನ ಗಿಳಿ - ಇವು ಚೆನ್ನಾಗಿ ರಂಜಿಸುತ್ತಿರಲು ಚಂಚಲಚಿತ್ತನಾದ ಬೇಡನೋರ್ವನು ಒಕ್ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಕಷ್ಟಪಟ್ಟು ನೀರನ್ನು ಕುಡಿದು ಆ ವೃಕ್ಷದ ನೆರಳಿನ ಕಡೆಗೆ ಬಂದು ಕುಳಿತನು. ೧೨೦. ಬಿಲ್ಲ ತುದಿಗೆ ಸಿಕ್ಕಿಸಿದ್ದ ಬಲೆಯಲ್ಲಿ ಚೆನ್ನಾಗಿ ಸೆರೆಹೋಗಿದ್ದ ಗಿಳಿಯನ್ನು ಮೆಲ್ಲನೆ ನೆಲದ ಮೇಲಿಟ್ಟು, ಪಾದಕ್ಕೆ ನಾಟಿದ್ದ ಮುಳ್ಳುಗಳನ್ನು ಬಿಡದೆ ಬಾಣದಿಂದ ಒತ್ತಿ ತೆಗೆದು ತಣ್ಣನೆಯ ಗಾಳಿಗೆ ದೇಹವನ್ನು ಚೆಲ್ಲಿ ಹಾ! ಎಂದು ವಿಶ್ರಮಿಸಿದ ಬೇಡನು ಶೋಭೆಗೊಂಡನು. ವ|| ಹೀಗೆ ಬಹಳ ದೂರದಿಂದ ಬಳಲಿ ಬಂದು ಆ ಆಲದಮರದ ನೆಳಲಿನಲ್ಲಿ ಕುಳಿತು ಬಲೆಗೆ ಸಿಕ್ಕಿಬಿದ್ದಿದ್ದ ಅರಗಿಳಿಯನ್ನು ಪಕ್ಕದಲ್ಲಿರಿಸಿ ದೇಹದ ಆಯಾಸವನ್ನು ಪರಿಹರಿಸಿಕೊಳ್ಳುತ್ತ ಆ ಬೇಡನು ಇರುತ್ತಿರಲು, ೧೨೧. ಬಲೆಯ ಕುಣಿಕೆ ಬಿಗಿಯುತ್ತಿರಲು ವಿಶೇಷವಾಗಿ ಸುತ್ತುವ ಕಣ್ಣಾಲಿಗಳು, ಚಲಿಸದ ಅಂಗ, ಮೆಲ್ಲ ಮೆಲ್ಲನೆ ಹೋಗುತ್ತಿರುವ ಪ್ರಾಣ, ಗುರುಗುರು ನಾದದಿಂದ ಕೂಡಿದ ಕೊರಲು ಇವುಗಳಿಂದ ಆ ಗಿಳಿಯು ಕಣ್ಣಿಗೆ ಬಿದ್ದಿತು. ೧೨೨. ಈ ರೀತಿ ಪ್ರಾಣಬಿಡುತ್ತಿರುವ ಗಿಳಿಯನ್ನು

ಭೂಪಾಲಕನುದ್ಭಟಂ ನಿರೀಕ್ಷಿಸಿ ಮನದೊಳ್।
ತಾಪಿಸುತುಂ ನುಡಿಸಿದನಂ
ತಾಪುಲ್ವೇಡನನತೀವ ವಿನಯೋಕ್ತಿಗಳಿಂ ॥ ೧೨೨ ॥

ಎಲೆ ಧೀವರ ನೀನಿಂತೀ
ಬಲೆಗಳದೀಗಿಳಿಯನೊಲ್ದು ಬಿಟ್ಟೊಡೆ ನಿನಗು।
ಜ್ವಲಪುಣ್ಯಮಕ್ಕುಮೆನೆ ನೃಪ
ತಿಲಕಂಗೆ ಮಗುಟ್ದು ಶಬರನಂದಿಂತೆಂದಂ ॥ ೧೨೩ ॥

ನೀವಾರೊಳ್ಪಂ ನುಡಿದಪಿ
ರಾವಗಮಾಖೇಟಮಾರ್ಗದೊಳ್ವರ್ತಿಪೆವಿಂ।
ತೀವಿಲಸಚ್ಛುಕಮಂ ಬಿಡ
ಲಾವುದು ಪೇಟ್ಗಿತಿ ಮದೀಯಸಂಸೃತಿಗೆಂದಂ ॥ ೧೨೪ ॥

ಎನೆ ಕೇಳ್ದುದ್ಭಟಭೂಮಿಪ
ನನುನಯದಿಂ ತನ್ನ ಕೈಯ್ಯ ಮಣಿಕಟಕಮನೊ।
ಯ್ಯನೆ ತೆಗೆದಿತ್ತಾಶಬರಂ
ಗನಘಗುಣಂ ತೆಗೆದುಕೊಂಡನಂತಾಗಿಳಿಯಂ ॥ ೧೨೫ ॥

ಗಿಳಿಯಂ ಕೂರ್ತುದ್ಭಟಂಗಿತ್ತಮಳಿನರುಚಿಯಂ ಸೂಸುತಿಪ್ಪಚ್ಛರತ್ನಾ
ಕಳಿತೋದ್ಯತ್ಕಾಂಚನಾಂಚತ್ಕಟಕಮನೊಸೆದಾಲೋಕಿಸುತ್ತಂದು ಕೌತೂ।

ಮಹಾರಾಜ ಉದ್ಭಟನು ನೋಡಿ ಮನದಲ್ಲಿ ಮರುಗಿ ಅತಿ ವಿನಯದಿಂದ ಆ ಕ್ಷುದ್ರ ಬೇಡನನ್ನು ಮಾತನಾಡಿಸಿದನು. ೧೨೩. "ಎಲೆ ಬೇಡ, ನೀನು ಈ ಬಲೆಯನ್ನು ಕಳಚಿ ಈ ಗಿಳಿಯನ್ನು ಬಿಟ್ಟದ್ದೇ ಆದರೆ ನಿನಗೆ ಹೆಚ್ಚಿನ ಪುಣ್ಯ ಬರುವುದು" ಎನ್ನಲು ಮಹಾರಾಜನಿಗೆ ಆ ಶಬರನು ಪ್ರತ್ಯುತ್ತರವಾಗಿ ಹೀಗೆಂದನು. ೧೨೪. "ಒಳ್ಳೆಯದನ್ನು ನುಡಿಯುತ್ತಿರುವ ನೀವಾರು? ಸದಾ ಬೇಟೆಯಾಡುತ್ತ ಅದರಲ್ಲೇ ಜೀವನ ನಡೆಸುವವರು ನಾವು. ಗಿಳಿಯನ್ನು ಹೀಗೆ ಬಿಟ್ಟಿದ್ದೇ ಆದರೆ ನಮ್ಮ ಸಂಸಾರದ ಗತಿಯೇನು?" ಎಂದನು. ೧೨೫. [ಬೇಡನು] ಹಾಗೆ ಹೇಳಲು ಅದನ್ನು ಕೇಳಿದ ಉದ್ಭಟಮಹಾರಾಜನು ನಯವಾದ ಮಾತುಗಳಿಂದ ಮನವೊಲಿಸುತ್ತ ತನ್ನ ಕೈಯ ಮಣಿಖಚಿತವಾದ ಬಳೆಯನ್ನು ಆ ಶಬರನಿಗೆ ಮೆಲ್ಲನೆ ತೆಗೆದುಕೊಟ್ಟು, [ಅಮೂಲ್ಯ ಗುಣಸಂಪನ್ನನು] ಆ ಗಿಳಿಯನ್ನು ಅವನಿಂದ ಪಡೆದನು. ೧೨೬. ಗಿಳಿಯನ್ನು ಪ್ರೀತಿಯಿಂದ ಉದ್ಭಟಮಹಾರಾಜನಿಗಿತ್ತು ಪರಿಶುದ್ಧ ಕಾಂತಿಯನ್ನು ಚೆಲ್ಲುತ್ತಿರುವ ಬೆಲೆಬಾಳುವ ರತ್ನಗಳಿಂದ ಕೂಡಿದ ಶ್ರೇಷ್ಠವಾದ ಚಿನ್ನದ ಕಡಗವನ್ನು ಸಂತೋಷದಿಂದ ನೋಡುತ್ತ, ಅಂದು ಕುತೂಹಲವನ್ನು ತಾಳಿ, ಮಹಾರಾಜನಿಗೆ ತಪ್ಪದೆ ನಮಸ್ಕರಿಸಿ ಬೀಳ್ಕೊಂಡು, ಆನಂದದಿಂದ 'ನನ್ನ ಕುಲದ ಬಡತನವು ಇಂದಿಗೆ ನಿವಾರಣೆಯಾಯಿತು' ಎಂದು [ಮನಸ್ಸಿನಲ್ಲೇ ಅಂದುಕೊಳ್ಳುತ್ತಾ] ಆ ಬೇಡನು ತನ್ನ ಹಳ್ಳಿಗೆ

ಹಲಮಂ ತಾಳ್ದಾಮಹೀಶಂಗಿರದೆ ನಮಿಸಿ ಬೀಟ್ಕೊಂಡು ಸಂತೋಷದಿಂ ಮೆ
ತ್ತುಲದಾರಿದ್ರ್ಯಂಗಳೋಡಿತ್ತೆನುತೆ ಗಮಿಸಿದಂ ಪಕ್ಕಣಕ್ಕಾಪುಳಿಂದಂ ॥ ೧೨೬ ॥

ಅಂತತಿಸುಖಕ್ಕೆ ಸಂಚಕಾರಮನೀವಂತನರ್ಘ್ಯಮಣಿಕಟಕಮನಾಬೇಂಟೆಗಾಱಂಗಿತ್ತವನಂ ಬೀಳ್ಕೊಟ್ಟು ತದೀಯಶುಕದಿರವನುನ್ನತದಯಾಕರನಪ್ಪುದ್ಭಟಕ್ಷಿತೀಂದ್ರಚಂದ್ರಮಂ ನೋಡಿ ತೊಡರ್ದ ಬಲೆಯಂ ಕಳಲ್ಚಿ ಕಡೆಗೆ ದೆಗೆದು ಮೆಲ್ಲನೆತ್ತಿ ತಂದೊಂದು ರಸಾಲಬಾಲಪಲ್ಲವಜಾಲದೊಳ್ವಟ್ಟರಿಸಿ,

ಸಚಿವಕುಲಾಗ್ರಗಣ್ಯಶಿವಭದ್ರನತೀವಮನೋನುರಾಗದಿಂ
ದುಚಿತದಿನಬ್ಜದೊಳ್ಳೆಲೆಯೊಳಂಬುವನೊಯ್ಯನೆ ತಂದು ಪೊಯ್ಯಲಂ।
ದಚಲಮನಸ್ಕನುದ್ಭಟಮಹೀಧವನಾಗಿಳಿಗಟ್ಟಿಱಿಂದೆ ತಾಂ
ಪ್ರಚುರಹಿಮೋಪಚಾರಮನೆ ತಳ್ವದೆ ಕೂರ್ತು ನಿಮಿರ್ಚುತೊಪ್ಪಿದಂ ॥ ೧೨೭ ॥

ಮೆಲ್ಲನೆ ನೋಯದಂತೆ ಗಿಳಿಗುನ್ನತಮಾದುಪಚಾರದೇೞ್ಗೆಯಂ
ನಿಲ್ಲದೆ ಮಾಡುತುಂ ಸಚಿವಕೇಸರಿಗೂಡಿ ಮನಂಗೊಳಿಪ್ಪ ಭೂ।
ವಲ್ಲಭನುದ್ಭಟೋರ್ವಿಪನ ಚಿತ್ತಸರೋಜದೊಳೊಪ್ಪುವುಲ್ಲಸ
ಚ್ಚಿಲ್ಲಹರೀವಿಲಾಸ ಸಲೆ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೨೮ ॥

ನಡೆದನು. ವ॥ ಹೀಗೆ ಹೆಚ್ಚಿನ ಸುಖಕ್ಕೆ ಕೇಡನ್ನುಂಟುಮಾಡುವ ಆ ಬೆಲೆಬಾಳುವ ಮಣಿಖಚಿತ ಕಡಗವನ್ನು ಆ ಬೇಟೆಗಾರನಿಗೆ ಕೊಟ್ಟು ಅವನನ್ನು ಕಳುಹಿಸಿ, ಆ ಗಿಳಿಯ ಸ್ಥಿತಿಯನ್ನು ಕಾರುಣ್ಯಮೂರ್ತಿಯಾದ ಉದ್ಭಟಮಹಾರಾಜಚಂದ್ರಮನು ನೋಡಿ ಸಿಕ್ಕಿಹಾಕಿದ ಬಲೆಯನ್ನು ಬಿಚ್ಚಿ ಕೊನೆಗೆ ಗಿಳಿಯನ್ನು ಅದರಿಂದ ತೆಗೆದು ಮೆಲ್ಲನೆ ಅದನ್ನು ಎತ್ತಿತಂದು ಮಾವಿನ ಎಳೆಯ ಚಿಗುರುಗಳ ಹಾಸಿನಲ್ಲಿ ಮಲಗಿಸಿ, ೧೨೭. ಮಂತ್ರಿ ಶ್ರೇಷ್ಠನಾದ ಶಿವಭದ್ರನು ಹೆಚ್ಚಿನ ಮನದನುರಾಗದಿಂದ ಶುಭ್ರವಾದ ಕಮಲದ ಎಲೆಯಲ್ಲಿ ನೀರನ್ನು ಮೆಲ್ಲನೆ ತಂದು ಸುರಿಯಲು ಸ್ಥಿರಚಿತ್ತನಾದ ಉದ್ಭಟಮಹಾರಾಜನು ಆ ಗಿಳಿಗೆ ಪ್ರೀತಿಯಿಂದ ತಾನೇ ಕೈಯಾರೆ ಶೈತ್ಯೋಪಚಾರವನ್ನು ತಡಮಾಡದೆ ಮಾಡುತ್ತ ಶೋಭಿಸಿದನು. ೧೨೮. ಮೆಲ್ಲನೆ ನೋವಾಗದಂತೆ ಗಿಳಿಗೆ ಹೆಚ್ಚಿನದಾದ ವಿಶೇಷೋಪಚಾರವನ್ನು ತಪ್ಪದೆ ಮಂತ್ರಿಯೊಡಗೂಡಿ ಮಾಡುತ್ತ ಮನಸೆಳೆಯುತ್ತಿರುವ ಭೂಪತಿ ಉದ್ಭಟಮಹಾರಾಜನ ಮನವೆಂಬ ಸರೋವರದಲ್ಲಿ ಒಪ್ಪುತ್ತಿರುವ, ಸಚ್ಚಿದಾನಂದ ಸ್ವರೂಪನೆ, ಅಲ್ಲಮಪ್ರಿಯನಾದ ನನ್ನನ್ನು ಚೆನ್ನಾಗಿ ಕಾಪಾಡುವುದು.

ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ [ಅವರ] ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ

ಇದು ಸಮಸ್ತ ಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾ
ತಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾವನ
ಪಾದನಖೋಚ್ಚಳಿತನಿಸ್ತಂದ್ರಸಾಂದ್ರರುಂದ್ರಚಂದ್ರಿಕಾಪಟಲಪಟುಲಂ
ಪಟಚಕೋರಾಯಮಾಣ ಶ್ರೀಸೋಮರಾಜೇಂದ್ರವಿರಚಿತ
ಮಪ್ಪಶೃಂಗಾರಸಾರಮಹಾಪ್ರಬಂಧದೊಳ್ ನಿಘರ್ಜಾಸು
ರವಧವರ್ಣನಂ ಚತುರ್ಥಾಶ್ವಾಸಂ ಮುಗಿದುದು.

ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತುರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ನಾಲ್ಕನೆಯ ಆಶ್ವಾಸವಾದ ನಿಘರ್ಜಾಸುರವಧ ವರ್ಣನೆಯು ಮುಗಿದುದು.

# ಐದನೆಯ ಆಶ್ವಾಸಂ

ಶ್ರೀತಾರೇಶಕುಲಾಂಬುಧಿ
ಜಾತಸುಧಾಸೂತಿ ಯುದ್ಭಟಕ್ಷಿತಿಪಾಲಂ।
ಶೀತೋಪಚಾರಮಂ ಕರ
ಮಾತಾಮ್ರಮುಖಂಗೆ ಮಾಡುತುಂ ರಂಜಿಸಿದಂ ॥ ೧ ॥

ನವಕಂಜಚ್ಛದತಳ್ಪದೊಳ್ಪಿಡದೆ ತತ್ತಾಮ್ರಾಸ್ಯನಂ ಪೊಂಗುವು
ತ್ಸವದಿಂದಂ ನಡೆನೋಡಿ ಪಟ್ಟಿರಿಸಿ ಸಂಫುಲ್ಲೋತ್ಪಲಶ್ರೇಣಿಯಿಂ।
ಸುವಿಲಾಸಂಬಡೆದೊಲ್ದು ಪಟ್ಟಿರಿಸಿ ರಂಭಾಪತ್ರದಿಂ ಬೀಸುತಂ
ದವನೀಶಂ ಶಿಶಿರೋಪಚಾರತತಿಯಂ ಮಾಡುತ್ತೆ ಕಣ್ಗೊಪ್ಪಿದಂ ॥ ೨ ॥

ಇಂತುದ್ಭಟಕ್ಷಿತೀಂದ್ರಚಂದ್ರಮಂ ಮಾಟ್ಪ ಶಿಶಿರೋಪಚಾರಮನಣ್ಪನ ಪೆಂಪಿಂದಲ್ಲಿಗಲ್ಲಿಗೆ ಪರಿದೆಲ್ಲಾಕರಣಂಗಳ್ತತ್ತತ್ಸ್ಥಾನಂಗಳನೊಯ್ಯನಾಶ್ರಯಿಸಲೆಚ್ಚತ್ತೊಯ್ಯನೆ ಚೇತರಿಸಿಕೊಂಡೆಬ್ಬಿ ಇಂಕೆಗಳಂ ಬಿದಿರ್ಚಿಕೊಂಡು ತಾಮ್ರತುಂಡಂ ಕಣ್ದೆರೆದೆಳವಾಳೆಯೆಲೆಯಿಂ ತನ್ನಂ ಬೀಸುತ್ತಗ್ರಭಾಗದೊಳ್ಮನಂ ಗೊಳಿಪವನಿಪನನಾಲೋಕನಂಗೆಯ್ದು,

ಎಲೆ ರಾಯಕುವರ ನೀನಾ
ರಲಸಿಕೆಯಂ ನೋಡದೆನ್ನಸುವನೋವಿದೆ ಯೆಂ।
ದೊಲವಿಂ ಗಿಳಿ ಕೇಳಲ್ತ
ದ್ವಿಲಸತ್ಕೀರಂಗೆ ಮಹಿಪನಂದಿಂತೆಂದಂ ॥ ೩ ॥

೧. ಚಂದ್ರವಂಶವೆಂಬ ಸಮುದ್ರದಲ್ಲಿ ಹುಟ್ಟಿದ ಚಂದ್ರನಾದ ಉದ್ಭಟ ಮಹಾರಾಜನು ಶೀತೋಪಚಾರವನ್ನು ಅತಿಶಯವಾಗಿ ಆ ಗಿಳಿಗೆ ಮಾಡುತ್ತ ಶೋಭಿಸಿದನು. ೨. ಮೃದುವಾದ ಕಮಲದ ಹಾಸುಗೆಯಲ್ಲಿ ಆ ಗಿಳಿಯನ್ನು ಹೊಮ್ಮುವ ಉತ್ಸಾಹದಿಂದ ಚೆನ್ನಾಗಿ ನೋಡಿ ಮಲಗಿಸಿ, ಅರಳಿದ ಕಮಲಗಳ ಸಾಲಿನಲ್ಲಿ ಚಲುವಿಕೆಯನ್ನು ತಾಳುವಂತೆ ಪ್ರೀತಿಯಿಂದ ಮಲಗಿಸಿ, ಬಾಳೆಎಲೆಯಿಂದ ಗಾಳಿ ಬೀಸುತ್ತ ಮಹಾರಾಜನು ಶೈತ್ಯೋಪಚಾರವನ್ನು ಮಾಡುತ್ತ ಕಣ್ಣಿಗೆ ಅಂದಗೊಂಡನು. ವ॥ ಹೀಗೆ ಉದ್ಭಟ ಮಹಾರಾಜ ಚಂದ್ರಮನು ಶೈತ್ಯೋಪಚಾರವನ್ನು ಮಾಡಲು ಬಾಂಧವ್ಯದ ಹಿರಿಮೆಯು ಅಂತಃಕರಣವನ್ನೆಲ್ಲಾ ಆವರಿಸಿ, ಇಂದ್ರಿಯಗಳು ತಮ್ಮ ತಮ್ಮ ಪೂರ್ವಸ್ಥಾನವನ್ನು ಮೆಲ್ಲ ಮೆಲ್ಲನೆ ಸೇರಲು ಗಿಳಿಯು ಎಚ್ಚರಗೊಂಡು ಮೆಲ್ಲನೆ ಚೇತರಿಸಿಕೊಂಡು ಮೇಲೆದ್ದು, ರೆಕ್ಕೆಗಳನ್ನು ಅಗಲಿಸಿ ಕಣ್ಣು ಬಿಟ್ಟು ಚಿಗುರಾದ ಬಾಳೆ ಎಲೆಯಿಂದ ತನಗೆ ಗಾಳಿ ಬೀಸುತ್ತ ಮುಂಭಾಗದಲ್ಲಿ ಮನಸೆಳೆಯುವಂತಿದ್ದ ಮಹಾರಾಜನನ್ನು ನೋಡಿ, ೩. ಎಲೆ ರಾಜಕುಮಾರ, ಆಯಾಸವನ್ನು ಲಕ್ಷಿಸದೆ ನನ್ನ ಪ್ರಾಣವನ್ನು ಕಾಪಾಡಿದ

ಗಿಳಿ ಕೇಳಾನೀಶ್ವರಪದ
ನಳಿನಾರ್ಚಕನುದ್ಭಟೋರ್ವಿಪತಿ ಯೆಂದೆನೆ ಕೇ।
ಳ್ದಿಳೆಯಾಣ್ಮನನತಿಮುದದಿಂ
ದಳವಡೆ ನಡೆನೋಡಿ ನುಡಿದುದಿಂತೆಂದು ಶುಕಂ ॥ ೪ ॥

ನೀನೇ ಶಂಕರಪಾದಪಂಕಜರಜೋಲೋಲಭ್ರಮೇಽದಿಂದಿರಂ
ನೀನೇ ಶಾರದಚಂದ್ರಸಾಂದ್ರವಿಲಸಜ್ಜ್ಯೋತ್ಸ್ನಾಭಕೀರ್ತ್ಯನ್ವಿತಂ।
ನೀನೇ ಸಜ್ಜನವಾಂಛಿತಪ್ರದವಿರಾಜತ್ಕಲ್ಪಭೂಮಿರುಹಂ
ನೀನೇ ಭೂಭುಜಕುಂಜರೋದ್ಭಟನೆನಿಪ್ಪಾಭೂವರಂ ಭೂವರಾ ॥ ೫ ॥

ಎಂದಿಂತರಗಳಿ ಬೆಸಗೊಳಲರಸಂ ಕೇಳ್ದುಮಚ್ಚರಿವಟ್ಟಮಾತ್ಯ ಶಿಖಾಮಣಿ ಶಿವಭದ್ರನ ಮುಖಮಂ ನೋಡಿ ನಸುನಕ್ಕು ಮಗುಟ್ದಾಕನ್ನಡವಕ್ಕಿಗಿಂತೆಂದಂ,

ಕೀರ ನೀ ಖಗಜಾತಿ ಮಾನವಭಾಷಿತಂ ನಿನಗೆಂತು ಬಂ
ತೀರಹಸ್ಯಮನೊಲ್ದು ಪೇೞ್ನೆ ಕೂರ್ತು ತಜ್ಜನಪಾಲಕಂ।
ಈರವಂಗೆ ಮಗುಟ್ದು ಕೌತುಕಮುಣ್ಮೆ ಬಾಯ್ದೆಱೆದಂದು ವಿ
ಸ್ತಾರಮಾಗಿರೆ ಪೇೞ್ದುದೊಯ್ಯನೆ ತನ್ನ ಮುನ್ನಿನ ಜನ್ಮಮಂ ॥ ೬ ॥

ನೃಪಚಂದ್ರ ಕೇಳ್ಚಿದಂಗನೆ
ನಿಪಯೋಗೀಶ್ವರನ ಶಿಷ್ಯನಾನೆನಗೆ ವಿರಾ।
ಜಿಪ ನಾಮಂ ಶುಕನೆಂದಂ
ದು ಪದೆದು ಬಾಯ್ದೆಱೆದು ಪೇೞ್ದುದಂತಾಕೀರಂ ॥ ೭ ॥

ನೀನಾರು? ಎಂದು ಪ್ರೀತಿಯಿಂದ ಗಿಳಿಯು ಕೇಳಲು, ಆ ಅರಗಿಳಿಗೆ ಮಹಾರಾಜನು ಹೀಗೆಂದನು. ೪. "ಗಿಳಿಯೆ ಕೇಳು, ನಾನು ಶಿವನ ಪಾದಕಮಲಗಳನ್ನು ಪೂಜಿಸುವ ಉದ್ಭಟ ಮಹಾರಾಜನು" ಎನ್ನಲು, ಆ ಮಾತನ್ನು ಕೇಳಿ ಮಹಾರಾಜನಲ್ಲಿ ಹೆಚ್ಚಿನ ಪ್ರೀತಿಯುಂಟಾಗಿ ಚೆನ್ನಾಗಿ ಅವನನ್ನು ನೋಡಿ, ಆ ಗಿಳಿಯು ಹೀಗೆ ಹೇಳಿತು. ೫. ಮಹಾರಾಜ, ನೀನು ಶಿವನ ಪಾದ ಕಮಲಗಳ ಧೂಳಿನಲ್ಲಿ ಹೊರಳಾಡುವ ಶ್ರೇಷ್ಠ ಭ್ರಮರನು; ನೀನು ಶರತ್ಕಾಲದ ಚಂದ್ರನ ದಟ್ಟವೂ ಜಾಜ್ವಲ್ಯಮಾನವೂ ಆದ ಬೆಳುದಿಂಗಳನ್ನು ಹೋಲುವ ಕೀರ್ತಿವಂತನು; ನೀನು ಸಜ್ಜನರಿಂದ ಬಯಸಲ್ಪಡುವ ಶೋಭಾಯಮಾನನಾದ ಕಲ್ಪವೃಕ್ಷನು; ನೀನು ಮಹಾರಾಜರುಗಳಲ್ಲಿ ಬಲಿಷ್ಠ ಆನೆಯೋಪಾದಿಯಲ್ಲಿರುವ ಉದ್ಭಟ ಮಹಾರಾಜನು. ವ॥ ಹೀಗೆಂದು ಅರಗಿಳಿಯು ಹೇಳಲು, ಅರಸನು ಆ ಮಾತು ಕೇಳಿ ಆಶ್ಚರ್ಯ ಹೊಂದಿ ಮಂತ್ರಿ ಶ್ರೇಷ್ಠನಾದ ಶಿವಭದ್ರನ ಮುಖವನ್ನು ನೋಡಿ ನಸುನಕ್ಕು, ಮತ್ತೆ ಆ ಗಿಳಿಗೆ ಇಂತೆಂದನು. ೬. "ಎಲೆ ಗಿಳಿಯೆ, ನೀನಾದರೊ ಪಕ್ಷಿಜಾತಿಗೆ ಸೇರಿದವನು. ಮನುಷ್ಯ ಭಾಷೆ ನಿನಗೆ ಹೇಗೆ ಬಂದಿತು? ಈ ರಹಸ್ಯವನ್ನು ಪ್ರೀತಿಯಿಂದ ಅರುಹು" ಎನ್ನಲು, ಒಲವಿನಿಂದ ಆ ಮಹಾರಾಜಸಿಂಹನಿಗೆ ಮತ್ತೆ ಅರಿವಾಗುವಂತೆ ಬಾಯಿತೆರೆದು ವಿಸ್ತಾರವಾಗಿ ತನ್ನ ಹಿಂದಣ ಜನ್ಮವೃತ್ತಾಂತವನ್ನು ಮೆಲ್ಲನೆ ಹೇಳತೊಡಗಿತು. ೭. ಮಹಾರಾಜನೆ ಕೇಳು, ನಾನು ಚಿದಂಗನೆಂಬ ಮುನಿಯ ಶಿಷ್ಯನು. ನನಗೆ ಚೆನ್ನಾಗಿ

ಎನೆ ತಚ್ಛುಕವಾಕ್ಯಮನಾ
ಜನಪತಿ ಕೇಳ್ದಲೆ ಸುವಾಣಿ ಈಜನ್ಮಂ ಬಂ।
ದ ನಿಮಿತ್ತಮಾವುದೆನೆ ರಾ
ಯನೊಳಿಂತಿಂದೊಲ್ದು ಪೇಟ್ದುದಂತಾಕೀರಂ ॥ ೮ ॥

ಆದೊಡಾಲಿಸುದ್ಭಟಾಂಕ ತನ್ಮುನೀಂದ್ರನೆನ್ನ ಹೃ
ದ್ಭೇದಮಂ ಪರೀಕ್ಷಿಸಲ್ಕಮಂತದೊಂದುಘಸ್ರದೊಳ್।
ಪೂದರಲ್ಕೆ ಪೇಟಿಲಾಂ ವನಕ್ಕೆ ಪೋಗಲಿತ್ತಲೊ
ಲ್ದಾದಿಗಂಬರಂ ನಿಮಿರ್ಚಿದಂ ಮಹೇಂದ್ರಜಾಲಮಂ ॥ ೯ ॥

ಋಷಿಯಂ ಬೀಟ್ಕೊಂಡೊಪ್ಪುವ
ತುಷಾರಕಣಮಿಳಿತಕುಸುಮವಾಟಿಕೆವೊಕ್ಕಾಂ।
ಸುಷುಮೋದ್ಗಮಜಾಳಮನನಿ
ಮಿಷತೆಯನೆನ್ನಂಬಕಂಗಳ್ಕೆದಲ್ತಿರಿದೆಂ ॥ ೧೦ ॥

ತುಂಬಿಗಳೆಱಗದ ನಱುಗಂ
ಪಂಬೀಱುವ ನಿಟ್ಟೆಸಳ್ಗಳಮರ್ದೊಪ್ಪುವ ಪೂ।
ದೊಂಬೆಗಳಂ ಕೈಕೊಂಡು ಮು
ದಂಬಡೆದಾಂ ಮೆಲ್ಲಮೆಲ್ಲನೆಟ್ಟಿರ್ಪಾಗಳ್ ॥ ೧೧ ॥

ಮಂದೇಹರ ಶೋಣಾಂಬುವಿ
ನಿಂದಂ ತೊಯ್ದಂಗಮಂ ತೊಳೆಯಲೆಂದೊಲ್ದೆ।
ಟ್ಟಿಂದಿರದಿಟಿವವೊಲಿಟಿದಂ
ಕುಂದದೆ ಪಡುಗಡಲೊಳೊಪ್ಪುವಂಬುಜಮಿತ್ರಂ ॥ ೧೨ ॥

ಒಪ್ಪುವ ಹೆಸರು ಶುಕನೆಂಬುದು ಎಂದು ಪ್ರೀತಿಯಿಂದ ಬಾಯಿತೆರೆದು ಆ ಗಿಳಿಯು ನುಡಿಯಿತು. ೮. ಹಾಗೆನ್ನಲು, ಆ ಗಿಳಿಯ ಮಾತನ್ನು ಕೇಳಿದ ಮಹಾರಾಜನು "ಎಲೆ ಗಿಳಿಯೆ, ನಿನಗೆ ಈ ಜನ್ಮ ಬಂದ ಕಾರಣವಾವುದು?" ಎಂದು ಕೇಳಲು, ಮಹಾರಾಜನಲ್ಲಿ ಆ ಗಿಳಿಯು ಪ್ರೀತಿಪಟ್ಟು ಹೀಗೆಂದಿತು. ೯. ಹಾಗಾದರೆ ಕೇಳು ಉದ್ಭಟಾ, ಆ ಮುನೀಂದ್ರನು ನನ್ನ ಮನಸ್ಸನ್ನು ಒರೆ ಹಚ್ಚಿ ನೋಡಬೇಕೆಂದು ಒಂದು ದಿನ ಹೂವನ್ನು ತರುವಂತೆ ಹೇಳಲು ನಾನು ಕಾಡಿಗೆ ಹೋದೆನು. ಇತ್ತ ಆ ಮುನಿಯು ಅಪೇಕ್ಷಿಸಿ ಮಹೇಂದ್ರ ಜಾಲವನ್ನು ಹರಡಿದನು. ೧೦. ಋಷಿಯಿಂದ ಬೀಳ್ಕೊಂಡು ಮಂಜಿನ ಕಣಗಳಿಂದ ಕೂಡಿ ಶೋಭಿಸಿರುವ ಹೂದೋಟವನ್ನು ಪ್ರವೇಶಿಸಿ ಸೌಂದರ್ಯದ ಮೂಲಸ್ಥಾನಗಳಾದ ಹೂವುಗಳ ಮೊತ್ತವನ್ನು ಎವೆ ಮುಚ್ಚದ ನನ್ನ ಕಣ್ಣುಗಳು ಸಮೀಪಿಸಲು ಅವನ್ನು ಕಿತ್ತೆನು. ೧೧. ತುಂಬಿಗಳು ಮುತ್ತದ, ಸುವಾಸನೆಯನ್ನು ಬೀರುವ, ಉದ್ದವಾದ ಎಸಳುಗಳಿಂದ ಚೆನ್ನಾದ ಹೂವಿನ ಗೊಂಚಲನ್ನು ಸ್ವೀಕರಿಸಿ ಸಂತೋಷಗೊಂಡು ನಾನು ಮೆಲ್ಲಮೆಲ್ಲನೆ ಬರುತ್ತಿರುವಾಗ, ೧೨. ಮಂದೇಹರನು ಕೆನ್ನೀರಿನಿಂದ ಒದ್ದೆಯಾದ ಶರೀರವನ್ನು ತೊಳೆಯಲೆಂದು ಬಯಸಿ ಬಂದು ಇಳಿಯುವ ರೀತಿಯಲ್ಲಿ ಶೋಭಿಸುವ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಕುಗ್ಗದೆ ಇಳಿದನು.

ಮತ್ತಮಾಸಮಯದೊಳ್,

ತರುವೆಲ್ಲಂ ತಿಲಕಂಗಳಾಗಿರೆ ವಿರಾಜನ್ನೀಲಶೈಲಾಳಿಯಾ
ಗಿರೆ ಭೂಭೃತ್ಕುಳಮೆಲ್ಲಮಂಡಜಮದೆಲ್ಲಂ ಕೋಕಿಲಾಕಾರಮಾ।
ಗಿರೆ ನಾನಾಮೃಗಮೆಲ್ಲಮಾಗಿರೆ ಮದೇಭಂ ಸರ್ವದಿಕ್ಚಕ್ರದೊಳ್
ಪರಿಪೂರ್ಣತ್ವಮನೈದಿದತ್ತು ವಿಪುಳಧ್ವಾಂತಂಧರಾಧೀಶ್ವರಾ ॥ ೧೩ ॥

ಇಂತಖಿಳದಿಶಾಚಕ್ರದೊಳ್ತೆಕ್ಕನೆ ತೀವಿ ಕೊರ್ವಿ ಪರ್ವಿದತುಳಧ್ವಾಂತದೊಳಲ್ಲಿಗಲ್ಲಿಗೆ ಬೀಟುತ್ತಾಂ ಮೆಲ್ಲನೆ ಬರೆವರೆ,

ಮದೋದ್ರೇಕಿಯಾದಾ ಮಹೀವಲ್ಲಭಂಗು
ರ್ಬಿದುತ್ತುಂಗದೋಷೌಘಮಂ ನೂಂಕುವುತ್ತೋ।
ವಿದಾಮಾತ್ಯನಂತೀಲಸಲ್ಲೋಕಮಂ ತೀ
ವಿದಾಧ್ವಾಂತಮಂ ಸೋವಿದಂ ಮೂಡಿ ಚಂದ್ರಂ ॥ ೧೪ ॥

ಅಮಳಿನಚಂದ್ರಾತಪಮೆಂ
ಬಮೃತಾಬ್ಧಿಯ ನೂತ್ನಫೇನಖಂಡಮದೆನೆ ಮೇ।
ಣಮಿತಚ್ಛವಿಯಂ ಪಡರಿಸು
ತಮರ್ದತ್ತು ಮನಂಗೊಳಿಪ್ಪ ಚಂದ್ರನ ಬಿಂಬಂ ॥ ೧೫ ॥

ಇಂತುರ್ವಿಯನುರ್ವಿ ಪರ್ವಿದತುಳಧ್ವಾಂತಮಂ ಪರಿಹರಿಸಿ ಮನಂಗೊಳಿಪ ಚಂದ್ರಮಂಡಲಸಂಜನಿತ ಚಂದ್ರಾತಪಸ್ಪರ್ಶನದಿಂದೊಸರ್ದು ಪರಿಹರಿಸಿ ಚಂದ್ರಕಾಂತರಸದ ಪರಿಕಾಲ್ಗಳಂ ದಾಂಟಿ ತಚ್ಚಂದ್ರಿಕೆಳೆಯೆಳೆದಿರುಳಂ ಭುಂಜಿಸಿ ಸೊರ್ಕ್ಕಿ ಮಿಕ್ಕುಂ ತೆಕ್ಕನೆ ತೀವಿದಾನಂದದಿಂದಂ ಬೆಳ್ದಿಂಗಳೆಂಬಪಾಲ್ಗಡಲೊಳ್ಬೆಂಡಾಡುವ ಚಕೋರಂಗಳಂ ನೋಡುತ್ತಾಂ ಮೆಲ್ಲಮೆಲ್ಲನೆ ಬರೆವರೆ,

ವ॥ ಮತ್ತೆ ಆ ಸಮಯದಲ್ಲಿ, ೧೩. ಮಹಾರಾಜಾ ವೃಕ್ಷಗಳೆಲ್ಲಾ ತಿಲಕ ವೃಕ್ಷಗಳಾಗಿರಲು, ಬೆಟ್ಟಗಳೆಲ್ಲಾ ವಿರಾಜಿಸಿರುವ ನೀಲಪರ್ವತಗಳಾಗಿರಲು, ಪಕ್ಷಿಗಳೆಲ್ಲಾ ಕೋಗಿಲೆಗಳಾಗಿರಲು, ನಾನಾ ಬಗೆಯ ಪ್ರಾಣಿಗಳೆಲ್ಲಾ ಮದ್ದಾನೆಗಳಾಗಿರಲು ಎಲ್ಲಾ ದಿಕ್ಕುಗಳಲ್ಲಿ ದಟ್ಟವಾದ ಕತ್ತಲೆಯು ಸಂಪೂರ್ಣವಾಗಿ ಕವಿದಿತ್ತು. ವ॥ ಹೀಗೆ ಎಲ್ಲಾ ದಿಕ್ಕುಗಳಲ್ಲಿ ಅಧಿಕವಾಗಿ ತುಂಬಿ ಕೊಬ್ಬಿ ಹಬ್ಬಿದ ದಟ್ಟ ಕತ್ತಲೆಯಲ್ಲಿ ಅಲ್ಲಲ್ಲಿ ಬಿದ್ದೇಳುತ್ತಾ ನಾನು ಮೆಲ್ಲನೆ ಬರುತ್ತಿರಲು, ೧೪. ಮದಾಂಧನಾದ ಮಹಾರಾಜನಲ್ಲಿ ಹೆಚ್ಚುತ್ತಾ ಹೋದ ದೋಷಗಳನ್ನು ಪರಿಹರಿಸುವ ಸುಜ್ಞಾನಿಯಾದ ಮಂತ್ರಿಯಂತೆ ಹೊಳೆಯುವ ಲೋಕವನ್ನು ಕವಿದ ಕತ್ತಲೆಯನ್ನು ಪರಿಹರಿಸಲು ಚಂದ್ರನು ಉದ್ಭವಿಸಿದನು. ೧೫. ಪರಿಶುದ್ಧವಾದ ಚಂದ್ರನ ಕಾಂತಿ ಎಂಬ ಕ್ಷೀರ ಸಮುದ್ರದ ನವೀನವಾದ ನೊರೆಯೊ ಎನ್ನುವಂತೆ ಪ್ರಖರ ಕಾಂತಿಯನ್ನು ಹರಡುತ್ತ ಮನವನ್ನು ಸೆಳೆಯುವ ಚಂದ್ರಬಿಂಬವು ಆಕಾಶವನ್ನು ಸೇರಿದ್ದಿತು. ವ॥ ಹೀಗೆ ಭೂಮಂಡಲವನ್ನು ಚೆನ್ನಾಗಿ ಕವಿದ ದಟ್ಟ ಕತ್ತಲೆಯನ್ನು ನಿವಾರಿಸಿ ಮನಸೆಳೆಯುವ ಚಂದ್ರಮಂಡಲದಿಂದ ಹೊಮ್ಮಿ ಬಂದ ಬೆಳುದಿಂಗಳು ತಾಕಲು ಚಂದ್ರಕಾಂತ ಶಿಲೆಯಿಂದ ರಸ ಜಿನುಗಿ ಚಂದ್ರಕಾಂತರಸದ ಕಾಲುವೆಯಾಗಲು ಅದನ್ನು ದಾಟಿ ಬೆಳುದಿಂಗಳ ಎಳೆಯ ತಿರುಳನ್ನು ಸವಿದು ಸೊಕ್ಕಿ ಮೈಯೆಲ್ಲ ಆವರಿಸಿದ ಆನಂದದಿಂದ ಬೆಳುದಿಂಗಳೆಂಬ ಕ್ಷೀರಸಾಗರದಲ್ಲಿ ನಲಿದಾಡುವ

ಯುವತೀಸಂದೋಹತುಂಗಸ್ತನತಟಪರಿಲಿಪ್ತಾಚ್ಛಕಸ್ತೂರಿಯಂ ಮೆ
ಟ್ಟಿ ವಿರಾಜತ್ಪೂಜೆಗೆಂದೊಲ್ದಿರಿಸಿದಲರ್ಗಳಂ ನಾಡೆ ಪೊತ್ತೆತ್ತಿ ತದ್ಧೂ।
ಪವಿಧೂಮಾನೀಕಮಂ ಪೊಯ್ದುರುಪರಿಮಳಮಂ ಬೀಱುತುಂ ತೀಡಿತಂದು
ತ್ಸವಮಾಗಲ್ಗಾಳಿಯಂದಾವರಪದದೆಡೆಯೊಳ್ಕೇಳ್ನರೇಂದ್ರಾಗ್ರಗಣ್ಯಾ ॥ ೧೬ ॥

ಇಂತಖಿಳೇಂದ್ರಿಯಂಗಳ್ಗಾನಂದಮಂ ಮಾಟ್ಟಿತುಳಪರಿಮಳಪರಿಕಲಿತತರಳಪವನನುರುತರಮಾದಿಂಪು ಗುಂಪಿನ ಸವ್ವಳಿವಿಡಿದಾಂ ಬರೆವರೆ,

ಸಿಂಗರದಿಂಬು ಗಾನದ ನಿವಾಸಮನೂನದ ಗಂಧದಿಕ್ಕೆ ಮಂ
ತ್ರಂಗಳ ಗೊತ್ತು ಸಂತಸದ ಮೇರೆ ವಿಲಾಸದ ಬೀಡು ಸರ್ವಶಾ।
ಸ್ತ್ರಂಗಳ ಶಾಲೆ ಲೀಲೆಯ ತವರ್ಮನೆ ಬಾಲೆಯರಟ್ಟಿ ಕಾಮಬಾ
ಣಂಗಳ ತೂಣವೆಂದೆನಿಸಿ ರಂಜಿಸಿತೊಂದು ಮನೋಜ್ಞಮಂಟಪಂ ॥ ೧೭ ॥

ಪೊಸಲಾಮಂಚದ ತೇರ್ಗಳಲಂಪಿಂ
ಸಸಿಮಣಿವೇದಿಕೆಗಳ ಕಡು ಸೊಂಪಿಂ।
ಮಾಣಿಕ್ಯದ ಸೋಪಾನಾವಳಿಯಿಂ
ಮಾಣದೆ ಮೇಣೋದುವ ಪೆಣ್ಗಿಳಿಯಿಂ ॥ ೧೮ ॥

ನಾನಾಪಟ್ಟೆವಗೆಯ ಮೇಲ್ಕಟ್ಟಿಂ
ಗಾನಮನಾಗಿಸುವಳಿಗಳ ಥಟ್ಟಿಂ।
ಪೊಂಬಾಳೆಯ ಪೊಸಗಂಬಗಳಿಂದಂ
ಕೆಂಬೂರದ ಕಿಱುಗಂಬಗಳಿಂದಂ ॥ ೧೯ ॥

ಚಕೋರಗಳನ್ನು ನೋಡುತ್ತ ಮೆಲ್ಲ ಮೆಲ್ಲನೆ ಬರುತ್ತಿರಲು, ೧೬. ರಾಜರುಗಳಲ್ಲಿ ಅಗ್ರಗಣ್ಯನಾದವನೆ ಕೇಳು, ಯುವತಿಯರ ಉನ್ನತವಾದ ಮೊಲೆಗಳ ಕೆಳಗೆ ಲೇಪಿಸಿದ ಸುವಾಸನಾಭರಿತ ಕಸ್ತೂರಿಯನ್ನು ಮೆಟ್ಟಿ, ಮಂಗಳಕರವಾದ ಪೂಜೆಗೆಂದು ಪ್ರೀತಿಯಿಂದ ತೆಗೆದಿರಿಸಿದ್ದ ಹೂವುಗಳ ಕಂಪನ್ನು ಚೆನ್ನಾಗಿ ಹೊತ್ತುಕೊಂಡು, ಧೂಪದ ಹೊಗೆಯನ್ನು ತಾಗಿ ಅದರ ಹೆಚ್ಚಿನ ಪರಿಮಳವನ್ನು ಚೆಲ್ಲುತ್ತಾ ಮನಸ್ಸಿಗೆ ಹರ್ಷವಾಗುವಂತೆ ಗಾಳಿಯು ಒಳ್ಳೆಯ ಕಡೆಯಿಂದ ಅಂದು ಬೀಸಿತು. ವ॥ ಹೀಗೆ ಸಕಲ ಇಂದ್ರಿಯಗಳಿಗೆ ಆನಂದವನ್ನುಂಟುಮಾಡುವ ಸುಮಧುರ ಸುವಾಸನೆಯನ್ನು ಹರಡುವ ಗಾಳಿಯ ಹಿತವನ್ನುಂಟು ಮಾಡುವ ದಾರಿ ಹಿಡಿದು ಬರುತ್ತಿರಲು, ೧೭. ಶೃಂಗಾರದ ಆಶ್ರಯ ಸ್ಥಾನ, ಗಾನದ ನಿವಾಸ, ಕೊರತೆಯಿಲ್ಲದ ಸುವಾಸನೆಯ ನೆಲೆ ಮನೆ, ಮಂತ್ರಾಲೋಚನೆಯ ಸ್ಥಳ, ಸಂತಸದ ಗಡಿ, ವಿಲಾಸದ ಬೀಡು, ಸಕಲ ಶಾಸ್ತ್ರಗಳ ಶಾಲೆ, ವಿನೋದದ ಬೀಡು, ಬಾಲೆಯರ ಪ್ರೀತಿ, ಕಾಮಬಾಣಗಳ ಬತ್ತಳಿಕೆ ಎಂದೆನ್ನಿಸಿದ ಮನೋಹರ ಮಂಟಪವೊಂದು ಶೋಭಿಸಿತು. ೧೮. ನವೀನವಾದ ಲಾಮಂಚದ ತೇರುಗಳ ಸೊಗಸಿನಿಂದ, ಚಂದ್ರಮಣಿ ವೇದಿಕೆಗಳ ಚಲ್ವಿಕೆಯಿಂದ, ಮಾಣಿಕ್ಯದ ಮೆಟ್ಟಿಲುಗಳಿಂದ, ಬಿಡದೆ ಓದುವ ಹೆಣ್ಣು ಗಿಳಿಯಿಂದ, ೧೯. ನಾನಾ ಬಗೆಯ ರೇಷ್ಮೆ ಬಟ್ಟೆಯ ಮೇಲು ಕಟ್ಟುಗಳಿಂದ, ಹಾಡುವ ದುಂಬಿಗಳ ಸಮೂಹದಿಂದ, ಹೊಂಬಾಳೆಯ ಹೊಸ ಕಂಬಗಳಿಂದ, ಕೆಂಬೂರದ ಚಿಕ್ಕ ಕಂಬಗಳಿಂದ,

ಇಂಗೋಲ್ಗಳ ಸೊಗಯಿಪ್ಪ ತೊಲೆಗಳಿಂ
ತೆಂಗಿನ ಸುಳಿಯಲೆಯಚ್ಚ ನೆಲೆಗಳಿಂ।
ಮಂಜುಶಿರೀಷದ ಚೇರಡಿಯಿಂದಂ
ಚೆಂಜಾಜಿಯ ಗೊಂಚಲಗುಡಿಯಿಂದಂ ॥ ೨೦ ॥

ನವಕಿಸಲಯಲೋವೆಯ ಸುಂದರದಿಂ
ದವನದ ಸೂಸುಕಗಳ ಬಂಧುರದಿಂ।
ಬಾಲರಸಾಲದ ಕುಶಕಗಳಿಂದಂ
ಕೀಲಿಸಿದುದ್ಗಮದೆಸಕಗಳಿಂದಂ ॥ ೨೧ ॥

ಮದನಿಯ ಪೊಸಮಾಲೆಗಳ ಮೆಳೆಗಳಿಂ
ದರ್ದುಗಂಚಿಯ ಕುಜುಜುಗಳ ಕಳೆಗಳಿಂ।
ಪೊಂಗುವ ಶಾಖೆಯ ಪೊಸಮಾಲೆಗಳಿಂ
ಚೆಂಗಣ್ಗೊಗಿಲೆಗಳ ನವಮಾಲೆಗಳಿಂ ॥ ೨೨ ॥

ಮಲ್ಲಿಗೆನನೆಗಳ ಜಾಳಾಂಜರದಿಂ
ಮೊಲ್ಲೆಯ ಸ್ರಗ್ಜಾಲದ ಪಂಜರದಿಂ।
ಚಂಪಕನವಕೋರಕದ ಕಳಶದಿಂ
ಕಂಪಮರ್ದಂಭೋರುಹದ ವಿಳಸದಿಂ ॥ ೨೩ ॥

ಚಾರುಜಪಾಕುಸುಮದ ತೋರಣದಿಂ
ಸಾಲಸುಗಂಧಾವಳಿಯೋರಣದಿಂ
ಮುಡಿವಾಳದ ಝುಲ್ಲರಿಗಳೆಸಕದಿಂ
ಕಡುಮಿಂಚುವ ಪುತ್ಥಳಿಗಳೆಸಕದಿಂ ॥ ೨೪ ॥

ಕಸ್ತೂರಿಯ ಪೊಸಸಾರಣೆಯಿಂದಂ
ವಿಸ್ತಾರಿಪ ಫಲದೋರಣೆಯಿಂದಂ ॥ ೨೫ ॥*

೨೦. ಇಂಗೋಲಿನ ಸೊಗಸಾದ ತೊಲೆಗಳಿಂದ, ತೆಂಗಿನ ಗಿಡಗಳ ಸೊಗಸಾದ ತಾಣಗಳಿಂದ ಮನೋಹರವಾದ ಶಿರೀಷ ವೃಕ್ಷದ, ಬುಡದಿಂದ, ಚೆಂಜಾಜಿಯ ಗೊಂಚಲ ಮೊತ್ತದಿಂದ, ೨೧. ಹೊಸ ಚಿಗುರಿನ ಇಳಿಜಾರಾದ ಸೂರಿನ ಲಾವಣ್ಯದಿಂದ, ದವನದ ವ್ಯಾಪಕ ಮನೋಹರತೆಯಿಂದ, ಎಳೆಯ ಮಾವಿನ ಚಿಗುರುಗಳಿಂದ, ಪೋಣಿಸಿದ ಹೂವುಗಳ ಕಾಂತಿಯಿಂದ, ೨೨. ಮನ್ಮಥನ ಹೊಸ ಹೂ ಮಾಲೆಗಳ ಮೆಳೆಗಳಿಂದ, ಮಾಧವಿಯ ಪೊದರುಗಳ ಸೊಬಗಿನಿಂದ, ಹರಡಿದ ಟೊಂಗೆಗಳಲ್ಲಿ ಅರಳಿದ ಹೂ ಮಾಲೆಗಳಿಂದ, ಕೆಂಪುಗಣಗಿಲೆಯ ಅರಳಿದ ಮಾಲೆಯಿಂದ, ೨೩. ಮಲ್ಲಿಗೆ ಮೊಗ್ಗುಗಳ ಬಲೆಯಂತೆ ಕಂಡಿಗಳನ್ನೊಳಗೊಂಡಿರುವ ಕಿಟಕಿಗಳಿಂದ, ಮೊಲ್ಲೆಯ ಹೂಗಳ ಪಂಜರದಿಂದ, ಚಂಪಕದ ಎಳೆ ಮೊಗ್ಗಿನ ಕಳಶದಿಂದ, ಕಂಪನ್ನೊಳಗೊಂಡ ಕಮಲದ ಲಾವಣ್ಯದಿಂದ, ೨೪. ಮನೋಹರವಾದ ಕೆಂಪುದಾಸವಾಳದ ಹೂಗಳ ತೋರಣದಿಂದ, ಸಾಲಾದ ಪರಿಮಳಭರಿತ ಪುಷ್ಪಗಳ ಒಪ್ಪದಿಂದ, ಮುಡಿವಾಳದ ಕುಚ್ಚಿನ ವೈಭವದಿಂದ ಚೆನ್ನಾಗಿ ಹೊಳೆಯುವ ಗೊಂಬೆಗಳ ಸೊಬಗಿನಿಂದ, ೨೫. ಕಸ್ತೂರಿಯ ಹೊಸ ಸಾರಣೆಯಿಂದ, ಹರಡಿರುವ

* ಮೂಲದಲ್ಲಿ ಎರಡು ಸಾಲು ಬಿಟ್ಟುಹೋಗಿದೆ.

ಕಣ್ಗಾತಿಮಂಗಳಮಂ ಮಾಡುತ್ತುಂ
ತುಂಗವಿಳಾಸದೊಳೊಡಗೂಡುತ್ತುಂ।
ರಂಜಿಸಿದುದು ಪೂಜಾವರಗೇಹಂ
ಸಂಜನಿತಾಮೋದದ ಸಂದೋಹಂ ॥ ೨೬ ॥*

ಸೊಂಪಮರ್ದಿಂತೆಸೆವಾಗೃಹ
ಮಂ ಪದೆದಾಂ ಮೆಲ್ಲಮೆಲ್ಲನವಲೋಕಿಸುತುಂ।
ಮುಂಪೊದಟ್ಟಿ ಹರುಷದಿಂ ಬರೆ
ತಾಂ ಪರಿರಂಜಿಸಿದುದಂತುಮಲ್ಲದೆ ಮತ್ತಂ ॥ ೨೭ ॥

ಓದುವ ರಾಜಕೀರಚಯದಿಂ ಸಲೆ ಪಾಡುವ ಕೋಕಿಲಂಗಳಿಂ
ಹ್ಲಾದದಿನುರ್ಬಿ ಸಂಚರಿಸುವಂಚೆಗಳುರ್ವ ಬೆಡಂಗನೀವ ಸ।
ನ್ನಾದದೆ ಝೇಂಕರಿಪ್ಪ ಮಱಿದುಂಬಿಯ ಗೊಂದಣದಿಂದೆ ಚಿತ್ತಕಿಂ
ಬಾದುದು ಕಂಪನೆಣ್ದೆಸೆಗೆ ಬೀಱುತೆ ತತ್ಕಮನೀಯಮಂಟಪಂ ॥ ೨೮ ॥

ಇಂತು ಮನಂಗೊಳಿಪ ಮಂಟಪಮಂ ಮೆಲ್ಲಮೆಲ್ಲನಾಲೋಕಿಸುತುಂ ಆನಂದದಿಂದೆಟ್ಟಿಂದು ಹತ್ತೆಸಾರ್ದು ತದ್ಗವಾಕ್ಷಂಗಳಿಂದೆ ನೋಡಲಾಮಂದಿರಮಧ್ಯದಲ್ಲಿ,

ಕಣ್ಗದಿರಚ್ಚಪೊಚ್ಚಪೊಸಮಿಂಚಿನ ಮಂಜರಿಯೊಳ್ಮದಾಳಿಯೊಳ್
ನುಣ್ಗುರುಳಿಂದುಮಂಡಲದೊಳಾಸ್ಯಮುದಂಚಿತಹೇಮಕುಂಭದೊಳ್।
ತುಂಗಪಯೋಧರಂ ನವಸುವಿದ್ರುಮದೊಳ್ತುಟಿಯುಂ ಪಳಂಚೆ ಮೇ
ಣಂಗನೆಯರ್ಪಲಂಬರಮರ್ದೊಪ್ಪಿದರ್ಕೈದೆ ಮನೋನುರಾಗದಿಂ ॥ ೨೯ ॥

ಹಣ್ಣುಗಳ ಅಚ್ಚುಕಟ್ಟಿನಿಂದ, ೨೬. ಕಣ್ಣಿಗೆ ಮಂಗಳವನ್ನುಂಟುಮಾಡುವ ಅತಿಶಯ ಶೋಭೆಯಿಂದ ಕೂಡಿ, ಸಂತೋಷದ ಮೊತ್ತವೆನ್ನಿಸಿ ಶ್ರೇಷ್ಠವಾದ ಪೂಜಾ ಮಂದಿರವು ಶೋಭಿಸಿತು. ೨೭. ಚೆಲುವಿಕೆಯನ್ನು ಹೊಂದಿ ಶೋಭಿಸಿರುವ ಆ ಮಂದಿರವನ್ನು ಪ್ರೀತಿಯಿಂದ ನಾನು ಮೆಲ್ಲ ಮೆಲ್ಲನೆ ನೋಡುತ್ತ ಹೊಮ್ಮಿ ಬಂದ ಹರುಷದಿಂದ ಬರುತ್ತಿರಲು ಅದು ಚೆನ್ನಾಗಿ ಹೊಳೆಯಿತು. ಅಷ್ಟಲ್ಲದೆ ಮತ್ತೆ, ೨೮. ಓದುವ ಅರಗಿಳಿಗಳ ಸಮೂಹದಿಂದ, ಚೆನ್ನಾಗಿ ಹಾಡುವ ಕೋಗಿಲೆಗಳಿಂದ ಸಂತಸದಿಂದ ಉಬ್ಬಿ ಓಡಾಡುವ ಹಂಸಗಳಿಂದ, ಶ್ರೇಷ್ಠ ಚಲುವನ್ನು ಬೀರುವ ಇನಿದಾಗಿ ಝೇಂಕರಿಸುವ ಮರಿದುಂಬಿಗಳ ಮೊತ್ತದಿಂದ ಎಂಟೂ ದಿಕ್ಕುಗಳಿಗೆ ಸುಗಂಧವನ್ನು ಹರಡುತ್ತಲಿರುವ ಮನೋಹರವಾದ ಮಂಟಪವು ಮನಸ್ಸಿಗೆ ಆಶ್ರಯಸ್ಥಾನವಾಯಿತು. ವ॥ ಹೀಗೆ ಮನಸೆಳೆಯುವ ಮಂಟಪವನ್ನು ಮೆಲ್ಲ ಮೆಲ್ಲನೆ ನೋಡುತ್ತ ಆನಂದದಿಂದ ನಡೆದು ಬಂದು ಸಮೀಪಿಸಿ ಅದರ ಗವಾಕ್ಷಗಳಿಂದ ನೋಡಲು ಆ ಮಂದಿರದ ಮಧ್ಯಭಾಗದಲ್ಲಿ, ೨೯. ಕಣ್ಣ ಕಾಂತಿಯು ಎಳೆಯ ಮಿಂಚಿನ ಮೊತ್ತದೊಡನೆ, ನುಣ್ಣನೆಯ ಮುಂಗುರುಳು ಮದಿಸಿದ ದುಂಬಿಗಳೊಡನೆ, ಮುಖವು ಚಂದ್ರಮಂಡಲದೊಡನೆ, ಚೂಪಾದ ಮೊಲೆಗಳು ಚಿನ್ನದ ಕಳಶಗಳೊಡನೆ, ತುಟಿಯು ಎಳೆಯದಾದ ಸುಂದರ ಹವಳದೊಡನೆ ಸ್ಪರ್ಧಿಸುತ್ತಿರಲು ಮನದಾನಂದದಿಂದ ಹಲವರು ಲಾವಣ್ಯವತಿಯರು ಕೂಡಿ ಚೆನ್ನಾಗಿ ಶೋಭಿಸಿದರು. ೩೦. ಆ ಮಂಟಪದಲ್ಲಿ ಹಲವರು

* ಪದ್ಯದ ೩ ಮತ್ತು ೪ನೇ ಪಾದಗಳಲ್ಲಿ ಆದಿಪ್ರಾಸ ತಪ್ಪಿದೆ.

ಅಲರ್ಗಳನಾಯುತುಮತ್ಯು
ಜ್ವಳಪರಿಮಳತತಿಯನಿರಿಸುತುರುಪರಿಕರಸಂ।
ಕುಲಮಂ ಪಸರಿಸುತುಂ ಕೋ
ಮಲೆಯರ್ಶೋಭಿಸಿದರರೆಬರಾಮಂಟಪದೊಳ್ ॥ ೩೦ ॥

ಇಂತಂಗನೆಯರುಂಚಬೆಡಂಗನೊಳಕೊಂಡು ಮನಂಗೊಳಿಪ ತುಂಗಮಂಗಳಮಯಮಪ್ಪ ತನ್ಮಂಟಪಮಧ್ಯದಲ್ಲಿ,

ವಿಲಸತ್ಪದ್ಮಾಸನಸ್ಥಂ ಮುಕುಳಿತನಯನಾಬ್ಜಂ ಮನೋಜ್ಞಾಕ್ಷಮಾಲೋ
ಜ್ವಲಹಸ್ತಂ ಭೂತಿಸಲ್ಲೇಪಿತಲಲಿತಶರೀರಂ ಸಮಂತೇಕವರ್ಣಾ।
ಕಲಿತೋಜ್ಜಿಹ್ವಾಂಕುರಂ ತೋಱಿದನುಡುಗಣಮಧ್ಯಸ್ಥರಾಕಾನಿಶಾಸ್ಥಾ
ಮಲಚಂದ್ರಂಬೊಲ್ಪಲಂಬರ್ ಜತಿಗಳೆಡೆಯೊಳಚ್ಛಂ ಚಿದಂಗಂ ನರೇಂದ್ರಾ ॥ ೩೧ ॥

ವಾಚಸ್ಪತಿನಿಭನೆನಲೆಸೆ
ವಾಚಿತ್ರಪವಿತ್ರಚಾರುಚಾರಿತ್ರಚಿದಂ।
ಗಾಚಾರ್ಯನಿದಿರೊಳತುಳ
ಶ್ರೀಚಕ್ರಂ ಕಣ್ಗೊಳಿಸಿದುದುರ್ವೀನಾಥಾ ॥ ೩೨ ॥

ಕುಂಕುಮಪಂಕದೆ ಬರೆದ ಕ
ರಂ ಕಣ್ಗಾನಂದಮಿತ್ತುದಂತಾಚಕ್ರಂ।
ತಾಂ ಕೆಮ್ಮುಗಿಲೊಳ್ ಮಿಱುಪ ಮೃ
ಗಾಂಕನ ನವಲೇಖೆಯಂತೆ ಕೇಳ್ಜನನಾಥಾ ॥ ೩೩ ॥

ಕೋಮಲಾಂಗಿಯರು ಹೂವುಗಳನ್ನು ಆಯುತ್ತ, ಉಜ್ವಲವಾದ ಪರಿಮಳದ ಮೊತ್ತವನ್ನು ಇರಿಸುತ್ತ, ಪೂಜಾ ಸಾಮಗ್ರಿಗಳನ್ನು ಹರಡುತ್ತ ಶೋಭಿಸಿದರು. ವ॥ ಹೀಗೆ ಸುಂದರಿಯರು ಶ್ರೇಷ್ಠವಾದ ಬೆಡಗನ್ನು ಹೊಂದಿ ಮನಸ್ಸನ್ನು ಸೆಳೆಯುವ ಅತ್ಯಂತ ಮಂಗಳಮಯವಾದ ಆ ಮಂಟಪದ ಮಧ್ಯಭಾಗದಲ್ಲಿ, ೩೧. ಮಹಾರಾಜನೇ, ಚನ್ನಾಗಿ ಪದ್ಮಾಸನ ಹಾಕಿ ಕುಳಿತಿರುವವನೂ, ಕಮಲದಂತಹ ನಯನಗಳನ್ನು ಮುಚ್ಚಿರುವವನೂ, ಮನೋಜ್ಞವಾದ ರುದ್ರಾಕ್ಷಿ ಮಾಲೆಯನ್ನು ಕೈಯಲ್ಲಿ ಹಿಡಿದಿರುವವನೂ, ವಿಭೂತಿಯನ್ನು ಶರೀರಕ್ಕೆಲ್ಲಾ ಲೇಪಿಸಿರುವವನೂ, ಒಂದೇ ಬಗೆಯ ಬಣ್ಣವನ್ನು ಹೊಂದಿರುವ ಚಿಗುರಿನಂತಹ ನಾಲಗೆಯುಳ್ಳವನೂ ಆದ ಚಿದಂಗನು ಹಲವರು ಮುನಿಗಳ ನಡುವೆ ನಕ್ಷತ್ರಗಳ ನಡುವಿನ ಪೂರ್ಣಚಂದ್ರನಂತೆ ಕಾಣಬಂದನು. ೩೨. ಮಹಾರಾಜಾ, ವಾಚಸ್ಪತಿಗೆ ಸಮಾನವೆನ್ನುವಂತೆ ಶೋಭಿಸುವ ವಿಚಿತ್ರವೂ ಪವಿತ್ರವೂ ಮನೋಹರವೂ ಆದ ಚಾರಿತ್ರವುಳ್ಳವನಾದ ಚಿದಂಗಾಚಾರ್ಯನ ಇದಿರಿನಲ್ಲಿ ಅಸಮಾನವಾದ ಶ್ರೀಚಕ್ರವು ಕಂಗೊಳಿಸಿತು. ೩೩. ಜನನಾಥ ಕೇಳು, ಕುಂಕುಮದ ಕೆಸರಿನಲ್ಲಿ ಬರೆದ ಆ ಚಕ್ರವು ಕೆಂಪನೆಯ ಮೋಡದ ನಡುವೆ ಬೆಳಗುವ ಚಂದ್ರನಂತೆ ಕಣ್ಣಿಗೆ ಅತಿಶಯವಾದ ಆನಂದವನ್ನುಂಟುಮಾಡಿತು. ೩೪. ಉದ್ಭಟ

ಚಂದನರಸದಣ್ಪೊರೆದುಱು
ಕುಂದದೆ ತಚ್ಚಕ್ರದಮೃತವಾರ್ಧಿಯ ಸುೞಿಯೊಂ।
ದಂದಮೆನಲ್ಕಿಡುಗಣ್ಗಾ
ನಂದಮನಾಗಿಸಿದುದುದ್ಭಟಕ್ಷಿತಿಪಾಲಾ ॥ ೩೪ ॥

ತಾಂ ಮಿಱುಪ ನೂತ್ನಮೃಗಮದ
ಸಂಮಾರ್ಜಿತಧರೆಯೊಳೆಸೆದುದತುಳಶ್ರೀಚ।
ಕ್ರಂ ಮೇಚಕಾಭ್ರದಲ್ಲಿ ಕ
ರಂ ಮಿನುಪೆಳೆಮಿಂಚುವಳ್ಳಿಯೋಲ್ಜನಪಾಲಾ ॥ ೩೫ ॥

ಪೊಸಮಲ್ಲಿಗೆಯಲರಿಂದ
ರ್ಚಿಸಿ ಕಣ್ಗೆ ಬೆಡಂಗನಿತ್ತುದಂತಾಚಕ್ರಂ।
ಮಿಸುಗುವ ತಾರಾಮಧ್ಯದೊ
ಳೆಸೆವಮೃತಮಯೂಖಲೇಖೆಯಂತೆ ನೃಪಾಲಾ ॥ ೩೬ ॥

ನಾನಾಪರಿಮಳನವಕುಸು
ಮಾನೀಕಂದಳೆದು ಕಣ್ಗೊಳಿಸಿತಾಚಕ್ರಂ।
ಮೀನಧ್ವಜನುಪವನದೊ
ಳ್ತಾನೆಸೆವಲರ್ಗೊಳದವೋಲ್ಧರಿತ್ರೀಪಾಲಾ ॥ ೩೭ ॥

ತೆಱೆವೊಯ್ಲಿಂದಂ ನವಕಂ
ಜರಜಂ ನೇರ್ಪಟ್ಟು ಬಳಸಿ ತನ್ಮಧ್ಯದೊಳಂ।
ದಿರದೆಸೆವ ಕಮಲಮೆಂದೆನೆ
ಕರಮೊಪ್ಪಿದುದೊಂದು ಪದ್ಮವಾಮಂಟಪದೊಳ್ ॥ ೩೮ ॥

ಮತ್ತಮಾಶ್ರೀಚಕ್ರಮಧ್ಯದೊಳ್ಮನಂಗೊಳಿಪ ಯಂತ್ರಾಬ್ಜಮಂ ಮೆಟ್ಟಿ ನಿಲ್ತೊರ್ವಳವೆಣ್ಮಣಿ ವಿರಾಜಿಸುತ್ತಿರ್ದಳದೆಂತೆಂದೊಡೆ,

ಮಹಾರಾಜಾ, ಶ್ರೀಗಂಧದ ಲೇಪನವನ್ನು ಚೆನ್ನಾಗಿ ಹೊಂದಿ ಕೊರತೆಯಿಲ್ಲದ ಆ ಚಕ್ರವು ಕ್ಷೀರ ಸಮುದ್ರದ ಸುಳಿಯೋ ಎನ್ನುವಂತೆ ವಿಶಾಲವಾದ ಕಣ್ಣುಗಳಿಗೆ ಆನಂದವನ್ನುಂಟು-ಮಾಡಿತು. ೩೫. ಜನಪಾಲಾ, ಹೊಸದಾದ ಕಸ್ತೂರಿಯಿಂದ ಸಾರಿಸಲ್ಪಟ್ಟ ನೆಲದಲ್ಲಿ ಅಸಮಾನವಾದ ಶ್ರೀ ಚಕ್ರವು ಕಡುನೀಲಿಯ ಬಣ್ಣದ ಆಗಸದಲ್ಲಿ ಚೆನ್ನಾಗಿ ಮಿನುಗುವ ಎಳೆಯ ಮಿಂಚಿನ ಬಳ್ಳಿಯಂತೆ ಅದು ಮಿರುಗುತ್ತಿತ್ತು. ೩೬. ಮಹಾರಾಜಾ, ಆ ಚಕ್ರವು ಹೊಸ ಮಲ್ಲಿಗೆಯ ಹೂವುಗಳಿಂದ ಪೂಜಿಸಲ್ಪಟ್ಟು ಮಿನುಗುವ ನಕ್ಷತ್ರಗಳ ಮಧ್ಯದ ಚಂದ್ರನ ಕಿರಣಗಳಂತೆ ಕಣ್ಣಿಗೆ ಸೊಗಸನ್ನಿತ್ತಿತು. ೩೭. ಭೂನಾಥಾ, ಆ ಚಕ್ರವು ಪರಿಮಳಭರಿತವಾದ ನಾನಾ ಬಗೆಯ ಹೂವುಗಳನ್ನು ಧರಿಸಿ ಮನ್ಮಥನ ಉದ್ಯಾನದಲ್ಲಿ ಶೋಭಿಸಿರುವ ಹೂಗೊಳದಂತೆ ಕಣ್ಣಿಗೆ ಅಂದವಾಯಿತು. ೩೮. ಆ ಮಂಟಪದಲ್ಲಿ ತೆರೆಯ ಹೊಡೆತದಿಂದ ಎಳೆಯ ತಾವರೆಯ ಪರಾಗವು ಚೆನ್ನಾಗಿ ಬಳಸಿ ಅದರ ಮಧ್ಯೆ ಬಿಡದೆ ಶೋಭಿಸಿರುವ ಕಮಲವೆನ್ನುವಂತೆ ನೈದಿಲೆಯೊಂದು ಚೆನ್ನಾಗಿ ಒಪ್ಪಿದುದು. ವ॥ ಮತ್ತೆ ಆ ಶ್ರೀ ಚಕ್ರದ ಮಧ್ಯದಲ್ಲಿರುವ ಮನಸೆಳೆಯುವ ಯಂತ್ರದ ಕಮಲವನ್ನು ಮೆಟ್ಟಿ ನಿಂತ ಓರ್ವ ಎಳೆಯ

ತೊಳಪ ತಿಳಿಗೊಳದೊಳೊಗೆದು
ಜ್ವಳಿಪಾವರ್ತಾಂತರಾಳದೊಳ್ ಜೃಂಭಿಪ ಸ।
ತ್ಕಳಹಂಸಿಯಂತೆ ನಿಡುಗ
ಣ್ಗಳವಟ್ಟಳ್ತ್ತಸರೋಜಮುಖಿ ಭೂಪಾಲಾ ॥ ೩೯ ॥

ಮಣಿಮಯಹಾರಮಂ ತಳೆದು ಕುಂಕುಮಪಂಕಮನ್ನೆದೆ ಪೂಸಿ ಚೆಂ
ಗಣಿಗಿಲೆಯಚ್ಚಕಂಪಿಡಿದಲರ್ಗಳನೊಲ್ದು ತುಱುಂಬಿ ನೂತನಾ।
ರುಣರುಚಿವಸ್ತ್ರಮಂ ಪರಿವಿರಾಜಿಸಲುಟ್ಟು ಮನೋಹರಾಂಗನಾ
ಗ್ರಣಿ ಯೆಸೆದಳ್ತ್ತದೀಯನವಯಂತ್ರಮನೊಯ್ಯನೆ ಮೆಟ್ಟಿ ಭೂಮಿಪಾ ॥ ೪೦ ॥

ಗುರುಪಾದಾಬ್ಜದೊಳಿಟ್ಟ ದಿಟ್ಟಿ ಮುಗಿದಂಚತ್ಪಾಣಿಗಳ್ ಕಂಗೊಳಲ್
ವರಶೋಭಾವಹಚಕ್ರಮಧ್ಯಗತಯಂತ್ರಾಂಭೋಜಮಂ ಮೆಟ್ಟಿ ತಾಂ।
ವರಮೋದಂಬಡೆದಂದು ನಿಲ್ತಸಮಪಾದದ್ವಂದ್ವದಿಂದೊಪ್ಪಿದಳ್
ಶರದಿಂದುಪ್ರತಿಮಾನವಕ್ತ್ರಿಮುದದಿಂ ಕೇಳುದ್ಭಟೋರ್ವೀಧವಾ ॥ ೪೧ ॥

ಮತ್ತಮದಲ್ಲದೆ,

ಇನಮಂಡಲಮಂ ಪಿಡಿಯ
ಲ್ಕನುಗೈದೆಟ್ಟಿಂದು ಸಾರ್ದ ಬಾಂಬಾವೆನೆ ತಾಂ।
ಮಿನುಗುವ ಮುಡಿವಣಿಯಂ ತಳೆ
ದೆನಸುಂ ಸೊಗಸಿದುದು ವೇಣಿ ತದ್ಬಾಲಿಕೆಯಾ ॥ ೪೨ ॥

ಪ್ರಾಯದ ಕೋಮಲಾಂಗಿಯು ಅಂದಗೊಂಡಿದ್ದಳು. ಅದು ಹೇಗೆಂದರೆ, ೩೯. ಮಹಾರಾಜಾ, ಹೊಳೆಯುವ ತಿಳಿಗೊಳದಲ್ಲಿ ಹುಟ್ಟಿ ಉಜ್ವಲವಾದ ಸುಳಿಯ ಮಧ್ಯದಲ್ಲಿ ಅರಳಿದ ಕಲಹಂಸೆಯಂತೆ ಆ ಕಮಲಮುಖಿಯು ವಿಶಾಲವಾದ ಕಣ್ಣುಗಳಿಗೆ ಒಪ್ಪಿದಳು. ೪೦. ಮಣಿಖಚಿತವಾದ ಹಾರವನ್ನು ಧರಿಸಿ, ಕುಂಕುಮದ ಕೆಸರನ್ನು ಚೆನ್ನಾಗಿ ಬಳಿದು, ಚೆಂಗಣಿಗಿಲೆಯ ಸುವಾಸನಾಭರಿತ ಹೂವುಗಳನ್ನು ಪ್ರೀತಿಯಿಂದ ಮುಡಿಗೇರಿಸಿ, ಹೊಸದಾದ ಕೆಂಬಣ್ಣದ ವಸ್ತ್ರವನ್ನು ಚೆನ್ನಾಗಿ ಒಪ್ಪುವಂತೆ ಉಟ್ಟು ಚೆಲುವೆಯರಲ್ಲಿ ಸುಂದರಿಯಾದವಳು ಆ ನವಯಂತ್ರವನ್ನು ಮೆಲ್ಲನೆ ಮೆಟ್ಟಿನಿಂತು ಒಪ್ಪಿದಳು. ೪೧. ಉದ್ಭಟ ಮಹಾರಾಜಾ ಕೇಳು, ಗುರುವಿನ ಪಾದಕಮಲಗಳಲ್ಲಿ ನೆಟ್ಟ ನೋಟದಿಂದಲೂ ಮುಚ್ಚಿದ ಸುಂದರವಾದ ಕೈಗಳಿಂದಲೂ ಕಂಗೊಳಿಸಿ, ಚೆನ್ನಾಗಿ ಶೋಭೆಯನ್ನು ಹೊಂದಿರುವ ಚಕ್ರದ ಮಧ್ಯದಲ್ಲಿನ ಯಂತ್ರದ ಕಮಲವನ್ನು ಮೆಟ್ಟಿ ಅತ್ಯಾನಂದವನ್ನು ಹೊಂದಿ ಸಮನಾದ ಎರಡು ಪಾದಗಳಿಂದ ಕೂಡಿ ಶರತ್ಕಾಲದ ಚಂದ್ರನಿಗೆ ಸಮನಾದ ಮುಖವುಳ್ಳ [ಆ ಸುಂದರಿಯು] ಸಂತಸದಿಂದ ನಿಂತು ಅಂದಗೊಂಡಳು. ವ॥ ಮತ್ತೆ ಅದಲ್ಲದೆ, ೪೨. ಚಂದ್ರಮಂಡಲವನ್ನು ಹಿಡಿಯಲು ಸಿದ್ಧವಾಗಿ ಸಮೀಪಿಸಿ ಬಂದ ರಾಹುವೆನ್ನುವಂತೆ ಹೊಳೆಯುವ ನಾಗವೇಣಿಯನ್ನು ಹೊಂದಿ ಬಹಳವಾಗಿ ಆ ಬಾಲಿಕೆಯ ಕೂದಲು ಅಂದವಾಗಿ ಕಾಣಿಸಿತು.

ಪ್ರಸರಿಸಿದುನ್ನತತಿಮಿರ
ಪ್ರಸರದೊಳೆಡೆಸಿಲ್ಕಿ ಮಿಱುಪ ಕಿಸುಸಂಜೆಯವೋಲ್।
ಮಿಸುಗುವ ಬೈತಲೆವಟ್ಟೆಯೊ
ಲೆಸೆದುದು ಸಿಂದೂರಲೇಖೆ ತದ್ಬಾಲಿಕೆಯಾ ॥ ೪೩ ॥

ಪೊಗರನುಗುವಷ್ಟಮಿಂದುವ
ನಗಲದೆ ಪತ್ತಿದ ಕಲಂಕಮೆನೆ ತಾಂ ನೊಸಲೊಳ್।
ಮಿಗೆ ಕಸ್ತೂರಿಯ ತಿಲಕಂ
ಬಗೆಗೊಳಿಸಿದುದಾಕುಮಾರಿಗುರ್ವೀಪಾಲಾ ॥ ೪೪ ॥

ಚಿಕ್ಕನೆ ಕಿಸುಸಂಜೆಯ ನೆರೆ
ದಿಕ್ಕೆ ಬಿಗುರ್ತಂದು ಬಂದು ತಚ್ಚಂದ್ರಮನಿ।
ರ್ವಕ್ಕಮನಾಶ್ರಯಿಸಿತ್ತೆನೆ
ಚೊಕ್ಕಳಮಣಿಯೋಲೆವೆಳಗು ಸೊಗಸಿದುದವಳಾ ॥ ೪೫ ॥

ಸುಟಿಗೊಂಡು ಬೆಳೆದ ವಿದ್ರುಮ
ದೆಳಲತೆ ಬಳಸಿರ್ದ ಶಂಖಮೆಂದೆನೆ ಮಿಗೆ ಕಂ।
ಗೊಳಿಸುವ ಮಾಣಿಕದೊರ್ಚರ
ಮಳವಡಲೆಸೆದತ್ತು ನುಣ್ಗೊರಲ್ತತ್ಸತಿಯಾ ॥ ೪೬ ॥

ಕಾಂಚನಸರೋಜಕಲಿಕೆಗ
ಳಂ ಚಂಚತ್ತರಣಿರೋಚಿಗಳ್ಮೇಲ್ವರಿದಂ।
ತುಂಚಕಿಸುಗಲ್ಲಮಾಲೆಗ
ಳುಂಚವಿರಾಜಿಸಿದುವವಳ ಕುಚಕುಂಭಗಳಂ ॥ ೪೭ ॥

೪೩. ದಟ್ಟವಾಗಿ ಹರಡಿದ ಕತ್ತಲೆಯ ಮೊತ್ತದಲ್ಲಿ ಸಿಕ್ಕಿ ಮುಚ್ಚಿ ಹೋದ ಕಾಂತಿಯುಕ್ತ ಕೆಂಪು ಕವಿದ ಸಂಜೆಯಂತೆ ಆ ಬಾಲಿಕೆಯ ಹೊಳೆಯುವ ಬೈತಲೆಯಲ್ಲಿ ಕುಂಕುಮರೇಖೆ ಶೋಭಿಸಿತು. ೪೪. ಮಹಾರಾಜಾ, ಕಾಂತಿಯನ್ನು ಹೊರಸೂಸುವ ಅಷ್ಟಮಿಯ ಚಂದ್ರನನ್ನು ಬಿಡದೆ ಹತ್ತಿದ ಕಪ್ಪೆನ್ನುವಂತೆ ಆ ಕುಮಾರಿಯ ಹಣೆಯಲ್ಲಿನ ಚೆನ್ನಾದ ಕಸ್ತೂರಿಯ ತಿಲಕವು ಮನಸ್ಸನ್ನು ಆಕರ್ಷಿಸಿತು. ೪೫. ತಟಕ್ಕನೆ ಕೆಂಪಾದ ಸಂಜೆಯು ದಟ್ಟವಾಗಿ ಕವಿಯಲು ಬೆರಗಾಗುವಂತೆ ಆಗ ಕಾಣಿಸಿಕೊಂಡ ಆ ಚಂದ್ರನ ಎರಡೂಕಡೆ ಆಕ್ರಮಿಸಿತೋ ಎನ್ನುವಂತೆ ಸೊಗಸಾದ ಮಣಿಖಚಿತ ಓಲೆಯ ಕಾಂತಿ ಚೆನ್ನಾಯಿತು. ೪೬. ಚಿಗುರಿ ಬೆಳೆದ ಹವಳದ ಬಳ್ಳಿಯು ಶಂಖವನ್ನು ಬಳಸಿತೊ ಎನ್ನುವಂತೆ ಕಣ್ಣಿಗೆ ಬಹಳ ಅಂದವಾದ ಮಾಣಿಕ್ಯದ ಒಂದೆಳೆ ಸರವು ಆ ಹೆಣ್ಣಿನ ನುಣುಪಾದ ಕೊರಲಿಗೆ ಹೊಂದುವಂತೆ ಶೋಭಿಸಿತ್ತು. ೪೭. ಚಿನ್ನದ ಕಮಲದ ಮೊಗ್ಗುಗಳನ್ನು ಹೊಳೆವ ಸೂರ್ಯನ ರಶ್ಮಿಯು ಆವರಿಸಿದಂತೆ ಶ್ರೇಷ್ಠವಾದ ಕೆಂಪು ಕಲ್ಲಿನಿಂದ ನಿರ್ಮಿಸಿದ ಸರವು ಅವಳ ನೀಳ-ಕಲಶಗಳಂತಿರುವ ಮೊಲೆಗಳ

ಮದನಂ ವಿಯೋಗಿಗಳನಿಸ
ಲೆರ್ದೆಯಂ ತಟ್ಟುಗಿದು ಲೋಹಿತಂಬೊರೆದಿರದು।
ಣ್ಮೆದ ಶರಮೆನೆ ಘುಸೃಣಾರುಣ
ಮೃದುಲಲಿತಶರೀರಮೆಸೆದುದಾಪೆಣ್ಮಣಿಯಾ ॥ ೪೮ ॥

ಅಲರ್ದ ಜಪಾಕುಸುಮದ ಗೊಂ
ಚಲನೊಡೆದುಱಿ ನಿಮಿರ್ದು ಬೆಳೆದ ಪೊಸಲತೆಯೆನಲು।
ಜ್ವಲತರಮಣಿಕೇಯೂರಾ
ಕಲಿತಲಸದ್ಬಾಹುವಲ್ಲಿ ಶೋಭಿಸಿತವಳಾ ॥ ೪೯ ॥

ಮಿನುಪ ನಖರಾಂಶು ಜಗದೊಳ್
ಜನಿಯಿಸಿ ಕಣ್ಗೊಳಿಪ ನಿಜಪರಾಗಾವೃತನೂ।
ತನನೀರಜಮೆನಲೊಪ್ಪಿದು
ವನುಪಮಮಣಿವಲಯಕಲಿತಪಾಣಿಗಳವಳಾ ॥ ೫೦ ॥

ವಿಕಚನ್ನೂತ್ನೋಜ್ವಳಕಿಂ
ಶುಕಸುಮಸ್ತಬಕದೆಡೆಯೊಳಂಕುರಿಸಿದ ಕೋ।
ರಕತತಿಯೆನಲೆಸೆದುವು ಮಾ
ಣಿಕದುಂಗುರಮಮರ್ದ ನುಣ್ಬೆರಲ್ತತಿಯಾ ॥ ೫೧ ॥

ಪೊಸಸಂಜೆಗೆಂಪಿನೆಡೆಯೊಳ್
ನಸುತೋರ್ಪ ಶಶಾಂಕಲೇಖೆಯೆಂಬಿನೆಗಂ ರಂ।
ಜಿಸಿದಳರುಣಾಂಬರವನು
ಟ್ಟಸಿತಾಂಬುಜಪತ್ರನೇತ್ರೆ ಧಾತ್ರೀನಾಥಾ ॥ ೫೨ ॥

ಮೇಲೆ ಶೋಭಿಸಿದವು. ೪೮. ಮನ್ಮಥನು ವಿರಹಿಗಳ ಮೇಲೆ ಬಾಣವನ್ನು ಬಿಡಲು ಅದು ತಾಗಿ ದೇಹವನ್ನು ಸೀಳಿ ರಕ್ತವನ್ನು ಹೊರಚೆಲ್ಲಿ ನಿಲ್ಲದೆ ಹೊರಬಂದ ಬಾಣವೋ ಎನ್ನುವಂತೆ ಕುಂಕುಮ ಕೇಸರಿಯಂತೆ ಕೆಂಪನೆಯ ಮೃದುವೂ ಲಲಿತವೂ ಆದ ಆ ಹೆಣ್ಣಿನ ಶರೀರವು ಅಂದಗೊಂಡಿತು. ೪೯. ಅರಳಿದ ಕೆಂಪು ದಾಸವಾಳದ ಗೊಂಚಲು ಒಡೆದು, ಚೆನ್ನಾಗಿ ಹಬ್ಬಿದ ಅದರ ಎಳೆಯ ಬಳ್ಳಿಯೊ ಎನ್ನುವಂತೆ ಉಜ್ವಲವಾದ ತೋಳ ಬಳೆಯು ಕೋಮಲವಾದ ಬಳ್ಳಿಯಂತಿರುವ ಅವಳ ತೋಳುಗಳನ್ನು ಸೇರಿ ಶೋಭಿಸಿತು. ೫೦. ಲಾವಣ್ಯಪೂರ್ಣವಾದ ಸುಗಂಧ ದ್ರವ್ಯವು ಜಗತ್ತಿನಲ್ಲಿ ಹುಟ್ಟಿ ಕಣ್ಣಿಗೆ ಅಂದವಾಗಿರುವ ಕಮಲದ ಪರಾಗದಲ್ಲಿ ಸೇರಿ ಶೋಭಿಸಿತೊ ಎನ್ನುವಂತೆ ಅವಳ ಎಣೆಯಿಲ್ಲದ ಮಣಿ ಖಚಿತವಾದ ಕೈಗಳು ಒಪ್ಪಿದುವು. ೫೧. ಅರಳಿದ ನವೀನವೂ ಕಾಂತಿಪೂರ್ಣವೂ ಆದ ಮುತ್ತುಗದ ಹೂಗಳ ನಡುವೆ ಹುಟ್ಟಿದ ಮೊಗ್ಗುಗಳೊ ಎನ್ನುವಂತೆ ಮಾಣಿಕ್ಯದ ಉಂಗುರವನ್ನು ಹೊಂದಿದ ಆ ಹೆಣ್ಣಿನ ಸಣ್ಣನೆಯ ಬೆರಳುಗಳು ಶೋಭಿಸಿದುವು. ೫೨. ಮಹಾರಾಜಾ, ಹೊಸ ಸಂಜೆಗೆಂಪಿನ ನಡುವೆ ಸ್ವಲ್ಪವೇ ಕಾಣಿಸುವ ಚಂದ್ರಲೇಖೆ ಎನ್ನುವಂತೆ ಕೆಂಬಣ್ಣದ ವಸ್ತ್ರವನ್ನು ಧರಿಸಿ ನೀಲಕಮಲದಂತಹ ಕಣ್ಣುಗಳುಳ್ಳ ಅವಳು ಶೋಭಿಸಿದಳು.

ತಿಣ್ಣಮೆನಲಂಶು ಪರಿಯ
ಲ್ನುಣ್ಣಿಸಿದೆಳೆಸಂಜೆಗೆಂಪದಂಟಿರಲೆಸೆವ।
ಕ್ಷುಣ್ಣರುಚಿವಡೆದುಡುಗಳೆನೆ
ಪೆಣ್ಣುಗುರ್ಗಳವೆಸೆದುವಾಂತು ಲಾಕ್ಷಾರಸಮಂ ॥ ೫೩ ॥

ಮತ್ತಮದಲ್ಲದಮಳಲಾಕ್ಷಾರಸಕಲಿತಕಮನೀಯಪದನಖಂಗಳ ಪಾವನಾಂಗಿ ಕೂರ್ಮಾಂಘ್ರಿಗಳ ಕುಮಾರಿ ಗೂಢಗುಲ್ಫಂಗಳ ಗಾಡಿಕಾರ್ತಿ ಮದನತೂಣೀರೋಪಮಜಂಘೆಗಳ ಜಾಣೆ ನುಣ್ದೊಡೆಗಳ ನೂತ್ನ ಯೌವ್ವನೆ ಘನನಿತಂಬಂಗಳ ಗರುವೆ ಬಡನಡುವಿನ ಭಾವುಕೆ ತನೂರುಹ ರೋಮರಾಜಿಯ ತಾಮ್ರಾಧರೆ ಮುಗುಳ್ಮೊಲೆಯ ಮುಗ್ಧೆ ನಳಿತೋಳ್ಗಳ ನಾಯಿಕೆ ಕೋಮಲಪಾಣಿಗಳ ಕೋವಿದೆ ಸೆಳ್ಳುಗುರ್ಗಳ ಸಿರಿವಂತೆ ಕಂಬುಕಂಧರದ ಕಲಾಕೋವಿದೆ ಚೆಂದುಟಿಯ ಚೆಲ್ವೆ ಕೆಂಬಲ್ಗಳ ಕೀರವಾಣಿ ದರಸ್ಮಿತದ ಧವಲಾಪಾಂಗಿ ಚಂಪಕನಾಸಿಕದ ಚದುರೆ ಬೆಳತಿಗೆಗಣ್ಣ ಬೆಡಂಗಿ ಲೋಲಾಪಾಂಗದ ಲಲ್ಲೆಗಾರ್ತಿ ಕುಡುವುರ್ವುಗಳ ಕುಶಲೆ ನುಣ್ಗದಂಪುಗಳ ನೂತ್ನೆ ಮಾಣಿಕ್ಯದೋಲೆಗಳ ಮನೋಹರೆ ನಗೆಮೊಗದ ನಚ್ಚಿನ ಬೇಟಗಾರ್ತಿ ಪೆಱನೊಸಲ ಪೆಣ್ಮಣಿ ಕುಂಚಿತಾಳಕದ ಚಂಚಲಾಕ್ಷಿ ನಿಡುಜಡೆಯ ನೀಱ ಕನಕಲತಾಂಗದ ಕಾಮಿನಿ ಅಖಿಳಮಣಿ ಭೂಷಣಾಲಂಕೃತೆ ಜಡಿಮುಡಿಯ ಜಾಣೆ ಸಿತಹಸ್ತದ ಹರಿಣಾಕ್ಷಿ ಎಳನಾಭಿಯೆಳೆಯಳ್ ಎಸೆವುಡಿಯ ಪೊಸಬೆ ನುಣ್ದನಿಯ ನೂತನೆ ಭಾಳದ ಭಾಮಿನಿ ಕರ್ಣಪಾಲಿಕೆಯ ಕಾಮಿನಿ ಕಪೋಲದ ವಿಪುಳೆ ನಗೆಗಣ್ಗಳ ನಲವೆ ನಾಸಿಕದ ನೀಱ ಬೆಳುರ್ವಾಯ ಭಾಗ್ಯನಿಧಿ ಸಿರಿಮೊಗದರಸಿ ತೊದಲ್ನುಡಿಯ ಸದಮಲೆ ಕಂಬುಗ್ರೀವದ ಕಲ್ಯಾಣಿ ಪೇರುರದ ಪಾರಿಜಾತೆ ಕುಱುದೊಡೆಯ ಕಾಮಧೇನು ಮೃದುತಳದ ಮಂದಯಾನೆ ಗೆಜ್ಜೆಯ ಸಜ್ಜನೆ ಅಂದುಗೆಯಾನಂದೆ ನೇವುರದ ಭಾವೆ ಉಡೆವಣಿಯ ಉತ್ಸಾಹೆಗಳರವದ ಗರುವೆ ಹೊಂಗಡಗದ ಮಂಗಳಾಕಾರೆ ತೋಳಬಂದಿಯ ಬಾಲಿಕೆ ಹುಲಿಯುಗುರ ಸುಲಲಿತೆ ನೇವಳದ ನಾಯಿಕೆ ರನ್ನದಾಳಿಯ ರಾಜಹಂಸಿ ಮಾಗಾಯಿಗಳ ಮುಗ್ಧೆ ಹೊನ್ನೋಲೆಯ ಚೆನ್ನೆ ಮೂಗುತಿಯ ಮುಗ್ಧವೆಣ್ಣು ಅಂಜನದಮೃತಾಧರೆ ತಿಲಕದ ತರುಣೀಮಣಿ ಸೂಸಕದ ಸುಮ್ಮಾನಿ ಅಱಿವಿನ ಪರಮಾಯುಷ್ಯೆ ವೀಣೆಯ ಜಾಣೆ ಗಾನದ ಮಾನಿ ಮುದ್ದಿನ ಮುದ್ದೆ ಲಲ್ಲೆಯ ಮೆಲ್ಲೆದೆಗಾರ್ತಿ ನೋಟದ ಬೇಟಕಾತಿ ಕಣ್ಗಳ ಮಂಗಳ ಬಟ್ಟಮೊಲೆಯ ಕಟ್ಟಾಣಿ ಸವಿನುಡಿಯ ಸುಂದರಾಂಗಿ ಚೆಲ್ವದ ಫುಲ್ಲೋಲ್ಲಾಸೆ ಕೊಸಱಿನ ಕುಸೆಗಾತಿ ಇಂಗಿತವನಱಿವ ಭಂಗಾರದ ಪುತ್ರಿಕೆ ಸೊಕ್ಕುಜವ್ವನದ ಸೊಕ್ಕಾನೆ ಸೋಜಿಗದ ಸೊಬಗಿನ ಸೋನೆ ಚಾರುದುಱುಬಿನ ವೈಯ್ಯಾರಿ ಹೆಟ್ಟುಗೆಯರ ಪಟ್ಟದರಸಿ ರೂಪಿನ ರೂಪಾವತಿ ತಾಪದ ಚಾಪಲನೇತ್ರೆ ಸುರತದ ಸಾರಿಗೆ ನಾಯಿಕೆಯ ನಾಯಕಮಣಿ ಪೆಣ್ಗಳ ಪುಣ್ಯಾಕಾರೆಯುಮೆನಿಸಿ ಮನಂಗೊಳಿಸುತ್ತಿದ್ದಳು॥

೫೩. ದಟ್ಟವಾಗಿ ಕಿರಣಗಳು ಹರಡಿರಲು ನಯಗೊಳಿಸಿದ ಎಳೆಯ ಸಂಜೆಗೆಂಪು ಆಗಸದಲ್ಲಿ ಸೇರಿರಲು ಶೋಭಾಯಮಾನವಾದ ಅಪರಿಮಿತ ಕಾಂತಿಯುಕ್ತವಾದ ನಕ್ಷತ್ರಗಳೋ ಎನ್ನುವಂತೆ ಆ ಹೆಣ್ಣಿನ ಉಗುರುಗಳು ಅಲತಿಗೆಯನ್ನು ಹೊಂದಿ ಒಪ್ಪಿದುವು. ವ॥ ಮತ್ತೆ ಅದಲ್ಲದೆ ಪರಿಶುದ್ಧವಾದ ಅಲತಿಗೆಯಿಂದ ಕೂಡಿದ ಮನೋಹರವಾದ ಪಾದಗಳ ಉಗುರುಗಳ ಪಾವನಾಂಗಿ, ಪುಟ್ಟ ಪಾದಗಳ ಕುಮಾರಿ, ರಹಸ್ಯವಾದ ಪಾದದ ಹರಡನ್ನು ಹೊಂದಿರುವ ಸುಂದರಿ, ಮದನನ ಬಾಣಗಳ ಬತ್ತಳಿಕೆಯಂತಿರುವ ಕೆಳದೊಡೆಯುಳ್ಳ ಜಾಣೆ, ನುಣ್ಣನೆಯ ತೊಡೆಗಳನ್ನು ಹೊಂದಿರುವ ನವ ಯೌವನೆ, ತುಂಬು ನಿತಂಬಗಳ ಗರುವೆ, ಬಡ ನಡುವಿನ ಚಲುವೆ, ಮೈಮೇಲೆ ಕೂದಲುಗಳುಳ್ಳ ಕೆಂಬಣ್ಣದ ಕೆಳತುಟಿಯ ಮನೋಹರಿ, ಮೊಗ್ಗಿನ ಮೊಲೆಯ ಮುಗ್ಧೆ, ಕೋಮಲವಾದ ತೋಳುಗಳ ಒಡತಿ, ಮೃದುವಾದ ಕೈಗಳ ಕೋವಿದೆ, ಚೂಪಾದ ಉಗುರುಗಳ ಸಿರಿವಂತೆ, ಶಂಖದಂತೆ ಕಂಠವುಳ್ಳ ಕಲಾಕೋವಿದೆ, ಚೆಂದುಟಿಯ ಚಲುವೆ, ಕೆಂಪಾದ ಹಲ್ಲುಗಳ ಮಧುರ ಧ್ವನಿಯುಳ್ಳವಳೆ, ಮಂದಹಾಸದ ಸುಂದರ

ಅಂತುಮಲ್ಲದೆಯುಂ,

ರಾಜೀವಪತ್ರನೇತ್ರೆ ವಿ
ರಾಜಿಸಿದಳ್ಚೆಂಬರಲ್ಗಳೊಳ್ವಿಭ್ರಮನಾಂ।
ತೋಱಜೆ ಮಿಗೆ ಪೂತ ಪೊಸಕೆಂ
ಜಾಜಿಯ ಲತೆಯಂತೆ ಸರ್ವಜಗತೀನಾಥಾ ॥ ೫೪ ॥

ಕಡೆಗಣ್ಣೋಟವುಳ್ಳವಳೆ, ಸಂಪಿಗೆಯಂತೆ ನೀಳವಾದ ಮೂಗುಳ್ಳ ಚೆದುರೆ, ಹೊಳಪುಳ್ಳ ಕಣ್ಣ ಬೆಡಂಗಿ, ಚಂಚಲವಾದ ಕಡೆಗಣ್ಣೋಟದ ಲಲ್ಲೆಗಾರ್ತಿ, ಬಾಗಿದ ಹುಬ್ಬುಗಳ ಕುಶಲೆ, ನುಣುಪಾದ ಕೆನ್ನೆಗಳ ನವೀನಳೆ, ಮಾಣಿಕ್ಯದ ಓಲೆಗಳ ಮನೋಹರೆ, ನಗೆ ಮುಖದ ನಚ್ಚಿನ ಬೇಟೆಗಾರ್ತಿ, ಚಂದ್ರನಂತಿರುವ ಹಣೆಯ ಪೆಣ್ಮಣಿ, ಬಾಗಿದ ಮುಂಗುರುಳ ಚಂಚಲಾಕ್ಷಿ, ನಿಡುಜಡೆಯ ಸುಂದರಿ, ಚಿನ್ನದ ಬಳ್ಳಿಯಂತಹ ದೇಹದ ಕಾಮಿನಿ, ಸರ್ವಾಲಂಕಾರ ಭೂಷಿತೆ, ತುಂಬಿದ ಕೂದಲ ಜಾಣೆ, ಬಿಳಿಯ ಕೈಗಳ ಹರಿಣಾಕ್ಷಿ, ಎಳೆಯದಾದ ಹೊಕ್ಕುಳ ಬಾಲಕಿ, ಶೋಭಾಯಮಾನವಾದ ಸೊಂಟದ ಹೊಸಬಳೆ, ನುಣ್ದನಿಯ ನೂತನೆ, ಪುಟ್ಟ ಹಣೆಯ ಭಾಮಿನಿ, ಕಿವಿಯ ಆಭರಣದ ಕಾಮಿನಿ, ಉಬ್ಬಿದ ಗಲ್ಲಗಳ ಒಡತಿ, ನಗೆಗಣ್ಗಳ ನಲಿವೆ, ನೀಳನಾಸಿಕದ ಸುಂದರಿ, ಕಾಂತಿಪೂರ್ಣವಾದ ಬಾಯುಳ್ಳ ಭಾಗ್ಯನಿಧಿ, ಸಿರಿಮೊಗದ ಅರಸಿ, ತೊದಲ್ನುಡಿಯ ಶುದ್ಧಾಂಗಿ, ಶಂಖದಂತೆ ಕತ್ತುಳ್ಳ ಕಲ್ಯಾಣಿ, ವಿಶಾಲವಾದ ಎದೆಯ ಪಾರಿಜಾತೆ, ಸಣ್ಣದಾದ ತೊಡೆಗಳುಳ್ಳ ಕಾಮಧೇನು, ಮೃದುವಾದ ಪಾದಗಳ ಮಂದನಡಿಗೆಯವಳೆ, ಗೆಜ್ಜೆಯ ಸಜ್ಜನೆ, ಅಂದುಗೆಯ ಆನಂದೆ, ನೇವುರದ ಭಾವೆ, ನಡುವಿಗೆ ಕಟ್ಟುವ ಗೆಜ್ಜೆಯ ದಾರದ ಉತ್ಸಾಹೆ, ಗಳರವದ ಗರುವೆ, ಹೊನ್ನಿನ ಕಡಗದ ಮಂಗಳಾಕಾರೆ, ತೋಳಬಂದಿಯ ಬಾಲಿಕೆ, ಹುಲಿಯುಗುರ ಸುಲಲಿತೆ, ನೇವಳದ ನಾಯಿಕೆ, ರನ್ನದಾಳಿಯ ರಾಜಹಂಸಿ, ಮಾಗಾಯಿಗಳ ಮುಗ್ಧೆ, ಹೊನ್ನೋಲೆಯ ಚೆನ್ನೆ, ಮೂಗುತಿಯ ಮುಗ್ಧವೆಣ್ಣು, ಕಾಡಿಗೆ ಧರಿಸಿದ ಅಮೃತದಂತೆ ಇನಿದಾದ ತುಟಿಯುಳ್ಳವಳೆ, ತಿಲಕದ ತರುಣೀಮಣಿ, ಬೈತಲೆ ಮಣಿಯ ಸುಮ್ಮಾನಿ, ತಿಳುವಳಿಕೆಯುಳ್ಳ ದೀರ್ಘಾಯುಷ್ಯೆ, ವೀಣೆಯ ಜಾಣೆ, ಗಾನದ ಮಾನಿ, ಮುದ್ದಿನ ಮುದ್ದೆ, ಲಲ್ಲೆಯ ಮೆಲ್ಲುದೆಗಾರ್ತಿ, ನೋಟದ ಬೇಟಕಾತಿ, ಚಲುವಾದ ಕಣ್ಗಳ ಮಂಗಳೆ, ದುಂಡನೆಯ ಮೊಲೆಗಳ ಕಟ್ಟಾಣಿ, ಸವಿನುಡಿಯ ಸುಂದರಾಂಗಿ, ಅರಳಿದ ನಗೆಯವಳೆ, ಕೊಸರಿನ ಕುಸೆಗಾತಿ, ಇಂಗಿತವನ್ನು ತಿಳಿದ ಬಂಗಾರದ ಗೊಂಬೆ, ಸೊಕ್ಕು ಜವ್ವನದ ಮದ್ದಾನೆ, ಸೋಜಿಗದ ಸೊಬಗಿನ ಸೋನೆ, ಮನೋಹರವಾದ ತುರುಬಿನ ವಯ್ಯಾರಿ, ಸ್ತ್ರೀಯರ ಪಟ್ಟದರಸಿ, ರೂಪಿನ ರೂಪಾವತಿ, ತಾಪದ ಚಾಪಲನೇತ್ರೆ, ಸುರತದ ಸಾರಿಗೆ, ನಾಯಿಕೆಯ ನಾಯಕಮಣಿ, ಪೆಣ್ಗಳ ಪುಣ್ಯಾಕಾರೆ - ಎಂದೆಲ್ಲಾ ಮನಸ್ಸನ್ನು ಸೆಳೆದಿದ್ದಳು. ಅಂತಲ್ಲದೆ,

೫೪. ಸರ್ವ ಲೋಕಾಧಿಪತಿಯೆ, ಕಮಲದಳ ನೇತ್ರೆಯು ಕೆಂಪು ಹರಳುಗಳ ಆಭರಣವನ್ನು ತೊಟ್ಟು, ಅದರ ರೀತಿ ಅತಿಶಯವಾಗಿರಲು ಅರಳಿದ ಕೆಂಪನೆಯ ಜಾಜಿಯ ಬಳ್ಳಿಯಂತೆ

ಪದ್ಮಪೀಠದಗ್ರಭಾಗದೊಳ್ಕರಂ ವಿರಾಜಿಪಾ
ಪದ್ಮಸದ್ಮೆಯಂತೆ ತೋರ್ಪ ಯಂತ್ರಮಧ್ಯದಲ್ಲಿ ಸ।
ತ್ಪದ್ಮರಾಗಭೂಷಣಂಗಳಂ ಸಮಂತು ತೊಟ್ಟು ತ
ತ್ಪದ್ಮನೇತ್ರೆ ಯೊಪ್ಪಿದಳ್ ಕುಮಾರಪಾಲಘೂರ್ಜರಾ ॥ ೫೫ ॥

ದರುಶೆಯೊಳರ್ಕನಂ ಬೆರಸಿದಿಂದುವ ಕೋಮಲಲೇಖೆಯಂತೆ ಭಾ
ಸುರತರಶೋಣಭೂಧರದೊಳೊಪ್ಪುವ ವಲ್ಲರಿಯಂತೆ ರಕ್ತಪಂ।
ಕರುಹದೊಳಿರ್ಪ ಸದ್ವರಟೆಯಂತೆ ಲಸದ್ಘುಸೃಣಾರುಣಚ್ಛವಿ
ಸ್ಫುರಿತತದೀಯಯಂತ್ರದೆಡೆಯೊಳ್ಮಿಗೆ ತತ್ಕಮಲಾಕ್ಷಿಯೊಪ್ಪಿದಳ್ ॥ ೫೬ ॥

ಇಂತು ಚಕ್ರಮಧ್ಯಸ್ಥಿತಯಂತ್ರಮಂ ಮೆಟ್ಟಿ ನಿಲ್ತು ಮನಂಗೊಳಿಪ್ಪ ತದ್ಬಾಲಿಕಾರತ್ನಮಂ ಮದ್ಗುರುಚಿದಂಗಂ ಷೋಡಶೋಪಚಾರಂಗಳಿಂದಂ ಪೂಜೆಯಂಮಾಡಿ ಯಾಬಾಲಿಕೆಯಂ ಬಾಲರೂಪಮೆಂದೀಕ್ಷಿಸುತ್ತ ತಿಭಕ್ತಿರಸದುರುವಣೆಯಿಂದಂ ಸ್ತೋತ್ರಮಂ ಮಾಡುತ್ತೆಸೆದಿರ್ದಂ॥

ಅದೆಂತೆಂದೊಡೆ,

ಲೋಲೋದ್ಯನ್ಮಣಿಮಂಜುಳಾಸನಯುತಾಂ ಗೋಸ್ಥಾಂ ಸುಚಿದ್ರೂಪಿಣೀಂ
ಬಾಲಾದಿತ್ಯಸದೃಕ್ಶರೀರಲತಿಕಾಂ ಷಟ್ಚಕ್ರಸಂಚಾರಿಣೀಂ।
ಲೀಲಾಂದೋಳಿತಲೋಚನೋತ್ಪಲದಳಾಂ ಕಸ್ತೂರಿಕಾಮೋದಿನೀಂ
ತ್ರೈಲೋಕ್ಯಾರ್ಚಿತಪಾದಪದ್ಮಯುಗಳಾಂ ಬಾಲಾಂ ಸದಾಹಂ ಭಜೇ ॥ ೫೭ ॥

ಹೊಳೆದಳು. ೫೫. ಕುಮಾರಪಾಲ ಘೂರ್ಜರಾ, ಯಂತ್ರದ ಮಧ್ಯದಲ್ಲಿ ಒಳ್ಳೆಯ ಪದ್ಮರಾಗದ ಆಭರಣಗಳನ್ನು ಒಪ್ಪುವಂತೆ ಧರಿಸಿ ಕಮಲಾಸನದ ಅಗ್ರಭಾಗದಲ್ಲಿ ಚೆನ್ನಾಗಿ ಪ್ರಕಾಶಿಸುತ್ತಿರುವ ಮಹಾಲಕ್ಷ್ಮಿಯಂತೆ ಕಾಣುವ ಆ ಕಮಲನೇತ್ರೆಯು ಶೋಭಿಸಿದಳು. ೫೬. ಆ ಕಮಲಾಕ್ಷಿಯ ನೋಟಕ್ಕೆ- ಸೂರ್ಯನೊಡನೆ ಕೂಡಿಸಿದ ಚಂದ್ರನ ಕೋಮಲವಾದ ಕಿರಣಗಳಂತೆ, ಹೊಳೆಯುವ ಕೆಂಬಣ್ಣದ ವೃಕ್ಷದಲ್ಲಿ ಒಪ್ಪುವ ಬಳ್ಳಿಯಂತೆ, ಕೆಂದಾವರೆಯ ಕೊಳದಲ್ಲಿನ ಹಂಸದಂತೆ, ಶ್ರೇಷ್ಠವಾದ ಕುಂಕುಮ ಕೇಸರಿಯ ಕೆಂಬಣ್ಣದ ಕಾಂತಿಯಂತೆ ಪ್ರಕಾಶಿಸುವ ಆ ಯಂತ್ರದ ಮಧ್ಯಭಾಗದಲ್ಲಿ ಚೆನ್ನಾಗಿ ಶೋಭಿಸಿದ್ದಳು. ವ॥ ಹೀಗೆ ಚಕ್ರದ ಮಧ್ಯದಲ್ಲಿನ ಯಂತ್ರವನ್ನು ಮೆಟ್ಟಿ ನಿಂತು ಮನಸೆಳೆಯುವ ಆ ಬಾಲಿಕಾರತ್ನವನ್ನು ನನ್ನ ಗುರುವಾದ ಚಿದಂಗನು ಷೋಡಶೋಪಚಾರಗಳಿಂದ ಪೂಜಿಸಿ ಆ ಬಾಲಿಕೆಯನ್ನು ಬಾಲರೂಪವೆಂದು ನೋಡುತ್ತ ಭಕ್ತಿರಸೋತ್ಕಟವಾಗಿ ಸ್ತೋತ್ರವನ್ನು ಮಾಡುತ್ತ ಒಪ್ಪಿದ್ದನು. ಅದು ಹೇಗೆಂದರೆ, ೫೭. ತೂಗಾಡುವ ಶ್ರೇಷ್ಠ ಮಣಿಗಳ ಮಂಜುಳವಾದ ಪೀಠದಲ್ಲಿ ಕುಳಿತಿರುವವಳೆ, ಮಧುರವಾಣಿಯೆ, ಚಿದ್ರೂಪಿಣಿಯೆ, ನೋಟಕ್ಕೆ ಬಾಲಸೂರ್ಯನಂತೆಯೂ ಬಳ್ಳಿಯಂತಹ ಶರೀರವನ್ನೂ ಹೊಂದಿ ಷಟ್ಚಕ್ರಗಳಲ್ಲಿ ಸಂಚರಿಸುವವಳೆ, ಚೆಲುವಾದ ಚಂಚಲವಾದ ಕಮಲದಂತಹ ಕಣ್ಣುಳ್ಳವಳೆ, ಕಸ್ತೂರಿಯಂತೆ ಸುವಾಸನೆಯನ್ನು ಬೀರುವವಳೆ, ಮೂರುಲೋಕಗಳಿಂದಲೂ ಪೂಜೆಗೊಳ್ಳುತ್ತಿರುವ ಪಾದಪದ್ಮಗಳನ್ನು ಹೊಂದಿರುವವಳೆ,

ವಿಕಚನ್ನೂತನದಾಡಿಮೀಕುಸುಮಸಂಕಾಶಾಂಗವಿಭ್ರಾಜಿನೀಂ
ಸಕಲಾಮ್ನಾಯಪುರಾಣಸಂಸ್ತುತವಿಜೃಂಭತ್ಪಾದಪಂಕೇರುಹಾಂ।
ಶುಕವಾಣೀಂ ಮದಕುಂಭಿಕುಂಭಘನವಕ್ಷೋಜದ್ವಯಾಭಾಸಿನೀಂ
ಮುಕುರಾರಾಜಿತಗಂಡಮಂಡಲಯುಗಾಂ ಬಾಲಾಂ ಸದಾಹಂ ಭಜೇ ॥ ೫೮ ॥

ವೇಣೀಸಂಸ್ಥಿತಬಾಲಚಂದ್ರಶಕಲಾಂ ವೇದಾಂತವೇದ್ಯಾಂ ಶಿವಾಂ
ಶೋಣೋತ್ಪಲ್ಲವಶೋಭಿತಾಧರಪುಟಾಂ ತೇಜೋಮಯೀಂ ಶಾಂಭವೀಂ।
ಮಾಣಿಕ್ಯೋಜ್ವಲಚಾರುಹಾರವಿಲಸದ್ವಕ್ಷಸ್ಥಲಾಲಂಕೃತಾಂ
ಕ್ಷೋಣೀಧ್ರಾಧಿಪಕನ್ಯಕಾಂ ನಿರುಪಮಾಂ ಬಾಲಾಂ ಸದಾಹಂ ಭಜೇ ॥ ೫೯ ॥

ಎಂದಿಂತು ತನ್ಮುನೀಶ್ವರಂ ಸ್ತೋತ್ರಮಂ ಮಾಡಿ ಮಗುಳ್ದು ಮೆಲ್ಲ ಮೆಲ್ಲನೆ ತದ್ಬಾಲಿಕೆಯಗ್ರದೊಳ್ ವಿಜೃಂಭಿಪ ಚಕ್ರಮಧ್ಯಮಂ ನೋಡೆ,

ತೊಳತೊಳಪ ಪರಿಧಿಮಧ್ಯದೊ
ಳಳವಟ್ಟು ಮನಂಗೊಳಿಪ್ಪ ಹಿಮದೀಧಿತಿಮಂ।
ಡಳಮೆಂದೆನೆ ತಚ್ಚಕ್ರದೊ
ಳಳಿಪೂರಿತತಾರಕುಂಭಮೆಸೆದತ್ತರಸಾ ॥ ೬೦ ॥

ಮತ್ತಮದಲ್ಲದೆ,

ಕಂಜಾತಾಕರದಲ್ಲಿ ವ
ಲಂ ಜನಿಸಿದ ಸುಟಿಯ ಮಧ್ಯದೊಳ್ಮಿಸುಪ ರಜಃ।

ಬಾಲೆಯೆ ನಾನು ನಿನ್ನ ಸದಾ ಭಜಿಸುವಂತಾಗಲಿ. ೫೮. ಅರಳಿದ ಹೊಸ ದಾಡಿಂಬದ ಹೂವಿನಂತೆ ಕಾಂತಿಯಿಂದ ಬೆಳಗುವ ಶರೀರವುಳ್ಳವಳೆ, ಸಕಲ ವೇದ ಪುರಾಣಗಳಿಂದ ಕೀರ್ತಿಸಲ್ಪಟ್ಟ ಹೊಳೆಯುವ ಪಾದ ಕಮಲಗಳನ್ನುಳ್ಳವಳೆ, ಗಿಳಿಯಂತೆ ಮಧುರವಾಗಿ ಆಲಾಪಿಸುವವಳೆ, ಮದ್ದಾನೆಯ ಕುಂಭದಂತೆ ಪೆರ್ಮೊಲೆಗಳನ್ನು ಹೊಂದಿ ಶೋಭಿಸಿರುವವಳೆ, ಮೂಗುತಿಯ ಕಾಂತಿಯು ಎರಡೂ ಕೆನ್ನೆಗಳಲ್ಲಿ ರಾರಾಜಿಸುವವಳೆ, ಬಾಲೆಯೆ, ಸದಾ ನಾನು ನಿನ್ನನ್ನು ಭಜಿಸುವಂತಾಗಲಿ. ೫೯. ಬಾಲಚಂದ್ರನ ತುಣುಕು ತುರುಬಿನಲ್ಲಿ ನೆಲೆಗೊಂಡಿರುವವಳೆ, ವೇದಾಂತವನ್ನು ತಿಳಿದವಳೆ, ಮಂಗಳಕರವಾದ ಕೆಂಪಾದ ಚಿಗುರಿನಂತೆ ಶೋಭಿಸಿರುವ ತುಟಿಗಳುಳ್ಳವಳೆ, ಮಂಗಳಕರವಾದ ಕೆಂಪಾದ ಚಿಗುರಿನಂತೆ ಶೋಭಿಸಿರುವ ತುಟಿಗಳುಳ್ಳವಳೆ, ಕಾಂತಿಪೂರ್ಣಳೆ, ಶಾಂಭವಿಯೆ, ಹೊಳೆಯುವ ವಕ್ಷಸ್ಥಳದಲ್ಲಿ ಮಾಣಿಕ್ಯದ ಉಜ್ವಲವೂ ಮನೋಹರವೂ ಆದ ಹಾರವನ್ನು ಅಲಂಕಾರವಾಗಿ ಹೊಂದಿರುವವಳೆ, ಪರ್ವತರಾಜನ ಕುಮಾರಿಯೆ, ಉಪಮೆಗೆ ಸಿಲುಕದವಳೆ, ಬಾಲೆಯೆ ಸದಾ ನಾನು ನಿನ್ನನ್ನು ಭಜಿಸುವಂತಾಗಲಿ. ವ॥ ಎಂದು ಹೀಗೆ ಆ ಮುನೀಶ್ವರನು ಸ್ತೋತ್ರವನ್ನು ಮಾಡಿ ಮತ್ತೆ ಮೆಲ್ಲಮೆಲ್ಲನೆ ಆ ಬಾಲಿಕೆಯ ಮುಂದೆ ವಿಜೃಂಭಿಸಿರುವ ಚಕ್ರದ ಮಧ್ಯಭಾಗವನ್ನು ನೋಡಲು, ೬೦. ಅರಸಾ, ತೊಳತೊಳಗುವ ಮಂಡಲದ ಮಧ್ಯಭಾಗದಲ್ಲಿ ಅಳವಡಿಸಿದ ಮನಸೆಳೆಯುವ ಚಂದ್ರನ ದೀಪ್ತಿ ಮಂಡಳವೊ ಎನ್ನುವಂತಿರುವ ಆ ಚಕ್ರದಲ್ಲಿ ಮಧು ತುಂಬಿದ ಬೆಳ್ಳಿಯ ಕೊಡವು ಒಪ್ಪಿದ್ದಿತು. ವ॥ ಮತ್ತೆ ಅದಲ್ಲದೆ, ೬೧. ಕಮಲದ ಕೊಳದಲ್ಲಿ ಹುಟ್ಟಿದ ಸುಳಿಯ

ಪುಂಜಮಯಕಂಜಮೆನಲಪ
ರಂಜಿಗೊಡಂ ಪೂರಿತಾಳಿಯಿಂದೊಂದೆಸೆಗುಂ ॥ ೬೧ ॥

ತೊಳಪಮರೀಚಿನಿಕಾಯಮ
ನೊಳಕೊಂಡೆಸೆವರ್ಕಬಿಂಬಮೆನೆ ದಾಸಳವೂ।
ಗಳನರ್ಚಿಸಿ ತತ್ಕಾಂಚನ
ಕಳಶಮದೊಂದೊಗೆದುದಾಸುಚಕ್ರಾಂತರದೊಳ್ ॥ ೬೨ ॥

ವಿಪುಳಗ್ರಹಮಂಡಲದೊ
ಳ್ತಪನಂ ರಾರಾಜಿಪಂತೆ ಬಳಸಿರ್ದು ತೊಳ।
ಪ್ಪುಪಪಾತ್ರೆಗಳೆಡೆಯೊಳ್ಪಿಂ
ದೆ ಪೊಳೆವ ಘಟಪಾತ್ರೆಯೆಸೆದುದಲ್ಲಿ ನೃಪಾಲಾ ॥ ೬೩ ॥

ಇಂತು ತದ್ಬಾಲಿಕೆಯಗ್ರಭಾಗದೊಳರ್ಚಿಸಿದಂಗಜಚಾಪದಂತೆಸೆವ ತಚ್ಚಕ್ರಮಧ್ಯದೊಳ್ವಿಜೃಂಭಿಪ ಪರಿಸ್ರುತಿಪರಿಪೂರಿತತತ್ಕಾಂಚನಕುಂಭಮಮಂ ಬಳಸಿ,

ಪ್ರೇಕ್ಷಾಪ್ರದರುಚಿರಸ್ವಾ
ದುಚ್ಛಾದಿತಮಾಮ್ರಮರೀಚಲವಣಾದಿಯುತಂ।
ಸ್ವಚ್ಛಪಚನಕ್ರಿಯೋಜ್ವಲ
ಮಚ್ಛಂ ತತ್ಪಾತ್ರೆಯಂ ಬಳಸಿ ರಂಜಿಸುಗುಂ ॥ ೬೪ ॥

ಒರಸಿ ತೊಳೆದುಪ್ಪುವೆರದು
ತ್ಕರಿಸಿ ಪೊದಟ್ಟಿಚ್ಚಪೊಸಗಂಪೆಸೆಯಲ್।
ವರಸಂಭಾರಮನೊಂದಿಸಿ
ಪರಿಪಾಕಂಗೈದಪಲಲತತಿ ರಂಜಿಸುಗುಂ ॥ ೬೫ ॥

ಮಧ್ಯದಲ್ಲಿ ಹೊಳೆಯುವ ಹೂವಿನ ಪರಾಗದ ಮೊತ್ತದಿಂದ ಕೂಡಿದ ಕಮಲವೊ ಎನ್ನುವಂತೆ ಮಧುವಿನಿಂದ ತುಂಬಿದ ಅಪರಂಜಿಯ ಕೊಡವು ಶೋಭಿಸುವುದು. ೬೨. ಹೊಳೆವ ಕಿರಣಗಳ ಮೊತ್ತವನ್ನು ಹೊಂದಿ ಶೋಭಿಸಿರುವ ಸೂರ್ಯಬಿಂಬವೆನ್ನುವಂತೆ ದಾಸವಾಳದ ಹೂಗಳಿಂದ ಪೂಜೆಗೊಂಡ ಆ ಚಿನ್ನದ ಕಳಶವು ಆ ಚಕ್ರದ ಮಧ್ಯಭಾಗದಲ್ಲಿ ಕಾಣಿಸಿತು. ೬೩. ಮಹಾರಾಜಾ, ಅಸಂಖ್ಯ ಗ್ರಹಮಂಡಲದ ನಡುವೆ ಸೂರ್ಯನು ಶೋಭಿಸುವಂತೆ ಹೊಳೆಯುವ ಉಪಪಾತ್ರೆಗಳ ನಡುವೆ ಪ್ರಕಾಶಿಸುವ ಘಟಪಾತ್ರೆಯು ಅಲ್ಲಿ ಶೋಭಿಸಿತ್ತು. ವ॥ ಹೀಗೆ ಆ ಬಾಲಿಕೆಯ ಮುಂಭಾಗದಲ್ಲಿ ಪೂಜಿಸಿದ ಕಾಮನಬಿಲ್ಲಿನಂತೆ ಶೋಭಿಸುವ ಆ ಚಕ್ರದ ಮಧ್ಯಭಾಗದಲ್ಲಿ ವಿಜೃಂಭಿಸಿರುವ ಮಧು ತುಂಬಿದ ಆ ಚಿನ್ನದ ಕೊಡವನ್ನು ಬಳಸಿ, ೬೪. ಹಿತಕರವಾದ ರುಚಿಯಿಂದಲೂ ಸ್ವಾದುದಿಂದಲೂ ಕೂಡಿ ಹುಳಿ, ಮೆಣಸು, ಉಪ್ಪು - ಇವುಗಳನ್ನು ಸೇರಿಸಿದ ಶುದ್ಧವೂ, ಚೆನ್ನಾಗಿ ಜೀರ್ಣಕ್ರಿಯೆಯನ್ನುಂಟು-ಮಾಡುವಂತಹದೂ ಆದ ಪರಿಶುದ್ಧವಾದ ಪಾತ್ರೆಯನ್ನು ಬಳಸಿ ರಂಜಿಸಿರುವುದು. ೬೫. ತೊಳೆದು ಶುದ್ಧ ಮಾಡಿ ಉಪ್ಪನ್ನು ಬೆರಸಿ ಸುವಾಸನೆಯನ್ನು ಬೀರಲು ಒಳ್ಳೆಯದಾದ

ಪಣ್ಣಪಣ್ಣನೆ ತುಪ್ಪದೊಳ್ಪುರಿದಚ್ಚಗಂಪಮರಲ್ಕರಂ
ಸಣ್ಣಕೇದಗೆಪೂವಿನೊಳ್ಳೆಸಳಲ್ಲಿ ಜೋಡಿಸೆ ತೀವಿ ನ।
ಲ್ಬಣ್ಣಮಂ ಪೊರೆದುಣ್ಮೆ ಸದ್ರುಚಿ ಯಟ್ಟಿತಂದು ಮಡಂಗಿದ
ಕ್ಷುಣ್ಣ ಮಾಂಸನಿಕಾಯವೊಪ್ಪಿದುದಾಸುಚಕ್ರದೊಳುದ್ಭಟಾ ॥ ೬೬ ॥

ನಸುವೊಗೆ ಯೇಱುತುಂ ಮಿಸುಪ ಕಂಪು ದಿಗಾವಳಿಯಂ ಸಮಂತು ಚುಂ
ಬಿಸೆ ಸುಧೆಯಂ ವಿನೂತ್ನರುಚಿ ತುಳ್ಕೆ ಕರಂ ಕರಿಬೇವಿನೊಪ್ಪುವೊ।
ಳ್ಳೆಸಳೆಡೆಸಿಲ್ಕಿ ತೋಱುವ ವಿವಿಧಾಕೃತಿಯಾಗಿ ಮನಂಗೊಳಿಪ್ಪ ಸ
ದ್ರಸಪಲಾಳಿ ರಂಜಿಸಿದುದಾವರಚಕ್ರದೊಳುದ್ಭಟೋರ್ವಿಪಾ ॥ ೬೭ ॥

ಇಂತು ಮನಂಗೊಳಿಪ ಮಾಂಸಮೊದಲಾದಖಿಳಸಾಧನದ್ರವ್ಯಂಗಳೆಡೆಯೊಳೆಸೆವಚ್ಛಪರಿಸ್ರುತಿ ಪರಿಪೂರಿತ ಕಾಂಚನಕುಂಭಮಂ ಪೂಜೆಯಂಮಾಡಿ ಮಗುೞ್ದಾಮುನಿನಾಥಂ,

ಮಿಸುಪರಸಾಲಫಲಸ್ಥಿತ
ರಸಮಂ ಗಿಳಿ ತನ್ನ ಸಾರಿಕೆಗೆ ಗುಟುಕೀಯ।
ಲ್ಕಸವಸದೆ ತೆಗೆವವೊಲ್ಮುನಿ
ಯೊಸೆದಾಪೊಂಗೊಡದೊಳಿರ್ಪ ಮಧುವಂ ತೆಗೆದಂ ॥ ೬೮ ॥

ಇಂತತಿಮುದದಿಂದಂ ಮುನಿಪಂ ಕನಕಪಾತ್ರದೊಳ್ಮಿಸುಪನವ ಸೀಧುಮಂ ತೆಗೆದಂಬಿಕಾಸ್ತೋತ್ರಮಂ ಪಠಿಸುತ್ತರ್ಚಿಸಿ ಮನಂಗೊಳಿಪಬಲಾಮಣಿಗೀಯೆ,

ಸಂಬಾರವನ್ನು ಸೇರಿಸಿ ಅಡುಗೆ ಮಾಡಿದ ಮಾಂಸವು ಶೋಭಿಸುವುದು. ೬೬. ಉದ್ಭಟನೇ, ತಕತಕನೆ ತುಪ್ಪದಲ್ಲಿ ಹುರಿದು ಅದರ ಸುವಾಸನೆ ಚೆನ್ನಾಗಿ ಎಲ್ಲೆಡೆ ಹರಡಿರಲು, ಸಣ್ಣ ಕೇದಗೆ ಹೂವಿನ ಒಳ್ಳೆಯ ದಳಗಳನ್ನು ಅದರೊಡನೆ ಸೇರಿಸಲಾಗಿ ಒಳ್ಳೆಯ ರಂಗು ಪಡೆದು ಅದರ ರುಚಿ ಚೆನ್ನಾಗಿ ಹರಡಲು ಬೇಯಿಸಿ ತಂದಿಟ್ಟ ಮರ್ದಿಸಿದ ಮಾಂಸದ ರಾಶಿಯು ಆ ಚಕ್ರದಲ್ಲಿ ಶೋಭಿಸಿತ್ತು. ೬೭. ಉದ್ಭಟ ಮಹಾರಾಜಾ, ಸ್ವಲ್ಪವೇ ಹೊಗೆ ಸೂಸುತ್ತ ಹೊಳೆಯುವ ಕಂಪು ದಿಕ್ಕುದಿಕ್ಕುಗಳನ್ನು ಮುತ್ತಿಕ್ಕಲು ಅಮೃತದ ವಿನೂತನವಾದ ರುಚಿ ಚೆನ್ನಾಗಿ ತುಳುಕಲು, ಕರಿಬೇವಿನ ಒಳ್ಳೆಯ ಎಸಳುಗಳನ್ನು ಸಿಕ್ಕಿಸಿಕೊಂಡು ನಾನಾ ಆಕಾರಗಳಲ್ಲಿ ಮನಸೆಳೆಯುವ ರಸಯುಕ್ತವಾದ ಮಾಂಸದ ರಾಶಿಯು ಆ ಶ್ರೇಷ್ಠ ಚಕ್ರದಲ್ಲಿ ಶೋಭಿಸಿತ್ತು. ವ॥ ಹೀಗೆ ಮನಸೆಳೆಯುವ ಮಾಂಸ ಮೊದಲಾದ ಸಕಲ ಸಾಧನ ದ್ರವ್ಯಗಳ ಮಧ್ಯದಲ್ಲಿ ರಂಜಿಸಿರುವ ಒಳ್ಳೆಯ ಮಧುವಿನಿಂದ ತುಂಬಿದ ಚಿನ್ನದ ಕೊಡವನ್ನು ಪೂಜಿಸಿ ಮತ್ತೆ ಆ ಮುನಿನಾಥನು, ೬೮. ಹೊಳೆಯುವ ಮಾವಿನ ಹಣ್ಣಿನೊಳಗಣ ರಸವನ್ನು ಗಿಳಿಯು ತನ್ನ ಪ್ರೇಯಸಿಗೆ ಗುಟುಕೀಯಲು ಆತುರದಿಂದ ಹೀರುವಂತೆ ಮುನಿಯು ಪ್ರೀತಿಯಿಂದ ಆ ಚಿನ್ನದ ಕೊಡದಲ್ಲಿನ ಮಧುವನ್ನು ತೆಗೆದನು. ವ॥ ಹೀಗೆ ಅತ್ಯಾನಂದದಿಂದ ಮುನಿಯು ಚಿನ್ನದ ಪಾತ್ರೆಯಲ್ಲಿ ಹೊಳೆಯುವ ಹೊಸದಾದ ಮದ್ಯವನ್ನು ತೆಗೆದು ಪಾರ್ವತಿ ಸ್ತುತಿ ಮಾಡುತ್ತ

12

ಮಂಜುಳ ಪರಿಸ್ರುತಿಸುಪಾ
ತ್ರಾಂಜಲಿಯುತತದ್ವಧೂಟಿ ಕಣ್ಗೊಪ್ಪಿದಳಾ।
ಕಂಜಾಸ್ತ್ರನ ಮೋಹನದೇ
ಜುಂಜೊಡರಂ ಪಿಡಿದು ತೋರ್ಪ ಪೊಂಬುತ್ಥಳಿಯೋಲ್ ॥ ೬೯ ॥

ಮತ್ತಮದಲ್ಲದಂಜಳಿಯೊಳಳವಟ್ಟು ತೊಳಪ್ಪಳಿಪಾತ್ರೆಗಭಿವಂದಿಸಿಸೊಗಸಮರ್ದ ಮುಂಗಾಜಿ- ಪನಿಯಂ ಸೇವಿಸುವ ಜಾದಗೆಯಂತೆ ಮೆಲ್ಲನಾಕನಕಪಾತ್ರಸಮಂಚಿತ ಪರಿಸ್ರುತಿಯಂ ಪಾನವಂ ಮಾಡುತ್ತಬಲಾಮಣಿ ಎಸೆದಿರ್ದಳು. ಅದೆಂತೆಂದೊಡೆ,

ಎರಡುಂ ಕರದೊಳ್ಪಿಡಿದುರು
ತರಪಾತ್ರಂ ಮುಗಿದ ಕಣ್ಮಲರ್ಗೊಡಹುವ ಬಂ।
ಧುರಮಸ್ತ್ರಂ ಝೋಂಪಿಸಿ ಪ
ರಿರಂಜಿಸೆ ಮೆಲ್ಲನೀಂಟಿದಳ್ವಧು ಮಧುವಂ ॥ ೭೦ ॥

ಇಂತು ಸಂತಸದಿಂದಿನಿತನೀಂಟಿ ಮಿಕ್ಕಕ್ಷರೀಯಮನಂತಬಲಾರತ್ನಂ ಕೂರ್ತು,

ಸಾಯಸದಿಂದೆ ನಿರ್ಜರಚಯಂ ಕಡೆವನ್ನೆಗಮಲ್ಲಿ ಪುಟ್ಟಿದಾ
ಪೇಯಸುಧಾರಸಾಯಸಮನೀಂಟಿ ಬಟಿಕ್ಕಮರೌಘಕೀವ ನಾ।
ರಾಯಣೆಯಂತೆ ಮುಂಸವಿದು ಮಿಕ್ಕಪರಿಸ್ರುತಿಯಂ ಮಗುಟ್ಟು ತ
ತ್ತೋಯಜಪತ್ರನೇತ್ರೆ ಋಷಿಗಳ್ಗಿರದಿತ್ತಳನೂನರಾಗದಿಂ ॥ ೭೧ ॥

ಇಂತು ಲೀಲೆಯಿಂದಾಬಾಲಿಕೆ ಯಿತ್ತ ಲೋಲಸೀಧುವನಾಚಿದಂಗನೀಂಟಿಯಲ್ಲಿದ್ದೆಲ್ಲಾ ಋಷಿಗಳ್ಗಿನಿಸಿನಿಸನಿತ್ತು ಮಿಕ್ಕುದನಾಮನೋಹರ ಚಕ್ರಮಧ್ಯದೊಳ್ಮನಂಗೊಳಿಪಂಗನಾಳಿಗೀಯೆ,

ಮನಸೆಳೆಯುವ ಆ ಹೆಣ್ಣಿಗೆ ಕೊಡಲು, ೬೯. ಮಧುವಿನ ಮನೋಹರವಾದ ಪಾತ್ರೆಯನ್ನು ಬೊಗಸೆಯಲ್ಲಿ ಹಿಡಿದ ಆ ಹೆಣ್ಣು ಮನ್ಮಥನ ಮೋಹನದ ಕಾಂತಿಪೂರ್ಣ ಜೋತಿಯನ್ನು ಹಿಡಿದು ತೋರುವ ಸುವರ್ಣದ ಗೊಂಬೆಯಂತೆ ಕಣ್ಣಿಗೆ ಅಂದವಾದಳು. ವ॥ ಮತ್ತೆ ಅದಲ್ಲದೆ, ಆಕೆ ಬೊಗಸೆಯಲ್ಲಿ ಹಿಡಿದ ಬೆಳಗುವ ಮಧುಪಾತ್ರೆಗೆ ನಮಸ್ಕರಿಸಿ, ಸೊಗಸುಗೂಡಿದ ಮುಂಗಾರಿನ ಹನಿಯನ್ನು ಸವಿಯುವ ಚಾತಕಪಕ್ಷಿಯಂತೆ ಮೆಲ್ಲನೆ ಆ ಚಿನ್ನದ ಪಾತ್ರೆಯಲ್ಲಿನ ಮಧುವನ್ನು ಕುಡಿಯುತ್ತ, ಆ ಹೆಣ್ಣು ಕಣ್ಣಿಗೆ ಅಂದವಾಗಿದ್ದಳು. ಅದು ಹೇಗೆಂದರೆ, ೭೦. ಎರಡೂ ಕೈಗಳಲ್ಲಿ ಹಿಡಿದ ಶ್ರೇಷ್ಠವಾದ ಪಾತ್ರೆಯು, ಮುಚ್ಚಿದ ಕಮಲ ನೇತ್ರಕ್ಕೆ ಒದಗಿದ ಮನೋಹರವಾದ ಕತ್ತಲೆಗೆ ತನು ತೂಗಾಡಿ ಸಂತೋಷವನ್ನು ಹೊಂದಲು ಆ ಹೆಣ್ಣು ಮಧುವನ್ನು ಮೆಲ್ಲನೆ ಕುಡಿದಳು. ವ॥ ಹೀಗೆ ಸಂತೋಷದಿಂದ ಸ್ವಲ್ಪ ಕುಡಿದು ಉಳಿದ ಮಧುವನ್ನು ಆ ಸ್ತ್ರೀ ರತ್ನವು ಪ್ರೀತಿಯಿಂದ, ೭೧. ಕ್ಷೀರಸಾಗರವನ್ನು ದೇವತೆಗಳ ಸಮೂಹವು ಬಹಳ ಕಷ್ಟಪಟ್ಟು ಕಡೆಯುವಾಗ ಅಲ್ಲಿ ಹುಟ್ಟಿದ ಮಧುವನ್ನು ನಾರಾಯಣೆ(ಮೋಹಿನಿ)ಯು ಮೊದಲು ತಾನು ಸವಿದು ನಂತರ ದೇವತೆಗಳ ಸಮೂಹಕ್ಕೆ ಕೊಟ್ಟಂತೆ ಆ ಕಮಲಪತ್ರ ನೇತ್ರೆಯು ಮೊದಲಿಗೆ ಮಧುವನ್ನು ಸವಿದು ಉಳಿದುದನ್ನು ಮತ್ತೆ ಋಷಿಗಳಿಗೆ ಪೂರ್ಣಾನುರಾಗದಿಂದ ತಪ್ಪದೆ ಕೊಟ್ಟಳು. ವ॥ ಹೀಗೆ ವಿಲಾಸದಿಂದ ಆ ಬಾಲಿಕೆ ಕೊಟ್ಟ ತುಂಬಿ ತುಳುಕಾಡುವ ಮದ್ಯವನ್ನು ಆ ಚಿದಂಗನು ಕುಡಿದು ಅಲ್ಲಿದ್ದ ಎಲ್ಲಾ ಋಷಿಗಳಿಗೆ ಸ್ವಲ್ಪ ಸ್ವಲ್ಪ ಕೊಟ್ಟು ಉಳಿದುದನ್ನು ಆ ಮನೋಹರವಾದ ಚಕ್ರದ

ಪ್ರಬಳಪರಿಮಳಲತಾಂತ
ಸ್ತಬಕೋದಿತಗಂಧಮಂ ವಸಂತಾಗಮದೊಳ್।
ಸೊಬಗಿಂ ಸವಿವಳಿಕುಳಮೆನ
ಲಬಲೆಯರೊಲಿದೀಂಟಿದರ್ಮುನಿಪನಿತ್ತಳಿಯಂ ॥ ೭೨ ॥

ಮತ್ತಮಾಮುನಿನಾಥನನುರಾಗದಿಂದಿತ್ತಕ್ಷರೀಯಮನಲ್ಲಿ ಕಂಗೊಳಿಪಂಗನೆಯರೀಂಟುತ್ತೆಸೆದಿರ್ದರು॥

ಅದೆಂತೆಂದೊಡೆ,

ಚಂದ್ರಬಿಂಬಜಾತನೂತ್ನಚಂದ್ರಿಕಾಚ್ಛಸಾರಮಂ
ಸಾಂದ್ರಮೋದದಿಂ ಚಕೋರಿಕಾಳಿ ಸೇವಿಪಂತೆವೋಲ್।
ರುಂದ್ರತಾರತಾರಕುಂಭಪೂರ್ಣಸೀಧುವಂ ಸಮಂ
ತಿಂದ್ರಜಾಲದಂಗನೌಘಮೀಂಟುತೊಪ್ಪಿದರ್ ನೃಪಾ ॥ ೭೩ ॥

ಮತ್ತಮಾಜನದೊಳೊರ್ವೆಳವೆಣ್ಮಣಿ ಸೀಧುಪೂರಿತತತ್ಪಾತ್ರಮನಂಗೈಯ್ಯೊಳ್ತಳೆದು ಈಕ್ಷಿಸಿ ನಿಜಾಕ್ಷಿಗಳ್ಪ್ರಾರ್ಪೊಳೆಯೆ,

ಎಲ್ಲಿಯದೀಕಾದಂಬರಿ
ಯಲ್ಲಿ ಚಕೋರಂಗಳೆನುತುಮೀಂಟದೆ ತಾನಿ।
ರ್ದ್ದಲ್ಲಿ ವಿರಾಜಿಪ್ಪ ಕಲಾ
ವಲ್ಲಭೆಯರನಂದು ನಗಿಸಿದಳ್ ಜನನಾಥಾ ॥ ೭೪ ॥

ಮತ್ತಮದೊರ್ವಳ್,

ಕುಂದದೆ ಸೀಧುವನೀಕ್ಷಿಸ
ಲಂದಕ್ಷಿಮರೀಚಿ ಬಿಂಬಿಸಲ್ಕಂಡು ಲಸ।
ಚ್ಛಂದನರಸಮೆಂದಂಗ
ಕ್ಕಂದದನೆ ತೆಗೆದು ಪೂಸಲೆಂದನುಗೈದಳ್ ॥ ೭೫ ॥

ಮಧ್ಯಭಾಗದಲ್ಲಿ ಮನಸ್ಸನ್ನು ಸೆಳೆಯುತ್ತಿರುವ ಸ್ತ್ರೀಯರಿಗೆ ಕೊಡಲು, ೭೨. ಅತ್ಯಂತ ಪರಿಮಳಯುತವಾದ ಹೂವುಗಳಲ್ಲಿನ ಸುಗಂಧವನ್ನು ವಸಂತದ ಆಗಮನ ಕಾಲದಲ್ಲಿ ಸೊಗಸಾಗಿ ಸವಿಯುವ ದುಂಬಿಗಳಂತೆ ಅಬಲೆಯರು ಮುನಿಪನು ಕೊಟ್ಟ ಮದ್ಯವನ್ನು ಸಂತಸದಿಂದ ಕುಡಿದರು. ವ॥ ಮತ್ತೆ ಆ ಮುನಿಗಳೊಡೆಯನು ಪ್ರೀತಿಯಿಂದ ಕೊಟ್ಟ ಮದ್ಯವನ್ನು ಅಲ್ಲಿ ಶೋಭಿಸಿದ್ದ ಸ್ತ್ರೀಯರು ಕುಡಿಯುತ್ತ ಶೋಭಿಸಿದರು. ಅದು ಹೇಗೆಂದರೆ, ೭೩. ಮಹಾರಾಜಾ, ಚಂದ್ರಬಿಂಬದಲ್ಲಿ ಹುಟ್ಟಿದ ನೂತನವಾದ ಬೆಳುದಿಂಗಳ ಕಿರಣಗಳನ್ನು ಅತ್ಯಾನಂದದಿಂದ ಚಕೋರ ಪಕ್ಷಿಗಳು ಸೇವಿಸುವಂತೆ ವಿಶಾಲವಾದ ಬೆಳ್ಳಿಯ ಪಾತ್ರೆಯಲ್ಲಿ ತುಂಬಿದ್ದ ಮದ್ಯವನ್ನು ಇಂದ್ರಜಾಲದ ಸ್ತ್ರೀಯರು ಚೆನ್ನಾಗಿ ಸವಿಯುತ್ತ ಶೋಭಿಸಿದರು. ವ॥ ಮತ್ತೆ ಆ ಜನರಲ್ಲಿ ಓರ್ವ ಎಳೆಯ ಪ್ರಾಯದ ಜವ್ವನೆ ಮದ್ಯದಿಂದ ತುಂಬಿದ ಆ ಪಾತ್ರೆಯನ್ನು ಅಂಗೈಯಲ್ಲಿ ಹಿಡಿದು ನೋಡಿ ಅದರಲ್ಲಿ ತನ್ನ ಕಣ್ಣುಗಳು ಪ್ರತಿಬಿಂಬಿಸಿರಲು, ೭೪. ಮಹಾರಾಜಾ, ಈ ಮದ್ಯದಲ್ಲಿ ಎಲ್ಲ ಬಂದುವು ಚಕೋರ ಪಕ್ಷಿಗಳು? ಎಂದು ಮಧ್ಯವನ್ನು ಕುಡಿಯದೆ ಸುಮ್ಮನಿದ್ದು ಅಲ್ಲಿ ಶೋಭಿಸಿದ್ದ ಕಲಾವಲ್ಲಭೆಯರನ್ನು ಅಂದು ನಗಿಸಿದಳು. ವ॥ ಮತ್ತೋರ್ವಳು, ೭೫. ಬಿಡದೆ ಮದ್ಯವನ್ನು ನೋಡಲು, ಆಗ ಕಣ್ಣ

ಮತ್ತಮದಲ್ಲದೆ,

ಮಧುಪಾಲಿಕೆಯೊರ್ವಳ್ ನವ
ಮಧುಪಾತ್ರೆಯನೊಲ್ದು ಬಾಯ್ಗೆ ತರಲಿಡಿಯಲ್ಕೆಂ।
ಪಧರಾರುಣರುಚಿಯಂ ಕಂ
ಡು ಧರಾತಳಕಿೞುಪಿ ನಗಿಸಿದಳ್ಕೆಲದವರಂ ॥ ೭೬ ॥

ಮತ್ತಮದೊರ್ವ ಮಧುಪಾಲಿಕೆ ಸಮಂಚಿತಕಾಂಚನ ಪಾತ್ರೆಯಂ ವಿಲಾಸದಿಂದಂ ನಿರೀಕ್ಷಿಸಿ,

ಥಳಥಳಿಪ ಮದ್ಯದೊಳ್ಮಾ
ರ್ಪೊಳೆಯಲ್ ಮೊಗಮಬ್ಜಮಿದೆ ಮದಾಳಿಗಳಿವೆ ಮೀ।
ನ್ಗಳಿವೆನುತೆಳವೆಣ್ಮಣಿ ಪೂ
ಗೊಳದಭಿಶಂಕೆಯನೆ ತಳೆದು ನಿಟ್ಟಿಸುತಿರ್ದಳ್ ॥ ೭೭ ॥

ಮತ್ತಮದೊರ್ವಳ್,

ಪಿಂಜರಿವಟ್ಟಲೊಳ್ಮಿೞುಪ ಸೀಧುವನೀಂಟುತೆ ನೋಡಲಲ್ಲಿ ಮೇ
ಣ್ಮಂಜುಮುಖೇಂದು ಬಿಂಬಿಸೆ ಸುಧಾರುಚಿ ಸಿಲ್ಕಿದನೆಂದು ನೋೞ್ಪ ತ।
ತ್ಕಂಜದಳಾಕ್ಷಿಯಂ ಮುಳಿದು ನಿಟ್ಟಿಸಿ ಯೊರ್ವ ವಧೂಟಿಯಾಕೆಯಂ
ತಾಂ ಜಱೆದಲ್ಲಿ ತೋಱು ಯೆಸುತ್ತೆ ನೋಡಿದಳಲ್ಲಿ ತದೀಯಮದ್ಯಮಂ ॥ ೭೮ ॥

ಆಮದ್ಯಮನೀಕ್ಷಿಸಿ ತ
ತ್ಕೋಮಲೆ ನಿಜಮೂರ್ತಿ ಯಲ್ಲಿ ಬಿಂಬಿಸೆ ಕಂಡೆಂ।
ಕಾಮಿನಿ ತೆಗೆ ತೆಗೆ ಸಿಲ್ಕಿದೆ
ನೀಮದಿರದೊಳೆಂದು ಕೂಗಿ ನಗಿಸಿದಳವಳಂ ॥ ೭೯ ॥

ಇಂತಲ್ಲಿರ್ದೆಲ್ಲಾ ಪ್ರೌಢಾಂಗನೆಯರ್ಕಳಟ್ಟಹಾಸಮಂ ನಿಮಿರ್ಚು ತೆಳವೆಣ್ಗಳಳಿಪಾನಮಂ ಮಾಡಿ ಸೊರ್ಕ್ಕಿ ವಿರಾಜಿಸುತ್ತಿರ್ದರು॥

ಕಾಂತಿಯು ಅಲ್ಲಿ ಪ್ರತಿಬಿಂಬಿಸಲು ಅದನ್ನು ಕಂಡು ಅದು ಶ್ರೇಷ್ಠವಾದ ಶ್ರೀಗಂಧದ ರಸವೆಂದು ಭಾವಿಸಿ ಅದನ್ನು ತೆಗೆದು ತನ್ನ ದೇಹಕ್ಕೆ ಲೇಪಿಸಲು ಸಿದ್ಧಳಾದಳು. ವ॥ ಮತ್ತೆ ಅದಲ್ಲದೆ, ೭೬. ಮಧುಪಾತ್ರೆ ಹಿಡಿದ ಓರ್ವಳು ಹೊಸದಾದ ಮಧುಪಾತ್ರೆಯನ್ನು ಪ್ರೀತಿಪಟ್ಟು ಬಾಯಿಗೆ ತಂದು ಹಿಡಿಯಲು ಚೆಂದುಟಿಯ ರಕ್ತವರ್ಣವನ್ನು ಅದರಲ್ಲಿ ಕಂಡು ಬೆದರಿ ನೆಲಕ್ಕೆ ಮಧುಪಾತ್ರೆಯನ್ನಿಟ್ಟು ಆ ಮೂಲಕ ತನ್ನ ಅಕ್ಕಪಕ್ಕದವರನ್ನು ನಗಿಸಿದಳು. ವ॥ ಮತ್ತೋರ್ವ ಮಧುಪಾಲಿಕೆಯು ಶ್ರೇಷ್ಠವಾದ ಚಿನ್ನದ ಪಾತ್ರೆಯನ್ನು ವಿಲಾಸದಿಂದ ನೋಡಿ ೭೭. ಥಳಥಳಿಸುವ ಮದ್ಯದಲ್ಲಿ [ತನ್ನ] ಮುಖವು ಬಿಂಬಿತವಾಗಲು, ಇದೊ ಕಮಲ, ಇದೊ ಮಧಿಸಿದ ದುಂಬಿಗಳು, ಇದೋ ಮೀನುಗಳು ಎಂಬ ಸಂದೇಹವನ್ನು ತಾಳಿ ಆ ಎಳೆಯ ಸುಂದರಿಯು ಹೂವಿನ ಕೊಳವನ್ನು ನೋಡುತ್ತಿದ್ದಳು. ವ॥ ಮತ್ತೋರ್ವಳು ೭೮. ಬೆಳ್ಳಿಯ ಬಟ್ಟಲಿನಲ್ಲಿ ಥಳಥಳಿಸುವ ಮದ್ಯವನ್ನು ಸವಿಯುತ್ತ ನೋಡಲು ಅಲ್ಲಿ ಸುಂದರವಾದ ಮುಖ ಕಮಲವು ಬಿಂಬಿಸಲು ಚಂದ್ರನು ಸೆರೆಸಿಕ್ಕಿದನೆಂದು ನೋಡುವ ಕಮಲದಳ ನೇತ್ರೆಯನ್ನು ಅಲುಗಿಸಿ ನೋಡಿದ ಓರ್ವಳು ಅವಳನ್ನು ನಿಂದಿಸುತ್ತ ಎಲ್ಲಿ ತೋರು ಎಂದು ಆ ಮದ್ಯವನ್ನು ನೋಡಿದಳು. ವ॥ ಮತ್ತೋರ್ವಳು, ೭೯. ಆ ಮದ್ಯವನ್ನು ನೋಡಿದ ಆ ಕೋಮಲಾಂಗಿಯು ತನ್ನ ಆಕಾರ ಅಲ್ಲಿ ಬಿಂಬಿಸಲು 'ನೋಡಿದೆನಿನ್ನು ಬಿಡು

ಅದೆಂತೆಂದೊಡೆ,

ಜಾಱುವ ನೀವಿ ಮೆಲ್ಲನೊಳಗಾಗುವ ಲಜ್ಜೆ ಸಡಿಲ್ವ ಕಾಂಚಿ ಸೊ
ಕ್ಕೇಱುವ ಚೇತನಂ ಮಱುವ ಮೈ ನಸುದೇಲ್ವವಿಲೋಲಲೋಚನಂ।
ಮೀಱುವ ನೂತನಸ್ಫುರಣೆಯೊಪ್ಪಿರೆ ಪಾಡುತಲಾಡುತುರ್ಬುತುಂ
ನೀಱುಯರೊಪ್ಪಿದರ್ಮದಿರಮಂ ಮಿಗೆ ಸೇವಿಸುತಂದು ಭೂವರಾ ॥ ೮೦ ॥

ಮತ್ತಮದಲ್ಲದೆ,

ನೋಡುತ್ತುಂ ನಲವಿಂ ಕೊಂ
ಡಾಡುತ್ತುಂ ಪಾಡುತಾಡುತುಂ ಪೊಂಗುತ್ತುಂ।
ನಾಡೆ ವಿದಗ್ಧೆಯರೆಸೆದರ್
ಮಾಡುತ್ತಳಿಪಾನಮಂ ಕರಂ ಮುದದಿಂದಂ ॥ ೮೧ ॥

ಇಂತತಿಮದಿರಾಪಾನಮಂ ಮಾಡುತುಂ ಮನಂಗೊಳಿಪ ತದ್ರಮಣೀಮಣಿಯೊರ್ವಳ್,

ಮಿಸುನಿದಟ್ಟೆಯೊಳೊಪ್ಪುವುಜ್ವಲಸೀಧುವಂ ನಡೆನೋಡಿ ಶೋ
ಭಿಸುವ ನುಣ್ಬೆರಲಿಟ್ಟು ತನ್ಮಧುಬಿಂದುವೊಂದೆರಡಂ ಸಮಂ।
ತಸಿಯೆಳುರ್ವಿಯ ಮೇಲೆ ಚಿಮ್ಮಿ ಮಗುಳ್ದು ವಂದಿಸಿ ಯೊಂಟಿದಳ್
ಮಿಸುಪ ಮಾವಿನ ಪಣ್ಣಸಾರಮನುಂಬಪಂಡಿತವಕ್ಕಿಯೋಲ್ ॥ ೮೨ ॥

ಮತ್ತಮದಲ್ಲದೆ,

ಬಿಡೆಲೆ ಕಾಮಿನೀ, ನಾನೀ ಮದ್ಯದಲ್ಲಿ ಸೆರೆಯಾದೆ' ಎಂದು ಕೂಗಿ ಅವಳನ್ನು ನಗಿಸಿದಳು. ವ॥ ಹೀಗೆ ಅಲ್ಲಿದ್ದ ಪ್ರೌಢ ಸ್ತ್ರೀಯರುಗಳು ಗಟ್ಟಿಯಾಗಿ ನಗುತ್ತ, ಎಳೆಯ ಪ್ರಾಯದ ಸ್ತ್ರೀಯರು ಮಧುಪಾನವನ್ನು ಮಾಡಿ ಸೊಕ್ಕಿ ಶೋಭೆಗೊಂಡಿದ್ದರು. ವ॥ ಅದು ಹೇಗೆಂದರೆ, ೮೦. ಮಹಾರಾಜಾ, ಜಾರುತ್ತಿರುವ ಹೊಕ್ಕಳ ಕೆಳಗಿನ ಸೀರೆಯ ಗಂಟು, ಮೆಲ್ಲನೆ ಅಂತರ್ಗತವಾಗುತ್ತಿರುವ ಲಜ್ಜೆ, ಸಡಿಲಗೊಳ್ಳುತ್ತಿರುವ ಕಟಿಸೂತ್ರ, ಉದ್ರೇಕಗೊಳ್ಳುತ್ತಿರುವ ಮನಸ್ಸು, ಮರೆಯುತ್ತಿರುವ ಮೈ, ಸ್ವಲ್ಪವೇ ತೇಲುತ್ತಿರುವ ಬವರಿಗಣ್ಣುಗಳು ಇವುಗಳಿಂದೊಡಗೂಡಿ ಉಕ್ಕಿ ಬಂದ ನವಸ್ಫೂರ್ತಿಯಿಂದ ಅಂದಗೊಂಡು ಹಾಡುತ್ತ ಆಡುತ್ತ ಉಬ್ಬುತ್ತ ಮದ್ಯವನ್ನು ಚೆನ್ನಾಗಿ ಸೇವಿಸುತ್ತ ಸುಂದರಿಯರು ಅಂದು ಶೋಭೆಗೊಂಡರು. ವ॥ ಮತ್ತೆ ಅದಲ್ಲದೆ, ೮೧. ಅತ್ಯಾನಂದದಿಂದ ಮದ್ಯಪಾನವನ್ನು ಮಾಡುತ್ತ, ನೋಡಿ ಸಂತಸದಿಂದ ಕೊಂಡಾಡುತ್ತ, ಹಾಡುತ್ತ, ಆಡುತ್ತ, ಉಬ್ಬುತ್ತ, ಹೆಚ್ಚಿನ ತಿಳುವಳಿಕೆಯುಳ್ಳ ಸ್ತ್ರೀಯರು ಶೋಭಿಸಿದರು. ವ॥ ಹೀಗೆ ಅತಿಯಾಗಿ ಮದಿರಾಪಾನವನ್ನು ಮಾಡಿ ಮನಸೆಳೆಯುವ ಸುಂದರಾಂಗಿಯೋರ್ವಳು, ೮೨. ಚಿನ್ನದ ತಟ್ಟೆಯಲ್ಲಿ ಶೋಭಿಸಿರುವ ಶ್ರೇಷ್ಠವಾದ ಮದ್ಯವನ್ನು ಚೆನ್ನಾಗಿ ನೋಡಿ ಚೆಲುವಿನಿಂದ ಕೂಡಿದ ನುಣ್ಣನೆಯ ಬೆರಳನ್ನು ಅದರಲ್ಲಿ ಅದ್ದಿ ಆ ಮಧುವಿನ ಒಂದೆರಡು ಹನಿಗಳನ್ನು ಕೃಶಾಂಗಿಯು ನೆಲದ ಮೇಲೆ ಚೆಲ್ಲಿ ಮತ್ತೆ ನಮಸ್ಕರಿಸಿ ಹೊಳೆಯುವ ಮಾವಿನಹಣ್ಣಿನ ಸಾರವನ್ನು ಈಂಟುವ ಅರಗಿಳಿಯ

ಕಳ್ಳನೊಸೆದೀಂಟಲೊರ್ವಳ್
ಬೆಳ್ಳಿಯಬಟ್ಟಲನೆ ಕರ್ಚಲೆಸೆದುದದೆಟ್ಟಿಂ।
ದೊಳ್ಳಮರ್ದ ಕೆಂಪುದುಟಿಯೊಳ
ಗುಳ್ಳರ ಚಿತ್ತಮನೆ ಬಯಸಿ ಪತ್ತಿದ ಸಸಿಯೋಲ್ ॥ ೮೩ ॥

ಇಂತಚ್ಚಪೊಚ್ಚಪೊಸಗಂಪನೆಣ್ದೆಸೆಯೊಳ್ಪಸರಿಸುವಮಲಮದಿರಾ ಪಾನಮಂ ಮಾಡುತುಂ ತನ್ಮದೋದ್ರೇಕದಿಂದುರ್ಕಿ ಸೊರ್ಕಿ ಮಿಕ್ಕು ಮೀಱಿದಂಗನೆಯರ್ಕಂಗೊಳಿಸಿರ್ದರು॥

ಅದೆಂತೆಂದೊಡೆ,

ವೀಣೆಯನುರ್ದುತುಂ ಮಿಱುಪ ಕಿನ್ನರಿಯಿಂಚರಮಂ ನೆಗಟ್ಟುತುಂ
ವೇಣುವನೂದುತುಂ ಸವಿಯನುಣ್ಮಿಪ ನಾದದಿನೆತ್ತಿ ಪಾಡುತುಂ।
ಮಾಣದೆ ಪೊಂಗುತಾಡುತಿನಿದುಕ್ಕುವ ಸೀಧುವನೀಂಟುತಂದು ನ
ಲ್ವಾಣೆಯರುನ್ನತಸ್ಫುರಣೆಯಿಂದೆ ವಿರಾಜಿಸಿದರ್ ನೃಪಾಲಕಾ ॥ ೮೪ ॥

ಮತ್ತಮದಲ್ಲದೆ ಯೊರ್ವಳ್ಕಳ್ಗುಡಿದು,

ಪರಿಲೀಲಾಂದೋಳನೇತ್ರಂ ಕಿಱುಬೆಮರುಗುವಾಸ್ಯಂ ಗಳತ್ಕೇಶಪಾಶಂ
ಸ್ಫುರಣೋಲ್ಲಾಸಾಟ್ಟಹಾಸಂ ಜಗುಳ್ವನಿಜ ಕರಂ ಜೋಂಪಿಪಂಗಂವಿಲುಪ್ತಾ।
ಕ್ಷರವಾಕ್ಯಂ ರೋಮಹರ್ಷಂ ಬಿಡದೆಸೆವೆಳೆಜೋಲ್ ಹೂಂಕೃತಂ ತೋರ್ಪ ಚಲ್ಲಂ
ಕರಮೊಪ್ಪಲ್ ಪಾಡುತಾಡುತ್ತೆಸೆದುದಸದಳಂ ಮದ್ಯಪಾನಾಂಗನೌಘಂ ॥ ೮೫ ॥

ಮತ್ತಮೊರ್ವ ಕಿಱುವೆಣ್ಣೆಸೆದಿರ್ದಳೆಂತೆಂದೊಡೆ,

ರೀತಿಯಲ್ಲಿ ಸವಿದಳು. ವ॥ ಮತ್ತೆ ಅದಲ್ಲದೆ, ೮೩. ಓರ್ವಳು ಕಳ್ಳನ್ನು ಪ್ರೀತಿಯಿಂದ ಕುಡಿಯಲೆಳಸಿ ಬೆಳ್ಳಿಯ ಬಟ್ಟಲನ್ನು ಕಚ್ಚಲು ಆ ಕೆಂದುಟಿಯಲ್ಲಿ ಆಸೆ ಹೊತ್ತವರ ಬಯಕೆಯೇ ಚಂದ್ರನ ರೂಪದಲ್ಲಿ ಬಂದು ಸೇರಿತೊ ಎನ್ನುವಂತೆ ಶೋಭಿಸಿದಳು. ವ॥ ಇಂತಹ ಹೊಚ್ಚ ಹೊಸದಾದ ವಾಸನೆಯನ್ನು ಎಂಟೂ ದಿಕ್ಕುಗಳಿಗೆ ಹಬ್ಬಿಸುವ ಶುದ್ಧವಾದ ಮದ್ಯಪಾನವನ್ನು ಕುಡಿಯುತ್ತ ಅದರಿಂದ ಉದ್ರೇಕಗೊಂಡು ಉಕ್ಕಿ ಸೊಕ್ಕಿ ಮೇರೆ ಮೀರಿದ ಸ್ತ್ರೀಯರುಗಳು ಕಣ್ಣಿಗೆ ಅಂದವಾದರು. ಅದು ಹೇಗೆಂದರೆ, ೮೪. ವೀಣೆಯನ್ನು ನುಡಿಸುತ್ತ, ಹೊಳೆವ ಕಿನ್ನರಿಯಲ್ಲಿ ಇನಿದಾದ ಸ್ವರವನ್ನು ಹೊಮ್ಮಿಸುತ್ತ, ಕೊಳಲನೂದುತ್ತ ಸವಿಯನ್ನು ಹೊರಸೂಸುವಂತೆ ಸ್ವರವೆತ್ತಿ ಹಾಡುತ್ತ, ಬಿಡದೆ ಕುಣಿದಾಡುತ್ತ, ಮಹಾರಾಜಾ, ಅಂದು ಸವಿಯಾದ ನೊರೆಯಿಂದ ಕೂಡಿದ ಮದ್ಯ ಸೇವಿಸಿ ಹೆಚ್ಚಿನ ಸ್ಫೂರ್ತಿಗೊಂಡು ಶೋಭಿಸಿದರು. ವ॥ ಮತ್ತೆ ಅದಲ್ಲದೆ ಓರ್ವಳು ಮದ್ಯವನ್ನು ಕುಡಿದು, ೮೫. ಮದ್ಯಪಾನ ಮಾಡುತ್ತಿರುವ ಸ್ತ್ರೀಯರ ಮೊತ್ತವು-ವಿಲಾಸಯುಕ್ತ ಬರಿಗಣ್ಣುಗಳಿಂದಲೂ, ಕಂಪನಯುಕ್ತ ಉಲ್ಲಾಸಪೂರ್ಣ ಗಟ್ಟಿ ನಗುವಿನಿಂದಲೂ, ಜೋಲುವ ದೇಹದಿಂದಲೂ, ಜಾರುವ ಸಿರಿಯಿಂದಲೂ, ಅಕ್ಷರ ವಾಕ್ಯಗಳನ್ನು ಉಚ್ಚರಿಸುವಾಗ ತೊದಲುತ್ತಲೂ, ರೋಮಾಂಚನಗೊಳ್ಳುತ್ತಲೂ, ಹೂಂಕರಿಸುತ್ತಲೂ, ನಗೆದೋರುತ್ತಲೂ, ಚೆನ್ನಾಗಿ ಒಪ್ಪುವಂತೆ ಹಾಡುತ್ತ ಆಡುತ್ತ ಅತಿಶಯವಾಗಿ ಶೋಭಿಸಿತು. ವ॥ ಮತ್ತೆ ಎಳೆಯಪ್ರಾಯದ ಸುಂದರಿಯೋರ್ವಳು ಹೇಗೆ

ಚಲಿಪೆರಲಲೆಪಕ್ಕಿನಿಸಿನಿ
ಸೆಳೆವಳ್ಳಿಗಳಲೆವೋಲ್ಮದಿರಾಪಾನಮದಾ।
ವಿಲಯದೆ ಝೋಂಪಿಸುತುಂ ಮಂ
ಜುಳಮಂಟಪಮಧ್ಯದೊಳ್ಮನಂಗೊಳಿಸಿದ್ದಳ್ ॥ ೮೬ ॥

ಮತ್ತಮದಲ್ಲದೆ,

ವಿಕಿರದಳಿಕುಂತಳಂಸು
ಪ್ರಕಟಿತಕಲಕಂಠಕಂಠಗಳ ನಿನದಂ ಕಂ।
ಟಕಿತಲತಾಂಗಮೆಸೆಯೆ ರಂ
ಜಿಕುಮೊರ್ವಳ್ಮಧುಸಮೇತವನಲಕ್ಷ್ಮಿಯವೋಲ್ ॥ ೮೭ ॥

ಕೆದಱಿದ ಕುಂತಳದಿಂ ದೊ
ಪ್ಪಿದುದಾಗಳ್ಗುಡಿದು ಸೊರ್ಕಿದೊರ್ವಳ ವಿಲಸ।
ದ್ವದನಂ ನಱುಗಂಪಿಂಗೆಱ
ಗಿದ ತುಂಬಿಗಳಿರೆ ತೊಳಪ್ಪ ಹೊಂದಾವರೆಯೋಲ್ ॥ ೮೮ ॥

ಮಿಗೆ ನಿರ್ಮೋಕಮನೊಯ್ಯನೆ
ಜಗುಳ್ಚಿಲ್ತಳತಳಿಪ ನಾಗವಧುವೆನಲೆಸೆದಳ್।
ವಿಗಳಿತಮಾದಂಬರದಿಂ
ಮೃಗಲೋಚನೆ ಸೀಧುಪಾನಗೋಷ್ಠಿಯೊಳೊರ್ವಳ್ ॥ ೮೯ ॥

ಮತ್ತಮದಲ್ಲದೆ,

ಕೈಯ್ಯಂ ಮರದೋಲಾಡು
ತ್ತೊಯ್ಯನೆ ನಡುನುಡುಗಿ ಬಱಲ್ದು ತತ್ತರಿಸುತ್ತೆ।
ಬ್ಬಿಯ್ಯಾ ಯೆನುತುರ್ಬುತ್ತುಂ
ರಯ್ಯನೆ ಕಳ್ಗುಡಿದು ಸೊರ್ಕಿ ರಮಣಿಯರೆಸೆದರ್ ॥ ೯೦ ॥

ಚಂದಗೊಂಡಿದ್ದಳೆಂದರೆ, ೮೬. ಮಂದವಾದ ಗಾಳಿಯ ಬೀಸಿಗೆ ಮೆಲ್ಲನೆ ಎಳೆಯ ಬಳ್ಳಿಗಳು ತೊನೆದಾಡುವಂತೆ ಮದಿರಾಪಾನದಿಂದ ಮತ್ತೇರಿ ತೂಗಾಡುತ್ತ ಮನೋಹರವಾದ ಮಂಟಪದ ಮಧ್ಯಭಾಗದಲ್ಲಿ ಮನಸೆಳೆದಿದ್ದಳು. ವ॥ ಮತ್ತೆ ಅದಲ್ಲದೆ, ೮೭. ದುಂಬಿಯಂತಹ ಕಪ್ಪು ಕೂದಲನ್ನೂ, ಬಳ್ಳಿಯಂತಹ ಶರೀರವನ್ನೂ, ಕೋಗಿಲೆಯಂತಹ ಕಂಠಧ್ವನಿಯನ್ನೂ ಹೊಂದಿ ಮಧು ಪಾತ್ರೆಯನ್ನು ಕೈಯಲ್ಲಿ ಹಿಡಿದ ಓರ್ವಳು ಮಧುಮಾಸದ ವನಲಕ್ಷ್ಮಿಯ ರೀತಿಯಲ್ಲಿ ಆನಂದಿಸಿದಳು. ೮೮. ಪ್ರಕಾಶಿಸುವ ಹೊಂದಾವರೆಯ ನರುಗಂಪಿಗೆ ಮೋಹಿತವಾಗಿ ದುಂಬಿಗಳು ಕವಿಯುವಂತೆ ಕುಡಿದು ಮದವೇರಿದ ಹೆಣ್ಣೋರ್ವಳ ಮುಖಕಮಲವನ್ನು ಅವಳ ಹರಡಿದ ಕೂದಲು ಕವಿಯಿತು. ೮೯. ಮದ್ಯಪಾನ ಗೋಷ್ಠಿಯಲ್ಲಿ ಚಂಚಲಾಕ್ಷಿಯೋರ್ವಳು ವಸ್ತ್ರವಿಹೀನಳಾಗಲು ಅವಳ ಅಂಗದ ಕಾಂತಿಯು, ವಸ್ತ್ರದ ಬಂಧನದಿಂದ ಮುಕ್ತಳಾದ ನಾಗಕನ್ಯೆಯ ದೇಹಕಾಂತಿಯಂತೆ ಶೋಭಿಸಿತು. ವ॥ ಮತ್ತೆ ಅದಲ್ಲದೆ, ೯೦. ಚೆಲುವುದೋರುತ್ತ ರಮಣಿಯರು ಕಳ್ಳನ್ನು ಕುಡಿದು ಸೊಕ್ಕಿ ಮೈಮರೆತು

ಇಂತು ಮದಿರಾಪಾನಮಂ ಮಾಡಿ ಯುರ್ಕಿ ಸೊರ್ಕಿ ನಗುತುಂ ರ್ಘೋಂಪಿಸುತುಂ ಪಾಡುತುಂ ಕುಣಿಯುತುಂ ಮಣಿಯುತುಂ ಮಾಲುತುಂ ಜೋಲುತುಂ ತೇಲುತುಂ ಮಲೆಯುತುಂ ಮನಂಗೊಳಿಪ ತದ್ವನಿತಾಜನ ಮಧ್ಯದಲ್ಲಿ,

ಮುನ್ನಾದತ್ತಾತ್ರೇಯಂ
ಕನ್ನೆಯರೊಡನಿರ್ದ ತೆರದೆ ಕಪಟದಿನಿರ್ದಂ।
ತನ್ನಾರೀಜನಮಧ್ಯದೊ
ಳುನ್ನತಮುದದಿಂ ಚಿದಂಗಮುನಿ ಜನನಾಥಾ ॥ ೯೧ ॥

ಎಳವಳ್ಳಿಗಳೆಡೆಯೊಳ್ಕಂ
ಗೊಳಿಸುವ ಮಾಕಂದದಂತೆ ತದ್ವನಿತಾಸಂ।
ಕುಳಮಧ್ಯದೊಳೆಸೆದಂ ಮಂ
ಜುಳಮಧುಪಾನಾರ್ತಿಯಿಂ ಚಿದಂಗಮುನೀಂದ್ರಂ ॥ ೯೨ ॥

ಅವರೀಂಟಿ ಕೊಡಲ್ಕರಮು
ತ್ಸವದಿಂ ತಾನೀಂಟಿ ಮಗುಳ್ದವರ್ಗೀವಂ ಮ।
ದ್ಯವನಂತಾಪಾಮಾಕ್ಷೀ
ನಿವಹದೊಳೋಲಾಡುತೊಪ್ಪಿದಂ ಮುನಿನಾಥಂ ॥ ೯೩ ॥

ಇಂತತಿವಿಲಾಸದಿಂದಂ ತದ್ವನಿತಾಜನಮಧ್ಯದೊಳ್ಮನಂಗೊಳಿಪಾ ಚಿದಂಗಮಹಾಋಷೀಶ್ವರನಿರವಂ ಕಂಡಚ್ಚರಿವಟ್ಟುಚ್ಚವಡಂಗಿ ಭಕ್ತಿ ಬಾಡಿ ಮೋಹಂಮೂವಡಿಯಾಗಲಿನಿತು ದಿನವೀಋಷಿವರೇಣ್ಯನಗ್ರಗಣ್ಯ ಪುಣ್ಯಾತ್ಮನೆಂದಿರ್ದೆನಲ್ಲದೀದುರ್ಮಾರ್ಗದೊಳ್ವರ್ತಿಸುವನೆಂದಱಿದುದಿಲ್ಲವೆಂದರ್ಚನೆಗೆ ತಂದಚ್ಚಪೊಚ್ಚಪೊಸ ಪೂಗಳಂ ಬಿರ್ಚಿ ಬೆಚ್ಚರದಿಂದಲ್ಲಿಯಾ ಮಂಟಪದೆಡೆಯೊಳಾಂ ಚಿಂತಿಸುತ್ತಮಿರೆಯಿರೆ,

ಓಲಾಡುತ್ತ ಮೆಲ್ಲನೆ ನಡುಗಿ ಆಯಾಸಗೊಂಡು ತತ್ತರಿಸಿ ಬೀಳುತ್ತ ಮೇಲೆದ್ದು ಅಯ್ಯೋ ಎನ್ನುತ್ತ, ಉಬ್ಬುತ್ತ ಅಂದಗೊಂಡರು. ವ॥ ಹೀಗೆ ಮದಿರಾಪಾನ ಮಾಡಿ ಉಕ್ಕಿ ಉಕ್ಕಿ ನಡುಗುತ್ತ, ತೂಗಾಡುತ್ತ, ಹಾಡುತ್ತ, ಕುಣಿಯುತ್ತ, ಬಾಗುತ್ತ, ವಾಲುತ್ತ, ಜೋಲುತ್ತ, ತೇಲುತ್ತ, ಗರ್ವಿಸುತ್ತ, ಮನಸೆಳೆಯುವ ಆ ಸ್ತ್ರೀಯರ ನಡುವೆ, ೯೧. ಜನನಾಥಾ, ಹಿಂದೆ ಆ ದತ್ತಾತ್ರೇಯನು ಕನ್ನೆಯರೊಡನಿದ್ದಂತೆ ಚಿದಂಗ ಮುನಿಯು ಕಪಟದಿಂದ ಆ ಸ್ತ್ರೀಯರ ನಡುವೆ ಅತ್ಯಾನಂದದಿಂದಿದ್ದನು. ೯೨. ಎಳೆಯ ಬಳ್ಳಿಗಳ ನಡುವೆ ರಾರಾಜಿಸುವ ಮಾವಿನ ಮರದಂತೆ ಆ ವನಿತೆಯರ ನಡುವೆ ಮಧುರವಾದ ಮಧುವನ್ನು ಸವಿಯುವ ಬಯಕೆಯಿಂದ ಚಿದಂಗ ಮುನೀಂದ್ರನು ಶೋಭಿಸಿದ್ದನು. ೯೩. ಅವರು ಮಧುವನ್ನು ಸವಿದು ಕೊಡಲು ಅತ್ಯಾನಂದದಿಂದ ತಾನದನ್ನು ಕುಡಿದು, ಮತ್ತೆ ಅವರುಗಳಿಗೆ ಮದ್ಯವನ್ನು ಕೊಡುವನು. ಹೀಗೆ ಮುನಿನಾಥನು ಚಂಚಲಾಕ್ಷಿಯರ ನಡುವೆ ಓಲಾಡುತ್ತ ಅಂದಗೊಂಡನು. ವ॥ ಹೀಗೆ ಹೆಚ್ಚಿನ ಉಲ್ಲಾಸದಿಂದ ಆ ಸ್ತ್ರೀಯರುಗಳ ಮಧ್ಯೆ ಮನ ಸೆಳೆಯುವ ಚಿದಂಗ ಮಹಾಮುನಿಯ ಸ್ಥಿತಿಯನ್ನು ಕಂಡು ಅಚ್ಚರಿಗೊಂಡು 'ಹಿರಿತನವು ಹರಡಿ, ಭಕ್ತಿ ಬಾಡಿ, ಮೋಹವು ಆವರಿಸಿರಲು ಇಲ್ಲಿಯವರೆಗೆ ಈ ಋಷಿಶ್ರೇಷ್ಠನನ್ನು ಮಹಾಪುಣ್ಯಾತ್ಮನೆಂದಿದ್ದೆನೇ ಹೊರತು ಈ ರೀತಿ ವರ್ತಿಸುವನೆಂದು ಭಾವಿಸಿರಲಿಲ್ಲ' ಎಂದು ಪೂಜೆಗೆ ತಂದಿದ್ದ ಅಚ್ಚ ಹೊಸದಾದ ಹೂವುಗಳನ್ನು

ಈಪರಿಯಿಂ ಚಿಂತಿಸುತುರು
ತಾಪಂ ಪೊಂದಿರೆ ಮದೀಯಭಾವವನಱಿದಾ।
ತಾಪಸವರೇಣ್ಯನೊಲ್ದುಂ
ತಾಂ ಪಸರಿಸಿದಿಂದ್ರಜಾಲಮಂ ಪೋಗಿಸಿದಂ ॥ ೯೪ ॥

ಮುಚ್ಚಿದ ಮೇಘಮಾಲೆ ಪರಿಯಲ್ ಪರಿಶೋಭಿಪ ಪೂರ್ಣಚಂದ್ರನಂ
ತಚ್ಚಿಗತೀವಚೋದ್ಯಮನೊಡರ್ಚುತೆ ತೋರ್ಪ ಮಹೇಂದ್ರಜಾಳಕಂ।
ಬಚ್ಚಮದಾಗಿ ಪೋಗಿರೆ ಚಿದಂಗಮುನೀಶ್ವರನಂದು ಚೇತನ
ಕ್ಕಚ್ಚರಿಪುಟ್ಟಲೊರ್ವನೆ ವಿರಾಜಿಸಿದಂ ನರನಾಥಕುಂಜರಾ ॥ ೯೫ ॥

ಬಾಸಣೆಸಿದತುಳಮೋಹಮು
ದೋಸರಿಸಲ್ ಥಳಥಳಿಪ್ಪ ವಿಮಲಾತ್ಮನವೋಲ್।
ಪೈಸರಿಸಲಿಂದ್ರಜಾಲಕ
ಮಾಸನ್ಮುನಿಯೊರ್ವನೊಪ್ಪಲಾಂ ನಿಟ್ಟಿಸಿದಂ ॥ ೯೬ ॥

ಕಂಡಾಮುನಿವಲ್ಲಭನು
ಚ್ಚಂಡಮಹಾಮಹಿಮೆಯಂ ಬೆಱಗುವಟ್ಟುಭಯಂ।
ಗೊಂಡಾನೆಱಗಲ್ಮುನಿಮಾ
ರ್ತಾಂಡಂ ಖತಿಗೊಂಡು ನುಡಿದನಿಂತೆಂದು ನೃಪಾ ॥ ೯೭ ॥

ಎಲೆ ಶುಕ ನೀಂ ಮಚ್ಛಿಷ್ಯಾ
ವಳಿಯೊಳ್ಗುರುಭಕ್ತನೆಂದು ಬೆರತಿರ್ಪೈ ಚಂ।
ಚಲ ಕೇಳಾದಿಯೊಳವನಿಪ
ತಿಲಕಂ ಬಿಲ್ಲಮನೆನಿಪ್ಪರಾಯನ ಕಥೆಯಂ ॥ ೯೮ ॥

ಎಂದಿಂತು ಎನಗಾಭಿಲ್ಲಮರಾಯನ ಕಥೆಯಂ ತನ್ಮುನೀಂದ್ರ ಚಂದ್ರಮಂ ಪೇೞ್ದಿಂ,

ಚಲ್ಲಿ ದಿಗ್ಭ್ರಮೆಗೊಂಡು ಆ ಮಂಟಪದಲ್ಲಿ ನಾನು ಚಿಂತಿಸುತ್ತಿರಲು, ೯೪. ಈ ರೀತಿ ಚಿಂತಿಸುತ್ತ ಹೆಚ್ಚಿನ ಸಂಕಟವನ್ನು ಹೊಂದಿರಲು ನನ್ನ ಭಾವವನ್ನು ತಿಳಿದು ಆ ಮುನಿಶ್ರೇಷ್ಠನು ಪ್ರೀತಿಯಿಂದ ತಾನು ಹರಡಿದ್ದ ಇಂದ್ರಜಾಲವನ್ನು ಇಲ್ಲವಾಗಿಸಿದನು. ೯೫. ನರನಾಥ ಕುಂಜರಾ, ಕವಿದ ಮೋಡಗಳು ಸರಿಯಲು ಚೆನ್ನಾಗಿ ಶೋಭಿಸುವ ಪೂರ್ಣಚಂದ್ರನಂತೆ ದೃಷ್ಟಿಗೆ ಅತ್ಯಾಶ್ಚರ್ಯವನ್ನುಂಟುಮಾಡುತ್ತ ಕಾಣುವ ಮಹೇಂದ್ರ ಜಾಲವು ಹುರುಳಿಲ್ಲದ್ದಾಗಲು ಚಿದಂಗ ಮುನೀಶ್ವರನು ಅಂದು ಚೇತನಕ್ಕೆ ಅಚ್ಚರಿಯಾಗುವಂತೆ ಒಬ್ಬನೇ ಆಗಿ ರಂಜಿಸಿದನು. ೯೬. ಕವಿದ ವ್ಯಾಮೋಹವು ನಿವಾರಣೆಯಾಗಲು ಥಳಥಳಿಸುವ ಪರಿಶುದ್ಧ ಆತ್ಮನ ರೀತಿಯಲ್ಲಿ ಇಂದ್ರಜಾಲವು ಹಿಮ್ಮೆಟ್ಟೆ ಆ ಸನ್ಮುನಿಯೊಬ್ಬನೆ ಶೋಭಿಸಿರಲು ನಾನು ಅವನನ್ನು ನೋಡಿದೆನು. ೯೭. ಮಹಾರಾಜಾ, ಮುನಿಗಳೊಡೆಯನ ಪ್ರಚಂಡ ಮಹಿಮೆಯನ್ನು ನೋಡಿ ಅಚ್ಚರಿಪಟ್ಟು ಭಯಗೊಂಡು ನಾನು ಅವನಿಗೆ ನಮಸ್ಕರಿಸಲು, ಮುನಿಮಾರ್ತಾಂಡನು ಕೋಪಗೊಂಡು ಹೀಗೆಂದು ನುಡಿದನು. ೯೮. ಎಲೆ ಗಿಳಿಯೆ, ನೀನು ನನ್ನ ಶಿಷ್ಯರುಗಳಲ್ಲಿ ಗುರುಭಕ್ತನೆಂದು ಗರ್ವಿಸಿದ್ದೆ. ಚಂಚಲನೇ ಮಹಾರಾಜರಲ್ಲಿ ತಿಲಕಪ್ರಾಯನಾಗಿ ಹಿಂದೆ ಇದ್ದ ಬಿಲ್ಲಮನೆಂಬ ರಾಜನ ಕಥೆಯನ್ನು ಕೇಳು. ವ॥ ಎಂದು ನನಗೆ ಆ ಮುನೀಂದ್ರ ಚಂದ್ರಮನು ಆ

ಅದೆಂತೆಂದೊಡೆ,

ಕೇಳೆಲೆ ದುರಾತ್ಮ ತದ್ಭೂ
ಪಾಲೋತ್ತಮನೊಂದುದಿನದೊಳುತ್ಕಟಮದಶುಂ।
ಡಾಲಮನಡರ್ದೊಗುಮಿಗೆ ವೈ
ಹಾಳಿಯನುನ್ನತವಿಲಾಸದಿಂ ಪೊಱಮಟ್ಟಂ ॥ ೯೯ ॥

ಪಟ್ಟಣಮಂ ಪೊಱವಟ್ಟಳ
ವಟ್ಟಿರೆ ನಿಜರಾಜಚಿಹ್ನಮತಿಸಂಭ್ರಮದಿಂ।
ಬಟ್ಟೆವಿಡಿದಾನೃಪಾಲಂ
ನೆಟ್ಟನೆ ವೈಹಾಳಿಯಾಗಿ ಬರುತಿರ್ಪಾಗಳ್ ॥ ೧೦೦ ॥

ನೂಲ್ಗಟ್ಟಿ ಪೊಯ್ದಪೊಸಗುಡಿ
ಸಲ್ಗಳ್ತವೆ ನಟ್ಟಗಳೆಗಳಿರಿಸಿದದೊಳ್ಗಳ್।
ಕಾಲ್ಗಟ್ಟಿಮೇವ ಕಟ್ಟ್ಯಿಯ
ಸಾಲ್ಗಳಿರಲ್ಪಿಡೆಸೆದುದು ಕೊಲ್ಲಟಿಜನರಾ ॥ ೧೦೧ ॥

ಇಂತೊಂದು ಕೆಲದೊಳ್ಮನಂಗೊಳಿಪ ಡೊಂಬರ ಬೀಡನಟ್ಟ್ಯಿಯಿಂದಂ ತದ್ಭಿಲ್ಲಮರಾಯಂ ನೋಡುತ್ತುಂ ಬರೆವರೆ,

ಅಂಬುಜಪತ್ರನೇತ್ರದ ಸುಧಾಕರವಕ್ತ್ರದ ಚಾರುಬಾಲರೋ
ಲಂಬಕಜಾಲಕುಂತಳದ ತುಂಗಕುಚಂಗಳ ತನ್ವಿಯೊರ್ವ್ವನ।
ಲ್ಡೊಂಬಿತಿಗೂಡಿ ಯಾನೃಪನ ದೇಶಿಕನೊಲ್ದುಣುತಿರ್ದನಂತದಂ
ತಾಂ ಬರುತಂದು ಕಂಡು ನಡೆನೋಡಿದನ್ಯೆದೆ ತದುದ್ಧಭೂವರಂ ॥ ೧೦೨ ॥

ಇಂತು ಡೊಂಬಿತಿಯೊಡನುಂಬಾಚಾರ್ಯನಂ ಕಂಡತಿಭಕ್ತಿಯಿಂದಾನೆಯಂದೆಟ್ಟಿಂದಭಿವಂದಿಸಿ ಮಗುಟಿಡ್ಡಾಗುರುಪ್ರಸಾದಕ್ಕೆ ಮೆಯ್ಯೊಡ್ಡಿ ನಿಲ್ತು,

ಭಿಲ್ಲಮರಾಯನ ಕಥೆಯನ್ನು ಹೀಗೆ ಹೇಳತೊಡಗಿದನು. ಅದು ಹೇಗೆಂದರೆ, ೯೯. ಎಲೆ ದುರಾತ್ಮನೆ ಕೇಳು, ಆ ಭೂಪಾಲೋತ್ತಮನು ಒಂದು ದಿನ ಮದ್ದಾನೆಯನ್ನು ಏರಿ ಹೆಚ್ಚಳದಿಂದ ವೈಹಾಳಿಗೆಂದು ಅತಿಸಂಭ್ರಮದಿಂದ ನಡೆದನು. ೧೦೦. ತನ್ನ ರಾಜ ಚಿನ್ಹೆಗಳನ್ನು ಹೊಂದಿ ಅತಿ ಸಂಭ್ರಮದಿಂದ ಪಟ್ಟಣದಿಂದ ಹೊರಬಂದು ಮಾರ್ಗವನ್ನನುಸರಿಸಿ ನೇರವಾಗಿ ವೈಹಾಳಿಗೆಂದು ಬರುತ್ತಿರುವಾಗ, ೧೦೧. ಹಗ್ಗ ಕಟ್ಟಿ ಹಾಕಿದ ಹೊಸಗುಡಿಸಲುಗಳು, ಚೆನ್ನಾಗಿ ನಟ್ಟ ಸಾಲುಗಳು, ಕಾಲುಕಟ್ಟಿ ಮೇವ ಕತ್ತೆಯ ಸಾಲುಗಳು ಇರುತ್ತಿರಲು ಡೊಂಬ ಜನರ ವಾಸಸ್ಥಾನವು ರಂಜಿಸಿತು. ವ॥ ಹೀಗೆ ಒಂದು ಪಕ್ಕದಲ್ಲಿ ಮನಸೆಳೆಯುವ ಡೊಂಬರ ಬೀಡನ್ನು ಪ್ರೀತಿಯಿಂದ ಆ ಭಿಲ್ಲಮರಾಯನು ನೋಡುತ್ತ ಬರುತ್ತಿರಲು, ೧೦೨. ಕಮಲದಳ ನೇತ್ರದ, ಚಂದ್ರನಂತಿರುವ ಮುಖದ, ಮನೋಹರವಾದ ಎಳೆಯ ದುಂಬಿಗಳಂತಿರುವ ಕೂದಲಿನ, ತೋರಮೊಲೆಗಳ ಡೊಂಬಿತಿಯೋರ್ವಳ ಕೂಡ ಆ ರಾಜನ ಗುರುವು ಪ್ರೀತಿಯಿಂದ ಊಟ ಮಾಡುತ್ತಿದ್ದನು. ಅದನ್ನು ಆ ಮಹಾರಾಜನು (ವೈಹಾಳಿಯಲ್ಲಿ) ಬರುತ್ತಿರುವಾಗ ಕಂಡು ಅವನ ನಡತೆಯನ್ನು ಚೆನ್ನಾಗಿ ಗಮನಿಸಿದನು. ವ॥ ಹೀಗೆ ಡೊಂಬಿತಿಯೊಡನೆ ಊಟ ಮಾಡುವ ಆಚಾರ್ಯನನ್ನು ಕಂಡು ಹೆಚ್ಚಿನ ಭಕ್ತಿಯಿಂದ ಆನೆಯಿಂದ

ಪರಮಪ್ರಸಾದಮಂ ಮ
ದ್ಗುರುವೆ ದಯಂಗೆಯ್ವುದೆಂದು ನಿರ್ಲಿಪ್ತಾರ್ಣಭೂ।
ವರನಂ ನಿಟ್ಟಿಸಿ ಲಜ್ಜಾ
ಭರದಿಂ ತಲೆವಾಗಿದಂ ತದೀಯಾಚಾರ್ಯಂ ॥ ೧೦೩ ॥

ಲಜ್ಜೆಯಿಂ ತಲೆವಾಗಿ ತೋರ್ಪ ತದೀಯದೇಶಿಕನಂದಮಂ
ಪಜ್ಜಳಿಪ್ಪುರುಕೀರ್ತಿಕಾಮಿನಿಯಾಣ್ಮನಿಟ್ಟಿಸಿ ಯಿಟ್ಟನ।
ಲ್ಪಜ್ಜೆಯಂ ತವೆ ಕೀೞದೇಕಮನಸ್ಕನಂದಮರ್ದೊಪ್ಪಿದಂ
ಸಜ್ಜನಾಗ್ರಣಿ ಭಿಲ್ಲಮಕ್ಷಿತಿಪಾಲಕಂ ಘನಭಕ್ತಿಯಿಂ ॥ ೧೦೪ ॥

ಇಂತಮಂದಮಂದಾಕ್ಷದಿಂ ತಲೆವಾಗಿರ್ಪ ದೇಶಿಕನಂ ತದ್ಗುರುಪ್ರಸಾದಮಂ ಪಾರ್ದು ಸಾರ್ದತಿಭಕ್ತಿಭರದಿಂದಿರ್ಪ ಭಿಲ್ಲಮರಾಯನಿರವಂ ಕಂಡೊಡನುಣುತಿರ್ದ ಡೊಂಬಿತಿ ನಗುತಂ ಪಿಡಿಯೆಂದುಚ್ಛಿಷ್ಟಂಕುಡೆ,

ಎರಡಿಲ್ಲದ ಭಕ್ತಿಯೊಳಾ
ತರುಣೀಮಣಿ ಯಿತ್ತ ತತ್ಪ್ರಸಾದಮನತ್ಯಾ।
ದರದಿಂದೆ ಭಿಲ್ಲಮಂ ಸ್ವೀ
ಕರಿಸೆ ಶಿವಂ ಮೆಚ್ಚಿ ಮುಂದೆ ನಿಂದಿಂತೆಂದಂ ॥ ೧೦೫ ॥

ಮೆಚ್ಚಿದೆನೆಲೆ ನೃಪ ನಿನ್ನಯ
ನಿಚ್ಚಟಗುರುಭಕ್ತಿಗೇಳು ಕೈಲಾಸಕೆನಲ್।
ಸಚ್ಚಿನ್ಮಯಗುರುವಂ ಬಿ
ಟ್ಟುಚ್ಚವದಿಂ ಬಾರೆನೊರ್ವನೆಂದಂ ಮಹಿಪಂ ॥ ೧೦೬ ॥

ಇಳಿದು ಬಂದು ನಮಸ್ಕರಿಸಿ ಮತ್ತೆ ಆ ಗುರುವಿನ ಪ್ರಸಾದಕ್ಕೆ ಮೆಯ್ಯೊಡ್ಡಿ ನಿಂತು, ೧೦೩. 'ಎನ್ನಯ ಗುರುವೆ, ಪರಮ ಪ್ರಸಾದವನ್ನು ಅನುಗ್ರಹಿಸುವುದು' ಎಂದು ನಿರ್ಲಿಪ್ತನಾಗಿ ನಿಂತ ಮಹಾರಾಜನನ್ನು ನೋಡಿ ಅವನ ಗುರು ತಲೆ ತಗ್ಗಿಸಿದನು. ೧೦೪. ನಾಚಿಕೆಯಿಂದ ತಲೆ ತಗ್ಗಿಸಿದ ತನ್ನ ಗುರುವಿನ ಸ್ಥಿತಿಯನ್ನು ಪ್ರಜ್ವಲಿಸುವ ವಿಶಾಲ ಕೀರ್ತಿಕನ್ಯೆಯ ಒಡೆಯನು ನೋಡಿ ಮುಂದಿಟ್ಟ ಪಾದವನ್ನು ಹಿಂದಕ್ಕೆ ತೆಗೆದುಕೊಳ್ಳದೆ, ಒಂದೇ ಮನಸ್ಸಿನಿಂದ ವಿಶೇಷ ಭಕ್ತಿಯಿಂದ ಕೂಡಿ, ಸಜ್ಜನರಲ್ಲಿ ಮುಖ್ಯನಾದ ಭಿಲ್ಲಮಮಹಾರಾಜನು ಶೋಭಿಸಿದನು. ವ॥ ಹೀಗೆ ಮಂಜು ಮಂಜಾದ ದೃಷ್ಟಿಯಿಂದ ತಲೆಬಾಗಿರುವ ಗುರುವನ್ನು, ತನ್ನ ಗುರುವಿನ ಪ್ರಸಾದವನ್ನು ಬಯಸಿ ಸಮೀಪಿಸಿ, ಹೆಚ್ಚಿನದಾದ ಭಕ್ತಿಯಿಂದ ಕೂಡಿರುವ ಭಿಲ್ಲಮರಾಯನ ಸ್ಥಿತಿಯನ್ನು ನೋಡಿ ದೇಶಿಕನೊಡನೆ ಊಟಮಾಡುತ್ತಿದ್ದ ಡೊಂಬಿತಿ ನಗುತ್ತ, ಹಿಡಿ ಎಂದು ಎಂಜಲನ್ನು ಕೊಡಲು, ೧೦೫. ಎರಡಿಲ್ಲದ ಭಕ್ತಿಯಲ್ಲಿ ಆ ತರುಣಿಯು ಕೊಟ್ಟ ಆ ಪ್ರಸಾದವನ್ನು ಅತಿ ಆದರದಿಂದ ಭಿಲ್ಲಮನು ಸ್ವೀಕರಿಸಿರಲು [ಅದಕ್ಕೆ] ಶಿವನು ಮೆಚ್ಚಿ [ಅವನ] ಮುಂದೆ ನಿಂದು ಹೀಗೆಂದನು. ೧೦೬. 'ಎಲೆ ಮಹಾರಾಜಾ ನಿನ್ನ ನಿಷ್ಠಾಪೂರ್ಣವಾದ ಗುರುಭಕ್ತಿಗೆ ಮೆಚ್ಚಿದೆ. ಎದ್ದು ನಡೆ ಕೈಲಾಸಕ್ಕೆ' ಎನ್ನಲು ಅದಕ್ಕೆ ಮಹಾರಾಜನು ನನ್ನ ಒಳ್ಳೆಯವರಾದ ಚಿನ್ಮಯ ಗುರುಗಳನ್ನು ಬಿಟ್ಟು ಉತ್ಸವದಿಂದ ನಾನೊಬ್ಬನೇ [ಕೈಲಾಸಕ್ಕೆ]

ಗುರುವಂ ಬಿಟ್ಟರಸಂ ತ
ದ್ಗುರುವಾಡೊಂಬಿತಿಯನಂತವಳ್ಬಿಂದಮನೋ।
ಸರಿಸಿ ಗಡ ಬಾರೆನೆನೆ ಶಂ
ಕರನುರುಸಾಲೋಕ್ಯಪದಮನನಿಬರ್ಗಿತ್ತಂ ॥ ೧೦೭ ॥

ಅಲರಿಂದೆ ಮಂಜಿ ಬಂದುಱು
ತಲೆಗೇಱಿದ ತೆಱದೆ ಬಂದ ಬಿಂದಮನಭವಾ।
ಚಲದೊಳಿರವೇೞುತುಂ ನೃಪ
ತಿಲಕಂಗಿತ್ತಂ ಮಹೇಶ್ವರಂ ಗಣಪದಮಂ ॥ ೧೦೮ ॥

ಅದಱಿಂದಿಹಪರದುರುಸೌ
ಖ್ಯದ ಮೂಲಂ ಗುರುವೆನುತ್ತಮಱಿದನಿಶಂ ನಂ।
ಬದವಂ ನಿನ್ನಂತೇಂ ಲೋ
ಕದೊಳುನ್ನತಪಾಪಿ ಯೆಂದು ಮಗುೞ್ದಿಂತೆಂದಂ ॥ ೧೦೯ ॥

ಗುರುವಿನೊಳವಗುಣಗಣಮಂ
ಪರಿಕಿಪರೆ ದುರಾತ್ಮ ನಿನ್ನ ಪೆಸರಾಕೃತಿಯಂ।
ಧರಿಸಿ ಸಮಂತಜ್ಞಾನದೆ
ಚರಿಸೆನುತುಂ ಶಾಪವಿತ್ತನಂದಾಮುನಿಪಂ ॥ ೧೧೦ ॥

ಎಂದಿಂತು ಶಾಪಮಂ ಕೊಡ
ಲಂದಾಂ ಕಳೆಯಱಿದು ನಮಿಸಿ ಚಿತ್ಕಳೆಯೆನಗಿಂ।
ನೆಂದಿಂಗೊಗೆವುದು ಪೇೞೆಲೆ
ತಂದೆಯೆನಲ್ಮಗುೞ್ದು ಮುನಿಪನಂದಿಂತೆಂದಂ ॥ ೧೧೧ ॥

ಬರಲಾರೆನು' ಎಂದನು. ೧೦೭. ಗುರುವನ್ನು ಬಿಟ್ಟು ಅರಸನೂ, ಆ ಗುರುವು ಆ ಡೊಂಬಿತಿಯನ್ನೂ, ಅವಳು ತನ್ನ ಗುಂಪನ್ನೂ ಅಯ್ಯೋ ಬಿಟ್ಟು ಬರಲಾರೆವು ಎನ್ನಲು ಶಿವನು ಎಲ್ಲರಿಗೂ ಸಾಲೋಕ್ಯ ಪದವನ್ನು ಅನುಗ್ರಹಿಸಿದನು. ೧೦೮. ಹೂವಿನಿಂದ ದಾರ ಬಂದು ತಲೆಗೆ ಏರಿದಂತೆ ಬಂದ ಗುಂಪನ್ನು ಕೈಲಾಸದಲ್ಲಿರಲು ಹೇಳಿ ಶಿವನು ನೃಪತಿಲಕನಿಗೆ ಗುಣಪದವಿಯನ್ನು ಅನುಗ್ರಹಿಸಿದನು. ೧೦೯. ಆದ ಕಾರಣ ಇಹ-ಪರಗಳಲ್ಲಿ ಹೆಚ್ಚಿನ ಸುಖಕ್ಕೆ ಮೂಲಕಾರಣನು ಗುರುವು ಎಂದು ತಿಳಿದೂ ನಿರಂತರವಾಗಿ ನಂಬದವನು ಲೋಕದಲ್ಲಿ ನಿನ್ನಂತೆ ಕಡುಪಾಪಿಯು, ಎಂದು ಹೇಳಿ ಮತ್ತೆ ಹೀಗೆಂದನು. ೧೧೦. ಗುರುವಿನಲ್ಲಿರುವ ಕೆಟ್ಟ ಗುಣಗಳನ್ನು ಪರೀಕ್ಷಿಸುವರೆ? ದುರಾತ್ಮ ನಿನ್ನ ಹೆಸರಿನ ರೂಪ ಧರಿಸಿ ಹೆಚ್ಚಿನ ಅಜ್ಞಾನದಿಂದ ಕೂಡಿ ಸಂಚರಿಸೆಂದು ಆ ಮುನಿ ಶಾಪವಿತ್ತನು. ೧೧೧. ಹೀಗೆ ಶಾಪವನ್ನು ಕೊಡಲು ಆ ಕ್ಷಣವೇ ನನ್ನ ರೂಪು ನಷ್ಟವಾಗಲು ನಾನು ಮುನಿಗೆ ನಮಸ್ಕರಿಸಿ 'ಎಲೆ ತಂದೆಯೇ, ನನಗೆ ಚಿತ್ಕಳೆಯು ಇನ್ನೆಂದಿಗೆ ಉಂಟಾಗುವುದು'

ನೀನುಮಾವರದಿಂದೆ ಪುಟ್ಟಿದ ತತ್ಕುಮಾರಿಯ ಹಸ್ತದೊ
ಳ್ಮಾನಸಕ್ರಿಯೆಯಿಲ್ಲದೆಂದುಱ್ ಸಿಲ್ಕುವೈ ನಿನಗಂದು ಸು।
ಜ್ಞಾನಮುದ್ಭವಮಾಗಲಿಂದಿನ ಜನ್ಮಮೀಕ್ಷಿಸಲಕ್ಕುಮೆಂ
ದಾನಿರಾಮಯನೊಲ್ದು ಪೇಱ್ ಮಗುೞ್ದು ಬಿನ್ನಪವೆಂದೆನಾಂ ॥ ೧೧೨ ॥

ಆದೊಡೆನಗಮರ್ದ ಸುಜ್ಞಾ
ನೋದಯಮಾದೆನಿತು ದಿವಸಕಿಂತೀಜನ್ಮಂ।
ಪೋದಪುದೊರೆವುದೆನಲ್ಕಾಗು
ಟ್ಪಾದಿವ್ಯಮುನೀಂದ್ರನೊಲ್ದು ಮಗುೞ್ದಿಂತೆಂದಂ ॥ ೧೧೩ ॥

ಕರಪೀಡನಮಕ್ಕುಂ ತ
ತ್ತರುಣಿಗದೆಂದಾಚತುರ್ಥದಿವಸಾಂತರದೊಳ್।
ಪರಿಮಳದೋಕುಳಿಜಳದೊಳ್
ಪಿರಿದುಂ ನೀಂ ತೊಯ್ದೊಡಂದು ಶಾಪವಿಶಾಪಂ ॥ ೧೧೪ ॥

ಎಂದಿಂತು ಶಾಪಮಂ ಕೊಟ್ಟು ವಿಶಾಪಕಾರಣಕಾಲಮಂ ಪೇೞ್ದು ತನ್ಮುನೀಂದ್ರಚಂದ್ರಮನ ದೃಶ್ಯಮಾಗಲನಿತರೊಳೆನಗೆ ಮಾನವಜನ್ಮಂ ಪೋಗಿ ಶುಕಜನ್ಮಂ ಪ್ರವೇಶಿಸೆ,

ಮುಂಚುವೆಱಂಕೆಯಾಗೆ ನಿಡಿದೋಳ್ಗಳಪಾರತನೂರುಹವ್ರಜಂ
ಮಿಂಚುವ ತುಪ್ಪುಳಾಗೆ ನಖರಾವಳಿ ಬಲ್ಗಱಿಯಾಗೆ ನಾಸಿಕಂ।
ಚಂಚುವದಾಗಲಾಗಳ ನರಾಕೃತಿ ಗಕ್ಕನೆ ಪೋಗಿ ರಾಜಕೀ
ರಾಂಚಿತಜನ್ಮವೆನ್ನಮರ್ದಪ್ಪಿದುದುದ್ಭಟರಾಜಕುಂಜರಾ ॥ ೧೧೫ ॥

ಎನ್ನಲು ಮುನಿಯು ಮತ್ತೆ ಹೀಗೆಂದನು. ೧೧೨. "ನೀನು ಗಿರಿಜೆಯ ವರದಿಂದ ಹುಟ್ಟಿದ ಕುಮಾರಿಯ ಕೈಯಲ್ಲಿ ಮಾನಸ ಕ್ರಿಯೆಯಿಲ್ಲದೆ ಎಂದಿಗೆ ಸಿಗುವೆಯೋ ಅಂದು ನಿನಗೆ ಸುಜ್ಞಾನೋದಯವಾಗುವುದು, ಹಿಂದಣ ಜನ್ಮವನ್ನು ನೋಡಲು ಸಾಧ್ಯವಾಗುವುದು" ಎಂದು ರೋಗಗಳಿಂದ ಮುಕ್ತನಾದ ಆ ಮುನಿಯು ಹೇಳಲು ನಾನು ಮತ್ತೆ ಬಿನ್ನವಿಸಿದೆನು. ೧೧೩. "ಹಾಗಾದರೆ, ನನಗೆ ಸುಜ್ಞಾನೋದಯವಾದ ಎಷ್ಟನೆಯ ದಿವಸಕ್ಕೆ ಈ ಜನ್ಮ ನಿವಾರಣೆಯಾಗುವುದೆಂಬುದನ್ನು ತಿಳಿಸುವುದು" ಎನ್ನಲು ಆ ದಿವ್ಯ ಮುನೀಂದ್ರನು ಪ್ರೀತಿಯಿಂದ ಮತ್ತೆ ಹೀಗೆಂದನು. ೧೧೪. ಅಂದಿನ ನಾಲ್ಕನೆಯ ದಿವಸ ಮುಗಿಯುವುದರಲ್ಲಿಯೇ ಆ ತರುಣಿಯು ತನ್ನ ಅಂಗೈಯನ್ನು ತೀಡಿಕೊಳ್ಳುವಳು. ಆಗ ನೀನು ಪರಿಮಳದ ಓಕುಳಿ ನೀರಿನಲ್ಲಿ ಚೆನ್ನಾಗಿ ಅವಳ ಕೈಯನ್ನು ತೊಳೆದರೆ ಅಂದು ನಿನಗೆ ಶಾಪ ವಿಮೋಚನೆಯಾಗುತ್ತದೆ. ವ॥ ಹೀಗೆ ಶಾಪವನ್ನು ಕೊಟ್ಟು ಶಾಪ ನಿವಾರಣೆಯ ಕಾಲವನ್ನು ಹೇಳಿ ಆ ಮುನೀಂದ್ರ ಚಂದ್ರಮನು ಅದೃಶ್ಯನಾಗಲು ಅಷ್ಟರಲ್ಲಿ ನನಗೆ ಮಾನವ ಜನ್ಮ ಹೋಗಿ ಗಿಳಿಯ ಜನ್ಮವು ಬರಲು, ೧೧೫. ಉದ್ಭಟ ಮಹಾರಾಜನೇ, ದೀರ್ಘ ಬಾಹುಗಳು ಹಾರುವ ರೆಕ್ಕೆಗಳಾಗಲು, ದೇಹದ ಅಂಗಾಂಗಗಳು ಹೊಳೆಯುವ ತುಪ್ಪಳವಾಗಲು, ಉಗುರುಗಳು ಅಗಲವಾದ ಗರಿಗಳಾಗಲು, ಮೂಗು ಕೊಕ್ಕಾಗಲು; ಆಗಲೇ ಮನುಷ್ಯಾಕೃತಿಯು ತಟಕ್ಕನೆ ಹೋಗಿ ಅರಗಿಳಿಯ ಜನ್ಮವು ನನ್ನನ್ನು ಪ್ರೀತಿಯಿಂದ

ಎಂದೊಸೆದಿಂತು ಮೇಣ್ತನಗೆ ರಾಜಶುಕಾಕೃತಿಯಪ್ಪ ಶಾಪವಾ
ದಂದಮನಂದು ಪೇೞ್ದ ಗಿಳಿಯೊಳ್ನುಡಿಗಳ್ಗುಬ್ಬಿ ಪೆರ್ಚುತಾಲಿಪಾ।
ನಂದಮನುದ್ಭಟೋರ್ವಿಪನ ಚಿತ್ತಸರೋರುಹದೊಳ್ವಿಜೃಂಭಿಪ
ರ್ಧೇಂದುಲಸತ್ಕಪರ್ದ ಪದೆದೋವುವುದೆನ್ನನೆಯಲ್ಲಮಪ್ರಿಯಾ ॥ ೧೧೬ ॥

ಇದುಸಮಸ್ತಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನ ಪುಂಜಸಂಜಾತ
ಪಿಂಜರಿತಮಂಜುಳಮಯೂಖ ಮಂಜರೀರಂಜಿತಶ್ರೀಗುರುವಿರೂಪಾಕ್ಷಪಾವನಪಾದ
ನಖೋಚ್ಛಳಿತಪ್ರಭಾನಿಸ್ತಂದ್ರರುಂದ್ರಸಾಂದ್ರ ಚಂದ್ರಿಕಾಪಟಲಪಟುಲಂಪಟ
ಚಕೋರಾಯಮಾಣಮಾನಸಶ್ರೀಸೋಮರಾಜೇಂದ್ರಚಂದ್ರವಿರಚಿತ
ಮಪ್ಪ ಶೃಂಗಾರಸಾರಮಹಾಪ್ರಬಂಧದೊಳ್ ಶುಕಸಂಭಾಷಣಾವ
ರ್ಣನಂ ಐದನೆಯ ಆಶ್ವಾಸಂ ಮುಗಿದುದು.

ಅಪ್ಪಿತು. ೧೧೬. ಹೀಗೆ ಪ್ರೀತಿಯಿಂದ ತನಗೆ ಅರಗಿಳಿಯಾಕೃತಿಯ ಶಾಪವಾದ ಬಗೆಯನ್ನು ಹೇಳಿದ ಗಿಳಿಯ ಹಿತವಾದ ಮಾತುಗಳಿಗೆ ಅತಿಯಾಗಿ ಉಬ್ಬಿ, ಕಿವಿಗೊಟ್ಟು, ಆ ಆನಂದವನ್ನು ಉದ್ಭಟ ಮಹಾರಾಜನ ಹೃದಯ ಕಮಲದಲ್ಲಿ ಹೊಳೆಯುವ ಬಾಲಚಂದ್ರನನ್ನು ಧರಿಸಿ ವಿಜೃಂಭಿಸಿರುವ ಶಿವನೆ, ಅಲ್ಲಮಪ್ರಿಯನೆ ನನ್ನನ್ನು ಪ್ರೀತಿಯಿಂದ ರಕ್ಷಿಸುವುದು.

ವ॥ ಇದು ಸಮಸ್ತ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ ಕಿರೀಟಗಳ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳಿಂದುಂಟಾದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪವಿತ್ರವಾದ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರ ಪಕ್ಷಿಯಂತೆ ಕಾತುರನಾಗಿರುವ ಸೋಮರಾಜನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಶುಕ ಸಂಭಾಷಣ ವರ್ಣನೆಯುಳ್ಳ ಐದನೇ ಆಶ್ವಾಸವು ಮುಗಿಯಿತು.

# ಆರನೆಯ ಆಶ್ವಾಸಂ

ಶ್ರೀರಾಜವಂಶನೃಪಕಂ
ಠೀರವನುದ್ಭಟಮಹೀಶನತಿಮುದದಿಂದಂ।
ಕೀರಾಲಾಪಕುತೂಹಲ
ನಾರಮ್ಯಾರಣ್ಯದೊಳ್ ಮನಂಗೊಳಿಸಿರ್ದಂ ॥ ೧ ॥

ಸಚಿವನ ವಕ್ತ್ರಮಂಡಲಮನಂದು ನಿರೀಕ್ಷಿಸಿ ಶೀತಲಾಂಶುರು
ಙ್ನಿಚಯಮನೈದೆ ತುಳ್ಕೆ ರದನಚ್ಛವಿ ತಾಂ ದರಹಾಸಭಾಸುರಂ।
ನಿಚಿತಮನೋನುರಾಗರಸವಾರ್ಧಿಯೊಳಾಂತತಚ್ಚುಕೋಲ್ಲಸ
ದ್ವಚನಮನಾಲಿಸುತ್ತೆಸೆದನುದ್ಭಟರಾಜಮಹೇಂದ್ರಕುಂಜರಂ ॥ ೨ ॥

ಇಂತತಿವಿಲಾಸದಿಂದಾಲಿಪುದ್ಭಟರಾಜಂಗೆ ತದ್ರಾಜಿತರಾಜಕೀರಮಿಂತೆಂದುದು.

ಅದೆಂತೆಂದೊಡೆ,

ನೃಪವರ ಕೇಳ್ ಶುಕಜನ್ಮಮ
ದಪಗತಪುಣ್ಯಾಳಿಗೆನಗೆ ಸಂಭವಿಸೆ ವಿಜೃಂ।
ಭಿಪ ಸುಜ್ಞಾನಪ್ರಭೆಯಱ
ದುಪಮಿಸಲಳವಡದ ಮಱವೆಯಪ್ಪಿದುದಾಗಳ್ ॥ ೩ ॥

೧. ಆ ಮನೋಹರವಾದ ಕಾಡಿನಲ್ಲಿ ಶ್ರೀ ರಾಜವಂಶದಲ್ಲಿ ಬಂದ ಮಹಾರಾಜರುಗಳಲ್ಲಿ, ಸಿಂಹದಂತಿದ್ದ ಉದ್ಭಟಮಹಾರಾಜನು ಅತ್ಯಾನಂದದಿಂದ ಗಿಳಿಯೊಡನೆ ಕುತೂಹಲದಿಂದ ಸಂಭಾಷಿಸುತ್ತ ಮನಸ್ಸನ್ನು ಸೆಳೆದಿದ್ದನು. ೨. ರಾಜ ಮಹಾರಾಜರುಗಳ ನಡುವೆ ಆನೆಯೋಪಾದಿಯಲ್ಲಿರುವ ಉದ್ಭಟನು ಆ ಗಿಳಿಯ ಉಲ್ಲಾಸಪೂರ್ಣವಾದ ಮಾತುಗಳನ್ನು ಆಲಿಸುತ್ತ ಮಂತ್ರಿಯ ಮುಖಮಂಡಲವನ್ನು ನೋಡುತ್ತ ಕಿರಣಗಳು ತಮ್ಮ ಪ್ರಭಾಪುಂಜವನ್ನು ಚೆನ್ನಾಗಿ ಹರಡುತ್ತಿರಲು, ಹೊಳೆಯುವ ಮಂದಹಾಸದಲ್ಲಿ ಹಲ್ಲಿನ ಕಾಂತಿ ತುಳುಕುತ್ತಿರಲು ಮನಸ್ಸಿನ ಆನಂದವೇ ರಾಶಿಗೊಂಡು ಸಮುದ್ರವಾಗಿರಲು ಶೋಭಿಸಿದನು. ವ॥ ಹೀಗೆ ಉಲ್ಲಾಸದಿಂದ ಕೇಳುತ್ತಿರುವ ಉದ್ಭಟಮಹಾರಾಜನಿಗೆ ಆ ಅರಗಿಳಿಯು ಹೀಗೆಂದಿತು. ಅದು ಹೇಗೆಂದರೆ, ೩. ಮಹಾರಾಜಾ ಕೇಳು, ಪುಣ್ಯನಾಶದಿಂದ ನನಗೆ ಗಿಳಿಯ ಜನ್ಮವು ಸಂಭವಿಸಿತು ಶೋಭಿಸುವ ಸುಜ್ಞಾನಪ್ರಭೆಯು ಇಲ್ಲವಾಗಿ ಹೋಲಿಸಲು ಅಸಾಧ್ಯವಾದ ಮರವೆಯು ಆಗ ಉಂಟಾಯಿತು.

ಯತಿವರನ ಸಮುದ್ಯತ್ಕೋಪವೆಂದೆಂಬ ಬಾಂಬಾ
ವತುಳಜವದಗುರ್ವಿಂ ಬಂದು ಮೇಣ್ನುಂಗಲೆನ್ನುಂ।
ನತಮೆನಿಪಮಲಜ್ಞಾನೇಂದುವಂ ಕೂಡೆ ತಾಂ ಪ
ರ್ವಿತದೆಡೆವಿಡದಜ್ಞಾನಾಂಧಕಾರಂ ನೃಪಾಲಾ ॥ ೪ ॥

ಮುಗಿದತ್ತೊಳ್ದೆರ್ದೆನ್ಯೆದಲಂ ದರತುದತ್ಯಾನಂದನಂ ದೃಕ್ಚಕೋ
ರಿಗಳಾಟಂ ತವೆ ನಿಲ್ತುದುಜ್ವಲವಿವೇಕಜ್ಯೋತ್ಸ್ನೆ ಪೋದತ್ತು ನೆ।
ಟ್ಟಿಗೆ ಘೋರಂಬಡೆದುರ್ವಿ ಪರ್ವಿದುದವಿದ್ಯಾಧ್ವಾಂತಸಂದೋಹಮೊ
ಯ್ಯಗೆ ಮುಚ್ಚಿತ್ತು ಹಿಮಾಂಶುವಸ್ತಮಿಸೆ ಕೇಳ್ ಸಾಹಿತ್ಯಸಾರೋದಯಾ ॥ ೫ ॥

ನುಡಿಯಂ ಕೀರ್ಕೀರೆನಿಪ್ಪಾಧ್ವನಿಸಲೆ ಬೆರಸಿತ್ತುಂನತಗ್ರೀವಮಂ ಕ
ಪ್ಪಡರ್ದತ್ತು ಘ್ರಾಣಮಂ ತೋರ್ಪರುಣರುಚಿಯದಂಟಿತ್ತು ಸರ್ವಾಂಗಮಂ ತಾಂ।
ಪಿಡಿದತ್ತೊಳ್ಪಚ್ಚೆವಂಣಂ ಮನಮನಲೆದುದಜ್ಞಾನಮಿಂತೀಶುಕತ್ವಂ
ಬಿಡದೆನ್ನಂ ಪೊರ್ದುವನ್ನಂ ಸುಕವಿಜನಮನೋರಾಗವಾರಾಶಿಚಂದ್ರಾ ॥ ೬ ॥

ಮತ್ತಮದಲ್ಲದೆ,

ಮಱೆದೆಂ ಮಾನವಜನ್ಮಮಂ ಸಹಜಮಾದತ್ತೀಶುಕತ್ವಂ ಮನಂ
ತೆಱಪಂ ಕೊಟ್ಟುದವಿದ್ಯೆಗಾಗಳೆ ಕರಂ ಮರ್ತ್ಯೌಘಮಂ ಕಂಡರಂ।
ದುಱು ಕಂಗೆಟ್ಟಿರದೆಟ್ಟು ಪಾಱಲನುಗ್ಗೆದುಂ ಕ್ಷುತ್ತೃಷಾದ್ವಂದ್ವದಿಂ
ತಱಸಂದಾಂ ತೊಱಲುತ್ತಮಿರ್ದೆನಿಳೆಯೊಳ್ ಕೇಳುದ್ಭಟೋರ್ವೀಶ್ವರಾ ॥ ೭ ॥

೪. ಮಹಾರಾಜಾ, ಯತಿಶ್ರೇಷ್ಠನ ಚೆನ್ನಾಗಿ ಏರಿದ ಕೋಪವೆಂಬ ರಾಹುವು ತೀವ್ರ ವೇಗದಲ್ಲಿ ಭಯಂಕರವಾಗಿ ಬಂದು ನನ್ನ ಉನ್ನತವಾದ ಪರಿಶುದ್ಧ ಜ್ಞಾನಚಂದ್ರನನ್ನು ಹಾಗೂ ನನ್ನನ್ನು ಜೊತೆಗೂಡಿ ನುಂಗಲು ಅಜ್ಞಾನವೆನ್ನುವ ಕತ್ತಲೆಯು ಎಡೆಬಿಡದೆ [ನನ್ನನ್ನು] ಆವರಿಸಿತು. ೫. ಸಾಹಿತ್ಯ ಸಾರೋದಯಾ ಕೇಳು ಚಂದ್ರನು ಮುಳುಗಲು ಹೃದಯಕಮಲವು ಮುಚ್ಚಿತು, ಅತ್ಯಾನಂದವು ಬತ್ತಿ ಹೋಯಿತು, ನೋಟವೆಂಬ ಚಕೋರಿಗಳ ಆಟವು ನಿಂತಿತು, ಉಜ್ವಲವಾದ ವಿವೇಕವೆಂಬ ಬೆಳುದಿಂಗಳು ಹೋಯಿತು, ಘೋರಾಕಾರವಾಗಿ ದಟ್ಟವಾಗಿ ಅವಿದ್ಯೆಯೆಂಬ ಕತ್ತಲೆಯ ಮೊತ್ತವು ಹಬ್ಬಿ ಮೆಲ್ಲನೆ ಕವಿಯಿತು. ೬. ಸುಕವಿಜನರ ಸಂತೋಷ ಸಾಗರಕ್ಕೆ ಚಂದ್ರನಂತಿರುವವನೇ, ಈ ಗಿಳಿಯ ಜನ್ಮವು ನನ್ನನ್ನು ಬಿಡದೆ ಹೊಂದಿಕೊಳ್ಳುತ್ತಿರಲು ನನ್ನ ಮಾತಿನಲ್ಲಿ ಕೀರ್ ಕೀರ್ ಎಂಬ ಧ್ವನಿಯು ಚೆನ್ನಾಗಿ ಕೂಡಿಕೊಂಡಿತು, ಎತ್ತರವಾದ ಕೊರಳನ್ನು ಕಪ್ಪು ಆವರಿಸಿತು, ಮೂಗನ್ನು ಎದ್ದು ಕಾಣುವ ಕೆಂಬಣ್ಣದ ಹೊಳಪು ಅಂಟಿಕೊಂಡು ಇಡೀ ದೇಹವನ್ನು ಹಸಿರು ಬಣ್ಣ ಕವಿಯಿತು. ಮನಸ್ಸನ್ನು ಅಜ್ಞಾನವು ತಾಗಿತು. ವ॥ ಮತ್ತೆ ಅದಲ್ಲದೆ, ೭. ಉದ್ಭಟ ಮಹಾರಾಜಾ ಕೇಳು, ಮಾನವ ಜನ್ಮವನ್ನು ನಾನು ಮರೆತೆನು, ಈ ಗಿಳಿಯ ಜನ್ಮವು ಸಹಜವಾಯಿತು. ಆಗಲೆ ಮನಸ್ಸು ಅವಿದ್ಯೆಗೆ ತೆರವುಮಾಡಿಕೊಟ್ಟಿತು. ಮರ್ತ್ಯಲೋಕದವರನ್ನು ಕಂಡು ಹೆಚ್ಚಾಗಿ ಕಂಗೆಟ್ಟು ಅವರೆದುರಿಗಿರಲಾರದೆ ಹಾರಿಹೋಗಲು

ಎಂದಿಂತೊಸೆದು ಪೇೞ್ದ ತದ್ರಾಜಕೀರಾಲಾಪಮಂ ಕೇಳ್ದಾಗಿಳಿಗುದ್ಭಟಕ್ಷಿತೀಂದ್ರಚಂದ್ರಮಂ ಮಗುೞ್ದಿಂತೆಂದಂ.

ಭೂನುತಾಂಗ ಕೀರ ಕೇಳ್ಗಮಂತು ನಿನ್ನನೊಂದಿದ
ಜ್ಞಾನದೇೞ್ಗೆ ಪೋಯ್ತದೆಂತುಟೀವಿವೇಕವಾಕ್ಚಯಂ।
ತಾನದೆಂತು ಪುಟ್ಟಿತೆಂದೊಡುದ್ಭಟಂಗೆ ಪೇೞ್ದುದಿಂ
ತಾನವೀನಭಾಷಿತಂ ಶುಕಂ ಮಗುೞ್ದು ರಾಗದಿಂ ॥ ೮ ॥

ಆಲಿಸುದ್ಭಟಭೂಭುಜಾಗ್ರಣಿ ಕೀರರೂಪದಿನುರ್ವಿಯಂ
ಲೋಲಮಾನಸನಾಗಿ ನಿಟ್ಟಿಸುತಲ್ಲಿಗಲ್ಲಿಗೆ ರಾಜಿಪಾ।
ಶಾಲಿಕಾವನದಲ್ಲಿ ಮಂಜುಳಮಾದ ನಂದನದಲ್ಲಿ ಯಾಂ
ಲೀಲೆಗೂಡಿ ನಿಜೇಚ್ಛೆಯಿಂ ಚರಿಸುತ್ತುಮಿರ್ದೆನನಾರತಂ ॥ ೯ ॥

ಎಲ್ಲಿ ಮನೋಹರವಾದ ವನಂ ಮೇ
ಣೆಲ್ಲಿ ಸಮುಜ್ವಳಪಕ್ವಫಲಂ ಮೇ।
ಣೆಲ್ಲಿ ವಿರಾಜಿಪ ತಂಗೊಳನುಂಟಂ
ತಲ್ಲಿ ದಿನಂಗಳೆವುತ್ತೆಸೆದಿರ್ದೆಂ ॥ ೧೦ ॥

ಈಪರಿ ಯನಂತಕಾಲಂ
ಶಾಪಂ ಬಡೆದಖಿಳದೇಶಮಂ ಚರಿಸುತೆ ಯಾಂ।
ಭೂಪತಿ ಬರೆವರೆ ಮಾವಿನ
ತೋಪೊಂದೊಪ್ಪಿದುದು ಚೋಳಮಂಡಲದೆಡೆಯೊಳ್ ॥ ೧೧ ॥

ಸಿದ್ಧನಾದೆ. ಹಸಿವು ಬಾಯಾರಿಕೆಗಳಿಂದ ನಾನು ಭೂಮಿಯಲ್ಲಿ ಅಲೆದಾಡಿದೆ. ವ॥ ಎಂದು ಹೀಗೆ ಪ್ರೀತಿಯಿಂದ ಹೇಳಿದ ಆ ಅರಗಿಳಿಯ ಮಾತನ್ನು ಕೇಳಿ ಆ ಗಿಳಿಗೆ ಉದ್ಭಟ ಮಹಾರಾಜ ಚಂದ್ರಮನು ಮತ್ತೆ ಹೀಗೆಂದನು. ೮. 'ಲೋಕವೆಲ್ಲ ಹೊಗಳುವ ಎಲೆ ಗಿಳಿಯೆ ಚೆನ್ನಾಗಿ ಕೇಳು, ನಿನ್ನನ್ನು ಆವರಿಸಿದ್ದ ಅಜ್ಞಾನದ ಹೆಚ್ಚಳವು ಹೇಗೆ ನಿವಾರಣೆಯಾಯಿತು? ಈ ವಿವೇಕಪೂರ್ಣವಾದ ಮಾತುಗಳು ಹೇಗೆ ಬಂದುವು?' ಎನ್ನಲು, ಹೊಸತೆನ್ನುವಂತೆ ಸಂಭಾಷಿಸುವ ಆ ಗಿಳಿಯು ಸಂತಸದಿಂದ ಮತ್ತೆ ಹೀಗೆಂದಿತು. ೯. ಭೂಭುಜರಲ್ಲಿ ಮುಖ್ಯನಾದ ಉದ್ಭಟನೇ ಕೇಳು, ಗಿಳಿಯ ರೂಪದಿಂದ ಲೋಕವನ್ನು ಚಂಚಲ ಮನಸ್ಕನಾಗಿ ನೋಡುತ್ತ, ಅಲ್ಲಲ್ಲಿ ಶೋಭಿಸಿರುವ ಬತ್ತದ ಗದ್ದೆಗಳಲ್ಲಿ, ಮನೋಹರವಾದ ತೋಟಗಳಲ್ಲಿ ವಿಲಾಸದಿಂದ ನಾನು ಸತತವಾಗಿ ಮನಬಂದಂತೆ ಸುತ್ತಾಡುತ್ತಿದ್ದೆನು. ೧೦. ಎಲ್ಲಿ ಮನೋಹರವಾದ ಗದ್ದೆಗಳಿವೆಯೊ, ಎಲ್ಲಿ ಚೆನ್ನಾಗಿ ಮಾಗಿದ ಹಣ್ಣುಗಳಿವೆಯೊ, ಎಲ್ಲಿ ಹೊಳೆಯುವ ತಣ್ಣನೆಯ ಕೊಳಗಳಿವೆಯೊ ಅಲ್ಲಿ ದಿನಗಳನ್ನು ಕಳೆಯುತ್ತಾ ಶೋಭಿಸಿದ್ದೆನು. ೧೧. ಮಹಾರಾಜಾ ಈ ರೀತಿ ಬಹಳ ಕಾಲ ಶಾಪವನ್ನು ಹೊಂದಿ ಸಕಲ ದೇಶವನ್ನು ಸುತ್ತುತ್ತ ನಾನು ಬರುತ್ತಿರಲು ಚೋಳಮಂಡಲದ ಒಂದೆಡೆಯಲ್ಲಿ ಮಾವಿನ ತೋಪೊಂದು ಶೋಭಿಸಿದ್ದಿತು.

13

ತೀಡುವ ತಂಬೆಲರ್ಗೆ ಚಲಿಪಚ್ಚತಳಿರ್ಗಳ ಘಾತದಿಂದೆ ತೂ
ಗಾಡುವ ಪಣ್ಗಳೈದೆ ಮಸೆದಂದೊಡೆಯುತ್ತೊಗುತಿರ್ಪಿನಂ ರಸಂ।
ಕೂಡೆ ಪೊದಟ್ಟು ಪೊಂಗಿ ಪರಿವೊಲ್ಪರಿಕಾಲ್ಗಳ ಪೆಂಪಿನಿಂಪಿನಿಂ
ನಾಡೆ ಬೆಡಂಗುವೆತ್ತೆಸೆದುದಾಸವಚೂತವನಂ ನರಾಧಿಪಾ ॥ ೧೨ ॥

ಅಲರ್ಗೊಂಚಲ್ ಘನದಂತಮಾಗ ನಿಡುಶುಂಡಿಲ್ ಜೋಲ್ವ ಕೊಂಬಾಗೆ ತ
ತ್ಫಲಸಂಜಾತರಸಂ ದಲಾಗೆ ಮಿಗೆ ದಾನಂ ಪಲ್ಲವಂ ಪದ್ಮ ಸಂ
ಕುಲಮಂದಾಗೆ ಮನೋಜಭೂಪನ ಗಜವ್ಯೂಹಂಬೊಲುತ್ತುಂಗನಿ
ರ್ಮಲಮಾಕಂದವನಂ ಮನಂಗೊಳಿಸಿದತ್ತುರ್ವೀಂದ್ರಕಂಠೀರವಾ ॥ ೧೩ ॥

ಇಂತು ಮನಂಗೊಳಿಪ ಮಾವಿನ ತೋಪಂ ಕಂಡು ಪೊಂಗಿ ಪೊಱಯೇಱ ಮೆಲ್ಲನೆಟ್ಟಿಂದಾವನಮನಾಶ್ರಯಿಸಿಕೊಂಡಾನನಂತಕಾಲಮಿರಲು ಒಂದು ದಿವಸದಲ್ಲಿ,

ಬಾಂಬಾವು ನುಂಗಿ ಮಗುೞ್ದಿನ
ಬಿಂಬಮನಿಳೆಗಿೞಿದೊಡ್ಡೈದೆ ಪಸುರೇಱ ಮಗು।
ೞ್ದಿಂಬೞಿದು ಬೀೞ್ವ ತೆಱದಿಂ
ದಂಬರದಿಂದಿೞಿದುದಿಳೆಗೆ ಗಿಳಿವಿಂಡರಸಾ ॥ ೧೪ ॥

ಒಡಲ ಪಸುರ್ಮೂಗಿನ ಕೆಂ
ಪಡಿಗಳಬೆಳ್ಪಮರ್ದ ಕೊರಲ ಕರ್ಪೆಲ್ಲಂ ಸಂ।
ಗಡಿಸಿರೆ ಸುರಧನುವಿಳೆಯೊಳ್
ಕೆಡೆವವೊಲಿೞಿದತ್ತದೊಂದು ಗಿಳಿವಿಂಡರಸಾ ॥ ೧೫ ॥

೧೨. ಮಹಾರಾಜಾ, ಬೀಸುವ ತಂಗಾಳಿಗೆ ಅಲುಗಾಡುವ ಎಳೆಯ ಚಿಗುರುಗಳಿಂದ, ಗಾಳಿಯ ಹೊಡೆತಕ್ಕೆ ತೂಗಾಡುವ ಹಣ್ಣುಗಳಿಂದ ಜೋರಾಗಿ ಗಾಳಿ ಬೀಸಲು ಹಣ್ಣುಗಳು ಒಡೆದು ರಸವು ಚೆನ್ನಾಗಿ ಹೊಮ್ಮಿ ಹರಿವ ಕಾಲುವೆಯಿಂದ ಕೂಡಿ ಹಿರಿಮೆಯಿಂದಲೂ ಮಾಧುರ್ಯದಿಂದಲೂ ಹೆಚ್ಚಿನ ವಿಲಾಸದಿಂದಲೂ ಆ ಎಳೆಯ ಮಾವಿನ ತೋಟವು ಶೋಭಿಸಿತು. ೧೩. ಮಹಾರಾಜ ಸಿಂಹನೇ, ಹೂಗಳ ಗೊಂಚಲು ದೊಡ್ಡ ದಂತಗಳಾಗಲು, ಜೋಲುವ ರೆಂಬೆಗಳು ಉದ್ದನೆಯ ಸೊಂಡಿಲಾಗಲು, ಹಣ್ಣುಗಳಿಂದ ಸುರಿವ ರಸವು ಮದೋದಕವಾಗಲು, ಚಿಗುರುಗಳು ಕಮಲಗಳಾಗಲು ಕಾಮರಾಜನ ಗಜಸೈನ್ಯವೆನ್ನುವಂತೆ ಶ್ರೇಷ್ಠವೂ ನಿರ್ಮಲವೂ ಆದ ಮಾವಿನತೋಟವು ನೋಡುಗರ ಮನಸ್ಸನ್ನು ಸೆಳೆದಿದ್ದಿತು. ವ॥ ಹೀಗೆ ಮನಸೆಳೆಯುವ ಮಾವಿನ ತೋಪನ್ನು ನೋಡಿ ಉತ್ಸಾಹದಿಂದ ಉಬ್ಬಿ ಮೆಲ್ಲನೆ ನಡೆದುಬಂದು ಆ ತೋಟವನ್ನು ಸೇರಿ ಬಹಳಕಾಲ ಅಲ್ಲಿರಲು, ಒಂದು ದಿವಸ, ೧೪. ಅರಸಾ, ರಾಹುವು ಚಂದ್ರಬಿಂಬವನ್ನು ನುಂಗಿ ನೆಲಕ್ಕೆ ಇಳಿಯುತ್ತಿರುವಾಗ ಚೆನ್ನಾಗಿ ಹಸುರೇರಿ ಮತ್ತೆ ಆಶ್ರಯ ತಪ್ಪಿ ಕೆಳಕ್ಕೆ ಬೀಳುವಂತೆ ಆಕಾಶದಿಂದ ಗಿಳಿಗಳು ಭೂಮಿಗೆ ಇಳಿದವು. ೧೫. ಅರಸಾ, ಹಸಿರಾದ ದೇಹ, ಕೆಂಪಾದ ಮೂಗು, ಬೆಳ್ಳನೆಯ ಪಾದಗಳು, ಕಪ್ಪಾದ ಕೊರಲು ಇವೆಲ್ಲವುಗಳಿಂದ ಕಾಮನಬಿಲ್ಲು ನೆಲಕ್ಕೆ ಬೀಳುವಂತೆ ಗಿಳಿಯ ಹಿಂಡೊಂದು

ಓತಲ್ಲಿಗಿಟಿದಕೀರ
ವ್ರಾತಂ ತಚ್ಚೂತವನದೊಳ್ಫಿರ್ದಿನಿವಣ್ಣಂ।
ಪ್ರೀತಿಮಿಗೆ ಸವಿದು ಮಗುೞ್ದಿಂ
ತಾತತಮುದದಿಂದೆ ಪೋಗಲಾಂ ನಿಟ್ಟಿಸಿದೆಂ ॥ ೧೬ ॥

ಎಲ್ಲಿಗೀಗಿಳಿವಿಂಡು ಪೋದಪುದಿಂತಿದಂ ನಡೆನೋಳ್ಪೊಡಾ
ನಲ್ಲಿಗೈದಿ ಮನೋವಿಲಾಸದಿನೆಂದೆ ತಚ್ಛುಕರಾಜಿಯೋಲ್।
ಮೆಲ್ಲನೊಲ್ದೊಡಗೂಡಿ ಮೇಣೆರದೆಬ್ದು ಪಾಱೆ ಬರಲ್ಕೆ ಸ
ತ್ಪಲ್ಲವೋದ್ಗಮಶೋಭಿತಂ ವನಮಿರ್ದುದೊಂದು ಮಹೀಧವಾ ॥ ೧೭ ॥

ಫಲಿತರಸಾಲಮೊಪ್ಪುವ ಕಪಿತ್ಥ ಕರಂಜಕ ನೆಲ್ಲಿ ಮಟ್ತಿಪಾ
ಟಳಿ ಜಟೆ ದಾಡಿಮಂ ಪಲಸು ಸಂಪಿಗೆ ಗೋರಟೆ ಬಾಳೆ ತೆಂಗು ಮಂ।
ಜುಳತಿಲಕಂ ತಳಿರ್ತಸುಗೆ ಚಂದನಮುಖ್ಯಮನೋಜ್ಞವೃಕ್ಷಸಂ
ಕುಳಮಿರಲಾವನಂ ಪರಿವಿರಾಜಿಸಿತುದ್ಭಟಭೂಭುಜಾಗ್ರಣಿ ॥ ೧೮ ॥

ಪೂತಲಸಲ್ಲತಾನಿಕರದಿಂ ಪಲರನ್ನದ ಮಾಡುವೆಟ್ಟಿನಿಂ
ಶೀತಳಮಂ ಪಳಂಚುವೆಳವಳ್ಳಿಯ ಮಂದಿರದಿಂ ಚಲತ್ಫಲ।
ವ್ರಾತಸಮೇತನೂತ್ನಮಹಿಜಾತನಿಕಾಯದಲಂಪಿನಿಂಪಿನಿಂ
ದಾತತಮಾದ ಸಂತಸಮನೈದಿಸದೀಕ್ಷಿಸಲಾವನಂ ವನಂ ॥ ೧೯ ॥

ಇಂತೊಪ್ಪುವಾವನಮನೀಕ್ಷಿಸಿ ತಚ್ಛುಕೌಘಂ
ತಾಂ ತಳ್ವದುಚ್ಚಳಿಸಿ ಭೋಂಕೆನೆ ಪಾಪಿ ಬಂದೋ।
ರಂತೈದೆ ಕಂಗೊಳಿಪ ತದ್ವನಮಂ ಸಮುದ್ಯ
ತ್ಸಂತೋಷದಿಂದಿರದೆ ಸಾರ್ದುದು ಭೂಮಿಪಾಲಾ ॥ ೨೦ ॥

ಆಕಾಶದಿಂದ ಇಳಿಯಿತು. ೧೬. ಪ್ರೀತಿಯಿಂದ ಅಲ್ಲಿಗೆ ಇಳಿದ ಗಿಳಿಗಳ ಮೊತ್ತವು ಆ ಮಾವಿನ ತೋಟದ ಅತ್ಯಂತ ಸಿಹಿಯಾದ ಹಣ್ಣನ್ನು ಸಂತೋಷಾಧಿಕ್ಯದಿಂದ ಸವಿದು ಮತ್ತೆ ಆ ಗಿಳಿವಿಂಡು ಆನಂದದಿಂದ ಹೋಗುತ್ತಿರಲು ನಾನು ನೋಡಿದೆನು. ೧೭. ಮಹಾರಾಜಾ, ಈ ಗಿಳಿಗಳ ಹಿಂಡು ಎಲ್ಲಿಗೆ ಹೋಗುತ್ತದೊ ನೋಡೋಣವೆಂದು ನಾನು ಆಹ್ಲಾದದಿಂದ ಆ ಗಿಳಿವಿಂಡಿನಂತೆ ಮೆಲ್ಲನೆ ಸಾಗಿ ಅವುಗಳೊಡನೆ ಹಾರಿ ಬರಲು ಅರಳಿದ ಹೂವುಗಳಿಂದ ಕೂಡಿ ಶೋಭಿಸಿದ್ದ ಒಂದು ತೋಟವು ಇದಿರಾಯಿತು. ೧೮. ಉದ್ಭಟ ಮಹಾರಾಜಾ, ಮಾಗಿದ ಮಾವು, ಸುಂದರವಾದ ಬೇಲ, ಖರ್ಜೂರ, ನೆಲ್ಲಿ, ಮತ್ತಿ, ಪಾದರಿ, ಆಲ, ಹಲಸು, ಸಂಪಿಗೆ, ಮದರಂಗಿ, ಬಾಳೆ, ತೆಂಗು, ಮನೋಹರವಾದ ತಿಲಕ, ಅರಳಿದ ಅಶೋಕ, ಶ್ರೀಗಂಧ - ಇವೇ ಮೊದಲಾದ ಮನೋಜ್ಞ ಮರಗಳ ಸಮೂಹವಿರಲು ಆ ತೋಟವು ಚೆನ್ನಾಗಿ ಶೋಭಿಸಿತು. ೧೯. ಅರಳಿದ ಸುಂದರವಾದ ಬಳ್ಳಿಗಳಿಂದ, ಹಲವು ರತ್ನದ ಕೃತಕ ಶಿಲೆಗಳಿಂದ, ಶೈತ್ಯವನ್ನೊಳಗೊಂಡ ಎಳೆಯ ಬಳ್ಳಿಯ ಮನೆಗಳಿಂದ, ಹೊಳೆವ ಹಣ್ಣುಗಳ ಗೊಂಚಲುಗಳಿಂದ ಕೂಡಿದ ಎಳೆಯ ವೃಕ್ಷಗಳ ಸೊಗಸಿನಿಂದ ಹಾಗೂ ಸುವಾಸನೆಯಿಂದ ಕೂಡಿದ ಆ ವನವು ನೋಡುವ ಯಾರನ್ನೇ ಆಗಲಿ ಮುದಗೊಳಿಸದಿರಲಾರದು. ೨೦. ಮಹಾರಾಜಾ, ಹೀಗೆ ಶೋಭಿಸಿರುವ ಆ ತೋಟವನ್ನು ನೋಡಿದರೆ ಆ ಗಿಳಿಗಳ ಸಮೂಹವು ಒಂದೇ ಸಮನೆ ಕಣ್ಣಿಗೆ ಅಂದವಾಗಿರುವ ಆ

ಆಡುವ ಕೇಕಿ ಸಂಚರಿಸುವಂಚೆ ಪೊದಟ್ದು ಮನೋನುರಾಗದಿಂ
ಪಾಡುವ ತುಂಬಿ ಬಗ್ಗಿಸುವ ಕೋಗಿಲೆ ಯೋದುವ ಕೀರಮಟ್ಟಿಜಿಂ।
ಕೂಡುವ ಜಕ್ಕವಕ್ಕಿ ಸಲೆ ತೀಡುವ ತೆಂಬೆಲರೊಪ್ಪಲೊಪ್ಪುಗುಂ
ನಾಡೆ ನಿಜೋರುಪುಷ್ಪಫಲಪಲ್ಲವಚಿಹ್ನಿತನಂದನಂ ವನಂ ॥ ೨೧ ॥

ಆಗಿಳಿಗಳೊಡನೆ ಬಂದನು
ರಾಗದಿನಾಂ ತನ್ಮನೋಜ್ಞವನಮಂ ಸಾರ್ದಿಂ।
ಬಾಗಿರಲುನ್ನತಲೀಲಾ
ಸಾಗರದೊಳ್ತೇಂಕುತಿರ್ದೆನುದ್ಭಟದೇವಾ ॥ ೨೨ ॥

ತನಿವಣ್ಗೊಂಚಲ್ಗಳಂ ನಿಟ್ಟಿಸಿ ಘನಮುದದಿಂದಂ ಕರಂ ಪಾಜಿ ಬಂದೊ
ಯ್ಯನೆ ಚಂಚೂಕೋಟಿಯಿಂದಂ ಬಗಿದಿನಿರಸಮಂ ಪಾನಮಂ ಮಾಡಿ ಮೇಣ।
ತ್ಯನುರಾಗಂಬೆತ್ತು ನಿಚ್ಚಂ ಬಿಡದಮರ್ದೆ ಸೆವಾಕೀರಸಂದೋಹದೊಳ್ನೆ
ಟ್ಟನೆ ಕೂಡಿರ್ದಿರ್ದೆನಾಂ ತದ್ವನವಳಯದೊಳುತ್ತುಂಗ ಸಂಗೀತಲೋಲಾ ॥ ೨೩ ॥

ಮತ್ತಮಾವನದಲ್ಲಿ ಎಂತಿರ್ದೆನೆಂದೊಡೆ,

ಕದಳೀವೃಕ್ಷದೊಳುಂಚಮಾಮರದೊಳುಂ ಜಂಬೂಮಹೀಜಾತದೊ
ಳ್ಪೊದಱ್ದಿಂಚನ್ನವದಾಡಿಮೀತರುಗಳೊಳ್ತತ್ತತ್ಫಲಾನೀಕಮಂ।
ಮುದದಿಂದಂ ತಣಿದುಂಡು ತೊಂಡುಗೆಯಿತುದ್ಯತ್ಕೀರಸಂದೋಹದೊ
ಳ್ಪದೆದಾನೊಲ್ದೊಡಗೂಡಿ ಸಂಚರಿಸುತಿರ್ದೆಂ ರಾಜಕಂಠೀರವಾ ॥ ೨೪ ॥

ತೋಟವನ್ನು ತುಂಬಿ ಬಂದ ಸಂತಸದಿಂದ ತಡಮಾಡದೆ ಪಾಪಿಯಾದ ನನ್ನೊಡನೆ ಬಂದು ಒಮ್ಮೆಲೆ ಚಿಮ್ಮಿ ಕವಿದುವು. ೨೧. ಆಡುವ ನವಿಲು, ಓಡಾಡುವ ಹಂಸೆ, ಹೊಮ್ಮಿ ಬಂದ ಸಂತಸದಿಂದ ಹಾಡುವ ದುಂಬಿ, ಚಿಲಿಪಿಲಿಗುಟ್ಟುವ ಕೋಗಿಲೆ, ಓದುವ ಗಿಳಿ, ಪ್ರೀತಿಯಿಂದ ಸೇರುವ ಜಕ್ಕವಕ್ಕಿ, ಚೆನ್ನಾಗಿ ಬೀಸುವ ತಣ್ಣನೆಯ ಗಾಳಿ ಇವುಗಳು ಶೋಭಿಸಿರಲು ತನ್ನ ಅಸಂಖ್ಯ ಹೂವು, ಹಣ್ಣು, ಚಿಗುರುಗಳಿಂದ ಮದವನ್ನುಂಟು ಮಾಡುತ್ತ ಚೆನ್ನಾಗಿ ಆ ತೋಟವು ಅಂದಗೊಂಡಿರುವುದು. ೨೨. ಉದ್ಭಟದೇವಾ, ಪ್ರೀತಿಯಿಂದ ಆ ಗಿಳಿಗಳೊಡನೆ ಬಂದ ನಾನು ಆ ಮನೋಹರವಾದ ತೋಟವನ್ನು ಸಮೀಪಿಸಿ ಅಲ್ಲಿ ಆಶ್ರಯಪಡೆದು ಮಹದಾನಂದಸಾಗರದಲ್ಲಿ ತೇಲಾಡುತ್ತಿದ್ದೆನು. ೨೩. ಶ್ರೇಷ್ಠವಾದ ಸಂಗೀತದಲ್ಲಿ ಆನಂದಿಸುವವನೇ, ತನಿಯಾದ ಹಣ್ಣಿನ ಗೊಂಚಲುಗಳನ್ನು ನೋಡಿ ಅತ್ಯಾನಂದದಿಂದ ಹಾರಿ ಬಂದು ಮೆಲ್ಲನೆ ಕೊಕ್ಕಿನಿಂದ ಹಣ್ಣನ್ನು ಬಗಿದು ಸಿಹಿಯಾದ ಅದರ ರಸವನ್ನು ಸವಿದು ಹೆಚ್ಚಿನ ಮುದಗೊಂಡು ನಿತ್ಯವೂ ಹೀಗೆ ಶೋಭಿಸಿರುವ ಆ ಗಿಳಿಗಳ ಸಮೂಹದೊಂದಿಗೆ ನಾನು ಆ ವನದಲ್ಲಿದ್ದೆನು. ವ॥ ಮತ್ತೆ ಆ ವನದಲ್ಲಿ ಹೇಗಿದ್ದೆನೆಂದರೆ, ೨೪. ರಾಜಕಂಠೀರವಾ, ಬಾಳೆಯ ಗಿಡದಲ್ಲಿ , ಎತ್ತರವಾದ ಮಾಮರದಲ್ಲಿ, ಜಂಬು ನೇರಳೆ ಮರದಲ್ಲಿ, ಚೆನ್ನಾದ ದಾಳಿಂಬೆ ಗಿಡದಲ್ಲಿ - ಹೀಗೆ ಈ ವೃಕ್ಷಗಳಲ್ಲಿ ಏರಿ ಅವುಗಳ ಹಣ್ಣುಗಳನ್ನು ಸಂತಸದಿಂದ ದಣಿಯುವಷ್ಟು ಸವಿದು ಆ ಶ್ರೇಷ್ಠಗಿಳಿಗಳ ಸಮೂಹದೊಂದಿಗೆ

ಇಂತನಂತಕಾಲಮಾವನದೊಳರಗಿಳಿಗಳೊಡನಾಡುತಖಿಳಫಲಾಸಕ್ತಿಯಿಂದಾನಿರೆ ತದ್ವನವಳಯದೆ ತಂಜಾವರವೆಂಬ ಪಟ್ಟಣಂ ವಿರಾಜಿಸುತಿರ್ದುದು.

ಮತ್ತಮಾಪುರಮೆಂತಿರ್ದುದೆಂದೊಡೆ,

ಗಾಣರ ಭಟ್ಟರ ವಿಬುಧರ
ಜಾಣರ ಕವಿಗಮಕಿವಾದಿವಾಗ್ಮಿಕರ ವರ।
ಕ್ಷೋಣೀಶರ ಭಟರ ಗೃಹ
ಶ್ರೇಣಿ ವಿರಾಜಿಸೆ ವಿರಾಜಿಸಿದುದಾನಗರಂ ॥ ೨೫ ॥

ದಿಟ್ಟಿಗೊಳಿಪ್ಪ ಬೀದಿಗಳೊಳಾವಗಮೊಯ್ಯನೆ ಸಂಚರಿಪ್ಪ ಸ
ತ್ಪಟ್ಟಗಜಂಗಳಿಂ ನೃಪಕುಮಾರಕರೇಱಿದ ವಾಜಿಜಾಲದಿಂ
ಹೆಟ್ಟುಗೆಯರ್ಕಳಿಂ ಸೊಬಗರಿಂ ಘನಪಂಡಿತರಿಂ ಪ್ರವೀಣರಿಂ।
ನಟ್ಟುವರಿಂದಲಂಪುವೊಡೆದೊಪ್ಪಿದುದಾನಗರಂ ಧರಾಧಿಪಾ ॥ ೨೬ ॥

ಈಪರಿ ಬೆಡಂಗುವೆತ್ತೆಸೆ
ವಾಪುರಕೆ ಸುಧರ್ಮನೆಂಬ ಪೆಸರುಳ್ಳ ಧರಿ।
ತ್ರೀಪತಿ ರಂಜಿಪನಿಂದುಕ
ಲಾಪಪದಾರ್ಚಕನದೊರ್ವನರಸಾಗಿ ನೃಪಾ ॥ ೨೭ ॥

ಮತ್ತಮಾಪುರಂ ವಿರಾಜಿಸುತ್ತಿರ್ದುದೆಂತೆಂದೊಡೆ,

ಕೇಳಂ ಮಿಕ್ಕಾಗಮಾನೀಕಮನೊಸೆದಿನಿತಂಟಂ ಪರದ್ರವ್ಯಮಂ ಕೂ
ರ್ತಾಳೋಕಂಗೈಯ್ಯನನ್ಯಾಂಗನೆಯರನುಱು ಜಿಹ್ವಾತಿಲಾಂಪಟ್ಯದಿಂ ಸಂ।
ಮೇಳಂ ಮಾಡಂ ನಿಷಿದ್ಧೋದ್ರುಚಿಪರಿಕರಮಂ ನಿಲ್ಲದಾಘ್ರಾಣಿಸಂಮೇಣ್
ಭಾಳಾಕ್ಷಾನರ್ಪಿತಾಂಚತ್ಕುಸುಮದನಱುಗಂಪಂತದುರ್ವೀಂದ್ರಚಂದ್ರಾ ॥ ೨೮ ॥

ನಾನು ಜೊತೆಗೂಡಿ ಸಂಚರಿಸುತ್ತಿದ್ದೆನು. ವ॥ ಹೀಗೆ ಬಹುಕಾಲ ಆ ವನದಲ್ಲಿ ಅರಗಿಳಿಗಳೊಡನೆ ಆಡುತ್ತ ಎಲ್ಲಾ ಬಗೆಯ ಹಣ್ಣುಗಳನ್ನು ಸವಿಯುವ ಬಯಕೆಯುಳ್ಳವನಾಗಿ ನಾನಿರುತ್ತಿರಲು ಆ ವನದ ಭಾಗದಲ್ಲಿ ತಂಜಾವರವೆಂಬ ಪಟ್ಟಣವು ಚೆನ್ನಾಗಿ ಮೆರೆಯುತ್ತಿದ್ದಿತು. ವ॥ ಮತ್ತೆ ಆ ಪುರವು ಹೇಗಿತ್ತೆಂದರೆ, ೨೫. ಹಾಡುಗಾರರ, ಪಂಡಿತರ, ವಿದ್ವಾಂಸರ, ಜಾಣರ, ಕವಿಗಮಕಿವಾದಿಗಳ, ಶ್ರೇಷ್ಠ ಅರಸರ, ವೀರರ ಮನೆಗಳ ಸಾಲು ಶೋಭಿಸುತ್ತಿರಲು ಆ ನಗರವು ಒಪ್ಪಗೊಂಡಿತು. ೨೬. ಮಹಾರಾಜಾ, ಕಣ್ಸೆಳೆಯುವ ಬೀದಿಗಳಲ್ಲಿ ಸದಾ ಮೆಲ್ಲನೆ ಸಂಚರಿಸುವ ಒಳ್ಳೆಯ ಪಟ್ಟದಾನೆಗಳಿಂದ ರಾಜಕುಮಾರರು ಹತ್ತಿ ಕುಳಿತ ಕುದುರೆಗಳ ಮೊತ್ತದಿಂದ, ಸ್ತ್ರೀಯರ ಸಮೂಹದಿಂದ, ಸುಂದರಾಂಗರಿಂದ, ಘನಪಂಡಿತರಿಂದ, ಚೆನ್ನಾಗಿ ವೀಣೆ ನುಡಿಸುವವರಿಂದ, ನಟರಿಂದ ಆ ನಗರವು ಸೊಗಸನ್ನು ಹೊಂದಿ ಶೋಭಿಸಿತು. ೨೭. ಮಹಾರಾಜಾ, ಈ ರೀತಿ ಸೊಬಗಿನಿಂದ ಕೂಡಿ ಶೋಭಿಸಿರುವ ಆ ಪಟ್ಟಣಕ್ಕೆ ಸುಧರ್ಮನೆಂಬ ಹೆಸರಿನ ಶಿವನ ಪಾದಪೂಜಕನಾದ ಮಹಾರಾಜನೊಬ್ಬನು ಅಧಿಪತಿಯಾಗಿ ಮೆರೆಯುತ್ತಿರುವನು. ವ॥ ಮತ್ತೆ ಆ ಪಟ್ಟಣವು ಹೇಗೆ ಕಂಗೊಳಿಸುತ್ತಿದ್ದಿತೆಂದರೆ, ೨೮. ರಾಜರುಗಳ ನಡುವೆ ಚಂದ್ರನಂತಿರುವ ಆ ಮಹಾರಾಜನು [ಶಿವಾಗಮಗಳನ್ನಲ್ಲದೆ]

ಇಂತೆಸೆವ ಸದ್ಧರ್ಮಭೂಪಾಲಕನ ಪಟ್ಟದರಾಣಿ ಸತ್ಯವತಿಯೆನಿಸಿ ಪೆಸರುಳ್ಳ ಪೆಣ್ಮಣಿ ವಿರಾಜಿಸುತ್ತಿರ್ದಳು॥

ಅದೆಂತೆಂದೊಡೆ,

ವಾಣಿಯ ಜಾಣ್ಬುಧಾಂಬುಧಿತನೂಜೆಯ ಪೆಂಪಿನ ಗಾಡಿ ರಂಜಿಪಿಂ
ದ್ರಾಣಿಯ ವೈಭವಂ ನೆಗಟ್ದಿರುಂಧತಿಯುನ್ನತಭರ್ತೃಭಕ್ತಿ ತಾಂ।
ಮಾಣದದೊಂದುಗೂಡಿ ಪೊಸಪೆಣ್ಬರಿಜಾಂತು ವಿರಾಜಿಪಂತೆ ತತ್
ಕ್ಷೋಣಿಪರಾಟ್ಸುಧರ್ಮನ ವಧೂಮಣಿ ಯೊಪ್ಪಿದಳುದ್ಭಟೋರ್ವಿಪಾ ॥ ೨೯ ॥

ಇಂತು ಮನಂಗೊಳಿಸುವ ತ
ತ್ಕಾಂತಾಮಣಿಗೂಡಿ ಯಾಮಹಿಪನಿರುತಿರಲೋ।
ರಂತೊಂದುದಿನಂ ಮನದೊ
ಳ್ಸಂತಾನಮನಾಸೆಮಾಡಿ ಚಿಂತಿಸುತಿರ್ದಂ ॥ ೩೦ ॥

"ಭುವಿನಾಪುತ್ರಸ್ಯ ಲೋಕೋಸ್ತಿ ಹಿ" ಯೆನಿಪತುಳಾಮ್ನಾಯವಾಕ್ಯಂಗಳಂ ಕೇ
ಳ್ದವನೀಶಂ ಚಿಂತಿಸುತ್ತಿರ್ಪಿನಮವನಿತಳಕ್ಕಂದು ಬಂದಂ ಮುನೀಶಂ।
ಸುವಿವೇಕಾಲಂಕೃತಂ ತಾನೆನಿಸುವ ಪೆಸರುಳ್ಳಚ್ಛಯೋಗೀಂದ್ರಚಂದ್ರಂ
ಸುವಿಲಾಸಾತ್ಮಂತದುರ್ವೀಪತಿಯ ಗುರುವರಂ ಕೇಳ್ನರೇಂದ್ರಾಗ್ರಗಣ್ಯಾ ॥ ೩೧ ॥

ಗುರುವಿನ ಬರವಂ ಕೇಳ್ದೊಡೆ ತಾಂ ತನ್ನ ನಲ್ಲಳ್
ವೆರಸತಿಮುದದಿಂದಂ ಬಂದು ಪಾದಾಂಬುಜಕ್ಕೊ

ಉಳಿದ ಆಗಮಗಳನ್ನು ಕೇಳನು, ಬೇರೆಯವರ ಸಂಪತ್ತಿಗೆ ಆಸೆಪಡನು, ಅನ್ಯಸ್ತ್ರೀಯರನ್ನು ಮೋಹಿಸನು, ನಿಷಿದ್ಧ ತಿನಿಸುಗಳನ್ನು ನಾಲಿಗೆ ಚಾಪಲ್ಯಕ್ಕಾಗಿ ಹತ್ತಿರ ಸೇರಿಸನು, ಶಿವನಿಗೆ ಸಲ್ಲದ ಕುಸುಮಗಳ ಸುವಾಸನೆಯನ್ನು ತಪ್ಪಿಯೂ ಆಘ್ರಾಣಿಸನು. ವ॥ ಹೀಗೆ ಶೋಭಿಸಿರುವ ಸದ್ಧರ್ಮ ಮಹಾರಾಜನಿಗೆ ಸತ್ಯವತಿ ಎಂಬ ಹೆಸರಿನ ಮಂಗಳಾಂಗಿಯು ಪಟ್ಟದರಾಣಿಯಾಗಿ ಕಂಗೊಳಿಸುತ್ತಿದ್ದಳು. ವ॥ ಅದು ಹೇಗೆಂದರೆ, ೨೯. ಉದ್ಭಟ ಮಹಾರಾಜಾ, ಸರಸ್ವತಿಯ ಬುದ್ಧಿವಂತಿಕೆ, ಲಕ್ಷ್ಮಿಯ ಹಿರಿಮೆಯಿಂದಕೂಡಿದ ಸೌಂದರ್ಯ, ಶೋಭಾಯಮಾನಳಾದ ಶಚೀದೇವಿಯ ವೈಭವ, ಪ್ರಖ್ಯಾತಳಾದ ಅರುಂಧತಿಯ ಪತಿಭಕ್ತಿ, - ಇವು ಬಿಡದೆ ಒಂದುಗೂಡಿ ಹೊಸದಾಗಿ ಹೆಣ್ಣಿನ ಆಕಾರ ತಾಳಿ ಪ್ರಕಾಶಿಸುವಂತೆ ಆ ಸುಧರ್ಮಮಹಾರಾಜನ ಕಾಂತೆಯು ಶೋಭಿಸಿದಳು. ೩೦. ಹೀಗೆ ಮನಸೆಳೆಯುವ ಆ ಕಾಂತೆಯೊಡಗೂಡಿ [ಭಿನ್ನವಿಲ್ಲದೆ] ಆ ಮಹಾರಾಜನಿರುತ್ತಿರಲು ಒಂದು ದಿವಸ ಮನದಲ್ಲಿ ಸಂತಾನವನ್ನಪೇಕ್ಷೆಪಟ್ಟು ಚಿಂತಿಸುತ್ತಿದ್ದನು. ೩೧. ಮಹಾರಾಜರುಗಳಲ್ಲಿ ಅಗ್ರಗಣ್ಯನಾದವನೇ ಕೇಳು, "ಲೋಕದಲ್ಲಿ ಸಂತಾನವಿಲ್ಲದವರಿಗೆ ಮೋಕ್ಷವಿಲ್ಲ" ಎಂಬ ಅಸಮಾನವಾದ ವೇದವಾಕ್ಯಗಳನ್ನು ಕೇಳಿದ ಮಹಾರಾಜನು ಚಿಂತಿಸುತ್ತಿರಲು, ತಾನು ಒಳ್ಳೆಯ ವಿವೇಕ ಶಾಲಿಯೆನ್ನುವಂತೆ ಪ್ರಖ್ಯಾತನೂ, ಪರಿಶುದ್ಧಯೋಗಿಗಳ ನಡುವೆ ಚಂದ್ರನಂತಿರುವವನೂ, ಉಲ್ಲಾಸಯುಕ್ತನೂ ಆದ ಮಹಾರಾಜನ ಗುರುಮೂರ್ತಿಯು ಭೂಮಿಗೆ ಅಂದು ಬಂದನು. ೩೨. ಗುರುವಿನ ಆಗಮನ ವಾರ್ತೆಯನ್ನು ಕೇಳಿದ ಮಹಾರಾಜನು ಮಹಾರಾಣಿಯೊಡಗೂಡಿ

ಲ್ದಿರದೆಱಗಿ ಸಮುದ್ಯದ್ಭಕ್ತಿವೆತ್ತಿರ್ಪ ತದ್ಭೂ
ವರನನೊಸೆದು ನೋಡುತ್ತೊಯ್ಯನಿಂತೆಂದನಾಗಳ್ ॥ ೩೨ ॥

ಇಂತೆನೆ ಕೇಳುತೆ ತನ್ಮುನಿಚಂದ್ರಂ
ಪಿಂತಣಜನ್ಮದೊಳಿಲ್ಲದ ಸೈಪಿಂ।
ನ್ನೆಂತದು ಕಾಂಕ್ಷಿಸೆ ಬಪ್ಪುದೆನಲ್ ಭೂ
ಕಾಂತನದಕ್ಕುಸುರ್ದಂ ಮಗುೞ್ದಾಗಳ್ ॥ ೩೩ ॥

ಪುತ್ರರಿಲ್ಲದ ಸಂಪದಂ ರುಚಿಯಿಲ್ಲದಂಬು ಸಮುಲ್ಲಸ
ನ್ಮಿತ್ರನಿಲ್ಲದ ಬಾನ್ಸರೋರುಹಮಿಲ್ಲದಗ್ಗದ ತಣ್ಗೊಳಂ।
ಚಿತ್ರಮಿಲ್ಲದ ಭಿತ್ತಿ ಸೌಸವಮಿಲ್ಲದುದ್ಗಮವಚ್ಛಚಾ
ರಿತ್ರನಲ್ಲದ ಭೂಪನೇಂ ಬಗೆಗೊಳ್ವನೇ ಮುನಿಪುಂಗವಾ ॥ ೩೪ ॥

ಮತ್ತಮದಲ್ಲದಮೃತರುಚಿಬೆಳಗದಂಬರದಂತೆ ಸುಕುಮಾರಕಿಸಲಯವಿಸರಮಂ ಸವಿದು ನುಣ್ದನಿಯನೊಡರ್ಚುವ ಕಲಕಂಠಮಿಲ್ಲದಿಮ್ಮಾವಿನಂತೆ ಮಂಜುಳಕಂಜಕಿಂಜಲ್ಕ ಪುಂಜರಂಜಿತ ಕಾದಂಬಮಿಲ್ಲದಂಬುಜಾಕರದಂತೆ ಸಮುದಂಚಿತಕುಟಿಲಪಟುಚಂಚೂಪುಟಕೋಟಿವಿಪಾಟಿತಮನೋಹರ ಪರಿಪಕ್ವಫಲನಿಷ್ಯಂದಮಧುರರಸಾಸ್ವಾದನವಿಕಸ್ವರವಿ ರಾಜಿತರಾಜಕೀರಮಿಲ್ಲದುದ್ಯಾನದಂತೆ ತನಿಗುಂಪಂ ತಣ್ಣನೆ ತಣಿದುಂಡು ಪೊಂಗಿ ಪೊಱು'ಯೇಱಿ' ಪೊಂಪುಳಿಯೋಗಿ ನಿಟ್ಟೆಸಳ್ವಸೆಯೊಳೊಱಂಗಿ ಝೇಂಕರಿಪ ಮದಾಳಿಯಿಲ್ಲದಲರಂತೆ ನಂದನನಿಲ್ಲದಾಜವಂಜವದಲಂಪಿನ ಪೆಂಪು ರಂಜಿಸದವನಿಯೊಳ್॥

ಸಂತಸದಿಂದ ಬಂದು ಗುರುವಿನ ಪಾದಕಮಲಗಳಿಗೆ ಪ್ರೀತಿಯಿಂದ ಬಿಡದೆ ನಮಸ್ಕರಿಸಿ ಅತಿಶಯ ಭಕ್ತಿಯಿಂದ ಕೂಡಿ ಇರುತ್ತಿರಲು ಆ ಮಹಾರಾಜನನ್ನು ಮೆಚ್ಚುಗೆಯಿಂದ ನೋಡುತ್ತ ಮೆಲ್ಲನೆ ಆಗ ಹೀಗೆಂದನು. ೩೩. ಹಾಗೆ ಹೇಳಲು, ಆ ಮುನೀಂದ್ರ ಚಂದ್ರನು ಕೇಳುತ್ತ 'ಹಿಂದಣ ಜನ್ಮದಲ್ಲಿ ಪುಣ್ಯವಿಲ್ಲದಿರಲು ಏನನ್ನೇ ಬಯಸಿದರೂ ಅದು ಸಿದ್ಧಿಸುವುದೆ?' ಎಂದು ಹೇಳಲು, ಆಗ ಮತ್ತೆ ಮಹಾರಾಜನು ಅದಕ್ಕೆ ಹೀಗೆಂದನು. ೩೪. ಮುನಿಶ್ರೇಷ್ಠನೆ, ಮಕ್ಕಳಿಲ್ಲದ ಸಂಪತ್ತು, ರುಚಿಯಿಲ್ಲದ ನೀರು, ಸೂರ್ಯನಿಲ್ಲದ ಆಕಾಶ, ಕಮಲಗಳಿಲ್ಲದ ಪ್ರಖ್ಯಾತವಾದ ತಣ್ಣನೆಯ ಕೊಳ, ಚಿತ್ರವಿಲ್ಲದ ಗೋಡೆ, ಸುವಾಸನೆಯಿಲ್ಲದ ಪುಷ್ಪ, ಪರಿಶುದ್ಧ ಚಾರಿತ್ರನಲ್ಲದ ಮಹಾರಾಜ ಇವುಗಳು ಮನಸೆಳೆಯತ್ತವೆಯೆ? ವ॥ ಮತ್ತೆ ಅದಲ್ಲದೆ, ಚಂದ್ರನು ಬೆಳಗದ ಆಕಾಶದಂತೆ, ಎಳೆಯದಾದ ಚಿಗುರನ್ನು ಸವಿದು ಮಧುರವಾದ ಧ್ವನಿಯನ್ನು ಹೊಮ್ಮಿಸುವ ಕೋಗಿಲೆಯಿಲ್ಲದ ಸಿಹಿ ಮಾವಿನ ಮರದಂತೆ, ಮಂಜುಳವಾದ ಕಮಲದಳಗಳಿಂದ ಶೋಭಿಸಿರುವ ಹಂಸಗಳಿಲ್ಲದ ಕೊಳದಂತೆ, ಸುಂದರವಾದ ಬಾಗಿದ ತೀಕ್ಷ್ಣ ಕೊಕ್ಕಿನಿಂದ ಚೆನ್ನಾಗಿ ಕುಕ್ಕಿ ಸೀಳಿದ ಮನೋಹರವಾದ ಮಾಗಿದ ಹಣ್ಣಿನಿಂದ ಸೂಸುವ ಇನಿದಾದ ರಸವನ್ನು ಈಂಟುವ ಮಧುರ ಧ್ವನಿಯಿಂದ ಶೋಭಿಸಿರುವ ಅರಗಿಳಿಯಿಲ್ಲದ ಉದ್ಯಾನದಂತೆ, ತನಿಗಂಪನ್ನು ತಣ್ಣನೆ ತಣಿದುಂಡು ಉಬ್ಬಿ ಉತ್ಸಾಹದಿಂದ ಕೂಡಿ ನವಿರೇಳಿ ನಿಡಿದಾದ ಹೂವಿನ ದಳದಲ್ಲಿ ಮತ್ತೇರಿ ಮಲಗಿ ಝೇಂಕರಿಸುವ ದುಂಬಿಗಳಿಲ್ಲದ ಹೂವುಗಳಂತೆ, ಮಗನಿಲ್ಲದ ಆ ಸಂಜೀವಿನಿಯ ಸೊಗಸೂ ಹೆಚ್ಚಳವೂ ಭೂಮಿಯಲ್ಲಿ

ಅಂತುಮಲ್ಲದೆಯುಂ,

ಕೀರ್ತಿಯಿಲ್ಲದ ಚಾಗಮುನ್ನ ತಲಕ್ಷಣಾದಿಲಸದ್ಗುಣ
ಸ್ಫೂರ್ತಿಯಿಲ್ಲದ ಕಬ್ಬಮೊಪ್ಪುವ ಮೋಹಪಾಶಸಮುಲ್ಲಸ।
ಜ್ಯೋತಿಯಿಲ್ಲದ ಬೋಧೆ ಯಾಡುವ ಮಕ್ಕಳಿಲ್ಲದಲಂಪು ಚಿ
ನ್ಮೂರ್ತಿಯಲ್ಲದ ಯೋಗಿಲಾಂಛನವೇಂ ವಿರಾಜಿಪುದೇ ಋಷೀ ॥ ೩೫ ॥

ಎಂದಿಂತು ನೀತಿಯಂ ಕೂಡಿಕೊಂಡು ಕರುವಂ ತೋಱಿ ಸತಿವೆರಸು ಬಿನ್ನಪಂಗೆಯ್ದು ತತ್ಸುಧರ್ಮನಿರವಂ ಕಂಡು ಮುಗುಱ್ದಾಮುನಿನಾಥನಿಂತೆಂದಂ॥

ಆದೊಡೆಲೆ ನೃಪ ನೀಂ ಸಂ
ಪಾದಿಸಿದ ಸುಪುಣ್ಯಮಿಲ್ಲದೆಂತಕ್ಕುಂ ಪು।
ತ್ರೋದಯಮೆನೆ ತನ್ಮುನಿಪತಿ
ಗಾದಿನಕರವಂಶಜಂ ಮಗುಱ್ದಿಂತೆಂದಂ ॥ ೩೬ ॥

ಮುನಿಪತಿಯವಧರಿಸಾನೀ
ತನುವಂ ಕೊಟ್ಟಾದೊಡಂ ತನುಜನಂ ಪಡೆವೊಂ।
ದನುವಂ ದಯಗೆಯ್ಯೆನಲಾ
ದಿನಕರಕುಲಜಂಗೆ ಮಗುಱ್ದು ಋಷಿ ಯಿಂತೆಂದಂ ॥ ೩೭ ॥

ಚಿತ್ರಚರಿತ್ರ ಕೇಳ್ನಿನಗೆ ನಂದನನಂ ಪಡೆವೊಂದು ಪುಣ್ಯವೀ
ಗಾತ್ರಮನಿತ್ತೊಡಂ ದೊರಕದೆಂದೆನಲಾ ಋಷಿವಲ್ಲಭಂಗೆ ತ।
ನ್ಮಿತ್ರಕುಲೋದ್ಭವಂ ಜತಿಯೆ ಬಿನ್ನಪವೀಸಲೆಬಂಜನೆಂಬಸೊ
ಲ್ಧಾತ್ರಿಯೊಳೆಂತು ಪೋಪುದೆನಲಂದು ಬಟಿಕ್ಕೊರೆದಂ ಮುನೀಶ್ವರಂ ॥ ೩೮ ॥

ಶೋಭಿಸದು. ವ॥ಅಷ್ಟಲ್ಲದೆ, ೩೫. [ಎಲೆ] ಮುನಿಯೇ, ಕೀರ್ತಿಯ [ಆಸೆಯಿಲ್ಲದ] ತ್ಯಾಗ, ಉನ್ನತ ಲಕ್ಷಣಗಳಿಂದ ಕೂಡಿದ ಸದ್ಗುಣ, ಸ್ಫೂರ್ತಿಯಿಲ್ಲದ ಕಾವ್ಯ, ಮೋಹಪಾಶಗಳಿಂದ ಕೂಡಿ ಒಪ್ಪುವ ಉಲ್ಲಾಸಪೂರ್ಣ ಜ್ಞಾನವಿಲ್ಲದ ಬೋಧೆ, ಆಡುವ ಮಕ್ಕಳಿಲ್ಲದ ಸೊಗಸು, ಚಿನ್ಮೂರ್ತಿಯಿಲ್ಲದ ಯೋಗಿ - ಇವು ವಿರಾಜಿಸುತ್ತವೆಯೆ? ವ॥ ಹೀಗೆ ನೀತಿಯೊಡಗೂಡಿ ಕರುವನ್ನು ತೋರಿ ಸತಿಯೊಂದಿಗೆ ವಿಜ್ಞಾಪನೆ ಮಾಡಿದ ಆ ಸುಧರ್ಮ ಮಹಾರಾಜನ ಸ್ಥಿತಿಯನ್ನು ನೋಡಿ ಮತ್ತೆ ಆ ಮುನಿನಾಥನು ಹೀಗೆಂದನು. ೩೬. 'ಆದಾಗ್ಯೂ ಎಲೆ ಮಹಾರಾಜಾ, ನೀನು ಸಂಪಾದಿಸಿದ ಒಳ್ಳೆಯದಾದ ಪುಣ್ಯವಿಲ್ಲದಿದ್ದರೆ ಮಗನು ಹುಟ್ಟುವುದೆಲ್ಲಿ ಸಾಧ್ಯ?' ಎಂದು ಹೇಳಲು ಆ ಮುನಿಪತಿಗೆ ಸೂರ್ಯವಂಶದಲ್ಲಿ ಹುಟ್ಟಿದ ಸುಧರ್ಮ ಮಹಾರಾಜನು ಹೀಗೆಂದನು. ೩೭. 'ಮುನಿಪತಿಯೆ ಕೇಳು, ನಾನು ನನ್ನೀ ದೇಹವನ್ನಾದರೂ ಕೊಟ್ಟು ಮಗನನ್ನು ಪಡೆಯುವ ಅವಕಾಶವನ್ನು ಅನುಗ್ರಹಿಸು' ಎನ್ನಲು ಸೂರ್ಯವಂಶದಲ್ಲಿ ಬಂದ ಆ ಮಹಾರಾಜನಿಗೆ ಮತ್ತೆ ಋಷಿಯು ಹೀಗೆಂದನು. ೩೮. 'ವಿಚಿತ್ರಚರಿತ್ರನೆ ಕೇಳು, ನಿನಗೆ ಈ ದೇಹವನ್ನು ಕೊಟ್ಟರೂ ಪುತ್ರನನ್ನು ಪಡೆಯುವ ಒಂದು ಪುಣ್ಯ ದೊರಕದು' ಎನ್ನಲು ಆ ಋಷಿಗಳೊಡೆಯನಿಗೆ ಸೂರ್ಯವಂಶದಲ್ಲಿ ಜನಿಸಿದ ಸುಧರ್ಮನು ಹೀಗೆಂದನು. 'ಯತಿಯೆ, ನಿನ್ನಲ್ಲಿ ನನ್ನ ಅರಿಕೆ ಮಕ್ಕಳಿಲ್ಲದವನೆಂಬ ಮಾತು ಭೂಮಿಯಲ್ಲಿ ಹೇಗೆ

ಕೇಳಾದೊಡುರ್ವಿಪತಿ ಯೊರ್ವಕುಮಾರಿಯಂ ಮೇ
ಳ್ಬಾಳಾಕ್ಷನರ್ಧತನುವಂ ನೆಱಿ ಕೇಣಿಗೊಂಡಾ।
ಶೈಲೇಂದ್ರಕನ್ಯಕೆಯನರ್ಚಿಸಿದಂದು ನೀಂ ಕೀ
ರ್ತ್ಯಾಳಾಪಮಂ ಪಡೆವುದೆಂದೊರೆದಂ ಮುನೀಶಂ ॥ ೩೯ ॥

ಇಂತು ಪುತ್ರಿಯಂ ಪಡೆವುತ್ತಮಮಾರ್ಗಮಂ ಪೇೞ್ದಾಮುನೀಶ್ವರಂ ತದ್ಭೂಪಾಲಕನಂ ಬೀೞ್ಕೊಂಡು ಪೋಗಲತ್ಯಾನಂದದಿಂದೊಂದು ಸುಮುಹೂರ್ತದೊಳ್ಸತ್ಯವತಿವೆರಸನಂತಸಂರಂಭ ದಿಂದೆೞ್ತಂದು ತದೀಯ ನಗರದುಪವನದುಪಕಂಠದೊಳ್ ಮನಂಗೊಳಿಪ ಚಂಡಿಕಾದೇವಿಯ ಗುಡಿಯ ಕಡೆವಾಗಿಲೊಳೊಡನೆ ಬಂದ ಪಡೆವಳರ್ಮೊದಲಾದವಿಳಸೇನೆಯನಿರಿಸಿ ಯುರುತರಭಕ್ತಿ ರಸಭರದುರುವಣೆಯಿಂದಂ ಬಂದು ದೇಗುಲಮಂ ಪೊಕ್ಕಿಂದುವ ಲೇಖೆಯಂ ಕಂಡಿಂಗದಿರ್ವಕ್ಕಿಯಂತೆ ಪೊಂಗಿ ಪೊಱೆಯೇೞ್ ಸಾಷ್ಟಾಂಗಪ್ರಣತನಾಗಿ ಮಗುೞ್ದೆೞ್ದು ನಿಲ್ತಖಿಳ ಜಗನ್ಮಾತೆಯಂ ಸ್ತೋತ್ರಮಂ ಮಾಡುತ್ತುಂ ಸುಧರ್ಮನೆಸೆದಿರ್ದಂ॥

ಅದೆಂತೆಂದೊಡೆ,

ಧ್ಯಾನಾವಾಹನಮಂಜುಳಾಸನಲಸತ್ಪಾದ್ಯಾರ್ಘ್ಯಪಂಚಾಮೃತ
ಸ್ನಾನಾಚ್ಛಾದನಭೂಷಣಾಗರುಯುತಶ್ರೀಖಂಡಶುಭ್ರಾಕ್ಷತಾ।
ಸೂನಸ್ರಕ್ತತಿಧೂಪದೀಪವರನೈವೇದ್ಯಂ ಸುತಾಂಬೂಲದಿಂ
ತಾನಾರಾಧಿಸಿದಂ ವಧೂಟಿವೆರಸಾಭೂಪಂ ಮಹಾದೇವಿಯಂ ॥ ೪೦ ॥

ಇಂತು ಷೋಡಶೋಪಚಾರಂಗಳಿಂದಂತಕಾಂತಕನರ್ಧಾಂಗಿಯಪ್ಪ ಚಂಡಿಕಾದೇವಿಯನತಿಭಕ್ತಿಯಿಂದಂ ಪೂಜೆಯಂ ಮಾಡಿ ಯಿದಿರೊಳ್ಪರವಶರಾಗಿ ಕಣ್ಮುಚ್ಚಿ ಕೈಮುಗಿದುಕೊಂಡಾದಂಪತಿಗಳಿರೆಯಿರೆ,

ನಿವಾರಣೆಯಾಗುವುದು?' ಅದಕ್ಕೆ ಮುನೀಶ್ವರನು ಹೀಗೆಂದನು. ೩೯. ಹಾಗಾದರೆ ಕೇಳು ಮಹಾರಾಜ, ಶಿವನ ಅರ್ಧಾಂಗದಲ್ಲಿ ಪಾಲುಗೊಂಡ ಗಿರಿಜೆಯನ್ನು ಪ್ರಾರ್ಥಿಸಿ ಕೀರ್ತಿಯನ್ನು ಹರಡುವ ಓರ್ವ ಮಗಳನ್ನು ಪಡೆಯುವುದು ಎಂದು ಮುನೀಶನು ಹೇಳಿದನು. ವ॥ ಹೀಗೆ ಪುತ್ರಿಯನ್ನು ಪಡೆಯುವ ಯೋಗ್ಯಮಾರ್ಗವನ್ನು ಹೇಳಿದ ಆ ಮುನಿಗಳೊಡೆಯನು ಆ ಮಹಾರಾಜನನ್ನು ಬೀಳ್ಕೊಂಡು ಹೋಗಲು ಅತ್ಯಾನಂದದಿಂದ ಒಂದು ಒಳ್ಳೆಯ ಲಗ್ನದಲ್ಲಿ ಸತ್ಯವತಿಯೊಡನೆ ಹೆಚ್ಚಿನ ಸಂಭ್ರಮದಿಂದ ಕೂಡಿ ನಡೆದು ಬಂದು ಆ ನಗರದ ಉಪವನದ ಸಮೀಪದಲ್ಲಿ ಮನಸೆಳೆಯುವ ಚಂಡಿಕಾದೇವಿಯ ಗುಡಿಯ ಕಡೆಯ ಬಾಗಿಲಿನಲ್ಲಿ ಜೊತೆಯಲ್ಲಿ ಬಂದ ಸೈನ್ಯಾಧಿಪತಿಯೇ ಮೊದಲಾದ ಸೈನ್ಯವನ್ನು ನಿಲ್ಲಿಸಿ ಭಕ್ತಿರಸೋತ್ಕಟತೆಯಿಂದ ಬಂದು ದೇವಾಲಯವನ್ನು ಪ್ರವೇಶಿಸಿ ಚಂದ್ರನನ್ನು ಕಂಡ ಚಕೋರ ಪಕ್ಷಿಯಂತೆ ಉಬ್ಬಿ ರೋಮಾಂಚನಗೊಂಡು ಸಾಷ್ಟಾಂಗ ನಮಸ್ಕಾರ ಮಾಡಿ ಮೇಲೆದ್ದು ನಿಂತು ಅಖಿಲ ಜಗನ್ಮಾತೆಯ ಸ್ತೋತ್ರವನ್ನು ಮಾಡುತ್ತ ಸುಧರ್ಮನು ಶೋಭಿಸಿದ್ದನು. ಅದು ಹೇಗೆಂದರೆ, ೪೦. ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಪಂಚಾಮೃತ, ಸ್ನಾನ, ಆಚ್ಛಾದನ, ಭೂಷಣ, ಪರಿಮಳಭರಿತ ಚಂದನ ಶುಭ್ರ ಅಕ್ಷತೆ ಹೂವು ಗಂಧಾದಿಗಳು, ಧೂಪದೀಪ, ಒಳ್ಳೆಯ ನೈವೇದ್ಯ ಕರ್ಪೂರಮಿಶ್ರತಾಂಬೂಲ - ಇವುಗಳಿಂದ ಮಹಾದೇವಿಯನ್ನು ಆ ಮಹಾರಾಜನು ಪತ್ನಿಯೊಡಗೂಡಿ ಆರಾಧಿಸಿದನು. ವ॥ ಹೀಗೆ ಹದಿನಾರು ಬಗೆಯ ಉಪಚಾರಗಳಿಂದ

ನಿಮ್ಮ ಘನಭಕ್ತಿಗಿಂದೊ
ಲ್ದಾಂ ಮೆಚ್ಚಿದೆನಿತ್ತೆನೊರ್ವಳಂ ಪುತ್ರಿಯನಿ॥
ನ್ನುಮ್ಮಳವೇಕೆನುತದ್ರಿಜೆ
ಸಮ್ಮದಮಪ್ಪಂತೆ ನುಡಿಯಲೆಚ್ಚತ್ತಾಗಳ್ ॥ ೪೧ ॥

ಶಿವೆ ಕೊಟ್ಟಳ್ಪುತ್ರಿಯನೆಂ
ದವನೀಶಂ ತನ್ನ ಕಾಂತೆವೆರಸಗಜೆಯನು।
ತ್ಸವದಿಂ ಬೀಱುಕೊಂಡು ಮನದೆ
ಸುವಿಲಾಸಂವಡೆದು ತನ್ನ ಮನೆಯಂ ಪೊಕ್ಕಂ ॥ ೪೨ ॥

ಇಂತು ಋಷೀಶ್ವರನುಪದೇಶದಿಂದಂ ಚಂಡಿಕೆಯನಾರಾಧಿಸಿ ಮೆಚ್ಚಿಸಿ ವರಮಂ ಪಡೆದೆಡೆವಿಡದೆ ಸುಖಸುಧಾವಾರಾಸಿಯೊಳ್ಮುಡಿ ಮುೞುಂಗಾಡಿ ಸುಧರ್ಮಂ ಸತ್ಯವತಿಗೂಡಿ ಯೆಸೆದಿರ್ದಂ॥

ಅದೆಂತೆಂದೊಡೆ,

ತಣ್ಗೊಳದೊಳ್ವಿಜೃಂಭಿಪರಸಂಚೆಯ ಜೋಡಿನವೊಲ್ಪೊದಟ್ದಿ ಪೂ
ದೊಂಗಲೊಳೊಪ್ಪುತಿರ್ಪ ಮಧುಲಿಣ್ಮಿಥುನಂಬೊಲಜಸ್ರಮಚ್ಚವೆ।
ಳ್ದಿಂಗಳೊಳುರ್ಬಿ ತೇಂಕುವ ಚಕೋರಕದಂಪತಿಯಂತೆ ಬೆಳ್ಪಿವಾ
ಡಂಗಳೊಳೊಲ್ದು ಸತ್ಯವತಿಗೂಡಿ ಸುಧರ್ಮನರೇಂದ್ರನೊಪ್ಪಿದಂ ॥ ೪೩ ॥

ಮತ್ತಮಾದಂಪತಿಗಳರ್ಕೋದಯಮಂ ಕಂಡೆಣೆವಕ್ಕಿಗಳಂತೆಡೆವಿಡದೆ ಮಹೋಲ್ಲಾಸದಿಂದಂ ಸುಖಿಸುತ್ತಮಿರೆಯಿರೆ, ಕೆಲವು ದಿವಸಕ್ಕಾಸತ್ಯವತಿಗೆಳವಸಿರ್ಮೊಳೆದೋಱ ಬಳೆವುತ್ತಿರ್ದುದು॥

ಶಿವನ ಅರ್ಧಾಂಗಿಯಾದ ಚಂಡಿಕಾದೇವಿಯನ್ನು ಅತಿಭಕ್ತಿಯಿಂದ ಪೂಜಿಸಿ ಎದುರಿಗೆ ಪರವಶರಾಗಿ ಕಣ್ಮುಚ್ಚಿ ಕೈಮುಗಿದುಕೊಂಡು ಆ ದಂಪತಿಗಳಿರುತ್ತಿರಲು, ೪೧. "ನಿಮ್ಮ ಅತಿಶಯವಾದ ಭಕ್ತಿಗೆ ನಾನು ಮೆಚ್ಚಿರುವೆನು. ನಿಮಗೆ ಒಲಿದ ನಾನು ಓರ್ವ ಪುತ್ರಿಯನ್ನು ಅನುಗ್ರಹಿಸಿರುವೆನು. ಇನ್ನು ಚಿಂತೆಯೇಕೆ? ಎಂದು ಪಾರ್ವತಿಯು ಒಪ್ಪಿಗೆಯಾಗುವಂತೆ ನುಡಿಯಲು ಆಗ ಎಚ್ಚರಗೊಂಡ ಅವರು, ೪೨. ಗಿರಿಜೆಯು ಮಗಳನ್ನು ಅನುಗ್ರಹಿಸಿದಳು ಎಂದು ಹೇಳುತ್ತಾ ಮಹಾರಾಜನು ಪತ್ನಿಯೊಡನೆ ಸಂತೋಷದಿಂದ ಪಾರ್ವತಿಯನ್ನು ಬೀಳ್ಕೊಂಡು ಅತ್ಯಾನಂದ ಹೊಂದಿ ತನ್ನ ಮನೆಯನ್ನು ಹೊಕ್ಕನು. ವ॥ ಹೀಗೆ ಮುನೀಶ್ವರನ ಉಪದೇಶದಿಂದ ಚಂಡಿಕಾದೇವಿಯನ್ನು ಆರಾಧಿಸಿ ಮೆಚ್ಚಿಸಿ ವರವನ್ನು ಪಡೆದು ಎಡೆಬಿಡದೆ ಸುಖಾಮೃತ ಸಮುದ್ರದಲ್ಲಿ ಮುಳುಗೇಳುತ್ತ ಸುಧರ್ಮನು ಸತ್ಯವತಿಯೊಡಗೂಡಿ ಶೋಭಿಸಿದ್ದನು. ಅದು ಹೇಗೆಂದರೆ, ೪೩. ತಣ್ಣನೆಯ ಕೊಳದಲ್ಲಿ ವಿಜೃಂಭಿಸಿರುವ ಜೋಡಿ ಹಂಸೆಯಂತೆ, ಚೆನ್ನಾಗಿ ಅರಳಿದ ಹೂವಿನ ಗೊಂಚಲಿನಲ್ಲಿ ಶೋಭಿಸಿರುವ ಜೋಡಿ ದುಂಬಿಗಳಂತೆ, ಸದಾ ಅಚ್ಚ ಬೆಳುದಿಂಗಳಿನಲ್ಲಿ ಉಬ್ಬಿ ತೇಗುವ ಚಕೋರ ದಂಪತಿಗಳಂತೆ, ಬೆಳ್ಳಿಯ ಭವ್ಯ ಮಂದಿರಗಳಲ್ಲಿ ಪ್ರೀತಿಯಿಂದ ಸತ್ಯವತಿಯೊಡಗೂಡಿದ ಸುಧರ್ಮ ಮಹಾರಾಜನು ಅಂದಗೊಂಡನು. ವ॥ ಮತ್ತೆ ಆ ದಂಪತಿಗಳು ಸೂರ್ಯೋದಯವನ್ನು ಕಂಡ ಜಕ್ಕವಕ್ಕಿಗಳಂತೆ ತೆಕ್ಕೆ ಸಡಿಲಿಸದೆ ಸಂತೋಷದಿಂದ ಸುಖಿಸುತ್ತಲಿರಲು ಕೆಲವು

ಅದೆಂತೆಂದೊಡೆ,

ಶುಕ್ತಿಕೆಯೊಳ್ಬೆಳೆವಂತಿರೆ
ಮೌಕ್ತಿಕಮುಱ್ ಮಣಿಶಲಾಕೆ ಧಾರಿಣಿಯೊಳ್ಸ।
ಮ್ಯಕ್ತರಲತೆ ನಂದನದೊ
ಳ್ವ್ಯಕ್ತಂ ಸತಿಯುದರದಲ್ಲಿ ಬಳೆದುದು ಗರ್ಭಂ ॥ ೪೪ ॥

ಶುಭಗರ್ಭಂ ದಿನದಿನಕಂ
ದಭಿವೃದ್ಧಿಯನೈದಲಾನ್ನಪನ ಸತಿ ವಿಲಸ।
ದ್ವಿಭವಂಬಡೆದೆಸೆದಳ್ಕೇ
ಳಭವಾಂಘ್ರಿಸರೋಜಗಂಧಲುಬ್ಧಭ್ರಮರಾ ॥ ೪೫ ॥

ನಡೆಗಾಲಸ್ಯಂ ಮುಖಾಂಭೋಜಕೆ ಧವಳತೆ ಕರ್ಣಾಂತನೇತ್ರಕ್ಕೆ ಮೇಚಕೊ
ಳ್ಪಿಡಿದಂಚತ್ಕಾಂತಿ ರೋಮಾಳಿಗಳೆಸೆವೆಳೆಗರ್ಪುಜ್ವಳಸ್ನಿಗ್ಧಭಾವಂ।
ಪೊಡರ್ವಂಗಕ್ಕುರ್ಬುಗರ್ಭಕ್ಕಮರ್ದ ಬಯಕೆ ಚಿತ್ತಕ್ಕೆ ತಾಂಪೊರ್ದಲುಂ ತಾಂ
ಜಡಸಂಜಾತಚ್ಛದಾಕ್ಷಿದ್ವಯೆ ಪೊಸಬಸಿರಂ ತಾಳ್ದು ಕಣ್ಗೆಡ್ಡಮಾದಳ್ ॥ ೪೬ ॥

ಮತ್ತಮಾಕಾಲದೊಳ್,

ಬಸಿರೊಳ್ಪಂಕಜಪೀಠನಿ
ರಿಸಿದುರುಶೃಂಗಾರನಿಧಿಯನಗಲದೆ ಕಾದಿ।
ರ್ಪಸಿತೋರಗನೆನೆ ಕರ್ಪಿಡಿ
ದೆಸೆದುದು ಘನರೋಮರಾಜಿ ತಚ್ಛಶಿಮುಖಿಯಾ ॥ ೪೭ ॥

ದಿವಸಗಳಲ್ಲೇ ಸತ್ಯವತಿಗೆ ಎಳೆಯ ಬಸಿರು ಮೊಳಕೆಯೊಡೆದು ವೃದ್ಧಿಸುತ್ತಿದ್ದಿತು. ಅದು ಹೇಗೆಂದರೆ, ೪೪. ಚಿಪ್ಪಿನಲ್ಲಿ ಮುತ್ತೂ, ಭೂಮಿಯಲ್ಲಿ ಮಣಿಶಲಾಕೆಯೂ, ತೋಟದಲ್ಲಿ ಸುಂದರವಾದ ಬಳ್ಳಿಯೂ ಹುಟ್ಟುವಂತೆ ಸತ್ಯವತಿಯ ಹೊಟ್ಟೆಯಲ್ಲಿ ಗರ್ಭವು ಬೆಳೆಯಿತು. ೪೫. ಶಿವನ ಪಾದಕಮಲಗಳ ನರುಗಂಪಿನಲ್ಲಿ ಅತ್ಯಾಸಕ್ತಿಯುಳ್ಳ ದುಂಬಿಯೇ ಕೇಳು, ಪವಿತ್ರಗರ್ಭವು ದಿನದಿನಕ್ಕೆ ಬೆಳೆಯುತ್ತಿರಲು ಆ ರಾಜನ ಸತಿಯು ಅತಿಶಯವಾದ ಲಾವಣ್ಯವನ್ನು ಹೊಂದಿ ಶೋಭಿಸಿದಳು. ೪೬. ನಡೆಯಲ್ಲಿ ಆಲಸ್ಯ ಹೊಂದಿ, ಮುಖಕಮಲವು ಬೆಳ್ಪೇರಿ, ಕಿವಿಯವರೆವಿಗೂ ಹರಡಿದ ಕಣ್ಣುಗಳು ಕಾಂತಿಯುಕ್ತವಾಗಿ, ಕಪ್ಪಾದ ಕೂದಲುಗಳಿಂದ ಕೂಡಿ, ಉಜ್ವಲವಾದ ಸ್ನೇಹಭಾವ ಮೂಡಿ, ಕಾಣುವಂತೆ ದೇಹಕ್ಕೆ ಉಬ್ಬು ತೋರಿ, ಗರ್ಭಕ್ಕೆ ಹೊಂದಿದಂತೆ ಬಯಕೆಗಳು ಮನದಲ್ಲುಂಟಾಗಿ, ಜಡಯುತ ನೋಟವಾಗಿ ಹೊಸ ಬಸಿರನ್ನು ಹೊಂದಿ ಕಣ್ಣಿಗೆ ಮನೋಹರವಾದಳು. ವ॥ ಮತ್ತೆ ಆ ಕಾಲದಲ್ಲಿ, ೪೭. ಬಸಿರಲ್ಲಿ ಬ್ರಹ್ಮನು ಇರಿಸಿದ ಶ್ರೇಷ್ಠವಾದ ಶೃಂಗಾರನಿಧಿಯನ್ನು ಕಾದಿರುವ ಕೃಷ್ಣ ಸರ್ಪನೆನ್ನುವಂತೆ ಆ ಚಂದ್ರಮುಖಿಯ ಕಪ್ಪಿಡಿದ ದಟ್ಟವಾದ ಕೂದಲ

ಮೂಲೋಕದೊಳುದಯಿಸು
ವೀಬಾಲಿಕೆಗೆಣೆಯಿಲ್ಲವೈದೆ ಕಂಗೊಳಿಪ ವಧೂ।
ಜಾಲದೊಳೆಂದಿರದಱಿಪುವ
ವೋಲಡಗಿದುವವಳ ತ್ರಿವಳಿಗಳ್ಭೂಪಾಲಾ ॥ ೪೮ ॥

ಉದಯಿಪಶಿಶುಗೇಂ ಧರ್ಮಂ
ಬಿದಿ ಮಿಸುನಿಗೊಡಂಗಳಲ್ಲಿ ತೀವಿ ಮಿಸುಪ ನೀ।
ಲದ ಮುಚ್ಚುಳಿಟ್ಟವೊಲ್ಮೊಲೆ
ದುದಿಗಳ್ಕರ್ಪಿಡಿದು ಮೆಱೆದುವಾಶಶಿಮುಖಿಯಾ ॥ ೪೯ ॥

ಅಲ್ಪಂಗಧಿಕನಿಧಾನಂ
ಕಲ್ಪನೆಯಿಂ ದೊರಕಿ ಪೆರ್ಚುವಂತಿರೆ ಗರ್ಭಂ।
ನಲ್ವೊಡೆಯೊಳೊಯ್ಯನಂದೊಂ
ದಲ್ಪೊಂಗಿದುದವಳ ಸಣ್ಣನಡು ಭೂಪಾಲಾ ॥ ೫೦ ॥

ಮತ್ತಮದಲ್ಲದೆ,

ಅಳಕಚಯಂ ಕವಲ್ದುದು ಕದಂಪತಿಕಾಂತಿಯನಾಂತುದಕ್ಷಿ ವೆ
ಗ್ಗಳಿಸಿ ಬಟಿಲ್ಕೆಯಂ ಪಡೆದುದೊಯ್ಯನೆ ಜಾಡ್ಯಮನಂಗವಲ್ಲಿ ಮೇ।
ಣ್ದಳೆದುದು ಮೇಲೆ ಮೇಲೆ ನಿಡುಸುಯ್ಯಲರುರ್ವಿದುದಾನನಂ ಸಮು
ಜ್ವಳತರಕಾಂತಿವೆತ್ತುದು ವಿನಿರ್ಭರಗರ್ಭದೆ ತದ್ವಧೂಟಿಯಾ ॥ ೫೧ ॥

ಇಂತು ನವಮಾಸಂ ತೀವಿ ಪೂರ್ಣಗರ್ಭಮಂ ತಳೆದಂಬಿಕಾಸ್ಮರಣೆಯಂ ಮಱೆಯದಾ ಸತ್ಯವತಿಯನಂತಭೋಗೋಲ್ಬಣಸಂರಂಭದಿಂದಂ ಕಂಗೊಳಿಸುತ್ತಮಿರೆ ಯಿರೆ,

ಸಮೂಹವು ಶೋಭಿಸಿತು. ೪೮. ಮಹಾರಾಜಾ, ಹುಟ್ಟುವ ಈ ಬಾಲಕಿಗೆ ಮೂರು ಲೋಕಗಳಲ್ಲಿ ಕಣ್ಣಿಗೆ ಚೆನ್ನಾಗಿ ತೋರುವ ಸ್ತ್ರೀಸಮೂಹದಲ್ಲಿ ಯಾರೂ ಸಮಾನರಿಲ್ಲ ಎಂದು ಬಿಡದೆ ತಿಳಿಸುವಂತೆ ಅವಳ ಹೊಟ್ಟೆಯ ಮೇಲಣ ಮೂರು ಮಡಿಕೆಗಳು ಇಲ್ಲವಾದುವು. ೪೯. ಹುಟ್ಟುವ ಮಗುವಿಗೆಂದೇ ಧರ್ಮವನ್ನು ವಿಧಿಯು ಚಿನ್ನದ ಕೊಡಗಳಲ್ಲಿ ತುಂಬಿ ಹೊಳೆಯುವ ನೀಲದ ಮುಚ್ಚಳವನ್ನು ಹಾಕಿದಂತೆ ಆ ಚಂದ್ರಮುಖಿಯ ಮೊಲೆತೊಟ್ಟುಗಳು ಕಪ್ಪಿಡಿದು ಶೋಭಿಸಿದುವು. ೫೦. ಮಹಾರಾಜಾ, ಕ್ಷುದ್ರನಿಗೆ ಕನಸಿನಲ್ಲಿ ಅಪಾರ ಸಂಪತ್ತು ದೊರೆತು ವೃದ್ಧಿಸಿದಂತೆ ಗರ್ಭವು ಸುಂದರವಾದ ಬಸಿರಿನಲ್ಲಿ ಮೆಲ್ಲ ಮೆಲ್ಲನೆ ವಿಕಸಿಸುತ್ತಿರಲು ಅವಳ ಸಣ್ಣ ನಡುವು ಹಿಗ್ಗಿತು. ವ॥ ಮತ್ತೆ ಅದಲ್ಲದೆ, ೫೧. ಆ ಹೆಣ್ಣಿನ ಪವಿತ್ರ ಗರ್ಭವು ಬೆಳೆದಂತೆ ಮುಂಗುರುಳುಗಳು ಕವಲೊಡೆದವು, ಕೆನ್ನೆಗಳು ಕಾಂತಿಪೂರ್ಣವಾದುವು, ಕಣ್ಣುಗಳು ವಿಶಾಲವಾಗಿ ಆಯಾಸಗೊಂಡುವು, ಮೆಲ್ಲನೆ ದೇಹವೆಂಬ ಬಳ್ಳಿಯು ಔದಾಸೀನ್ಯವನ್ನು ಹೊಂದಿತು, ಮೇಲಿಂದ ಮೇಲೆ ನಿಟ್ಟುಸಿರು ವ್ಯಕ್ತವಾಯಿತು, ಮುಖವು ಅತಿಶಯವಾದ ಶೋಭೆಯನ್ನು ಪಡೆಯಿತು. ವ॥ ಹೀಗೆ ಒಂಬತ್ತು ತಿಂಗಳು ತುಂಬಿ ಪೂರ್ಣಗರ್ಭವನ್ನು ಹೊಂದಿ ಅಂಬಿಕೆಯ ಸ್ಮರಣೆಯನ್ನು ಮರೆಯದೆ ಆ ಸತ್ಯವತಿಯು ಅಪರಿಮಿತ

ನವಮಾಸಂ ತೀವೆ ಸಮು
ತ್ಸವಮಾಗಲ್ ಜನನಿಗಾನೃಪಂ ತೋಷಿಸಲೊ।
ಪ್ಪುವ ಸಮುಹೂರ್ತದೊಳಂದು
ದ್ಭವಮಾದಳ್ ಕಾಮನಸಿಯವೋಲ್ ಪೆಣ್ಣೊರ್ವಳ್ ॥ ೫೨ ॥

ಇನಿಗಡಲೊಳ್ಸುಧಾರುಚಿಯ ನಿರ್ಮಲಲೇಖೆ ಮನೋಜ್ಞವಲ್ಲಿಯೊ
ಳ್ಮಿನುಗುವ ಪೂವಿನಜ್ಜನನೆ ಬಾಜಿಪ ವೀಣೆಯೊಳಿಂಚರಂ ವಿನೂ।
ತನಮಣಿಯೊಳ್ಸುಕಾಂತಿ ಮೃಗನಾಭಿಯೊಳೊಪ್ಪುವಪೆಂಪ ಗಂಪು ಸಂ
ಜನಿಪವೊಲಾಕುಮಾರಿ ಯೊಗೆದಳ್ ಸಮುದಂಚಿತಮಾತೃಗರ್ಭದೊಳ್ ॥ ೫೩ ॥

ಇಂತತಿಸಂಭ್ರಮದಿಂದಂ ಕುಮಾರಿ ಪುಟ್ಟಲಂಗನೆಯರರೆಬರ್ಬಂದೊಸಗೆಯಂ ಪೇಳಲವರ್ಗಂಗ ಚಿತ್ತಮನಿತ್ತು ತುಂಗಮಯಮಂಗಳ ಸೌಂದರದಿಂದಂ ಜಾತಕರ್ಮಮಂ ಮಾಡಿ ನಿಖಿಲವಿಶಿಷ್ಟರಂ ವಿವಿಧದಾನಂಗಳಿಂ ತಣಿಪಿಯಾಸುಧರ್ಮಮಹಾರಾಯಂ ಸತ್ಯವತಿಗೂಡಿ ತದ್ಬಾಲಿಕೆಯಂ ಸಲಹುತತ್ಯಾನಂದಕ್ಷೀರವಾರಾಸಿಯೊಳ್ ಮೂಡಿ ಮುಳುಂಗಾಡುತ್ತೆಸೆದಿರ್ದಂ,

ಅಂತುಮಲ್ಲದೆಯುಂ॥

ಮೂವಟ್ಟಲ್ ಬಲಿಮುಖನಾ
ನಾವಿಧಲೌಕಿಕಶುಭಂಗಳಂ ವಿರಚಿಸಿ ಮೇ।
ಣಾವರಿಸಿದ ಮುದದಿಂ ತ
ದ್ಭೂವರನೆಸೆದಿರ್ದನುದ್ಭಟಕ್ಷಿತಿಪಾಲಾ ॥ ೫೪ ॥

ಭೋಗಾತಿಶಯ ಸಡಗರಗಳಿಂದ ಕಣ್ಣಿಗೆ ಅಂದವಾಗಿರಲು, ೫೨. ಒಂಭತ್ತು ತಿಂಗಳು ತುಂಬಲು ತಾಯಿಯಾಗುವವಳಿಗೆ ಸಂತೋಷವಾಗಿರಲು, ಮಹಾರಾಜನು ಹರ್ಷಿಸಿರಲು ಶುಭಸಮಯದಲ್ಲಿ ಮನ್ಮಥನ ಕತ್ತಿಯಂತೆ ಹೆಣ್ಣೊಬ್ಬಳು ಜನಿಸಿದಳು. ೫೩. ಕ್ಷೀರಸಮುದ್ರದಲ್ಲಿ ಚಂದ್ರನ ಪರಿಶುದ್ಧ ಕಾಂತಿ, ಮನೋಹರವಾದ ಬಳ್ಳಿಯಲ್ಲಿ ಮಿನುಗುವ ಹೂವಿನ ನಿರ್ಮಲವಾದ ಮೊಗ್ಗು, ನುಡಿಸುವ ವೀಣೆಯಲ್ಲಿ ಮಧುರವಾದ ದನಿ, ವಿನೂತನವಾದ ಮಣಿಯಲ್ಲಿ ಒಳ್ಳೆಯ ಕಾಂತಿ, ಕಸ್ತೂರಿಯಲ್ಲಿ ಶೋಭಿಸುವ ಅತ್ಯಧಿಕವಾದ ಕಂಪು ಹುಟ್ಟುವಂತೆ ಆ ಕುಮಾರಿಯು ಶ್ರೇಷ್ಠವಾದ ತಾಯಿಯ ಗರ್ಭದಿಂದ ಹೊರಬಂದಳು. ವ॥ ಹೀಗೆ ಹೆಚ್ಚಿನ ಸಂಭ್ರಮದಿಂದ ಕುಮಾರಿಯು ಜನಿಸಲು ಹಲವರು ಮಾನಿನಿಯರು ಬಂದು ಸಂತೋಷದ ಸುದ್ದಿಯನ್ನು ಹೇಳಲು ಅವರಿಗೆ ಬಹುಮಾನವನ್ನಿತ್ತು, ಅತ್ಯಂತ ಮಂಗಳಕರವಾದ ಸೊಬಗಿನಿಂದ ಹುಟ್ಟಿದ ಮಗುವಿಗೆ ಮಾಡುವ ಸಂಸ್ಕಾರವನ್ನು ಮಾಡಿ ಎಲ್ಲಾ ಮುಖ್ಯರನ್ನೂ ವಿವಿಧ ದಾನಗಳಿಂದ ತೃಪ್ತಿಪಡಿಸಿ ಆ ಸುಧರ್ಮ ಮಹಾರಾಜನು ಸತ್ಯವತಿಯೊಡಗೂಡಿ ಆ ಬಾಲಿಕೆಯನ್ನು ಸಲಹುತ್ತ ಅತ್ಯಾನಂದದ ಹಾಲ್ಗಡಲಲ್ಲಿ ಮೂಡಿ ಮುಳುಗಾಡುತ್ತ ಶೋಭಿಸಿದ್ದನು. ಅಷ್ಟಲ್ಲದೆ ೫೪. ಉದ್ಭಟ ಮಹಾರಾಜಾ, ಹುಟ್ಟಿದ ಮೇಲೆ ಮಾಡುವ ಮೂವಟ್ಟಲು, ಬಲಿಮುಖ - ಇವೇ ಮೊದಲಾದ ಲೌಕಿಕ ಶುಭಕಾರ್ಯಗಳನ್ನು

ಪನ್ನೆರಡುದಿನದೊಳುಂ ತಾಂ
ಕನ್ನೆಗೆ ಸೌಂದರ್ಯವತಿಯೆನಿಪ್ಪೊಳ್ಪೆಸರಂ।
ಮುನ್ನಿಟ್ಟಾತ್ತಾಯಂದೆಗ
ಳುನ್ನತಸಂತೋಷದಿಂದೆ ಪೊರೆಯುತ್ತಿರ್ದರ್ ॥ ೫೫ ॥

ಮಿಗೆ ಮುದದಿಂದಂ ತಾಯ್ತಂ
ದೆಗಳೋವಲ್ ತತ್ಕುಮಾರಿ ಬಳೆಯುತ್ತಿರ್ದಳ್।
ನೆಗಟ್ಟಿಸಿತಪಕ್ಷದಿಂದುವ
ಸೊಗಸುವ ಕಳೆಯಂತೆ ಸೋಮವಂಶಲಲಾಮಾ ॥ ೫೬ ॥

ಮತ್ತಮದಲ್ಲದಖಿಳಮಣಿಖಚಿತಶೈಶವಾಲಂಕಾರಮಂ ತಳೆದಂಗಜನ ಕೀರ್ತಿಯಭಿವೃದ್ಧಿಯ ಲತೆಯಂತೆ ಪಡೆದರ ಕಣ್ಮನಕ್ಕೆಡೆವಿಡದಾನಂದಮಂ ಮಾಡುತ್ತುಂ ದಿನದಿನಕ್ಕೆ ಬಳವುತ್ತಂ ಬಾಲಿಕೆ ಯೆಸೆದಿರ್ದಳ್॥

ಅದೆಂತೆಂದೊಡೆ,

ಮಾರನ ದೀಹದಂಚೆವಜಿ ಮನ್ಮಥರಾಜನ ಕೀರ್ತಿವಲ್ಲಿ ವೈ
ಸಾರಿಣಲಕ್ಷ್ಮ ನೈಸಿರಿ ಮನಶ್ಶಯನಣ್ಮಲರ್ವಿಲ್ಲನೋದಿಪಾ।
ಸಾರಿಕೆ ಪಂಚಬಾಣನ ನೆಗಟ್ತೆ ವಲಂ ಬೆಳವಂತಿರ್ರೈದೆ ತ
ಚ್ಚಾರುಕುಮಾರಿ ತಾಂ ಬಳೆಯುತೊಪ್ಪಿದಳುದ್ಭಟಭೂಮಿಪಾಲಕಾ ॥ ೫೭ ॥

ಇಂತು ಪೆತ್ತರತ್ಯಾನಂದದಲ್ಲಿ ಬಳೆವಂತೆ ನಳನಳಿಸಿ ಬಳೆದು ದಶವರ್ಷದ ಕನ್ನಿಕೆಯಾಗಿ ತತ್ಸೌಂದರ್ಯವತಿ ಕಣ್ಗೆಸೆಯುತ್ತಿರ್ದಳ್॥

ಅದೆಂತೆಂದೊಡೆ,

ಮಾಡಿ, ಕವಿದ ಸಂತಸದಿಂದ ಮಹಾರಾಜನು ಶೋಭಿಸಿದ್ದನು. ೫೫. ಹುಟ್ಟಿದ ಹನ್ನೆರಡನೆಯ ದಿವಸಕ್ಕೆ ಆ ಕನ್ಯೆಗೆ ಸೌಂದರ್ಯವತಿ ಎಂಬ ಒಳ್ಳೆಯ ಹೆಸರನ್ನಿಟ್ಟು ತಾಯಿ-ತಂದೆಯರು ಹೆಚ್ಚಿನ ಸಂತೋಷದಿಂದ ರಕ್ಷಿಸುತ್ತಿದ್ದರು. ೫೬. ಚಂದ್ರವಂಶಕ್ಕೆ ತಿಲಕಪ್ರಾಯನೆ, ಹೆಚ್ಚಿನ ವಾತ್ಸಲ್ಯದಿಂದ ತಂದೆ-ತಾಯಿಯರು ಕಾಪಾಡಲು ಆ ಕುಮಾರಿಯು ಪ್ರಸಿದ್ಧ ಶುಕ್ಲಪಕ್ಷದ ಚಂದ್ರನ ಸೊಗಸಾದ ಕಾಂತಿಯಂತೆ ಬೆಳೆಯುತ್ತಿದ್ದಳು. ವ॥ ಮತ್ತೆ ಅದಲ್ಲದೆ ಸಕಲಮಣಿಗಳಿಂದ ಕೂಡಿದ ಬಾಲ ಅಲಂಕಾರವನ್ನು ಹೊಂದಿ ಮನ್ಮಥನ ಕೀರ್ತಿಯನ್ನು ವಿಸ್ತರಿಸುವ ಬಳ್ಳಿಯಂತೆ ಪಡೆದವರ ಕಣ್ಣು-ಮನಗಳಿಗೆ ಸದಾ ಆನಂದವನ್ನುಂಟುಮಾಡುತ್ತ ದಿನದಿನಕ್ಕೆ ವೃದ್ಧಿಸುತ್ತ ಬಾಲಿಕೆಯು ಶೋಭಿಸಿದ್ದಳು. ಅದು ಹೇಗೆಂದರೆ, ೫೭. ಉದ್ಭಟ ಮಹಾರಾಜಾ, ಮಾರನು ಬೇಟೆಯಾಡುವಲ್ಲಿ ಪ್ರಾಣಿಗಳನ್ನು ಸೆಳೆಯಲು ಬಳಸುವ ಮಿಕವಾದ ಹಂಸದ ಮರಿ, ಕಾಮನ ಕೀರ್ತಿಯೆಂಬ ಬಳ್ಳಿ, ಮನೋಜನ ಸಂಪತ್ತು, ಹೂ ಬಾಣನು ಓದಿಸುವ ಗಿಳಿ, ಪಂಚಬಾಣದ ಖ್ಯಾತಿ - ಇವು ನಿಶ್ಚಯವಾಗಿಯೂ ವೃದ್ಧಿಸುವಂತೆ ಆ ಮನೋಹರವಾದ ಕುಮಾರಿಯು ಚೆನ್ನಾಗಿ ಬೆಳೆಯುತ್ತ ಶೋಭಿಸಿದಳು. ವ॥ ಹೀಗೆ ಹೆತ್ತವರ ಅತ್ಯಾನಂದದಲ್ಲಿ ಬೆಳೆವಂತೆ ನಳನಳಿಸಿ ಬೆಳೆದು ಹತ್ತು ವರ್ಷದ ಕುಮಾರಿಯಾಗಿ ಸೌಂದರ್ಯವತಿಯು ಕಣ್ಣಿಗೆ ಅಂದವಾಗಿದ್ದಳು. ಅದು ಹೇಗೆಂದರೆ,

ಮೂಡುವ ಕುಟ್ಮಲಸ್ತನಯುಗಂ ನಿಱಿಗೊಳ್ವ ಸುನೀಲ ಕುಂತಳಂ
ಗಾಡಿಯನೀವ ವಕ್ತ್ರ ಶಶಿ ಪೆರ್ಚುವ ಚಾರುನಿತಂಬವಂಗದೊ।
ಳ್ಕೂಡುವ ಕಾಂತಿ ಪುಟ್ಟುವೆಳೆನಾಣ್ಪೊಱಪೊಣ್ಮುವ ಬಾಸೆ ಬೆನ್ನೊಳಂ
ದಾಡುವ ವೇಣಿ ತಾಂ ಸೊಗಸೆ ಸೌಂದರಿ ರಂಜಿಸಿದಳ್ ನೃಪಾಲಕಾ ॥ ೫೮ ॥

ಬಡವಪ್ಪ ವಿಲಗ್ನಂ ಮಿಗೆ
ಕುಡುವೆಳಗಂ ಪರಪುವಕ್ಷಿ ಸೊಗಸುವ ಜಾಣಂ।
ತುಡುಕುವ ಮಧುರಾಲಾಪಂ
ಕಡು ರಂಜಿಸೆ ಬಳೆದಳಾಕುಮಾರಿಕೆಯರಸಾ ॥ ೫೯ ॥

ಸುತಕರ್ಣಾಂತಾಯತಾಕ್ಷಿದ್ವಯಮಮರ್ದ ನಿತಂಬಂ ಚಳತ್ಕೇಶಪಾಶಂ
ಸ್ಮಿತಪಂಕೇಜಾನನಂ ಮಂಜುಳಬದರಫಲೋರೋಜಯುಗ್ಮಂ ಸಿರೀಷೋ
ನ್ನತಮಾಲಾಪ್ರೋಲ್ಲಸದ್ದೋರ್ಯುಗಳಮಹಶರೀರಂ ಸುಬಿಂಬಾಧರಂ ಸಂ
ತತಮುದ್ಯಚ್ಛೋಭೆಯಂ ಬೆತ್ತಿರಲವಳೆಸೆದಳ್ ಸೋಮವಂಶಾಬ್ಧಿಚಂದ್ರಾ ॥ ೬೦ ॥

ಇಂತು ವಿರಾಜಿಪ ತದ್ಭೂ
ಕಾಂತಾತ್ಮಜೆಯೊಂದುದಿನದೊಳಾನಿರ್ಪ ವನಾ।
ಭ್ಯಂತರಕಾಡುತೆ ವನಿತಾ
ಸಂತತಿವೆರಸೊಲ್ದು ಬಂದಳುದ್ಭಟದೇವಾ ॥ ೬೧ ॥

೫೮. ಮಹಾರಾಜಾ, ಮೂಡುತ್ತಿರುವ ಮೊಗ್ಗುಗಳೆಂಬ ಮೊಲೆಗಳು, ಗುಂಗುರಾದ ನೀಲಿಯ ಮುಂಗುರುಳು, ಸೌಂದರ್ಯ ಚೆಲ್ಲುವ ಮುಖ, ಚಂದ್ರನಂತೆ ಹೆಚ್ಚುವ ಮನೋಹರವಾದ ಸೊಂಟದ ಹಿಂದಿನ ಕೆಳಭಾಗ, ದೇಹದಲ್ಲಿ ಸೇರುತ್ತಿರುವ ಕಾಂತಿ, ಹುಟ್ಟುತ್ತಿರುವ ಎಳೆಯ ನಾಚಿಕೆ, ಹೊರಹೊಮ್ಮುತ್ತಿರುವ ನಾಭಿಯಿಂದ ಎದೆಯವರೆಗಿನ ಕೂದಲು, ಬೆನ್ನಿನಲ್ಲಿ ಆಟವಾಡುವ ಜಡೆ - ಇವು ಸೊಗಸಲು ಸೌಂದರಿಯು ಶೋಭಿಸಿದಳು. ೫೯. ಅರಸಾ, ಬಡವಾದರೂ ಹೊಂದಿಕೊಂಡ [ಶರೀರ], ಚೆನ್ನಾಗಿ ಚಂದ್ರನ ಕಾಂತಿಯನ್ನು ಹರಡುವ ಕಣ್ಣುಗಳು, ಒಪ್ಪುವ ಬುದ್ಧಿವಂತಿಕೆಯನ್ನು ಮುಟ್ಟುವ ಮಧುರವಾದ ಮಾತುಗಳು ವಿಶೇಷವಾಗಿ ಹೊಳೆಯಲು ಆ ಕುಮಾರಿಯು ಬೆಳೆದಳು. ೬೦. ಚಂದ್ರವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವವನೆ, ಹೊಗಳಿಕೆಗೆ ಪಾತ್ರವಾದ ಕಿವಿಯವರೆವಿಗೂ ಹಬ್ಬಿರುವ ಕಣ್ಣುಗಳು, ಸೇರಿದ ನಿತಂಬಗಳು, ಹಾರಾಡುವ ತಲೆಗೂದಲು, ಅರಳಿದ ಮುಖಕಮಲ, ಮಂಜುಳವಾದ ಬಾಗೆಹೂವಿನ (=ಶಿರೀಷ ಪುಷ್ಪದ) ಉದ್ದನೆಯ ಮಾಲೆಯಂತೆ ಚೆನ್ನಾಗಿ ಹೊಳೆಯುವ ಬಾಹುಗಳು, ಘನವಾದ ಶರೀರ, ತೊಂಡೆಹಣ್ಣಿನಂತಿರುವ ಕೆಂಪಾದ ಕೆಳದುಟಿಗಳು - ಇವು ಸದಾ ಹೆಚ್ಚಿನ ಶೋಭೆಯನ್ನು ಹೊಂದಿರಲು ಅವಳು ಅಂದಗೊಂಡಳು. ೬೧. ಉದ್ಭಟದೇವಾ, ಹೀಗೆ ಶೋಭಿಸುವ ಆ ಮಹಾರಾಜನ ಮಗಳು ಒಂದು ದಿನ ನಾನಿದ್ದ ತೋಟದ ಮಧ್ಯಭಾಗಕ್ಕೆ ಆಡುತ್ತ ಹೆಂಗಳೆಯರ ಜೊತೆಗೂಡಿ ಸಂತಸದಿಂದ

ಬಂದು ತತ್ಸುಕುಮಾರಿ ಬಾಲೆಯರೊಗ್ಗುಗೂಡಿ ವಿಲಾಸದಿಂ
ದಂದು ನಂದನದೊಳ್ನಿಜಾಕ್ಷಿಮರೀಚಿಚಂದ್ರಿಕೆಯಿಂದೊಸ।
ರ್ವಿಂದುಕಾಂತದ ಮಾಡುವೆಟ್ಟದೊಳಂಬುಜಾಕರದೊಳ್ಲತಾ
ಮಂದಿರಾಂಕಣದೊಳ್ವಿಹಾರಿಸುತೊಪ್ಪಿದಳ್ನೃಪಪುಂಗವಾ ॥ ೬೨ ॥

ಪರಿಮಳಮಂ ಪಸರಿಸುತುಂ
ಕರಮಮರ್ದಲರ್ವಳ್ಳಿಗಳನಖಿಳಫಲತರುವಂ।
ಪರಿಲೋಕಿಸುತುಂ ಸಖಿಯ
ರ್ವೆರಸಾವನದಲ್ಲಿ ಕುವರಿಯಾಡುತ್ತೆಸೆದಳ್ ॥ ೬೩ ॥

ಈಪರಿ ಮುದದಿಂ ಸೊಗಯಿಸು
ವಾಪೊಸಬನಸಿರಿಯನೀಕ್ಷಿಸುತ್ತುಂ ನಳಿನೀ।
ರೂಪಜಿದಂಬಕೆ ಬರೆ ಹಂ
ಸೀಪರಿವಳಯಿತಮದೊಂದು ಸರಮೆಸೆದಿರ್ಕುಂ ॥ ೬೪ ॥

ನಳಿನೀಮಿತ್ರೇಂದುಕಾಂತಾವಳಿಯುತಘನಸೋಪಾನಮಾರ್ಗಂ ಲಸನ್ಮಂ
ಗಳನೀರೋಲ್ಲಾಸಸೌಮ್ಯಾಟನಗುರುಕವಿನೀಲಾಬ್ಜಪೂರ್ಣಂ ತಮಸ್ಸಂ
ಕುಳಕೇಣ್ಗಾತ್ಯುದ್ಧರುಗ್ರಾಜಿತಮದಮಧುಲಿಟ್ಶೌಶೋಭಿತಂ ಮೀನಕೇತೂ
ಜ್ವಳಚಕ್ರಾವರ್ತಮಂದೊಪ್ಪಿದುದು ತಿಳಿಗೊಳಂ ಯುಕ್ತಚಂಚದ್ಗ್ರಹೌಘಂ ॥ ೬೫ ॥

ಬಾಸಣಿಸಿ ಕಮಲಕೆಜಿಗುವ
ಕೇಸರರಜದಿಂ ತೊಳಪ್ಪ ಕಾಸಾರಮನಾ।
ವೈಸಾರಿಣಾಕ್ಷಿ ಪೊಕ್ಕಳ್
ವೈಸಾರಿಣಹಂಸಕೋಕತತಿ ಬೆರ್ಚುವಿನಂ ॥ ೬೬ ॥

ಬಂದಳು. ೬೨. ಮಹಾರಾಜರಲ್ಲಿ ಶ್ರೇಷ್ಠನಾದವನೆ, ಆ ಕುಮಾರಿಯು ಬಾಲೆಯರ ಸಮೂಹದೊಂದಿಗೆ ವಿಲಾಸದಿಂದ ತೋಟಕ್ಕೆ ಬಂದು ತನ್ನ ದೃಷ್ಟಿಯೆಂಬ ಚಂದ್ರಕಿರಣದಿಂದ ಜಿನುಗುವ ಚಂದ್ರಕಾಂತದ ಕೃತಕಶೈಲದಲ್ಲೂ ಕೊಳದಲ್ಲೂ, ಬಳ್ಳಿ ಮನೆಗಳಲ್ಲೂ ವಿಹಾರ ಮಾಡುತ್ತ ಶೋಭಿಸಿದಳು. ೬೩. ಆ ಕುಮಾರಿಯು ಕಂಪನ್ನು ಹರಡುತ್ತ ಚೆನ್ನಾಗಿ ಅರಳಿದ ಹೂಬಳ್ಳಿಗಳನ್ನು ಹಣ್ಣುಗಳಿಂದ ಕೂಡಿದ ಎಲ್ಲಾ ಮರಗಳನ್ನು ನೋಡುತ್ತ ಸಖಿಯರೊಡನೆ ಆ ತೋಟದಲ್ಲಿ ಆಡುತ್ತ ಶೋಭಿಸಿದಳು. ೬೪. ಈ ರೀತಿ ಸಂತೋಷದಿಂದ ಅಂದವಾಗಿರುವ ಆ ನವೀನವಾದ ತೋಟದ ಸಂಪತ್ತನ್ನು ನೋಡುತ್ತ ಕಮಲದಂತಿರುವ ಕಮಲಾಕ್ಷಿಯು ಬರುತ್ತಿರಲು ಹಂಸಗಳಿಂದ ಆವೃತ್ತವಾದ ಒಂದು ಕೊಳವು ಶೋಭಿಸಿದ್ದಿತು. ೬೫. ಹೊಳೆಯುವ ಗ್ರಹಗಳಂತಿರುವ ಆ ತಿಳಿಗೊಳವು, ಚಂದ್ರಕಾಂತ ಶಿಲೆಯಿಂದ ಮಾಡಿದ ಮೆಟ್ಟಿಲುಗಳು, ಉಲ್ಲಾಸಯುಕ್ತವಾಗಿ, ಸೌಮ್ಯವಾಗಿ ಚಲಿಸುವ ಶೋಭಾಯಮಾನವೂ ಮಂಗಳಕರವೂ ಆದ ನೀರಿನಲ್ಲಿ ದಟ್ಟವಾಗಿ ಕವಿದ ನೀಲಕಮಲಗಳು, ಕತ್ತಲೆಯ ಮೊತ್ತವೇ ಗುಂಪುಗೂಡಿ ಕವಿದಂತಿರುವ ಪ್ರಕಾಶಮಾನವಾದ ಮದಿಸಿದ ದುಂಬಿಗಳು, - ಇವುಗಳಿಂದ ಕೂಡಿ ಕಾಮನಬಿಲ್ಲಿನಂತೆ ಶೋಭಿಸಿತು. ೬೬. ಆವರಿಸಿದ ಕಮಲಗಳಿಗೆ ಕವಿಯುವಂತಿರುವ ಕೇಸರದ ಧೂಳಿನಿಂದ ಹೊಳೆಯುವ ಕೊಳವನ್ನು ಆ ಕಮಲಾಕ್ಷಿಯು, ಕಮಲ, ಹಂಸ,

ಎಳವೆಣ್ಗಳ್ವೆರಸಂಬುಜ
ದಳಲೋಚನೆ ತತ್ಸರಸಿಯನೊಲವಿಂ ಪೊಕ್ಕು।
ಜ್ವಳಸಲಿಲಕ್ರೀಡೆಯೊಳಂ
ದಳವಟ್ಟೆಸೆದಿರ್ದಳುದ್ಭಟಕ್ಷಿತಿಪಾಲಾ ॥ ೬೭ ॥

ಬಾಲೆ ನಿಜಸಖಿಯರೊಳ್ವಲ
ಕೇಳಿಯಿನಂದುಜು ಬೞಲ್ದು ತನುವಂ ಜಲದೊಳ್।
ಲೀಲೆಮಿಗಲೊಲ್ದಡಂಗಿಸಿ
ಲೋಲೇಕ್ಷಣೆ ಮೊಗಮನೆತ್ತಿ ನೋಡುತ್ತೆಸೆದಳ್ ॥ ೬೮ ॥

ಇಂತು ಸೌಂದರವತಿ ಮೊಗಮನೆತ್ತಿ ತತ್ಕಾಸಾರವಲಯಾಯಿತಪಟುವಟವಿಟಪಿವಿಟಂಕಾಗ್ರಮೊಳ್ ಮನಂಗೊಳಿಪ ಶುಕಪಿಕಂಮೊದಲಾದ ಮನೋಜ್ಞವಿಹಗಜಾಲಲೀಲೆಯನಾಲೋಕಿಸುತ್ತಮಿರೆಯಿರೆ,

ಸ್ವರ್ಣವರ್ಣಗಾತ್ರೆ ತತ್ಸರೋರುಹಾಕರಸ್ಥಿತಾ
ಚ್ಛಾರ್ಣದೊಳ್ಮುೞುಂಗಿ ನೋಡುತಿರ್ಪ್ಪಿನಂ ದಲಿತ್ತಲಾಂ।
ಪೂರ್ಣಲೀಲೆಯಿಂದೆಯಾಪಸಾಂತರಾಳದಲ್ಲಿ ವಿ
ಸ್ತೀರ್ಣಮಾದ ಮಾಮರಂಗಳಲ್ಲಿ ಯಾಡುತೊಪ್ಪಿದೆಂ ॥ ೬೯ ॥

ಅಲ್ಲಿಗಲ್ಲಿಗೆ ಪಕ್ವಮಾದಿನಿವಣ್ಗಳಂ ಭುಜಿಸುತ್ತುಮಾಂ
ನಿಲ್ಲದಾಡುತೆ ಬಂದು ತತ್ಸರಸೀತಟಸ್ಥಿತಮಾಪ ಸಂ।
ಫುಲ್ಲಪಲ್ಲವಶೋಭಿತಾಮ್ರಮನೊಲ್ದಡರ್ದತಿಲೀಲೆಯಿಂ
ಮೆಲ್ಲನಾಕೊಳನಂ ನಿರೀಕ್ಷಿಸಲಾದುದಕ್ಷಿಗೆ ಸಂಮದಂ ॥ ೭೦ ॥

ಚಕ್ರವಾಕಗಳು ಬೆದರುವಂತೆ ಪ್ರವೇಶಿಸಿದಳು. ೬೭. ಉದ್ಭಟ ಮಹಾರಾಜಾ, ಎಳೆಯ ಪ್ರಾಯದ ಸ್ತ್ರೀಯರೊಡನೆ ಕಮಲಾಕ್ಷಿಯು ಆ ಕೊಳವನ್ನು ಆನಂದದಿಂದ ಪ್ರವೇಶಿಸಿ ಚೆನ್ನಾಗಿ ನೀರಾಟವಾಡುತ್ತ ಶೋಭಿಸಿದ್ದಳು. ೬೮. ಬಾಲೆಯು ತನ್ನ ಸಖಿಯರೊಡನೆ ನೀರಾಟವಾಡಿ ಅಂದು ಬಹಳವಾಗಿ ಬಳಲಿ ದೇಹವನ್ನು ನೀರಿನಲ್ಲಿ ವಿನೋದವಾಡುತ್ತ ಪ್ರೀತಿಯಿಂದ ಅಡಗಿಸಿದ ಚಂಚಲಾಕ್ಷಿಯು ತನ್ನ ಮುಖವನ್ನೆತ್ತಿ ನೋಡುತ್ತ ಶೋಭಿಸಿದಳು. ವ॥ ಹೀಗೆ ಸೌಂದರವತಿಯು ಮುಖವನ್ನು ಮೇಲೆತ್ತಿ ಕೊಳದ ಸುತ್ತಮುತ್ತಲಿನ ವಿಶಾಲವಾದ ಆಲದ ಮರದ ತುದಿಯಲ್ಲಿ ಮನ ಸೆಳೆಯುವಂತಿರುವ ಗಿಳಿ, ಕೋಗಿಲೆ ಮೊದಲಾದ ಮನೋಹರವಾದ ಪಕ್ಷಿಸಮೂಹಗಳ ಆಟವನ್ನು ನೋಡುತ್ತಲಿರಲು, ೬೯. ಹೊಂಬಣ್ಣದ ಶರೀರವುಳ್ಳವಳು ಆ ಕಮಲಗಳಿಂದ ಕೊಳದ ಪರಿಶುದ್ಧವಾದ ನೀರಿನಲ್ಲಿ ಮುಳುಗಿ ನೋಡುತ್ತಿರುವಲ್ಲಿ, ಈ ಕಡೆ ನಾನು ತೋಟದ ಮಧ್ಯಭಾಗದಲ್ಲಿನ ವಿಶಾಲವಾದ ಮಾವಿನ ಮರಗಳಲ್ಲಿ ವಿನೋದದಿಂದ ಕೂಡಿ ಆಡುತ್ತ ಅಂದಗೊಂಡೆನು. ೭೦. ಅಲ್ಲಲ್ಲಿ ಮಾಗಿದ ಸಿಹಿಯಾದ ಹಣ್ಣುಗಳನ್ನು ತಿನ್ನುತ್ತ ನಾನು ನಿಲ್ಲದೆ ಆಡುತ್ತ ಬಂದು ಆ ಕೊಳದ ದಡದಲ್ಲಿನ ಚೆನ್ನಾಗಿ ಅರಳಿದ ಚಿಗುರಿನಿಂದ ಶೋಭಾಯಮಾನವಾದ ಮಾವಿನ ಮರವನ್ನು ಹತ್ತಿ ಕುಳಿತು

14

ಆಳೀಜನದೊಡನಾಜಲ
ಕೇಳಿಯಿನೆಸೆವಾಕುಮಾರಿಯಾಸ್ಯಮನೊಲ್ದಾ।
ನಾಲೋಕಿಸಿ ಕಂಡೆಂ ಭೂ
ಪಾಲಕಕೋಟೀರಪೀಠಸಂಸ್ಥಿತಚರಣಾ ॥ ೭೧ ॥

ಆಸರಸೀಸರಸೀರುಹ
ಮಾಸರಸಿಜಮುಖಿಯ ಮುಖಸರೋಜಾತಕಣಂ।
ಪಾಸಟಿಯಲ್ಲದಿರಲ್ಕಂ
ಡೋಸರಿಸದೆ ಕುತುಕಭಾವದಿಂದೀಕ್ಷಿಸಿದೆಂ ॥ ೭೨ ॥

ಭಾವಿಸಿ ಕಳೆವಡೆದಾಮೊಗ
ದಾವರೆಯಂ ಕೂರ್ಮೆಯಿಂದೆ ನೋಡುತ್ತಿರೆ ತ।
ದ್ಭಾವಕಿಯಧರಂ ಮಿನುಗಿದು
ದೇವಣ್ಣಿಪೆನದಱ ಚೆಲ್ವನುದ್ಭಟದೇವಾ ॥ ೭೩ ॥

ಇಂತವಳ ಮೊಗದಾವರೆಯೊಳ್ ಮನಂಗೊಳಿಪರುಣಾಧರಮಂ ಕಂಡು ಬಿಂಬಫಲಮೆಂದಾನಾ ವರಿಸಿದಾಸೆಯಿಂದಂ ಸೈರಿಸಲಾರದೆ,

ಬೆಚ್ಚರಮೈದಿ ಬಂದವಳ ಚೆಂದುಟಿಯಂ ಪೊಸತೊಂಡೆವಣ್ಣಿದೊಂ
ದಚ್ಚರಿಯಲ್ಲಿ ಪುಟ್ಟಿತೆನುತಟ್ಟಿಯಿನೊಲ್ದು ಕರ್ದುಂಕಲಂತವಳ್
ಬೆಚ್ಚಿ ಕರಾಗ್ರದಿಂ ಪಿಡಿಯಲಂದೆನಗಾದುದು ಚಿತ್ತದೊಳ್ಪ್ರಭಾ
ಸ್ವಚ್ಛತುರೋಕ್ತಿಪುಷ್ಟಿ ಸುರಪೂಜಿತಶಂಕರಪಾದಪೂಜಕಾ ॥ ೭೪ ॥

ವಿನೋದದಿಂದ ಮೆಲ್ಲನೆ ಆ ಕೊಳವನ್ನು ನೋಡಲು ಕಣ್ಣಿಗೆ ತೃಪ್ತಿಯಾಯಿತು. ೭೧. ರಾಜರುಗಳ ಕಿರೀಟವನ್ನು ಪೀಠದ ಮೇಲಿನ ಪಾದಗಳ ಮೇಲೆ ಇರಿಸಿಕೊಂಡವನೆ, ಸಖಿಯರೊಡನೆ ನೀರಾಟವಾಡುವ ಆ ಕುಮಾರಿಯ ಮುಖವನ್ನು ಪ್ರೀತಿಯಿಂದ ನೋಡಿದೆನು. ೭೨. ಆ ಕೊಳದ ಕಮಲಗಳು ಆ ಕಮಲಮುಖಿಯ ಮುಖ ಕಮಲಕ್ಕೆ ಸ್ವಲ್ಪವೂ ಎಣೆಯಿಲ್ಲದಿರುವುದನ್ನು ನೋಡಿ ಕುತೂಹಲಭಾವದಿಂದ ಮತ್ತೆ ಗಮನಿಸಿದೆನು. ೭೩. ಉದ್ಭಟದೇವಾ, ಕಾಂತಿಯಿಂದ ಕೂಡಿದ ಆ ಮುಖ ಕಮಲವನ್ನು ಚೆನ್ನಾಗಿ ಪ್ರೀತಿಯಿಂದ ನೋಡುತ್ತಿರಲು ಆ ಚೆಲುವೆಯ ಕೆಳದುಟಿ ಮಿನುಗಿತು, ಅದರ ಚೆಲುವಿಕೆಯನ್ನು ಅದೇನೆಂದು ಬಣ್ಣಿಸಲಿ! ವ॥ ಹೀಗೆ ಅವಳ ಮುಖ ಕಮಲದಲ್ಲಿ ಮನಸೆಳೆಯುವ ಚೆಂದುಟಿಯನ್ನು ಕಂಡು ತೊಂಡೆಹಣ್ಣೆಂದು ಭಾವಿಸಿ ಮನದಲ್ಲಿ ಮೂಡಿದ ಆಸೆಯನ್ನು ತಡೆಹಿಡಿಯಲಾರದೆ, ೭೪. ದೇವತೆಗಳು ಪೂಜಿಸುವ ಶಿವನ ಪಾದಗಳನ್ನು ಆರಾಧಿಸುವವನೆ, ಬೇಗನೆ ಅವಳ ಸಮಿೂಪಕ್ಕೆ ಬಂದು ಅವಳ ಚೆಂದುಟಿಯನ್ನು ಹೊಸದಾದ ತೊಂಡೆಹಣ್ಣೆಂದೂ, ಇದು ಆಶ್ಚರ್ಯಕರವಾದ ರೀತಿಯಲ್ಲಿ ಹುಟ್ಟಿತೆಂದೂ, ಮನದಲ್ಲಿ ಅಂದುಕೊಂಡು ನಾನು, ಆಸೆಪಟ್ಟು ಬಯಸಿ ಕಚ್ಚಲು, ಅವಳು ಬೆದರಿ ಅಂಗೈಯಿಂದ ನನ್ನನ್ನು ಹಿಡಿಯಲು ಆಗ ನನ್ನ ಮನಸ್ಸಿನಲ್ಲಿ

ಮುನಿ ಮುನಿದು ಶಾಪಮಂ ಮು
ನ್ನೆನಗಿತ್ತುದ ತೋಱಿತಾಗಳೀನರವಾಕ್ಯಂ।
ಜನಿಸೆ ಲಸದ್ಬಾಲಿಕೆಯೊಡ
ನನುರಾಗದಿನೊಯ್ಯನುಸುರ್ದೆನಿಂತೆಂದು ನೃಪಾ ॥ ೭೫ ॥

ಬಿಡು ಬಿಡು ಬಾಲೆ ನಿನ್ನ ರದನಚ್ಛದಮಂ ಪೊಸತೊಂಡೆವಣ್ಣೆದೆಂ
ದಡಸಿದ ಕೂರ್ಮೆಯಿಂ ಪಿಡಿದೆನೆಂದೆನೆ ಬಿಟ್ಟವಳೆನ್ನ ಜನ್ಮಮಂ।
ಕಡು ಮುದದಿಂದೆ ಕೇಳ್ದೆನಗೆ ತಾಂ ಸಖಿಯಾಗಿ ಮನೋವಿಲಾಸಮಂ
ಪಡೆದು ಸಖೀಜನಂಬೆರಸು ಪೂಗೊಳನಂಪೊಱಮಟ್ಟಳಟ್ತಿಯಿಂ ॥ ೭೬ ॥

ಬೞಿಕಾಸತಿ ಯೆನ್ನಂ ಕೊಂ
ಡುೞಿದಾಜಲಕೇಳಿಯಂ ಕೆಳದಿಯರ್ವೆರಸು।
ಜ್ಜಳಮುದದಿಂ ಬಂದುಱೆ ನಿಜ
ನಿಳಯಮನಂದೊಲ್ದು ಪೊಕ್ಕಳುದ್ಭಟದೇವಾ ॥ ೭೭ ॥

ಬಂದು ನಿಜನಿಳಯಮಂ ಪೊ
ಕ್ಕಂದೊಲವಿಂ ತನ್ನ ತಂದೆತಾಯ್ಗಳ್ವೆರಸಾ।
ನಂದದೆ ಬಿಡದೆನ್ನಂ ತ
ತ್ಸೌಂದರವತಿ ಪೊರೆಯುತಿರ್ದಳುರ್ವೀನಾಥಾ ॥ ೭೮ ॥

ನಾನಾಕಲೆಯಂ ಸಾಧಿಸು
ತಾನಂದಂ ಬಡೆದು ಪೆತ್ತವರ್ವೆರಸೆನ್ನಂ।
ತಾನೊಲ್ದೋವುತ್ತುಂ ತ
ನ್ಮೀನಾಂಬಕೆ ಯೆಸೆದಳುದ್ಭಟಕ್ಷಿತಿಪಾಲಾ ॥ ೭೯ ॥

ಪ್ರಕಾಶಮಾನವಾದ ಹಿತವಚನಗಳ ಶಕ್ತಿಪಾತವಾಯಿತು. ೭೫. ಮಹಾರಾಜಾ, ಚಿದಂಗಮುನಿಯು ಕೋಪಗೊಂಡು ಹಿಂದೆ ನನಗೆ ಶಾಪವಿತ್ತುದು ನೆನಪಿಗೆ ಬಂದಿತು. ಆಗಲೆ ಈ ಮನುಷ್ಯ ಭಾಷೆ ನನ್ನಲ್ಲಿ ಹುಟ್ಟಲು ಹೊಳೆಯುವ ಆ ಬಾಲಿಕೆಯಡನೆ ಪ್ರೀತಿಯಿಂದ ಮೆಲ್ಲನೆ ಹೀಗೆಂದೆನು. ೭೬. ಬಾಲೆ, ಬಿಡು ಬಿಡು. ನಿನ್ನ ಹಲ್ಲುಗಳ ಕಾಂತಿಯನ್ನು ಹೊಸ ತೊಂಡೆಹಣ್ಣೆಂದು ಭಾವಿಸಿದ ಕಾರಣ ಪ್ರೀತಿಯಿಂದ ನಿನ್ನ ಚೆಂದುಟಿಯನ್ನು ಕಚ್ಚಿದೆನು ಎಂದು ನಾನು ಹೇಳಲು, ನನ್ನನ್ನು ಬಿಟ್ಟ ಅವಳು ನನ್ನ ಜನ್ಮ ವೃತ್ತಾಂತವನ್ನು ಅತ್ಯುತ್ಸಾಹದಿಂದ ಕೇಳಿದ ಅವಳು ನನಗೆ ಗೆಳತಿಯಾಗಿ ಆಹ್ಲಾದವನ್ನು ಹೊಂದಿ ಸಖೀಜನರೊಂದಿಗೆ ಸಂತಸದಿಂದ ಹೂಗೊಳದಿಂದ ಹೊರಬಂದಳು. ೭೭. ಉದ್ಭಟದೇವಾ, ಅನಂತರ ಆ ಸುಂದರಿಯು ನೀರಾಟವನ್ನು ನಿಲ್ಲಿಸಿ ನನ್ನನ್ನು ಹಿಡಿದುಕೊಂಡು ಸಖಿಯರ ಜೊತೆಯಲ್ಲಿ ಉಲ್ಲಾಸದಿಂದ ಬಂದು ತನ್ನ ಮನೆಯನ್ನು ಪ್ರವೇಶಿಸಿದಳು. ೭೮. ಮಹಾರಾಜಾ, ಆ ಸೌಂದರವತಿಯು ಸಂತಸದಿಂದ ತನ್ನ ಮನೆಯನ್ನು ಪ್ರವೇಶಿಸಿ ತನ್ನ ತಂದೆ-ತಾಯಿಯರೊಡಗೂಡಿ ನನ್ನನ್ನು ಆನಂದದಿಂದ ಬಿಡದೆ ರಕ್ಷಿಸುತ್ತಿದ್ದಳು. ೭೯. ಉದ್ಭಟ ಮಹಾರಾಜಾ, ಆ ಮೀನಿನಂತೆ ಕಣ್ಣುಳ್ಳ ಸೌಂದರವತಿಯು, ನಾನಾ ಕಲೆಗಳನ್ನು ಆನಂದದಿಂದ

ಉಣಿಸಿಲ್ಲಾನುಣ್ಣದೆ ಭೂ
ಷಣಮಂ ತೊಡಳೆನ್ನನುಜಿಿದಗಲ್ದಿರಲಾಂ ನ।
ಲ್ತಣಿಯಳ್ಪೋಗದೊಳಾಕೆಯ
ಗುಣಮಣಿಯ ಗುಣಾತಿಶಯಮನಿನ್ನೇ ಪೊಗೞ್ವೆಂ ॥ ೮೦ ॥

ಎಂದಿಂತು ಸೌಂದರವತಿ ತನ್ನಂ ಪೊರೆವಂದಮಂ ಪೇೞಲ್ಕುದ್ಭಟ ಕ್ಷಿತೀಂದ್ರಚಂದ್ರಮಂ ಮಗುೞ್ದಾಗಿಳಿಗಿಂತೆಂದಂ॥

ಕೇಳೆಲೆ ತಾಂಮ್ರತುಂಡ ಸಖಿಯಾಗಿ ಸಮಂತುಟು ನಿನ್ನನೋವುವಾ
ಬಾಲೆಯನೆಂತಗಲ್ದಲಸದೀಘನಕಾನನಕೇಕೆ ಬಂದೆ ನೀಂ।
ಪೇೞೆನಲಚ್ಚಚಂಚುವಿನ ಚೆಂಬೊಳಪಂದು ಪಳಂಚಲೊಲ್ದು ಭೂ
ಪಾಲವರಂಗೆ ಪೇೞ್ದುದುೞಿ ತಾನಿರದಲ್ಲಿಗೆ ಬಂದ ಕಜ್ಜಮಂ ॥ ೮೧ ॥

ಧರಣಿಪ ಕೇಳ್ಮನೋಮುದದೊಳಾಂ ಪಲವುಂ ದಿವಸಂ ವಿಲಾಸದಿಂ
ದಿರಲೆನಗಂದು ಕೂರ್ತು ಸಖಿಯಾಗಿ ವಿರಾಜಿಪ ತತ್ಕುಮಾರಿಸೌಂ।
ದರವತಿಗಿಂದುಲೇಖೆಗೆ ಲಸತ್ಕಲೆಬಂದೊಡಗೂಡಿದಂತೆ ಹಂ
ಜರಿಸಿದುದಚ್ಚಪೊಚ್ಚಪೊಸಜವ್ವನದೇೞ್ಗೆ ಯಲಂಪನೀಯುತುಂ ॥ ೮೨ ॥

ಮಿಸುನಿಗೆ ಕಂಪಲರ್ವಿಲ್ಲವ
ನಸಿಗಗ್ಗದ ಕೂರ್ಪು ನಂದನಶ್ರೀಗೆ ವಸಂ।
ತಸಮಾಗಮಮೊಂದುವಪೋಲ್
ಪೊಸಜವ್ವನವಮರ್ದುದಾಕುಮಾರಿಕೆಗರಸಾ ॥ ೮೩ ॥

ಕಲಿಯುತ್ತ ಹೆತ್ತವರೊಡನೆ ನನ್ನನ್ನು ಪ್ರೀತಿಪಟ್ಟು ಕಾಪಾಡುತ್ತ ಶೋಭಿಸಿದಳು. ೮೦. ನಾನು ಊಟಮಾಡದೆ ಅವಳು ಉಣ್ಣಳು. ನನ್ನನ್ನು ಬಿಟ್ಟು ಆಭರಣಗಳನ್ನು ತೊಡಳು. ನಾನು ಅಗಲಿರಲು ಸುಖದಲ್ಲಿ ತೃಪ್ತಿಹೊಂದಳು. ಗುಣದ ಮಣಿಯಾದ ಆಕೆಯ ಗುಣವಿಶೇಷವನ್ನು ಏನೆಂದು ಹೊಗಳಲಿ! ವ॥ ಹೀಗೆ ಸೌಂದರವತಿಯು ತನ್ನನ್ನು ಕಾಪಾಡಿದ ರೀತಿಯನ್ನು ಹೇಳಲು ಉದ್ಭಟ ಮಹಾರಾಜ ಚಂದ್ರಮನು ಮತ್ತೆ ಆ ಗಿಳಿಗೆ ಹೀಗೆಂದನು. ೮೧. ಕೇಳೆಲೆ ಗಿಳಿಯೆ, ಗೆಳತಿಯಾಗಿ ನಿನ್ನನ್ನು ಚೆನ್ನಾಗಿ ರಕ್ಷಿಸಿದ ಆ ಬಾಲೆಯನ್ನು ನೀನು ಹೇಗೆ ಅಗಲಿದೆ? ಈ ಭೀಕರ ಕಾಡಿಗೆ ಏಕೆ ಬಂದೆ? ಹೇಳು ಎನ್ನಲು, ಹೊಳೆಯುವ ಕೊಕ್ಕಿನ ಕೆಂಪನೆಯ ಕಾಂತಿಯು ಮಿನುಗಲು ಪ್ರೀತಿಯಿಂದ ಮಹಾರಾಜರಲ್ಲಿ ಶ್ರೇಷ್ಠನಾದವನಿಗೆ ವಿಸ್ತಾರವಾಗಿ ಒಂದನ್ನೂ ಬಿಡದೆ ತಾನಲ್ಲಿಗೆ ಬಂದ ಕಾರ್ಯವನ್ನೂ ಹೇಳತೊಡಗಿತು. ೮೨. ಮಹಾರಾಜನೇ ಕೇಳು, ಮನದಲ್ಲಾದ ಆನಂದದಿಂದ ನಾನು ಹಲವು ದಿವಸ ವಿಲಾಸದಿಂದಿರಲು ನನಗೆ ಆಗ ಪ್ರೀತಿಯ ಗೆಳತಿಯಾಗಿದ್ದ ಶೋಭಾಯಮಾನಳಾದ ಆ ಕುಮಾರಿ ಸೌಂದರವತಿಗೆ, ಚಂದ್ರನಿಗೆ ಹೊಳೆವ ಕಾಂತಿಯು ಬಂದು ಸೇರಿದಂತೆ, ನವನವೀನವಾದ ಯೌವನವು ಸೊಗಸನ್ನುಂಟುಮಾಡುತ್ತ ದೇಹವನ್ನೆಲ್ಲಾ ಕವಿಯಿತು. ೮೩. ಅರಸಾ, ಚಿನ್ನಕ್ಕೆ ಕಾಂತಿಯೂ, ಮನ್ಮಥನ ಕತ್ತಿಗೆ ಒಳ್ಳೆಯ ಹರಿತವೂ, ತೋಟದ ಭಾಗ್ಯಕ್ಕೆ ವಸಂತನ ಆಗಮನವೂ

ಇಂತು ಸೌಂದರವತಿ ನೂತ್ನಯೌವನೋದಯಮಾಗಿ ವಿರಾಜಿಸುತ್ತಿರ್ದಳು॥

ಅದೆಂತೆಂದೊಡೆ, ॥

ಲಪನಂ ಪೂರ್ಣೇಂದುವಂ ಕೋಮಲತನು ಲತೆಯಂ ತುಂಗವಕ್ಷೋರುಹಂ ಹೇ
ಮಪಯೋಜಾತೋಲ್ಲಸತ್ಕುಟ್ಮಲಮನುಱುಱಿ ಮಳಲ್ದಿಂಟೆಯಂ ಶ್ರೋಣಿಮಿಂಚಂ।
ಚಪಲಾಪಾಂಗಂ ಚಲತ್ಕುಂತಳಮಳಿಕುಳಮಂ ಬಾಸೆ ಕೃಷ್ಣಾಹಿಯಂ
ರಂಜಿಪ ಕಂಠಂ ಕಂಬುವಂ ತಾಂ ಪಱಿಯಲೆಸೆದಳಾಕಾಂತೆ ರಾಜೇಂದ್ರಚಂದ್ರಾ ॥ ೮೪ ॥

ನಡೆಗರಸಂಚೆ ಯಿಂಚರಕೆ ಕೋಗಿಲೆ ಯಿಂಗದಿರ್ವಕ್ಕಿ ಕಣ್ಗೆ ಸೋ
ರ್ಮುಡಿಗೆ ನವಿಲ್ತೊಳಪ್ಪ ಮೊಲೆಗಳ್ಗೆಣೆವಕ್ಕಿ ಮೊಗಕ್ಕೆ ಚಂದ್ರನೊ।
ಳ್ನುಡಿಗೆ ಮನೋಜ್ಞಕೀರಶಿಶು ಕರ್ಪುಕುರುಳ್ಗೆಳೆದುಂಬಿವಿಂಡು ಕೀಳ್ಪಡಿ
ಯೆನಲೆಂತು ಬಣ್ಣಿಸುವೆನಾಸುಕುಮಾರಿಯನಾಂ ಮಹೀಧವಾ ॥ ೮೫ ॥

ಒದೆದೊಡಲರ್ದಪೆವಿನ್ನಗ
ಲದೆ ಪೊರ್ದಿದೊಡೆಂತೊ ನೋಟ್ಪೆವೆಂದೆಟ್ತಿಂದಾ।
ಪದಯುಗಮನಂಟದಸುಗೆಯ
ಪೊದಟ್ಬುೞ್ತಿಳದಳಿರಂತೆ ಮೆಱೆದುದಡಿದಳಮವಳಾ ॥ ೮೬ ॥

ಚರಣದ ಚೆಲ್ವನಜಸ್ರಂ
ಪರಿಲೋಕಿಪರಕ್ಷಿಕಾಂತಿಗಳ್ತೊಲಗದೆ ನಿ
ಲ್ತಿರದೆ ಗಱೆಗಟ್ಟಿದಪುವೆನೆ
ಕರಮೆಸೆದುವು ತಾವುಗುರ್ಗಳಾಪೆಣ್ಮಣಿಯಾ ॥ ೮೭ ॥

ಹೊಂದಿಕೊಂಡಂತೆ ಆ ಕುಮಾರಿಗೆ ನವಯೌವನವು ಬಂದುಕೂಡಿತು. ವ॥ ಹೀಗೆ ಸೌಂದರವತಿಗೆ ನವಯೌವನೋದಯವಾಗಿ ಶೋಭಿಸುತ್ತಿದ್ದಳು. ಅದು ಹೇಗೆಂದರೆ, ೮೪. ರಾಜೇಂದ್ರಚಂದ್ರಾ, ಮುಖವು ಪೂರ್ಣಚಂದ್ರನನ್ನು, ಕೋಮಲವಾದ ಶರೀರವು ಬಳ್ಳಿಯನ್ನು, ಉಬ್ಬಿದ ಮೊಲೆಯೆಂಬ ಕಮಲವು ಚಿನ್ನದ ನೀರಿನಲ್ಲಿ ಹುಟ್ಟಿದ ಹೊಳೆವ ಕಮಲದ ಮೊಗ್ಗನ್ನು - ಹೆಚ್ಚಾಗಿ ಮಳಲ ದಿಣ್ಣೆಯನ್ನು, ಚಂಚಲವಾದ ಕಡೆಗಣ್ಣೋಟವು ಮಿಂಚಿನ ಮೊತ್ತವನ್ನು, ಸುಳಿದಾಡುವ ಮುಂಗುರುಳು ದುಂಬಿಗಳನ್ನು, ಹೊಕ್ಕಳಿನಿಂದ ಎದೆಯವರೆವಿಗೆ ಇರುವ ಕೂದಲು ಕೃಷ್ಣಸರ್ಪವನ್ನು, ಹೊಳೆವ ಕತ್ತು ಶಂಖವನ್ನು ತಿರಸ್ಕರಿಸುವಂತೆ ಶೋಭಿಸಿದಳು. ೮೫. ಮಹಾರಾಜಾ, ನಡೆಗೆ ಹಂಸೆ, ಮಧುರ ಧ್ವನಿಗೆ ಕೋಗಿಲೆ, ಕಣ್ಣಿಗೆ ಇಂಗದಿರ್ವಕಿ, ಸಡಿಲವಾಗಿ ಕಟ್ಟಿದ ಕೂದಲಿಗೆ ನವಿಲು, ಮೊಲೆಗಳಿಗೆ ಜಕ್ಕವಕ್ಕಿ, ಮುಖಕ್ಕೆ ಚಂದ್ರ, ಒಳ್ಳೆಯ ಮಾತುಗಳಿಗೆ ಸುಂದರವಾದ ಗಿಳಿಯಮರಿ, ಕಪ್ಪಾದ ಮುಂಗುರುಳುಗಳಿಗೆ ದುಂಬಿಗಳ ಮೊತ್ತ - ಇವು ಹೋಲಿಕೆಗೆ ಸಮನಲ್ಲವೆಂದಿರಲು ಆ ಸುಕುಮಾರಿಯನ್ನು ಹೇಗೆ ಬಣ್ಣಿಸಲಿ. ೮೬. ಕಾಲಿಂದ ಒದೆದರೇ ಅರಳುತ್ತೇವೆ ಇನ್ನು ಅವಳನ್ನು ಸೇರಿದರೆ ಹೇಗೊ ನೋಡೋಣವೆಂದು ಬಂದು ಪಾದಗಳೆರಡನ್ನು ಚೆನ್ನಾಗಿ ಹೊಮ್ಮಿಬಂದ ಅಶೋಕವೃಕ್ಷದ ಎಳೆಯ ಚಿಗುರಂತೆ ಅವಳ ಪಾದಗಳೆಂಬ ಚಿಗುರು ಶೋಭಿಸಿದುವು. ೮೭. ಅವಳ ಪಾದಗಳ ಸೊಗಸನ್ನು ಸದಾ ನೋಡುವ ಕಣ್ಣ ಪ್ರಭೆಯು

ಆಡುತ್ತಾಡುತ್ತುಂ ಮಿಗೆ
ನೀಡುಂ ಮುದದಿಂದ ಬಂದಮರ್ದೊಂದೆಡೆಯೊಳ್।
ನಾಡೆ ಪಗಿಲ್ತೆಸೆವಾವೆಯ
ಜೋಡೆನೆ ಮೇಗಾಲ್ಗಳೆಸೆದುವಾ ಸುಂದರಿಯಾ ॥ ೮೮ ॥

ಅಣಮಳ್ಕದ ಜತಿಗಳ ಬಗೆ
ಗುಣಿಸಂ ಮೇಣೆಚ್ಚು ಕೆಡಪುವಲ್ಲರ್ವಿಲ್ಲನ ಪೂ।
ಗಣೆಗಳನಿರಿಸುವ ಮಿಸುನಿಯ
ದೊಣೆಗಳೆನಲ್ಜಂಘೆಗಳ್ಮೆಱೆದುವಾಸತಿಯಾ ॥ ೮೯ ॥

ಮಿಸುಪೆಳಜವ್ವನಮೆಂದೆಂ
ಬಿನಿವಿಲ್ಲನ ವನದೊಳೈದೆ ಕಂಗೊಳಿಸುವ ಕಾಂ।
ಚನಕದಳಿಗಳೆನೆ ತತ್ಕಾ
ಮಿನಿಯುತ್ತಂಗಂಗಳೆಸೆದುವುದ್ಭಟದೇವಾ ॥ ೯೦ ॥

ಅಸಿಯನಡುವೆಂಬ ಲತೆಯಿರ
ಲೆಸೆವ ಲಸದ್ಭೂಧರಂಗಳೆಂದೆನಲತಿರಂ।
ಜಿಸಿದುವು ತತ್ಕಾಂತೆಯ ಸೊ
ಗಸುವ ನಿತಂಬಂಗಳುದ್ಭಟಕ್ಷಿತಿಪಾಲಾ ॥ ೯೧ ॥

ಆಕಾರಂ ನಡೆ ನೋಡಿ ನಿ
ರಾಕಾರವದೇಕವೆಂದು ತಿಳಿಯದವರ್ಗ್ಗೆ।
ಲೋಕಿಸೆ ಧಾತ್ರಂ ನಿರ್ಮಿಸಿ
ದಾಕೃತಿಯೆನಲೆಸೆದುದವಳಸಂಶಯಮಧ್ಯಂ ॥ ೯೨ ॥

ಮಾಯವಾಗದೆ, ನಿಂತು ಬಿಡದೆ ಮೊತ್ತಗೊಂಡಿತೊ ಎನ್ನುವಂತೆ ಆ ಸುಂದರಾಂಗಿಯ ಉಗುರುಗಳು ಚೆನ್ನಾಗಿ ಕಂಡವು. ೮೮. ಆಡುತ್ತಾ ಅತ್ಯಾನಂದದಿಂದ ಬಂದು ಒಂದೆಡೆ ಚೆನ್ನಾಗಿ ಅಂಟಿಕೊಂಡು ಶೋಭಿಸಿರುವ ಜೋಡಿ ಆಮೆ ಎನ್ನುವಂತೆ ಆ ಸುಂದರಿಯ ಕಾಲಿನ ಮೇಲುಭಾಗವು ಅಂದವಾಗಿದ್ದಿತು. ೮೯. ಸ್ವಲ್ಪವೂ ಜಗ್ಗದ ಸನ್ಯಾಸಿಗಳ ಮನಸ್ಸನ್ನು ಕುಣಿಸುವ ಹಾಗೂ ತಾಗಿ ಕೆಡಹುವ ಮನ್ಮಥನ ಹೂಬಾಣಗಳನ್ನಿಡುವ ಚಿನ್ನದ ಬತ್ತಲಿಕೆ ಎನ್ನುವಂತೆ ಆ ಸುಂದರಿಯ ಕೆಳದೊಡೆಯು ಶೋಭಿಸಿತು. ೯೦. ಉದ್ಭಟದೇವಾ, ಹೊಳೆಯುವ ಎಳೆಯ ಪ್ರಾಯವೆಂಬ ಮನ್ಮಥನ ತೋಟದಲ್ಲಿ ಕಣ್ಣಿಗೆ ಅಂದವಾಗಿರುವ ಹೊಂಬಾಳೆಗಳು ಎನ್ನುವಂತೆ ಆ ಸುಂದರಿಯ ತೊಡೆಗಳು ಶೋಭಿಸಿದುವು. ೯೧. ಮಹಾರಾಜಾ, ಸಣ್ಣನೆಯ ನಡುವೆಂಬ ಬಳ್ಳಿಯಿಂದ ಶೋಭಿಸಿರುವ ವೃಕ್ಷಗಳೆನ್ನುವಂತೆ ಆ ಹೆಣ್ಣಿನ ಸೊಗಸಾದ ಸೊಂಟದ ಹಿಂಭಾಗವು ಶೋಭಿಸಿತು. ೯೨. ಚೆನ್ನಾಗಿ ನೋಡಲು ಆಕಾರ ನಿರಾಕಾರಗಳೆರಡೂ ಒಂದೇ ಆಗಿದೆ - ಅಜ್ಞಾನಿಗಳಿಗೆ ದೃಷ್ಟಿಸಲು ಬ್ರಹ್ಮನು ಸೃಷ್ಟಿಸಿದ ಸುಂದರವಾದ ಆಕೃತಿ ಎನ್ನುವಂತೆ ಅವಳ ಶೂನ್ಯಕಟಿಯು ಶೋಭಿಸಿತು.

ಪೂಸರಲನ ನವಸಿಂದದ
ವೈಸಾರಿಣನಾಡಲೆಂದಜಂ ಸಮೆವಲಸ।
ತ್ಕಾಸಾರಮೊ ಎಂದೆನಲಂ
ತಾಸುದತಿಯ ಪೊರ್ಕುಳಿಸೆದುದುದ್ಭಟದೇವಾ ॥ ೯೩ ॥

ಪಿರಿದಿನ ಸರ್ವಜಿತ್ತೆನಿಪ ಯಜ್ಞಮನಾಸುಳಿಪೊಕ್ಕುಳೆಂಬ ಬಂ
ಧುರತರಕುಂಡದೊಳ್ಸಮೆದು ಪುಷ್ಪಶರಾಸಸೋಮಯಾಜಿ ಪಂ
ಜರಿಸಿರೆ ಕೀರ್ತಿ ನಟ್ಟಹರಿನೀಲದ ಯೂಪದ ಮಾಟ್ಕೆಯಿಂದೆ ತ।
ತ್ತರಳಚಕೋರಲೋಚನೆಯ ಬಾಸೆ ವಿರಾಜಿಸಿತುದ್ಭಟೋರ್ವಿಪಾ ॥ ೯೪ ॥

ಮೊಗಸಸಿಯಂ ತೊಳಪ್ಪ ನಿಡುಬಾಸೆ ಯೆನಿಪ್ಪಸಿತೋರಗಂ ಸಮಂ
ತಗಲದೆ ಪಾಯ್ದುಮೆಂದದನು ಗಾರಡಿಗಂ ತವೆ ದಾಂಟದಂತೆ ನೆ।
ಟ್ಟಗೆ ಮಿಸುಪೊಂದೆರಟ್ಗೆರೆಯನೊಯ್ಯನೆ ಕೀಱಿದ ರೇಖೆ ಯೆಂಬಿನಂ
ಬಗೆಗೊಳಿಸಿತ್ತುಪೊಷ್ಪವ ವಳಿತ್ರಯಮಾಶಶಿಬಿಂಬವಕ್ತ್ರೆಯಾ ॥ ೯೫ ॥

ಅಮಲಿನಲಾವಣ್ಯಾಮೃತ
ರಮಣೀಯಘನಸರೋವವದೊಳೊಲ್ದುಮರ್ದಿ।
ರ್ಪಮಳ್ವಕ್ಕಿಗಳೆಂದೆನೆ ತ
ದ್ರಮಣಿಯೆ ಕಿಱುಮೊಲೆಗಳೆಸೆದುವುದ್ಭಟದೇವಾ ॥ ೯೬ ॥

ನಳನಳಿಸಿ ಬೆಳೆದ ಜೆಂಗುಡಿ
ಗಳೊಳಿಡೆವಿಡದಮರ್ದು ತೋರ್ಪ ವೀಚಿಗಳೆಸಲು।

೯೩. ಉದ್ಭಟದೇವಾ, ಮನ್ಮಥನ ಹೊಸ ಪತಾಕೆಯ ಹಂಸೆಯು ಆಡಲೆಂದು ಬ್ರಹ್ಮನು ನಿರ್ಮಿಸಿದ ಹೊಳೆವ ಕೊಳವೋ ಎನ್ನುವಂತೆ ಆ ಸುಂದರಿಯ ಹೊಕ್ಕಳು ಶೋಭಿಸಿತು. ೯೪. ಉದ್ಭಟ ಮಹಾರಾಜಾ, ಬೃಹತ್ತಾದ ಸರ್ವಜಿತ್ ಎಂಬ ಯಜ್ಞವನ್ನು ಆ ಆಳವಾದ ಹೊಕ್ಕುಳೆಂಬ ಮನೋಹರವಾದ ಕುಂಡದಲ್ಲಿ ಮನ್ಮಥನೆಂಬ ಸೋಮಯಾಜಿಯ ಮಾಡಿ [ಯಜ್ಞಶಾಲೆಯಲ್ಲಿ] ನೆಟ್ಟ ಪಚ್ಚೆಯ ಯಜ್ಞಸ್ತಂಭದ ರೀತಿಯಲ್ಲಿ ಕೀರ್ತಿ ಹರಡಿರುವಂತೆ ಆ ಚಂಚಲಾಕ್ಷಿಯ ಹೊಕ್ಕುಳಿನಿಂದ ಎದೆಯವರೆಗಿನ ಕೂದಲ ರಾಶಿಯು ಚೆನ್ನಾಗಿ ಒಪ್ಪಿತು. ೯೫. ಮುಖಚಂದ್ರನನ್ನು ಸುಂದರವಾದ ಹೊಕ್ಕುಳಿನ ಮೇಲಿನಿಂದ ಎದೆಯವರೆಗಿನ ಕೂದಲ ರಾಶಿಯೆಂಬ ಕಾಳಸರ್ಪನು [ರಾಹು] ಬಿಡದೆ ಚೆನ್ನಾಗಿ ಕವಿಯುವನು ಎಂದು ಅದನ್ನು ಬೇಗನೆ ದಾಟದಂತೆ ಮಾಡಲು ಗಾರುಡಿಗನೋರ್ವನು ಚೆನ್ನಾಗಿ ಹೊಳೆಯುವ ಒಂದೆರಡು ಗೆರೆಗಳನ್ನು ಮೆಲ್ಲನೆ ಬರೆದನೋ ಎನ್ನುವಂತೆ ಚಂದ್ರನಂತೆ ಮುಖವುಳ್ಳ ಆ ಸುಂದರಿಯ ಸೊಗಸಾದ ಹೊಟ್ಟೆಯ ಮೇಲೆ ಅಡ್ಡಲಾಗಿರುವ ಮಡಿಕೆ ಹಾಗೂ ಆ ಮಡಿಕೆಗಳ ಮಧ್ಯದ ಮೂರು ಗೆರೆಗಳು ಮನಸ್ಸನ್ನು ಸೆಳೆಯುತ್ತಿದ್ದವು. ೯೬. ಉದ್ಭಟದೇವಾ, ಪರಿಶುದ್ಧವಾದ ಸೌಂದರ್ಯವೆಂಬ ಅಮೃತ ಸರೋವರದಲ್ಲಿ ಪ್ರೀತಿಯಿಂದ ಕೂಡಿರುವ ಜಕ್ಕವಕ್ಕಿಗಳೊ ಎನ್ನುವಂತೆ ಆ ಸುಂದರಿಯ ಪುಟ್ಟ ಮೊಲೆಗಳು ಅಂದಗೊಂಡವು. ೯೭. ಸೊಂಪಾಗಿ

ಚ್ಚಳಮಾಣಿಕ್ಯದ ಬಂದಿಗ
ಳಳವಟ್ಟಿರಲೆಸೆದುದವಳ ಬಾಹಾಲತೆಗಳ್ ॥ ೯೭ ॥

ಶೈವಾಳದಲ್ಲಿ ಬಳಸಿರ
ಲಾವಗಮದಱುಡೆಯೊಳಮರ್ದು ಕಂಗೊಳಿಸುವ ಚೆಂ
ದಾವರೆಯೆನೆ ಪೊಸಪಸುರ್ವಣಿ
ತೀವಿದ ಕಟಕಾಂಕಪಾಣಿಯೊಪ್ಪಿದುದವಳಾ ॥ ೯೮ ॥

ಕಿಸುದಳಿರ್ಗಱಿಗಟ್ಟಿ ವಿರಾ
ಜಿಸುವತನುಶರಾಳಿಯಂತೆ ಮಣಿಯಾರ್ಮಿಕೆಯ।
ಪ್ರಸರಂ ದಳಿದೆಸೆದುವು ತ
ದ್ಬಿಸಜಾಕ್ಷಿಯ ನುಣ್ಬೆರಲ್ಗಳುದ್ಭಟದೇವಾ ॥ ೯೯ ॥

ಮಾಣದೆ ಬೆಳ್ನೊರೆಯೆಡೆಯೊಳ್
ಮೇಣಮರ್ದು ಮನಂಗೊಳಿಪ್ಪ ಶಂಕಂಬೊಲ್ಕ।
ಟ್ಟಾಣೆಯ ಮುತ್ತಿನ ಸರವಾಂ
ತೇಣಾಕ್ಷಿಯ ನುಣ್ಗೊರಲ್ಪಿರಾಜಿಪುದರಸಾ ॥ ೧೦೦ ॥

ಕಂದರ್ಪಂಕುಚಲಿಂಗದ
ಮುಂದೆ ಮನಂಗೊಳಿಪ ನುಣ್ಗೊರಲ್ಯಂಕಮನೊ।
ಲ್ದಂದರ್ಚಿಸಲಿರಿಸಿದ ಪೊಸ
ಪೊಂದಾವರೆಯಂತಿರೆಸೆದುದವಳ ಮುಖಾಬ್ಜಂ ॥ ೧೦೧ ॥

ಬೆಳೆದ ಹೊನ್ನಿನ ಬಳ್ಳಿಗಳೊಳಗೆ ಚೆನ್ನಾಗಿ ಆವರಿಸಿ ತೋರುವ ಕಿರಣಗಳೆನ್ನುವಂತೆ ತೋಳಿನಲ್ಲಿ ಹೊಳೆವ ಮಾಣಿಕ್ಯದ ಆಭರಣಗಳು ಹೊಂದಿಕೊಂಡು ಅವಳ ತೋಳೆಂಬ ಬಳ್ಳಿಗಳು ಶೋಭಿಸಿದುವು. ೯೮. ಹಾವಸೆಯಿಂದ ಸುತ್ತುವರಿಯಲ್ಪಟ್ಟು ಸದಾ ಅದರ ನಡುವೆ ಚೆನ್ನಾಗಿ ಕಂಗೊಳಿಸಿದ ಹೊಂದಾವರೆ ಎನ್ನುವಂತೆ ಹೊಸದಾದ ಹಸಿರು ಮಣಿಗಳಿಂದ ಕೂಡಿದ ಬಳೆಗಳನ್ನು ಧರಿಸಿದ ಅವಳ ಮುಂಗೈಗಳು ಚೆನ್ನಾದವು. ೯೯. ಉದ್ಭಟದೇವಾ, ಕೆಂಪನೆಯ ಚಿಗುರು ಮೊತ್ತಗೊಂಡು ಮನ್ಮಥನ ಬಾಣಗಳಂತೆ ಶೋಭಿಸಿರಲು ಮಣಿಖಚಿತವಾದ ಉಂಗುರವು ಆ ಕಮಲಾಕ್ಷಿಯ ನುಣುಪಾದ ಬೆರಳುಗಳಲ್ಲಿ ನೆಲೆ ಕಂಡುಕೊಂಡು ಅವು ಕಾಂತಿ ಚೆಲ್ಲುತ್ತ ಅಂದಗೊಂಡಿದ್ದುವು. ೧೦೦. ಅರಸಾ, ಬೆಳ್ಳನೆಯ ನೊರೆಯ ಮಧ್ಯದಲ್ಲಿ ಬಿಡದೆ ಸೇರಿಕೊಂಡು ಮನಸೆಳೆಯುವ ಶಂಖದಂತೆ ಅಮೂಲ್ಯವಾದ ಮುತ್ತಿನ ಸರವು ಆ ಹರಿಣಾಕ್ಷಿಯ ನುಣ್ಣನೆಯ ಕೊರಲಿನಲ್ಲಿ ಶೋಭಿಸಿರುವುದು. ೧೦೧. ಮನ್ಮಥನು ಮೊಲೆಗಳೆಂಬ ಲಿಂಗದ ಮುಂದೆ ಮನಸೆಳೆಯುವ ನುಣುಪಾದ ಕೊರಲೆನ್ನುವ ಶಂಖವನ್ನು, ಪ್ರೀತಿಯಿಂದ ಪೂಜಿಸಲೆಂದು ಇಟ್ಟ ಹೊಸ ಕೆಂದಾವರೆಯಂತೆ

ಸ್ಮರಸಿದ್ಧಮಂತ್ರಬೀಜಾ
ಕ್ಷರತತಿಯುತಮಾದ ಮಂಜುಳಶ್ರೀಕಾರ।
ಕ್ಕೊರೆಯೆನಲೆಸೆದುದು ಮುಕ್ತೋ
ತ್ಕರತಾಟಂಕಾಂಕಿತಶ್ರುತಿದ್ವಯಮವಳಾ ॥ ೧೦೨ ॥

ಸುಮನಶ್ಶರಂ ನಿರೀಕ್ಷಿಸ
ಲಮಲಪ್ರಭೆ ತುಳ್ಕುವಂತೆ ರತಿ ಬೆಳಗಲ್ಕೆ।
ಭ್ರಮವಾಂತ ಮುಕುರದಂತಿರೆ
ರಮಣಿಯ ನುಣ್ಗಲ್ಲವೆಸೆದುದುದ್ಭಟದೇವಾ ॥ ೧೦೩ ॥

ಮಿನುಪಾಮಲಶಶಿಬಿಂಬಮ
ನಿನಿತಗಲದೆ ಪತ್ತಿದಾಲವಣ್ಣೆಂಬಿನೆಗಂ।
ವನಿತೆಯ ಚೆಂದುಟಿ ಯೆಸೆದುದು
ತನಿಗಂಪಂ ತುಳ್ಕುತುಂ ಧರಿತ್ರೀಪಾಲಾ ॥ ೧೦೪ ॥

ವದನಾಬ್ಜಂ ಶ್ರೀಯೋದಿಪ
ಮೃದುವಾಕ್ಕೀರಂಗೆ ಕಂಜಭವನಿಡಿಸಿದ ಚೆ।
ಲ್ವೊದವಿದ ದಾಳಿಂಬದ ಬೀ
ಜದವೊಲ್ಗೆಂಬಲ್ಗಳೆಸೆದುವಾಕೋಮಲೆಯಾ ॥ ೧೦೫ ॥

ಮೊಗದಾವರೆಯಂ ನಿರ್ಮಿಸಿ
ಮಿಗೆ ಬಂದಳಕಾಳಿಗಳ್ತಳೆಯದಂತಿರಜಂ।
ಬಗೆಗೊಂಡಿರಿಸಿದ ಪೊಸಸಂ
ಪಗೆಮುಗುಳೆನಲೆಸೆದುದವಳ ನಾಸಾಮುಕುಳಂ ॥ ೧೦೬ ॥

ಅವಳ ಮುಖಕಮಲವು ಅಂದಗೊಂಡಿತು. ೧೦೨. ಮನ್ಮಥನ ಸಿದ್ಧಮಂತ್ರ ಬೀಜಾಕ್ಷರಗಳಿಂದ ಕೂಡಿದ ಮನೋಹರ ಶ್ರೀಕಾರಕ್ಕೆ ಸಮಾನವೆನ್ನುವಂತೆ ಮುತ್ತುಗಳಿಂದ ಬಿಗಿಯಲ್ಪಟ್ಟ ಓಲೆಗಳು ಅವಳ ಎರಡೂ ಕಿವಿಯಲ್ಲಿ ಸೇರಿ ಚೆಂದಗೊಂಡವು. ೧೦೩. ಉದ್ಭಟದೇವಾ, ನೋಟಕ್ಕೆ ಪರಿಶುದ್ಧವಾದ ಪ್ರಭೆಯು ಹೊಮ್ಮುವಂತೆ, ರತಿಯು ಶೋಭಿಸಲು ಕನ್ನಡಿಯ ಕಾಂತಿ ಥಳಥಳಿಸಿದಂತೆ ಇರಲು ಆ ಸುಂದರಿಯ ನುಣುಪಾದ ಗಲ್ಲವು ಚೆಲುವು ಪಡೆಯಿತು. ೧೦೪. ಮಹಾರಾಜ, ಹೊಳೆಯುವ ಪರಿಶುದ್ಧನಾದ ಚಂದ್ರನನ್ನು ಸ್ವಲ್ಪವೂ ಬಿಡದೆ ಸೇರಿದ ಆಲದ ಮರದ ಹಣ್ಣು ಎಂಬಂತೆ ಆ ಸುಂದರಿಯ ಕೆಂಪಾದ ತುಟಿಯು ಮಧುರವಾದ ಕಂಪನ್ನು ಚೆಲ್ಲುತ್ತ ಶೋಭಿಸಿತು. ೧೦೫. ಲಕ್ಷ್ಮಿಯು ಪಾಠ ಕಲಿಸುವ ಅರಗಿಳಿಗೆ ವಿಷ್ಣುವು ಹಾಕಿದ ಸುಂದರವಾದ ದಾಳಿಂಬದ ಬೀಜದಂತೆ ಆ ಕೋಮಲೆಯ ಮುಖಕಮಲದಲ್ಲಿ ಕೆಂಪನೆಯ ಹಲ್ಲುಗಳು ರಂಜಿಸಿದುವು. ೧೦೬. ಮುಖವೆಂಬ ತಾವರೆಯನ್ನು ಸಿದ್ಧಮಾಡಿದ ಬ್ರಹ್ಮನು ಅದನ್ನು ಕವಿಯಲು ಬಂದ ದುಂಬಿಗಳು ಮುತ್ತದಂತೆ ಮಾಡಲು ಮನಸೆಳೆಯುವ ಎಳೆಯ ಸಂಪಿಗೆಯ ಮೊಗ್ಗನ್ನು ಇರಿಸಿದನು ಎನ್ನುವಂತೆ ಅವಳ ಮೂಗು ಅಂದಗೊಂಡಿತು.

ನಿಚಿತಮುದದಿಂದೆ ಮುಖಶಶಿ
ರುಚಿಯಂ ಬಿಡದಂಟಿಸವಿವೆಂದಗಲದೆ ಸಾ।
ರ್ದ ಚಕೋರಂಗಳವೋಲ್ ಘನ
ಕುಚೆಯಲರ್ಗಣ್ಗಳ್ವಿರಾಜಿಸಿದುವವನೀಶಾ ॥ ೧೦೭ ॥

ನಿಟ್ಟಿಸಿ ಕಣ್ಗಳ ಚೆಲ್ವಂ
ದಿಟ್ಟಿಯವಕ್ಕಕ್ಕುಮೆಂದಜಂ ಕಪ್ಪಿನ ನ।
ಲ್ಬೊಟ್ಟಿಟ್ಟಂತೆವೊಲಂತಾ
ಹೆಟ್ಟುಗೆಯ ಕನೀನಿಕಂಗಳುದ್ಭಟದೇವಾ ॥ ೧೦೮ ॥

ಜತಿಗಳೆರ್ದೆಸಸಿವಣೆಯನಾ
ತತರುಚಿಯಿಂದೋಸರಿಪಾಸ್ಯಚಂದ್ರನ ಕಿರಣ।
ಪ್ರತತಿಯೆನಲವಳಪಾಂಗ
ದ್ಯುತಿ ಪರಿರಂಜಿಸಿದುದುದ್ಭಟಕ್ಷಿತಿಪಾಲಾ ॥ ೧೦೯ ॥

ಪ್ರವಿಮಲಕಾಂತಿ ಶ್ರೀಯೊ
ಪ್ಪುವ ವದನಾಂಭೋಜಮಂದಿರದ ಕಣ್ಬಾಗಿ।
ಲ್ಗೆ ವಿಬಂಧಿಸಿದುರುನೀಲದ
ನವತೋರಣದಂತೆ ಪುರ್ವೆಸೆದುದಾಸತಿಯಾ ॥ ೧೧೦ ॥

ಕಳೆಗೆಡದೀಮುಖಶಶಿಮಂ
ಡಲವಿದನಾಂ ಪೊರ್ದಿ ಪೂರ್ಣತೆಯನ್ನೆಯ್ದುವೆನೆಂ।
ದೆಳಸಿಯರದಿಂಗಳೆಟ್ಟಿಂ
ದಳವಟ್ಟಂತವಳ ನುಣ್ಲೊಸಲ್ಪೊಗಯಿಸುಗುಂ ॥ ೧೧೧ ॥

೧೦೭. ಮಹಾರಾಜಾ, ಒಟ್ಟುಗೂಡಿದ ಆನಂದದಿಂದ ಮುಖವೆಂಬ ಚಂದ್ರನಕಾಂತಿಯನ್ನು ತಪ್ಪದೆ ಇವು ಹೊಂದಿಸುತ್ತವೆ ಎನ್ನುವಂತೆ ಸಮೀಪಿಸಿದ ಚಕೋರ ಪಕ್ಷಿಗಳ ರೀತಿಯಲ್ಲಿ ತುಂಬುಮೊಲೆಯ ಹೂವಿನಂತಹ ಕಣ್ಣುಗಳು ಚೆನ್ನಾಗಿ ಬೆಳಗಿದವು. ೧೦೮. ಉದ್ಭಟದೇವಾ, ಕಣ್ಣುಗಳ ಚೆಲುವನ್ನು ನೋಡಿ ಅದಕ್ಕೆ ದೃಷ್ಟಿಯಾಗುತ್ತದೆ ಎಂದು ಬ್ರಹ್ಮನು ಕಪ್ಪುಬೊಟ್ಟನ್ನು ಇಟ್ಟಂತೆ ಆ ಸುಂದರಿಯ ಕಣ್ಣಿನ ಗುಳ್ಳೆಗಳಿದ್ದವು. ೧೦೯. ಉದ್ಭಟ ಮಹಾರಾಜಾ, ಯತಿಗಳ ಹೃದಯವೆಂಬ ಚಂದ್ರಮಣಿಯನ್ನು ಹಿಂದೆ ಸರಿಸುವ ವಿಶಾಲವಾದ ಮುಖಚಂದ್ರನ ಕಿರಣಗಳ ಸಮೂಹವೆನ್ನುವಂತೆ ಅವಳ ಕಡೆಗಣ್ಣೋಟದ ಕಾಂತಿಯು ಚೆನ್ನಾಗಿ ರಂಜಿಸಿತು. ೧೧೦. ಅತ್ಯಂತ ಪರಿಶುದ್ಧಳಾದ ಕಾಂತಿಲಕ್ಷ್ಮಿಯು ಶೋಭಾಯಮಾನವಾದ ಮುಖಕಮಲವೆಂಬ ಮನೆಯ ಕಣ್ಣೆನ್ನುವ ಬಾಗಿಲಿಗೆ ಚೆನ್ನಾಗಿ ಕಟ್ಟಿದ ಶ್ರೇಷ್ಠವಾದ ನೀಲಮಣಿಯ ಹೊಸ ತೋರಣವೆನ್ನುವಂತೆ ಆ ಸುಂದರಿಯ ಹುಬ್ಬು ಅಂದವಾಗಿದ್ದಿತು. ೧೧೧. ಕಳೆಗುಂದದ ಈ ಮುಖವೆಂಬ ಚಂದ್ರಮಂಡಲವನ್ನು ಹೊಂದಿ ಪೂರ್ಣತೆಯನ್ನು ಪಡೆಯುವೆನೆಂದು ಬಯಸಿ ಬಾಲಚಂದ್ರನು ಬಂದು ಸೇರಿದಂತೆ ಅವಳ ನುಣುಪಾದ

ಮದನಂ ತ್ರಿಜಗದ ಚೆಲ್ವಿಂ
ಗಿದೆ ತಾಂ ಮೇಲ್ಪಂತಿಯೆಂದಳಿಕಫಲಕದೊಳು।
ನ್ಮುದದಿಂ ಬರೆದಂಜನವ
ರ್ಣದ ಸಾಲೆನೆ ಕುಂತಳಾಳಿ ಯೊಪ್ಪಿದುದವಳಾ ॥ ೧೧೨ ॥

ನೆಗಟ್ದಿ ಮಹಾಯೋಗೀಂದ್ರರ
ಬಗೆಸೋಗೆಗೆ ಮುದವನಿತ್ತು ಕುಣಿಸುವ ಮುಂಗಾ।
ರ್ಮುಗಿಲೆನಲಾಕೆಯ ಸೋರ್ಮುಡಿ
ಸೊಗಸಿದುದಾಮ್ನಾಯವಚನಕರ್ಣಾಭರಣಾ ॥ ೧೧೩ ॥

ಮತ್ತಮದಲ್ಲದಮೃತಮಯೂಖಲೇಖೆಯಂತೆ ಕುವಲಯಪ್ರಮೋದಕಾರಿಣಿಯುಂ ಪ್ರಾಚಿಯಂತೆ ಮಿತ್ರೋದಯೋಲ್ಲಾಸಿನಿಯುಂ ಮಧುಮಾಸದಂತೆ ಕಲಕಂಠಕಂಠಸ್ವರವಿರಾಜಿತೆಯುಂ ಶರದಾಗಮದಂತೆ ರಾಜಹಂಸಪ್ರಮೋದೆಯುಂ ವರ್ಷಾಸಮಯದಂತುತ್ತುಂಗಪಯೋಧರವಿಭಾಸಿತೆಯುಂ ಸರಸಿಯಂತೆ ಸುಕರಪದ್ಮರೇಖಾವಿರಾಜಿತೆಯುಂ ಜಾಹ್ನವಿಯಂತನುಕೂಲವರ್ತನೆಯುಂ ಜಲರಾಶಿಯಂತೆ ಲಾವಣ್ಯಮಯೆಯುಂ ಕಲ್ಪಲತೆಯಂತೆ ವಿಬುಧಗಣವಾಂಛಿತಫಲಪ್ರದೆಯುಂ ಸಿಂಜಿನಿಯಂತೆ ಧರ್ಮವಿಲಂಬಿತೆಯುಂ ಮಣಿಮಾಲೆಯಂತೆ ಗುಣಗರ್ಭಿತೆಯುಂ ಲಕ್ಷ್ಮಿಯಂತುಜ್ವಲಮುಖೋಜ್ವಲೆಯುಂ ಸರಸ್ವತಿಯಂತೆ ಸಕಲಕಲಾಧಿ ದೇವತೆಯುಂ ಶಚೀದೇವಿಯಂತನಿಮಿಷೇಂದ್ರಾವಲೋಕನಾನಂದಿತೆಯುಂ ರತಿಯಂತಾಲೋಕನಮಾತ್ರಕಾಮತಾಪಪ್ರಬೋಧಿತೆಯುಂ ರೋಹಿಣಿಯಂತೆ ಸುಧಾನಿಲಯಾನ್ವಿತೆಯುಂ ವಿದ್ಯಾಧರಿಯಂತೆ ಸನ್ಮಾರ್ಗಯುತೆಯುಂ ಸತ್ಕೃತಿಯಂತೆ ಸಮುದಂಚಿತಲಕ್ಷಣಾಕಾರೆಯುಮೆನಿಸಿಮನಂಗೊಳಿಸುತಿದ್ದಳಾ ಸೌಂದರವತಿಯಂತುಮಲ್ಲದೆಯುಂ,

ಹಣೆ ಸೊಗಸಾಗಿದ್ದಿತು. ೧೧೨. ಮನ್ಮಥನು ಮೂರು ಲೋಕದ ಚೆಲುವಿಕೆಗೆ ಇದು ಮೇಲ್ಪಂಕ್ತಿ ಎಂದು ಹಣೆಯೆಂಬ ಹಲಗೆಯಲ್ಲಿ ಸಂತಸದಿಂದ ಬರೆದ ಕಪ್ಪು ಬಣ್ಣದ ಸಾಲೆನ್ನುವಂತೆ ಅವಳ ಮುಂಗುರುಳುಗಳು ಅಂದವಾಗಿದ್ದವು. ೧೧೩. ವೇದೋಕ್ತಿಗಳು ಕಿವಿಗೆ ಆಭರಣಪ್ರಾಯವಾಗಿರುವವನೆ, ಪ್ರಸಿದ್ಧರಾದ ಮಹಾಯೋಗಿ ಶ್ರೇಷ್ಠರ ಮನವೆಂಬ ನವಿಲಿಗೆ ಸಂತಸವಿತ್ತು ಕುಣಿಸುವ ಮುಂಗಾರ ಮುಗಿಲೊ ಎನ್ನುವಂತೆ ಅವಳ ಸಡಿಲವಾಗಿ ಕಟ್ಟಿದ ತುರುಬು ಸೊಗಸನ್ನು ಪಡೆಯಿತು. ವ॥ ಮತ್ತೆ ಅದಲ್ಲದೆ, ಚಂದ್ರನ ಕಿರಣಗಳಂತೆ ಲೋಕಕ್ಕೆ ಸಂತೋಷವನ್ನುಂಟುಮಾಡುವವಳೂ, ಮುಂಗೋಳಿಯ ಸಮಯದ ಕೆಂಪಿನಂತೆ ಸೂರ್ಯನ ಉದಯಕ್ಕೆ ಉಲ್ಲಾಸಕಾರಿಣಿಯಾದವಳೂ, ವಸಂತಕಾಲದ ಕೋಗಿಲೆಯ ಕಂಠದಂತೆ ಮಧುರವಾದ ಧ್ವನಿಯಿಂದ ಶೋಭಿಸಿರುವವಳೂ, ಮಳೆಗಾಲದ ಆಗಮನದಂತೆ ರಾಜಹಂಸಗಳಿಗೆ ಸಂತಸವನ್ನುಂಟುಮಾಡುವವಳೂ, ಮಳೆಗಾಲದ ಮೋಡದಂತೆ ಘನಸ್ತನಗಳನ್ನು ಹೊಂದಿ ಶೋಭಿಸಿರುವವಳೂ, ಸರೋವರದಂತೆ ಅಂಗೈಯಲ್ಲಿ ಪದ್ಮರೇಖೆಯನ್ನು ಹೊಂದಿ ವಿಶೇಷವಾಗಿ ರಂಜಿಸಿರುವವಳೂ, ಗಂಗೆಯಂತೆ (ಲೋಕಕ್ಕೆ) ಉಪಕಾರಿಯಾಗಿರುವವಳೂ, ಸಮುದ್ರದಂತೆ ಮನೋಹರಿಯಾಗಿರುವವಳೂ, ಕಲ್ಪಲತೆಯಂತೆ ವಿದ್ವಾಂಸರ ಸಮೂಹದ ಇಷ್ಟಾರ್ಥವನ್ನು ಪೂರೈಸುವವಳೂ, ಬಿಲ್ಲಿನ ಹಗ್ಗದಂತೆ ಧರ್ಮಕ್ಕೆ ಮಣಿಯುವವಳೂ, ಮಣಿಗಳ ಮಾಲೆಯಂತೆ ಸದ್ಗುಣಗಳನ್ನು ಹೊಂದಿರುವವಳೂ, ಲಕ್ಷ್ಮಿಯಂತೆ ಪ್ರಖರವಾದ ಮುಖಕಾಂತಿಯನ್ನು ಹೊಂದಿರುವವಳೂ,

ಯತಿಜನಚಿತ್ತಮೌಕ್ತಿಕಕೆ ನಿರ್ಮಳವಜ್ರಶಲಾಕೆ ಯೋಗಿಸಂ
ತತಿಯ ಮನಶ್ಶಿಖಾವಳಕೆ ಮಿಂಚಿನ ಬಳ್ಳಿ ಮುಮುಕ್ಷುಜಾಲದು।
ನ್ನತತಪಮೆಂಬ ತಾವರೆಗೆ ಬಾಲಸುಧಾರುಚಿಲೇಖೆ ಭಾವಿಸ
ಲ್ಕತನುಕಲಾಧಿದೇವಿಯೆನಲೊಪ್ಪಿದಳಾತರಳಾಕ್ಷಿ ಭೂವರಾ ॥ ೧೧೪ ॥

ಮದನನ ಕೀರ್ತಿವಲ್ಲಿ ರತಿರಾಜನ ಮೋಹನದೇಳ್ಗೆ ಪುಷ್ಪಬಾ
ಣದ ಸಿರಿವಂತನುರ್ಬು ಕುಸುಮಾಸ್ತ್ರನ ಗಾಡಿ ಮನೋಜನುಂಚಪ।
ಟ್ಟದ ಕರಿ ಮೀನಕೇತನನ ವಿಕ್ರಮದೊರ್ಬುಳಿ ಕಬ್ಬುವಿಲ್ಲನ
ಭ್ಯುದಯಮೆನಲ್ಕೆ ಕಣ್ಗೆಸೆದಳಾಕಮಲಾನನೆಯುದ್ಭಟೋರ್ವಿಪಾ ॥ ೧೧೫ ॥

ಕಾಮನ ಮಂತ್ರದೇವತೆಯೊ ನೂತ್ನವಸಂತನ ಪೆರ್ಮೆಯೋ ಲಸ
ತ್ಸೋಮನ ತೇಜವೋ ರತಿಯ ಸಿಂಗರದುನ್ನತಿಯೋ ಸುಮೋಹನೋ।
ದ್ದಾಮವೊ ಪುಷ್ಪಮಾರ್ಗಣದಲಂಪಿನ ಸೊಂಪೊ ಸಮಸ್ತಸತ್ಕಲಾ
ರಾಮವೊ ಬಣ್ಣಿಸಲ್ಕೆ ಬಗೆಗಚ್ಚರಿಯಾಸತಿಯುದ್ಭಟೋರ್ವಿಪಾ ॥ ೧೧೬ ॥

ಗಾಡಿಯ ಬಂಣಂ ಸಿಂಗರ
ದಾಡುಂಬೊಲನಖಿಳ ಕಳೆಗಳಾಧಾರಂ ಕೊಂ।
ಡಾಡುವರ ಪುಣ್ಯವೆನಲಾ
ಷೋಡಶವರ್ಷದ ಕುಮಾರಿ ಯೊಪ್ಪಿದಳರಸಾ ॥ ೧೧೭ ॥

ಸರಸ್ವತಿಯಂತೆ ಸಕಲ ಕಲೆಗಳಿಗೆ ಮುಖ್ಯಳಾದ ದೇವತೆಯಂತಿರುವವಳೂ, ದೇವೇಂದ್ರನ ಹೆಂಡತಿಯಾದ ಶಚೀದೇವಿಯಂತೆ ದೇವೇಂದ್ರನನ್ನು ನೋಡುವುದರಲ್ಲಿ ಆನಂದ ಹೊಂದಿದವಳೂ, ರತಿಯಂತೆ ನೋಡಿದ ಮಾತ್ರಕ್ಕೇ ಕಾಮತಾಪಕ್ಕೊಳಗಾಗುವವಳೂ, ರೋಹಿಣಿಯಂತೆ ಚಂದ್ರನಲ್ಲಿ ನೆಲೆಯಾಗಿರುವವಳೂ, ದೇವತೆಯಂತೆ ಸನ್ಮಾರ್ಗದಿಂದ ಕೂಡಿರುವವಳೂ, ಒಳ್ಳೆಯ ಕಾವ್ಯದಂತೆ ಸಲ್ಲಕ್ಷಣಯುಕ್ತೆಯೂ ಎನಿಸಿ ಆ ಸೌಂದರವತಿಯು ಮನಸ್ಸನ್ನು ಆಕರ್ಷಿಸುತ್ತಿದ್ದಳು. ಅಷ್ಟೇ ಅಲ್ಲದೆ, ೧೧೪. ಮಹಾರಾಜಾ, ಸನ್ಯಾಸಿಗಳೆಂಬುವರ ಮನವೆಂಬ ಮುತ್ತಿಗೆ ಪರಿಶುದ್ಧವಾದ ವಜ್ರದ ಶಲಾಕೆಯಂತೆಯೂ, ಯೋಗಿಗಳ ಮನಸ್ಸೆಂಬ ಅಗ್ರಭಾಗಕ್ಕೆ ಮಿಂಚಿನ ಬಳ್ಳಿಯಂತೆಯೂ, ಮೋಕ್ಷಾಪೇಕ್ಷಿಗಳ ಶ್ರೇಷ್ಠವಾದ ತಪಸ್ಸೆಂಬ ಕಮಲಕ್ಕೆ ಎಳೆಯ ಚಂದ್ರನ ಕಾಂತಿಯಂತೆಯೂ, ನೋಟಕ್ಕೆ ಮನ್ಮಥ ಕಲಾಧಿದೇವತೆಯಂತೆಯೂ ಆ ಚಂಚಾಲಾಕ್ಷಿಯು ಶೋಭಿಸಿದಳು. ೧೧೫. ಉದ್ಭಟ ಮಹಾರಾಜಾ, ಮನ್ಮಥನ ಕೀರ್ತಿಯೆಂಬ ಬಳ್ಳಿ, ಕಾಮದೇವನ ಮೋಹನದ ಹೆಚ್ಚಳ, ಹೂಬಾಣದೊಡೆಯನ ಹುಬ್ಬು, ಕುಸುಮಾಸ್ತ್ರದ ಸೊಬಗು, ಮನಸಿಜನ ಶ್ರೇಷ್ಠವಾದ ಪಟ್ಟದಾನೆ, ಮೀನನ್ನು ಪತಾಕೆಯಲ್ಲಿ ಚಿಹ್ನೆಯಾಗುಳ್ಳ ಮದನನ ಪರಾಕ್ರಮದ ಒಟ್ಟಿಲು. ಕಬ್ಬೇ ಬಿಲ್ಲಾಗಿಉಳ್ಳ ರತಿಪತಿಯ ಏಳ್ಗೆ ಎನ್ನುವಂತೆ ಆ ಕಮಲಮುಖಿಯು ಕಣ್ಣಿಗೆ ಅಂದವಾದಳು. ೧೧೬. ಉದ್ಭಟ ಮಹಾರಾಜಾ, ಕಾಮನ ಮಂತ್ರದೇವತೆಯೊ, ಹೊಸವಸಂತನ ಹಿರಿಮೆಯೊ, ಹೊಳೆವ ಚಂದ್ರನ ಕಾಂತಿಯೊ, ರತಿಯ ಶೃಂಗಾರದ ಹೆಚ್ಚಳವೊ, ಮೋಹನದ ಶ್ರೇಷ್ಠತ್ವವೊ, ಹೂಬಾಣದ ಅತಿಶಯವಾದ ಸೊಗಸೊ, ಸಕಲ ಸತ್ಕಲೆಗಳ ವಿಶ್ರಾಂತಿ ಸ್ಥಳವೊ ವರ್ಣಿಸಲು ಆ ಸುಂದರಿಯು ಮನಸ್ಸಿಗೆ ಆಶ್ಚರ್ಯವನ್ನುಂಟುಮಾಡುವವಳಾಗಿರುವಳು. ೧೧೭. ಅರಸಾ, ಚೆಲುವಿನ ರಂಗು,

ಮಾರನ ಪುಷ್ಪಬಾಣಮಲರ್ವಿಲ್ಲನ ಚಾಪಮನಂಗಹಸ್ತಜಂ
ಬೀರಫಲಂ ಮನಶ್ಶಯನನಾರತಮೊಲ್ದುಱು ನೋಳ್ಪ ದರ್ಪಣಂ।
ಸಾರಿಗೆದೇರನೈದೆ ಬಡಿದಾಡುವ ಮುತ್ತಿನ ಕಂತುಕಂ ಲಸ
ನ್ಮಾರನ ಮಂತ್ರಿಯೊಲ್ಕುವರಿಯೊಪ್ಪಿದಳುದ್ಭಟರಾಜಕುಂಜರಾ ॥ ೧೧೮ ॥

ಇಂತತಿಮನಂಗೊಳಿಪ ತತ್ಸೌಂದರವತಿಯ ರೂಪಾತಿಶಯಮಂ ಕಂಡು ಈ ಪೊಸಜವ್ವನೆಯಂ ವಿವಾಹಮಂ ಮಾಡಲ್ವೇಳ್ಕುಮಿವಳ್ಗೆಣೆಯಾದ ವರಮಿಲ್ಲಮಿದಕಾವುದು ಕಜ್ಜಮೆಂದಾಲೋಚನೆಯಂ ಮಾಡುತ್ತುಂ ಚಿಂತೆಯಂ ತಳೆದವಳ ಜನನೀಜನಕರಿರಲಾಸಮಯದೊಳಾಂ ಬಂದವರ ಮೊಗಮೊಳ್ಸೂಚಿಸುವುಮ್ಮಂ ಕಂಡವರ್ಗಿಂತೆಂದೆಂ॥

ಏನಿಂದು ನಿಮಗೆ ಕಡು ದು
ಮ್ಮಾನಂ ಮೊಗದಲ್ಲಿ ತೋಱುತಿದೆ ಪೇಱನೆ ತ।
ದ್ಭೂನಾಥಂ ನುಡಿದಂ ನಿಜ
ಮಾನಿನಿವೆರಸೆನ್ನೊಳೊಯ್ಯನಿಂತೆಂದು ನೃಪಾ ॥ ೧೧೯ ॥

ಗಿಳಿ ನಿನ್ನ ಮಿತ್ರೆಯಾದೀ
ನಳಿನಾಕ್ಷಿಗೆ ತಕ್ಕ ಕಾಂತನೇ ತದ್ಧರಣೀ।
ವಳಯದೊಳಿಲ್ಲದಱಿಂದು
ಮ್ಮಳವಾಯ್ತೆನಲಾಂ ಮಗುೞ್ದವರಿಗಿಂತೆಂದೆಂ ॥ ೧೨೦ ॥

ಶೃಂಗಾರದ ಕ್ರೀಡಾ ಸ್ಥಲ ಸಕಲ ಕಲೆಗಳ ನೆಲೆ, ಹೊಗಳುವವರ ಪುಣ್ಯವೆನ್ನುವಂತೆ ಹದಿನಾರು ವರುಷದ ಆ ಕುಮಾರಿಯು ಅಂದಗೊಂಡಿದ್ದಳು. ೧೧೮. ಉದ್ಭಟ ರಾಜನೆಂಬ ಆನೆಯೇ, ಮನ್ಮಥನ ಹೂಬಾಣ, ಮದನನ ಬಿಲ್ಲು, ಅಂಗಜನ ಕೈಯಲ್ಲಿನ ನಿಂಬೆಹಣ್ಣು, ಮನದಲ್ಲಿ ಅವ್ಯಕ್ತರೂಡಿನಲ್ಲಿ ನೆಲೆಗೊಂಡ ಕಾಮನ ಸದಾ ಪ್ರೀತಿಯಿಂದ ಚೆನ್ನಾಗಿ ನೋಡುವ ಕನ್ನಡಿ, ಗಿಳಿಯನ್ನೇ ರಥವನ್ನಾಗಿ ಮಾಡಿಕೊಂಡಿರುವ ಮನ್ಮಥನ ಬಡಿದಾಡುವ ಮುತ್ತಿನ ಚೆಂಡು, ಹೊಳೆವ ಮಾರನ ಮಂತ್ರಿ-ಎನ್ನುವಂತೆ ಆ ಕುಮಾರಿಯು ಅಂದಗೊಂಡಳು. ವ॥ ಹೀಗೆ ಚೆನ್ನಾಗಿ ಮನಸೆಳೆಯುವ ಆ ಸೌಂದರವತಿಯ ರೂಪವಿಶೇಷವನ್ನು ನೋಡಿ ಈ ನವಯೌವನೆಯ ವಿವಾಹವನ್ನು ಮಾಡಬೇಕು. ಇವಳಿಗೆ ಸಮಾನನಾದ ವರನೇ ಇಲ್ಲ. ಇದಕ್ಕೇನು ಮಾಡುವುದು ಎಂದು ವಿಚಾರಮಾಡುತ್ತ ಚಿಂತೆಹೊಂದಿದ್ದ ಅವಳ ತಾಯಿ ತಂದೆಯರಿರಲು ಆ ಸಮಯಕ್ಕೆ ನಾನು ಬಂದು ಅವರ ಮುಖದಲ್ಲಿ ಸೂಚಿತವಾದ ದುಃಖವನ್ನು ಕಂಡು ಅವರಿಗೆ ಹೀಗೆಂದೆನು. ೧೧೯. ಮಹಾರಾಜ, ಏಕೆ ಇಂದು ನಿಮ್ಮ ಮುಖದಲ್ಲಿ ಹೆಚ್ಚಿನ ದುಃಖವು ಕಾಣುತ್ತಿದೆ? ಹೇಳು ಎನ್ನಲು, ಆ ರಾಜನು ತನ್ನ ಹೆಂಡತಿಯೊಡಗೂಡಿ ಮೆಲ್ಲನೆ ಹೀಗೆಂದು ನುಡಿದನು. ೧೨೦. "[ಎಲೆ] ಗಿಳಿಯೆ, ನಿನ್ನ ಗೆಳತಿಯಾದ ಈ ಕಮಲಾಕ್ಷಿಗೆ ಯೋಗ್ಯವರನು ಈ ಭೂವಲಯದಲ್ಲಿ ಇಲ್ಲದ ಕಾರಣ

ಇನಿತಕ್ಕುಮ್ಮಳವೇಕೀ
ವನಜಾಕ್ಷಿಗೆ ತಕ್ಕ ವರನನೊಲ್ದು ಸಮಸ್ತಾ।
ವನಿಯಲ್ಲಿ ನೋಡಿ ಯಾಂ ಭೋಂ
ಕೆನೆ ತಂದಪೆನೆನಲವರ್ಗಳೆನಗಿಂತೆಂದರ್ ॥ ೧೨೧ ॥

ಎಲೆ ಶುಕ ನೀನಾವನನೀ
ಲಲನೆಗೆ ಪತಿಯೆಂದು ತರ್ಪೆ ಯಾತನೆ ನಿನ್ನು।
ಜ್ವಲಸಖಿಗೆ ಭರ್ತೃವೆಂದೆನ
ಲೊಲವಿಂದಂ ಬಾಸಗೊಟ್ಟು ಕಳುಪಿದರೆನ್ನಂ ॥ ೧೨೨ ॥

ಅರಸನ ವಾಕ್ಯಮನೆರ್ದೆಗೊಂ
ಡರಸಿಗೆ ಪೇಳ್ದೆನ್ನ ಸಖಿಯ ಸೌಂದರವತಿಯಂ।
ಕರಮಬ್ತೆಯಿಂದೆ ಬೀಱ್ಕೊಂ
ಡಿರದಾಕೆಗೆ ತಕ್ಕ ವರನನಱಸಿದೆನಿಳೆಯೊಳ್ ॥ ೧೨೩ ॥

ಅದೆಂತೆಂದೊಡೆ,

ಫಣಿಪಕುಮಾರರೊಳ್ದಿವಿಜನಾಯಕರೊಳ್ಖಚರೇಂದ್ರರೊಳ್ಸುಚಾ
ರಣವರರೊಳ್ಮನುಷ್ಯತತಿಯೊಳ್ಕಮನೀಯಗುಣಾಢ್ಯಕಿನ್ನರಾ।
ಗ್ರಣಿಗಳೊಳೇಂ ಸಮಸ್ತಧರೆಯೊಳ್ಪರಿಶೋಭಿಪ ರಾಜಪುತ್ರರೊ
ಳ್ಗುಣಮಣಿಯೆನ್ನ ಮಿತ್ರೆಗೆಣೆಯಾದಧಿನಾಥನನೊಲ್ದು ನೋಡಿದೆಂ ॥ ೧೨೪ ॥

ನಾನಾಲೋಕಂಗಳೊಳಂ
ತಾನೀಱುಗೆ ತಕ್ಕ ನೀಜನಂ ಕಾಣದೆ ಬಂ।
ದಾನಂದು ಮಱುಗಿತು ಪೊಸಬಲೆ
ತಾನಿರ್ಪುದನಱಿಯದೊಂದುಮರಮಂ ಸಾರ್ದೆಂ ॥ ೧೨೫ ॥

ದುಃಖವಾಯಿತು" ಎನ್ನಲು, ನಾನು ಅವರಿಗೆ ಮತ್ತೆ ಹೀಗೆಂದೆನು. ೧೨೧. "ಇಷ್ಟು ಚಿಂತೆಯೇಕೆ? ಈ ಕಮಲಾಕ್ಷಿಗೆ ಯೋಗ್ಯವರನನ್ನು ಈ ಸಕಲ ಲೋಕದಲ್ಲಿ ಪ್ರೀತಿಯಿಂದ ನಾನು ಹುಡುಕಿನೋಡಿ ಬೇಗನೆ ಕರೆದು ತರುವೆನು" ಎನ್ನಲು, ಅವರು ನನಗೆ ಹೀಗೆಂದರು. ೧೨೨. "ಎಲೆ ಗಿಳಿಯೆ, ನೀನು ಯಾರನ್ನು ಈ ಕುಮಾರಿಗೆ ವರನೆಂದು ಕರೆತರುತ್ತೀಯೋ ಆತನೇ ನಿನ್ನ ಕಾಂತಿಪೂರ್ಣಳಾದ ಗೆಳತಿಗೆ ಗಂಡನು" ಎಂದು ಭಾಷೆಕೊಟ್ಟು ನನ್ನನ್ನು ಕಳುಹಿಸಿದರು. ೧೨೩. ಮಹಾರಾಜನ ಮಾತನ್ನು ಮನಸ್ಸಿಗೆ ತೆಗೆದುಕೊಂಡು, ಮಹಾರಾಣಿಗೆ ಹೇಳಿ, ನನ್ನ ಗೆಳತಿಯಾದ ಸೌಂದರವತಿಯನ್ನು ಅತ್ಯಾನಂದದಿಂದ ಬೀಳ್ಕೊಂಡು ಬಿಡದೆ ಆಕೆಗೆ ಯೋಗ್ಯನಾದ ವರನನ್ನು ಭೂಮಿಯಲ್ಲಿ ಹುಡುಕಿದೆನು. ವ॥ ಅದು ಹೇಗೆಂದರೆ, ೧೨೪. ನಾಗಕುಮಾರರಲ್ಲಿ, ದಿವಿಜನಾಯಕರಲ್ಲಿ, ಮುಖ್ಯದೇವತೆಗಳಲ್ಲಿ, ಗಂಧರ್ವ ನಾಯಕರಲ್ಲಿ, ಮನುಷ್ಯರಲ್ಲಿ, ಮನೋಹರರೂ ಗುಣಾಢ್ಯರೂ ಆದ ಕಿನ್ನರ ನಾಯಕರಲ್ಲಿ, ಸಕಲ ಭೂಮಂಡಲದಲ್ಲಿ ಚೆನ್ನಾಗಿ ಶೋಭಿಸಿರುವ ರಾಜಕುಮಾರರಲ್ಲಿ ಗುಣದ ಮಣಿಯಾದ ನನ್ನ ಗೆಳತಿಗೆ ಸಮಾನನಾದ ಪತಿಯನ್ನು ಪ್ರೀತಿಯಿಂದ ಹುಡುಕಿ ನೋಡಿದೆನು. ೧೨೫. ನಾನಾ ಲೋಕಗಳಲ್ಲಿ ಸುತ್ತಿ ಈ ಸುಂದರಿಗೆ ಯೋಗ್ಯವರನನ್ನು ಕಾಣದೆ ಮಂಕಾಗಿ

ಲೇಖವರಾಭವೈಭವನೆ ಕೇಳ್ ವನಸಂಚರನಲ್ಲಿ ನಿಲ್ಲದೆ
ಲ್ಲಾಖಗಮಂ ಕರಂ ಪಿಡಿಯಲೆಂದತಿಮೋದದಿನಂದು ಬಂದು ತ।
ಚ್ಛಾಖೆಯೊಳೊಲ್ದು ಸೇರಿಸಿದನಾಬಲೆಯೊಳ್ತವೆ ಸಿಲ್ಕಿದೆಂ ಸಮಂ
ತಾಖುಗೆ ಪಣ್ಣೆಪೋದ ಸಿಡಿಯೊಳ್ಕಿಗೆ ಬಿಟ್ಟಿ ಬಿಡಾಲನಂದದಿಂ ॥ ೧೨೬ ॥

ಕೊರಗುತ್ತಾಂ ಬಲೆಯೊಳ್ಸಿ
ಲ್ಕಿರೆ ಕಂಡು ಪುಳಿಂದನುರ್ಬಿ ತಜ್ಜಾಲಮನಾಂ।
ತಿರದಿಲ್ಲಿಗೆ ಬಂದಂ ಮ
ದ್ಗುರುಪುಣ್ಯದ ಪೆಂಪದೆಂತೊ ರಾಜವರೇಣ್ಯಾ ॥ ೧೨೭ ॥

ತತ್ಕಾರಣದಿಂದಿರದೇ
ತತ್ಕಾನನದೆಡೆಗೆ ಬಂದು ಬೀಡಿಗೆ ಬಂದ।
ತ್ಯುತ್ಕಟಮನಜುದಂತೆ ಭ
ವತ್ಕಮನೀಯಾಂಘ್ರಿನೀರಜಮನಾಂ ಕಂಡೆಂ ॥ ೧೨೮ ॥

ಇಂತೆಂದು ತಾನೆಟ್ಟಿಂದ ಪೂರ್ವವೃತ್ತಾಂತಮಂ ಪೇಳ್ದ ತತ್ಕೀರಸಂ ನೋಡಿ ದಂತದ್ಯುತಿ ವನಾಂತಕ್ಕೆ ಲತಾನ್ತಶೋಭೆಯಂ ಕುಡಲೊಲ್ದು ನೀ ಬಟಿಲ್ದೆ ಇನ್ನೋಗುಯೆಂದೆನ್ನ ಬಂದ ತಾತ್ಪರ್ಯಮಂ ವಿವರಿಸೆನೆ ನೃಪಾಲಂಗೆ ಗಿಳಿ ಮಗುಟ್ದು ಪೇಟ್ದುದು॥

ಅದೆಂತೆಂದೊಡೆ,

ಬಂದು ನಾನು ಅಂದು ಹೊಸ ಬಲೆಯೊಂದಿರುವುದನ್ನು ತಿಳಿಯದೆ ಒಂದು ಮರವನ್ನು ಸಮೀಪಿಸಿದೆನು. ೧೨೬. ದೇವೇಂದ್ರನ ವೈಭವವನ್ನು ಹೊಂದಿರುವವನೆ ಕೇಳು, ಬೇಡನೋರ್ವನು ಬಿಡದೆ ಎಲ್ಲಾ ಪಕ್ಷಿಗಳನ್ನು ಚೆನ್ನಾಗಿ ಹಿಡಿಯಲೆಂದು ಅತ್ಯಾಸಂದದಿಂದ ಬಂದು ಆ ಮರದ ಕೊಂಬೆಯಲ್ಲಿ ಬಲೆಯನ್ನು ಹೊಂದಿಸಿದನು. ನಾನು ಆ ಬಲೆಯಲ್ಲಿ ಇಲಿಗೆ ನಿರ್ಮಿಸಿದ ಬೋನಿನಲ್ಲಿ ಬೆಕ್ಕು ಸಿಕ್ಕಿಬಿದ್ದಂತೆ ಚೆನ್ನಾಗಿ ಸೆರೆಹೋದೆನು. ೧೨೭. ರಾಜಶ್ರೇಷ್ಠನೆ, ಚಿಂತಿಸುತ್ತಾ ನಾನು ಬಲೆಯಲ್ಲಿ ಸಿಕ್ಕಿ ಬಿದ್ದಿರಲು ಕಂಡ ಬೇಡನು ಉಬ್ಬಿ ಆ ಬಲೆಯನ್ನು ಹೊಂದಿ ತಡಮಾಡದೆ ಇಲ್ಲಿಗೆ ಬಂದನು. ನನ್ನ ಘನವಾದ ಪುಣ್ಯದ ಹಿರಿಮೆಯನ್ನು ಏನು ಹೇಳಲಿ! ೧೨೮. ಆ [ಘನಪುಣ್ಯದ] ಕಾರಣದಿಂದ ನಿಲ್ಲದೆ ನಾನೀಕಾಡಿಗೆ ಬಂದು ಅತಿ ಉಗ್ರವಾದ ಕಷ್ಟಕ್ಕೆ ಸಿಕ್ಕಿಹಾಕಿಕೊಂಡು ಅದರ ತಿಳುವಳಿಕೆಯಾಗುವ ಮುನ್ನವೆ ನಿಮ್ಮ ಮನೋಹರವಾದ ಪಾದಕಮಲಗಳನ್ನು ಕಂಡೆನು. ವ॥ ಹೀಗೆಂದು ತಾನು ಬಂದ ಹಿಂದಣ ವಿಷಯವನ್ನು ಹೇಳಿದ ಆ ಗಿಳಿಯನ್ನು ನೋಡಲು, ಹಲ್ಲಿನ ಕಾಂತಿಯು ಕಾಡಿನ ಆ ಭಾಗಕ್ಕೆ ಹೂವಿನ ಶೋಭೆಯನ್ನುಂಟುಮಾಡಿರಲು, ರಾಜನು ಪ್ರೀತಿಯಿಂದ, "ನೀನು ಆಯಾಸಗೊಂಡಿರುವೆ, ನೀನಿನ್ನು ಹೋಗುವೆಯಂತೆ, ಬಂದ ಕಾರ್ಯವನ್ನು ವಿವರಿಸು" ಎನ್ನಲು ಗಿಳಿಯು ಮತ್ತೆ ಮಹಾರಾಜನಿಗೆ ಹೀಗೆಂದಿತು. ಅದು ಹೇಗೆಂದರೆ,

ಬಿಡವಜಿಸುವ ಲತೆ ಕಾಲಂ
ತೊಡರ್ದಂತಾಯ್ತೆಲೆ ನೃಪಾಲ ನೀನೆಣೆಯೆಂತಾ।
ಮಡದಿಗೆ ನಿನಗವಳೆಣೆ ಯೊ
ಪ್ಪೊಡವಿಯೊಳನ್ಯೋನ್ಯಭಾವಮಾದುದು ತಥ್ಯಂ ॥ ೧೨೯ ॥

ಎಂದಿಂತು ಪೇಲ್ದಿ ಶುಕವಾ
ಗ್ವೃಂದಂ ಬೆರಸಂಗಜಾಸ್ತತತಿ ಮೆಲ್ಲೆರ್ದೆಯಂ।
ಸಂಧಿಸಿ ಥಟ್ಟುಗಿಯಲ್ ಧೃತಿ
ಗುಂದದೆ ತನ್ನೃಪತಿ ಗಿಳಿಗೆ ಮಗುಟ್ದಿಂತೆಂದಂ ॥ ೧೩೦ ॥

ಎಲೆ ರಾಜಶುಕನೆ ಯಾನೀ
ನೆಲನಱಿಯೆಂ ದೂರದೇಸಿಗಂ ಬಿಡು ತತ್ಕೋ।
ಮಲೆಯಾಲಾಪಮನೆನುತುಂ
ತಲೆವಾಗಿದನಿನಿತುವಾಣ್ಬೆರಸು ಭೂಪಾಲಂ ॥ ೧೩೧ ॥

ಈಪರಿಯಿಂ ನುಡಿಗೊಡುವಾ
ಭೂಪನ ನುಡಿಗೇಳ್ದು ನೀನವಳ್ಗಿನಿಯಂ ನಿ।
ನ್ನೋಪಳೆಡೆಗೇಳು ಜವದಿಂ
ಪೋಪೆವೆನುತ್ತರಸನಂ ಕರೆದುದಾಕೀರಂ ॥ ೧೩೨ ॥

ಕೀರನ ವಾಕ್ಯಗುಂಫನಮನಾಲಿಸಿ ಮೆಚ್ಚಿ ಯಮಾತ್ಯನಾಸ್ಯಪಂ
ಕೇರುಹಮಂ ನಿರೀಕ್ಷಿಸಲದಕ್ಕಿನಿತೇಕೆ ವಿಚಾರಮೆಂದು ತ।
ತ್ಸಾರಮನೀಸಿ ಬಿನ್ನವಿಸೆ ಲಾಲಿಸಿ ರಂಜಿಪಚೋಳದೇಶಕಾ
ಭೂರಮಣಂ ಶುಕಂಬೆರೆಸು ತಾಂ ತಳರ್ದಂ ನಿಜಮಂತ್ರಿಸಂಯುತಂ ॥ ೧೩೩ ॥

೧೨೯. ಎಲೆ ಮಹಾರಾಜಾ, ಕಷ್ಟಪಟ್ಟು ಹುಡುಕುತ್ತಿರುವ ಬಳ್ಳಿ ಕಾಲಿಗೆ ಸಿಕ್ಕಿಹಾಕಿಕೊಂಡಂತಾಯಿತು. ನೀನು ಈ ಲೋಕದಲ್ಲಿ ಆ ಕುಮಾರಿಗೆ ಹೇಗೆ ಸಮಾನನೋ ಹಾಗೆಯೇ ಅವಳೂ ನಿನಗೆ ಸಮಾನಳು. ಅನ್ಯೋನ್ಯ ಸಂಬಂಧವಾಯಿತು. ಇದು ನಿಜ. ೧೩೦. ಎಂದು ಹೇಳಿದ ಗಿಳಿಯ ಮಾತುಗಳೊಡನೆ ಮನ್ಮಥ ಬಾಣಗಳು ಮೃದುವಾದ ಹೃದಯವನ್ನು ತಾಗಿ ಚೆನ್ನಾಗಿ ನಾಟಲು ಧೈರ್ಯಗೆಡದೆ ಆ ಮಹಾರಾಜನು ಗಿಳಿಗೆ ಮತ್ತೆ ಹೀಗೆಂದನು. ೧೩೧. ಎಲೆ ಅರಗಿಳಿಯೆ, ನಾನು ಆ ಭೂಪ್ರದೇಶವನ್ನು ತಿಳಿದವನಲ್ಲ, ದೂರದ ಪ್ರಾಂತ್ಯದವನು. ಆ ಕೋಮಲೆಯ ಬಗೆಗಿನ ಮಾತೇಕೆ, ಬಿಡು ಎಂದು ಮಹಾರಾಜನು ಸ್ವಲ್ಪ ನಾಚಿಕೆಗೊಂಡು ತಲೆಬಾಗಿದನು. ೧೩೨. ಈ ರೀತಿ ಉತ್ತರಿಸಿದ ಮಹಾರಾಜನ ಮಾತು ಕೇಳಿ, ನೀನು ಅವಳಿಗೆ ಪ್ರಿಯನು. ಎನ್ನ ಪ್ರಿಯಳಿರುವ ಸ್ಥಳಕ್ಕೆ ನಡೆ ಬೇಗನೆ ಹೋಗೋಣ ಎಂದು ಆ ಗಿಳಿಯು ಅರಸನನ್ನು ಕರೆಯಿತು. ೧೩೩. ಗಿಳಿಯ ಮಾತಿನ ಗಾಂಭೀರ್ಯವನ್ನು ಕೇಳಿ ಮೆಚ್ಚಿ ಮಂತ್ರಿಯ ಮುಖಕಮಲವನ್ನು ನೋಡಲು, ಅದಕ್ಕೆ ಇಷ್ಟೇಕೆ ಯೋಚಿಸುವಿರಿ ಎಂದು ಸಮಗ್ರವಾಗಿ ವಿಚಾರಮಾಡಿ ಮಂತ್ರಿಯು ನುಡಿಯಲು, ಅದನ್ನು ಕೇಳಿ, ಚೆಲುವಾದ ಚೋಳ ದೇಶಕ್ಕೆ ಆ ಮಹಾರಾಜನು ಗಿಳಿಯೊಡನೆ

ಗಿಳಿಗೂಡಿ ಯಾಮಹೀಪತಿ
ತಿಲಕಂ ತದ್ಗಹನದೇಟ್ಗೆಯಂ ನಿಟ್ಟಿಸುತುಂ।
ವಿಳಸನ್ಮುದದಿಂ ಬರೆ ಕಂ
ಗೊಳಿಸಿದುದಂದೊಂದು ತೊಳಪಶೋಕಾರಾಮಂ ॥ ೧೩೪ ॥

ಕಂಡಸುಗೆಯ ಪೊಸಬನಮಂ
ಕಂಡೈ ಭೂಪಾಲ ನೋಡಿದೆಮ್ಮಯ ಪುರದು।
ಚ್ಚಂಡೋದ್ಯಾನಪ್ರಾಂತದ
ಚಂಡಿಕೆಯಾವಾಸಮೆಂದುದಂತಾಕೀರಂ ॥ ೧೩೫ ॥

ಎಂದಿಂತು ಪೇಟ್ದ ಗಿಳಿಯೊಳ್ನುಡಿಗಳಂ ಕೇಳ್ದಾನಂದಮಂ ತಾಳ್ದೀ ಕೀರಂ ಬೆರಸೊಯ್ಯನೆಟ್ತಿಂದು ತತ್ಕಂಕೇಳಿಯ ಬನಮಂ ಪೊಕ್ಕಲ್ಲಿ ಮನಂಗೊಳಿಪ ಚಂಡಿಕಾದೇವಿಗಭಿವಂದಿಸಿ ಸ್ತೋತ್ರಿಸಿ ಪೂಜೆಯಂ ಮಾಡಿ ಬಟಿಕ್ಕಾದೇವಿಯಂ ಬೀಟುಕ್ಕೊಂಡು ತದೀಯದೇವಾಲಯೋಪಕಂಠದೊಳ್ವಿಜೃಂಭಿಪಸುಗೆಯ ನೆಳಲೊಳ್ಕುಂಡಿಸಿ ಯುದ್ಭಟಕ್ಷಿತೀಂದ್ರಚಂದ್ರಮಂ ತಚ್ಛುಕೇಂದ್ರನ ಮೊಗಮಂ ನೋಡಿ,

ನೋಡುವ ತನ್ಮಹೀವರನ ಭಾವಮನಂದಱಿತಟ್ತಿವಟ್ಟು ಕೊಂ
ಡಾಡಿ ನೃಪಾಲ ನೀಂ ಚಲಿಸಲೊಂದುದಿನಂ ಸಚಿವೇಂದ್ರಚಂದ್ರಮಂ।
ಗೂಡಿರಲಿಲ್ಲಿ ಯಾಂ ನಗರಕೈದಿ ವಿವಾಹದಲಂಪಿನೇಟ್ಗೆಯಂ
ಮಾಡಿಪೆನೆಂದು ಪೇಟ್ದುಬ್ಬಿ ಪಾಱಿದುದಾಗಿಳಿ ಯುರ್ಬಿ ಮೋದದಿಂ ॥ ೧೩೬ ॥

ಮಂತ್ರಿ ಸಮೇತನಾಗಿ ನಡೆದನು. ೧೩೪. ಗಿಳಿಯೊಡನೆ ರಾಜರಲ್ಲಿ ತಿಲಕಪ್ರಾಯನಾದ ಮಹಾರಾಜನು ಆ ಕಾಡಿನ ವೈಶಾಲ್ಯವನ್ನು ನೋಡುತ್ತ ಅತ್ಯಾನಂದದಿಂದ ಕೂಡಿ ಬರುತ್ತಿರಲು ಅಶೋಕವನವೊಂದು ಕಣ್ಣಿಗೆ ಅಂದವಾಗಿ ಕಾಣಿಸಿತು. ೧೩೫. ಅಶೋಕದ ಹೊಸತೋಟವನ್ನು ನೋಡಿದ ಗಿಳಿಯು, "ಮಹಾರಾಜಾ, ನಮ್ಮ ಪುರದ ಶ್ರೇಷ್ಠ ಉದ್ಯಾನ ಪ್ರದೇಶವಾದ ದುರ್ಗೆಯ ನೆಲೆಮನೆಯನ್ನು ನೋಡಿದೆಯಾ" ಎಂದಿತು. ವ॥ ಹೀಗೆಂದು ಹೇಳಿದ ಗಿಳಿಯ ಸವಿಯಾದ ಮಾತುಗಳನ್ನು ಕೇಳಿ ಆನಂದ ಹೊಂದಿ ಆ ಗಿಳಿಯೊಡನೆ ಮೆಲ್ಲನೆ ಬಂದು ಆ ಅಶೋಕವನವನ್ನು ಪ್ರವೇಶಿಸಿ ಅಲ್ಲಿ ಮನಸೆಳೆಯುವಂತಿರುವ ಚಂಡಿಕಾದೇವಿಗೆ ನಮಸ್ಕರಿಸಿ ಸ್ತುತಿಸಿ ಪೂಜೆಯನ್ನು ಮಾಡಿ ಬಳಿಕ ಆ ದೇವಿಯನ್ನು ಬೀಳ್ಕೊಂಡು ಆ ದೇವಾಲಯದ ಸಮೀಪ ಶೋಭಿಸಿರುವ ಅಶೋಕವೃಕ್ಷದ ನೆಳಲಿನಲ್ಲಿ ಕುಳಿತು ಉದ್ಭಟ ಮಹಾರಾಜ ಚಂದ್ರಮನು ಆ ಗಿಳಿಯ ಮುಖವನ್ನು ನೋಡಲು, ೧೩೬. ಹಾಗೆ ನೋಡುವ ಆ ಮಹಾರಾಜನ ಅಂತರಂಗವನ್ನು ತಿಳಿದು ಪ್ರೀತಿಪಟ್ಟು ಕೊಂಡಾಡಿ, "ಮಹಾರಾಜಾ ನೀನು ಮುಂದೆ ಸಾಗದೆ ಇಲ್ಲಿಯೇ ಮಂತ್ರಿಶ್ರೇಷ್ಠನೊಡನೆ ಒಂದು ದಿನ ತಂಗಿರಲು ನಾನು ನಗರಕ್ಕೆ ಹೋಗಿ ವಿವಾಹದ ಸಂತೋಷದ ಹೆಚ್ಚಳವನ್ನುಂಟುಮಾಡುವೆನು" ಎಂದು ಹೇಳಿ ಉಬ್ಬಿ ಸಂತಸದಿಂದ ಆ ಗಿಳಿಯು

15

ಗಿಳಿಯಂ ಬೀಳ್ಕೊಟ್ಟವನಿಪ
ತಿಳಕಂ ಸೌಂದರ್ಯರೂಪುವಿಭ್ರಮಕರಮಿ।
ರ್ಕುಳಿಗೊಳೆ ಮನಮಂ ಸ್ಮರವಿ
ಪ್ಲವಳನಾಗಿ ಮನಂಗೊಳಿಸಿದನಾಬನದೆಡೆಯೊಳ್ ॥ ೧೩೭ ॥

ಆತರಳಾಂಬಕಾಮಣಿಯ ಭಾವಮೆ ಚಿತ್ತಮನಪ್ಪಲಪ್ಪಿ ದುಃ
ಖಾತುರದಿಂ ಮನೋಭವಶರಾವಳಿಗಂಗಮನಿತ್ತು ಪರ್ವಿದ।
ತ್ಯಾತತಕಾಮತಾಪಶಿಖಿಗಳ್ಕುತೆ ಬಳ್ಕುತೆ ತನ್ನ ಓೀಧವ
ವ್ರಾತಕಿರೀಟಕೋಟಿಮಣಿಜೃಂಭಿತಪಾದಪಯೋಜನೊಪ್ಪಿದಂ ॥ ೧೩೮ ॥

ನೋಟದಲಂಪಿನಿಂ ತಿಳಿದು ನೋಡೆ ಕರಂ ಸವಿಯಂ ತುಳುಂಕುವಾ
ಬೇಟದ ವಾರ್ತೆ ತಾನಧಿಕವೆಂಬುದು ಕಾಣಿಸಿತೆಂದು ನೋವ ತ।
ದ್ಘೋಟಕಪಾಲನುದ್ಭಟನ ಚಿತ್ತದೊಳೊಪ್ಪುವ ಬಾಲಶೀತರು
ಗ್ಜೂಟನೆ ರಕ್ಷಿಸೆನ್ನನೆಡೆಯಿಲ್ಲದ ಕೂರ್ಮೆಯಿನಲ್ಲಮಪ್ರಿಯಾ ॥ ೧೩೯ ॥

ಇದು ಸಮಸ್ತಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾತ
ಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾವನ
ಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣಮಾನಸಶ್ರೀಸೋಮರಾಜೇಂ
ದ್ರವಿರಚಿತಮಪ್ಪ ಶೃಂಗಾರಸಾರಮಹಾಪ್ರಬಂಧದೊಳ್
ಸೌಂದರವತೀಯೌವನವರ್ಣನಂ ಆರನೆಯ
ಆಶ್ವಾಸಂ ಮುಗಿದುದು.

ಹಾರಿಹೋಯಿತು. ೧೩೭. ಗಿಳಿಯನ್ನು ಬೀಳ್ಕೊಟ್ಟ ಮಹಾರಾಜ ತಿಲಕನ ಮನಸ್ಸನ್ನು ಸೌಂದರವತಿಯ ರೂಪು, ಲಾವಣ್ಯಗಳು ವಿಶೇಷವಾಗಿ ಘಾಸಿಗೊಳಿಸಲು ಮದನನ ಉಪಟಳದಿಂದ ದಿಗ್ಭ್ರಮೆಗೊಂಡ ಮಹಾರಾಜನು ಆ ವನಭಾಗದಲ್ಲಿ ಶೋಭಿಸಿದ್ದನು. ೧೩೮. ಆ ಚಂಚಲ ನೇತ್ರೆಯ ಭಾವವೆ ಮನಸ್ಸನ್ನು ಆವರಿಸಿ ದುಃಖ ತೀವ್ರತೆಯಲ್ಲಿ ಕಾಮನಬಾಣಗಳಿಗೆ ದೇಹವನ್ನು ಒಡ್ಡಿ, ಹಬ್ಬಿದ ಕಾಮತಾಪವೆಂಬ ಉರಿಗೆ ಹೆದರಿ ನಡುಗಿ, ಭೂಮಂಡಲದ ರಾಜರುಗಳ ಕಿರೀಟಗಳ ಕೋಟಿಸಂಖ್ಯೆಯ ಮಣಿಗಳ ಕಾಂತಿಯಿಂದ ಹೊಳೆಯುವ ಪಾದಕಮಲಗಳ ಉದ್ಭಟನು ಅಂದಗೊಂಡನು. ೧೩೯. ನೋಟದ ಸೊಗಸಿನಿಂದ ಎಚ್ಚೆತ್ತು ನೋಡಿ, ಸವಿಯನ್ನು ಚೆಲ್ಲುವ ಆ ಸಮಾಗಮದ ಸುದ್ದಿಯೇ ಹೆಚ್ಚೆಂದು ಕಾಣಿಸಿತೆ ಎಂದು ನೊಂದು ಕಕ್ಕಾಬಿಕ್ಕಿಯಾದ ಉದ್ಭಟನ ಮನದಲ್ಲಿ ಶೋಭಿಸಿರುವ ಎಳೆಯ ಶೀತಲ ಕಿರಣಗಳನ್ನು ಚೆಲ್ಲುವ ಗಂಗಾಧರನೆ, ಅಲ್ಲಮಪ್ರಿಯನೆ ನನ್ನನ್ನು ಸದಾ ಪ್ರೀತಿಯಿಂದ ಕಾಪಾಡು. ವ॥ ಇದು ಸಮಸ್ತ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ ಕಿರೀಟಗಳ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳಿಂದುಂಟಾದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪವಿತ್ರವಾದ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತುರನಾಗಿರುವ ಸೋಮರಾಜನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಸೌಂದರವತೀ ಯೌವನ ವರ್ಣನೆಯುಳ್ಳ ಆರನೇ ಆಶ್ವಾಸವು ಮುಗಿಯಿತು.

# ಏಳನೆಯ ಆಶ್ವಾಸಂ

ಶ್ರೀಸೌಂದರದೇವಿಸ್ಮರ
ಣಾಸಕ್ತಂ ಯಲ್ಲಕಾಗ್ನಿಯಿಂ ತಾಪಿಸುತುಂ।
ಭೂಸುದತೀವರನುದ್ಭಟ
ನಾಸಚಿವಂಗೂಡಿ ತದ್ವನದೊಳೆಸೆದಿರ್ದಂ ॥ ೧ ॥

ಚಪಲಚಕೋರಲೋಚನೆಯ ವಾರ್ತೆಗೆ ಚಿತ್ತಮನೊಲ್ದು ಮಾಡಿ ಮೇ
ಣುಪಮಿಸಲೈದದುಗ್ರವಿರಹಕ್ಕೆ ಬಱಲ್ದುಱು ಬಾಡುತಿರ್ಪ ತ।
ನ್ನೃಪವರನುದ್ಭಟಂಗೆ ಶಿವಭದ್ರಕನುಚ್ಚೈಶಿರೋಪಚಾರಮಂ
ವಿಪುಳವಿವೇಕದಿಂ ರಚಿಸುತೊಪ್ಪಿದನಾಬನದಂತರಾಳದೊಳ್ ॥ ೨ ॥

ಬಿಡದೆ ಶಿಶಿರೋಪಚಾರಮ
ನೊಡರ್ಚುತುಂ ತತ್ಕುಮಾರಿಕೆಯ ವಾರ್ತೆಯನು।
ಗ್ಗಡಣೆಸುತೆ ನೃಪನ ವಿರಹಮ
ನಡಗಿಸಿ ನರ್ಮಸಚಿವಸುತನಂದೆಸೆದಿರ್ದಂ ॥ ೩ ॥

ಆಕೆಯ ವಾರ್ತೆಯಂ ತೊಡಗಲುದ್ಭಟನತ್ಯಧಿಕಪ್ರಮೋದದಿಂ
ಪ್ರಾಕಟಮಾಗುವಂತಿರುತೆ ಬೋಧಿಸಿ ಸಂತಸಮಂ ನೆಗಱ್ಚುತಂ।
ದೇಕಮನಸ್ಕನಾದ ನಿಜಮಂತ್ರಿಯನೀಕ್ಷಿಸಿ ಮೇಣ್ಪಿಪಾಸೆಯು
ದ್ರೇಕಿಸೆ ವಾರಿಯಂ ತರೆ ನಿಯಾಮಿಸಿದಂ ಸಚಿವಂಗೆ ಭೂವರಂ ॥ ೪ ॥

೧. ಶ್ರೀ ಸೌಂದರದೇವಿಯ ನೆನಪಿನಲ್ಲಿ ಆಸಕ್ತನಾಗಿ ಮನ್ಮಥತಾಪದಿಂದ ಬೇಯುತ್ತ ಭೂದೇವಿಯ ಒಡೆಯನಾದ ಉದ್ಭಟನು ಆ ಮಂತ್ರಿಯೊಡಗೂಡಿ ಆ ವನದಲ್ಲಿ ಶೋಭಿಸಿದ್ದನು. ೨. ಚಂಚಲವಾದ ಜೊನ್ನವಕ್ಕಿಯ ಕಣ್ಣುಗಳನ್ನು ಹೊಂದಿರುವವಳ ಸುದ್ದಿಗೆ ಚಿತ್ತಗೊಟ್ಟು ಹೋಲಿಸಲಸಾಧ್ಯವಾದ ಅತಿಶಯ ವಿರಹಕ್ಕೆ ಬಳಲಿ ಹೆಚ್ಚಾಗಿ ಬಾಡುತ್ತಿರುವ ಮಹಾರಾಜರಲ್ಲಿ ಶ್ರೇಷ್ಠನಾದ ಉದ್ಭಟನಿಗೆ ಶಿವಭದ್ರಕನು ಶೈತ್ಯೋಪಚಾರವನ್ನು ಆ ವನದ ಮಧ್ಯಭಾಗದಲ್ಲಿ ಹೆಚ್ಚಿನ ವಿವೇಕದಿಂದ ಮಾಡುತ್ತ ಶೋಭಿಸಿದನು. ೩. ಶೈತ್ಯೋಪಚಾರವನ್ನು ತಪ್ಪದೆ ಮಾಡುತ್ತ ಆ ಕುಮಾರಿಯ ಸುದ್ದಿಯನ್ನು ಅತಿಶಯವಾಗಿ ಹೇಳುತ್ತ ಮಹಾರಾಜನ ವಿರಹವನ್ನು ವಿನಯಶಾಲಿಯಾದ ಮಂತ್ರಿಯ ಮಗನು ನಿವಾರಿಸುತ್ತ ಶೋಭಿಸಿದ್ದನು. ೪. ಆಕೆಯ ಸುದ್ದಿಯನ್ನು ಹೇಳತೊಡಗಲು, ಉದ್ಭಟನು ಹೆಚ್ಚಿನ ಸಂತಸದಿಂದ ಅದು ಪ್ರಕಟವಾಗುವಂತೆ ಇರುತ್ತಿರಲು, ಹೇಳಿ ಸಂತೋಷವನ್ನುಂಟುಮಾಡುತ್ತ ಒಮ್ಮನದಿಂದ ಕೂಡಿದ ತನ್ನ ಮಂತ್ರಿಯನ್ನು ನೋಡಿ ಬಾಯಾರಿಕೆ ಹೆಚ್ಚಾಗಲು ಮಹಾರಾಜನು ಮಂತ್ರಿಯನ್ನು

ಧರಣಿಪನಂ ಬೀೞ್ಕೊಂಡಾ
ತುರದಿಂ ತಣ್ಣೀರನಱಸುತುಂ ಶಿವಭದ್ರಂ।
ಬರಲೊಂದು ತಂಬೆರಲ್ಸಂ
ಚರಿಸಿದುದಾಪುರದ ಪೊಱಗೆ ಸುರಭಿಸಮೇತಂ ॥ ೫ ॥

ಕಮಲಕುವಲಯದ ತಣ್ಗಂ
ಪಮರ್ದಿರಲಿದಿರ್ವಪ್ಪ ತತ್ಪವನನಂ ಬೞಿಗೊಂ।
ಡಮಲಮನಂ ಶಿವಭದ್ರಂ
ಭ್ರಮರಂಬೊಲ್ತೆಳರ್ದನತ್ತನುದ್ಭಟನಿತ್ತಲ್ ॥ ೬ ॥

ಸಚಿವನುದಕಮಂ ತಾಂ ಕೊಂಡು ಬಾ ಯೆಂದು ಬೀೞ್ಕೊಂ
ಡಚಲಿತಹೃದಯಂ ತತ್ಕಾಮಿನೀರೂಪವಾರ್ತಾ।
ನಿಚಯಮನೆರ್ದೆಗೊಂಡುನ್ಮೂರ್ಛೆಯಿಂ ನೆಮ್ಮಿದಂ ತಾಂ
ಪ್ರಚುರಕಿಸಲಯಾಶೋಕದ್ರುಮಂ ಕ್ಷೋಣಿಪಾಲಂ ॥ ೭ ॥

ಮುಚ್ಚಿ ಕಣ್ಗಳಂ ಮಹೀಜಮಂ ಸಮಂತು ನೆಮ್ಮಿ ಮೈ
ವೆಚ್ಚನಾಗಲಾಕುಮಾರಿಕಾಸ್ವರೂಪಶೋಚಿ ತಾ।
ನಚ್ಚನೊತ್ತಿದಂತೆ ಚಿತ್ತದಲ್ಲಿ ಪತ್ತಿರಲ್ಕರಂ
ಮುಚ್ಚೆ ಯೋಗಿ ಮೇಣೊಱಂಗಿ ತನ್ನೃಪಾಲನೊಪ್ಪಿದಂ ॥ ೮ ॥

ನೀಡಿದೆಡಗಾಲ ಮೇಲಿರೆ
ನೀಡುಂ ಬಲಗಾಲ್ವಿಮುದ್ರಿತಾಂಬಕಮೆರ್ದೆಯೊಳ್।
ನೀಡುಂ ಕೂಡಿರೆ ಕೈಗ
ಳ್ನಾಡೆಱೆಯಂ ಮುಚ್ಚೆಯಾಗಿ ಮರನೊಱಗಿರ್ದಂ ॥ ೯ ॥

ನೀರನ್ನು ತರಲು ನಿಯಮಿಸಿದನು. ೫. ಮಹಾರಾಜನನ್ನು ಬೀಳ್ಕೊಂಡು ಆತುರದಿಂದ ತಣ್ಣೀರನ್ನು ಹುಡುಕುತ್ತ ಶಿವಭದ್ರನು ಬರಲು ಪರಿಮಳಯುಕ್ತವಾದ ತಣ್ಣನೆಯ ಗಾಳಿಯು ಆ ಪುರದ ಹೊರಭಾಗದಲ್ಲಿ ತೀಡಿತು. ೬. ತಾವರೆ, ಕನ್ನೈದಿಲೆಗಳ ತಣ್ಣನೆಯ ಕಂಪು ಕೂಡಿ ಇದಿರಿಗೆ ಸುಳಿದುಬರುವ ಆ ಗಾಳಿಯನ್ನು ಹಿಂಬಾಲಿಸಿ ಪರಿಶುದ್ಧ ಮನಸ್ಸಿನ ಶಿವಭದ್ರನು ದುಂಬಿಯಂತೆ ನಡೆಯಲು ಇತ್ತಕಡೆ ಉದ್ಭಟನು, ೭. ಮಂತ್ರಿಯನ್ನು ನೀರು ತೆಗೆದುಕೊಂಡು ಬಾ ಎಂದು ಬೀಳ್ಕೊಂಡು ಅಚಲಿತ ಹೃದಯವಾದ ಮಹಾರಾಜನು ಸೌಂದರವತಿಯ ಸುದ್ದಿಯನ್ನು ಮನದಲ್ಲಿ ನೆನೆದುಕೊಂಡು ಮೂರ್ಛೆ ಹೋಗಿ ಅಶೋಕವೃಕ್ಷದ ಅಧಿಕವಾದ ಚಿಗುರಿನ ಮೇಲೆ ಒರಗಿದನು. ೮. ಕಣ್ಣುಗಳನ್ನು ಮುಚ್ಚಿ ಅಶೋಕ ವೃಕ್ಷವನ್ನು ಚೆನ್ನಾಗಿ ಒರಗಿ ಮೈಬೆಚ್ಚಗಾಗುವಂತೆ ಆ ಕುಮಾರಿಯ ಆಕಾರವು ಮನದಲ್ಲಿ ಅಚ್ಚೊತ್ತಿದಂತೆ ಇರುತ್ತಿರಲು ಮಹಾರಾಜನು ಮೂರ್ಛೆಹೋಗಿ ಒರಗಿ ಶೋಭಿಸಿದ್ದನು. ೯. ಚಾಚಿದ ಎಡಗಾಲ ಮೇಲೆ ವಿಸ್ತರಿಸಿದ ಬಲಗಾಲಿರಲು, ಮುಚ್ಚಿದ ಕಣ್ಣುಗಳಿರಲು ಎದೆಯ ಮೇಲೆ ಚಾಚಿದ ಕೈಗಳಿರಲು ಮಹಾರಾಜನು ಮೂರ್ಛೆ ಹೋಗಿ ಮರವನ್ನು ಒರಗಿದ್ದನು.

ಇಂತು ಮತ್ತಮಾಸೌಂದರವತಿಯ ರೂಪಾತಿಶಯಮಂ ನೆನೆನೆನೆದು ಕಂದಿ ಕುಂದಿ ಕಳೆಯಱದ ಸುದತಿಯನೆರ್ದೆಯೊಳಳವಡಿಸಿ ತದ್ವಿರಹೋದ್ರೇಕದಿಂದಂ ರಣರಣಕಮಂ ತಾಳ್ದಿರದೆ ಮೈಮಱದೊಱಂಗಿ ಮಿಸು ಪಸುಗೆಯ ತಣ್ಣೆಳಲೊಳ್ಪಸರಿಸಿದ ಪೊಸಪಸಲೆಯ ಪಸಿರ್ವಸೆಯ ಮೇಲುದ್ಭಟಕ್ಷಿತೀಂದ್ರ ಚಂದ್ರಮನಿರೆಯಿರೆ,

ಧರಣಿಪನಿಂತು ಕಂತುಶರಯೋಗದಿನಿರ್ಪಿನಮೊಲ್ದು ಸೌಂ
ದರಿ ಶಶಿಲೇಖೆ ಮುಖ್ಯಮೆನಿಪಾಳಿಯರೊಗ್ಗಿನೊಳಂದು ಬಂದಳ।
ತ್ಯುರುತರಭಕ್ತಿಯಿಂದೆ ವರಚಂಡಿಯನಾನತಲೋಕವಾಂಛಿತೋ
ತ್ಕರದೆಯನಿಂದ್ರಪೂಜಿತೆಯನರ್ಚಿಸಲೆಂದು ಮನೋನುರಾಗದಿಂ ॥ ೧೦ ॥

ಬಂದಸುಗೆಯ ಬನಮಂ ಪೊ
ಕ್ಕಂದಾಚಂಡಿಕೆಯನೊಲ್ದು ಪೂಜಿಸಿ ಮಿಗೆ ತ।
ತ್ಸೌಂದರವತಿ ಗುಡಿಯಂ ಬಲ
ವಂದಳ್ಶಶಿಲೇಖೆವೆರಸು ಸನ್ಮುದದಿಂದಂ ॥ ೧೧ ॥

ಅತಿಮುದದಿಂದಂ ಸೌಂದರ
ವತಿ ಬರಲೊಂದಸುಗೆಯಮರ್ದ ತಣ್ಣೆಳಲೊಳ್ಬಿ।
ಪತಿಯುದ್ಭಟನಿರೆ ಕಂಡಾ
ಸಿತಪಂಕಜಪತ್ರನೇತ್ರೆ ನಿಬ್ಬೆಱಗಾದಳ್ ॥ ೧೨ ॥

ತ್ರಿಜಗಮನಾಳ್ಗೊಂಡೆಸೆವಂ
ಗಜನಿಂಗೋಲ್ವಿಲ್ಲನುಱದಶೋಕೆಯ ನೆಳಲೊಳ್।
ನಿಜಯೋಗದೊಳಿರ್ದನ್ನಂ
ಭಜಿಸುವನೋ ಯೆಂದು ನೋಡಿ ಸತಿ ಬೆಱಗಾದಳ್ ॥ ೧೩ ॥

ವ॥ ಹೀಗೆ ಆ ಸೌಂದರವತಿಯ ರೂಪವಿಶೇಷವನ್ನು ನೆನೆನೆನೆದು ಕಂದಿ ಕುಂದಿ ಕಾಂತಿಗುಂದಿ ಆ ಸುಂದರಿಯನ್ನು ಮನದಲ್ಲಿ ತುಂಬಿಕೊಂಡು ವಿರಹೋದ್ರೇಕದಿಂದ ಉತ್ಕಂಠಿತನಾಗಿ ಸಹಿಸಲಾರದೆ ಮೈಮರೆತು ಹೊಳೆವ ಅಶೋಕದ ತಣ್ಣನೆಯ ನೆಳಲಿನಲ್ಲಿ ಹರಡಿದ ಎಳೆಯ ಹುಲ್ಲಿನ ಮೇಲೆ ಉದ್ಭಟಮಹಾರಾಜ ಚಂದ್ರಮನಿರುತ್ತಿರಲು, ೧೦. ಮಹಾರಾಜನು ಹೀಗೆ ಮನ್ಮಥಬಾಣದಿಂದ ಘಾಸಿಗೊಂಡಿರುತ್ತಿರಲು, ಸೌಂದರಿಯು ಶಶಿಲೇಖೆ ಮೊದಲಾದ ಸೇವಕಿಯರ ಸಮೂಹದೊಂದಿಗೆ ಹೆಚ್ಚಿನ ಭಕ್ತಿಯಿಂದ ಲೋಕವನ್ನು ಕಾಪಾಡುವ, ಭಕ್ತರ ಕೋರಿಕೆಯನ್ನು ಈಡೇರಿಸುವ ಇಂದ್ರನಿಂದ ಪೂಜಿತಳಾದ ಮಹಾಚಂಡಿಯನ್ನು ಪೂಜಿಸಲೆಂದು ಮನದಲ್ಲಾದ ಸಂತಸದಿಂದ ಬಂದಳು. ೧೧. ಬಂದು ಅಶೋಕವನವನ್ನು ಪ್ರವೇಶಿಸಿದ ಸೌಂದರವತಿಯು ಚಂಡಿಕಾಮಾತೆಯನ್ನು ಚೆನ್ನಾಗಿ ಪೂಜಿಸಿ ದೇವಾಲಯವನ್ನು ಶಶಿಲೇಖೆಯೊಡನೆ ಸಂತೋಷದಿಂದ ಪ್ರದಕ್ಷಿಣೆ ಮಾಡಿದಳು. ೧೨. ಸೌಂದರವತಿಯು ಅತ್ಯಾನಂದದಿಂದ ಬರುತ್ತಿರಲು ಅಶೋಕವೃಕ್ಷದ ಕೆಳಗಿನ ತಣ್ಣನೆಯ ನೆರಳಿನಲ್ಲಿ ಉದ್ಭಟಮಹಾರಾಜನಿರಲು ಅವನನ್ನು ಆ ಕಮಲಾಕ್ಷಿಯು ನೋಡಿ ಅತ್ಯಾಶ್ಚರ್ಯ ಹೊಂದಿದಳು. ೧೩. ಮೂರು ಲೋಕದವರನ್ನೂ ತನ್ನ ಸೇವಕರನ್ನಾಗಿಸಿ ರಂಜಿಸಿರುವ ಕಬ್ಬಿನ ಬಿಲ್ಲನ್ನು ಹಿಡಿದ ಮನ್ಮಥನು ಅಶೋಕವೃಕ್ಷದ ನೆಳಲಿನಲ್ಲಿ ಯೋಗದಲ್ಲಿ ನಿಂತು

ಇವನೇಂ ನವಚೈತ್ರನೊ ತಾ
ನಿವನೇ ಕುಂದಿಲ್ಲದಮಲಚಂದ್ರಮನೋ ಮೇ।
ಣಿವನೇನಂಗಂಬಡೆದೊ
ಪ್ಪುವ ಕಾಮನೊ ಯೆಂದು ಸತಿಯಳುಪಿ ನಿಟ್ಟಿಸಿದಳ್ ॥ ೧೪ ॥

ಪುಟ್ಟಿಮುದಲ್ಪಲಜ್ಜೆ ತನಗಾತನೆ ವಲ್ಲಭನೆಂಬ ಭಾವದೊ
ಳ್ನೆಟ್ಟುದು ಚಿತ್ತವಂಗಜಶರಕ್ಕೆ ನಿಷಂಗಮದಾದುದಂಗಮಂ।
ದಿಟ್ಟಣೆಸಿತ್ತು ಕೂರ್ಪ ವಿರಹಾನಲಮಾದುದು ಸಾತ್ವಿಕೋದಯಂ
ನಿಟ್ಟಿಸೆ ತತ್ಕುಮಾರಿ ವರರೂಪಮನುದ್ಭಟಭೂಮಿಪಾಲನಾ ॥ ೧೫ ॥

ತಿಂಗಳ ಸಿರಿಯಂ ಕೊಂಡೊಸ
ರ್ವಿಂಗದಿರ್ವಣೆಯಂತೆ ಬೆಮರುತುಂ ಮನವಿಟ್ಟಾ।
ತುಂಗಸ್ತನಿ ಯಿರಲಂತವ
ಳಿಂಗಿತಮಂ ತಿಳಿದರಾಗಳಾಸತಿಯರ್ಕಳ್ ॥ ೧೬ ॥

ಇಂತವಳೀ ಮನಂಗೊಳಿಪಸುಗೆಯಂ ನೆಮ್ಮಿ ನಿದ್ರಾಮುದ್ರಿತಲೋಚನಾರವಿಂದ ವಿಭಾಸಿತನೃಪನಂದನಂಗೆ ಮನವೆಳಸಿದಳೆಂದಱಿದುಱಿದಸಖಿಯರ್ ಶಶಿಲೇಖೆಯ ಮುಖಮಂ ನೋಡೆ,

ಶಶಿಲೇಖೆ ತತ್ಕುಮಾರಿಕೆ
ಯೆಸೆದೀಕ್ಷಿಪ ಭಾವಮಂ ಸಮಂತಱಿದಿಂತೆಂ।
ದುಸುರ್ದಳ್ಸೌಂದರದೇವಿಯ
ಮಿಸುಪಾನನಚಂದ್ರನಂ ನಿರೀಕ್ಷಿಸಿ ನಗುತುಂ ॥ ೧೭ ॥

ನನ್ನನ್ನು ಭಜಿಸುತ್ತಿರುವನೋ ಎಂದು ಅವನನ್ನು ನೋಡಿ ಆಚ್ಚರಿಗೊಂಡಳು. ೧೪. ಇವನೇನು ನವವಸಂತನೊ, ಕುಂದಿಲ್ಲದ ಪರಿಶುದ್ಧನಾದ ಚಂದ್ರಮನೊ, ಅಥವಾ ಇವನು ಸದೇಹನಾಗಿ ಶೋಭಿಸುವ ಮನ್ಮಥನೊ ಎಂದು ಆ ಸುಂದರಿಯು ಬಯಸಿ ನೋಡಿದಳು. ೧೫. ಉದ್ಭಟ ಮಹಾರಾಜನ ಸುಂದರ ರೂಪವನ್ನು ಆ ಕುಮಾರಿ ನೋಡಲು ಕಿರುಲಜ್ಜೆ ಹುಟ್ಟಿತು, ತನಗೆ ಆತನೇ ಪತಿಯೆಂಬ ಭಾವ ಗಾಢವಾಯಿತು. ಮನಸ್ಸು ಮನ್ಮಥ ಬಾಣಕ್ಕೆ ಒಳಪಟ್ಟಿತು. ದೇಹ ಸಂತಸದಿಂದ ಹಿಗ್ಗಿತು. ತೀಕ್ಷ್ಣವಾಗಿ ವಿರಹಜ್ವರವೇರಿತು, ಸಾತ್ವಿಕೋದಯವಾಯಿತು. ೧೬. ಚಂದ್ರನ ಕಾಂತಿಗೆ ಚಂದ್ರಕಾಂತಮಣಿಯು ಒಸರುವಂತೆ, ಉದ್ಭಟನನ್ನು ಕಂಡಾಕ್ಷಣ ಬೆವರುತ್ತ ಅವನಲ್ಲಿ ಮನಸ್ಸನ್ನಿಟ್ಟ ಪೆರ್ಮೊಲೆಯ ಸೌಂದರವತಿಯು ಇರುತ್ತಿರಲು ಅವಳ ಮನದಾಸೆಯನ್ನು ಅವಳ ಗೆಳತಿಯರು ಅರಿತರು. ವ॥ ಹೀಗೆ ಅವಳ ಮನಸೆಳೆದ ಅಶೋಕವೃಕ್ಷವನ್ನು ಒರಗಿ ನಿದ್ದೆಯಲ್ಲಿ ಕಣ್ ಕಮಲಗಳನ್ನು ಮುಚ್ಚಿ ಹೊಳೆಯುತ್ತಿರುವ ರಾಜಕುಮಾರನನ್ನು ಇಷ್ಟಪಟ್ಟಿರುವಳೆಂದು ತಿಳಿದ ಸಖಿಯರು ಶಶಿಲೇಖೆಯ ಮುಖವನ್ನು ನೋಡಲು, ೧೭. ಶಶಿಲೇಖೆಯು ಆ ಸೌಂದರವತಿಯ ಒಲಿದು ನೋಡುವ ಭಾವವನ್ನು ಚೆನ್ನಾಗಿ ಗ್ರಹಿಸಿ ಸೌಂದರದೇವಿಯ ಹೊಳೆವ ಮುಖಚಂದ್ರನನ್ನು ನೋಡಿ ನಗುತ್ತ ಹೀಗೆಂದಳು.

ಸೌಂದರವತಿ ಯಾವಿಲ್ಲಿಗೆ
ಬಂದುಱಿ ತಡವಾದುದೇೞು ಪೋಪೆವೆನಲ್ಕಾ।
ತ್ಸೌಂದರಿ ಬೇವಸದಿಂದಿಂ
ತೆಂದಳ್ ತಲೆವಾಗಿ ನಾಣ್ಚಿರಸು ನಿಜಸಖಿಯೊಳ್ ॥ ೧೮ ॥

ತರಳಾಂಬಕೆ ನೀನಿಲ್ಲಿ
ರ್ದೊರೆದೀಸುಕುಮಾರಚಂದ್ರನಾರೆಂದೀಗ।
ಳ್ಪರಿಕಿಸಿ ಬಾರ ಗಮಿಸುವೆಂ
ಪುರಕಾನೆಂದುಸುರ್ದು ಕೆಳದಿಯಂ ಬೀೞ್ಕೊಂಡಳ್ ॥ ೧೯ ॥

ಅಸುಗೆಯ ಪೊಸಬನದೊಳಗಾ
ಶಶಿಲೇಖೆಯನಿರಿಸಿ ಮಿಕ್ಕ ಸತಿಯರ್ವೆರಸಾ।
ಬಿಸರುಹಪತ್ರಾಂಬಕೆ ಚಿಂ
ತಿಸುತುಂ ನಿಜಪುರಕೆ ಬಂದು ಮನೆಯಂ ಪೊಕ್ಕಳ್ ॥ ೨೦ ॥

ಇಂತೆಯ್ತಂದು ಮನೆಯಂ ಪೊಕ್ಕತಿಮನಂಗೊಳಿಪ್ಪೊಂದು ರಮ್ಯಹರ್ಮ್ಯಾಗ್ರಜಾಲಮಾರ್ಗ ಪ್ರವಿಷ್ಟ ಮಂದಮಾರುತಪರಿಪೂರಿತಮಂಟಪಮಧ್ಯಸ್ಥಿತನವೀನಕೌಮುದೀಸಂಕಾಶಸ್ವಚ್ಛಧವಳಾಂಬರಾಚ್ಛಾದಿತಮರಾಳ ತೂಲತಲ್ಪಪರಿರಂಜಿತಮಂಜುಳಮಣಿಮಂಚದ ಮೇಲೊಯ್ಯನೆ ಮಂಡಿಸಿ ಗಂಡಮಂಡಲಸಂಚಿತ ವಾಮಪಾಣಿಯಂ ತಳೆದು ಚಿಂತೆಯಂ ತಳೆದು ಮೌನದಿಂ ತಲೆವಾಗಿ ಯಲರ್ಗಣೆಗಳಿಂದಟ್ಟು ಬಱಲ್ವ ತತ್ಸೌಂದರವತಿಯ ಭಾವಮಂ ಕಂಡುಱಿದ ಕೆಳದಿಯರ್ಕಳೆಯಱಿದು ಒಯ್ಯನೊಯ್ಯನೆ ಶಿಶಿರೋಪಚಾರಮಂ ಮಾಡುತ್ತಮಿರೆಯಿರೆ,

೧೮. ಸೌಂದರವತೀ, ನಾವಿಲ್ಲಿಗೆ ಬಂದು ಬಹಳ ಹೊತ್ತಾಯಿತು. ಏಳು ಹೋಗೋಣ ಎನ್ನಲು ಆ ಸುಂದರಿಯು ದುಮ್ಮಾನದಿಂದ ತಲೆಬಾಗಿ ನಾಚಿಕೆಯಿಂದ ಕೂಡಿ ತನ್ನ ಗೆಳತಿಯೊಡನೆ ಹೀಗೆಂದಳು. ೧೯. "ಚಂಚಲಾಕ್ಷೀ" ನೀನಿಲ್ಲಿದ್ದು ಸುಕುಮಾರ ಚಂದ್ರನೊಡನೆ ಮಾತನಾಡಿ ಆತ ಯಾರೆಂದು ತಿಳಿದು ಬಾ, ನಾನು ಪಟ್ಟಣಕ್ಕೆ ಹೋಗುವೆನು" ಎಂದು ಹೇಳಿ ಗೆಳತಿಯನ್ನು ಬೀಳ್ಕೊಂಡಳು. ೨೦. ನವ ಅಶೋಕವನದಲ್ಲಿ ಆ ಶಶಿಲೇಖೆಯನ್ನು ಬಿಟ್ಟು ಮಿಕ್ಕ ಸಖಿಯರ ಜೊತೆಯಲ್ಲಿ ಕಮಲಲೋಚನೆಯು ಚಿಂತಿಸುತ್ತ ತನ್ನ ಪಟ್ಟಣಕ್ಕೆ ಬಂದು ಮನೆಯನ್ನು ಹೊಕ್ಕಳು. ವ॥ ಹೀಗೆ ಬಂದು ಮನೆಯನ್ನು ಪ್ರವೇಶಿಸಿ ಚೆನ್ನಾಗಿ ಮನಸ್ಸನ್ನು ಸೂರೆಗೊಳ್ಳುವ ಮನೋಹರವಾದ ಭವನಗಳ ದಾರಿಯಲ್ಲಿ ಸುಳಿದು ಬಂದ ಮಂದಮಾರುತನಿರುವ ಒಂದು ಮಂಟಪದ ಮಧ್ಯದಲ್ಲಿನ ಹೊಸ ಬೆಳದಿಂಗಳು ತುಂಬಿದ ಪರಿಶುದ್ಧವಾದ ಆಗಸದಂತಿರುವ ಬಟ್ಟೆಯಿಂದ ಮುಚ್ಚಿದ ಹಂಸ ತುಪ್ಪಳದಿಂದ ಮಾಡಿದ ಹಾಸುಗೆಯಿಂದ ಚೆನ್ನಾಗಿ ಶೋಭಿಸಿರುವ ಸುಂದರವಾದ ಮಣಿಖಚಿತವಾದ ಮಂಚದ ಮೇಲೆ ಮೆಲ್ಲನೆ ಕುಳಿತು ಗಲ್ಲದಮೇಲೆ ಎಡಗೈಯನ್ನು ಸೇರಿಸಿ ಚಿಂತೆಯನ್ನು ಹೊಂದಿ ಮೌನದಿಂದ ತಲೆಬಾಗಿ ಹೂಬಾಣಗಳು ನಾಟಿ ಬಳಲುವ ಆ ಸೌಂದರವತಿಯ ಭಾವವನ್ನು ನೋಡಿ ಮಿಕ್ಕ ಗೆಳತಿಯರು ಕಾಂತಿಗುಂದಿ ಮೆಲ್ಲಮೆಲ್ಲನೆ ಶೈತ್ಯೋಪಚಾರವನ್ನು

ಇತ್ತಲ್ಸಖಿಯರ್ಕುವರಿಗೆ
ಮತ್ತಂ ಶಿಶಿರೋಪಚಾರಮಂ ನಲವಿಂದಂ।
ಬಿತ್ತರಿಸುತ್ತುಂ ತಾವಿರ
ಲತ್ತಲ್ಶಶಿಲೇಖೆ ಯಿರ್ದಳಸುಗೆಯ ಬನದೊಳ್ ॥ ೨೧ ॥

ಕುಸುಮನಿಕಾಯಮಂ ತಿರಿವಕೈತವದಿಂದೆ ತದುರ್ವಿಪಾಲನಿ
ರ್ಪಸುಗೆಯ ಭೂಮಿಜಾತಮನೆ ಮೆಲ್ಲನೆ ಸಾರ್ದವಲೋಕಿಸುತ್ತೆ ತ।
ದ್ಬಿಸರುಹಪತ್ರನೇತ್ರೆ ಯಿರಲಂಬುವನಟ್ಟಿಜಿನಂದು ಕೊಂಡು ಬಂ
ದು ಸಚಿವನೊಲ್ದು ಪೊರ್ದಿ ನೃಪನಂ ನಡೆನೋಡುತೆ ಕಂಡನಾಕೆಯಂ ॥ ೨೨ ॥

ಇಂತು ಮದನತಾಪದಿಂ ಪರಿಮ್ಲಾನನಾಗಿ ಮರಕೊಱಗಿರ್ದ ನೃಪನ ಸಮೀಪದೊಳಿರ್ದ ಶಶಿಲೇಖೆಯಂ ಶಿವಭದ್ರಂ ಕಂಡಾಕಾಮಿನಿಗಿಂತೆಂದಂ॥

ನೀಲಸರೋರುಹಾಕ್ಷಿ ಬರವಿಲ್ಲಿಗೆ ಕಾರಣಮಾವುದೆಂದೆನಲ್
ಬಾಲಸುಧಾಂಶುಶೇಖರನ ವಲ್ಲಭೆಯಂ ವರಚಂಡಿಕಾಂಬೆಯಂ।
ಲೀಲೆಯಿನರ್ಚಿಸಲ್ಕೆ ನಡೆತಂದು ಮಗುಟ್ದಿದೆ ಪೋಪೆವೀಮಹೀ
ಪಾಲಕನಾವನೆಂದೆನೆ ತದಂಗನೆಗೆಂದನಮಾತ್ಯಶೇಖರಂ ॥ ೨೩ ॥

ಕೇಳೆಲೆ ಕಾಂತೆ ಈ ಮಹಿಪನುದ್ಭಟನೆಂಬುರುನಾಮಮುಳ್ಳ ಭೂ
ಪಾಲಕಪುಂಗವಂ ಕುಮುದಬಾಂಧವವಂಶಸುಧಾಬ್ಧಿಚಂದ್ರಮಂ।
ಭಾಳವಿಲೋಚನಾಂಘ್ರಿ ಕಮಲಭ್ರಮರಂ ದಲೆನುತ್ತೆ ಪೇಱಲಾ
ಬಾಲಿಕೆ ಮತ್ತೆ ಪೇಟ್ದಳೊಲವಿಂದಮಮಾತ್ಯಕುಲಾಗ್ರಗಣ್ಯನಂ ॥ ೨೪ ॥

ಮಾಡುತ್ತಲಿರಲು, ೨೧. ಇತ್ತ ಸಖಿಯರು ಕುಮಾರಿಗೆ ಮತ್ತೆ ಶೈತ್ಯೋಪಚಾರವನ್ನು ಪ್ರೀತಿಯಿಂದ ಮಾಡುತ್ತಲಿರಲು ಅತ್ತ ಶಶಿಲೇಖೆಯು ಅಶೋಕವನದಲ್ಲಿದ್ದಳು. ೨೨. ಹೂವುಗಳನ್ನು ಕೀಳುವ ನೆವದಿಂದ ಆ ಮಹಾರಾಜನಿರುವ ಅಶೋಕವೃಕ್ಷದ ಸಮೀಪಕ್ಕೆ ಮೆಲ್ಲನೆ ಬಂದು ಆ ಕಮಲನೇತ್ರೆಯು ನೋಡುತ್ತಲಿರಲು, ನೀರನ್ನು ಪ್ರೀತಿಯಿಂದ ತಂದ ಮಂತ್ರಿಯು ಮೆಚ್ಚಿ ಮಹಾರಾಜನ ಹತ್ತಿರ ಬಂದು ಚೆನ್ನಾಗಿ ನೋಡುತ್ತ ಅವಳನ್ನು ಕಂಡನು. ವ॥ ಹೀಗೆ ಮನ್ಮಥತಾಪದಿಂದ ತೇಜೋಹೀನನಾಗಿ ಮರಕ್ಕೆ ಒರಗಿದ್ದ ಮಹಾರಾಜನ ಸಮೀಪದಲ್ಲಿದ್ದ ಶಶಿಲೇಖೆಯನ್ನು ಶಿವಭದ್ರನು ಕಂಡು ಆ ಕಾಮಿನಿಗೆ ಹೀಗೆಂದನು. ೨೩. ನೀಲಕಮಲಾಕ್ಷಿ, ನೀನಿಲ್ಲಿಗೆ ಬಂದ ಕಾರಣವಾವುದು? ಎನ್ನಲು "ಬಾಲಚಂದ್ರನನ್ನು ಶಿರದಲ್ಲಿ ಧರಿಸಿದ ಶಿವನ ಪತ್ನಿಯಾದ ಮಹಾಚಂಡಿಕಾಂಬೆಯನ್ನು ವಿಲಾಸದಿಂದ ಪೂಜಿಸಲೆಂದು ಬಂದು ಪೂಜಿಸಿ ಮತ್ತೆ ಹಿಂತಿರುಗುತ್ತಿರುವೆವು. ಈ ಮಹಾರಾಜನಾರು ಎಂದು ಆಕೆ ಕೇಳಲು ಅದಕ್ಕೆ ಮಂತ್ರಿಮುಖ್ಯನು ಹೀಗೆಂದನು. ೨೪. "ಎಲೆ ಸ್ತ್ರೀಯೆ ಕೇಳು, ಈ ಮಹಾರಾಜನು ಉದ್ಭಟನೆಂಬ ಹೆಸರಿನ ರಾಜಶ್ರೇಷ್ಠನು, ಚಂದ್ರವಂಶದವನು. ಫಾಲಾಕ್ಷನ ಪಾದಕಮಲಗಳಲ್ಲಿ ನಿಶ್ಚಯವಾಗಿಯೂ ದುಂಬಿಯಾಗಿರುವವನು" ಎಂದು ಹೇಳಲು ಆ ಬಾಲಿಕೆ ಮತ್ತೆ ಪ್ರೀತಿಯಿಂದ ಮಂತ್ರಿಕುಲದಲ್ಲಿ ಶ್ರೇಷ್ಠನಾದ ಶಿವಭದ್ರನೊಡನೆ ಹೀಗೆ ಹೇಳಿದಳು.

ಈತಂ ನಿನಗೇನಪ್ಪನ
ದೇತಕ್ಕೀಬನಕೆ ಬಂದಿರೀರ್ವರೆನಲ್ಕಾ।
ಶಾತೋದರಿಗಧಿಕತರ
ಪ್ರೀತಿಯಿನಿಂತೆಂದನಂದಮಾತ್ಯವರೇಣ್ಯಂ ॥ ೨೫ ॥

ಆನೀತನಾಳೆನಗೆ ಪತಿ
ಯೀನರಪತಿ ಯೊಂದು ಕಜ್ಜದಿಂ ಬಂದೆನೆನ।
ಲ್ತಾನಾಲಿಸಿ ಪೋದಪೆನೆಂ
ದಾನೀರಜನೇತ್ರೆ ಸಚಿವನಂ ಬೀಟುಕ್ಕೊಂಡಳ್ ॥ ೨೬ ॥

ಮೃದುಲವಚಶ್ಶೋಭಿತೆ ತ
ಳ್ವದೆ ತಚ್ಛಿವಭದ್ರನಿಂತು ನುಡಿಯೆರ್ದೆಗೊಳಲಾ।
ಪುದಿದಸುಗೆಯ ಪೊಸಬನಮಂ
ಮುದದಿಂ ಪೊಱಮಟ್ಟು ಪೋದಳನ್ನೆಗಮಿತ್ತಲ್ ॥ ೨೭ ॥

ಸತಿಯಂ ಬೀಟುಕ್ಕೊಟ್ಟು ಶೀತೋದಕಭರಿತಘಟೀಭೂತಪಂಕೇಜಪತ್ರಾಂ
ಕಿತಹಸ್ತಾಂಭೋರುಹಂ ಮಂತ್ರಿತಿಲಕನಿರಲುಚ್ಚಾಟಿತೋತ್ತುಂಗನಿದ್ರೋ॥
ನ್ನತಿಮೇಣಾವೇಳೆಯೊಳ್ ಮೈದೆಗೆವಿನಮಿರದೆಚ್ಚಿತ್ತು ಕುಳ್ಳಿರ್ದು ತದ್ಭೂ
ಪತಿ ಕಂಡಂ ಮಂತ್ರಿಯಂ ದರ್ಪಕವಿಷನಿಕಷಾಂಗೀಕೃತಾತ್ಮಪ್ರತೀಕಂ ॥ ೨೮ ॥

ಕಂಡು ತತ್ಸಚಿವೇಂದ್ರನಾಸ್ಯಮನೊಲ್ದು ನೋಡಿ ಸಮುಲ್ಲಸ
ತ್ಪುಂಡರೀಕದ ಪತ್ರದೊಳ್ದೊಳಪಂಬುವಂ ಕುಡಲೀಂಟಿಯು।
ಚ್ಚಂಡಮಾದ ಬಟಲ್ಕೆಯಂ ಕಳದೈದೆ ನಾಂಟುವ ಪುಷ್ಪಕೋ
ದಂಡನಸ್ತ್ರಸಮಾಜಕಳ್ಕುತುಮಿರ್ದನಾಧರಣೀಧವಂ ॥ ೨೯ ॥

೨೫. "ಈತ ನಿನಗೇನಾಗಿರುವನು? ಈ ವನಕ್ಕೆ ಇಬ್ಬರೇ ಏಕೆ ಬಂದಿರಿ?" ಎನ್ನಲು ಕೃಶವಾದ ಹೊಟ್ಟೆಯುಳ್ಳ ಆಕೆಗೆ ಅತ್ಯಂತ ಪ್ರೀತಿಯಿಂದ ಅಮಾತ್ಯ ಶ್ರೇಷ್ಠನು ಹೀಗೆಂದನು. ೨೬."ನಾನು ಈತನ ಸೇವಕ, ನನಗೆ ಈ ಮಹಾರಾಜನು ಒಡೆಯನು, ಕಾರ್ಯಾಂತರದಿಂದ ಇಲ್ಲಿಗೆ ಬಂದಿರುವೆವು" ಎನ್ನಲು ಅದನ್ನು ಕೇಳಿ ನಂತರ ಆ ಕಮಲನೇತ್ರೆಯು ಮಂತ್ರಿಯನ್ನು ಬೀಳ್ಕೊಂಡಳು. ೨೭. ಮೃದುವಾದ ಮಾತುಗಳಿಂದ ಶೋಭಿಸುವ ಶಿವಭದ್ರನು ಹೀಗೆ ಹೇಳಲು, ಅದು ಮನಸ್ಸಿಗೆ ಮುಟ್ಟಲು ಅಶೋಕವೃಕ್ಷಗಳಿಂದ ತುಂಬಿದ ಆ ವನದಿಂದ ಉತ್ಸಾಹದಿಂದ ಆಕೆಯು [ತಡಮಾಡದೆ] ಹೊರಬಂದಳು. ಅಷ್ಟರಲ್ಲಿ ಇತ್ತಕಡೆ, ೨೮. ಆ ಸ್ತ್ರೀಯನ್ನು ಬೀಳ್ಕೊಂಡು ತಣ್ಣನೆಯ ನೀರು ತುಂಬಿದ ಸಣ್ಣಗಡಿಗೆಯೋಪಾದಿಯಲ್ಲಿ ಕೈಯಲ್ಲಿನ ಕಮಲಪತ್ರದಲ್ಲಿ ನೀರನ್ನು ತುಂಬಿಕೊಂಡು ಮಂತ್ರಿ ಶ್ರೇಷ್ಠನಿರಲು ಅತಿಯಾದ ನಿದ್ದೆಯಿಂದ ಬಿಡುಗಡೆ ಹೊಂದಿ ಅದು ಹಿಂದೆ ಸರಿಯುವಂತೆ ಎಚ್ಚತ್ತು ಕುಳಿತು ಮನ್ಮಥನೆಂಬ ವಿಷವನ್ನು ಪರೀಕ್ಷಿಸಿ ಪರಿಹರಿಸುವ ಮನುಷ್ಯ ರೂಪನಾದ ಮಂತ್ರಿಯನ್ನು ಮಹಾರಾಜನು ನೋಡಿದನು. ೨೯. ಆ ಮಂತ್ರಿ ಶ್ರೇಷ್ಠನ ಮುಖವನ್ನು ಪ್ರೀತಿಯಿಂದ ನೋಡಿ ಅರಳಿದ ತಾವರೆಯ ಎಲೆಯಲ್ಲಿ ಜ್ವಲಿಸುವ ನೀರನ್ನು ಮಂತ್ರಿಯು ಕೊಡಲು ಅದನ್ನು ಕುಡಿದು ಅತಿಯಾದ

ಮಗುಟ್ದುಂ ಮಗುಟ್ದುಂ ನೆನೆಯುತೆ
ಮೃಗದೃಕ್ ಸೌಂದರ್ಯರೂಪವರ್ಣನೆಯಂ ತಾಂ।
ಬಗೆಗೊಂಡು ಕಾಮಶರಹತಿ
ಗಗಿಯುತ್ತುಂ ಮಂತ್ರಿಗೂಡಿ ಧರಣಿಪನಿರ್ದಂ ॥ ೩೦ ॥

ಇಂತು ಫುಲ್ಲಶರಭಲ್ಲಪಾತಭಗ್ನ ಹೃದಯನುದ್ಭಟ ಕ್ಷಿತೀಂದ್ರಚಂದ್ರಮನಿರಲಿತ್ತಲಾ ಕಂಕೇಳೀಬನಮಂ ಪೊಱಮಟ್ಟು ಭೋಂಕನೆಬ್ಬಿಂದರಮನೆಯಂ ಪೊಕ್ಕಾಳೀಜನಂ ಮಾಡ್ಟಿ ಶಿಶಿರೋಪಚಾರದ ತಣ್ಪಿಂಗೆ ಬಿಕ್ಕೇಱುವ ವಿರಹಾಗ್ನಿಯಿಂದಂ ಕಂದಿ ಕುಂದಿ ಕಳೆಯಱಿದು ಮನಂಗೊಳಿಪ ಮಣಿಖಚಿತಪರ್ಯಂಕಾಗ್ರ-ದೊಳ್ಕುಳ್ಳಿರ್ದಮರ್ದ ಜಾನುವಿನ ಮೇಲೆ ಗಂಡಮಂಡಲಮನಿಟ್ಟು ಚಿಂತೆಯಂ ತಳೆದು ತಲೆವಾಗಿ ತಾಪಂಗೊಳ್ವ ಸೌಂದರವತಿಯಂ ತಚ್ಛಶಿಲೇಖೆ ಕಂಡು,

ಏನೆಲೆ ಸೌಂದರವತಿ ದು
ಮ್ಮಾನವನುಱಿದಿತ್ತಲೀಕ್ಷಿಸೆಂದ್ಯೆಂದವಬಿಂ।
ಬಾನನೆ ಶಶಿಲೇಖೆಯೆನ
ಲ್ಕಾನೀಱು ಬೞಲ್ದು ನೋಡಲವಳಿಂತೆಂದಳ್ ॥ ೩೧ ॥

ಭಾವುಕೆ ನೀಂ ಪೇೞ್ದಿಂದದಿ
ನಾವನದೊಳಗಿರ್ಪಿನಂ ತದುರ್ವಿಪಸಚಿವಂ।
ಪಾವನಚರಿತಂ ಬರಲೆ
ಲ್ಲಾವಿವರಮನಱಿದೆನಾಲಿಸೊಲವಿಂದುಸುರ್ವೆಂ ॥ ೩೨ ॥

ಆಯಾಸವನ್ನು ಪರಿಹರಿಸಿ ಚೆನ್ನಾಗಿ ನಾಟುವ ಮನ್ಮಥನ ಬಾಣಗಳಿಗೆ ಹೆದರುತ್ತ ಆ ಮಹಾರಾಜನು ಇದ್ದನು. ವ॥ ಹೀಗೆ ಮನ್ಮಥಬಾಣವು ನಾಟಿ ಭಗ್ನ ಹೃದಯನಾದ ಉದ್ಭಟಮಹಾರಾಜ ಚಂದ್ರಮನಿರಲು, ಇತ್ತ ಅಶೋಕವನದಿಂದ ಹೊರಬಂದು ಬೇಗಬೇಗನೆ ನಡೆದುಬಂದು ಅರಮನೆಯನ್ನು ಹೊಕ್ಕು ಸಖೀಜನರು ಮಾಡುವ ಶೈತ್ಯೋಪಚಾರದ ಶೀತಲತೆಗೆ ಮತ್ತಷ್ಟು ಉಗ್ರವಾದ ವಿರಹಾಗ್ನಿಗೆ ಕಂದಿ ಕುಂದಿ ಕಾಂತಿಗುಂದಿ ಮನಸೆಳೆವ ಮಣಿಖಚಿತ ಮಂಚದ ತುದಿಯಲ್ಲಿ ಕುಳಿತು ಚಾಚಿದ ಎಡಗೈಯ ಮೇಲೆ ಗಲ್ಲವನ್ನಿಟ್ಟು ಚಿಂತೆಹೊಂದಿ ತಲೆಬಾಗಿ ವಿರಹಾಗ್ನಿಯಲ್ಲಿ ಬೇಯುತ್ತಿರುವ ಸೌಂದರವತಿಯನ್ನು ಆ ಶಶಿಲೇಖೆ ಕಂಡು, ೩೧. ಏನೆಲೆ ಸೌಂದರವತಿ, ಚಿಂತೆಯನ್ನು ಬಿಟ್ಟು ಇತ್ತ ನೋಡು ಎಂದು ಚಂದ್ರಮುಖಿ ಶಶಿಲೇಖೆಯು ಹೇಳಲು ಆ ಸುಂದರಿಯು ಆಯಾಸಗೊಂಡು ನೋಡಲು ಶಶಿಲೇಖೆಯು ಹೀಗೆಂದಳು. ೩೨. ಭಾವಪರವಶಳೆ, ನೀನು ಹೇಳಿದಂತೆ ನಾನು ಆ ವನದಲ್ಲಿರಲು ಆ ಮಹಾರಾಜನ ಶುದ್ಧಚಾರಿತ್ರನಾದ ಮಂತ್ರಿಯು ಬರಲು ಎಲ್ಲಾ ವಿವರಗಳನ್ನು ತಿಳಿದೆನು.

ಇಂದುಕುಲತಿಲಕನುದ್ಭಟ
ನೆಂದೆಂಬಭಿಧಾನದವನಿಪತಿ ಯೆಂದೆನಗಾ।
ನಂದದಿನಾನೃಪಸಚಿವಂ
ತಾಂ ದಯೆಯಿಂದೊರೆದನಾಲಿಸಂಬುಜನೇತ್ರೇ ॥ ೩೩ ॥

ಎಂದಿಂತೊಸೆದುಸುರ್ವ ಶಶಿಲೇಖೆಯ ನುಡಿಗಳಂ ಕೇಳ್ದಾಜ್ಯಾಹುತಿಯಂ ಕೊಂಡಗ್ನಿಜ್ವಾಲೆಯಂತೆ ಯೆಲ್ಲಕವಿರ್ಮಡಿಸಲತಿತಾಪೋದ್ರೇಕದಿಂದಂ ಕಂದಿ ಕುಂದಿ ಮುಂದುಗೆಟ್ಟು ಕೊರಗುವ ಸೌಂದರವತಿಯಂ ಕಂಡೆಲ್ಲಾ ಸಖಿಯರ್ತಲ್ಲಣಂಗೊಂಡೊಯ್ಯನೆ ಕನಕಾಂದೋಳನದೊಳ್ಬಿಜಯಂಗೈಯಿಸಿಕೊಂಡೆಟ್ತಿಂದು ಪವನಮಂ ಪೊಕ್ಕು ತದುದ್ಯಾನದೆಡೆಯೊಳ್ಮನಂಗೊಳಿಪೊಂದಪಾರಸಾರಸುಗುಂಧಸಮ್ಮಿಳಿತಮಂಜುಳ ಕುಂಜಪುಂಜಾರಂಜಿತಕಂಜಾಕರತೀರಸ್ಥಿತನವೀನಲತಾಮಂಟಪಮಧ್ಯಸ್ಥಿತಸ್ಫುರದತಿಮೃದುಲಕಿಸಲಯಾಚ್ಛಿನ್ನ ಸುಧಾಮರೀಚಿಮಣಿವೇದಿಕಾಗ್ರದೊಳ್ತತ್ಕಾಮಿನಿಯಂ ಪಟ್ಟಿರಿಸಿ ಶಿಶಿರೋಪಚಾರಮನಸವಸದಿಂದಾಪೊಸ-ಜವ್ವನೆಯರೆಸಗುತ್ತಮಿರೆಯಿರೆ

ಚಿತ್ತಸರೋರುಹದೆಡೆಯೊಳ್
ಚಿತ್ತಜನಿಭನುದ್ಭಟೋರ್ವಿಪನ ಮೂರ್ತಿ ಕರಂ।
ಪತ್ತಿರಲುನ್ನತವಿರಹದೆ
ಪತ್ತಿಯಿನಸವಳೆಡೆವಿಡದೆ ಚಿಂತಿಸುತಿರ್ದಳ್ ॥ ೩೪ ॥

ಎಡೆವಿಡದೆ ಹೃದಯದೊಳ್ಪ್ರಿಯ
ನೆಡೆಗೊಂಡಿರಲಿನಿತುಮನಿಲನೆಡೆಯಾಡಲ್ತಾ।
ನೆಡೆಗಾಣದೆ ಸೂಸುವವೋಲ್
ಬಿಡಮುಣ್ಮಿದುದಂದವಳ್ಗೆ ಸೋಷ್ಣಶ್ವಾಸಂ ॥ ೩೫ ॥

ಪ್ರೀತಿಯಿಂದ ಕೇಳು ಹೇಳುವೆನು. ೩೩. ಕೇಳು ಕಮಲಾಕ್ಷಿ, ಚಂದ್ರವಂಶಕ್ಕೆ ತಿಲಕಪ್ರಾಯನಾದ ಉದ್ಭಟನೆಂಬ ಹೆಸರಿನ ಮಹಾರಾಜನಿವನು ಎಂದು ನನಗೆ ಆನಂದದಿಂದ ಆ ಮಹಾರಾಜನ ಮಂತ್ರಿಯು ಕರುಣೆಯಿಂದ ಹೇಳಿದನು. ವ॥ ಎಂದು ಹೀಗೆ ಪ್ರೀತಿಯಿಂದ ಹೇಳುವ ಶಶಿಲೇಖೆಯ ಮಾತುಗಳನ್ನು ಕೇಳಿ ತುಪ್ಪವನ್ನು ಆಹುತಿಯಾಗಿ ಸ್ವೀಕರಿಸಿದ ಅಗ್ನಿಜ್ವಾಲೆಯಂತೆ ವಿರಹಾಗ್ನಿಯು ದ್ವಿಗುಣಿಸಲು ಹೆಚ್ಚಿನ ತಾಪೋದ್ರೇಕದಿಂದ ಕಂದಿ ಕುಂದಿ ಮುಂದುಗಾಣದೆ ಕೊರಗುವ ಸೌಂದರವತಿಯನ್ನು ಕಂಡು ಎಲ್ಲಾ ಸಖಿಯರು ಚಿಂತೆಗೊಂಡು ಮೆಲ್ಲನೆ ಚಿನ್ನದ ತೊಟ್ಟಿಲಿನಲ್ಲಿಟ್ಟು ತೆಗೆದುಕೊಂಡು ಬಂದು ತೋಟವನ್ನು ಪ್ರವೇಶಿಸಿ ಆ ಉದ್ಯಾನದ ಒಂದೆಡೆಯಲ್ಲಿ ಮನಸೆಳೆಯುವ ಅಪಾರ ಸುಗಂಧಯುಕ್ತವಾದ, ಮನೋಹರವಾದ ಬಳ್ಳಿಗಳಿಂದ ಶೋಭಿತವಾದ ಕಮಲಗಳಿಂದ ಕೂಡಿದ ಕೊಳದ ದಡದಲ್ಲಿರುವ ನವೀನವಾದ ಲತಾಮಂಟಪದ ಮಧ್ಯದಲ್ಲಿ ಹೊಳೆಯುತ್ತಿರುವ ಮೃದುತರವಾದ ಚಿಗುರುಗಳನ್ನು ಹರಡಿದ ಚಂದ್ರಕಾಂತ ಶಿಲೆಯ ಆಸನದ ಮಧ್ಯೆ ಆ ಸುಂದರಿಯನ್ನು ಮಲಗಿಸಿ ಶೈತ್ಯೋಪಚಾರವನ್ನು ಬೇಗಬೇಗನೆ ಆ ನವಜೌವನೆಯರು ಮಾಡುತ್ತಲಿರಲು, ೩೪. ಅಂತರಂಗವೆಂಬ ಕೊಳದಲ್ಲಿ ಮನ್ಮಥ ಸಮಾನನಾದ ಉದ್ಭಟ ಮಹಾರಾಜನ ಮೂರ್ತಿಯು ಚೆನ್ನಾಗಿ ಸೇರಿರಲು ಅತಿವಿರಹವನ್ನು ಹೊಂದಿ ಪ್ರಿಯನನ್ನು ಅವಳು ಸದಾ ಚಿಂತಿಸುತ್ತಿದ್ದಳು. ೩೫. ಸ್ವಲ್ಪವೂ ಜಾಗಬಿಡದೆ ಹೃದಯದಲ್ಲಿ ಪ್ರಿಯನನ್ನು ಹೊಂದಿ ಇರಲು, ಸ್ವಲ್ಪ ಗಾಳಿಯು ಸುಳಿದಾಡಲು

ಒಳಗೆ ಮಡಲ್ತಿರದುರ್ವಿದ
ತುಳವಿರಹಜ್ವಾಲೆ ಪೆರ್ಚಿ ಪೊಱಪೊಣ್ಮಿದ ವೋಲ್।
ನಳಿನಾಕ್ಷಿಯ ಸರ್ವಾಂಗದೊ
ಳಳವಟ್ಟುದು ನಾಡೆ ದರ್ಪಕಜ್ವರಮಾಗಳ್ ॥ ೩೬ ॥

ಮುಂತೆ ತದುದ್ಭಟಭೂಮೀ
ಕಾಂತಂಗರ್ಧಾಂಗಿ ಯಪ್ಪುದುಂ ತೋರ್ಪವೊಲಾ।
ಕಾಂತೆ ಕರಂ ಮೈಗುಂದಿದ
ಳಂತಗಲದೆ ಪರ್ವಿದತನುತಾಪೋದಯದಿಂ ॥ ೩೭ ॥

ಭೂಕಾಂತೋದ್ಭಟಶೋಣೋ
ಷ್ಠಾಕಳಿತಾಮೃತಮನೀಂಟುತುಂ ಮಾನಸದೊಳ್।
ಪ್ರಾಕೃತರುಚಿಗಳನುಱಿವವೊ
ಲಾಕಾಮಿನಿ ಯುಱಿದಳಂದು ಮಿಗೆ ಮೆಲ್ಲುಣಿಸಂ ॥ ೩೮ ॥

ಎತ್ತೆತ್ತಲ್ಪರಿಲೋಕಿಸ
ಲತ್ತತ್ತಲ್ತನ್ಮಹೀಶನಾಕೃತಿ ಕಣ್ಗಿ।
ಳ್ಗೊತ್ತರಿಸಿ ತೋಱಲಂತಾ
ವೃತ್ತಸ್ತನಿ ವಿಕಳೆಯಾಗಿ ಕಣ್ಗೆಸೆದಿರ್ದಳ್ ॥ ೩೯ ॥

ಪದೆದೊಯ್ಯನೆ ಬಾಯ್ದೆಱಿಯಲ್
ಹೃದಯಮನೆಡೆಗೊಂಡ ತನ್ನೃಪಧ್ಯಾನಂ ಪೋ।
ಪುದೆನುತ್ತುಂ ನುಡಿಯದ ವೊ
ಲ್ದಿದಳಿತಪದ್ಮಾಕ್ಷಿ ಮೌನದಿಂ ತಳೆದಿರ್ದಳ್ ॥ ೪೦ ॥

ಆಗ ಮಾರ್ಗಕಾಣದೆ ಅದು ಸುಳಿಯುವಂತೆ ಆಗ ಅವಳಲ್ಲಿ ಬಿಸಿಯಾದ ಗಾಳಿಯು ಬಿಡದೆ ಹೊರಹೊಮ್ಮಿತು. ೩೬. ಒಳಗೆ ಕವಿದು ಹಬ್ಬಿದ ಅತಿ ವಿರಹ ಜ್ವಾಲೆಯು ಹೆಚ್ಚಾಗಿ ಹೊರಬಂದಂತೆ ಕಮಲಾಕ್ಷಿಯ ದೇಹದಲ್ಲೆಲ್ಲಾ ಮದನಜ್ವರವು ಆಗ ಆವರಿಸಿತು. ೩೭. ಮುಂದೆ ಆ ಉದ್ಭಟಮಹಾರಾಜನಿಗೆ ಅರ್ಧಾಂಗಿಯಾಗುವುದನ್ನು ತೋರುವಂತೆ ಆ ಸುಂದರಿಯು ಬಿಡದೆ ಹಬ್ಬಿದ ಮದನಜ್ವರದಿಂದ ಅತಿಶಯವಾಗಿ ಶಕ್ತಿಗುಂದಿದಳು. ೩೮. ಮಹಾರಾಜ ಉದ್ಭಟನ ಚೆಂದುಟಿಯಿಂದ ಹೊರಸೂಸುವ ಅಮೃತವನ್ನು ಮನದಲ್ಲಿ ಸವಿಯುತ್ತ ಅನ್ಯರುಚಿಗಳನ್ನು ಬಿಟ್ಟಂತೆ, ಆ ಸುಂದರಿಯು ಅತಿಸವಿಯಾದ ಊಟವನ್ನು ಅಂದು ಬಿಟ್ಟಳು. ೩೯. ಎತ್ತೆತ್ತ ನೋಡಿದರೂ ಅತ್ತತ್ತ ಮಹಾರಾಜನ ಆಕೃತಿ ಕಣ್ಣುಗಳಲ್ಲಿ ಒತ್ತರಿಸಿ ತೋರಲು ಆ ತುಂಬುಮೊಲೆಯ ಸುಂದರಿಯು ಬುದ್ಧಿಗೆಟ್ಟವಳಾಗಿ ಕಣ್ಣಿಗೆ ಕಾಣುತ್ತಿದ್ದಳು. ೪೦. ಪ್ರೀತಿಯಿಂದ ಮೆಲ್ಲನೆ ಬಾಯಿ ತೆರೆದರೆ ಹೃದಯವನ್ನು ಸೇರಿದ ಮಹಾರಾಜನ ಧ್ಯಾನವು ಹೋಗುವುದೆಂದು ಭಾವಿಸಿ ಮಾತನಾಡದೆ ಇದ್ದಂತೆ ಕಮಲನೇತ್ರೆಯು

ಕರಣಚತುಷ್ಕಮುದ್ಭಟನೃಪಾಲಕನೆಂಬಮಹೇಶಯೋಗದೊ
ಳ್ಪೊರೆದಿರಲಂಗಭಾವಮಟಿ'ದೊಯ್ಯನೆ ಬಾಹ್ಯಭವಪ್ರಪಂಚಸಂ।
ಚರಣಮದಂದು ಮೈದೆಗೆಯೆ ನಿಬ್ಬೆಱಗಾಗಿ ಮನಂಗೊಳಿಪ್ಪ ತ
ತ್ಪರಮಸುಖಾತ್ಮಯೋಗಿನಿಯೊ ತಾನೆನೆ ಮೂರ್ಛೆಗೆ ಸಂದಳಂತವಳ್ ॥ ೪೧ ॥

ಇಂತೆಡೆವಿಡದೆ ಪರ್ವಿಕೊರ್ವಿದತನುವವಸ್ಥೆಯಿಂದಂಗಮಂ ಮಱ'ದಿನಿತುಮೂರ್ಛೆವೋಗಿರ್ಪ ತತ್ಸೌಂದರವತಿಯಂ ಕಂಡು ಶಶಿಲೇಖೆಮೊದಲಾದಖಿಳಸಖಿಯರಸವಸದಿಂದೊಸೆದು ಶಿಶಿರೋಪಚಾರಮನೆಸಗುತ್ತೆಸೆದಿರ್ದರ್॥

ಅದೆಂತೆಂದೊಡೆ,

ಪನ್ನೀರೊಳ್ನವಮಲ್ಲಿಕಾಸ್ತಬಕಮಂ ತೊಯ್ದಚ್ಛಕರ್ಪೂರಮಂ
ಮುನ್ನೊಳ್ಪೊಂದಿರೆ ಕೂಡಿ ಸೌಂದರಿಯ ತಾಪಿಪ್ಪಂಗಮಂ ಮುಚ್ಚಿ ನಿ
ರ್ಭಿನ್ನಕ್ಲೇಶದಿನಂದುಶೀರಕೃತಚಂಚತ್ತಾಳವೃಂತಂಗಳಿಂ
ತಾಂ ನೀಹಾರಮಯೂಖಬಿಂಬಮುಖಿಯರ್ಬೀಸುತ್ತೆ ಕಣ್ಗೊಪ್ಪಿದರ್ ॥ ೪೨ ॥

ಮತ್ತಮದಲ್ಲದೆ,

ಹಿಮಕಲಿತಶ್ರೀಖಂಡೋ
ತ್ತಮಸಾರಮನಂದು ತಂದು ಕಾಂತಾತತಿ ತ।
ತ್ಕಮಲಾಕ್ಷಿಯ ಸರ್ವಾಂಗಕೆ
ಸಮುದಿತಸಂತಾಪದಿಂದೆ ಪೂಸಿದರಾಗಳ್ ॥ ೪೩ ॥

ಪೂಸಿದ ಚಂದನದಣ್ಪಂ
ದಾಸುಮನೋಬಾಣಬಾಣದಿಂ ಕಪ್ಪಾಗಳ್।
ಬಾಸಣೆಸಿದ ಕಾರ್ಮುಗಿಲು
ದ್ಭಾಸಿತಶಶಿಲೇಖೆಯೆಂಬಿನಂ ಸತಿಯಿರ್ದಳ್ ॥ ೪೪ ॥

ಮೌನವನ್ನು ಹೊಂದಿದ್ದಳು. ೪೧. ಕರಣಗಳು ನಾಲ್ಕು ಉದ್ಭಟಮಹಾರಾಜನೆಂಬ ಶಿವಯೋಗದಲ್ಲಿ ಹೊಂದಿರಲು, ಅಂಗಭಾವವು ಮೆಲ್ಲನೆ ಹೋಗಿ ಬಾಹ್ಯ ಪ್ರಪಂಚ ಜ್ಞಾನವು ಹಿಂದೆ ಸರಿಯಲು ಅವಳು ಅಚ್ಚರಿಯಾಗುವಂತೆ ಮನಸೆಳೆಯುವ ಪರಮಸುಖದಲ್ಲಿ ಆತ್ಮನನ್ನು ಕಂಡ ಯೋಗಿನಿಯೋ ಎನ್ನುವಂತೆ ಮೂರ್ಛೆಹೋದಳು. ವ॥ ಹೀಗೆ ಎಡೆಬಿಡದೆ ಹಬ್ಬಿ ಹರಡಿದ ಮನ್ಮಥಾವಸ್ಥೆಯಿಂದ ಮೈಮೇಲಿನ ಪ್ರಜ್ಞೆ ಹೋಗಿ ಮೂರ್ಛೆಹೊಂದಿರುವ ಆ ಸೌಂದರವತಿಯನ್ನು ನೋಡಿ ಶಶಿಲೇಖೆ ಮೊದಲಾದ ಸಕಲ ಸಖಿಯರು ಬೇಗಬೇಗನೆ ಪ್ರೀತಿಯಿಂದ ಶೈತ್ಯೋಪಚಾರವನ್ನು ಮಾಡುತ್ತ ಶೋಭಿಸಿದ್ದರು. ಅದು ಹೇಗೆಂದರೆ, ೪೨. ಪನ್ನೀರಿನಲ್ಲಿ ಹೊಸದಾದ ಮಲ್ಲಿಗೆಯ ಹೂವುಗಳನ್ನು ಅದ್ದಿ ಶುದ್ಧವಾದ ಕರ್ಪೂರವನ್ನು ಚೆನ್ನಾಗಿ ಅಂದಗೆಡದಂತೆ ಸೇರಿಸಿ ಸೌಂದರಿಯ ಬೇಯುವ ಶರೀರವನ್ನು ಅವುಗಳಿಂದ ಮುಚ್ಚಿ ಚಿಂತೆಯಿಂದ ಕೂಡಿ ಒದ್ದೆಮಾಡಿದ ಹೊಳೆಯುವ ತಾಳೆಯ ಬೀಸಣಿಗೆಗಳಿಂದ ಗಾಳಿಬೀಸುತ್ತ ಚಂದ್ರಮುಖಿಯರು ಕಣ್ಣಿಗೆ ಅಂದವಾದರು. ವ॥ ಮತ್ತೆ ಅದಲ್ಲದೆ, ೪೩. ಹಿಮದಿಂದ ಕೂಡಿದ ಶ್ರೀಗಂಧದ ಒಳ್ಳೆಯ ತಿರುಳನ್ನು ತಂದ ಸಖಿಯರು ಆ ಕಮಲಾಕ್ಷಿಯ ದೇಹಕ್ಕೆಲ್ಲಾ ದುಃಖದಿಂದ ಕೂಡಿ ಲೇಪಿಸಿದರು. ೪೪. ಹಬ್ಬಿದ ಶ್ರೀಗಂಧದ

ಸಿರಿಗಂಧಂ ಕರ್ಪಾದುದು
ತರಳೆಯ ವಿರಹಾಗ್ನಿಯೆಂತದೋ ತಾನೆನುತುಂ।
ತರುಣೆಯರಾಗಳ್ಮಗುಟ್ಬಾ
ತುರದಿಂ ಶಿಶಿರೋಪಚಾರಮಂ ವಿರಚಿಸಿದರ್ ॥ ೪೫ ॥

ನಾನಾಪುಷ್ಪಂಗಳಂ ತೊಯ್ದೆಡೆವಿಡದೆ ಕುಳಿರ್ಕೊಳ್ವ ನೀರಂಗಳೊಳ್ ಕಾಂ
ತಾನೀಕಂ ಪಾಸಿ ತತ್ಪಂಕಜದಳದೃಶೆಯಂ ತಂದು ಪಟ್ಟಿಟ್ಟು ಕರ್ಪೂ।
ರಾನೂನಾಂಚದ್ವ್ರಜಸ್ಸಂಯುತಹಿಮಜಲಮಂ ಬೆಳ್ಚರಂ ಸಿಂಪಿಸುತ್ತುಂ
ತಾನಂದೊಪ್ಪಿರ್ದುದಂತಃಕರಣಮನಲೆವುತ್ತುಂಗಸಂತಾಪದಿಂದಂ ॥ ೪೬ ॥

ಕಣ್ಗೊಳಿಪಾಪಘೂಮಣಿಗೆ ಪೆರ್ಚಿದ ತಾಪದ ಬಿಣ್ಪನಾರಿಸ
ಲ್ಪಿಂಗದೆ ಕೂರ್ಮೆಯಿಂ ತಳಿವ ಶೀತಳಮಾದುದಬಿಂದುರಾಜಿ ಮೇ।
ಣಿಂಗಿತು ಯಲ್ಲಕಾಗ್ನಿಯೊಳಿ ಕಾದ ಸುವರ್ಣಶಲಾಕೆಗಂದು ಕೂ
ರ್ತಂಗಜಕಾರುಕಂ ಬಿಡದೆ ಸಿಮ್ಮುವ ಶೀತಲವಾಃಕಣಾಳಿಯೋಲ್ ॥ ೪೭ ॥

ತನುವಿನೊಳಿಂಗುವ ಪನ್ನೀ
ರ್ವನಿಯಂ ಕಂಡಾಳಿಯರ್ಬೆಱಗುವಟ್ಟೆಳೆವೂ।
ವಿನ ಪಸೆಯೊಳ್ಪಟ್ಟಿಟ್ಬಾ
ವನಿತೆಗೆ ಶಿಶಿರೋಪಚಾರಮಂ ವಿರಚಿಸಿದರ್ ॥ ೪೮ ॥

ಸುತಮಲ್ಲಿಕಾಸ್ತರಣಸಂ
ಸ್ಥಿತಸೌಂದರದೇವಿಯೊಪ್ಪಿದಳ್ ಸಿತಮೇಘ।
ಪ್ರತತಿಯೊಳಚ್ಚರಿಮಿಂಚಿನ
ಲತೆಯುಜ್ವಲಿಸುತ್ತಮಿಪ್ಪದೆಂಬವೊಲಾಗಳ್ ॥ ೪೯ ॥

ಲೇಪನವು ಆ ಮದನನ ಬಾಣದಿಂದಾಗಿ ಕಪ್ಪಾಯಿತು. ಕವಿದ ಕಪ್ಪುಮೋಡದ ನಡುವೆ ಪ್ರಕಾಶಿಸುವ ಚಂದ್ರನ ಕಿರಣಗಳಂತೆ ಆ ಸುಂದರಿಯು ಇದ್ದಳು. ೪೫. ಶ್ರೀಗಂಧವು ಕಪ್ಪಾಯಿತು. ಸುಂದರಿಯ ವಿರಹಾಗ್ನಿಯು ಎಂತಹುದೋ! ಎಂದು ತರುಣಿಯರು ಮೇಲಿಂದ ಮೇಲೆ ಆತುರದಿಂದ ಶೈತ್ಯೋಪಚಾರವನ್ನು ಮಾಡಿದರು. ೪೬. ಕಾಂತೆಯರ ಬಳಗವು ಶೈತ್ಯದಿಂದ ಕೂಡಿ ಕೊಳಗಳಲ್ಲಿ ನಾನಾ ಪುಷ್ಪಗಳನ್ನು ಎಡೆಬಿಡದೆ ತೊಯ್ಸಿ ತಂದು ಹಾಸಿ ಆ ಕಮಲನೇತ್ರೆಯನ್ನು ತಂದು ಮಲಗಿಸಿ ಯಥೇಚ್ಛವಾಗಿ ಕರ್ಪೂರಮಿಶ್ರವಾದ ಪನ್ನೀರನ್ನು ಬೇಗಬೇಗನೆ ಚಿಮುಕಿಸುತ್ತಿರಲು ಅಂತರಂಗವನ್ನು ಕವಿಯುವ ತೀವ್ರವಾದ ವಿರಹತಾಪದಿಂದ ಸೌಂದರವತಿಯು ಶೋಭಿಸಿದ್ದಳು. ೪೭. ಕಣ್ಸೆಳೆಯುವ ಆ ಸೌಂದರವತಿಯನ್ನು ಆವರಿಸಿದ ತಾಪದ ಹೆಚ್ಚಳವನ್ನು ನಿವಾರಿಸಲು ಬಿಡದೆ ಪ್ರೀತಿಯಿಂದ ಚಿಮುಕಿಸುವ ಶೀತಲವಾದ ಪನ್ನೀರ ಹನಿಗಳು ಉಜ್ವಲಿಸುವ ಬೆಂಕಿಯಲ್ಲಿ ಕಾದ ಚಿನ್ನದ ಸರಳಿಗೆ ಪ್ರೀತಿಯಿಂದ ನೀರು ತಳಿಯಲು ಆಗಬಿಡದೆ ಚಿಮ್ಮುವ ಶೀತಲ ನೀರಹನಿಗಳ ರೀತಿಯಲ್ಲಿ ಇಂಗಿ ಹೋದುವು. ೪೮. ದೇಹದಲ್ಲಿ ಇಂಗಿಹೋಗುವ ಪನ್ನೀರಹನಿಯನ್ನು ನೋಡಿ ಕಾಂತೆಯರು ಆಶ್ಚರ್ಯಹೊಂದಿ ಎಳೆಯ ಹೂವಿನ ಹಾಸುಗೆಯಲ್ಲಿ ಮಲಗಿಸಿ ಆ ಸುಂದರಿಗೆ ಶೈತ್ಯೋಪಚಾರವನ್ನು ಮಾಡಿದರು. ೪೯. ಪ್ರಸಿದ್ಧವಾದ ಮಲ್ಲಿಗೆಯ ರಾಶಿಯಮೇಲೆ ಕುಳಿತ

ಶೋಣಾಬ್ಜತಳ್ಪದಲ್ಲಿ ತ
ದೇಣಾಂಬಕಿ ಯೆಸೆದಳಮರ್ದಸಂಧ್ಯಾರಾಗ।
ಕ್ಷೀಣತರಕಾಂತಿಯೊಳ್ಮಿಗೆ
ಕಾಣೆಪ ಶೀತಾಂಶುಲೇಖೆಯಿರವೆಂಬಿನೆಗಂ ॥ ೫೦ ॥

ಕನ್ನೈದಿಲ್ವಾಸಿನೊಳಾ
ಚೆನ್ನೆ ವಿರಾಜಿಸಿದಳೊಱೆವಣೆಯ ಮೇಲಣ ಚೆಂ।
ಬೊನ್ನಗೆಱೆಯಂತೆ ಪೊಸಚೆಂ
ಬೊನ್ನದ ಕಾಂತಿಯಿನೊಡಲ್ಪರಿ ತಾಪಿಸುತುಂ ॥ ೫೧ ॥

ಕೆಂಜಾಜಿಯರಲ ಪಸೆಯೊ
ಳ್ಸಂಜನಿಸಿದ ವಿರಹಶಿಖಿಯೊಳತನುಕಲಾದಂ।
ತಾಂ ಜವದಿಂ ಪುಟವಿಡುವಪ
ರಂಜಿಯ ಲೇಖೆಯವೊಲಾಸುದತಿ ರಂಜಿಸಿದಳ್ ॥ ೫೨ ॥

ಕದಳೀನವದಳವಿರಚಿತ
ಮೃದುಶಯ್ಯೆಯೊಳೆಸೆದಳಂತವಳ್ಮರಕತಮ।
ಧ್ಯದ ಕಾಂತಿವೆತ್ತು ಚೆಲ್ವಂ
ಕೆದಱುತೆ ಕಂಗೊಳಿಪ ಸೂತ್ರಲೇಖೆಯ ಪಾಂಗಿಂ ॥ ೫೩ ॥

ಮತ್ತಮದಲ್ಲದೆ,

ಸಕಲಲತಾಂತಂಗಳಿನಾ
ಸುಕುಮಾರಿಕೆಯಂಗಮಂ ಪೊದಿಸಲಾಸ್ಯಂ ರಂ।
ಜಿಕುಮಲರ್ಗೊಳದೊಳ್ಮಾರ್ಪೊಳೆ
ದು ಕರಂ ಕಂಗೊಳಿಪ ಪೂರ್ಣಶಶಿಬಿಂಬಂಬೋಲ್ ॥ ೫೪ ॥

ಸೌಂದರದೇವಿಯು ಆಗ ಬೆಳ್ಳನೆಯ ಮೋಡಗಳ ನಡುವೆ, ಬೆರಗಾಗಿರುವ ಮಿಂಚಿನಬಳ್ಳಿಯು ಪ್ರಕಾಶಿಸುತ್ತಿರುವುದೆಂಬಂತೆ ಅಂದಗೊಂಡಳು. ೫೦. ಕೆಂದಾವರೆಯ ಹಾಸುಗೆಯಲ್ಲಿ, ಜಿಂಕೆಯ ಕಣ್ಣಿನಂತೆ ಚಂಚಲವಾದ ಕಣ್ಣುಳ್ಳ ಸೌಂದರದೇವಿಯು ಮುಳುಗುತ್ತಿರುವ ಸೂರ್ಯನ ಕಾಂತಿಗುಂದುತ್ತಿರುವ ಆಗಸದ ಹೊಂಬಣ್ಣದ ನಡುವೆ ಚೆನ್ನಾಗಿ ತೋರುವ ಚಂದ್ರನಂತೆ ಶೋಭಿಸಿದಳು. ೫೧. ಒರೆಗಲ್ಲಿನ ಮೇಲಣ ಚಿನ್ನದ ಗೆರೆಯಂತೆ, ಕನ್ನೈದಿಲೆಯ ಹಾಸುಗೆಯಲ್ಲಿ ಆ ಸುಂದರಿಯು ಹೊಸ ಚಿನ್ನದ ಕಾಂತಿಯಿಂದ ಕೂಡಿದ ದೇಹವನ್ನು ಚೆಲ್ಲಿ ಸಂಕಟಪಡುತ್ತ ಶೋಭಿಸಿದಳು. ೫೨. ಕೆಂಪು ಜಾಜಿಯ ಹೂವಿನ ಹಸೆಮಣೆಯ ಮೇಲೆ ಅಂತರಂಗದಲ್ಲಿ ಉಂಟಾದ ವಿರಹಜ್ವರದಲ್ಲಿ, ಮನ್ಮಥನು ತೀವ್ರವಾಗಿ ಬೆಂಕಿಯಲ್ಲಿಟ್ಟು ಶುದ್ಧಮಾಡಿದ ಅಪರಂಜಿಯ ಸಾಲಿನಂತೆ ಹೊಳೆದಳು. ೫೩. ನವರತ್ನಗಳಲ್ಲಿ ಒಂದಾದ ಪಚ್ಚೆಯು ತನ್ನ ನಡುಭಾಗದಲ್ಲಿ ಕಾಂತಿಯನ್ನು ಬಂಧಿಸಿ, ಸುತ್ತೆಲ್ಲಾ ಅದರ ಚೆಲುವಿಕೆಯನ್ನು ಹರಡಿ ಕಣ್ಸೆಳೆಯುವಂತೆ ಬಾಳೆಯ ಎಲೆಯಿಂದ ಮಾಡಿದ ಮೃದುಹಾಸಿಗೆಯಲ್ಲಿ ಅವಳು ಶೋಭಿಸಿದಳು. ವ॥ ಮತ್ತೆ ಅದಲ್ಲದೆ, ೫೪. ಎಲ್ಲಾ ಬಗೆಯ ಹೂವುಗಳಿಂದ ಆ

ಇಂತೆಸೆವಲರ್ವಸೆಯೊಳ್ ತತ್ಸೌಂದರವತಿಯಂ ಪಟ್ಟಿರಿಸಿ ಪೊಸಪನ್ನೀರೊಳ್ತೊಯ್ದಖಿಳಕುಸುಮ ವಿಸರದಿಂದಂಗಮಂ ಬಾಸಣಿಸಿ ಶಿಶಿರೋಪಚಾರಮನೊಸೆದೆಸಗಲ್ವಿರಹವಿರ್ಮಡಿಸಲಂದು ಶಶಿಲೇಖೆ ಮೊದಲಾದ ಸಖೀಜನಂ ಕಂಡು,

ಎನಿತೆನಿತುಪಚಾರಂ ಗೈದೊಡಂ ಕೂರ್ಮೆಯಿಂ ಮೇ
ಣನಿತನಿತುರುತಾಪಂ ಪೆರ್ಚುತಿರ್ದಪ್ಪುದಿಂತೀ।
ವನಜದಳವಿಶಾಲಾಲೋಲದೀರ್ಘಾಕ್ಷಿಗೆಂದಾ
ವನಿತೆಯರನಿಬರ್ತಾವ್ ಕ್ಲೇಶಮಂ ತಾಳ್ದಟಿಲ್ದರ್ ॥ ೫೫ ॥

ಪೂಸಿದ ಚಂದನಂ ಮಿಸುಪ ಕತ್ತುರಿಯಾದುದು ತೊಟ್ಟಮುತ್ತುಗ
ಳ್ಭಾಸುರನೀಲಮಾದುದಸಿತೋತ್ಪಲಮಾದುದು ಕೋಮಲಾಂಗಮಂ।
ಬಾಸಣಿಸಿರ್ದ ಮಲ್ಲಿಗೆಯರಲ್ ಸುಕುಮಾರಿಯ ಕಾಮತಾಪದೊಂ
ದೀಶಿಖಿ ನೋಡಲೆಂತಿದೊ ಯೆನುತ್ತುಮಟಿಲ್ದುದು ಕಾಮಿನೀಕುಳಂ ॥ ೫೬ ॥

ತನಿವೆಳ್ದಿಂಗಳ್ಗಮಂತಾತಪದ ಬಿಸುಪವಾದತ್ತು ಸನ್ಮಾಲತೀನೂ
ತನಚಂಚತ್ಕೋರಕಂ ಸೂಚಿಗಳ ಬಳಗಮಾದತ್ತು ರಾಜಿಪ್ಪ ಪನ್ನೀರ್।
ವನಿತಾಂಗೋಷ್ಣಾಂಬುವಾದತ್ತಳಿಗಿಳಿಗಳ ಕಂಠಸ್ವನಂ ವಜ್ರನಿರ್ಘೋ
ಷನಿನಾದಂ ಮೇಣದಾದತ್ತಬಲೆಗೆನುತಮಾಕಾಂತೆಯರ್ಚಿಂತೆವೆತ್ತರ್ ॥ ೫೭ ॥

ಬಾಳದ ಕಂಪು ಬಾಳ್ಸಿನುಗುವಾಜಿಡಿಯಾರಡಿ ಹಂಸೆ ಹಿಂಸೆ ತಂ
ಗಾಳಿ ವಿಷಾಳಿ ಪಲ್ಲವದ ಗೇಹಮುದಂಚಿತಮೋಹಮದಚ್ಚಪೊಂ।
ಬಾಳೆಯ ತಣ್ಣೆಳಲ್ಬುದಿದ ಕಣ್ಗಳಲೊಪ್ಪುವ ತಿಂಗಳಿಂಗಳುಂ
ಬಾಲಿಕೆಗಾದುದೀವಿರಹದಿಂದೆನುತುಂ ಕಡು ನೊಂದರಾಳಿಯರ್ ॥ ೫೮ ॥

ಕೋಮಲಾಂಗಿಯ ಶರೀರವನ್ನು ಅವಳ ಮುಖವು ಹೂವಿನ ಕೊಳದಲ್ಲಿ ತನ್ನ ಪ್ರತಿಬಿಂಬವನ್ನು ಮೂಡಿಸಿ ಕಣ್ಣಿಗೆ ತಂಪಾಗಿರುವ ಪೂರ್ಣಚಂದ್ರನಂತೆ ಇದ್ದಿತು. ವ॥ ಹೀಗೆ ಅಂದವಾಗಿರುವ ಹೂವಿನ ಹಾಸಿನಲ್ಲಿ ಆ ಸೌಂದರವತಿಯನ್ನು ಮಲಗಿಸಿ ಹೊಸ ಪನ್ನೀರಿನಲ್ಲಿ ತೊಯ್ಸಿದ ಎಲ್ಲಾ ಬಗೆಯ ಹೂವುಗಳಿಂದ ಶರೀರವನ್ನು ಮುಚ್ಚಿ ಶೈತ್ಯೋಪಚಾರವನ್ನು ಪ್ರೀತಿಯಿಂದ ಮಾಡಲು ವಿರಹವು ದ್ವಿಗುಣವಾಗಲು ಆಗ ಶಶಿಲೇಖೆಯೇ ಮೊದಲಾದ ಸಖೀಜನರು ಅದನ್ನು ಗಮನಿಸಿ, ೫೫. ಪ್ರೀತಿಯಿಂದ ಎಷ್ಟು ಉಪಚರಿಸಿದರೂ ಅಷ್ಟೇ ತೀವ್ರವಾಗಿ ವಿಶಾಲವೂ ಚಂಚಲವೂ ಆದ ಕಮಲಾಕ್ಷಿಗೆ ಬೇಗೆಯು ಹೆಚ್ಚುತ್ತಿರುವುದಲ್ಲಾ ಎಂದು ಆ ಸ್ತ್ರೀಯರು ಚಿಂತೆಯನ್ನು ಹೊಂದಿ ರೋದಿಸಿದರು. ೫೬. ಸುಕುಮಾರಿಯ ಕಾಮತಾಪಕ್ಕೆ ಲೇಪಿಸಿದ ಶ್ರೀಗಂಧವು ಹೊಳೆವ ಕಸ್ತೂರಿಯಾಯಿತು. ಧರಿಸಿದ ಮುತ್ತುಗಳೆಲ್ಲಾ ಹೊಳೆವ ನೀಲಮಣಿಗಳಾದುವು. ಕೋಮಲಾಂಗವು ಕನ್ನೈದಿಲೆಯಾಯಿತು. ದೇಹವನ್ನು ಮುಚ್ಚಿದ್ದ ಮಲ್ಲಿಗೆಯ ಹೂವು ತಾಪಕ್ಕೆ ಬಾಡಿದುವು. ಎಂತಹುದೋ ಇದು ಎಂದು ಸ್ತ್ರೀ ಸಮೂಹವು ರೋದಿಸಿತು. ೫೭. ಆ ಸುಂದರಿಗೆ ಸೊಗಸಾದ ಬೆಳದಿಂಗಳು ಬಿಸಿಲಾಯಿತು. ಸುಂದರವಾದ ಜಾಜಿಯ ಎಳೆಯ ಮೊಗ್ಗುಗಳು ಸೂಜಿಗಳ ಮೊತ್ತದಂತಾಯಿತು. ಶೋಭಿಸುವ ಪನ್ನೀರು ಸ್ತ್ರೀಯ ದೇಹದ ಬೆಚ್ಚನೆಯ ನೀರಿನಂತಾಯಿತು. ದುಂಬಿ ಹಾಗೂ ಗಿಳಿಗಳ ಕಂಠಧ್ವನಿಯು ದೇವೇಂದ್ರನ ಸಿಡಿಲಿನ ಆರ್ಭಟದಂತಾಯಿತು ಎಂದು ಆ ಸ್ತ್ರೀಯರು ಚಿಂತೆಗೊಂಡರು. ೫೮. ಬಾಲಕಿಗೆ ಈ ವಿರಹದಿಂದಾಗಿ ಮುಡಿವಾಳದ ಸುವಾಸನೆ ಕತ್ತಿಯಂತಾಯಿತು,

ಇನಿಗದಿರ್ವಟ್ಟು ಚಂಡಕರಮಂಡಲವಾದುದು ಕಂಪನೀವ ಚಂ
ದನರಸಮುರ್ಕುವೆಣ್ಣೆಯವೊಲಾದುದು ಪೂವಿನ ಪಾಸು ಶಾತಶ।
ಸ್ತ್ರನಿಚಯಮಾದುದಗ್ನಿ ಕಣಮಾದುದು ಸೂಸುವ ವಾಃಕಣಾಳಿ ಯೊ
ವನಿತೆಗೆ ಕಾಮತಾಪಪರಿತಪ್ತೆಗೆನುತ್ತುಮಬಿಲ್ದರಾಳಿಯರ್ ॥ ೫೯ ॥

ನಡೆಯೊಳ್ರಾಜಮರಾಳರಾಜಿ ಪರಿರಾಜತ್ತಾಮ್ರತುಂಡವ್ರಜಂ
ನುಡಿಯೊಳ್ಕರ್ಗಿದಕುಂತಳಂಗಳೊಳಳಿವ್ರಾತಂ ಪಿಕಶ್ರೇಣಿಯಂ।
ಪಿಡಿದಂಚನ್ನೈದುನಾದದೊಳ್ಪೊಣರಲಂದೆಟ್ಟಿಂದುವೀವೇಳೆಯೊ
ಳ್ಗಡಮಾದೀಕ್ಷಿಸು ತಂಗಿ ಯೆಂದೆನುತಲೈತಂದತ್ತು ಕಾಂತಾಕುಳಂ ॥ ೬೦ ॥

ನವನೀರೇಜಮನಾಸ್ಯದೊಳ್ನಯನದೊಳ್ಕನ್ನೈದಿಲಂ ಸ್ಮೇರದೊ
ಳ್ತವೆ ಮಲ್ಲೀಚಯಮಂ ಕರಾಂಘ್ರಿತಳದೊಳ್ ಕಂಕೇಳಿಕಾಮ್ರಾಚ್ಛಪ।
ಲ್ಲವಮಂ ತಾಳ್ದಿರಲೀವಧೂಮಣಿಯನಿಂಗೋಲ್ವಿಲ್ಲನಾರ್ದೆಚ್ಚೊಡಿಂ
ತು ವಿಚಾರಂಗೊಳದೈಸರಲ್ಮುಗಿದುದೆಂತೆಂದಾಡಿತಾಳೀಕುಳಂ ॥ ೬೧ ॥

ವಿಧುವಂ ನೋಂಪೆವಲಂಪುವೆತ್ತೆಲರನಾರಾಧಿಪ್ಪೆವುದ್ಯತ್ಸುಮಾ
ಯುಧನಂ ಪೂಜಿಪೆವಚ್ಛಪುಷ್ಪಋತುವಂ ಕೀರ್ತಿಪ್ಪೆವಾರಾಜಿಪಾ।
ಮಧುವಂ ಪಾಡುವೆವುಲ್ಲಸದ್ರತಿಯನೊಳ್ಪಿಂದೈದೆ ಬಣ್ಣಿಪ್ಪೆವೀ
ವಧುವಿಂಗುರ್ವಿದ ಬೇಗೆ ಮೈದೆಗೆದೊಡೆಂದಾಡಿತಾಳೀಕುಳಂ ॥ ೬೨ ॥

ಮೊರೆಯುವ ತುಂಬಿ ಬಾಧೆಯಾಯಿತು, ಹಂಸೆ ಹಿಂಸೆಯಾಯಿತು, ತಂಗಾಳಿ ವಿಷಗಾಳಿಯಾಯಿತು, ಚಿಗುರಿನ ಮನೆ ಮೇಲೆತ್ತಿದ ಮೋಹವಾಯಿತು, ಬಾಳೆಯ ಕಣ್ಣೆಳಲು ತುಂಬಿದ ಕಣ್ಣುಗಳಾದುವು, ಅಂದವಾದ ಬೆಳದಿಂಗಳು ಬೆಂಕಿಯಾಯಿತು ಎಂದು ಸ್ತ್ರೀಯರ ಬಳಗವು ಅತಿಯಾಗಿ ನೊಂದಿತು. ೫೯. ಕಾಮತಾಪದಿಂದ ಬೇಯುತ್ತಿರುವ ಈ ಸ್ತ್ರೀಗೆ ಚಂದ್ರನ ಕಿರಣಗಳು ಸೂರ್ಯನ ಕಿರಣಗಳಾದುವು. ಮಧುರವಾದ ಶ್ರೀಗಂಧದ ರಸವು ಉಕ್ಕುವ ಎಣ್ಣೆಯಂತಾಯಿತು, ಹೂವಿನ ಹಾಸುಹರಿತವಾದ ಆಯುಧಗಳ ಸಮೂಹವಾಯಿತು, ಬೀಸುವ ತಂಗಾಳಿ ಬಿಸಿಗಾಳಿಯಾಯಿತು ಎಂದು ಅವರು ದುಃಖಿಸಿದರು. ೬೦. ಅಯ್ಯೋ ಈ ವೇಳೆಯಲ್ಲಿ ನಡಿಗೆಯಲ್ಲಿ ರಾಜಹಂಸಗಳು, ನುಡಿಯಲ್ಲಿ ಚೆನ್ನಾಗಿ ಶೋಭಿಸುವ ಕೆಂಪನೆಯ ಕೊಕ್ಕುಳ್ಳ ಗಿಳಿಗಳು, ಬಾಗಿದ ಮುಂಗುರುಳುಗಳೊಡನೆ ದುಂಬಿಗಳು ಆಹ್ಲಾದಕರ ನಾದದೊಡನೆ ಕೋಗಿಲೆಗಳು ಸೆಣಸಲೆಂದು ಬಂದುವೋ ಎನ್ನುವಂತಿದೆ ನೋಡು ತಂಗಿ ಎಂದು ನುಡಿಯುತ್ತ ಕಾಂತೆಯರ ಸಮೂಹ ಬಂದಿತು. ೬೧. ಎಳೆಯ ಕಮಲವನ್ನು ಮುಖದಲ್ಲಿ, ಕನ್ನೈದಿಲೆಯನ್ನು ಕಣ್ಣಿನಲ್ಲಿ, ಮಲ್ಲಿಗೆಯನ್ನು ಮುಗುಳ್ನಗೆಯಲ್ಲಿ, ಅಶೋಕ ಹಾಗೂ ಮಾವಿನ ಎಳೆಯ ಚಿಗುರನ್ನು ಅಂಗೈಯಲ್ಲಿ ಹೊಂದಿರಲು ಈ ಕನ್ಯಾಮಣಿಯ ಮೇಲೆ ವಿಚಾರಮಾಡದೆ ಮನ್ಮಥನು ಗರ್ಜಿಸಿ ಬಾಣ ಪ್ರಯೋಗಿಸಲು ಅವನ ಪಂಚಬಾಣಗಳು ಮೈಯನ್ನೆಲ್ಲಾ ಕವಿದುವು ಎಂದು ಸ್ತ್ರೀ ಸಮೂಹವು ನುಡಿಯಿತು. ೬೨. ಈ ಸುಂದರಿಗೆ ಹರಡಿರುವ ವಿರಹಜ್ವಾಲೆ ನಿವಾರಣೆಯಾದರೆ ಚಂದ್ರನನ್ನು ಕುರಿತು ವ್ರತ ತೊಡುವೆವು. ಮೇಲ್ಮೆಯಿಂದ ಕೂಡಿದ ತಂಗಾಳಿಯನ್ನು ಆರಾಧಿಸುವೆವು.

6

ಶಶಿಯೇ ನಿಟ್ಟಿಸು ಪುಷ್ಪಬಾಣದರಸೇ ಕೈಗಾಯಿ ತಂಗಾಳಿಯೇ
ಪೊಸತಣ್ಪೇ ಕಮನೀಯಮಾಧವನೆ ಕೂರ್ಪಿಂದೋವು ಮತ್ತಂ ವಿಚಾ।
ರಿಸಿಕೊಂಡಿಂದು ನೆಗಟ್ಟು ಕಂಠದುಲುಪಂ ಕೀರಾಳಿಯೇ ಯೆಂದು ಚಿಂ
ತಿಸುತುಂ ತದ್ವನಿತಾಕದಂಬವಟಿಲುತ್ತಿರ್ದತ್ತು ತಾಂ ಖೇದದಿಂ ॥ ೬೩ ॥

ಏಗುವುದೇ ಕುಮಾರಿಕೆಯನಪ್ಪಿದ ದರ್ಪಕವಹ್ನಿಯಗ್ಗದೀ
ಬೇಗೆ ಯೆನಿತ್ತೆನಿತ್ತುಶಿಶಿರಾಧಿಕಮಾದುಪಚಾರದೊಳ್ವನಿಂ।
ಬಾಗಿರೆ ಮಾಟ್ಪೆವಿಂದನಿತುತಾಪಮದುರ್ವಿಸುತಿರ್ಪುದೇನಿದೆಂ
ದಾಗಲಟಲ್ದು ಕಂದಿ ಬಗೆಗುಂದಿ ಬಟಲ್ದುದು ತತ್ಸಖೀಜನಂ ॥ ೬೪ ॥

ಎಂದಿಂತಟಲ್ದು ಚಿಂತೆವಡೆದು ಸೌಂದರವತಿಗೆ ಶಿಶಿರೋಪಚಾರಮನಗಲದೆ ನೆಗಟ್ಟುತುಂ ಶಶಿಲೇಖೆ ಮೊದಲಾದ ಸಖೀಜನಮಿರಲಾ ಸಮಯದೊಳ್ತತ್ಸರಸೀಮಧ್ಯದಲ್ಲಿ ಗಿಳಿ ತಲೆದೋಱಿದುದು॥

ಅದೆಂತೆಂದೊಡೆ,

ತಾವರೆಗಳೆಡೆಯೊಳೊಪ್ಪುವ
ಶೈವಾಳದ ಪಿಂಡದಂತೆ ತಲೆದೋಱಿದುದಾ।
ಭಾವುಕಿಯರೀಕ್ಷಿಸುತ್ತಿರೆ
ತೀವಿದ ಮುದದಿಂದೆ ತತ್ಸರಸಿಯೊಳ್ಕೀರಂ ॥ ೬೫ ॥

ಇಂತಾಕಸ್ಮಿಕದಿಂದಾಕಾಸಾರಮಧ್ಯದಲ್ಲಿ ತಲೆದೋರ್ಪಶುಕಗಿಳಿಯಿರವಲ್ಲಿ ಸೌಂದರವತಿಗೆ ಶಿಶಿರೋಪಚಾರಮಂ ಮಾಟ್ಪ ಶಶಿಲೇಖೆ ಮೊದಲಾದ ಸಖೀಜನಂ ನಡೆನೋಡುತ್ತಚ್ಚರಿದಳೆದಿರೆ,

ಗಿಳಿಯನ್ನು ಪೂಜಿಸುವೆವು. ವಸಂತ ಋತುವನ್ನು ಸ್ತುತಿಸುವೆವು. ಶೋಭಿಸುವ ದುಂಬಿಯನ್ನು ಹಾಡಿಹೊಗಳುವೆವು. ಉಲ್ಲಾಸಯುಕ್ತಳಾದ ರತಿಯನ್ನು ಚೆನ್ನಾಗಿ ಅತಿಶಯವಾಗಿ ವರ್ಣಿಸುವೆವು ಎಂದು ಆ ಸ್ತ್ರೀ ಬಳಗವು ನುಡಿಯಿತು. ೬೩. ಆ ಸ್ತ್ರೀ ಸಮೂಹವು ಚಂದ್ರನೇ ಗಮನಿಸು, ಹೂಬಾಣದೊಡೆಯನೇ ರಕ್ಷಿಸು, ತಂಗಾಳಿಯೇ, ತಂಪೇ, ಸೌಂದರ್ಯದಧಿಪತಿಯೇ ಪ್ರೀತಿಯಿಂದ ಕಾಪಾಡುವುದು, ಹಾಗೆಯೇ ಗಿಳಿಗಳ ಸಮೂಹವೇ ವಿಚಾರಿಸಿಕೊಂಡು ಕಂಠಧ್ವನಿಯನ್ನು ಮಾಡು ಎಂದು ಚಿಂತಿಸುತ್ತಾ ದುಃಖದಿಂದ ರೋದಿಸಿತು. ೬೪. ಆ ಸಖೀಜನರು ಏನು ಮಾಡುವುದು ಈ ಕುಮಾರಿಯನ್ನು ಅಪ್ಪಿದ ಮನ್ಮಥ ಜ್ವಾಲೆಯ ಈ ಉರಿ ತಗ್ಗುತ್ತಲೇ ಇಲ್ಲವಲ್ಲ. ಎಷ್ಟೆಷ್ಟು ಶೈತ್ಯೋಪಚಾರವನ್ನು ಮಾಡುವೆವೊ ಅಷ್ಟಷ್ಟು ತೀವ್ರವಾಗುತ್ತಿದೆಯಲ್ಲ ; ಏನಿದು ಎಂದು ಬಾಡಿ ಮನ ಮುದುಡಿ ಬಳಲಿ ಗೋಳಿಟ್ಟರು. ವ॥ ಹೀಗೆ ರೋದಿಸಿ ದುಃಖಪಟ್ಟು ಸೌಂದರವತಿಗೆ ಶಿಶಿರೋಪಚಾರವನ್ನು ಅಗಲದೆ ಮಾಡುತ್ತ ಶಶಿಲೇಖೆಯೇ ಮೊದಲಾದ ಸಖೀಜನರಿರಲು ಆ ಸಮಯದಲ್ಲಿ ಆ ಕೊಳದ ಮಧ್ಯದಿಂದ ಗಿಳಿ ಕಾಣಿಸಿಕೊಂಡಿತು. ಅದು ಹೇಗೆಂದರೆ, ೬೫. ಸುಂದರಿಯರು ನೋಡುತ್ತಿರಲು ಆ ಕೊಳದಿಂದ ಮೈದುಂಬಿದ ಆನಂದದಿಂದ ಆ ಗಿಳಿಯು ತಾವರೆಗಳ ನಡುವೆ ಶೋಭಿಸುವ ಪಾಚಿಯ ಮೊತ್ತದಂತೆ ಕಾಣಿಸಿಕೊಂಡಿತು. ವ॥ ಹೀಗೆ ದಿಢೀರನೆ ಆ ಕೊಳದ ಮಧ್ಯಭಾಗದಿಂದ ಕಾಣಿಸಿಕೊಂಡ ಅರಗಿಳಿಯನ್ನು ಸೌಂದರವತಿಗೆ

ಬೆಚ್ಚಿ ನಿರೀಕ್ಷಿಸಿ ತದ್ವನಮಂ ಮೇ
ಣಚ್ಚರಿವಟ್ಟುದು ಚೋದ್ಯಮೆನುತ್ತುಂ।
ಬೆಚ್ಚರಮಾಕಮಲಾಕರದಿಂ ತೋ
ರ್ಪುಚ್ಚವದಿಂ ಪೊಱಮಟ್ಟುದು ಕೀರಂ ॥ ೬೬ ॥

ಎಲ್ಲಿ ಮುೞುಂಗಿದೆನಲ್ಲಿರದೆಬ್ಬಾ
ನಿಲ್ಲಿ ಮದೀಯವನಕ್ಕಿದೆ ಬಂದೆಂ।
ಬಲ್ಲಿತು ದೇವಿಯ ಮಾಯೆಯೆನುತ್ತುಂ
ಮೆಲ್ಲನೆ ನಿಟ್ಟಿಸಿ ನೋಡಿತ್ತಾಗಳ್ ॥ ೬೭ ॥

ನೋಡೆ ಸರೋವರತಟದೊ
ಳ್ನೀಡುಂ ಖೇದದೊಳೆ ತಣ್ಪುಪಚಾರಮನಾ।
ನಾಡೆಱಿಯನ ತನುಜಾತೆಗೆ
ಮಾಡುವ ಕೆಳದಿಯರನಂದು ಕಂಡುದು ಕೀರಂ ॥ ೬೮ ॥

ಇಂತು ಸೌಂದರವತಿಗೆ ಶಿಶಿರೋಪಚಾರಮಂ ಮಾಟ್ಟಿ ಸಖೀಜನಮಂ ಕಂಡಿದೇನೆನುತ್ತಚ್ಚರಿವಟ್ಟೊಯ್ಯನೆಟ್ಟಿಂದು ತಣ್ಪಮರ್ದಪೂವಸೆಯಂ ಸಾರ್ದಾತಾಮ್ರತುಂಡಂ ಮದನಾವಸ್ಥೆಯಿಂದಂ ಮೂರ್ಛೆವೋಗಿ ಮೈಮಱಿದೊಱಗಿರ್ಪ ತತ್ಕುಮಾರಿಯಂ ಕಂಡು ನುಡಿದುದು॥

ಅದೆಂತೆಂದೊಡೆ,

ಸತಿ ನಿನಗೆಣೆಯಾದುತ್ತಮ
ಪತಿಯಂ ಬಿಡದಱಿಸಿ ತಂದೆನೇೞಿನೆ ಶುಕವಾ।
ಕ್ಪತತಿಯನಾಲಿಸಿ ಸೌಂದರ
ವತಿ ಮತ್ತಂ ಮೂರ್ಛೆವೋಗಿ ಮೌನದೊಳಿರ್ದಳ್ ॥ ೬೯ ॥

ಶೈತ್ಯೋಪಚಾರವನ್ನು ಮಾಡುತ್ತಿದ್ದ ಶಶಿಲೇಖೆಯೇ ಮೊದಲಾದ ಸಖೀಜನರು ಚೆನ್ನಾಗಿ ನೋಡಿ ಆಶ್ಚರ್ಯಪರವಶರಾಗಿರಲು, ೬೬. ಆ ಕೊಳವನ್ನು ನೋಡಿ ಬೆಚ್ಚಿ ಇದು ಆಶ್ಚರ್ಯವೆನ್ನುತ್ತಾ ಬೆರಗುಗೊಂಡಿರಲು ಬೇಗನೆ ಆ ತಾವರೆಯ ಕೊಳದಿಂದ ಸಂಭ್ರಮದಿಂದ ಗಿಳಿಯು ಹೊರಬಂದಿತು. ೬೭. ಉದ್ಭಟನಲ್ಲಿರದೆ ಬಂದ ನಾನು ಎಲ್ಲಿ ಮುಳುಗಿದೆ? ಈ ಕೊಳಕ್ಕೆ ಹೇಗೆ ಬಂದೆ? ದೇವಿಯ ಮಾಯೆ ಅತಿಶಯವಾದುದು ಎನ್ನುತ್ತ ಆಗ ಮೆಲ್ಲನೆ ಕಣ್ತೆರೆದು ನೋಡಿತು. ೬೮. ಹಾಗೆ ನೋಡಲು ಸರೋವರದ ದಡದಲ್ಲಿ ತೀವ್ರವಾದ ದುಃಖದಿಂದ ಆ ಮಹಾರಾಜಕುಮಾರಿಗೆ ಶೈತ್ಯೋಪಚಾರವನ್ನು ಮಾಡುತ್ತಿರುವ ಗೆಳತಿಯರನ್ನು ಗಿಳಿಯು ನೋಡಿತು. ವ॥ ಹೀಗೆ ಸೌಂದರವತಿಗೆ ಶೈತ್ಯೋಪಚಾರವನ್ನು ಮಾಡುವ ಸಖೀಜನರನ್ನು ನೋಡಿ ಇದೇನೆಂದು ಆಶ್ಚರ್ಯಪಟ್ಟು ಮೆಲ್ಲನೆ ಬಂದು ತಂಪಾದ ಹೂವಿನ ಹಾಸುಗೆಯನ್ನು ಸಮೀಪಿಸಿದ ಆ ಗಿಳಿಯು ಮನ್ಮಥಲೀಲೆಯಿಂದಾಗಿ ಮೂರ್ಛೆಹೋಗಿ ಮೈಮರೆತು ಒರಗಿದ್ದ ಆ ಕುಮಾರಿಯನ್ನು ಕಂಡು ನುಡಿಯಿತು. ಅದು ಹೇಗೆಂದರೆ, ೬೯. ಎಲೆ ಹೆಣ್ಣೆ, ನಿನಗೆ ಸಮನಾದ ಯೋಗ್ಯವರನನ್ನು ಬಿಡದೆ ಹುಡುಕಿ ತಂದಿರುವೆನು. ಏಳು ಎನ್ನಲು, ಆ ಗಿಳಿಯ ಮಾತನ್ನು ಕೇಳಿದ ಸೌಂದರವತಿಯು ಮತ್ತೆ ಮೂರ್ಛೆಹೋಗಿ

ಕೂಪನೆನಿಪ್ಪ ರಾಜಶುಕನೊಳ್ನುಡಿಗುತ್ತರಮೀಯದಂದು ತ
ಚ್ಚಾಪಲನೇತ್ರೆ ಬಿನ್ನಗಿರಲಾಳಿಯರಂ ನಡೆನೋಡಿ ಪೆರ್ಚಿದೀ।
ತಾಪಮದಾವ ಕಾರಣದೆ ಬಂದುದು ಮತ್ಸಖಿಗೆಂದು ಕೇಳಲಾ
ಲಾಪಿಸಿದಳ್ಕರಂ ಮಱುಗುತುಂ ಶಶಿಲೇಖೆಯಬಿಲ್ದು ಸುಯ್ವುತುಂ ॥ ೭೦ ॥

ಗಂಡುಪಂಡಿತವಕ್ಕಿ ಕೇಳ್ಕಮಲಾಯತಾಂಬಕೆ ಲೀಲೆಯಿಂ
ಚಂಡಿಕಾಲಯಕ್ಕೆದೆ ಕೂರ್ತು ತದೀಯದೇಗುಲಮಂ ಬಲಂ।
ಗೊಂಡು ತಾಂ ಬರಲೊಂದಶೋಕೆಯನಂದು ನೆಮ್ಮಿ ನವೇಕ್ಷುಕೋ
ದಂಡಸನ್ನಿಭನೊರ್ವನೊಪ್ಪಿರಲ್ಕೆದೆ ನಿಟ್ಟಿಸಿ ನೋಡಿದಳ್ ॥ ೭೧ ॥

ನೋಡಿ ತದುರ್ವಿಪಚಂದ್ರನ ರೂಪಂ
ಕೂಡೆ ಲತಾಂತಶರಾವಳಿಗೆತ್ತಂ।
ಗೂಡಿವಳಾಗಿ ವಲಂ ಕೊಱಗುತ್ತುಂ
ಪಾಡಟಿದಳ್ಮಿಗೆ ಕೇಳ್ಶುಕರಾಜಾ ॥ ೭೨ ॥

ಎಂದಿಂತು ಕಂದರ್ಪತಾಪಮಮರ್ದಪ್ಪಿದ ಕಾರಣಮಂ ಪೇಟ್ವ ಶಶಿಲೇಖೆಯ ವಚನಮಂ ಕೇಳ್ದಾನಂದಮಂ ತಾಳ್ದಾಶುಕಂ ಮಗುಟ್ದಿವಳ್ಗಿಂತೆಂದುದು॥

ಅದೆಂತೆಂದೊಡೆ,

ಕಂಡಳೆ ಚಂದ್ರಶೇಖರನ ಭಕ್ತನನುರ್ವಿಗೆ ನೂತ್ನಪುಷ್ಪಕೋ
ದಂಡನನ್ಯೆಂದವಾನ್ವಯಲಲಾಮನನುದ್ಭಸಮಸ್ತ ಸತ್ಕಲಾ।
ಮಂಡಿತನಂ ವದಾನ್ಯವರನಂ ರಿಪುರಾಜಮದಾಂಧಕಾರಮಾ
ರ್ತಾಂಡನನುದ್ಭಟಕ್ಷಿತಿಪಚಂದ್ರನನೆಂದುದು ಕಾಂತೆಯೊಳ್ ಶುಕಂ ॥ ೭೩ ॥

ಮೌನದಿಂದಿದ್ದಳು. ೭೦. ಪ್ರಿಯನೆನ್ನಿಸಿದ ರಾಜಗಿಳಿಯ ಒಳ್ಳೆಯ ಮಾತುಗಳಿಗೆ ಉತ್ತರ ಕೊಡದೆ ಅಂದು ಆ ಚಂಚಲಾಕ್ಷಿಯು ಮೌನದಿಂದಿರಲು ಗೆಳತಿಯರನ್ನು ಚೆನ್ನಾಗಿ ನೋಡಿ ಹೆಚ್ಚಿದ ಈ ತಾಪವು ಅದಾವ ಕಾರಣದಿಂದ ನನ್ನ ಸಖಿಗೆ ಬಂದಿತು ಎಂದು ಕೇಳಲು ಶಶಿಲೇಖೆಯು ವಿಶೇಷವಾಗಿ ದುಃಖಿಸುತ್ತಾ ನಿಟ್ಟುಸಿರುಬಿಡುತ್ತಾ ಕಣ್ಣೀರ್ಗರೆಯುತ್ತ ಹೇಳತೊಡಗಿದಳು. ೭೧. ಬಲಿಷ್ಟನಾದ ಅರಗಿಳಿಯೇ ಕೇಳು, ನೀಳವಾದ ಕಮಲದಂತಹ ಕಣ್ಣುಳ್ಳ ಸೌಂದರವತಿಯು ಸಂಭ್ರಮದಿಂದ ಚಂಡಿಕಾಮಾತೆಯ ದೇವಾಲಯಕ್ಕೆ ಹೋಗಿ ಪ್ರೀತಿಯಿಂದ ಆ ದೇವಾಲಯವನ್ನು ಪ್ರದಕ್ಷಿಣೆ ಹಾಕಿ ಬರುತ್ತಿರಲು ಅಶೋಕ ವೃಕ್ಷವೊಂದನ್ನು ಆಲಂಬಿಸಿ ನವಮನ್ಮಥನಂತೆ ಒರ್ವನು ಶೋಭಿಸಿರಲು (ಅವನನ್ನು) ಚೆನ್ನಾಗಿ ನಿಟ್ಟಿಸಿ ನೋಡಿದಳು. ೭೨. ಕೇಳು ಶುಕರಾಜ ಹಾಗೆ ನೋಡಿ, ಆ ಮಹಾರಾಜಚಂದ್ರಮನ ರೂಪವು ಆ ಕ್ಷಣವೇ ಮನ್ಮಥನ ಪುಷ್ಪಬಾಣದಿಂದ ಇವಳನ್ನು ಸೂರೆಗೊಳ್ಳಲು ಕೊರಗುತ್ತ ಅತಿಶಯವಾಗಿ ಮೂರ್ಛೆಹೋದಳು. ವ॥ ಹೀಗೆ ಹೇಳಿ, ಕಾಮತಾಪವನ್ನು ಚೆನ್ನಾಗಿ ಆಲಂಗಿಸಿದ ಕಾರಣವನ್ನು ತಿಳಿಸುವ ಶಶಿಲೇಖೆಯ ಮಾತನ್ನು ಕೇಳಿ ಆನಂದಹೊಂದಿ, ಆ ಗಿಳಿಯು ಮತ್ತೆ ಅವಳಿಗೆ ಹೀಗೆಂದಿತು. ಅದು ಹೇಗೆಂದರೆ, ೭೩. ಶಿವನ ಭಕ್ತನೂ, ಲೋಕಕ್ಕೆ ನವಮನ್ಮಥನೂ, ಚಂದ್ರವಂಶಕ್ಕೆ ತಿಲಕಪ್ರಾಯನೂ, ಶ್ರೇಷ್ಠವಾದ ಸಕಲಕಲೆಗಳಲ್ಲಿ

ಎಂದಿಂತುದ್ಭಟಕ್ಷಿತೀಂದ್ರಚಂದ್ರಮನಂ ಪೆಸರ್ಗೊಂಡು ಕೊಂಡಾಡಿ ಪೇೞ್ವತಚ್ಛುಕಾಲಾಪಮಂ ಕೇಳ್ದಂಗಜಾಸ್ತ್ರಂಗಳಿಂದತನುತಾಪಂಗೊಳ್ವ ಸೌಂದರವತಿಗಾವರಿಸಿದ ಮೂರ್ಛೆಜಗುೞ್ದು ಸಪ್ರಾಣಿಸಿಕೊಂಡು ಕಣ್ದೆಱೆದು ನಾಣ್ಚೆರಸುತೆ ತದ್ರಾಜಕೀರನ ಮೊಗಮಂ ನೋಡೆ,

ಏೞಲೆ ಸೌಂದರವತಿ ನೀಂ
ಕೇಳು ಭವದ್ವಾಂಛಿತಾರ್ಥಮಾದುದೆನಲ್ಕೀ।
ರಾಳಾಪಮನಾಲಿಸಿ ತ
ದ್ಬಾಲಿಕೆ ಮೈಮುಱಿವುತೆರ್ದು ಕುಳ್ಳಿರ್ದಾಗಳ್ ॥ ೭೪ ॥

ಯಲ್ಲಕಂ ಜಗುಟಿಲ್ಕುಮಾರಿಕೆ ಯೆೞ್ದು ಮೆಣ್ಮಶಿಲೇಖೆಯಂ
ಮೆಲ್ಲನಂಚಿತಲಜ್ಜೆಯಿಂ ನಡೆನೋಡಲಾಕೆಯಭಾವಮಂ।
ತಲ್ಲತಾಂಗಿ ಸಮಂತು ತಾಂ ತಿಳಿದಾಶುಕೇಂದ್ರನ ವಕ್ತ್ರಮಂ
ಫುಲ್ಲಮೋದದಿನಲ್ಪಹಾಸವಿಭಾಸುರಾನನೆ ನೋಡಿದಳ್ ॥ ೭೫ ॥

ನೋಡುತೆ ತಚ್ಛುಕಮುಖಮಂ
ನೀಡುಂ ಮುದದಿಂದೆ ಗಿಳಿಯೆ ಪೇೞೆಮಗಂತಾ।
ನಾಡೆಱೆಯನ ನೀನಱಿದವೊ
ಲಾಡುವೆ ಯದಱಿನುವನಂದವಳ್ಬೆಸಗೊಂಡಳ್ ॥ ೭೬ ॥

ಇಂತು ಶಶಿಲೇಖೆ ಬೆಸಗೊಳೆ
ತಾಂ ತಳ್ವದೆ ಕಾಕತಾಳಿಕನ್ಯಾಯದಿನಾ।
ಸಂತನನುದ್ಭಟಧರಣೀ
ಕಾಂತನನಱಿದನುವುಸಿರಲ್ಕವಳಿಂತೆಂದಳ್ ॥ ೭೭ ॥

ಪಾರಂಗತನೂ, ಕೊಡುಗೈದಾನಿಯೂ, ಶತ್ರುಗಳ ಮದವೆಂಬ ಕತ್ತಲೆಗೆ ಸೂರ್ಯನಂತಿರು-ವವನೂ ಆದ ಉದ್ಭಟರಾಜಚಂದ್ರಮನನ್ನು ಕಂಡಳೆ? ಎಂದು ಆ ಸ್ತ್ರೀಯರನ್ನು ಗಿಳಿಯು ಕೇಳಿತು. ವ॥ ಹೀಗೆ ಉದ್ಭಟ ಮಹಾರಾಜಚಂದ್ರಮನ ಹೆಸರು ಹೇಳುತ್ತಾ ಅವನನ್ನು ಬಾಯ್ತುಂಬ ಹೊಗಳುವ ಆ ಗಿಳಿಯ ಮಾತನ್ನು ಕೇಳಿ ಮನ್ಮಥ ಬಾಣಗಳಿಂದ ಮದನಾವಸ್ಥೆಗೇರಿ ಸೌಂದರವತಿಯನ್ನು ಆವರಿಸಿದ ಮೂರ್ಛೆಯು ಜಾರಿ (ಆಕೆ) ಎಚ್ಚರಗೊಂಡು ಕಣ್ಣು ತೆರೆದು ನಾಚಿಕೆಗೂಡಿ ಆ ಅರಗಿಳಿಯ ಮುಖವನ್ನು ನೋಡಲು, ೭೪. ಎಲೆ ಸೌಂದವತಿಯೆ ಮೇಲೇಳು, ನಿನ್ನ ಆಶೆಯು ಈಡೇರಿತು ಎನ್ನಲು ಗಿಳಿಯ ಮಾತನ್ನು ಕೇಳಿ ಆ ಬಾಲಕಿ ಮೈಮುರಿಯುತ್ತ ಎದ್ದು ಕುಳಿತಳು. ೭೫. ಜಡತ್ವವು ಸರಿದು ಆ ಕುಮಾರಿಯು ಮೇಲೆದ್ದು ಶಶಿಲೇಖೆಯನ್ನು ಮೆಲ್ಲನೆ ಲಜ್ಜೆಗೂಡಿ ಚೆನ್ನಾಗಿ ನೋಡಲು, ಆಕೆಯ ಭಾವವನ್ನು ಶಶಿಲೇಖೆಯು ಚೆನ್ನಾಗಿ ಗ್ರಹಿಸಿ, ಆ ಗಿಳಿಯ ಮುಖವನ್ನು ಮಂದಹಾಸದಿಂದ ಕಾಂತಿಪೂರ್ಣಳಾದ ಆಕೆಯು ಅತ್ಯಾನಂದದಿಂದ ನೋಡಿದಳು. ೭೬. ಆ ಗಿಳಿಯ ಮುಖವನ್ನು ಅತ್ಯಾನಂದದಿಂದ ನೋಡುತ್ತ "ಎಲೆ ಗಿಳಿಯೆ, ಆ ಮಹಾರಾಜನ ಬಗೆಗೆ ನೀನು ತಿಳಿದಿರುವಂತೆ ವರ್ತಿಸುತ್ತಿರುವೆ ಅದನ್ನು ನಮಗೂ ಹೇಳುವವನಾಗು" ಎಂದು ಅವಳು ಕೇಳಿದಳು. ೭೭. ಹೀಗೆ ಶಶಿಲೇಖೆಯು ಕೇಳಲು, ಗಿಳಿಯು ತಡಮಾಡದೆ ಕಾಕತಾಳೀಯ ನ್ಯಾಯದಂತೆ ಪೂಜ್ಯನಾದ ಉದ್ಭಟಮಹಾರಾಜನ

ಎಲೆ ಗಿಳಿಯೆ ಪೇೞ್ದುರ್ವಿಪ
ತಿಲಕನದೇಂ ಕಾರಣಂ ಮದೀಯಾಶೋಕೋ।
ಜ್ವಳವನಕೆಯ್ತಂದನೆನಲ್
ಲಲನೆಯೊಳಿಂತೆಂದುದೊಯ್ಯನಂತಾಕೀರಂ ॥ ೭೮ ॥

ಹರಿಣಾಕ್ಷಿ ಕೇಳ್ದುರ್ವಿಪ
ವರನಂ ಸೌಂದರಿಗೆ ತಕ್ಕವಲ್ಲಭನೆಂದಾಂ।
ಕರೆತಂದಾಬನದೊಳಗೊ
ಲ್ದಿರಿಸಿದೆನೆಂದೆನಲವಳ್ಮಗುೞ್ದಿಂತೆಂದಳ್ ॥ ೭೯ ॥

ವಿನುತಶುಕನೆ ತತ್‌ಕ್ಷೋಣೀಶನನಂತಂದು ನೀನಾ
ವನದೊಳಿರಿಸಿ ಯತ್ತಲ್ಪೋಗಿ ತಳ್ವಿರ್ದೆ ಪೇೞಿಂ।
ದೆನಲಲೆಲೆವನಿತಾಮಾಣಿಕ್ಯಮೇ ಕೇಳ್ಕರಂ ಮ
ತ್ತೆನಗೆ ಸಮನಿಸಿತ್ತಾಯಾಸಮೆಂದೆಂದುದಾಗಳ್ ॥ ೮೦ ॥

ಅದೆಂತೆಂದೊಡೆ,

ಬಿಸರುಹಲೋಚನೆ ಕೇಳ್ತ
ದ್ವಸುಧೇಶನನಸುಗೆಬನದೊಳೆಸೆದಿರಿಸಿ ಸಮಂ।
ತೊಸಗೆಯನಾಂ ತಾಂ ಕಡು ಸಂ
ತಸದಿಂದೀಪಟ್ಟಣಕ್ಕೆ ಬರುತಿರ್ಪೆಡೆಯೊಳ್ ॥ ೮೧ ॥

ಬಲವದ್ವೃಕ್ಷಮನೊತ್ತಿ ಪಾಯ್ದು ಕೆಡಪುತ್ತುಂ ಶರ್ಕರಾಶ್ಮಂಗಳಂ
ಸಲೆ ತೂೞುತ್ತುಮಶೇಷಶೋಭಿತಪಲಾಶಾನೀಕಮಂ ತಾಳ್ದಗುಂ।
ದಲೆಯಾಗಲ್ನಭಕುಣ್ಮಿ ಸುತ್ತೆ ರಜಮಂ ದಿಕ್ಚಕ್ರಮಂ ಮುರ್ಚಿ ವ
ರ್ಷಲವಂಗೂಡಿ ಪಳಂಚಿ ಪೆರ್ಚಿ ಸುೞಿದತ್ತಂದೊಂದು ಜಂಝಾನಿಲಂ ॥ ೮೨ ॥

ಬಗೆಗೆ ತಾನು ತಿಳಿದುದನ್ನು ಹೇಳಲು ಅವಳು ಹೀಗೆಂದಳು. ೭೮. "ಎಲೆ ಗಿಳಿಯೆ, ಭೂತಿಲಕನು ಅದೇನು ಕಾರಣ ನಮ್ಮ ಈ ಸುಂದರವಾದ ಅಶೋಕವನಕ್ಕೆ ಬಂದನು?" ಎನ್ನಲು, ಶಶಿಲೇಖೆಯೊಡನೆ ಮೆಲ್ಲನೆ ಗಿಳಿಯು ಹೀಗೆಂದಿತು. ೭೯. "ಚಂಚಲಾಕ್ಷಿಯೇ ಕೇಳು, ಆ ಮಹಾರಾಜನು ಸೌಂದರವತಿಗೆ ಯೋಗ್ಯನಾದ ಪತಿಯೆಂದು ಭಾವಿಸಿ ನಾನು ಅವನನ್ನು ಕರೆತಂದು ಆ ವನದೊಳಗೆ ಪ್ರೀತಿಪಟ್ಟು ಇರಿಸಿದೆನು" ಎನ್ನಲು, ಅವಳು ಮತ್ತೆ ಹೀಗೆಂದಳು. ೮೦. ಹೊಗಳಲ್ಪಡುವ ಗಿಳಿಯೆ, ಮಹಾರಾಜನನ್ನು ಕರೆದುತಂದು ಆ ವನದಲ್ಲಿ ಇರಿಸಿದ ನೀನು ಎತ್ತಹೋದೆ? ತಡವಾಯಿತೇಕೆ? ಹೇಳು ಎನ್ನಲು (ಅದಕ್ಕೆ ಗಿಳಿಯು) ಎಲೆ ವನಿತಾ ಮಾಣಿಕ್ಯವೇ ಚೆನ್ನಾಗಿ ಕೇಳು, ನನಗೆ ಆಯಾಸ ಪ್ರಾಪ್ತಿಯಾಯಿತು ಎಂದಿತು. ವ॥ ಅದು ಹೇಗೆಂದರೆ, ೮೧. ಕಮಲನೇತ್ರೆಯೆ ಕೇಳು, ಆ ಮಹಾರಾಜನನ್ನು ಅಶೋಕವನದಲ್ಲಿ ಪ್ರೀತಿಯಿಂದ ಇರಿಸಿ ಆ ಸಂತಸದ ಸುದ್ದಿಯನ್ನು ಹೇಳಲು ನಾನು ಅತ್ಯಾನಂದದಿಂದ ಈ ಪಟ್ಟಣಕ್ಕೆ ಬರುತ್ತಿರುವಾಗ, ೮೨. ಬಲವಾದ ಮರವನ್ನು ಬಲವಾಗಿ ತಾಗಿ ಕೆಡಹುತ್ತಾ ಸಣ್ಣ ಕಲ್ಲುಗಳನ್ನು ಚೆನ್ನಾಗಿ ತೂರುತ್ತ ಚೆನ್ನಾಗಿ ಶೋಭಿಸಿರುವ ಎಲೆಗಳನ್ನು

ಇಂತು ಕರಂ ಸುೞಿವಾಯೆಲರುರ್ಬಿಂ
ಗಾಂ ತವೆ ಸಿಲ್ಕಿದೊಡಾಘನವಾತಂ।
ತಾಂ ತಳೆದಬ್ಧಿಯತೀರದೊಳಂದೋ
ರಂತಿರೆ ತಂದು ವಿಸರ್ಜಿಸಿತೆನ್ನಂ ॥ ೮೩ ॥

ಗಾಳಿ ವಿಸರ್ಜಿಸೆ ಬೞಿಕಾಂ
ವೇಳೆಯೊಳಾಂ ಬಿರ್ದು ಮೆಲ್ಲನೀಕ್ಷಿಸೆ ತತ್ಕ।
ಲ್ಲೋಲಾಂಬುಧಿ ಯಿರೆ ಕಂಡುೞು
ಪೋಳಾದತ್ತೆನ್ನಹೃದಯಮದು ಲಲಿತಾಂಗಿ ॥ ೮೪ ॥

ಮತ್ತಮಾಸಮುದ್ರಮಂ ಕಂಡಾತಂಜವರನಿಕಟಕಾನತಿದೂರಂ ಬಂದೆನಿನ್ನೆಮ್ಮ ಪೊೞಲ್ಗೆ ಪೋಪೆನೆಂದೊಡೆ ಯಿಂದೈದಲಾರೆ ಯಿದಕ್ಕೇನಂ ಮಾೞ್ಪೆನೆಂದೞಲ್ದು ಬೞಲ್ದಧಿಕವ್ಯಾಕುಲದಿಂದಂ ನಾಲ್ದೆಸೆಯಂ ತೊೞಲ್ದು ಬರಲಖಿಲಾಂಡನಾಯಕೆಯಾಲಯಂ ಕಾಣಿಸಿತು॥

ಅದೆಂತೆಂದೊಡೆ,

ಭಕ್ತಿಯ ಬಲಗೈಯತುಳವಿ
ರಕ್ತಿಯ ಮನೆ ವಿಮಲಚಿತ್ತಿಸಾರವೆ ವಿಲಸ।
ನ್ಮುಕ್ತಿಯ ನೆಲೆ ಯೆನಲಾಪರ
ಶಕ್ತಿಯ ಮಣಿಭವನಮೆಸೆದುದೆಲೆ ಶಶಿವದನೆ ॥ ೮೫ ॥

ಈಪರಿಯಿಂದೆ ಮನಂಗೊಳಿ
ಪಾಪರದೇವತೆಯ ಗುಡಿಯನೊಳಪೊಕ್ಕುೞು ಚಿ।
ದ್ರೂಪಿಣಿಯಂ ಭುವನಾಂಬೆಯ
ನಾಪನ್ನಾಶ್ರಿತಸುಖಪ್ರದೆಯನಾಂ ಕಂಡೆಂ ॥ ೮೬ ॥

ಹೊಂದಿ ಅತಿಶಯವಾಗಿ ಆಕಾಶಕ್ಕೆ ಹಬ್ಬಿಸುತ್ತ ಧೂಳಿನಿಂದ ದಿಕ್ಚಕ್ರವನ್ನು ಕವಿಯುತ್ತ ಮಳೆಯ ಹನಿಗಳಿಂದ ಕೂಡಿದ ಬಿರುಗಾಳಿಯೊಂದು ರಭಸದಿಂದ ತಾಗುತ್ತಾ ಹೆಚ್ಚುತ್ತ ಕಾಣಿಸಿಕೊಂಡಿತು. ೮೩. ಹೀಗೆ ಚೆನ್ನಾಗಿ ಕಾಣಿಸಿಕೊಂಡ ಗಾಳಿಯ ಬಿರುಬೀಸಿಗೆ ನಾನು ಬಲವಾಗಿ ಸಿಕ್ಕಿ ಹಾಕಿಕೊಳ್ಳಲು ಆ ಬಿರುಗಾಳಿಯು ನನ್ನನ್ನು ಹೊತ್ತುಕೊಂಡು ಬಂದು ಸಮುದ್ರದ ತೀರದಲ್ಲಿ ಬಿಸಾಡಿತು. ೮೪. ಬಿರುಗಾಳಿಯು ನನ್ನನ್ನು ಬಿಟ್ಟುಹೋಗಲು ಕೆಳಗೆ ಬಿದ್ದಿದ್ದ ನಾನು ಅನಂತರ ಆ ವೇಳೆಯಲ್ಲಿ ಮೆಲ್ಲನೆ ಕಣ್ತೆರೆದು ನೋಡಲು ಆ ಸಮುದ್ರವು ನನ್ನೆದುರಿಗೆ ಕಾಣಿಸಿತು. ಅದನ್ನು ಕಂಡ ನನ್ನ ಹೃದಯವು ಸಿಡಿದು ಚೂರಾಯಿತು. ವ॥ ಮತ್ತೆ ಆ ಸಮುದ್ರವನ್ನು ನೋಡಿ [ನನ್ನ] ಬಂಧುಗಳಿಂದ ಬಹಳ ದೂರ ಬಂದಿರುವೆ ಇನ್ನು ನನ್ನ ಪುರಕ್ಕೆ ಹೋಗೋಣವೆಂದರೆ ಇಂದು ಮುಟ್ಟಲಾರೆ. ಇದಕ್ಕೆ ಏನು ಮಾಡಲಿ ಎಂದು ದುಃಖಿಸಿ ಆಯಾಸಗೊಂಡು, ಚಿಂತೆಯಿಂದ ನಾಲ್ಕು ದಿಕ್ಕುಗಳಲ್ಲಿ ಸುತ್ತಾಡಿ ಬರಲು ಬ್ರಹ್ಮಾಂಡನಾಯಕಿಯ ಆಲಯವು ಕಾಣಿಸಿತು. ಅದು ಹೇಗೆಂದರೆ, ೮೫. ಎಲೆ ಚಂದ್ರಮುಖಿ ಆ ಪರಶಕ್ತಿಯ ಮಣಿಭವನವು ಭಕ್ತಿಯ ಬಲಗೈ, ಅತಿವಿರಕ್ತಿಯ ಮನೆ, ಪರಿಶುದ್ಧಾಂತಃಕರಣದ ತೋಟ, ಶ್ರೇಷ್ಠವಾದ ಮುಕ್ತಿಯ ಆಶ್ರಯಸ್ಥಾನ ಎನ್ನಿಸಿ ಶೋಭಿಸಿತು. ೮೬. ಈ ರೀತಿಯಿಂದ

ಇಂತಾದೇವಿಯ ಕಂಡು ಪೊಗಟ್ದೆನದೆಂತೆಂದೊಡೆ,

ಶ್ರೀಮದನಂತಸುರಾಸುರಪೂಜಿತೆ
ಕಾಮಾಂತಕದೇಹಾರ್ಧವಿರಾಜಿತೆ।
ಸುರುಚಿರಬಾಲಸುಧಾಕರಭೂಷಣೆ
ಶರಣಾಗತದುಃಖಾಂಬುಧಿಶೋಷಣೆ ॥ ೮೭ ॥

ಪೂರ್ಣಹಿಮಾಂಶುಸದೃಙ್ಮುಖಮಂಡಲೆ
ಕರ್ಣಾರಂಜಿತಮಣಿಮಯಕುಂಡಲೆ।
ಚಂದ್ರಾದಿತ್ಯಹುತಾಶನಲೋಚನೆ
ತಂದ್ರಾಮೃತಿಜನನಾದಿವಿಮೋಚನೆ ॥ ೮೮ ॥

ನವಚಂದ್ರಾತಪನಿಭಮಂದಸ್ಮಿತೆ
ವಿವಿಧಾಗಮಶಾಸ್ತ್ರಾವಳಿಸಂಸ್ತುತೆ।
ತರುಣಾರುಣಶತಕೋಟಿರುಚಿಪ್ರಭೆ
ಪರಮಪವಿತ್ರೋತ್ತುಂಗಲಸಚ್ಛುಭೆ ॥ ೮೯ ॥

ಪೊಳೆವ ನವೀನಲಸದ್ಬಿಂಬಾಧರೆ
ನಳಿನಮುಕುಳವಿಜಿಗೀಷುಪಯೋಧರೆ।
ನಾನಾವಿಧಜನನಮರಣಭಂಜನೆ
ಸಾನಂದಂಬಿಡದಮರ್ದ ನಿರಂಜನೆ ॥ ೯೦ ॥

ಮನಸೆಳೆಯುವ ಆ ಪರದೇವತೆಯ ಗುಡಿಯ ಒಳಹೊಕ್ಕು ಚಿದ್ರೂಪಿಣಿಯನ್ನು, ಲೋಕಮಾತೆಯನ್ನು, ಭಕ್ತರ ಕಷ್ಟಗಳನ್ನು ಪರಿಹರಿಸಿ ಸುಖವನ್ನನುಗ್ರಹಿಸುವವಳನ್ನು ನಾನು ಚೆನ್ನಾಗಿ ನೋಡಿದೆನು. ವ॥ ಹೀಗೆ ಆ ದೇವಿಯನ್ನು ನೋಡಿ ಸ್ತುತಿಸಿದೆನು. ಅದು ಹೇಗೆಂದರೆ, ೮೭. ಅಸಂಖ್ಯರಾದ ದೇವತೆಗಳು ಹಾಗೂ ರಾಕ್ಷಸರಿಂದ ಪೂಜೆಗೊಂಡವಳೆ, ಕಾಮನನ್ನು ಸಂಹರಿಸಿದ ಶಿವನ ಅರ್ಧಾಂಗದಲ್ಲಿ ಶೋಭಿಸಿರುವವಳೆ, ಮನೋಹರವಾದ ಬಾಲ ಚಂದ್ರನನ್ನು ಧರಿಸಿದವಳೆ, ಶರಣಾಗತರ ದುಃಖಸಮುದ್ರವನ್ನು ಬತ್ತಿ ಹೋಗುವಂತೆ ಮಾಡುವವಳೆ, ೮೮. ಪೂರ್ಣಚಂದ್ರನಂತೆ ಶೋಭಾಯಮಾನವಾದ ಮುಖವುಳ್ಳವಳೆ, ಮಣಿ ಖಚಿತವಾದ ಕರ್ಣಾಭರಣವನ್ನು ಹೊಂದಿರುವವಳೆ, ಚಂದ್ರ, ಸೂರ್ಯ, ಅಗ್ನಿಗಳಂತೆ ಕಣ್ಣುಳ್ಳವಳೆ, ಜಡತೆ ಸಾವು ಜನನಗಳಿಂದ ಮುಕ್ತಳಾದವಳೆ, ೮೯. ಎಳೆಯ ಚಂದ್ರನನ್ನು ಹೋಲುವ ಮಂದಹಾಸದಿಂದ ಕೂಡಿರುವವಳೆ, ಸಕಲ ಆಗಮಶಾಸ್ತ್ರಗಳ ಮೊತ್ತದಿಂದ ಹೊಗಳಲ್ಪಟ್ಟವಳೆ, ಪರಮಪವಿತ್ರಳೆ, ಹೊಳೆವ ಮಂಗಳಕರವಾದ ಶೋಭೆಯನ್ನೊಳ-ಗೊಂಡವಳೆ, ೯೦. ಹೊಳೆಯುವ ನವೀನವಾದ ಕಾಂತಿಯುಕ್ತವಾದ ತೊಂಡೆಹಣ್ಣಿನಂತಹ ಕೆಂಪಾದ ಕೆಳದುಟಿಯುಳ್ಳವಳೆ, ಕಮಲದ ಮೊಗ್ಗಿನಂತಹ ಉನ್ನತವಾದ ಮೊಲೆಯುಳ್ಳವಳೆ, ನಾನಾ ವಿಧವಾದ ಹುಟ್ಟು-ಸಾವುಗಳ ಧ್ವಂಸಕಳೆ, ಆನಂದಮಯಿಯಾದ ಶುದ್ಧಾತ್ಮಳೆ,

ನಾಗಾಭರಣಾಧರಪುಟಚುಂಬಿತೆ
ಯೋಗಿನಿಚಯಹೃದ್ದರ್ಪಣಬಿಂಬಿತೆ।
ಸುರತರುಶಾಖಾಸಮಬಾಹೋಜ್ವಲೆ
ಪರಿಪೂರ್ಣಜ್ಞಾನಾವಿಲೆ ನಿರ್ಮಳೆ ॥ ೯೧ ॥

ಅನುಪಮದಾನಾನ್ವಿತಪಾಣದ್ವಯೆ
ವಿನುತಾರ್ಧೇಂದುಕಲಾಪಮನಃಪ್ರಿಯೆ।
ಸುಮನೋಗಣನಮಿತಾಂಘ್ರಿಸರೋರುಹೆ
ಸಮುದಿತಸಕಲೇಂದ್ರಿಯತತಿ ನಿಸ್ಪೃಹೆ ॥ ೯೨ ॥

ಸನಕಸನಂದನಮುಖಮುನಿಭಾವಿತೆ
ವನಜೋದ್ಭವಮುಖ್ಯಾಮರಸೇವಿತೆ
ಪಂಚಮಹಾಭೂತಕ್ಕೈದದ ಸುಖಿ
ಸಂಚಿತಕರ್ಮಾರಣ್ಯಾದಹನಶಿಖಿ ॥ ೯೩ ॥

ಪ್ರಾಣಾದಿಸಮೀರಣಗತೆ ಶಾಶ್ವತೆ
ವಾಣೀಶ್ರೀಮುಖಶಕ್ತಿ ಕುಲಸ್ತುತೆ।
ವರ್ಣತ್ರಯಕಳವಡದ ಪರಾಪರೆ
ಪೂರ್ಣಜ್ಞಾನಾಮೃತವಾರಾಕರೆ ॥ ೯೪ ॥

ಪಂಚಬ್ರಹ್ಮಾತ್ಮಕರಧಿದೇವತೆ
ಪಂಚಮಹಾಶಕ್ತಿಯರಧಿದೇವತೆ।
ವೇದಾಂತಸ್ತುತಿಗಳ್ಗೈದದಬಲೆ
ವಾದಕ್ಕೆಡೆಗುಡದುರುಪದಕಮಲೆ ॥ ೯೫ ॥

೯೧. ನಾಗಗಳನ್ನು ಆಭರಣಗಳಾಗಿ ಹೊಂದಿರುವ ಶಿವನ ತುಟಿಗಳಿಂದ ಚುಂಬಿಸಲ್ಪಡುವವಳೆ, ಯೋಗಿಗಳ ಹೃದಯವೆಂಬ ಕನ್ನಡಿಯಲ್ಲಿ ಪ್ರತಿಬಿಂಬಗೊಳ್ಳುವವಳೆ, ಕಲ್ಪವೃಕ್ಷದ ರೆಂಬೆಗಳಂತೆ ಉಜ್ವಲವಾದ ತೋಳುಗಳನ್ನು ಹೊಂದಿರುವವಳೆ, ಪರಿಪೂರ್ಣ ಜ್ಞಾನಮಯಿಯೆ, ನಿರ್ಮಲೆಯೆ, ೯೨. ಎಣೆಯಿಲ್ಲದ ದಾನಮಾಡುವ ಕೈಗಳೆರಡನ್ನು ಹೊಂದಿರುವವಳೆ, ಪ್ರಸಿದ್ಧನಾದ ಅರ್ಧಚಂದ್ರನನ್ನು ಧರಿಸಿದ ಶಿವನ ಮನೋನುರಾಗಿಣಿಯೆ, ದೇವತೆಗಳಿಂದ ನಮಸ್ಕರಿಸಲ್ಪಡುವ ಪಾದಕಮಲಗಳನ್ನು ಹೊಂದಿರುವವಳೆ, ಸಕಲ ಇಂದ್ರಿಯಗಳಿಂದುಂಟಾಗುವ ಕಾಮನೆಗಳಿಂದ ಮುಕ್ತಳಾದವಳೆ, ೯೩. ಸನಕ ಸನಂದರೇ ಮುಖ್ಯರಾದ ಮುನಿಗಳ ಧ್ಯಾನದಲ್ಲಿ ಬಿಂಬಿತಳಾಗುವವಳೆ, ಬ್ರಹ್ಮನೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುವವಳೆ, ಪಂಚಮಹಾಭೂತಗಳಾದ ಭೂಮಿ, ಆಕಾಶ, ಅಗ್ನಿ, ಜಲ, ಗಾಳಿಗಳಿಗೆ ಒಳಗಾಗದ ಪರಮಸುಖಿಯೆ, ಮೊತ್ತಗೊಂಡಿರುವ ಕರ್ಮವೆಂಬ ಅರಣ್ಯವನ್ನು ಸುಡುವ ಚಿಂತೆಯೆ, ೯೪. ಪ್ರಾಣವೇ ಮುಖ್ಯವಾದ ವಾಯುಗಳಿಂದ ಮುಕ್ತಳಾದವಳೆ, ಶಾಶ್ವತಳೆ, ವಿದ್ವಾಂಸರಿಗೆ ಶಕ್ತಿದಾಯಕಳೂ ಅವರಿಂದ ಸ್ತುತಿಸಲ್ಪಡುವವಳೂ ಆದವಳೆ, ಮೂರು ಬಣ್ಣಗಳಿಗೆ ಹೊಂದದ ಪರಾತ್ಪರ ಸ್ವರೂಪಳೆ, ೯೫. ಪಂಚಬ್ರಹ್ಮರ

ಪ್ರಣವಾರ್ಥಪ್ರತಿಪಾದಿತಪದಯುಗೆ
.........................................।
ತ್ರಿಗುಣೇಶ್ವರರಾಡಿಸುವಧಿದೇವತೆ
ನೆಗಟ್ದಿ ಸಗುಣನಿರ್ಗುಣದಧಿದೇವತೆ ॥ ೯೬ ॥

ಮಂತ್ರಂಗಳ ಮತಿಗೈದದ ಖಂಡಿತೆ
ಯಂತ್ರಸಮಾಜಸುಪೀಠವಿಮಂಡಿತೆ।
ನುತಷಟ್ಚಕ್ರಾಂಬುಜಸಂಚಾರಿಣಿ
ನತಜನದುರಿತವ್ರಜಸಂಹಾರಿಣಿ ॥ ೯೭ ॥

...............................
ಆಧಾರಮನೋಜ್ಞಸ್ಥಾನಾಲಯೆ।
ಮಣಿಪೂರಕನೀರೇರುಹಷಟ್ಪದೆ
ಪ್ರಣುತಾನಾಹತಸಂಸ್ಥಿತೆ ನಿರ್ಮದೆ ॥ ೯೮ ॥

ತಳತಳಿಪವಿಶುದ್ಧಸ್ಥಳಭಾಸಿತೆ
ತೊಳಗಿಬೆಳಗುವಾಜ್ಞೇಯನಿವಾಸಿತೆ।
ನಾಡೀತ್ರಯದೊಳೆಸೆವ ಚಿದ್ರೂಪಿಣೆ
ಜೋಡಿಸಿದುರುಮಾಯಾಮದಕರಿಸೃಣಿ ॥ ೯೯ ॥

ದಶಶತದಳಸಾರಸಸಿಂಹಾಸನೆ
ವಿಷಮಕ್ಲೇಶವಿಜಿತನಿರ್ವಾಸನೆ।
ಧ್ರುವಬಿಂಬಸ್ಪಂದಾಮೃತಪರಿಗತೆ
ನವಶಕ್ತಿಸಮಂಚಿತಪೀಠಸ್ಥಿತೆ ॥ ೧೦೦ ॥

ಆದಿದೇವತೆಯೆ, ಪಂಚಮಹಾಶಕ್ತಿಯರ ಅಧಿದೇವತೆಯೆ, ವೇದಾಂತದ ಸ್ತುತಿಗೆ ನಿಲುಕದ ಮಂಗಳಾಂಗಿಯೆ, ವಾದಕ್ಕೆ ಅವಕಾಶವೀಯದ ಪಾದಕಮಲಗಳುಳ್ಳವಳೆ, ೯೬. ಓಂಕಾರದ ಅರ್ಥ ಪ್ರತಿಪಾದನೆ ಮಾಡುವ ಪಾದಗಳನ್ನು ಹೊಂದಿರುವವಳೆ......... ತ್ರಿಗುಣೇಶ್ವರನನ್ನು ಆಡಿಸುವ ದೇವತೆಯೆ, ಪ್ರಖ್ಯಾತವಾದ ಸಗುಣ ನಿರ್ಗುಣಗಳ ಅಧಿದೇವತೆಯೆ, ೯೭. ಮಂತ್ರಗಳ ಬುದ್ಧಿಗೆ ನಿಲುಕದ ಪರಿಪೂರ್ಣಳೆ, ಯಂತ್ರಗಳಿಂದಾದ ಯೋಗ್ಯಪೀಠದಲ್ಲಿ ಚೆನ್ನಾಗಿ ಕುಳಿತವಳೆ, ಪ್ರಖ್ಯಾತವಾದ ಷಟ್ಚಕ್ರವೆಂಬ ಕಮಲದಲ್ಲಿ ಸಂಚರಿಸುವವಳೆ, ೯೮. ಮನೋಜ್ಞವಾದ ಆಧಾರಚಕ್ರದಲ್ಲಿ ನೆಲೆಗೊಂಡಿರುವವಳೆ, ಮಣಿಪೂರಕವೆಂಬ ಷಟ್ಚಕ್ರಕಮಲದಲ್ಲಿರುವವಳೆ, ಪ್ರಸಿದ್ಧವಾದ ಅನಾಹತಚಕ್ರದಲ್ಲಿ ಚೆನ್ನಾಗಿ ಇರುವವಳೆ, ಗರ್ವವಿಲ್ಲದೆ ಶೋಭಿಸಿರುವವಳೆ, ೯೯. ಥಳಥಳಿಸುವ ವಿಶುದ್ಧಿಚಕ್ರದಲ್ಲಿ ಪ್ರಕಾಶಿಸುವವಳೆ, ತೊಳಗಿ ಬೆಳಗುವ ಆಜ್ಞೇಯ ಚಕ್ರದಲ್ಲಿ ವಾಸಿಸುವವಳೆ, ಮೂರುನಾಡಿಗಳಲ್ಲಿ ಶೋಭಿಸುವ ಚಿದ್ರೂಪಿಣಿಯೆ, ಹೊಂದಿಕೆಯಾದ ಮಾಯೆಯೆಂಬ ಮದ್ದಾನೆಗೆ ಸಿಂಹದೋಪಾದಿ-ಯಲ್ಲಿರುವವಳೆ, ೧೦೦. ಸಹಸ್ರದಳ ಕಮಲದಲ್ಲಿ ವಿರಾಜಿಸುವವಳೆ, ಅಪರಿಮಿತವಾದ ದುಃಖವನ್ನು ಗೆದ್ದವಳೆ, ವಾಸನಾರಹಿತಳೆ, ಸ್ಥಿರವಾದ ಬಿಂಬಸ್ಪರ್ಶದಿಂದ ಸುರಿವ

ಬೆಳಗಿನೊಳಗೆ ಬೆಳಗಾಗುವ ಚಿನ್ಮಯೆ
ಬೆಳಗಿನೊಳೆಡೆವಿಡದಮಲೆ ಮನೋಮಯೆ।
ಕಡೆಮೊದಲಿಲ್ಲದತುಳತೇಜೋಮಯೆ
ನುಡಿಗಳವಡದೂರ್ಜಿತತೇಜೋಮಯೆ ॥ ೧೦೧ ॥

ಒಳಹೊಱಗಳವಟ್ಟುಜ್ವಲಿಪಗಸುತೆ
ಅಳವಿಗಳಿವ ಬೆಳಗಳಿದ ಜಗನ್ನುತೆ
ತೋಱುವವಖಿಳಕೋರಿಕೆಪೊಗದದ್ವಯೆ
ಮೀಱಿದ ಸೌಖ್ಯದೊಳೊಂದಿದ ನಿಷ್ಕ್ರಿಯೆ ॥ ೧೦೨ ॥

..................................
ಸಚ್ಚಿನ್ಮುದದೊಳ್ಬೆಚ್ಚ ಸಮುನ್ನತೆ।
ಜ್ಞಾತೃಜ್ಞಾನಜ್ಞೇಯಾಗೋಚರೆ
ಸಾತಿಶಯಸ್ತುತನಿಖಿಲಚರಾಚರೆ ॥ ೧೦೩ ॥

ನಿರುಪಮಶಬ್ದವಱಿದು ನಿಲ್ತಂಬಿಕೆ
ಪರಕೆ ಪರಾಪರವಾದ ಮಹಾಂಬಿಕೆ।
..................................
ದೇವವಿರೂಪಾಕ್ಷನ ನಿಜವಲ್ಲಭೆ ॥ ೧೦೪ ॥

ಕರುಣಾಪಾಂಗದೊಳೀಕ್ಷಿಪುದದ್ರಿಜೆ
ತರಳನನೊಲವಿಂದೀಕ್ಷಿಪುದಗ್ರಜೆ।
ಗತಿಗೆಟ್ಟಾಂ ಬಂದೆನು ಲೋಕಸ್ತುತೆ
ಗತಿ ನೀನೆಂದೇ ಪೊರ್ದಿದೆನಗಸುತೆ ॥ ೧೦೫ ॥

ಅಮೃತದೊಳಗೆ ಲೀನವಾಗುವವಳೆ, ನವಶಕ್ತಿಯಿಂದ ಕೂಡಿದ ಪೀಠದಲ್ಲಿ ಕೂರುವವಳೆ, ೧೦೧. ಬೆಳಗಿನೊಳಗೆ ಬೆಳಗಾಗುವ ಚಿನ್ಮಯಿಯೆ, ಬೆಳಗಿನಲ್ಲಿ ಎಡೆಬಿಡದೆ ಇರುವ ಪರಿಶುದ್ಧಳೆ, ಮನೋಮಯೆ, ತುದಿಮೊದಲಿಲ್ಲದ ಅತುಳ ತೇಜೋಮಯೆ, ಮಾತಿಗೆ ಸಿಲುಕದ ಮಿಗಿಲಾದ ತೇಜಸ್ಸಿನಿಂದ ಕೂಡಿರುವವಳೆ, ೧೦೨.ಒಳಹೊರಗೆ ಹೊಂದಿಕೊಂಡು ಉಜ್ವಲಿಸುವ ಗಿರಿಜೆಯೆ, ಶಕ್ತಿಗೆ ಮೀರಿದ ಬೆಳಗಿಗೆ ಮೀರಿದ ಲೋಕವಂಧ್ಯೆ, ಕಾಣಿಸುವ ಸಕಲ ಆಮಿಷಗಳಿಗೆ ಒಳಗಾಗದ ಎರಡಿಲ್ಲದೆ ಒಂದೇ ಆದವಳೆ, ಅತಿಶಯ ಸೌಖ್ಯವನ್ನು ಹೊಂದಿರುವ ನಿಷ್ಕ್ರಿಯೆಯೆ, ೧೦೩........... ಸಚ್ಚಿದಾನಂದದಲ್ಲಿ ಬೆರೆತ ಶ್ರೇಷ್ಠಳೆ, ಜ್ಞಾತೃ, ಜ್ಞಾನ, ಜ್ಞೇಯ ಸ್ವರೂಪಳೆ, ಅಗೋಚರಳೆ, ಅತಿಶಯವಾಗಿ ಬಣ್ಣನೆಗೊಂಡವಳೆ, ಸಕಲ ಚರಾಚರ ವಸ್ತುಗಳಲ್ಲಿ ಅಡಗಿರುವವಳೆ, ೧೦೪. ಹೋಲಿಸಲಾಗದ, ಶಬ್ದಕ್ಕೆ ಮೀರಿ ನಿಂತ ಅಂಬಿಕೆಯೆ, ಪರಾತ್ಪರ ವಸ್ತುವಾದ ಮಹಾತಾಯಿಯೆ, .........ದೇವ ವಿರೂಪಾಕ್ಷನ ಪ್ರಾಣಪ್ರಿಯೆಯೆ, ೧೦೫. ಹೈಮವತೀ, ಕರುಣೆಯಿಂದ ಕೂಡಿದ ಕಡೆಗಣ್ಣೋಟದಿಂದ ನೋಡುವುದು, ಲೋಕವಂದಿತೆಯೆ, ಮಾರ್ಗತಪ್ಪಿ ನಾನು ಬಂದಿರುವೆ ಪರ್ವತರಾಜ

ತಳ್ವದೆ ಯೆನ್ನೊಳ್ಮಾರ್ನುಡಿಯ್ಯೆ ಶಿವೆ
....................................
ಎಂದಿಂತಖಿಳಾಂಡದ ನಾಯಕೆಯಂ
ಕುಂದದೆ ನುತಿಸಿದೆ ನಾನಂಬಿಕೆಯಂ ॥ ೧೦೬ ॥

ಮೆಚ್ಚಿದೆನೆಲೆ ಗಿಳಿ ನಿನ್ನಯ
ನಿಚ್ಚಲಮಾದಮಳಭಕ್ತಿಗೀವೆಂ ಪೇೞ್ನಿ।
ನ್ನಿಚ್ಚೆಯದಾವುದೆನಲ್ಕಿವೆ
ಗುಚ್ಚವದಿಂ ಬಿನ್ನವಿಸಿದೆನಿಂತೆಂದು ಸತಿ ॥ ೧೦೭ ॥

ಮತ್ತಮದೆಂತೆಂದೊಡೆ,

ತಾಯೆ ಭವಾನಿ ಕೇಳ್ನಿಖಿಳಭೂವರನುದ್ಭಟನೆಂಬ ತನ್ಮಹಾ
ರಾಯನನೆನ್ನಮಿತ್ರೆಗೆ ನಿಜೇಶ್ವರನೆಂದು ಸಮಂತು ತಂದು ವಿ।
ಸ್ಥಾಯಮದೀಯಪಟ್ಟಣದ ಬಾಹ್ಯದೊಳಾನಿರವೇೞ್ದು ಮೇಣ್ಪೊೞ
ಲ್ಗಾಯತಿಯಿಂದೆ ಬರ್ಪೆಡೆಯೊಳಿಲ್ಲಿಗೆ ತಂದುದದೆನ್ನನೊಂದೆಲರ್ ॥ ೧೦೮ ॥

ಮಿಗೆ ಪೋಪೆನೆಂದೊಡೆಮ್ಮಯ
ನಗರಂ ತಾನೆತ್ತಲೆಂಬುದಱಿಯೆನೆ ಯೆನಲಾ।
ನಗಸುತೆ ಮುದದಿಂದಂ ನಸು
ನಗೆ ಮಿನುಗಲ್ ನುಡಿದಳೆನ್ನೊಳಿಂತೆಂದು ಸತಿ ॥ ೧೦೯ ॥

ಪೋಗಿ ನೀಂ ಗಿಳಿಯೆಮ್ಮ ದೇಗುಲದೊಪ್ಪುವುನ್ನತಮಾದ ಮುಂ
ಬಾಗಿಲಲ್ಲಿ ತೊಳಪ್ಪ ಪೂಗೊಳದೊಳ್ಮುೞುಂಗೆನಲೊಲ್ದು ತ।
ನ್ನಾಗಭೂಷಣಚಿತ್ತವಲ್ಲಭೆಯಾದ ಶೈಲತನೂಜೆ ಯಿಂ
ಬಾಗಿ ಕಣ್ಗೊಳಿಪಂಘ್ರಿಗಳ್ಗೆ ಸಮಂತುಟಾಂ ಮಣಿದೆಂ ಸತಿ ॥ ೧೧೦ ॥

ಕುಮಾರಿ ನೀನೆ ಗತಿಯೆಂದು ನಿನ್ನನ್ನು ಸೇರಿರುವೆ. ೧೦೬. ಪಾರ್ವತಿಯೇ ತಡಮಾಡದೆ ನನ್ನೊಡನೆ ಪ್ರತಿಯಾಗಿ ಮಾತನಾಡು............ ಹೀಗೆಂದು ಬ್ರಹ್ಮಾಂಡನಾಯಕಿಯನ್ನು ಅಂಬಿಕೆಯನ್ನು ಕೊರತೆಯಿಲ್ಲದೆ ನಾನು ಪ್ರಾರ್ಥಿಸಿದೆ. ೧೦೭. "ಎಲೆ ಗಿಳಿಯೆ, ನಿನ್ನಯ ನಿಶ್ಚಲವಾದ ಪರಿಶುದ್ಧ ಭಕ್ತಿಗೆ ಮೆಚ್ಚಿದೆ ನಿನ್ನ ಕೋರಿಕೆ ಏನು ಹೇಳು, ಪೂರೈಸುವೆ" ಎಂದು ಪಾರ್ವತಿಯು ನುಡಿಯಲು, ನಾನು ಉತ್ಸಾಹದಿಂದ ಹೀಗೆಂದು ಬಿನ್ನವಿಸಿದೆನು. ವ॥ ಮತ್ತೆ ಅದು ಹೇಗೆಂದರೆ, ೧೦೮. ತಾಯೆ ಭವಾನಿ ಕೇಳು, ಭೂಮಂಡಲದಲ್ಲೆಲ್ಲಾ ಶ್ರೇಷ್ಠನಾದ ಉದ್ಭಟನೆಂಬ ಮಹಾರಾಜನು ನನ್ನ ಗೆಳತಿಗೆ ಪತಿಯೆಂದು ನಿರ್ಧರಿಸಿ ಚೆನ್ನಾಗಿ ಕರೆದುತಂದು ಝಗಝಗಿಸುವ ನನ್ನ ಪಟ್ಟಣದ ಹೊರಭಾಗದಲ್ಲಿ ನಾನು ಅವನನ್ನು ಇರಲು ಹೇಳಿ, ಮತ್ತೆ ನಾನು ಪಟ್ಟಣಕ್ಕೆ ಸಮರ್ಥನಾಗಿ ಬರುತ್ತಿರುವಲ್ಲಿ ಬಿರುಗಾಳಿಯೊಂದು ನನ್ನನ್ನು ಇಲ್ಲಿಗೆ ತಂದಿತು. ೧೦೯. "ಶೀಘ್ರವಾಗಿ ಹೋಗೋಣವೆಂದರೆ ನಮ್ಮ ನಗರವೆಲ್ಲಿದೆ ಎಂಬುದು ತಿಳಿಯದು" ಎನ್ನಲು ಗಿರಿಜೆಯು ಸಂತಸದಿಂದ ನಸುನಗೆ ಮಿನುಗಲು ನನ್ನೊಡನೆ ಹೀಗೆಂದು ನುಡಿದಳು. ೧೧೦. "ಗಿಳಿಯೇ ನೀನು ಹೋಗಿ ನಮ್ಮ ದೇವಾಲಯದಲ್ಲಿ ಶೋಭಿಸಿರುವ

ಘಳಿಲನುಮೆಗೆಱಗಿ ಬೀೞ್ಕೊಂ
ಡಳವಟ್ಟಾಹ್ಲಾದದಿಂದಮೆಟ್ಟಿಂದಾತಂ।
ಗೊಳದೊಳ್ಮುೞುಂಗಲಿಂತೀ
ಕೊಳದೊಳಗುದಯಿಸಿದೆನಂಬುಜಾಯತನೇತ್ರೆ ॥ ೧೧೧ ॥

ಎಂದು ತಾಂ ತಳೆದಿರ್ದ ಕಥನಮಂ ಶಶಿಲೇಖೆಗೆ ಪೇೞ್ದತಚ್ಛುಕ ವಚನಮಂ ಕೇಳ್ದಾನಂದಮಂ ತಾೞ್ದೆೞ್ದು ನಿಲ್ತು ನಸುನಾಣ್ಚಿ ತಲೆವಾಗಿ ಕೊಂಡಿರ್ಪ ಸೌಂದರವತಿಯಂ ಕಂಡಾಗಿಳಿ ಯಿಂತೆಂದುದು।

ಅದೆಂತೆಂದೊಡೆ,

ವನಿತೆ ಭವದಿಷ್ಟಮಾಯ್ತರ
ಮನೆಗೈದಾಂ ಬಂದ ಕಜ್ಜಮಂ ಮೇಣ್ನಿಮ್ಮ।
ಯ್ಯನೊಳೊಱೆವೆನೆಂದು ತತ್ಕಾ
ಮಿನಿಯರನೊಡಗೂಡಿ ಕೊಟ್ಟು ಕಳುಪಿದಳವಳಂ ॥ ೧೧೨ ॥

ಪತಿಯೊಸಗೆಯಿನಾಸೌಂದರ
ವತಿಯಂ ಬೀೞ್ಕೊಂಡದಂದು ಗಿಳಿಯೆೞ್ದಬಲಾ।
ತತಿವೆರಸರಮನೆಯಂ ಪೊ
ಕ್ಕತಿಮುದದಿಂ ತದ್ವಧೂಟಿ ರಾಜಿಸಲಿತ್ತಲ್ ॥ ೧೧೩ ॥

ಸೌಂದರವತಿಯಂ ಬೀೞ್ಕೊ
ಟ್ಟಂದಾಗಿಳಿ ಗಗನಮಾರ್ಗದೊಳ್ಬರೆ ನಿಜಪೂ।
ರ್ಣೇಂದುಮುಖಿಗೂಡಿ ತೋರ್ಪ ಮು
ಕುಂದಾಭಸುಧರ್ಮನಂ ನಿರೀಕ್ಷಿಸಿದಾಗಳ್ ॥ ೧೧೪ ॥

ಎತ್ತರವಾದ ಮುಂಬಾಗಿಲಿನಲ್ಲಿ, ಹೊಳೆಯುವ ಹೂಗೊಳದಲ್ಲಿ ಮುಳುಗು" ಎನ್ನಲು ನಾನು ಪ್ರೀತಿಯಿಂದ ಆ ಶಿವನ ಮನದೊಡತಿಯಾದ ಗಿರಿಜೆಯ ಮನೋಹರವಾಗಿ ಕಾಣುವ ಪಾದಗಳಿಗೆ ಚೆನ್ನಾಗಿ ಬಾಗಿದೆನು. ೧೧೧. ವಿಶಾಲ ಕಮಲಾಕ್ಷಿ "ಬೇಗನೆ ಉಮೆಗೆ ನಮಸ್ಕರಿಸಿ ಬೀಳ್ಕೊಂಡು ಹೊಂದಿದ ಮುದದಿಂದ ನಡೆದುಬಂದು ಆ ತಣ್ಣನೆಯ ಕೊಳದಲ್ಲಿ ಮುಳುಗಲು ಈ ಕೊಳದಲ್ಲಿ ಉದ್ಭವಿಸಿದೆನು. ವ॥ ಎಂದು ತಾನು ತಡೆಮಾಡಿದ್ದಕ್ಕೆ ಸಂಬಂಧಿಸಿದ ಕಥೆಯನ್ನು ಶಶಿಲೇಖೆಗೆ ಹೇಳಲು ಗಿಳಿಯ ಮಾತುಗಳನ್ನು ಕೇಳಿ ಆನಂದ ಹೊಂದಿ ಎದ್ದುನಿಂತು ನಸುನಾಚಿ ತಲೆಬಾಗಿದ್ದ ಸೌಂದರವತಿಯನ್ನು ಕಂಡು ಆ ಗಿಳಿಯು ಹೀಗೆಂದಿತು. ಅದು ಹೇಗೆಂದರೆ, ೧೧೨. ಎಲೆ ಸುಂದರಿ, ನಿನ್ನ ಇಷ್ಟಾರ್ಥ ನೆರವೇರಿತು. ಅರಮನೆಗೆ ನೀನಿನ್ನು ಹೋಗು, ನಾನು ನಿನ್ನ ತಂದೆಯೊಡನೆ ಸಕಲವನ್ನೂ ತಿಳಿಸುವೆನು ಎಂದು ಆ ಸಖಿಯರೊಡನೆ ಸೌಂದರವತಿಯನ್ನು ಕಳುಹಿಸಿಕೊಟ್ಟಿತು. ೧೧೩. ಪತಿಯ ಸಂತಸದ ಸುದ್ದಿಯೊಡನೆ ಗಿಳಿಯು ಸೌಂದರವತಿಯನ್ನು ಬೀಳ್ಕೊಡಲು ಸುಂದರಿಯರೊಡನೆ ಅಲ್ಲಿಂದೆದ್ದು ಅರಮನೆಯನ್ನು ಅತ್ಯಾನಂದದಿಂದ ಪ್ರವೇಶಿಸಿದ ಆ ಸುಂದರಿಯು ಶೋಭಿಸುತ್ತಿದ್ದಳು. ಇತ್ತ ೧೧೪. ಸೌಂದರವತಿಯನ್ನು ಬೀಳ್ಕೊಟ್ಟ ಗಿಳಿಯು ಆಕಾಶಮಾರ್ಗದಲ್ಲಿ ಹಾರಿ ಬರುತ್ತಿರಲು ಪೂರ್ಣಚಂದ್ರನಂತೆ ಮುಖವುಳ್ಳ ತನ್ನ ಪತ್ನಿಯೊಡನೆ, ವಿಷ್ಣುವಿನಂತೆ ಕಾಣುವ ಸುಧರ್ಮನನ್ನು ನೋಡಿದಾಗ,

ನೃಪಾಲಕಂ ಕಾಮಿನಿಗೂಡಿ ನಾಡೆ ತೋ
ರ್ಪಪಾರರಾಗಾವಿಲನಾಗಿರಲ್ಸಮಂ।
ತುಪೇಂದ್ರನಂ ಪೊರ್ದುವ ತಾರ್ಕ್ಷ್ಯನಂತೆ ರಂ
ಜಿಪಾಶುಕಂ ಪೊರ್ದಿದುದುರ್ವಿಪಾಲನಂ ॥ ೧೧೫ ॥

ಇಂತಾಕಸ್ಮಿಕದಿಂ ಬಂದು ಸಾರ್ದಾಗಿಳಿಯಂ ಕಂಡಾನಂದಮಂ ತಾಳ್ದು ಕುಶಲಂ ಕೇಳ್ದಾರಾಜಂ ಕೀರಂಗಿಂತೆಂದಂ॥

ರಾಜಕೀರನೆ ನೀಂ ದಲ್ಯೆದಿದ ಕಜ್ಜಮಾದುದೆ ಎಂದು ತಾ
ನೋಜೆಯಿಂ ನೃಪನೊಲ್ದು ಕೇಳೆ ತದುರ್ವಿಪಾಲಕಕುಂಜರಂ।
ಗಾಜವಂಜವಧರ್ಮಕುತ್ಸವಮಾಗಲೊಯ್ಯನೆ ಪೇಳ್ದುದಾ
ರಾಜಿಪುತ್ತಮತಾಮ್ರತುಂಡಮತೀವಸಮ್ಮದದೇಳ್ಗೆಯಿಂ ॥ ೧೧೬ ॥

ಕ್ಷಿತಿಪ ಭವತ್ಸುತೆ ಸೌಂದರ
ವತಿಗೆಣೆಯಾದಾಣ್ಮನೊರ್ವನಂ ತಂದೆನೆನು।
ತ್ತತಿಮುದದಿಂ ಪೇಟಲ್ಬೂ
ಪತಿ ಹರ್ಷಂಬೆತ್ತು ಮಗುಳ್ದು ಗಿಳಿಗಿಂತೆಂದಂ ॥ ೧೧೭ ॥

ಗಿಳಿ ಕೇಳಾತಂ ತಾನಾ
ವಿಳೆಯೆಱೆಯಂ ಪೆಸರದೇಂ ಕುಲಜನೆ ಪೇಳೊ।
ಲ್ದಳವಡಲೆಂದೆನೆ ತನ್ನೃಪ
ತಿಲಕಂಗೆ ಮಗುಳ್ದು ಪೇಳ್ದುದಿಂತೆಂದು ಶುಕಂ ॥ ೧೧೮ ॥

ತರಣಿಕುಲಾಗ್ರಗಣ್ಯಬಿಡದಾಲಿಸು ಸಲ್ವಕುಮಾರಪಾಲಭೂ
ರ್ಜರನೆನಿಪಾಖ್ಯೆಯುಳ್ಳ ನೃಪನ್ಯೆಂದವವಂಶಜನರ್ಧಚಂದ್ರಶೇ।
ಖರಚರಣಾಬ್ಜಷಟ್ಪದನನೂನಗುಣಾನ್ವಿತನಾದ ತನ್ಮಹೀ
ಪರಿವೃಢನಂ ಮದೀಯಘನಪುಣ್ಯದೆ ಕಂಡೆನಿಳಾಧಿನಾಯಕಾ ॥ ೧೧೯ ॥

೧೧೫. ಮಹಾರಾಜನು ಪತ್ನಿಯೊಡನೆ ಚೆಲುವಿಕೆಯನ್ನು ಚೆನ್ನಾಗಿ ಹೊಂದಿ ಸೊಗಸುಗೊಂಡಿರಲು ಉಪೇಂದ್ರನನ್ನು ಸಮೀಪಿಸುವ ಗರುಡನಂತೆ ಸುಂದರವಾದ ಗಿಳಿಯು ಮಹಾರಾಜನನ್ನು ಸಮೀಪಿಸಿತು. ವ॥ ಹೀಗೆ ಆಕಸ್ಮಿಕವಾಗಿ ಬಂದು ಸಮೀಪಿಸಿದ ಗಿಳಿಯನ್ನು ನೋಡಿ ಆನಂದವನ್ನು ಹೊಂದಿ ಕ್ಷೇಮಸಮಾಚಾರವನ್ನು ವಿಚಾರಿಸಿದ ರಾಜನು ಗಿಳಿಗೆ ಹೀಗೆಂದನು. ೧೧೬. ಅರಗಿಳಿಯೆ, ನೀನು ಹೋದ ಕೆಲಸವಾಯಿತೆ ಎಂದು ಕ್ರಮವಾಗಿ ಮಹಾರಾಜನು ಕೇಳಲು ರಾಜರ ನಡುವೆ ಆನೆಯಂತಿರುವ ಆ ಮಹಾರಾಜನಿಗೆ ಬೇಗಬೇಗನೆ ಧರ್ಮಕ್ಕೆ ಸಂತಸವಾಗುವಂತೆ ಮೆಲ್ಲನೆ ಚಂದದ ಆ ಗಿಳಿಯು ಅತ್ಯಾನಂದದಿಂದ ಹೇಳತೊಡಗಿತು. ೧೧೭. ಮಹಾರಾಜಾ ತಮ್ಮ ಕುಮಾರಿ ಸೌಂದರವತಿಗೆ ಯೋಗ್ಯವಾದ ವರನನ್ನು ತಂದಿರುವೆನು ಎಂದು ಅತ್ಯಾನಂದದಿಂದ ಹೇಳಲು ಮಹಾರಾಜನು ಸಂತೋಷಗೊಂಡು ಮತ್ತೆ ಗಿಳಿಗೆ ಹೀಗೆಂದನು. ೧೧೮. ಎಲೆ ಗಿಳಿಯೆ ಕೇಳು, ಆತ ಯಾವ ದೇಶದ ಒಡೆಯನು? ಆತನ ಹೆಸರೇನು? ಕುಲವೇನು? ಮನಸ್ಸಿಗೆ ಒಪ್ಪುವಂತೆ ಹೇಳು ಎನ್ನಲು ಆ ಮಹಾರಾಜನಿಗೆ ಮತ್ತೆ ಗಿಳಿಯು ಹೀಗೆಂದಿತು. ೧೧೯. ಮಹಾರಾಜನೆ,

ಎಂದಿಂತು ಥಳಥಳಿಪ ಚಂಚೂಪುಟಸಂಜನಿತಶೋಣರುಚಿಸಂಚಯಂ ದಿಗಂತರಾಳಮಂ ತೀವಲೊಸೆದುಸುರ್ವ ಶುಕವಚನಮಂ ಕೇಳ್ದಾಸುಧರ್ಮಂ ಮಗುಟ್ದಾರಾಜಕೀರಂಗಿಂತೆಂದಂ॥

ಕೇಳೆಲೆ ಗಿಳಿ ನೀನಾಭೂ
ಪಾಳಕನನದೆಂತು ಕಂಡೆಯಂತದನೊಲವಿಂ।
ಪೇಱುಮಗೆಂದೆನೆ ಮಗುಟ್ದಿೞ
ಲ್ದಾಳಾಪಿಸಿದತ್ತು ನೃಪತಿಗಿಂತೆಂದು ಶುಕಂ ॥ ೧೨೦ ॥

ಅವನಿಪಚಂದ್ರ ಕೇಳ್ಭವದನುಜ್ಞೆಯನಾಂ ತಳೆದಂದು ಸರ್ವಲೋ
ಕವನೊಲವಿಂ ತೊೞಲ್ದು ಭವದೀಯಕುಮಾರಿಗೆ ತಕ್ಕರಾಜಪುಂ।
ಗವನೆನಿಪಾಣ್ಮನಂ ಬೆದಕಿ ಕಾಣದೆ ಬರ್ಪಿನೆಗಂ ಮದೀಯಪು
ಣ್ಯವಶದಿನೊಂದುಕಾರಣದಿನೊಲ್ದು ವನಾಂತಕೆ ಬಂದನಾನೃಪಂ ॥ ೧೨೧ ॥

ಆಯತಿವೆತ್ತು ಚೈತ್ರನಿರೆ ಪಕ್ಕದೊಳುಜ್ವಲಿಪುದ್ಗ ಮೇಷುವೋ
ಲ್ದಾಯುಧಮಂತ್ರಿಗೂಡಿ ವನಮಧ್ಯದೊಳೈದೆ ವಿರಾಜಿಪಾಮಹಾ।
ರಾಯನನುದ್ಭಟೋರ್ವಿಪನನೆನ್ನಯ ಪುಣ್ಯದಿನಂಧಲಾವಕ
ನ್ಯಾಯದಿನೊಲ್ದು ಕಂಡೆನಖಿಲೋರ್ವಿಪಸೇವಿತಪಾದಪಂಕಜಾ ॥ ೧೨೨ ॥

ಆನೃಪನುಗ್ರಕಾನನಕೆ ಬಂದುದನುನ್ನತಮಾದ ಜಾಲದೊಳ್
ತಾನೊಳಗಾದುದಂತದವನೀಶಮೃಗೇಂದ್ರನನೊಲ್ದು ಕಂಡುದಂ।
ಮಾನಿತವಾಕ್ಪ್ರಗುಂಫನವಿರಾಜಿತಕೀರನನೂನದಾನಸಂ
ತಾನಸುಧರ್ಮಕಂಗುಸಿರ್ದುದೆಲ್ಲವನಂದು ಮನೋನುರಾಗದಿಂ ॥ ೧೨೩ ॥

ಬಿಡದೆ ಕೇಳು. ಒಪ್ಪುವ ಕುಮಾರಪಾಲನೆನ್ನುವ ಹೆಸರುಳ್ಳ ಮಹಾರಾಜನಿವನು. ಚಂದ್ರವಂಶದವನು, ಶಿವನ ಪಾದಕಮಲದಲ್ಲಿ ದುಂಬಿಯಾಗಿರುವವನು, ಕೊರತೆಯಿಲ್ಲದ ಗುಣಗಳಿಂದ ಕೂಡಿದವನು. ಮಹಾರಾಜನೇ ಈ ಮಹೀಪಾಲನನ್ನು ನನ್ನ ಹಿರಿದಾದ ಪುಣ್ಯದ ಫಲವಾಗಿ ಕಂಡೆನು. ವ॥ ಹೀಗೆ ಥಳಥಳಿಸುವ ಕೊಕ್ಕಿನಿಂದ ಹೊಮ್ಮಿದ ಕೆಂಬಣ್ಣವು ದಿಕ್ಕುದಿಕ್ಕುಗಳನ್ನೆಲ್ಲಾ ಆವರಿಸಿರಲು ಪ್ರೀತಿಯಿಂದ ನುಡಿವ ಗಿಳಿಯ ಮಾತುಗಳನ್ನು ಕೇಳಿದ ಆ ಸುಧರ್ಮನು ಮತ್ತೆ ಅರಗಿಳಿಗೆ ಹೀಗೆಂದನು. ೧೨೦. "ಎಲೆ ಗಿಳಿಯೆ ಕೇಳು, ನೀನು ಆ ಮಹಾರಾಜನನ್ನು ಹೇಗೆ ನೋಡಿದೆ? ಅದನ್ನು ಪ್ರೀತಿಯಿಂದ ನಮಗೆ ತಿಳಿಸು" ಎನ್ನಲು ಮಹಾರಾಜನಿಗೆ ಮತ್ತೆ ಗಿಳಿಯು ಪ್ರೀತಿಯಿಂದ ಹೀಗೆಂದಿತು. ೧೨೧. ಮಹಾರಾಜಚಂದ್ರನೆ ಕೇಳು, ತಮ್ಮ ಅಪ್ಪಣೆಯನ್ನು ಪಡೆದ ನಾನು ಸಕಲ ಲೋಕವನ್ನು ಪ್ರೀತಿಯಿಂದ ಸುತ್ತಾಡಿ ತಮ್ಮ ಕುಮಾರಿಗೆ ಯೋಗ್ಯನೂ, ಶ್ರೇಷ್ಠನೂ ಆದ ರಾಜಕುಮಾರನನ್ನು ಹುಡುಕಾಡಿ ಎಲ್ಲೂ ಕಾಣದೆ ಬರುತ್ತಿರುವಲ್ಲಿ ನನ್ನ ಪುಣ್ಯವಶದಿಂದ, ಕಾರಣಾಂತರದಿಂದ ಉದ್ಭಟಮಹಾರಾಜನು ಆ ಕಾಡಿಗೆ ಬಂದನು. ೧೨೨. ಪಕ್ಕದಲ್ಲಿ ಸಾಮರ್ಥ್ಯದಿಂದೊಡಗೂಡಿದ ಮಂತ್ರಿಯೊಡನೆ ಕೂಡಿದ ಮಹಾರಾಜ ಉದ್ಭಟದೇವನು ಕಾಡಿನ ಮಧ್ಯದಲ್ಲಿ ನನ್ನ ಪುಣ್ಯಕ್ಕೆ ಚೆನ್ನಾಗಿ ಶೋಭಿಸಿರಲು, ಸಕಲ ಭೂಮಂಡಲದ ರಾಜರುಗಳಿಂದ ಸೇವಿತ ಪಾದಕಮಲಗಳನ್ನು ಹೊಂದಿರುವ ಸುಧರ್ಮನೇ ಕೇಳು 'ಅಂಧಲಾವಕ ನ್ಯಾಯದಂತೆ' ಪ್ರೀತಿಯಿಂದ ಉದ್ಭಟದೇವನನ್ನು ನಾನು ಕಂಡೆನು. ೧೨೩. ಆ ಮಹಾರಾಜನು ಕಾಡಿಗೆ ಬಂದುದು,

ಇಂತುದ್ಭಟಕ್ಷಿತೀಂದ್ರಚಂದ್ರಮನಂ ಕಂಡ ವೃತ್ತಾಂತಮಂ ಪೇಟಿಲಾಗಿಳಿಗೆ ಮಗುಳ್ದು ತನ್ನೃಪಾಲಕನಿಂತೆಂದಂ॥

ಎಲೆ ಕೇಳ್ಮಂಜುಳವಾಗ್ವಿಲಾಸ ತದಿಳಾಧೀಶಾನನೆಲ್ಲಿರ್ಪನಂ
ತೊಲವಿಂ ಪೇಟ್ದೆನೆ ಚಂಡಿಕಾಂಬಿಕೆಯಶೋಕಾರಾಮದೊಳ್ಬಂದು ನಿ।
ರ್ಮಲಮೋದಂಬಡೆದಿರ್ದನೆಂದೆನಲದಂ ಕೇಳ್ದುರ್ಬಿ ತದ್ಭೂಮಿರಾ
ಟ್ತಿಲಕಂ ತಾನನುವಾದನಂದಿದಿರ್ಗೊಳಲ್ ಮಾರ್ತಾಂಡವಂಶೋದ್ಭವಂ ॥ ೧೨೪ ॥

ವರಸತ್ಯವತಿಯನಂತಃ
ಪುರಕುಱ್ಱೆ ಬೀಱ್ಕೊಟ್ಟು ತನ್ನ ಸಚಿವನನೊಲವಿಂ।
ಕರೆಸಿ ನಿಜನಗರಮಂ ಸಿಂ
ಗರಿಸೆಂದು ನಿಯೋಗವಿತ್ತು ಕಳುಪಿದನೊಲವಿಂ ॥ ೧೨೫ ॥

ಇಂತು ತನ್ನ ಸಚಿವನಂ ಕರೆಸಿ ಪೊಱಲಂ ಸಿಂಗರಿಸೆಂದನುಜ್ಞೆಯನಿತ್ತು ಬೀಱ್ಕೊಟ್ಟರಗಿಳಿಯಂ ಮುಂದೆ ಪೋಗೆಂದುದ್ಭಟಕ್ಷಿತೀಂದ್ರನಂ ಬಿಜಯಂಗೈಸಿಕೊಂಡು ಬಪ್ಪರಪಟ್ಟದಾನೆಯನಲಂಕರಿಸಿಕೊಂಡನಂತ ಸಂಭ್ರಮದಿಂದಾಸುಧರ್ಮನೃಪಂ ವಾಜಿಯನಡರ್ದಾನಂದಮಂ ಪಡೆದು ಪಟ್ಟಣಮಂ ಪೊಱಮಟ್ಟೇೞ್ತಂದಂ॥

ಅದೆಂತೆಂದೊಡೆ,

ಪಟ್ಟಣಮಂ ಸುಖಾಚರಣದಿಂ ಪೊಱಮಟ್ಟು ಸುಧರ್ಮಭೂವರಂ
ಕಟ್ಟಣೆಯಿಲ್ಲದೆತ್ತಿದೆಳೆಮುತ್ತಿನ ಸತ್ತಿಗೆಸಾಲಮಧ್ಯದೊ।
ಳ್ಪೆಟ್ಟನೆ ವಾಜಿಪತ್ತಿಗಜಸಂಚಯದುನ್ನತವೈಭವಂಗಳಿಂ
ಪಟ್ಟತುರಂಗವೇಱ್ದೆ ನಡೆತಂದನಿನಾನ್ವಯವಾರ್ಧಿಚಂದ್ರಮಂ ॥ ೧೨೬ ॥

ವಿಶಾಲವಾದ ಬಲೆಯಲ್ಲಿ ತಾನು ಸಿಕ್ಕಿಬಿದ್ದುದು, ಹಾಗೆಯೇ ಮಹಾರಾಜಸಿಂಹನನ್ನು ತಾನು ಪ್ರೀತಿಯಿಂದ ಕಂಡದ್ದು ಇವೆಲ್ಲವನ್ನು ಮಾತಿನ ಸೊಗಸಾದ ಮಾಲೆಯಿಂದ ಮಾನ್ಯನಾದ ಗಿಳಿಯು ಕೊಡುಗೈದಾನಿಯಾದ ಸುಧರ್ಮನಿಗೆ ಅದೆಲ್ಲವನ್ನೂ ಮನದಾನಂದದಿಂದ ಅಂದು ಹೇಳಿತು. ವ॥ ಹೀಗೆ ಉದ್ಭಟಮಹಾರಾಜ ಚಂದ್ರಮನನ್ನು ಕಂಡ ವಿಚಾರವನ್ನು ಹೇಳಲು, ಆ ಗಿಳಿಗೆ ಮಹಾರಾಜನು ಮತ್ತೆ ಹೀಗೆಂದನು. ೧೨೪. ಎಲೆ ಮಂಜುಳ ವಾಗ್ವಿಲಾಸನೆ, ಆ ಮಹಾರಾಜನು ಎಲ್ಲಿರುವನು? ಪ್ರೀತಿಯಿಂದ ತಿಳಿಸು ಎನ್ನಲು ಅಶೋಕವನದಲ್ಲಿರುವ ಚಂಡಿಕಾಮಾತೆಯ ಮಂದಿರದಲ್ಲಿ ಬಂದು ಪರಿಶುದ್ಧವಾದ ಆನಂದವನ್ನು ಪಡೆದಿರುವನು ಎಂದು ಗಿಳಿಯು ಹೇಳಲು, ಅದನ್ನು ಕೇಳಿ ಸೂರ್ಯವಂಶೀಯನಾದ ಆ ಭೂಪಾಲನು ಸಂತಸಗೊಂಡು ಉದ್ಭಟನನ್ನು ಇದಿರುಗೊಳ್ಳಲು ಸಿದ್ಧನಾದನು. ೧೨೫. ಮಾನ್ಯಳಾದ ಸತ್ಯವತಿಯನ್ನು ಅಂತಃಪುರಕ್ಕೆ ಬೀಳ್ಕೊಟ್ಟು ತನ್ನ ಮಂತ್ರಿಯನ್ನು ಪ್ರೀತಿಯಿಂದ ಬರಮಾಡಿಕೊಂಡು ತನ್ನ ಪಟ್ಟಣವನ್ನು ಸಿಂಗರಿಸಲು ಅಪ್ಪಣೆಮಾಡಿ ಸಂತಸದಿಂದ ಕಳುಹಿಸಿದನು. ವ॥ ಹೀಗೆ ತನ್ನ ಮಂತ್ರಿಯನ್ನು ಕರೆಯಿಸಿ ಪಟ್ಟಣವನ್ನು ಸಿಂಗರಿಸೆಂದು ಅಪ್ಪಣೆಮಾಡಿ ಬೀಳ್ಕೊಟ್ಟು ಅರಗಿಳಿಯನ್ನು ಮುಂದೆ ಹೋಗೆಂದು ಹೇಳಿ ಉದ್ಭಟಮಹಾರಾಜನನ್ನು ಕರೆದುಕೊಂಡು ಬರಲು ಪಟ್ಟದಾನೆಯನ್ನು ಅಲಂಕರಿಸಿ ಅಪಾರ ಸಂಭ್ರಮದಿಂದ ಆ ಸುಧರ್ಮಮಹಾರಾಜನು ಕುದುರೆಯನ್ನೇರಿ ಆನಂದದಿಂದ ಪಟ್ಟಣದಿಂದ ಹೊರಬಂದನು. ಅದು ಹೇಗೆಂದರೆ, ೧೨೬. ಮಂಗಳ ಮುಹೂರ್ತದಲ್ಲಿ ಪಟ್ಟಣದಿಂದ

ಇಂತು ಸುಧರ್ಮನುದ್ಭಟಕ್ಷಿತೀಂದ್ರಚಂದ್ರಮನಂ ಕಾಣ್ಬ ತವಕದಿಂದಂ ಬರೆವರೆ ಗಿಳಿ ಜವದಿಂದೆಟ್ಟಿ ಮುಂಚೀಹದನನಱುಪುವೆನೆಂದು ಪಾಱಿ ಬಂದಸುಕೆಯ ಪೊಸಬನಮಂ ಪೊಕ್ಕು ಕುಸುಮಶರವಿಸರದಿಂದಂ ಬಸವೞಿದು ಪಸುರ್ವೆಳಗಂ ಪಸರಿಸುತುಂ ಮಿಸುಪ ಪಸಲೆಯ ಪಸೆಯೊಳ್ ಮನಂಗೊಳಿಪ ಕುಮಾರಪಾಲಘೂರ್ಜರನಂ ಕಂಡು,

ಕಡುಗೂರ್ಪಿಂದಿದಿರ್ಗೊಳ್ವೆನೆಂದು ನಡೆತಂದಂ ಮೇಣ್ಸುಧರ್ಮಾಂಕನೊ
ಲ್ದುಡುರಾಜಾನ್ವಯವಾರ್ಧಿಚಂದ್ರಮ ಭವತ್ಸ್ವಾಮ್ಯಾಂಘ್ರಿಯುಗ್ಮೋಲ್ಲಸ।
ಜ್ಜಡಜಾತಂಗಳೊಳೆಂದು ಪೇೞ್ದ ಶುಕದಾಲಾಪಕ್ಕೆ ತಾಂ ಪೆರ್ಚಿ ತ
ನ್ಮೃಡಭಕ್ತೋದ್ಭಟನೆಟ್ಟು ಮಂಡಿಸಿ ನಿಜಾಮಾತ್ಯಾಸ್ಯಮಂ ನೋಡಿದಂ ॥ ೧೨೭ ॥

ನೋಡಿ ಮಂತ್ರಿಯ ವಕ್ತ್ರಮಂ ಬಿಡದಾಶುಕೇಂದ್ರನನೊಲ್ದು ಕೊಂ
ಡಾಡಿ ಪೊಂಗುವ ತುಂಗಸಂತಸಮೆಂಬ ದುಗ್ಧಪಯೋಧಿಯೊಳ್।
ನಾಡೆ ಮೂಡಿ ಮುೞುಂಗುತುದ್ಭಟರಾಜನೊಪ್ಪಿರೆ ಬಂದು ಮೇಣ್
ಕೂಡೆ ತದ್ವನಮಂ ಸಮಂತುಱು ಸಾರ್ದನಂದು ಸುಧರ್ಮಕಂ ॥ ೧೨೮ ॥

ಇಂತತಿಸಂಭ್ರಮದಿಂದೆಟ್ಟಿಂದು ಅಸುಕೆಯ ಬನಮಂ ಸಾರ್ದು ತದ್ವನಪ್ರಾಂತದೊಳೇಱಿರ್ದ ತುರುಗಮನಿೞಿದೊಳಪೊಕ್ಕಳಿಯನಂ ಕಾಣ್ಬ ತವಕದಿಂ ಬರ್ಪ ಸುಧರ್ಮನಿರವಂ ಕಂಡುದ್ಭಟಕ್ಷಿತೀಂದ್ರನಿದಿರೆೞ್ದಾನಂದದಿಂದೋರೊರ್ವರನಾಲಿಂಗಿಸಿ ಬೞಿಕ್ಕಂಪೊರೆಸಾರ್ದು ನಿಲ್ತು ಮನಂಗೊಳಿಪ ಕುಮಾರಪಾಲಘೂರ್ಜರನಂ ಸಿಂಗರಿಸಿ ತಂದ ಪಟ್ಟದಾನೆಯ ಮೇಲೆ ಬಿಜಯಂಗೈಯಿಸಿ ಶಿವಭದ್ರಂ ತಾನುಂ ಪಂಚಪಲ್ಲವದವಾಜಿಗಳ ಬೆಂಗೆವಾಯ್ದು ಸುಧರ್ಮಂ ಮಹೋತ್ಸವದಿಂ ತಂಜಾವರಪುರಾಭಿಮುಖಮಾಗಿ ನಡೆತರುತಿರ್ದಂ॥

ಹೊರಬಂದ ಸುಧರ್ಮಮಹಾರಾಜನು ನಿರ್ಬಂಧಗಳಿಲ್ಲದೆ ಮೇಲೆತ್ತಿದ ಎಳೆಯ ಮುತ್ತಿನ ಸತ್ತಿಗೆಗಳ ಸಾಲಿನ ಮಧ್ಯದಲ್ಲಿ ಚೆನ್ನಾಗಿ ಕುದುರೆಯೇರಿ, ಆನೆಗಳ ಸಮೂಹದೊಂದಿಗೆ ಹೆಚ್ಚಿನ ವೈಭವಗಳಿಂದ ಪಟ್ಟದ ಕುದುರೆಯೇರಿ ಸೂರ್ಯವಂಶವೆಂಬ ಸಾಗರಕ್ಕೆ ಚಂದ್ರಮನಂತಿರುವ ಸುಧರ್ಮನು ಬಂದನು. ವ॥ ಹೀಗೆ ಸುಧರ್ಮನು ಉದ್ಭಟಮಹಾರಾಜ ಚಂದ್ರಮನನ್ನು ಕಾಣಬೇಕೆಂಬ ಉತ್ಸಾಹದಿಂದ ಬರುತ್ತಿರಲು, ಗಿಳಿಯು ಬೇಗನೆ ಬಂದು ಮೊದಲಿಗೆ ಈ ವಿಷಯವನ್ನು ತಿಳಿಸುವೆನೆಂದು ಹಾರಿಬಂದು ಅಶೋಕವನವನ್ನು ಹೊಕ್ಕು ಮನ್ಮಥ ಬಾಣಗಳಿಂದ ಶಕ್ತಿಗುಂದಿ ಹಸುರಿನ ಕಾಂತಿಯನ್ನು ಹರಡುತ್ತಾ ಮಿನುಗುವ ಎಳೆಯ ಹುಲ್ಲಿನ ಹಾಸುಗೆಯಲ್ಲಿ ಮನಸೆಳೆಯುವಂತಿದ್ದ ಕುಮಾರಪಾಲ ಘೂರ್ಜರನನ್ನು ನೋಡಿ, ೧೨೭. ಚಂದ್ರವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವ ಉದ್ಭಟನೇ ನಿನ್ನ ಪಾದಕಮಲಗಳನ್ನು ಇದಿರುಗೊಳ್ಳುವೆನೆಂದು ಸುಧರ್ಮಮಹಾರಾಜನೆನ್ನುವವನು ಅತ್ಯುತ್ಸಾಹದಿಂದ್ಧ ಬರುತ್ತಿರುವನು ಎಂದು ಹೇಳಿದ ಗಿಳಿಯ ಮಾತಿಗೆ ಸಂತಸಗೊಂಡು ಶಿವಭಕ್ತನಾದ ಉದ್ಭಟನು ಎದ್ದು ಕುಳಿತು ತನ್ನ ಮಂತ್ರಿಯ ಮುಖವನ್ನು ನೋಡಿದನು. ೧೨೮. ಮಂತ್ರಿಯ ಮುಖವನ್ನು ನೋಡಿ, ಬಿಡದೆ ಆ ಗಿಳಿಯನ್ನು ಪ್ರೀತಿಯಿಂದ ಹೊಗಳಿ ಉಬ್ಬುತ್ತ ಅತ್ಯಾನಂದವೆಂಬ ಕ್ಷೀರಸಾಗರದಲ್ಲಿ ಚೆನ್ನಾಗಿ ಮೂಡಿ ಮುಳುಗಾಡುತ್ತಾ ಉದ್ಭಟಮಹಾರಾಜನು ಶೋಭಿಸಿರಲು ಅಲ್ಲಿಗೆ ಸುಧರ್ಮಮಹಾರಾಜನು ಚೆನ್ನಾಗಿ ಸಾಗಿ ಬಂದು ಆ ವನವನ್ನು ಬೇಗನೆ ಸಮೀಪಿಸಿದನು. ವ॥ ಹೀಗೆ ಹೆಚ್ಚಿನ ಸಂಭ್ರಮದಿಂದ ಬಂದು ಅಶೋಕವನವನ್ನು ಸಮೀಪಿಸಿ

ಅದೆಂತೆಂದೊಡೆ,

ಉರುಭೇರೀಧ್ವನಿ ತೀವೆ ದಿಕ್ತಟಮನುಂಚಸ್ತೋತ್ರಮಂ ಮಾಳ್ಪ ಬಂ
ಧುರವಂದಿವ್ರಜಮಧ್ಯದಲ್ಲಿ ಧವಳಚ್ಛತ್ರೋತ್ಕರಚ್ಛಾಯೆಯೊಳ್।
ಸ್ಮರರೂಪೋದ್ಭಟನಾನೆಯೇಱ ಮುದಮಂ ತಾಳ್ದುತ್ತರಲ್ತನ್ಮಹೀ
ವರನಂ ನಿಟ್ಟಿಸಿ ಪೆರ್ಚುತೊಯ್ಯನೆ ಸುಧರ್ಮಂಬಂದನುತ್ಸಾಹದಿಂ ॥ ೧೨೯ ॥

ಇಂತತ್ಯಂತಸಂರಂಭದಿಂದುದ್ಭಟಕ್ಷಿತೀಂದ್ರನಂ ಬಿಜಯಂಗೆಯ್ಯಿಸಿ ತಂದು ನಗರಮಂ ಪೊಕ್ಕುರುತರಮಂಗಳಮಯವಾದ ಬೆಡಂಗಿನಿಂ ಸಿಂಗರಿಸಿ ಕಂಗೊಳಿಪ ಬೀಡಾರದ ಮನೆಗಭಿಮುಖನಾಗಿ ಸುಧರ್ಮಂ ಬರೆವರೆ,

ಮೃದುಪಟ್ಟೆಯ ಮೇಲ್ಕಟ್ಟಿಂ
ಪೊದಟ್ದುರುಮಣಿದೋರಣಂಗಳಿಂ ಸೊಬಗಿಂ ಕ।
ಟ್ಟಿದ ಪೂಮಾಲೆಗಳಿಂದಮೊ
ಪ್ಪಿದುದಾಬೀಡಾರಮೆಸೆಯುತುಂ ಪೊಸಗಂಪಂ ॥ ೧೩೦ ॥

ಫಣಿಪನ ನುತಿಗಳವಡದು
ಲ್ಬಣಶೋಭೆಯನಾಂತು ನಾಡೆ ಪರಿರಂಜಿಪ ತ।
ನ್ಮಣಿಮಯಗೃಹಮಂ ರಾಜಾ
ಗ್ರಣಿ ಗೂಡಿ ಸುಧರ್ಮಭೂಮಿಪತಿ ಮಿಗೆ ಸಾರ್ದಂ ॥ ೧೩೧ ॥

ಆ ವನಪ್ರಾಂತದಲ್ಲಿ ಹತ್ತಿದ್ದ ಕುದುರೆಯಿಂದ ಇಳಿದು ವನವನ್ನು ಪ್ರವೇಶಿಸಿ ಅಳಿಯನನ್ನು ಕಾಣಬೇಕೆಂಬ ಉತ್ಸುಕತೆಯಿಂದ ಬರುತ್ತಿರುವ ಸುಧರ್ಮನ ಸ್ಥಿತಿಯನ್ನು ನೋಡಿ ಉದ್ಭಟಮಹಾರಾಜನು ಇದಿರಾಗಿ ಬಂದು ಆನಂದದಿಂದ ಒಬ್ಬರು ಮತ್ತೊಬ್ಬರನ್ನು ಆಲಂಗಿಸಿ ಬಳಿಕ ಪರಸ್ಪರ ಸಮೀಪನಿಂತು ಮನಸೆಳೆಯುವ ಕುಮಾರಪಾಲ ಘೂರ್ಜರನನ್ನು ಅಲಂಕರಿಸಿ ಕರೆತಂದು ಪಟ್ಟದಾನೆಯ ಮೇಲೆ ಕುಳ್ಳಿರಿಸಿ ಶಿವಭದ್ರ ಮತ್ತು ತಾನು ಐದು ಎಳೆಯ ಕುದುರೆಗಳ ಬೆನ್ನಮೇಲೆ ಏರಿ ಸುಧರ್ಮನು ಮಹಾ ಉತ್ಸವದಿಂದ ತಂಜಾವೂರಿಗೆ ಎದುರಾಗಿ ಬರುತ್ತಿದ್ದನು. ಅದು ಹೇಗೆಂದರೆ, ೧೨೯. ಭೇರೀಧ್ವನಿಯು ದಿಕ್ಕು ದಿಕ್ಕುಗಳಲ್ಲಿ ಚೆನ್ನಾಗಿ ಕವಿಯಲು, ಎತ್ತರವಾದ ಧ್ವನಿಯಲ್ಲಿ ಸ್ತೋತ್ರ ಮಾಡುವ ಮನೋಹರವಾದ ಹೊಗಳುಭಟ್ಟರ ಮಧ್ಯದಲ್ಲಿ ಬಿಳಿಯ ಛತ್ರಿಗಳ ನೆರಳಿನಲ್ಲಿ ಮನ್ಮಥರೂಪನಾದ ಉದ್ಭಟನು ಆನೆಯನ್ನು ಏರಿ ಸಂತೋಷವನ್ನು ಹೊಂದಿ ಬರಲು ಆ ಮಹಾರಾಜನನ್ನು ನೋಡಿ ಉಬ್ಬುತ್ತ ಮೆಲ್ಲನೆ ಸುಧರ್ಮನು ಉತ್ಸಾಹಗೊಂಡು ಬಂದನು. ವ॥ ಹೀಗೆ ಅತ್ಯಂತ ಸಂಭ್ರಮದಿಂದ ಉದ್ಭಟಮಹಾರಾಜನನ್ನು ಕರೆದುಕೊಂಡು ಬಂದು ನಗರವನ್ನು ಹೊಕ್ಕು ವಿಶೇಷವಾದ ಮಂಗಳಮಯವಾದ ಬೆಡಗಿನಿಂದ ಅಲಂಕರಿಸಿ ಕಣ್ಣಿಗೆ ಚೆಂದವಾಗಿ ಬೀಡಾರದ ಮನೆಗೆ ಇದಿರಾಗಿ ಸುಧರ್ಮನು ಬರುತ್ತಿರಲು, ೧೩೦. ಕೋಮಲವಾದ ರೇಷ್ಮೆ ವಸ್ತ್ರದ ಮೇಲ್ಕಟ್ಟಿನಿಂದ, ಹೊಳೆಯುವ ವಿಶೇಷವಾದ ಮಣಿಗಳ ತೋರಣಗಳಿಂದ, ಲಾವಣ್ಯದಿಂದ ಕಟ್ಟಿದ ಹೂ ಮಾಲೆಗಳಿಂದ ಹೊಸಕಂಪನ್ನು ಬೀರುತ್ತಾ ಆ ಬೀಡಾರವು ಚೆನ್ನಾಗಿ ಒಪ್ಪಿ ಶೋಭಿಸಿತು. ೧೩೧. ಆದಿಶೇಷನ ಹೊಗಳಿಕೆಗೆ ಮೀರಿದ ವಿಶೇಷ ಶೋಭೆಯನ್ನು

ಇಂತು ವಿರಾಜಿಪರಮನೆಯಿಂದವನೀತಳಕ್ಕವತರಿಸಿದುದ್ಭಟರಾಜೇಂದ್ರಚಂದ್ರಮನಂ ಕಂಡಾಸುಧರ್ಮ ನಶ್ವಮನಿಳಿದೆಟ್ಟಿಂದು ಶಿವಭದ್ರಂ ಗೂಡಿ ಕುಮಾರಪಾಲಘೂರ್ಜರನಂ ಬಿಜಯಂಗೈಯಿಸಿ ತಂದೊಳಪೊಕ್ಕು ಮನಂಗೊಳಿಪ ಸಭಾಮಂಟಪಮಧ್ಯಸ್ಥಿತನವರತ್ನಖಚಿತಸಿಂಹಾಸನದೊಳ್ ಕುಳ್ಳಿರಿಸಿ ತದೀಯೋಪ ಕಂಠದೊಳ್ ಶಿವಭದ್ರನಂ ಗೂಡಿ ಮಂಡಿಸಿ ಮುನ್ನಮೆ ಸಮಕಟ್ಟಿದ ಸನ್ಮಹೋತ್ಸವೋಚಿತದ್ರವ್ಯಂಗಳಭಿ ಮುಖದೊಳೊಪ್ಪಿಸುತಿರ್ದಂ॥

ಅದೆಂತೆಂದೊಡೆ,

ನಾನಾಪಟ್ಟೆಯವಸ್ತ್ರಮಂ ಬಹುಸುಗಂಧದ್ರವ್ಯಮಂ ರೌಪ್ಯಮಂ
ತಾನೊಪ್ಪಂಬಡೆದುಜ್ವಳಿಪ್ಪ ಮಣಿಭೂಷಾಸ್ತೋಮಮಂ ಹೇಮಮಂ।
ಮೀನಾಕ್ಷೀಜನಮಂ ತುರಂಗಮಮದಸ್ತಂಬೇರಮಶ್ರೇಣಿಯಂ
ಸ್ವಾನಂದಂಬಡೆದುದ್ಭಟಂಗೊಸೆದು ಕೊಟ್ಟಂ ಕಾಣ್ಕೆಯಂ ತನ್ನೃಪಂ ॥ ೧೩೨ ॥

ಇಂತಾನೃಪಂ ಕಾಣ್ಕೆಯಾಗಿ ತಂದು ವಿಸ್ತರಿಸಿದ ಸಮಸ್ತವಸ್ತುಗಳನವಲೋಕಿಸುತ್ತುಂ ಸಂತಸಂಬಡುವ ತತ್ಕುಮಾರಪಾಲಘೂರ್ಜರನಂ ಮಗುಟ್ದಾಸುಧರ್ಮಂ ನೋಡಿ,

ಇನಿತುದಿನಂ ಸಮಸ್ತಕವಿಸಂಚಯದಿಂ ಭವದೀಯಕೀರ್ತಿಯಂ
ಮನಮತಿಶಾಂತಿಯಂ ಪಡೆಯಲಾಲಿಸುತಿರ್ದೆನಿದೊಂದುಲಕ್ಷ್ಯದಿಂ।
ಜನಪತಿ ತಾವಕಾಕೃತಿಯನಿಂದುಱ ಕಂಡು ಕೃತಾರ್ಥನಾದೆನೆಂ
ದೆನುತುಚಿತೋಕ್ತಿಯಂ ನುಡಿದು ಸಂತಸಮೈದಿದನಾಸುಧರ್ಮಕಂ ॥ ೧೩೩ ॥

ಪಡೆದು ಅತಿಶಯವಾಗಿ ಮೆರೆಯುವ ಆ ಮಣಿಖಚಿತಗೃಹವನ್ನು ರಾಜರಲ್ಲಿ ಮುಖ್ಯನಾದ ಉದ್ಭಟನೊಡಗೂಡಿ ಸುಧರ್ಮಮಹಾರಾಜನು ಅಧಿಕ ಹರ್ಷದಿಂದ ನಡೆದನು. ವ॥ ಹೀಗೆ ಶೋಭಿಸಿರುವ ಅರಮನೆಯ ಮುಂದೆ ಆನೆಯಿಂದ ಇಳಿದ ಉದ್ಭಟ ಮಹಾರಾಜ ಚಂದ್ರಮನನ್ನು ನೋಡಿ, ಸುಧರ್ಮನು ಮಂತ್ರಿ ಶಿವಭದ್ರನೊಡನೆ ಕುದುರೆಯಿಂದ ಇಳಿದುಬಂದು ಕುಮಾರಪಾಲ ಘೂರ್ಜರನನ್ನು ಕರೆದುತಂದು, ಅರಮನೆಯ ಒಳಹೊಕ್ಕು, ಮನಸೆಳೆಯುವ ಸಭಾಮಂಟಪದ ನಡುವೆ ಇರುವ ನವರತ್ನಗಳಿಂದ ಕೂಡಿದ ಸಿಂಹಾಸನದ ಮೇಲೆ ಕುಳ್ಳಿರಿಸಿ, ಅದರ ಸಮೀಪದಲ್ಲೇ ಶಿವಭದ್ರನೊಡಗೂಡಿ ಕುಳಿತು, ಮೊದಲೇ ಚೆನ್ನಾಗಿ ಕಟ್ಟಿದ ಶುಭಮಹೋತ್ಸವಕ್ಕೆ ಯೋಗ್ಯವಾದ ದ್ರವ್ಯಗಳನ್ನು ಇದಿರಿನಲ್ಲಿ ಒಪ್ಪಿಸುತ್ತಿದ್ದನು. ಅದು ಹೇಗೆಂದರೆ, ೧೩೨. ನಾನಾ ಬಗೆಯ ರೇಷ್ಮೆ ವಸ್ತುಗಳನ್ನು, ಅಪಾರ ಸುಗಂಧ ದ್ರವ್ಯವನ್ನು ಬೆಳ್ಳಿಯನ್ನು ಶೋಭೆಯನ್ನು ಹೊಂದಿ ಬೆಳಗುತ್ತಿರುವ ಮಣಿ ಭೂಷಣಗಳನ್ನು ಚಿನ್ನವನ್ನು ಮೀನನೇತ್ರೆಯರನ್ನು ಕುದುರೆಗಳನ್ನು ಮದ್ದಾನೆಗಳನ್ನು ಸಂತೋಷದಿಂದ ಉದ್ಭಟನಿಗೆ ಸುಧರ್ಮಮಹಾರಾಜನು ಕಾಣಿಕೆಯಾಗಿ ಕೊಟ್ಟನು. ವ॥ ಹೀಗೆ ಆ ಮಹಾರಾಜನು ಕಾಣಿಕೆಯಾಗಿ ತಂದು ಹರಡಿದ ಸಮಸ್ತ ವಸ್ತುಗಳನ್ನು ನೋಡುತ್ತ ಸಂತೋಷಪಡುವ ಆ ಕುಮಾರಪಾಲ ಘೂರ್ಜರನನ್ನು ಮತ್ತೆ ಸುಧರ್ಮನು ನೋಡಿ, ೧೩೩. ಇಷ್ಟು ದಿವಸ ಸಮಸ್ತ ಕವಿಜನರಿಂದ ನಿನ್ನ ಕೀರ್ತಿಯನ್ನು ಮನಸ್ಸು ಹೆಚ್ಚಿನ ಶಾಂತಿಯನ್ನು ಪಡೆಯಲೆಂದು ಕೇಳುತ್ತಿದ್ದೆನು. ಈ ಒಂದು ಉದ್ದೇಶದಿಂದ ಮಹಾರಾಜಾ ನಿನ್ನ ಆಕೃತಿಯನ್ನು ಇಂದು

ಇಂತುತ್ಸವಂಬಡೆದುರ್ವಿಪನ ಮನದ ಹರ್ಷಮಂ ಕಂಡುದ್ಭಟಕ್ಷಿತೀಂದ್ರಚಂದ್ರಮನತಿಮೋದಮಂ ತಳೆದಿರಲಾಸಮಯದೊಳ್‌ಪಿಂತೆಸಿಲ್ಕಿದ ತನ್ನ ಸೇನೆಯೆಲ್ಲಂ ಮೆಲ್ಲನೆ ಬರಲದಂ ಕಾಣಿಸಿಕೊಂಡು ತನ್ನಗರಪ್ರಾಂತದೊಳ್ಬೀಡಂ ಬಿಡಲ್ವೇಳ್ಕುಮೆಂದನುಜ್ಞೆಯಂ ಕೊಟ್ಟು ಬೀಱ್ಕೊಟ್ಟು ಮಗುೞ್ದಾಕುಮಾರಪಾಲ ಘೂರ್ಜರಂ ಸುಧರ್ಮನಂ ನೋಡಿ,

ತೀವಿದ ಸಂತಸದಿಂದಂ
ನೀವಿನ್ನರಮನೆಗೆ ಪೋಪುದೆನೆ ತದ್ಧಾ।
ತ್ರೀವರಸುಧರ್ಮನುದ್ಭಟ
ದೇವನನುಚಿತೋಕ್ತಿಯಿಂದೊಸೆದು ಬೀಱ್ಕೊಂಡಂ ॥ ೧೩೪ ॥

ಚಂಡಿಕೆಯಂ ಸಮರ್ಚಿಸಿ ಕುಮಾರಿಕೆಯಂ ಪಡೆದುಂಚಸೈಪುಮಂ
ಕೊಂಡೆನಗಿಂದು ಸಾರ್ದುದೆನುತಂದುರುಸಮ್ಮದವಾಂತು ತನ್ಮಹೀ।
ಮಂಡಲವಲ್ಲಭವ್ರಜಶಿಖಾಮಣಿಯುದ್ಭಟನಂ ಸಮಂತು ಬೀ
ಱ್ಕೊಂಡು ನಿಜಾಲಯಕ್ಕೆ ತಳರ್ದಂ ದಿನನಾಥಕುಲಾಬ್ಧಿಚಂದ್ರಮಂ ॥ ೧೩೫ ॥

ಪಟ್ಟನೃಪಾಗ್ರಗಣ್ಯನೆನಲೊಪ್ಪುವ ನರ್ಮಸುಧರ್ಮವರ್ಮನಂ
ಪುಟ್ಟೆ ಮನೋನುರಾಗವಸಕೃದ್ವಿನಯೋಕ್ತಿಯಿನಂದು ಕೂರ್ತು ಬೀ।
ೞ್ಕೊಟ್ಟು ವಿರಾಜಿಪುದ್ಭಟಮಹೀಶನ ಚಿತ್ತಸರೋಜಮಧ್ಯದೊ
ಳ್ನೆಟ್ಟು ಥಳತ್ಥಳಿಪ್ಪ ಶಿವ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೩೬ ॥

ಚೆನ್ನಾಗಿ ನೋಡಿ ಕೃತಾರ್ಥನಾದೆನು ಎಂದು ಸಂದರ್ಭೋಚಿತವಾಗಿ ನುಡಿದು ಸುಧರ್ಮನು ಸಂತೋಷಹೊಂದಿದನು. ವ॥ ಹೀಗೆ ಸಂತೋಷದಿಂದ ಮಹಾರಾಜನ ಮನದ ಹರ್ಷವನ್ನು ನೋಡಿದ ಉದ್ಭಟ ಮಹಾರಾಜಚಂದ್ರಮನು ಅತ್ಯಾನಂದವನ್ನು ಹೊಂದಿರಲು ಆ ಸಮಯದಲ್ಲಿ ಹಿಂದೆ ಬಿದ್ದ ತನ್ನ ಸೈನ್ಯವೆಲ್ಲಾ ಮೆಲ್ಲನೆ ಬರುತ್ತಿರಲು ಅದಕ್ಕೆ ಕಾಣಿಸಿಕೊಂಡು ಆ ನಗರ ಪ್ರಾಂತದಲ್ಲಿ ಬೀಡನ್ನು ಬಿಡಲು ಹೇಳಿ ಆಜ್ಞೆಮಾಡಿ ಸೈನ್ಯವನ್ನು ಬೀಳ್ಕೊಟ್ಟು ಮತ್ತೆ ಆ ಕುಮಾರಪಾಲ ಘೂರ್ಜರನು ಸುಧರ್ಮನನ್ನು ನೋಡಿ, ೧೩೪. ತುಂಬಿದ ಆನಂದದಿಂದ ನೀವಿನ್ನು ಅರಮನೆಗೆ ಹೋಗುವುದೆನ್ನಲು ಮಹಾರಾಜ ಸುಧರ್ಮನು ಉದ್ಭಟದೇವನನ್ನು ಯೋಗ್ಯಮಾತುಗಳಿಂದ ಬೀಳ್ಕೊಂಡನು. ೧೩೫. ಚಂಡಿಕಾದೇವಿಯನ್ನು ಚೆನ್ನಾಗಿ ಪೂಜಿಸಿ ಮಗಳನ್ನು ಪಡೆದುದಕ್ಕಿಂತ ಹೆಚ್ಚಿನ ಪುಣ್ಯವು ನನಗಿಂದು ಪ್ರಾಪ್ತಿಯಾಯಿತು ಎಂದು ಹೆಚ್ಚಿನ ಸಂತಸವನ್ನು ತಳೆದು ಭೂಮಂಡಲದ ರಾಜರುಗಳ ಶಿರೋಮಣಿಯಾದ ಉದ್ಭಟನನ್ನು ಚೆನ್ನಾಗಿ ಬೀಳ್ಕೊಂಡು ಸೂರ್ಯವಂಶವೆಂಬ ಸಮುದ್ರಕ್ಕೆ ಚಂದ್ರನಂತಿರುವ ಸುಧರ್ಮನು ತನ್ನರಮನೆಗೆ ನಡೆದನು. ೧೩೬. ಪಟ್ಟಾಭಿಷಿಕ್ತ ರಾಜರುಗಳಲ್ಲಿ ಅಗ್ರಗಣ್ಯನೆನ್ನಲು ಒಪ್ಪುವ ವಿನಯಶೀಲನಾದ ಸುಧರ್ಮವರ್ಮನನ್ನು ಮನದಾನಂದದಿಂದ ಕೂಡಿದ ವಿನಯೋಕ್ತಿಯಿಂದ ಮೆಚ್ಚುಗೆಯಿಂದ ಬೀಳ್ಕೊಟ್ಟು ಶೋಭಿಸಿರುವ ಉದ್ಭಟಮಹಾರಾಜನ ಹೃದಯಕಮಲದ

ಇದು ಸಮಸ್ತಸುರಕದಂಬಕವಿಜೃಂಭಿತಮಕುಟತಟಘಟಿತನವರತ್ನಪುಂಜಸಂಜಾತ
ಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾವನ
ಪಾದನಖೋಚ್ಚಳಿತ ಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣಶ್ರೀಸೋಮರಾಜೇಂದ್ರವಿರ
ಚಿತಮಪ್ಪಶೃಂಗಾರಸಾರಮಹಾಪ್ರಬಂಧದೊಳ್‌ಸುಧರ್ಮ
ದರ್ಶನವರ್ಣನಂಸಪ್ತಮಾಶ್ವಾಸಂ ಮುಗಿದುದು.

ಮಧ್ಯದಲ್ಲಿ ನೆಲೆಗೊಂಡು ಥಳಥಳ ಹೊಳೆಯುತ್ತಿರುವ ಶಿವನೇ, ಅಲ್ಲಮಪ್ರಿಯನೇ ನನ್ನನ್ನು ಕಾಪಾಡುವುದು. ವ|| ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ (ಅವರ) ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು (ಅದನ್ನು) ಸೇವಿಸಲು ಚಕೋರಪಕ್ಷಿಯಂತೆ ಕಾತುರವಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಏಳನೆಯ ಆಶ್ವಾಸದ ಸುಧರ್ಮದರ್ಶನ ವರ್ಣನೆಯು ಮುಗಿಯಿತು.

# ಎಂಟನೆಯ ಆಶ್ವಾಸಂ

ಶ್ರೀಮನ್ಮೂರ್ತಿಯನಧಿಕಕ
ಲಾಮಯಮೂರ್ತಿಯುದ್ಭಟಾಂಕನಂ ಬೀಳ್ಕೊಂಡು।
ದ್ದಾಮಮುದಂಬಡೆದುಱ್ಱೆ ನಿಜ
ಧಾಮಮನೆಯ್ದಿಂದು ಸಾರ್ದನಂದು ಸುಧರ್ಮಂ ॥ ೧ ॥

ಬಂದು ನಿಜಾಲಯಕ್ಕೊಡನೆ ಬಂದ ಸಮಸ್ತನೃಪಾಲಪುತ್ರರಂ
ವಂದಿಗಳಂ ಚಮೂಪರನಿಭಾಶ್ವಪದಾತಿಸಮಾಜಮಂ ಘನಾ।
ನಂದರಸುವಿಲಂ ಕಳುಪಿ ಮೇಣೊಳಪೊಕ್ಕು ವರಪ್ರಧಾನನಂ
ಕುಂದದ ಕೂರ್ಮೆಯಿಂ ಕರೆಸಿದಂ ವನಜಪ್ರಿಯವಂಶವರ್ಧನಂ ॥ ೨ ॥

ಇಂತು ತನ್ನ ಮಂತ್ರಿಯಂ ಕರೆಸಿ ಪರಿಣಯಮಂಟಪಮಂ ಮಾಡಿಸಲ್ವೇಳ್ದು ಬೀಳ್ಕೊಟ್ಟು ಸಂತಸದಿಂದಂತಃಪುರಮಂ ಪೊಕ್ಕುತ್ಸವಂಬಡುವ ಸತ್ಯವತಿಯೊಡನೆ ಯುದ್ಭಟರಾಜೇಂದ್ರಚಂದ್ರಮನ ಕಂಡ ವೃತ್ತಾಂತಮಂ ವಿಸ್ತಾರಮಾಗೆ ಪೇಳ್ದು ತತ್ಸತಿಗೂಡಿ ಸುಧರ್ಮನಿರಲಿತ್ತನೃಪನನುಜ್ಞೆಯಂ ಪಡೆದಮಾತ್ಯನೆಯ್ದಿಂದು ಕುಶಲವರ್ಧಕಿಗಳಂ ಬರೆಸಿ ವಿವಾಹ ಮಂಟಪವನತಿಮನೋಹರಮಾಗಿ ವಿರಚಿಸೆಂದುಸಿರ್ದು ಪಸದನಮನಿತ್ತುಕಳುಪೆ,

೧. ಚೆಲುವಿನ ಮೂರ್ತಿಯನ್ನು, ಕಲೆಗಳಲ್ಲಿ ಹೆಚ್ಚಿನ ತಿಳುವಳಿಕೆಯುಳ್ಳ ಉದ್ಭಟಾಂಕನನ್ನು ಬೀಳ್ಕೊಂಡು ಅತ್ಯಾನಂದವನ್ನು ಹೊಂದಿದ ಸುಧರ್ಮನು ಬೇಗ ಬೇಗನೆ ನಡೆದು ಬಂದು ತನ್ನ ಅರಮನೆಯನ್ನು ಸಮೀಪಿಸಿದನು. ೨. ಅರಮನೆಗೆ ಬಂದು, ತನ್ನ ಜೊತೆ ಬಂದ ಸಕಲ ರಾಜಕುಮಾರರನ್ನು, ಹೊಗಳುಭಟ್ಟರನ್ನು, ಸೈನ್ಯಾಧಿಪತಿಗಳನ್ನು, ಆನೆ, ಕುದುರೆ, ಕಾಲಾಳುಗಳ ಮೊತ್ತವನ್ನು ಅತ್ಯಾನಂದದಿಂದ ಕಳುಹಿಸಿ, ಅನಂತರ ಒಳಗೆ ಹೋಗಿ ಶ್ರೇಷ್ಠನಾದ ಮಂತ್ರಿಯನ್ನು ಸೂರ್ಯವಂಶವನ್ನು ಬೆಳೆಯಿಸುವ ಸುಧರ್ಮನು ಕೊರತೆಯಾಗದ ಪ್ರೀತಿಯಿಂದ ಕರೆಯಿಸಿದನು. ವ॥ ಹೀಗೆ ತನ್ನ ಮಂತ್ರಿಯನ್ನು ಕರೆಯಿಸಿ ವಿವಾಹಮಂಟಪವನ್ನು ಮಾಡಿಸಲು ಹೇಳಿ ಬೀಳ್ಕೊಟ್ಟು ಆನಂದದಿಂದ ಅಂತಃಪುರವನ್ನು ಪ್ರವೇಶಿಸಿ ಮುದಗೊಂಡ ಸತ್ಯವತಿಯೊಡನೆ ಉದ್ಭಟರಾಜೇಂದ್ರ ಚಂದ್ರಮನನ್ನು ಕಂಡ ವಿಷಯವನ್ನು ವಿವರವಾಗಿ ಹೇಳಿ ತನ್ನ ಹೆಂಡತಿಯೊಡಗೂಡಿ ಸುಧರ್ಮನಿರಲು, ಇತ್ತ ಮಹಾರಾಜನ ಅಪ್ಪಣೆಯನ್ನು ಪಡೆದ ಮಂತ್ರಿಯು ಬಂದು ಕುಶಲರಾದ ಬಡಗಿಗಳನ್ನು ಕರೆಯಿಸಿ ವಿವಾಹ ಮಂಟಪವನ್ನು ಅತಿ ಮನೋಹರವಾಗಿ ಸಿದ್ಧಪಡಿಸೆಂದು ಹೇಳಿ ಆಭರಣಗಳನ್ನು (ಬಹುಮಾನ) ಕೊಟ್ಟು

ಸಚಿವನನುಜ್ಞೆಯಂ ಪಡೆದು ವರ್ಧಕಿಗಳ್ನಡೆತಂದು ರತ್ನಸಂ
ಖಚಿತಮನುಚ್ಚಲದ್ಧ್ವಜಸಮಾಜಮನಚ್ಚಪಟೀವಿತಾನಮಂ
ಪ್ರಚುರನಿಬದ್ಧತೋರಣಮನಂಚಿತನೂತನಪುಷ್ಪಮಾಲಿಕಾ
ಪ್ರಚಯಮನೊಲ್ದು ತಾಪ ರಚಿಸಿದರ್ಕಮನೀಯವಿವಾಹಗೇಹಮಂ ॥ ೩ ॥

ಮಾಣಿಕಗಂಬದೋಳಿಯಿನಮರ್ಚಿದ ಪಚ್ಚೆಯಪಾಸುಗಲ್ಲ ಬಿ
ನ್ನಾಣದಿನಿಂದ್ರನೀಲಮಣಿವೇದಿಕೆಯಿಂ ಬಿಡದುಜ್ವಲಿಪ್ಪಕ।
ಟ್ಟಾಣಿಯಮುತ್ತು ತೆತ್ತಿಸಿದ ಸೂಸುಕದಿಂ ಮಿಗೆ ವಿಶ್ವಕರ್ಮನಿ
ರ್ಮಾಣಮಿದೆಂಬಿನಂ ಬಗೆಗೆ ಕೌತುಕಮಾಯ್ತು ವಿವಾಹಮಂಟಪಂ ॥ ೪ ॥

ಪಚ್ಚೆವರಲ್ತೋರಣದಿಂ
ದಚ್ಚಗೊಳಿಪ್ಪಚ್ಚ ಪಟ್ಟೆಗಳ ಮೇಲ್ಕಟ್ಟಿಂ।
ಪೊಚ್ಚಪೊಸಮುತ್ತುವಣಿಗಳ
ಕುಚ್ಚುಗಳಿಂದೆಸೆದುದಾವಿವಾಹಾಗಾರಂ ॥ ೫ ॥

ಮುತ್ತಿನ ಕೈಯಿಂದಡಿಕಿ
ಲ್ವೆತ್ತುರುಶೃಂಗಾರಘಟವಿತತಿಯಿಂ ತಳೆದೊ।
ಳ್ಗತ್ತುರಿನೀರಿಂ ಕಣ್ಗೆಸೆ
ದತ್ತೆಳೆದಳಿರ್ದೋರಣಂಗಳಿಂದಾಪಂದಲ್ ॥ ೬ ॥

ಇಂತು ಮನಂಗೊಳಿಪ ವಿವಾಹಮಂಟಪಮಧ್ಯದಲ್ಲಿ,

ಸಕಲಾಮ್ನಾಯವಿಶಾರದರ್ವಿಪುಳಶಾಸ್ತ್ರಜ್ಞರ್ಬುಧರ್ಸತ್ಪುರಾ
ಣಕರಾರ್ಯರ್ನಿಖಿಳಾಗಮಾರ್ಥನಿಪುಣರ್ ವೈದ್ಯರ್ ವರಜ್ಯೋತಿಷರ್।
ಸುಕವೀಂದ್ರರ್ಘನತಾರ್ಕಿಕರ್ಗಮಕಿಗಳ್ ವೈತಾಳಿಕರ್ಮಾಂತ್ರಿಕ
ಪ್ರಕಟೀಭೂತಸಮಸ್ತಶಬ್ದಚಯರಂದೊಪ್ಪಿರ್ದರಾಪಂದಲೊಳ್ ॥ ೭ ॥

ಕಳುಹಿಸಲು, ೩. ಮಂತ್ರಿಯ ಅಪ್ಪಣೆಯನ್ನು ಪಡೆದು ಬಡಗಿಗಳು ಬಂದು ರತ್ನಖಚಿತವಾದ ಮೇಲೆ ಹಾರಾಡುವ ಧ್ವಜ ಸಮೂಹವನ್ನು, ಸುಂದರವಾಗಿ ಪಟಗಳನ್ನು ವಿಸ್ತಾರವಾಗಿ ಕಟ್ಟಿದ ತೋರಣವನ್ನು, ಮನೋಹರವಾದ ಹೊಸ ಹೂಮಾಲೆಗಳನ್ನು ಪ್ರೀತಿಯಿಂದ ಸೃಷ್ಟಿಸಿ ಸೊಗಸಾದ ವಿವಾಹ ಮಂಟಪವನ್ನು (ಹೀಗೆ) ಸಿದ್ಧಪಡಿಸಿದರು. ೪. ಆ ವಿವಾಹ ಮಂಟಪವು ಮಾಣಿಕ್ಯದ ಕಂಬಗಳಿಂದ ಹೊಂದಿಸಿದ ಪಚ್ಚೆಯ ಹಾಸುಗಲ್ಲಿನ ಸೊಗಸಿನಿಂದ, ಇಂದ್ರನೀಲಮಣಿ ವೇದಿಕೆಯಿಂದ ಚೆನ್ನಾಗಿ ಹೊಳೆಯುವ ಬೆಲೆಬಾಳುವ ಮುತ್ತನ್ನು ಕೀಲಿಸಿದ ಬೈತಲೆ ಮಣಿಯಿಂದ, ಅತಿಶಯವಾದ ವಿಶ್ವಕರ್ಮನ ಸೃಷ್ಟಿಯೆನ್ನುವಂತೆ ಮನಸ್ಸಿಗೆ ಅಚ್ಚರಿಯನ್ನುಂಟುಮಾಡಿತು. ೫. ಪಚ್ಚೆ ಹರಳಿನ ತೋರಣದಿಂದ, ಶುದ್ಧವಾದ ಬೆಲೆಬಾಳುವ ರೇಷ್ಮೆ ವಸ್ತ್ರಗಳ ಮೇಲುಕಟ್ಟಿನಿಂದ, ಆ ನವನವೀನವಾದ ಮುತ್ತಿನ ಮಣಿಗಳ ಕುಚ್ಚುಗಳಿಂದ ಆ ವಿವಾಹ ಮಂಟಪವು ಅಂದಗೊಂಡಿದ್ದಿತು. ೬. ಮುತ್ತಿನ ಅಲಂಕಾರದಿಂದ ಒಂದರ ಮೇಲೊಂದು ಪೇರಿಸಿದ ಸೊಗಸಾಗಿ ಚಿತ್ತಾರಗೊಂಡು ಮಡಕೆಗಳಿಂದ ಚಿಮುಕಿಸಿದ ಒಳ್ಳೆಯ ಕಸ್ತೂರಿಯ ನೀರಿನಿಂದ, ಚಿಗುರಿನ ತೋರಣಗಳಿಂದ ಆ ಚಪ್ಪರವು ಕಣ್ಣಿಗೆ ಅಂದವಾಗಿ ಕಾಣುತ್ತಿತ್ತು. ವ॥ ಹೀಗೆ ಮನಸೆಳೆಯುವ ವಿವಾಹಮಂಟಪದ ಮಧ್ಯದಲ್ಲಿ, ೭. ಆ ಚಪ್ಪರದಲ್ಲಿ

ಆಡುವ ನಚ್ಚಣಿಯರ್ಕಳ ಪೆಂಪಿಂ
ಪಾಡುವ ಗೇಯರಸಾಮೃತದಿಂಪಿಂ।
ನಾಡೆ ಮೃದಂಗನಿನಾದದ ಸೊಂಪಿಂ
ಗಾಡಿಯನಾಂತುದು ಪಂದಲಲಂಪಿಂ ॥ ೮ ॥

ಮತ್ತಮದಲ್ಲದೆ,

ಅಂಗರುಚಿ ತೋಱೆ ಜಲಮಂ ಗಣಿಸೆ ಕಂಗಳೆಳೆಮೀನ್ಗಳನುದಂಚಿತತರಂಗಮೆನಿಸಲ್ ತೋಳ್
ಮುಂಗುರುಳ ತೊಂಗಲುರುಭೃಂಗತತಿಯಂ ಗಣಿಸೆ ತುಂಗಕುಚಮೇಳಿಸೆರಥಾಂಗದ ಪೊಡರ್ಪಂ
ಸಂಗಳಿಸೆ ಪಾದನಖರಂಗಳ ಮರೀಚಿಕೆ ಬಿಸಂಗಳನತಿಕ್ರಮಿಸೆ ಫೇನಮನೆ ಹಾಸಂ
ಸಿಂಗರದ ತಂಗೊಳದ ಪಾಂಗಿನ ಬೆಡಂಗಮರ್ದ ಮಂಗಳಗೃಹಾಂಗಣ ದೊಳಂಗನೆಯರಿರ್ದರ್ ॥ ೯ ॥

ಮತ್ತಮದಲ್ಲದೆಳವೆಣ್ಗಳೇಱುಗ್ಗಿಯಿಂ ಗಣಿಕೆಯರಣೆಯರದಿಂ ನಚ್ಚಣಿಗೆಯರ ಪೆರ್ಚುಗೆಯಿಂ ಗಾಯಿನಿಯರಾಯತಿಯಿಂ ಸುವಾಸಿನಿಯರ್ಕಳ ಸೊಬಗಿನಿಂ ಮನಂಗೊಳಿಪ ತದ್ವಿವಾಹಮಂಟಪದಲಂಪಿನ ಪೆಂಪಂ ನಡೆನೋಡಿ ಪೊಂಗಿ ಪೊಱಿಯೇಱಿ ಮಗುಟ್ಟು ಬಂದಾಸಚಿವಪುಂಗವಂ ಸುಧರ್ಮನಂ ಕಂಡು,

ಸಕಲವೇದಗಳಲ್ಲಿ ಬಲ್ಲಿದರಾದವರು, ವಿಸ್ತಾರವಾದ ಶಾಸ್ತ್ರಗಳಲ್ಲಿ ತಿಳಿವಳಿಕೆಯುಳ್ಳವರು, ವಿದ್ವಾಂಸರು, ಪುರಾಣಿಕರು, ಗುರುಗಳು, ವೇದಾರ್ಥ ನಿಪುಣರು, ವೈದ್ಯರು, ಶ್ರೇಷ್ಠ ಜ್ಯೋತಿಷ್ಯರು, ಒಳ್ಳೆಯ ಕವಿಗಳು, ಹಿರಿಯ ವಾದಿಗಳು, ಗಮಕಿಗಳು, ಭೂತೋಚ್ಚಾಟಕರು, ಮಾಂತ್ರಿಕರು, ಮಾತಿನ ಮಲ್ಲರು ಶೋಭಿಸಿದ್ದರು. ೮. ಆ ಚಪ್ಪರವು ಆಡುವ ನರ್ತಕಿಯರುಗಳ ಚೆಲುವಿನಿಂದ, ಹಾಡುವವರ ಹಾಡಿನ ರಸಾಮೃತದ ಸವಿಯಿಂದ, ಸೊಗಸಾದ ಮೃದಂಗ ಧ್ವನಿಯ ಸೊಂಪಿನಿಂದ ಚೆಲುವಿಕೆಯನ್ನು ಪಡೆಯಿತು. ವ॥ ಮತ್ತೆ ಅದಲ್ಲದೆ, ೯. ದೇಹಕಾಂತಿಯು ನೀರನ್ನು ತೋರಲು, ಕಣ್ಣುಗಳು ಮೀನುಗಳನ್ನು ಲೆಕ್ಕಹಾಕಲು ತೋಳು ಶ್ರೇಷ್ಠ ರಂಗಸ್ಥಳವಾಗಿರಲು ಮುಂಗುರುಳು ಮೊತ್ತಗೊಂಡ ದುಂಬಿಗಳನ್ನು ಎಣಿಸಲು, ಮೊಲೆಗಳು ಚಕ್ರವಾಕಪಕ್ಷಿಗಳ ಕಾಂತಿಯನ್ನು ಹೊಂದಿಸಲು, ಪಾದಗಳ ಬೆರಳುಗಳು ಕಮಲದ ದಂಟುಗಳ ಭ್ರಮೆಯನ್ನುಂಟುಮಾಡಿರಲು, ಮಂದಹಾಸವು ನೊರೆಯನ್ನು ಮೀರಿರಲು ಸೊಗಸುಗೊಂಡಿರುವ ತಣ್ಣನೆಯ ಕೊಳದ ರೀತಿಯಲ್ಲಿ ಚೆಲುವನ್ನು ಹೊಂದಿದ ಮಂಗಳಗೃಹದ ಅಂಗಣದಲ್ಲಿ ಸುಂದರಿಯರಿದ್ದರು. ವ॥ ಮತ್ತೆ ಅದಲ್ಲದೆ ಅಪಾರಸಂಖ್ಯೆಯ ಎಳೆಯ ವಯಸ್ಸಿನ ಸುಂದರಿಯರಿಂದ, ಸೂಳೆಯರ ಮೊತ್ತದಿಂದ ನರ್ತಕಿಯರ ಹೆಚ್ಚಳದಿಂದ, ಹಾಡುಗಾರ್ತಿಯರ ವಿಸ್ತಾರದಿಂದ ಮುತ್ತೈದೆಯರುಗಳ ಸೊಬಗಿನಿಂದ ಮನಸೆಳೆಯುವ ಆ ವಿವಾಹಮಂಟಪದ ಅತಿಶಯ ಸೌಂದರ್ಯವನ್ನು ಚೆನ್ನಾಗಿ ನೋಡಿ ಉಬ್ಬಿ ಉತ್ಸಾಹಗೊಂಡು ಹಿಂತಿರುಗಿ ಬಂದ ಆ ಮಂತ್ರಿ ಶ್ರೇಷ್ಠರು ಸುಧರ್ಮ ಮಹಾರಾಜರನ್ನು

/ ನೃಪ ನೀಂ ಬೆಸನಂ ಕೊಡಲೊ
ಲ್ದುಪಮಿಸಲಳವಡದಲಂಪಿನಿಂ ಪಂದಲ್ ಶೋ।
ಭಿಪ ಸಿಂಗರಮಾಯ್ತೆನೆ ತ
ತ್ತಪನಾನ್ವಯವಾರ್ಧಿಪೂರ್ಣಚಂದ್ರಮನಾಗಳ್ ॥ ೧೦ ॥

ವರಸತ್ಯವತಿಯನೀಕ್ಷಿಸಿ
ಕರೆಸಿ ವಧೂಜನಮನೊಲ್ದು ಭೂಪಾಲಂ ಸೌಂ।
ದರವತಿಯಂ ಭೋಂಕೆನೆ ಸಿಂ
ಗರಿಸುವುದೆಂದುಸುರ್ದು ಮಗುಳ್ಚಿ ಕಳುಪಿದನವರಂ ॥ ೧೧ ॥

ರಾಯನನುಜ್ಞೆಯಂ ತಳೆದು ಸಂತಸದಿಂ ಶಶಿಲೇಖೆಮುಖ್ಯಮಾ
ದಾಯುವತೀಜನಂ ಮದನವಾಹಿನಿಯಿರ್ಪವೊಲೊಲ್ದು ಬಂದು ತಾಂ।
ತೋಯಜನೇತ್ರೆ ಸೌಂದರಿಗೆ ಮಂಗಳಮಜ್ಜನಮಂ ನಿಮಿರ್ಚಿಸ
ಲ್ಕಾಯತಮಾಗಿ ಮುತ್ತುವಸೆಯಂ ನಲಿದಿಕ್ಕಿದರಂದು ಪಾಡುತುಂ ॥ ೧೨ ॥

ಅಂತು ಸಂತಸಮನಾಂತೊಡರ್ಚಿದೆಳೆಮುತ್ತಿನ ಮಿಸುಪಪೊಸಪಸೆಯೊಳ್ಬದ್ದವಣಂ ಮೊಱಗಲುತ್ಸವದಿಂ ಕಾಂತಾಜನಂ ಸೌಂದರವತಿಯಂ ತಂದು ಕುಳ್ಳಿರಿಸಿದಾಗಳ್,

ಶೋಭನಮಲರೆ ಸಿತಾಂಬುಜ
ಶೋಭೆಯನಾಂತ್ಯೆದೆ ತೊಳಪ ಮುತ್ತಿನ ಪಸೆಯೊಳ್।
ಶ್ರೀಭಾಮಿನಿಯೆಂಬಂತೆ ವೊ
ಲಾಭಾಮಿನಿ ಕಂಗೊಳಿಸಿದಳತಿಮುದದಿಂದಂ ॥ ೧೩ ॥

ಕಂಡು, ೧೦. "ಮಹಾರಾಜಾ, ನೀನು ಆಜ್ಞೆ ಮಾಡಲು ಪ್ರೀತಿಯಿಂದ ಎಣೆಯಿಲ್ಲದ ಸೊಗಸಿನಿಂದ ಚಪ್ಪರವು ಶೋಭೆಯನ್ನು ಪಡೆದು ಅಲಂಕಾರಗೊಂಡಿತು" ಎನ್ನಲು ಆಗ ಸೂರ್ಯವಂಶವೆಂಬ ಸಮುದ್ರಕ್ಕೆ ಪೂರ್ಣಚಂದ್ರನಂತಿರುವ ಸುಧರ್ಮನು, ೧೧. ಮಹಾರಾಜನು ಶ್ರೇಷ್ಠಳಾದ ಸತ್ಯವತಿಯನ್ನು ನೋಡಿ ಪ್ರೀತಿಯಿಂದ ಸ್ತ್ರೀಯರನ್ನು ಕರೆಯಿಸಿ, ಸೌಂದರವತಿಗೆ ಬೇಗನೆ ಅಲಂಕಾರಮಾಡುವುದೆಂದು ಹೇಳಿ ಅವರನ್ನು ಹಿಂತಿರುಗಿಸಿದನು. ೧೨. ರಾಜನ ಆಜ್ಞೆಯನ್ನು ಪಡೆದು ಸಂತೋಷದಿಂದ ಶಶಿಲೇಖೆಯೇ ಮುಖ್ಯಳಾದ ಆ ಸ್ತ್ರೀಯರು, ಮನ್ಮಥ ಸೈನ್ಯದಂತೆ ಪ್ರೀತಿಯಿಂದ ಬಂದು ಆ ಕಮಲಾಕ್ಷಿ ಸೌಂದರಿಗೆ ಮಂಗಳ ಸ್ನಾನವನ್ನು ಮಾಡಿಸಿ ವಿಶಾಲವಾದ ಮುತ್ತಿನ ಪೀಠವನ್ನು ಸಂತಸದಿಂದ ಹಾಡುತ್ತ ಹಾಕಿದರು. ವ॥ ಹಾಗೆ ಸಂತೋಷವನ್ನು ಹೊಂದಿ ಹಾಕಿದ ಎಳೆಯ ಮುತ್ತಿನ ಹೊಳೆವ ನವೀನವಾದ ಪೀಠದಲ್ಲಿ ಮಂಗಳವಾದ್ಯವು ಮೊಳಗಲು ಸಂತಸದಿಂದ ಸುಂದರಿಯರು ಸೌಂದರವತಿಯನ್ನು ಕರೆತಂದು ಕುಳ್ಳಿರಿಸಲು, ೧೩. ಮಂಗಳವು ಹರಡಿರಲು ಬಿಳಿಯ ತಾವರೆಯ ಶೋಭೆಯನ್ನು ಹೊಂದಿ ಚೆನ್ನಾಗಿ ಬೆಳಗುವ ಮುತ್ತಿನ ಪೀಠದಲ್ಲಿ ಲಕ್ಷ್ಮಿಯೋ ಎನ್ನುವಂತೆ ಆ ಸುಂದರಿಯು ಅತ್ಯಾನಂದದಿಂದ ಕಣ್ಣಿಗೆ ಅಂದವಾದಳು.

ಮುತ್ತಿನ ಪಟ್ಟವಣೆಯ ಮೇ
ಲುತ್ತಮಸೌಂದರಿಯೆಸೆದಳಮರ್ದು ಬೆಳ್ಮುಗಿಲೊಳ್।
ಪತ್ತಿ ಮನಂಗೊಳಿಸುವ ಭಾ
ಸ್ವತ್ತುಹಿನಮರೀಚಿಲೇಖೆ ತಾನೆಂಬಿನೆಗಂ ॥ ೧೪ ॥

ಇಂತು ಮಿಸುಪ ಪೊಸಮುತ್ತಿನ ಪಸೆವಣೆಯ ಮೇಲೊಸೆದು ಮಂಡಿಸಿ ಮನಂಗೊಳಿಪ ತತ್ಸೌಂದರವತಿಗೊರ್ವ ತಳೋದರಿಯುಂಮಹದಿಂದಂ ಕಮ್ಮೆಣ್ಣೆಯನುಗುರಿಸಿದಳ್॥

ಅದೆಂತೆಂದೊಡೆ,

ತಾಟಂಕಂಗಳ್ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ ತೋರ್ಪೊ
ಳ್ನೋಟಂ ನಲ್ಗಾಡಿಯಂ ಪುಟ್ಟಿಸೆ ನಖರತಟಿನ್ಮಾಲಿಕಾಜಾಲದೊಂದು।
ಚ್ಚಾಟೋಪಂ ಕೇಶಪಾಶಂ ಸಿತಜಲಧರದೊಳ್ಪೆರ್ಚೆ ಸೂಳೇಱು ಸುಯ್ಯಲ್
ಚಲ್ಲಾಟಂ ಬೆತ್ತು ಕಾಂತಾಮಣಿಯುಗುರಿಸಿದಳ್ ತೈಲಮಂ ಬಾಲೆಗಾಗಳ್ ॥ ೧೫ ॥

ಮಱಿದುಂಬಿಗಳಂ ಮನಸಿಜ
ನೆಱೆಯಳ್ಮಕರಂದಸಾರದಿಂ ನುಣ್ಣಿಪವೋಲ್।
ನೆಱೆ ಮಂಡೆಗೆ ಕಮ್ಮೆಣ್ಣೆಯ
ನೆಱೆದುಗುರಿಸಿದಳ್ ಮೃಗಾರ್ಭಕಾಂಬಕೆಯೊರ್ವಳ್ ॥ ೧೬ ॥

ಎಣ್ಣೆಗಂಟಿಪ ನಾದಮಂ ನಸುಪೊಯ್ಯಲೆಟ್ಟಿತಿಮೋದದಿಂ
ಪಣ್ಣಪಣ್ಣನೆ ರನ್ನದಾವುಗೆ ಮೆಟ್ಟಿ ಪಾಡೆ ಚಿರಂಟಿಯರ್।
ತಿಣ್ಣಮಾದ ವಿಳಾಸಮಂ ದಳೆದಂದು ಮಜ್ಜನಗೇಹಕಾ
ಪೆಣ್ಣಲಂಪಿನ ಪೆಂಪಿನಿಂ ನಡೆತಂದರಾಳಿಯರೊಗ್ಗಿನೊಳ್ ॥ ೧೭ ॥

೧೪. ಮುತ್ತಿನ ಹಸೆಮಣೆಯ ಮೇಲೆ ಬೆಳ್ಳನೆಯ ಮೋಡದಲ್ಲಿ ಮನಸೆಳೆಯುವಂತೆ ಹೊಳೆಯುವ ಚಂದ್ರನ ಕಿರಣಗಳೊ ಎನ್ನುವಂತೆ ಚೆನ್ನಾಗಿ ಅವಳು ಶೋಭಿಸಿದಳು. ವ॥ ಹೀಗೆ ಹೊಳೆಯುವ ಹೊಸಮುತ್ತಿನ ಹಸೆಮಣೆಯ ಮೇಲೆ ಪ್ರೀತಿಯಿಂದ ಕುಳಿತು ಮನಸೆಳೆಯುತ್ತಿರುವ ಆ ಸೌಂದರವತಿಗೆ ಒಳ್ಳೆಯ ಹಿಂಭಾವವುಳ್ಳ ಓರ್ವಳು ಅತ್ಯಾನಂದದಿಂದ ಸುವಾಸನೆಯ ಎಣ್ಣೆಯನ್ನು ತಲೆಗೆಹಾಕಿ ಉಗುರಿನಿಂದ ಕೂದಲನ್ನು ಬಾಚಿದಳು. ಅದು ಹೇಗೆಂದರೆ, ೧೫. ಕಿವಿಯ ಆಭರಣವು ಕೆನ್ನೆಗಳ ಮೇಲೆ ಹರಡಲು ಸೊಂಟವು ಚೆನ್ನಾಗಿ ಬಾಗಲು ವ್ಯಕ್ತಗೊಳ್ಳುವ ಒಳ್ಳೆಯ ನೋಟವು ಚೆಲುವನ್ನುಂಟು-ಮಾಡಿರಲು, ಉಗುರುಗಳ ಮಿಂಚಿನ ಮಾಲೆಯ ತೀವ್ರವಾದ ಚಟುವಟಿಕೆಯು ಕೂದಲೆಂಬ ಬಂಧದಲ್ಲಿ ಬೆಳ್ಳನೆಯ ಮೋಡದಲ್ಲಿ ಹೆಚ್ಚಾಗಲು, ನಿಡಿದಾದ ಉಸಿರು ತೀವ್ರವಾಗಿ (ಕೂದಲಿನೊಡನೆ) ಚೆಲ್ಲಾಟವಾಡಲು ಕಾಂತೆಯೋರ್ವಳು ಎಣ್ಣೆಯನ್ನು ಸೌಂದರಿಯ ಕೂದಲಿಗೆ ಹಚ್ಚಿ ಉಗುರಿನಿಂದ ಬಾಚಿದಳು. ೧೬. ಮರಿದುಂಬಿಗಳನ್ನು ಮನ್ಮಥನ ನಲ್ಲಳು ಮಕರಂದದ ತಿರುಳಿನಿಂದ ನಯಗೊಳಿಸುವಂತೆ ಚೆನ್ನಾಗಿ ತಲೆಗೆ ಸುವಾಸನೆಯ ಎಣ್ಣೆಯನ್ನು ಎರೆದು ಜಿಂಕೆಯ ನೋಟದಂತೆ ನೋಟವುಳ್ಳ ಓರ್ವಳು ಉಗುರಿನಿಂದ ಬಾಚಿದಳು. ೧೭. ಎಣ್ಣೆ ಹಚ್ಚುವಾಗ ಮೆಲ್ಲಗೆ ಶಬ್ದವಾಗುವಂತೆ ಹೊಡೆದು ಅತ್ಯಾನಂದದಿಂದ ಪುಟಿದೇಳುತ್ತ

ಮಜ್ಜನದ ಮನೆಯನೊಳಪೊ
ಕ್ಕುಜ್ವಳಿಪ ಸುವರ್ಣಪೀಠದೊಳ್ಕುಳ್ಳಿರ್ದಾ।
ಸಜ್ಜನೆಗನುರಾಗದೆ ಯೋ
ಷಿಜ್ಜನಮಣಿ ಯೊರ್ವಳಿಕ್ಕಿದಳ್ ಮಲಯಜಮಂ ॥ ೧೮ ॥

ಮಿಸುಗುವ ಕಳ್ತಲೆವಣಿಗಳೊ
ಳಸವಸದಿಂ ಶಶಿಮರೀಚಿಗಳ್ ಪೊಣರ್ವವೊಲಂ।
ದೆಸೆದುವು ಮಲಯಜಸಾರಮ
ನಸಿಯಳ ಕಚಕಿಕ್ಕುವಳ ನಖರಚ್ಛವಿಗಳ್ ॥ ೧೯ ॥

ತನಿಗಂಪಂ ತಣಿದುಂಡು ಮೈಯಲಿಸಿ ಬಿಟ್ಟಿಂದಿಂದಿರಾನೀಕಮಂ
ಮನಮೊಲ್ದೆತ್ತಿ ಮಗುಟ್ದು ತಾರಿಸುವವೊಲ್ತತ್ಸೂನಸೌರಭ್ಯಮಂ।
ನನೆವಿಲ್ವಿನ್ನಣೆಯೋಪಳೊರ್ವವಧುವಾಕಾಂತಾಕಚಶ್ರೇಣಿಗೊ
ಯ್ಯನೆ ಮುಂದಿಕ್ಕಿದಚಂದನಾಂಬುವನಲಂಪಂಬೆತ್ತು ತಾಂ ಪಿಂಡಿದಳ್ ॥ ೨೦ ॥

ಮುನ್ನಿಂಗೋಲ್ವಿಲ್ಲನಾರ್ಪಿಂದಿಸೆ ವಿರಹಿಗಳಂ ತಾಗಿ ಥಟ್ಟುರ್ಚಿ ಮತ್ತಂ
ಬೆನ್ನೊಳ್ತದ್ರಕ್ತದಿಂ ತೊಯ್ದುಗಿದಲರಪುಣುಂಬಂ ರತಿ ಪ್ರೌಢಿಯಿಂದಂ।
ಚೆನ್ನಪ್ಪಂತೈದೆ ತಾಂ ಕ್ಷಾಳಿಸುವವೊಲೆಳೆವೆಣ್ಣೊರ್ವಳಂದೊಲ್ದು ಪೊಯ್ದಳ್
ಬೆನ್ನೀರಂ ನಲ್ವದಂಗೈದುರುಘುಸೃಣರಸೋದ್ವರ್ತನಾಚ್ಛಾಂಗಿಗಾಗಳ್ ॥ ೨೧ ॥

ರತ್ನದ ಪಾದುಕೆ ಮೆಟ್ಟಿ ಯುವತಿಯರು ಹಾಡಲು ಅತಿಶಯವಾದ ಸೊಬಗನ್ನು ಹೊಂದಿ ಸ್ನಾನದ ಮನೆಗೆ ಸೌಂದರಿಯನ್ನು ಸುಂದರಿಯರ ಬಳಗವು ಪ್ರೀತಿಯಿಂದ ಗೌರವದಿಂದ ಕರೆತಂದಿತು. ೧೮. ಸ್ನಾನದ ಮನೆಯ ಒಳಗೆ ಹೋಗಿ ಪ್ರಜ್ವಲಿಸುವ ಚಿನ್ನದ ಪೀಠದಲ್ಲಿ ಕುಳಿತು ಆ ಸಜ್ಜನೆಗೆ ಪ್ರೀತಿಯಿಂದ ಸುಂದರಾಂಗನೆಯೊರ್ವಳು ಶ್ರೀಗಂಧವನ್ನು ಲೇಪಿಸಿದಳು. ೧೯. ಚಲಿಸುವ ಕತ್ತಲೆಯ ಮರಿಗಳೊಡನೆ ಆತುರದಿಂದ ಚಂದ್ರಕಿರಣಗಳು ಹೋರಾಡುವುವೋ ಎನ್ನುವಂತೆ ಸುಂದರಿಯ ಕೂದಲಿಗೆ ಶ್ರೀಗಂಧದ ತಿರುಳನ್ನು ಹಚ್ಚುವವಳ ಉಗುರುಗಳ ಕಾಂತಿಯು ಕಂಡುಬಂದಿತು. ೨೦. ತನಿಗಂಪನ್ನು ತೃಪ್ತಿಯಾಗುವಂತೆ ಉಂಡು ಆಲಸ್ಯಗೊಂಡು ಬಿದ್ದು ಪೂರ್ವದಿಕ್ಕಿನಿಂದ ಮತ್ತೆ ಹೂಗಳ ಸುವಾಸನೆಯನ್ನು ಹೊತ್ತು ದಾಟಿಸುವಂತೆ ಮನ್ಮಥನಿಂದ ಗೌರವಿಸಲ್ಪಟ್ಟ ರತಿಯಂತೆ ಇರುವ ಓರ್ವ ಸ್ತ್ರೀಯು ಸೌಂದರಿಯ ಕೂದಲಿಗೆ ಮೆಲ್ಲನೆ ತನ್ನ ಮುಂದಿರುವ ಶ್ರೀಗಂಧದ ನೀರನ್ನು ಸಂತೋಷದಿಂದ ಹಿಂಡಿದಳು. ೨೧. ಹಿಂದೆ ಮದನನು ಪರಾಕ್ರಮದಿಂದ ವಿರಹಿಗಳ ಮೇಲೆ ಬಿಟ್ಟ ಬಾಣವು ಚೆನ್ನಾಗಿ ನಾಟಿ ಮತ್ತೆ ಬೆನ್ನಿನಿಂದ ಹೊರಬರಲು ಆ ರಕ್ತಸಿಕ್ತವಾದ ಹೂಬಾಣವನ್ನು ರತಿಯು ಚೆನ್ನಾಗಿ ತೊಳೆಯುವಂತೆ ಎಳೆಪ್ರಾಯದ ಸುಂದರಿಯೋರ್ವಳು ಕುಂಕುಮಕೇಸರಿಯಿಂದ ಸೊಗಸಾಗಿ ಅಲಂಕರಿಸಲ್ಪಟ್ಟ ಸೌಂದರಿಯ ಬೆನ್ನಿನ ಮೇಲೆ ಪ್ರೀತಿಯಿಂದ ನೀರನ್ನು

ಚೆಚ್ಚರಮೆನೆ ಕಲ್ಪಲತಿಕೆ
ಗಚ್ಚರಿಯರ್ಮೆಲ್ಲನಮೃತರಸಮಂ ಪೊಯ್ವಂ।
ತುಚ್ಚವದಿಂದಾಸೌಂದರಿ
ಗೊಚ್ಚೆರೆಗಣ್ಣಬಲೆಯರ್ಕಳೆಱೆದರ್ನೀರಂ ॥ ೨೨ ॥

ಇಂತು ಮಂಗಳಮಜ್ಜನಮಂ ಮಾಡಿ ಮನಂಗೊಳಿಪ ತತ್ಸೌಂದರವತಿಯಲರ್ಗಣೆಗೆ ಗಱೆಯಂ ಕಟ್ಟುವಂತೊಲ್ದು ಸಖಿಯಮರ್ದದುಕೂಲಮಂ ನಿಡಿವಿಡಿದು ತಂದಳವಡಿಸಿ॥

ಶಾರದಾಂಬುದಮಧ್ಯಸಂಸ್ಥಿತಚಂದ್ರಲೇಖೆಯಿದೆಂಬಿನಂ
ವಾರಿಜಾಯತಪತ್ರನೇತ್ರೆ ಮರಾಳಮೌಕ್ತಿಕಕುಂದಕ।
ಪೂರ್ರತಾರಪಟೀರಪಾರದಚಂದ್ರಿಕಾಮೃತಹೀರನೀ
ಹಾರಕಾಂತಿವಿರಾಜಿತಾಚ್ಛದುಕೂಲಮಂಡಿತೆಯೊಪ್ಪಿದಳ್ ॥ ೨೩ ॥

ಇಂತು ಬೆಳ್ದುಗುಲಮನುಟ್ಟು ಮನಂಗೊಳಿಪ ಸೌಂದರವತಿಗೆ ತತ್ಕಾಂತೆಯರ್ಮಗುಟ್ಟು,

ಈರಮಣೀಸುನಿರ್ಮಲಮುಖೇಂದುಗೆ ಪಾಸಟಿಯಿಲ್ಲೆನುತ್ತೆ ನೀ
ಹಾರಮಯಾಖಬಿಂಬಮನೆ ತಂದು ನಿವಾಳಿಸುವಂತೆ ಕಾಂತೆಯರ್।
ಪೂರಿತಚಾರುನೀಲಮಣಿಶೋಭಿತಮಂಜುಳತಾರಪಾತ್ರೆಯಿಂ
ದಾರತಿಯೆತ್ತಿದರ್ ನೃಪಕುಮಾರಿಗೆ ಪಾಡೆ ಚಿರಂಟಿಕಾಜನಂ ॥ ೨೪ ॥

ಇಂತಾರತಿಯನೆತ್ತಿ ಮಗುಟ್ದು ಮಂಗಳಮಯಮಾದುತ್ತುಂಗ ಸಂಭ್ರಮದಿಂದಂ ಬಿಜಯಂಗೈಸಿ ತಂದು ಮನಂಗೊಳಿಪ ಮಣಿಮಂಟಪ ಮಧ್ಯದೊಳ್ಮನಂಗೊಳಿಪ ಮಿಸುಪ ಮುತ್ತಿನ ಪಸೆವಣೆಯ ಮೇಲಾ ಸೌಂದರವತಿಯನೊಸೆದು ಕುಳ್ಳಿರಿಸಿ ಶಶಿಲೇಖೆಮೊದಲಾದಸಖಿಯರಲಂಕರಿಸುತಿರ್ದರ್॥

ಅಪ್ಪಳಿಸಿದಳು. ೨೨. ತೀವ್ರವಾಗಿ ಕಲ್ಪವೃಕ್ಷದ ಬಳ್ಳಿಗೆ ದೇವತಾಸ್ತ್ರೀಯರು ಮೆಲ್ಲನೆ ಅಮೃತರಸವನ್ನು ಬಿಡುವಂತೆ ಸಂತಸದಿಂದಾ ಸೌಂದರಿಗೆ ದೇವತಾ ಸ್ತ್ರೀಯರಂತಿರುವ ಸ್ತ್ರೀಯರು ನೀರನ್ನು ಎರೆದರು. ವ॥ ಹೀಗೆ ಮಂಗಳಸ್ನಾನವನ್ನು ಮಾಡಿಸಿ ಮನಸೆಳೆಯುವಂತಿರುವ ಆ ಸೌಂದರವತಿಯ ಹೂಬಾಣಕ್ಕೆ ಗರಿಕಟ್ಟುವಂತೆ ಪ್ರೀತಿಯಿಂದ ಸಖಿಯರು ನಿರಿಗೆ ಹಿಡಿದು ತಂದು ವಸ್ತ್ರವನ್ನು ಉಡಿಸಿ ೨೩. ಬೆಳ್ಳನೆಯ ಮೋಡದ ನಡುವೆ ನೆಲೆಗೊಂಡ ಚಂದ್ರನೊ ಎನ್ನುವಂತೆ ವಿಶಾಲವಾದ ಕಮಲ ನೇತ್ರೆಯು ಹಂಸೆ, ಮುತ್ತು, ಮಲ್ಲಿಗೆ, ಕರ್ಪೂರ, ನಕ್ಷತ್ರ, ಶ್ರೀಗಂಧ, ಪಾದರಸ, ಬೆಳುದಿಂಗಳು, ಸಿಡಿಲು, ಹಿಮ - ಇವುಗಳ ಕಾಂತಿಯಿಂದ ಬೆಳಗುತ್ತಿರುವ ಪರಿಶುದ್ಧವಾದ ವಸ್ತ್ರವನ್ನು ಧರಿಸಿದವಳಾಗಿ ಶೋಭಿಸಿದಳು. ವ॥ ಹೀಗೆ ಬೆಳ್ಳನೆಯ ವಸ್ತ್ರವನ್ನು ಉಟ್ಟು ಮನ ಸೆಳೆಯುವಂತಿರುವ ಸೌಂದರವತಿಗೆ ಆ ಸ್ತ್ರೀಯರು ಮತ್ತೆ, ೨೪. ಈ ಸುಂದರಿಯ ಪರಿಶುದ್ಧವಾದ ಮುಖಚಂದ್ರನಿಗೆ ಹೋಲಿಕೆ ಮಾಡಲಾಗದೆನ್ನುತ್ತ ಹಿಮಾವೃತವಾದ ಚಂದ್ರಬಿಂಬವನ್ನೇ ತಂದು ದೃಷ್ಟಿದೋಷವನ್ನು ತೆಗೆಯುವಂತೆ ಸ್ತ್ರೀಯರು ಮನೋಹರವಾದ ನೀಲಮಣಿಗಳಿಂದ ತುಂಬಿ ಶೋಭೆಯನ್ನು ಹೊಂದಿರುವ ಮಂಜುಳ ಪಾತ್ರೆಯಿಂದ ರಾಜಕುಮಾರಿಗೆ ಯುವತಿಯರು ಹಾಡುತ್ತಾ ಆರತಿ ಬೆಳಗಿದರು. ವ॥ ಹೀಗೆ ಆರತಿಯೆತ್ತಿ ಮತ್ತೆ ಮಂಗಳಕರವಾದ ಸಂಭ್ರಮದಿಂದ ಕರೆದು ತಂದು ಮನಸೆಳೆಯುವ ಮಣಿಮಂಟಪದ ನಡುವೆ ಆಕರ್ಷಿಸುವ ಹೊಳೆವ ಮುತ್ತಿನ

ಅದೆಂತೆಂದೊಡೆ,

ಯಮುನಾನದಿಯೊಳ್ಪ್ರಾರ್ಪೊಳೆ
ವಮೃತಾಂಶುಮರೀಚಿಜಾಳಮೆಂಬಿನೆಗಂ ತ।
ದ್ರಮಣಿಯ ಕಚಮಂ ಪಿಕ್ಕಿದ
ಳಮಳಿನನಖನಿಕರದಿಂ ವಧೂಮಣಿಯೊರ್ವಳ್ ॥ ೨೫ ॥

ಮತ್ತಮದಲ್ಲದೆ,

ತೆರಳದ ಬಲ್ಗತ್ತಲೆಗಳೆ
ಗುರುಳಂ ಪಗೆಯೆಂದು ಪಿಡಿದು ರಂಜಿಪ ಚೆಂದಾ।
ವರೆಗಳಿನದೊರ್ವಳಾಸೌಂ
ದರವತಿಗೆ ತುಱುಂಬನಿಕ್ಕಿದಳ್ನಿಜಕರದಿಂ ॥ ೨೬ ॥

ಇಂತು ತುಱುಂಬನಿಕ್ಕಿ ತದ್ಧಮ್ಮಿಲ್ಲೋದರದೊಳ್ ಸುರುಚಿರತರಳ ತರಪರಿಮಳಪರಿಕಲಿತನವ ಕುಸುಮವಿಸರಮನೊಸೆದಳವಡಿಸಿ ಮಗುಟ್ದು ಸೀಮಂತಮಣಿಯಂ ಕೆಳೆಗೊಳಿಸಿದಳ್॥

ಅದೆಂತೆಂದೊಡೆ,

ಪಸರಿಸಿ ಬೆಳೆದ ತಮಾಲ
ಪ್ರಸರಮನೊಡೆದಗ್ರಭಾಗದೊಳ್ಶೋಭಿಪ ನ।
ಲ್ಪೊಸಕೆಂಜಾಜಿಯ ಗುತ್ತಿಯೊ
ಲೆಸೆದುದು ತತ್ಸತಿಗೆ ತಳತಳಿಪ ಮುಡಿರನ್ನಂ ॥ ೨೭ ॥

ಹಸೆಮಣೆಯ ಮೇಲೆ ಆ ಸೌಂದರವತಿಯನ್ನು ಪ್ರೀತಿಯಿಂದ ಕುಳ್ಳಿರಿಸಿ ಶಶಿಲೇಖೆಯೇ ಮೊದಲಾದ ಸಖಿಯರು ಅಲಂಕರಿಸುತ್ತಿದ್ದರು. ಅದು ಹೇಗೆಂದರೆ, ೨೫. ಯಮುನಾ ನದಿಯಲ್ಲಿ ಪ್ರತಿಬಿಂಬಿಸುವ ಚಂದ್ರಕಿರಣಗಳೆನ್ನುವಂತೆ ಆ ಸುಂದರಿಯ ಕೂದಲನ್ನು ಪರಿಶುದ್ಧವಾದ ಉಗುರುಗಳಿಂದ ಸ್ತ್ರೀಯೋರ್ವಳು ಹಿಕ್ಕಿದಳು. ವ॥ ಮತ್ತೆ ಅದಲ್ಲದೆ, ೨೬. ಹಿಂದೆ ಸರಿಯದ ಕಡುಗತ್ತಲೆಗೆ ಎಳೆಯ ಕೂದಲು ಶತ್ರುವೆಂದು ಭಾವಿಸಿ ಹಿಡಿದು ತನ್ನ ಕೈಗಳಿಂದ ಓರ್ವಳು ಸೌಂದರವತಿಯ ತುರುಬಿಗೆ ಸೊಗಸು ಪಡೆದ ಚೆಂದಾವರೆಗಳನ್ನು ಮುಡಿಸಿದಳು. ವ॥ ಹೀಗೆ ತುರುಬನ್ನು ಕಟ್ಟಿ ಆ ಮುಡಿಗೆ ಕಾಂತಿಪೂರ್ಣವಾದ ಎಳೆಯ ಪರಿಮಳಭರಿತ ಹೊಸದಾದ ಹೂಗಳನ್ನು ಪ್ರೀತಿಯಿಂದ ಹೊಂದಿಸಿ ಮತ್ತೆ ಬೈತಲೆ ಮಣಿಯನ್ನು ಜೊತೆಗೂಡಿಸಿದಳು. ಅದು ಹೇಗೆಂದರೆ, ೨೭. ವಿಶಾಲವಾಗಿ ಬೆಳೆದ ಹೊಂಗೆಯ ಮರಗಳಲ್ಲಿ ಬಿರಿದು ಅಗ್ರಭಾಗದಲ್ಲಿ ಶೋಭಿಸುವ ಹೊಸ ಕೆಂಜಾಜಿಯ ಗೊಂಚಲೋ ಎನ್ನುವಂತೆ ಆ ಸೌಂದರಿಗೆ ಹೊಳೆಯುವ ಮುಡಿರತ್ನವು ಶೋಭಿಸಿತು. ವ॥ ಮತ್ತೆ ಅದಲ್ಲದೆ, ೨೮. ಹಿಂದೆ ಸರಿಯದ ಕತ್ತಲೆಯನ್ನು (ನಿವಾರಿಸಲು) ಹೊಕ್ಕ

ಮತ್ತಮದಲ್ಲದೆ,

ತೊಲಗದ ಕತ್ತಲೆಯಂ ಪೊ
ಕ್ಕಲೆವಿಂದುಮರೀಚಿಯಂತೆ ತತ್ಕಾಂತೆಯ ಬೈ।
ತಲೆಬಟ್ಟೆಯೊಳೆಸೆದುದು ಕೋ
ಮಲೆಯೊರ್ವಳಮರ್ಚಿದೆಳೆಯ ಮುತ್ತುಮಣಿಯ ಸಾಲ್ ॥ ೨೮ ॥

ಅರೆದಿಂಗಳೆಡೆಯೊಳಳವ
ಟ್ಟಿರದೆ ಮನಂಗೊಳಿಪ ಸಂಜೆಗೆಂಪಿನ ತೆಱದಿಂ।
ದಿರೆ ಕುಂಕುಮತಿಲಕಮನಾ
ತರುಣಿಗಮರ್ಚಿಟ್ಟಳೊರ್ವಳತಿಚತುರತೆಯಿಂ ॥ ೨೯ ॥

ನೆಗಟ್ದಿ ಸುಧಾಂಶುಗಳ್ಗಿ ಪರಿದೋಡುವ ಕಟ್ತಲೆ ತನ್ನ ವಂಶಮು
ರ್ವಿಗೆ ನಿಲಲೆಂದು ತಂದು ಕಿಱುಗೂಸುಗಳಂ ವರಕೈರವಕ್ಕೆ ಮೇ।
ಣಗಲದೆ ಕೂರ್ತು ಕೈಯೆಡೆಯೊಳೀವವೊಲಂಗನೆಯೊರ್ವಳೊಡಿದಳ್
ಮೃಗದೃಶೆಯಕ್ಷಿಗಳ್ಗೆ ನವಕಜ್ಜಳಮಂ ವಿಪುಳಾನುರಾಗದಿಂ ॥ ೩೦ ॥

ವದನದ ಲಾವಣ್ಯಾಮೃತ
ವದು ಪೊಣ್ಮಿ ಪೊದಟ್ದು ಪನಿಯೆ ನಿಲ್ತಪುದೆಂಬಂ।
ದದಿನಳವಡಿಸಿದಳಂತಾ
ಸುದತೀಮಣಿಗೊರ್ವ ತರುಣಿ ನಾಸಾಮಣಿಯಂ ॥ ೩೧ ॥

ಸ್ಮಿತವಕ್ತ್ರಾಂಭೋಜದಿರ್ವಕ್ಕಮನಗಲದೆ ತಾಂ ಪತ್ತಿ ಮಂದೈಸಿ ನಿಲ್ತೂ
ರ್ಜಿತಮಾದೊಳ್ವಣ್ಣಮಂ ತುಳ್ಕುವಮಳತರಶೈವಾಳಬಿಂಬಂಬೊಲತ್ಯು।
ನ್ನತರಮ್ಯಂಬೆತ್ತಿರಲ್ಸನ್ಮರಕತಖಚಿತಸ್ವಚ್ಛತಾಟಂಕಮಂ ತ
ತ್ಸತಿಗೊರ್ವೇಣಾಕ್ಷಿ ಮೇಣೊಲ್ದಳವಡಿಸಿದಳಾನಂದಸಂದೋಹದಿಂದಂ ॥ ೩೨ ॥

ಚಂದ್ರನ ಕಿರಣಗಳಂತೆ ಆ ಸುಂದರಿಯ ಬೈತಲೆಯಲ್ಲಿ ಕೋಮಲೆಯೋರ್ವಳು ಸೇರಿಸಿದ ಎಳೆಯ ಮುತ್ತಿನ ಮಣಿಯ ಸಾಲು ಶೋಭಿಸಿತು. ೨೯. ಬಾಲಚಂದ್ರನ ನಡುವೆ ಸೇರಿ ಮನಸೆಳೆಯುವ ಸಂಜೆಗೆಂಪಿನ ರೀತಿಯಲ್ಲಿರಲು ಕುಂಕುಮದ ಬೊಟ್ಟನ್ನು ಓರ್ವಳು ಜಾಣತನದಿಂದ ಇಟ್ಟಳು. ೩೦. ಪ್ರಸಿದ್ಧವಾದ ಚಂದ್ರನ ಕಿರಣಗಳಿಗೆ (ಹೆದರಿ) ಮರೆಯಾಗುವ ಕತ್ತಲೆಯು ತನ್ನ ವಂಶವನ್ನು ಭುವಿಯಲ್ಲಿ ನೆಲಸಲೆಂದು ತಂದು ತನ್ನ ಪುಟ್ಟ ಮಕ್ಕಳನ್ನು ಶ್ರೇಷ್ಠವಾದ ಕಮಲಕ್ಕೆ ಬಿಡದೆ ಪ್ರೀತಿಯಿಂದ ಕೈನೀಡಿ ಕೊಡುವಂತೆ ಓರ್ವಳು ಜಿಂಕೆಯ ನೋಟದಂತೆ ಚಂಚಲವಾದ ನೋಟವುಳ್ಳ ಸೌಂದರವತಿಯ ಕಣ್ಣುಗಳಿಗೆ ಎಳೆಗಪ್ಪನ್ನು ಅತ್ಯಾನಂದದಿಂದ ಇಟ್ಟಳು. ೩೧. ಮುಖದ ಲಾವಣ್ಯಾಮೃತವು ಹೊಮ್ಮಿ ವ್ಯಾಪಿಸಿ ಹನಿಗೊಂಡು ನಿಂತಿತೋ ಎಂಬಂತೆ ಆ ಸೌಂದರವತಿಗೆ ಓರ್ವ ತರುಣಿಯು ಮೂಗುತಿಯನ್ನು ಹೊಂದಿಸಿದಳು. ೩೨. ಅರಳಿದ ಮುಖಕಮಲದ ಎರಡೂ ಪಕ್ಕವನ್ನು ಅಗಲದೆ ಏರಿ ವ್ಯಾಪಿಸಿ ನಿಂತು ಶ್ರೇಷ್ಠವಾದ ಒಳ್ಳೆಯ ಬಣ್ಣವನ್ನು ಹೊರಸೂಸುವ ಪರಿಶುದ್ಧವಾದ ಪಾಚಿಯ

ಬಿಂಬಿಸೆ ಸುರಧನು ತತ್ಪ್ರತಿ
ಬಿಂಬದ ನಡುವೊಪ್ಪುವಿಂಗಡಲ ಕಂಬುವೆನಲ್।
ಕಂಬುಗಳಮೆಸೆದುದೊರ್ವನಿ
ತಂಬಿನಿಯಳವಡಿಸೆ ರತ್ನಮಾಲೆಯಿನವಳಾ ॥ ೩೩ ॥

ಅಚ್ಚಜವ್ವನಮೆಂಬ ದರ್ಪಕಪಟ್ಟಕುಂಜರಕುಂಭಮಂ
ಚೆಚ್ಚರಂ ರತಿದೇವಿ ಸರ್ವಲತಾಂತಮಾಲಿಕೆಯಿಂ ಸಮಂ।
ತರ್ಚಿಪಂತೆಳವೆಣ್ಣದೊರ್ವಳಮರ್ಚಿದಳ್ಪಲರನ್ನದೊ
ಳ್ವಚ್ಚಮಂ ನಲಿದಾಕುಮಾರಿಯ ಪೀವರಸ್ತನಭಾಗದೊಳ್ ॥ ೩೪ ॥

ತೊಳಗುವ ಬೆಳ್ನೊಱೆಯೆಡೆವರಿ
ದಳವಟ್ಟು ಮನಂಗೊಳಿಪ್ಪ ವೀಚಿಯೊಳೊಪ್ಪಲ್।
ನಳಿನಾಕ್ಷಿ ಮುತ್ತುವಂದಿಯ
ನಳವಡಿಸಿದಳೊರ್ವಳವಳ ನಳಿತೋಳ್ಗೊಲವಿಂ ॥ ೩೫ ॥

ವಿಕಚತ್ಕೋಕನದಮನಳಿ
ನಿಕರಂ ಬಳಸಿರ್ದ ಮಾಱ್ಕೆಯಿಂ ರಂಜಿಸಿ ತ।
ಚ್ಚಕಿತಮೃಗಾಕ್ಷಿಯ ಕರಕಂ
ಜಕಮರ್ಚಿದಳೊರ್ವಳಸಿತಮಣಿಕಂಕಣಂ ॥ ೩೬ ॥

ಬಿಂಬದಂತೆ ಅತ್ಯುನ್ನತವಾದ ಸೌಂದರ್ಯವನ್ನು ಹೊಂದಿರಲು ಪಚ್ಚೆಯ ಮಣಿಯನ್ನು ಸೇರಿಸಿದ ಹೊಳೆಯುವ ಕಿವಿಯ ಆಭರಣವನ್ನು ಸೌಂದರವತಿಗೆ ಓರ್ವ ಚಂಚಲಾಕ್ಷಿಯು ಆನಂದದ ಮೊತ್ತದಿಂದ ಕೂಡಿ ಪ್ರೀತಿಯಿಂದ ತೊಡಿಸಿದಳು. ೩೩. ಕಾಮನಬಿಲ್ಲು ಬಿಂಬಿಸಲು ಆ ಪ್ರತಿಬಿಂಬದ ನಡುವೆ ಶೋಭಿಸುವ ಹಾಲ್ಗಡಲಿನ ಶಂಖವೆನ್ನುವಂತೆ ಶಂಖವೆಂಬ ಸೌಂದರವತಿಯ ಕೊರಳಿಗೆ ಚೆಲುವೆಯೋರ್ವಳು ರತ್ನಮಾಲೆಯನ್ನು ಹೊಂದಿಸಲು ಅದು ಶೋಭಿಸಿತು. ೩೪. ಎಳೆಯ ಯೌವನವೆಂಬ ಮನ್ಮಥನ ಮದ್ದಾನೆಯ ಕುಂಭಸ್ಥಲವನ್ನು ಬೇಗನೆ ರತಿದೇವಿಯು ಹೂಮಾಲೆಯಿಂದ ಚೆನ್ನಾಗಿ ಪೂಜಿಸುವಂತೆ ಎಳೆಯಪ್ರಾಯದ ಹೆಣ್ಣೊಬ್ಬಳು ಸಂತಸದಿಂದ ಸೌಂದರಿಯ ಉನ್ನತವಾದ ಮೊಲೆಗಳ ಮೇಲೆ ಹಲವು ರತ್ನದ ಆಭರಣಗಳನ್ನು ಸೇರಿಸಿದಳು. ೩೫. ಪ್ರಕಾಶಿಸುವ ಬೆಳ್ಳನೆಯ ನೊರೆಗಳ ನಡುವೆ ಜಾಗಮಾಡಿಕೊಂಡು ಹೊಂದಿಕೆಯಾಗಿ ಮನಸೆಳೆಯುವ ತೆರೆಯಂತೆ ಮುತ್ತಿನ ತೋಳ್ಬಂದಿಯನ್ನು ಓರ್ವಳು ಕಮಲಾಕ್ಷಿಯ ಎಳೆಯ ತೋಳುಗಳಿಗೆ ಪ್ರೀತಿಯಿಂದ ಹೊಂದಿಸಿದಳು. ೩೬. ಅರಳಿದ ಕಮಲವನ್ನು ದುಂಬಿಗಳ ಮೊತ್ತವು ಬಳಸಿರುವಂತೆ ಆ ಜಿಂಕೆಯ ನೋಟದಂತೆ ಚಂಚಲ ನೋಟವುಳ್ಳ ಸೌಂದರವತಿಯ ಕೈಗಳೆಂಬ ಕಮಲಗಳಿಗೆ ಓರ್ವಳು ನೀಲಮಣಿಯ ಬಳೆಗಳನ್ನು ತೊಡಿಸಿದಳು. ೩೭. ಅಶೋಕವೃಕ್ಷದ

ಅಸುಗೆನನೆಗಳ ನಿಮಿರ್ದು ಬ
ಳಸಿದೆಳೆವಳ್ಳಿಗಳಿವೆಂಬಿನಂ ಸೊಗಸೆಸೆಯ।
ಲ್ಪಸುರ್ವಣಿಯುಂಗರಗಳನೊ
ಲ್ದಸಿಯಳ ಕರಶಾಖೆಗಳ್ಗಮರ್ಚಿದಳೊರ್ವಳ್ ॥ ೩೭ ॥

ಸುರುಚಿರಮಾದ ಸಣ್ಣನಡುವೆಂಬೆಳವಳ್ಳಿಗೆ ಪೊಯ್ದು ಪೊಚ್ಚಸಿಂ
ಗರರಸಮುಣ್ಮಿ ಪೊಣ್ಮಿ ಕಡೆಗಣ್ಮದವೋಲ್ ರತಿದೇವಿ ಕಟ್ಟಿದ।
ತ್ಯುರುಕನಕಾಲವಾಲಮೆಸಲೊಪ್ಪಿರಲೊರ್ವಳಮರ್ಚಿದಳ್ಸುಧಾ
ಕರಸಮವಕ್ತ್ರಮಂಡಲೆಗೆ ರತ್ನಸಮಂಚಿತಹೇಮಕಾಂಚಿಯಂ ॥ ೩೮ ॥

ವಸಿತೆ ಭವತ್ಕಟಾಕ್ಷರುಚಿಜಾಲದಲಂಪಿನ ಪೆಂಪನಿತ್ತು ಮೇ
ಣೆನಗಚಿರಾಂಶುವೆಂಬ ಪೆಸರಂ ಬಿಡಿಸೆಂದು ಪದಾಂಬುಜಾತಮಂ।
ಮನಮೊಸೆದಪ್ಪಿದುಜ್ಜ್ವಲತಟಿಲ್ಲತೆಯೆಂಬಿನಮ್ಮೆದೆ ರಂಜಿಸ
ಲ್ಘನಕುಚೆಯಂಘ್ರಿಗೊರ್ವಳೊಲವಿಂ ಮಣಿನೂಪುರಮಂ ತೊಡರ್ಚಿದಳ್ ॥ ೩೯ ॥

ಮತ್ತಮದಲ್ಲದೆ,

ಮೂಡುವ ಚಂದ್ರಬಿಂಬದಪರಾದ್ರಿಯನೈದಿದ ಭಾನುವಂಶುಗಳ್
ಕೂಡಿರಲಂದು ಕಣ್ಗೆ ಘನಶೋಭೆಯನೀವರೆಸಂಜೆಯಂತೆವೋಲ್।
ನಾಡೆ ವಿರಾಜಿಪಾಸದವನೀಶತನೂಭವೆಗೊರ್ವಳೊಲ್ಮೆಯಿಂ
ನೀಡಿಪೊಗಟ್ಟಿವೆತ್ತ ಮಣಿಮಾಲೆಯನೊಯ್ಯನೆ ತಂದಮರ್ಚಿದಳ್ ॥ ೪೦ ॥

ಸೊಗಸುಗಾಣಿಸಲು ಆ ಸುಂದರಿಯ ಬೆರಳುಗಳಿಗೆ ಹಸಿರುಮಣಿಯ ಉಂಗುರಗಳನ್ನು ಓರ್ವಳು ಪ್ರೀತಿಯಿಂದ ತೊಡಿಸಿದಳು. ೩೮. ಮನೋಹರವಾದ ಸಣ್ಣ ನಡುವೆಂಬ ಎಳೆಯ ಬಳ್ಳಿಗೆ ಎರೆದ ಹೊಸ ಶೃಂಗಾರರಸವು ಹೊಮ್ಮಿ ಹರಿದು ಕೊನೆಗಾಣದ ರೀತಿಯಲ್ಲಿ ರತಿದೇವಿಯು ಕಟ್ಟಿದ ವಿಶೇಷವಾದ ಚಿನ್ನದ ಪಾತಿಯೆನ್ನುವಂತೆ ಶೋಭಿಸಿರಲು, ಚಂದ್ರನಿಗೆ ಸಮನಾದ ಮುಖವುಳ್ಳ ಸೌಂದರಿಗೆ ಓರ್ವಳು ರತ್ನಖಚಿತವಾದ ಚಿನ್ನದ ಡಾಬನ್ನು ತೊಡಿಸಿದಳು. ೩೯. ಯುವತಿಯೇ ನಿನ್ನ ಕಡೆಗಣ್ಣೋಟದ ಕಿರಣಗಳ ಮೊತ್ತದ ಸೊಗಸಿನ ಹೆಚ್ಚಳವನ್ನಿತ್ತು ಶಾಶ್ವತ ಕಾಂತಿಯವಲ್ಲವೆಂಬ ನನ್ನ ಅಪಖ್ಯಾತಿಯನ್ನು ನಿವಾರಿಸು ಎಂದು ಪಾದಕಮಲಗಳನ್ನು ಮನಸಾರೆ ಅಪ್ಪಿದ ಉಜ್ವಲವಾಗಿ ಬೆಳಗುವ ಬಳ್ಳಿ ಮಿಂಚೋ ಎನ್ನುವಂತೆ ಚೆನ್ನಾಗಿ ರಂಜಿಸಲು ಹಿರಿದಾದ ಮೊಲೆಗಳನ್ನು ಹೊಂದಿರುವ ಸೌಂದರಿಗೆ ಓರ್ವಳು ಪ್ರೀತಿಯಿಂದ ಮಣಿಖಚಿತವಾದ ಕಾಲಂದುಗೆಯನ್ನು ತೊಡಿಸಿದಳು. ವ॥ ಮತ್ತೆ ಅದಲ್ಲದೆ, ೪೦. ಮೂಡುವ ಚಂದ್ರಬಿಂಬದ (ಕಾರಣವಾಗಿ) ಪಶ್ಚಿಮ ಪರ್ವತವನ್ನು ಸೇರಿದ ಸೂರ್ಯವಂಶೀಯರು ಅಲ್ಲಿ ನೆಲೆಗೊಂಡಿರಲು ಕಣ್ಣಿಗೆ ಹೆಚ್ಚಿನ ಶೋಭೆಯನ್ನುಂಟುಮಾಡುವ ಮುಸ್ಸಂಜೆಯಂತೆ ಚೆನ್ನಾಗಿ ಹೊಳೆಯುವ ರಾಜಕುಮಾರಿಗೆ ಓರ್ವಳು ಪ್ರೀತಿಯಿಂದ ಮಣಿಮಾಲೆಯನ್ನು ಕೊಟ್ಟು ಅದನ್ನು ಮೆಲ್ಲನೆ ತಂದು ತೊಡಿಸಿದಳು. ವ॥ ಹೀಗೆ

ಇಂತಲರ್ಗಣೆಯನರ್ಚಿಸುವಂತಖಿಳಾವಯವಕ್ಕುಚಿತಮಾದಾಭರಣಂಗಳನಮರ್ಚಿ ಶಶಿಲೇಖೆಮೊದಲಾದ ಸಖೀಜನಂ ಸೌಂದರವತಿಯಂ ಸಿಂಗರಿಸಿ ಸಮುಜ್ಜ್ವಲಮಣಿಮಯದರ್ಪಣಮಂ ತೋಱಿ ಮಗುಳ್ದು ತತ್ಸತಿಯಂ ನಡೆನೋಡಿ ರೂಪಾತಿಶಯಮಂ ಕಂಡು ಕೌತುಕಂಗೊಂಡು ಕೊಂಡಾಡಿದರದೆಂತೆಂದೊಡೆ,

ಪೊಸಲತೆಯಕ್ಕುಮಲ್ಲ ಲತೆಗೆತ್ತಣದೀಸವಿಮಾತು ನೀಡ್ದಿ ರ
ನ್ನಸರಮದಕ್ಕುಮಲ್ಲ ಸರಕೆತ್ತಣವೀನವಘರ್ಮಬಿಂದುಗಳ್।
ಸಸಿಗಲೆಯಕ್ಕುಮಲ್ಲ ಕಲೆಗೆತ್ತಣದೀಪರಿಪೂರ್ಣಶೋಭೆಯೆಂ
ದೊಸೆದು ಸಖೀಜನಂ ಪೊಗೞ್ದುದಾ ಸತಿಯಂ ನಡೆನೋಡಿ ರಾಗದಿಂ ॥ ೪೧ ॥

ಇವಳ ಕಟಾಕ್ಷರೋಚಿ ಪರಿಪೂರ್ಣಸುಧಾಂಶುಮರೀಚಿ ಭಾವಿಸ
ಲ್ಕಿವಳಮನೋಜ್ಞವೇಣಿ ಕುಸುಮಾಸ್ತ್ರನೃಪಾಲಕೃಪಾಣಿ ನೋಡೆ ತಾ।
ನಿವಳ ಪೊದಟ್ದಿ ಗಾಡಿ ಸವಿಲಾಸತಟಾಕದ ಕೋಡಿ ಯೆಂದು ಕೂ
ರ್ತವಿರಳಮೋದದಿಂ ಪೊಗೞ್ದರಾಳಿಯರಾ ಕಮಲಾಯತಾಕ್ಷಿಯಂ ॥ ೪೨ ॥

ಈಕೆಯ ಲೋಚನಂ ಕುಸುಮಸಾಯಕಮೀಕೆಯ ಪುರ್ಬು ಕರ್ವುವಿ
ಲ್ಲೀಕೆಯ ಕುಂತಳಂ ಭ್ರಮರಸಂಕುಳಮೀಕೆಯ ವಾಗ್ವಿಲಾಸಮೇ।
ಕೋಕಿಲನಾದಮೀಕೆಯ ಮೊಗಂ ಶಶಿ ಯೀಜಗಮಂ ಗೆಲಲ್ಕೆ ಸಾ
ಕೀಕೆಯ ರೂಪಮೆಂದು ಮಕರಧ್ವಜನೀಕೆಯನೈದೆ ಪೊರ್ದುಗುಂ ॥ ೪೩ ॥

ಹೂಬಾಣವನ್ನು ಪೂಜಿಸುವಂತೆ ಸಕಲ ಅಂಗಾಂಗಗಳಿಗೆ ಯೋಗ್ಯವಾದ ಆಭರಣಗಳನ್ನು ತೊಡಿಸಿದ ಶಶಿಲೇಖೆಯೇ ಮೊದಲಾದ ಸಖೀಜನರು ಸೌಂದರವತಿಯನ್ನು ಸಿಂಗರಿಸಿ ಪ್ರಕಾಶಮಾನವಾದ ಕನ್ನಡಿಯನ್ನು ಅವಳ ಮುಂದೆ ಹಿಡಿದು ತೋರಿ ಮತ್ತೆ ಆ ವನಿತೆಯನ್ನು ಚೆನ್ನಾಗಿ ನೋಡಿ ಅವಳ ರೂಪ ವಿಶೇಷವನ್ನು ಕಂಡು ಆಚ್ಚರಿಗೊಂಡು ಹೊಗಳಿದರು. ಅದು ಹೇಗೆಂದರೆ, ೪೧. ಎಳೆಯ ಬಳ್ಳಿ ಇರಬೇಕು. ಅಲ್ಲ, ಬಳ್ಳಿಗೆಲ್ಲಿಯದು ಈ ಸವಿಮಾತು? ಉದ್ದನೆಯ ರತ್ನದ ಸರವಿರಬೇಕು. ಅಲ್ಲ, ಸರಕ್ಕೆಲ್ಲಿಯದು ಈ ಹೊಸ ಬೆವರ ಹನಿಗಳು? ಚಂದ್ರಕಳೆಯಿರಬೇಕು. ಅಲ್ಲ, ಚಂದ್ರಕಳೆಗೆಲ್ಲಿಯದು ಈ ಪರಿಪೂರ್ಣ ಶೋಭೆ? ಎಂದು ಪ್ರೀತಿಯಿಂದ ಸಖೀಜನವು ಆ ಸೌಂದರಿಯನ್ನು ಚೆನ್ನಾಗಿ ನೋಡಿ ಆನಂದದಿಂದ ಹೊಗಳಿತು. ೪೨. ಇವಳ ಕಡೆಗಣ್ಣಿನ ನೋಟದ ಕಾಂತಿಯು ಪೂರ್ಣಚಂದ್ರನ ಕಿರಣಗಳಂತೆ ವಿಚಾರಮಾಡಲು ಇವಳ ಸುಂದರವಾದ ಜಡೆಯು ಮನ್ಮಥರಾಜನ ಕತ್ತಿಯಂತೆ, ನೋಡಲು ಇವಳ ಪ್ರಸಿದ್ಧ ಸೌಂದರ್ಯವು ವಿಲಾಸಯುಕ್ತವಾದ ಜಲಾಶಯದ ಕೋಡಿಯಂತೆ ಎಂದು ಪ್ರೀತಿಯಿಂದ ಅತ್ಯಾನಂದದಿಂದ ಕಮಲದಂತೆ ವಿಶಾಲವಾದ ಕಣ್ಣುಳ್ಳ ಸೌಂದರಿಯನ್ನು ಸಖಿಯರು ಹೊಗಳಿದರು. ೪೩. ಇವಳ ಕಣ್ಣುಗಳು ಮನ್ಮಥ ಬಾಣಗಳು. ಇವಳ ಹುಬ್ಬು ಮದನನ ಕಬ್ಬಿನ ಬಿಲ್ಲು. ಇವಳ ಕೂದಲು ದುಂಬಿಗಳ ಮೊತ್ತ. ಇವಳ ವಾಗ್ವಿಲಾಸವೇ ಕೋಗಿಲೆಯ ಗಾನ. ಇವಳ ಮುಖವೇ ಚಂದ್ರ. ಈ ಲೋಕವನ್ನು ಗೆಲ್ಲಲು ಇವಳ ರೂಪವೊಂದೇ ಸಾಕು ಎಂದು ಮದನನು ಇವಳನ್ನು ಚೆನ್ನಾಗಿ ಕೂಡುವನು.

8

ಈಕೆಯ ಸಲ್ವ ಜಾಣ್ನುಡಿಗಳಿಂಪಿನಿವಿಲ್ಲನ ಪೆಂಪಲಂಪು ಮೇ
ಣೀಕೆಯ ನೋಟದೊಳ್ಪು ಮುನಿಜಾಲಮನಕ್ಕೆ ಬೆಗಟ್ಟು ನಾಣ್ಬು ತಾ।
ನೀಕೆಯ ಸುಯ್ಯ ಗಾಳಿ ಮಲಯಾನಿಲನೊಳ್ ಸಲೆ ಜೋಳಿಪಾಳಿಯಿಂ
ದಾಕಮಲಾಕ್ಷಿಯರ್ಪೊಗಟ್ಟಿರಂದು ಸುಧರ್ಮನೃಪಾಲಪುತ್ರಿಯಂ ॥ ೪೪ ॥

ಇಂತುತ್ಸವದಿಂದಂ ಸೌಂದರವತಿಯಂ ಪೊಗಟ್ದಾವರಸತಿಯರೆಟ್ತಿಂದತಿರಮ್ಯಹರ್ಮ್ಯಾಗ್ರದೊಳ್ಸತ್ಯವತಿವೆರಸು ಮನಂಗೊಳಿಪ ಸುಧರ್ಮ ಭೂಪಾಲಕನಂ ಕಂಡು ಬಿನ್ನಪಂಗೆಯ್ದರದೆಂತೆಂದೊಡೆ॥

ಭೂಚಕ್ರಾಧೀಶ ವಿವಾ
ಹೋಚಿತಶೃಂಗಾರಮಾಯ್ತು ಸೌಂದರಿಗೆನೆ ಕೇ।
ಳ್ದಾಚಿರಪುಣ್ಯಂ ಕಳುಪಿದ
ನಾಚಾರ್ಯರನುದ್ಭಟಾಂಕನರಮನೆಗಾಗಳ್ ॥ ೪೫ ॥

ಅರಸನನುಜ್ಞೆ ಬೀಳ್ಕೊಂಡಾರ್ಯರೆಟ್ತಿಂದು ಮೇಣ್ಘೂ
ರ್ಜರಪರಿವೃಢನಂ ಕಂಡೈದೆ ಸಂತೋಷದಿಂದಂ।
ಪರಸಿ ವರಮುಹೂರ್ತಂ ಸಾರ್ದುದೆಂದೆಂಬಿನಂ ತ
ನ್ನರಪತಿ ಶಿವಭದ್ರಾಸ್ಯಾಬ್ಜಮಂ ನೋಡಲಾಗಳ್ ॥ ೪೬ ॥

ಶಿವಭದ್ರಂ ವೈವಾಹೋ
ತ್ಸವಮಂಗಳತುಂಗಸಂಭ್ರಮಂ ಮಿಗೆ ನೆಗಟಿಲ್।
ನವಮುಕ್ತಾಫಲಪೀಠದೊ
ಳವನಿಪನಂ ತಂದು ಕುಳ್ಳಿರಿಸಿದನಲಂಪಿಂ ॥ ೪೭ ॥

೪೪. ಇವಳ ಸಲ್ಲುವ ಜಾಣ್ನುಡಿಗಳು ಇನಿದಾದ ಕಾಮನ ಹೆಚ್ಚಳವಾಗಿದೆ. ಮತ್ತೆ ಇವಳ ನೋಟದ ಚೆಲುವು ಮುನಿಗಳ ಮನಸ್ಸಿಗೆ ಭಯ, ನಾಚಿಕೆಯನ್ನುಂಟುಮಾಡಿದೆ. ಇವಳ ಉಸಿರು ಮಲಯಪರ್ವತದಿಂದ ಬೀಸಿಬರುವ ತಂಗಾಳಿಯೊಡನೆ ಸೊಗಸಾದ ಜೋಡಿಯಾಗಿದೆ ಎಂದು ಸುಧರ್ಮ ಮಹಾರಾಜನ ಮಗಳನ್ನು ಆ ಕಮಲಾಕ್ಷಿಯರು ಅಂದು ಹೊಗಳಿದರು. ವ॥ ಹೀಗೆ ಸಂಭ್ರಮದಿಂದ ಸೌಂದರವತಿಯನ್ನು ಹೊಗಳಿದ ಆ ಸುಂದರಿಯರು ಬಂದು ಅತಿಮನೋಹರವಾದ ಉಪ್ಪರಿಗೆಯಲ್ಲಿ ಸತ್ಯವತಿಯೊಡನೆ ಮನಸೆಳೆಯುವಂತಿದ್ದ ಸುಧರ್ಮ ಮಹಾರಾಜನನ್ನು ಕಂಡು ಅರಿಕೆ ಮಾಡಿಕೊಂಡರು. ಅದು ಹೇಗೆಂದರೆ, ೪೫. "ಭೂಪಾಲ, ಮದುವೆಗೆ ಅಗತ್ಯವಾದ ಶೃಂಗಾರವನ್ನು ಸೌಂದರಿಗೆ ಮಾಡಲಾಯಿತು" ಎನ್ನಲು ಅದನ್ನು ಕೇಳಿದ ಸ್ಥಿರವಾದ ಪುಣ್ಯವನ್ನು ಹೊಂದಿರುವ ಸುಧರ್ಮನು ಉದ್ಭಟಾಂಕನ ಅರಮನೆಗೆ ಆಚಾರ್ಯರನ್ನು ಕಳುಹಿಸಿದನು. ೪೬. ಅರಸನಿಂದ ಬೀಳ್ಕೊಂಡ ಹಿರಿಯರು ಬಂದು ಘೂರ್ಜರ ಮಹಾರಾಜನನ್ನು ಕಂಡು ಅತ್ಯಾನಂದದಿಂದ ಹರಸಿ ಒಳ್ಳೆಯ ಮುಹೂರ್ತ ಸಮೀಪಿಸಿದೆ ಎನ್ನುತ್ತಿರುವಲ್ಲಿ ಆ ಮಹಾರಾಜನು ಶಿವಭದ್ರನ ಮುಖವನ್ನು ನೋಡಿದನು ಆಗ. ೪೭. ಶಿವಭದ್ರನು ವಿವಾಹ ಮಹೋತ್ಸವದ ಮಂಗಳ ಕಾರ್ಯಗಳು ಅತಿಶಯವಾದ ಸಂಭ್ರಮದಿಂದ ನಡೆಯಲು ಎಳೆಯ ಮುತ್ತಿನ ಪೀಠದಲ್ಲಿ

ವಿನುತಂ ಮಂಗಳವಾದ್ಯರಾಜಿ ಮೊಳಗಲ್ಕಿಟ್ಟೈದೆಯರ್ಪಾಡೆ ಶೋ
ಭನಮಂ ತತ್ಸಮಯೋಚಿತಾಮಳಿನಮಂತ್ರೋಚ್ಚಾರಣಂ ಗೆಯ್ಯೆ ಸೂ।
ರಿನಿಕಾಯಂ ಸಚಿವಾಗ್ರಗಣ್ಯಶಿವಭದ್ರಂ ಮಂಗಳಸ್ನಾನಮಂ
ಜನನಾಥಾಗ್ರಣಿಗೊಲ್ದು ಮಾಡಿಸಿದನಂದಾನಂದಸಂದೋಹದಿಂ ॥ ೪೮ ॥

ಇಂತು ಮಂಗಳಸ್ನಾನಮಂ ಮಾಡಿ ಮಗುಟ್ದು ಮನೋಹರಮಾದ ವಸ್ತ್ರಂ ಪೊದೆದು ಮನಂಗೊಳಿಪ ಕುಮಾರಪಾಲಘೂರ್ಜರನ ಕಚಪ್ರಚಯಮನಾರಿಸಿ ಪೊಸಗಂಪಮರ್ದ ಮಿಸುಪ ಕುಸುಮಂಗಳಂ ತುಱುಂಬಿಯನರ್ಘ್ಯ ಮಣಿಮಯಕಿರೀಟಮನಳವಡಿಸಿ ಶಿವಭದ್ರಂಮನಮೊಲ್ದಲಂಕರಿಸುತಿರ್ದನ ದೆಂತೆಂದೊಡೆ॥

ಪಲತೆರಂಬಡೆದ ಮಂಗಳವಾದ್ಯಮುಲಿಯೆ ನಿ
ರ್ಮಲಮಾದ ರತ್ನವಚ್ಚಂ ಗಳಂ ರಾಜ
ತಿಲಕಂಗೆ ಮಂತ್ರಿ ತೊಡಸಿದಂ ॥ ೪೯ ॥

ಪೊದಟ್ವಿ ರತ್ನಾಂಶುತತಿ ಕೆದಱಿ ಪಸರಿಸಿ ಚೆಲ್ವು
ಪುದಿದು ಜೃಂಭಿಸುವ ರತ್ನವಚ್ಚ ಮನಮ
ರ್ಚಿದನವನಿಪಂಗೆ ಶಿವಭದ್ರಂ ॥ ೫೦ ॥

ಶೋಣತೆವೆತ್ತನಿಜಾಂಶು
ಶ್ರೇಣಿಯೊಳಿರ್ಪರುಣನಂತೆ ಮಣಿದೊಡವಿನೊಳ।
ಕ್ಷೀಣಪರಿತೋಷದಿಂ ತತ್
ಕ್ಷೋಣೀಧವನುದ್ಭಟಾಂಕನತಿರಂಜಿಸಿದಂ ॥ ೫೧ ॥

ಮಹಾರಾಜನನ್ನು ಕರೆದುತಂದು ಸಂತೋಷದಿಂದ ಕುಳ್ಳಿರಿಸಿದನು. ೪೮. ವಿಶೇಷವಾಗಿ ಹೊಗಳಲ್ಪಡುವ ಮಂಗಳ ವಾದ್ಯಗಳು ಮೊಳಗಲು ಮುತ್ತೈದೆಯರು ಶೋಭಾನೆ ಹಾಡಲು, ಆ ಸಮಯಕ್ಕನುಸಾರವಾಗಿ ಮಂತ್ರೋಚ್ಚಾರಣೆ ಮಾಡಲು ವಿದ್ವಾಂಸರುಗಳು ಹಾಗೂ ಸಚಿವ ಶ್ರೇಷ್ಠನಾದ ಶಿವಭದ್ರನು ಮಹಾರಾಜನಿಗೆ ಮಂಗಳಸ್ನಾನವನ್ನು ಸಂತೋಷದಿಂದ ಮಾಡಿಸಿದನು. ವ॥ ಹೀಗೆ ಮಂಗಳಸ್ನಾನವನ್ನು ಮಾಡಿ ಮತ್ತೆ ಮನೋಹರವಾದ ವಸ್ತ್ರವನ್ನು ಧರಿಸಿ ಮನಸೆಳೆಯುವಂತಿದ್ದ ಕುಮಾರಪಾಲ ಘೂರ್ಜರನು ಕೂದಲನ್ನು ಒಣಗಿಸಿ ಹೊಸಕಂಪಿನಿಂದ ಕೂಡಿ ಹೊಳೆಯುವ ಹೂಗಳನ್ನು ಮುಡಿದು ಬೆಲೆಕಟ್ಟಲಾಗದ ಮಣಿಖಚಿತ ಕಿರೀಟವನ್ನು ಧರಿಸಿ ಶಿವಭದ್ರನು ಪ್ರೀತಿಪಟ್ಟು ಅಲಂಕರಿಸುತ್ತಿದ್ದನು. ಅದು ಹೇಗೆಂದರೆ, ೪೯. ಹಲವು ಬಗೆಯ ಮಂಗಳವಾದ್ಯಗಳು ಧ್ವನಿ ಮಾಡಲು ಪರಿಶುದ್ಧವಾದ ರತ್ನಾಭರಣಗಳನ್ನು ರಾಜರುಗಳಲ್ಲಿ ತಿಲಕಪ್ರಾಯನಾದ ಉದ್ಭಟನಿಗೆ ಮಂತ್ರಿಯು ತೊಡಿಸಿದನು. ೫೦. ಪ್ರಖ್ಯಾತ ರತ್ನಗಳ ಕಾಂತಿಯು ವ್ಯಾಪಕವಾಗಿ ಹರಡಿ ಚೆಲುವಿಕೆ ತಳೆದು ಶೋಭಿಸುವ ರತ್ನಾಭರಣಗಳನ್ನು ಮಹಾರಾಜನಿಗೆ ಮಂತ್ರಿಯು ತೊಡಿಸಿದನು. ೫೧. ಕೆಂಬಣ್ಣವನ್ನು ಹೊಂದಿ ತನ್ನ ಕಿರಣಗಳ ಮೊತ್ತದಿಂದಿರುವ ಸೂರ್ಯನಂತೆ ಮಣಿಖಚಿತ ಆಭರಣಗಳಿಂದ ಕೊರತೆಯಿಲ್ಲದ ಆನಂದದಿಂದ ಆ ಮಹಾರಾಜನಾದ ಉದ್ಭಟಾಂಕನು

ಮತ್ತಮದಲ್ಲದೆಯುಂ,

ನಿಜಪ್ರತಾಪಾರುಣಕಾಂತಿಗಳ್ ಶಿರೋಭಾಗದೊಳ್ ಪುಂಜೀಕರಿಸಿದಂತೆ ರಂಜಿಪ ಮಣಿಮಕುಟದ ಮನೋಹರನುಂ, ಲಲಾಟಲಾವಣ್ಯರಸ ತರಂಗಿಣೀತರಂಗಮಾಲೆಯೆನೆ ಕಂಗೊಳಿಪ ವಿಭೂತಿತ್ರಿಪುಂಡ್ರದ ವಿಭ್ರಾಜಿತನುಂ, ಮುಖಚಂದ್ರನನೋಲೈಸಲ್ಕೆಯ್ತಂದೆಡಬಲಂಗಳೊಳಳವಟ್ಟ ಹಲ್ಲಕಂಗಳೆನೆ ಬಗೆಗೊಳ್ವ ಮಣಿಕರ್ಣಾವತಂಸದ ಕಮನೀಯನುಂ, ಸಹೋದರನಪ್ಪ ಗಳಕಂಬುವಂ ಕಂಡು ಅಮರ್ದಪ್ಪಿದಮೃತ ಮಯೂಖ ಲೇಖೆಯೆನಲೊಪ್ಪುವ ನುಣ್ಮುತ್ತಿನ ಕಂಠಸರದ ಕಡುಚೆಲ್ವನುಂ, ವಿಜಯಲಕ್ಷ್ಮೀ ಕಟಾಕ್ಷಮರೀಚಿಸಂಚಯಂ ವಕ್ಷೋಭಾಗದೊಳ್ಕೆದಱಿದಂತೆ ಪೊದಟ್ಟಿ ಚಾರುಹೀರಾವಳಿಯ ವೀರನುಂ, ಮೃಣಾಳಾಸಕ್ತಿಯಿಂ ಕಳಭಂ ಕಾಸಾರದೊಳ್ಕೈನೀಡೆ ತತ್ಕರಮಧ್ಯಮಂ ಬಳಸಿ ಪತ್ತಿದ ಶೈವಾಳಲೇಖೆಯೆಂಬಂತೆ ತಳತ್ಥಳಿಪ ಮರಕತಮಣಿಖಚಿತಬಾಹುಪೂರದ ಭವ್ಯಚರಿತ್ರನುಂ, ಕೊನೆಯೊಳ್ತಳಿರ್ತೊಲೆವಮರಕುಜಶಾಖೆಯ ನವಲಂಬಿಸಿದ ಪಸುರ್ವಳ್ಳಿಯೆಂಬಂತೆಸೆವ ಮರಕತಕಂಕಣಾಂಕಿತಕರ ಪಂಕೇಜದ್ವಂದ್ವದ ಸುಂದರನುಂ ವಕ್ರಗತಿಯಂ ಮಾಣಿಸೆಂದೊಲ್ದುಬಂದಡಿವಿಡಿದ ನವಗ್ರಹಮೆಂಬಂತುಜ್ಜ್ವಲಿಪ ನವರತ್ನ ಕೀಲಿತೋಚ್ಚುಡಮಾದ ಪೆಂಡೆಯದ ಶುಂಡಾಲನುಮಾದುದ್ಭಟಕ್ಷಿತೀಂದ್ರಚಂದ್ರಮಂ ಮಿಸುಪ ಪೊಸಬಾಸಿಗಮಂ ತಳೆದ ನಂತಮಂಗಳಮಯಮಪ್ಪ ಸಂರಂಭದಿಂದಂ ಸಿಂಗರಿಸಿ ಕಂಗೊಳಿಪ ತುಂಗಮಾತಂಗಮಂ ಬೆಂಗೆ ವಾಯ್ದು,

ಚೆನ್ನಾಗಿ ಶೋಭಿಸಿದನು. ವ।। ಮತ್ತೆ ಅದಲ್ಲದೆ, ತನ್ನ ಶೌರ್ಯದ ಅರುಣಕಾಂತಿಗಳು ಶಿರಸ್ಸಿನಲ್ಲಿ ಗುಂಪುಗೂಡಿದಂತೆ ಶೋಭಿಸಿರುವ ಮಣಿಖಚಿತ ಕಿರೀಟದಿಂದ ಮನೋಹರನಾಗಿರುವವನೂ, ಹಣೆಯ ಲಾವಣ್ಯರಸವೆಂಬ ನದಿಯ ಅಲೆಗಳೆನ್ನುವಂತೆ ಕಣ್ಣಿಗೆ ಅಂದವಾಗಿರುವ ವಿಭೂತಿಯ ಮೂರು ಗೆರೆಗಳಿಂದ ವಿಶೇಷವಾಗಿ ಪ್ರಕಾಶಿಸುವವನೂ, ಮುಖಚಂದ್ರನನ್ನು ಸೇವಿಸಲೆಂದು ಬಂದು ಎಡಬಲಗಳಲ್ಲಿ ಹೊಂದಿಕೆಯಾದ ಕೆಂದಾವರೆಗಳೆನ್ನುವಂತೆ ಮನಸೆಳೆವ ಮಣಿಖಚಿತವಾದ ಕಿವಿಯಾಭರಣಗಳಿಂದ ಸುಂದರನಾಗಿರುವವನೂ, ಸಹೋದರನಾದ ಕೊರಳೆಂಬ ಶಂಖವನ್ನು ನೋಡಿ ಪ್ರೀತಿಯಿಂದ ಅಪ್ಪಿದ ಚಂದ್ರನ ಕಿರಣವೋ ಎನ್ನುವಂತೆ ಶೋಭಿಸುವ ನುಣ್ಣನೆಯ ಮುತ್ತಿನ ಕಂಠಹಾರದ ಸೊಬಗನೂ, ವಿಜಯಲಕ್ಷ್ಮಿಯ ಕಡೆಗಣ್ಣೋಟದ ಕಾಂತಿಯ ಮೊತ್ತವು ಎದೆಯ ಮೇಲೆ ಕೆದರಿದಂತೆ ಹರಡಿದ ಸುಂದರವಾದ ಮುತ್ತಿನಸರದ ವೀರನೂ, ತಾವರೆಯ ದಂಟಿನ ಆಸೆಯಿಂದ ಆನೆಯು ಸರೋವರಕ್ಕೆ ತನ್ನ ಸೊಂಡಿಲನ್ನು ನೀಡಲು ಆ ಸೊಂಡಿಲ ಮಧ್ಯಭಾಗವನ್ನು ಬಳಸಿ ಹತ್ತಿದ ಪಾಚಿಯೆನ್ನುವಂತೆ ಥಳಥಳಿಸುವ ಮರಕತಮಣಿಯಿಂದ ಕೂಡಿದ ತೋಳ್ಬಂದಿಯ ಭವ್ಯ ಚರಿತ್ರನೂ, ತುದಿಯಲ್ಲಿ ಚಿಗುರಿ ಅಲುಗಾಡುವ ಕಲ್ಪವೃಕ್ಷದ ಕೊಂಬೆಯನ್ನು ಆಶ್ರಯಿಸಿದ ಹಸಿರು ಬಳ್ಳಿಯಂತೆ ಶೋಭಿಸುವ ಮರಕತಮಣಿಯ ಬಳೆಗಳಿಂದ ಕೂಡಿದ ಕಮಲಗಳೆಂಬ ಕೈಗಳೆರಡರ ಸುಂದರನೂ, ವಕ್ರಮಾರ್ಗವನ್ನು ತಪ್ಪಿಸು ಎಂದು ಪ್ರೀತಿಯಿಂದ ಕಾಲುಗಳನ್ನು ಅಪ್ಪಿದ ನವಗ್ರಹವೆಂಬಂತೆ ನವರತ್ನಖಚಿತವಾದ ಪ್ರಭೆಯಿಂದ ಕೂಡಿದ ಬಿರುದಿನ ಕಾಲಿನ ಬಳೆಯ ಆನೆಯಂತಿರುವ ಉದ್ಭಟ ಮಹಾರಾಜ ಚಂದ್ರಮನು ಹೊಳೆಯುವ ಹೊಸ ಬಾಸಿಗವನ್ನು ಧರಿಸಿ ಎಣೆಯಿಲ್ಲದ ಮಂಗಳಮಯವಾದ ಸಂಭ್ರಮದಿಂದ ಅಲಂಕರಿಸಿ ಕಣ್ಣಿಗೆ ಅಂದವಾಗಿ ಕಾಣುವ ಶ್ರೇಷ್ಠವಾದ ಆನೆಯನ್ನು ಏರಿ,

೫೨. ನೀಲ ಪರ್ವತದ ಮೇಲೆ ಚೆನ್ನಾಗಿ ಹೊಳೆಯುತ್ತ ಅಂದಗೊಂಡಿರುವ ಸೂರ್ಯನಂತೆ

ನೀಲಶೈಲದ ಮೇಲೆ ಮಾರ್ಪೊಳೆದೊಪ್ಪುವರ್ಕನ ಪೋಲ್ಮ ಹೀ
ಪಾಲಕಾಗ್ರಣಿ ರನ್ನವಚ್ಚಮನಾಂತು ರಂಜಿಪ ಭದ್ರಶುಂ।
ಡಾಲಮಂ ಮಿಗೆ ಬೆಂಗೆ ವಾಯ್ದು ವಿವಾಹಮಂದಿರಕುಲ್ಲಸ
ಲ್ಲೀಲೆ ಪೆರ್ಚೆ ತೆರಳ್ದನೀಕ್ಷಿಪರಕ್ಷಿಗಳ್ಗನುರಾಗದಿಂ ॥ ೫೨ ॥

ಮತ್ತಮದಲ್ಲದೆತ್ತಿದೆಳೆಮುತ್ತಿನ ಸತ್ತಿಗೆಯ ಸಾಲ್ಗಳನಮರ್ದು ಚಿಮ್ಮುವ ಚಾಮರಂಗಳನೆಡೆವಿಡದೆ ಪಸರಿಸಿದ ಸೀಗುರಿಗಳೆಡೆಯೊಳಲಂಕರಿಸಿದುತ್ತುಂಗಮಾತಂಗಮನಾರೂಢನಾಗಿ ವಿವಾಹದನಕ್ಕನಂತಸಂರಂಭಮಳುಂಬಮೆನಲೆಬ್ಬುದ್ಧಕ್ಷಿತೀಂದ್ರಚಂದ್ರಮನಗ್ರಭಾಗದಲ್ಲಿ,

ಕಳಶಾದರ್ಶಮನಾಂತು ಕಂಗೊಳಿಪ ಕಾಂತಾಸಂಚಯಂ ನಚ್ಚಣಂ
ಗಳನೊಲ್ದಾಗಿಪ ನರ್ತಕೀಸಮುದಯಂ ಪೀಯೂಷಸಂಕಾಶಮಂ।
ಗಳಗೀತಂಗಳನ್ಯೆದೆ ಪಾಡುವ ವಧೂಟಿಶ್ರೇಣಿ ತಾವಿತ್ತುವು
ಜ್ಜ್ವಳಮೋದಂಬಡೆದೀಕ್ಷಿಪಾಪುರಜನಕ್ಕುತ್ಸಾಹಸಂದೋಹಮಂ ॥ ೫೩ ॥

ಮತ್ತಮದಲ್ಲದೆ,

ಮಿಸುಗುವ ಮೇಚಕಾಂಬುದದ ಮೇಲೆ ವಿರಾಜಿಸಲಿಂದು ತದ್ರುಚಿ
ಪ್ರಸರಮದುಣ್ಮಿ ಪೊಣ್ಮಿ ಪರಿವೇಷ್ಟಿಸಿ ಕಂಗೊಳಿಪಂತೆ ನಾಡೆ ಶೋ।
ಭಿಸುವಿಭಮಂ ಸಮಂತಡರ್ದು ಬರ್ಪ ಮಹೀಶನ ಸುತ್ತಿ ಮುತ್ತಿ ಮೇ
ಣ್ಪಸರಿಸಿ ತೋಱುಗುಂ ಮುದದಿನೆತ್ತಿದ ಬೆಳ್ಪಮರ್ದಚ್ಚಕರ್ಬುಗಳ್ ॥ ೫೪ ॥

ರಾಜರಲ್ಲಿ ಮುಖ್ಯನಾದ ಉದ್ಭಟನು ರತ್ನಾಭರಣಗಳನ್ನು ಧರಿಸಿ ಶೋಭಿಸಿರುವ ಮಂಗಳಯುತ ಆನೆಯನ್ನು ಚೆನ್ನಾಗಿ ಏರಿಕುಳಿತು ವಿವಾಹಮಂದಿರಕ್ಕೆ ಮುದಗೊಂಡು ನೋಡುವವರ ಕಣ್ಣಿಗೆ ವಿಲಾಸವು ಹೆಚ್ಚುವಂತೆ ಪ್ರೀತಿಯಿಂದ ನಡೆದನು. ವ॥ ಮತ್ತೆ ಅದಲ್ಲದೆ, ಮೇಲೆತ್ತಿದ ಎಳೆಯ ಮುತ್ತಿನ ಸತ್ತಿಗೆಯ ಸಾಲುಗಳನ್ನು ಹೊಂದಿ ತೂಗಾಡುವ ಬೀಸಣಿಗೆಗಳು ಎಡೆಬಿಡದಂತೆ ಹರಡಿದ ಚವರಗಳು ಇವುಗಳ ನಡುವೆ ಅಲಂಕರಿಸಿದ ಶ್ರೇಷ್ಠವಾದ ಆನೆಯಲ್ಲಿ ಕುಳಿತು ವಿವಾಹಮಂದಿರಕ್ಕೆ ಅನಂತ ಸಂಭ್ರಮವು ಅತಿಶಯವಾಗಿದೆಯೆನ್ನುವಂತೆ ಬಂದ ಉದ್ಭಟ ಮಹಾರಾಜಚಂದ್ರಮನ ಮುಂಭಾಗದಲ್ಲಿ, ೫೩. ಕಳಶ ಕನ್ನಡಿಗಳನ್ನು ಹಿಡಿದು ಕಣ್ಣಿಗೆ ಅಂದವಾಗಿರುವ ಸ್ತ್ರೀಯರ ಬಳಗ, ನರ್ತನವನ್ನು ಸಂತಸದಿಂದ ಮಾಡುವ ನರ್ತಕಿಯರ ಸಮೂಹ, ಅಮೃತ ಸಮಾನವಾದ ಮಂಗಳಗೀತಗಳನ್ನು ಚೆನ್ನಾಗಿ ಹಾಡುವ ಸುಂದರಿಯರ ಸಾಲು - ಇವುಗಳು ಸಂತೋಷಹೊಂದಿ ನೋಡುವ ಪುರಜನರಿಗೆ ಉತ್ಸಾಹವನ್ನುಂಟುಮಾಡಿದವು. ವ॥ ಮತ್ತೆ ಅದಲ್ಲದೆ, ೫೪. ಹೊಳೆವ ಕಡು ನೀಲಿಯ ಬಣ್ಣದ ಮೋಡದ ಮೇಲೆ ಚಂದ್ರನು ಶೋಭಿಸಲು ಅದರ ಕಿರಣಗಳ ಮೊತ್ತವು ಹೊಮ್ಮಿ ಹರಡಿ ಸುತ್ತುವರಿಯಲ್ಪಟ್ಟು ಕಣ್ಣಿಗೆ ಅಂದವಾಗಿರುವಂತೆ ಚೆನ್ನಾಗಿ ಶೋಭಿಸುವ ಆನೆಯನ್ನು ಸೊಗಸಾಗಿ ಏರಿ ಬರುವ ಮಹಾರಾಜನನ್ನು ಸುತ್ತಿ ಮುತ್ತಿ ಹರಡಿ ಪ್ರೀತಿಯಿಂದ ಮೇಲೆತ್ತಿದ್ದ ಬೆಳ್ಳನೆಯ ಶುದ್ಧವಾದ ಕಬ್ಬುಗಳು ಕಾಣುವುವು. ವ॥ ಹೀಗೆ ಉನ್ನತವಾದ ಮಂಗಳದ

ಇಂತುತ್ತುಂಗಮಯಮಾದ ಮಂಗಳದಲಂಪಿನ ಪೆಂಪಿಂದೊಯ್ಯನೆ ನಡೆತಂದು ವಿವಾಹಮಂದಿರಮಂ ಸಾರ್ದಾನೆಯಿಂದಿೞಿದಾನಂದಮಂ ತಳೆದು ಸುವಾಸಿನಿಯರ್ಸೂಸುವ ಸುಣ್ಮುತ್ತಿನ ಸೇಸೆಗಳಂ ಕೈಗೊಳುತ್ತೆಯ್ತಂದು ಪರಿಣಯಮಂಟಪಮಧ್ಯದೊಳ್ಮಿಸುಪ ರತ್ನದ ಪಸೆವಣೆಯ ಮೇಲೊಸಗೆಯ ಸುಮುಹೂರ್ತದೊಳ್ಕುಂಡಿಸಿ ಮನಂಗೊಳಿಪ್ಪುದ್ಭಟಕ್ಷಿತೀಂದ್ರ ಚಂದ್ರಮನಂ ಸುಧರ್ಮಂ ಕಂಡು,

ಸಂತಸವಾಂತು ಸುಧರ್ಮಂ
ತಾಂ ತಳ್ವದನಂತಮಂಗಳೋತ್ಸವವಾಗಲ್।
ಸಂತಸದವನೀಪತಿಗೋ
ರಂತೆ ಸುಮಧುಪರ್ಕಮಂ ನೆಗೞ್ಚಿದನೊಲವಿಂ ॥ ೫೫ ॥

ಮತ್ತಮಾಸಮಯದೊಳ್,

ದನಿಗುಡೆ ಬದ್ದವಣಂ ಮೇ
ದಿನಿಸುರರುಚ್ಚರಿಪ ಮಂತ್ರದುಲಿ ಪಸರಿಸೆ ಭೋಂ।
ಕನೆ ಜೋಯಿಸರ್ಮುಹೂರ್ತಮಿ
ದೆನೆ ಕಂಗೊಳಿಪಚ್ಚದುಗುಲದಿಂ ದೆರೆವಿಡಿದರ್ ॥ ೫೬ ॥

ಪಾಡುತ್ತುಂ ಶೋಭನಮಂ
ಕೂಡಿ ಸುವಾಸಿನಿಯರೊಲ್ದು ಸೌಂದರವತಿಯಂ।
ಗಾಡಿ ಮಡಲ್ತಿರೆ ತಂದ
ರ್ನಾಡೆ ವಿರಾಜಿಪ ವಿವಾಹವೇದಿಕೆಗಾಗಳ್ ॥ ೫೭ ॥

ಇಂತು ನಿಟ್ಟೈದೆಯರ್ ಕರೆತಂದಾ ಬಟ್ಟಮೊಲೆಯ ಸೌಂದರವತಿಯಂ ದಿಟ್ಟಿಗೊಳಿಪ್ಪ ಕಟ್ಟಾಣಿಮುತ್ತುಗಳಳವಟ್ಟ ಮೆಟ್ಟಕ್ಕಿಗೂಡೆಗಳೊಳುದ್ಭಟಾಂಕಂಬೆರಸುರ್ವೀಸುರತತಿ ಸಂಭ್ರಮದಿಂದಂ ನಿಲಿಸೆ,

ಸಂತೋಷದ ಹೆಚ್ಚಳದಿಂದ ಮೆಲ್ಲನೆ ಬಂದು ವಿವಾಹ ಮಂದಿರವನ್ನು ಸಮೀಪಿಸಿ ಆನೆಯಿಂದ ಇಳಿದು ಆನಂದವನ್ನು ಹೊಂದಿ ಮುತ್ತೈದೆಯರು ಚೆಲ್ಲುವ ಮುತ್ತಿನ ಅಕ್ಷತೆಯನ್ನು ಸ್ವೀಕರಿಸುತ್ತ ಬಂದು ವಿವಾಹಮಂಟಪದ ಮಧ್ಯಭಾಗದಲ್ಲಿ ಹೊಳೆಯುವ ರತ್ನದ ಹಸೆಮಣೆಯ ಮೇಲೆ ಶುಭಮುಹೂರ್ತದಲ್ಲಿ ಕುಳಿತು ಮನಸೆಳೆಯುವ ಉದ್ಭಟ ಮಹಾರಾಜ ಚಂದ್ರಮನನ್ನು ಸುಧರ್ಮನು ಕಂಡು, ೫೫. ಸಂತೋಷಗೊಂಡು ಸುಧರ್ಮನು ತಡಮಾಡದೆ ಕೊನೆಯಿಲ್ಲದ ಮಂಗಳೋತ್ಸವವಾಗುತ್ತಿರಲು ಮಹಾರಾಜನಿಗೆ ಲೋಪವಾಗದಂತೆ ಮೊಸರು, ತುಪ್ಪ, ನೀರು, ಜೇನುತುಪ್ಪ ಮತ್ತು ಸಕ್ಕರೆ ಇವುಗಳಿಂದಾದ ಮಿಶ್ರಣವನ್ನು ಪ್ರೀತಿಯಿಂದ ಕೊಟ್ಟನು. ವ॥ ಮತ್ತೆ ಆ ಸಮಯದಲ್ಲಿ, ೫೬. ಮಂಗಳವಾದ್ಯವು ಧ್ವನಿ ಮಾಡಲು, ಬ್ರಾಹ್ಮಣರ ವೇದ ಮಂತ್ರ ಘೋಷವು ಹರಡಲು ಒಮ್ಮೆಲೆ ಜೋಯಿಸರು ಮುಹೂರ್ತ ಬಂದಿತೆಂದು ಹೇಳಲು ಕಣ್ಣಿಗೆ ಅಂದವಾಗಿರುವ ಶುದ್ಧ ವಸ್ತ್ರದಿಂದ ತೆರೆ ಹಿಡಿದರು. ೫೭. ಸೋಬಾನೆ ಹಾಡುತ್ತ ಮುತ್ತೈದೆಯರು ಒಟ್ಟುಗೂಡಿ ಪ್ರೀತಿಯಿಂದ ಸೌಂದರವತಿಯನ್ನು ಚೆನ್ನಾಗಿ ಬೆಳಗುತ್ತಿರುವ ವಿವಾಹ ಮಂಟಪಕ್ಕೆ ಅವಳ ಸೌಂದರ್ಯವು ವಿಸ್ತರಿಸಲು ಕರೆತಂದರು. ವ॥ ಹೀಗೆ ಮುತ್ತೈದೆಯರು ಕರೆದು ತಂದ ಆ ದುಂಡು ಮೊಲೆಯ ಸೌಂದರವತಿಯನ್ನು ಕಣ್ಸೆಳೆಯುವ ಬೆಲೆಬಾಳುವ ಮುತ್ತುಗಳನ್ನು ಸೇರಿಸಿದ ಮೆಟ್ಟಕ್ಕಿ ಗೂಡೆಗಳಲ್ಲಿ

ಕೇಸರಯುತಾಬ್ಜಯುಗಳವಿ
ಭಾಸಿತಕಲಹಂಸದಂಪತಿಯವೋಲ್ಮೆಱೆದರ್।
ಲೇಸೆನೆ ಮದುವಕ್ಕಳ್ಸವಿ
ಲಾಸದಿ ಮೆಟ್ಟಕ್ಕಿಗೂಡೆಗಳೊಳುತ್ಸವದಿಂ ॥ ೫೮ ॥

ಮತ್ತಮಾಸಮಯದೊಳ್,

ವರಮಂಗಳಾಷ್ಟಕಮನು
ಚ್ಚರಿಸುತೆ ಸುಮುಹೂರ್ತಮಾಯತಮೆ ಯೆಂದುರ್ವೀ।
ಸುರರೊದಱಲಾಗಳೊಪ್ಪುವ
ತೆರೆ ಸರಿದುದು ಮೇಣ್ತದೀಯಸಮನಂತರದೊಳ್ ॥ ೫೯ ॥

ಚಂಚಲಲೋಚನರೋಚಿ ಪ
ಳಂಚೆ ಸುಧರ್ಮಸುತೆ ಸಾತ್ವಿಕಮನ್ನೈದುತೆ ಮ।
ತ್ತಂ ಚಕ್ಕನೆ ಜೀರಿಗೆಗುಡ
ಮಂ ಚೆಲ್ಲಿದಳಿನಿಯನುತ್ತಮಾಂಗದೊಳಾಗಳ್ ॥ ೬೦ ॥

ಕೌಂಗಿನ ಪಾರ್ಶ್ವದೊಳ್ಬೆಳೆದು ತೋರ್ಪ್ಪೆಳವಳ್ಳಿಯ ಮೇಲೆ ಗಾಳಿವೊ
ಯ್ಲಿಂ ಗಳಿತಂ ತದೀಯಕುಹಳಸ್ಥಿತಸತ್ಫಲರಾಜಿ ಸೂಸುವಂ।
ತಂಗನೆಯುತ್ತಮಾಂಗದೊಳಿಳೇಶನತೀವಮನೋನುರಾಗದಿಂ
ಕಂಗೊಳಿ ಸೂಸಿದಂ ಮಿಸುಪಜೀರಿಗೆಬೆಲ್ಲಮನೊಲ್ದು ನೋಡುತುಂ ॥ ೬೧ ॥

ಇಂತು ಜೀರಿಗೆಬೆಲ್ಲಮಂ ಸೂಸಿದ ಸಮನಂತರದಲ್ಲಿ,

ತತ್ಕುಮಾರಪಾಲಘೂರ್ಜರಾವನೀಶಹಸ್ತದೊಳ್
ಸತ್ಕುಮಾರಿಕಾಕರಾಬ್ಜಮಂ ಸಮಂತು ಗೂಡಿ ಸಂ।
ಪತ್ಕಲಾವಿಭೂಷಣಂ ಸುಧರ್ಮಭೂಪನೊಲ್ದು ಭಾ
ಸ್ವತ್ಕುಲಾರ್ಯರೈದೆ ಪೆರ್ಚೆ ಪೊಯ್ದನಂದು ಧಾರೆಯಂ ॥ ೬೨ ॥

ಉದ್ಘಟಾಂಕನೊಡಗೂಡಿ ಬ್ರಾಹ್ಮಣರ ಸಮೂಹವು ಸಂಭ್ರಮದಿಂದ ನಿಲ್ಲಿಸಲು, ೫೮. ಕೇಸರದಿಂದ ಕೂಡಿದ ಜೋಡಿ ಕಮಲಗಳಂತೆ, ಹೊಳೆವ ಕಲಹಂಸಗಳ ಜೋಡಿಯಂತೆ ಚೆನ್ನಾಗಿ ಮದುಮಕ್ಕಳು ಚೆಲುವಿಕೆಯೊಡನೆ ಕೂಡಿ ಮೆಟ್ಟಕ್ಕಿ ಗೂಡೆಗಳಲ್ಲಿ ಸಂತಸದಿಂದ ಶೋಭಿಸಿದರು. ವ॥ ಮತ್ತೆ ಆ ಸಮಯದಲ್ಲಿ, ೫೯. ಯೋಗ್ಯವಾದ ಮಂಗಳಾಷ್ಟಕವನ್ನು ಹೇಳುತ್ತ ಸುಮುಹೂರ್ತ ಬಂದಿತೆಂದು ಬ್ರಾಹ್ಮಣರು ಕೂಗಲು ಆಗ ಶೋಭಿಸುವ ತೆರೆ ಸರಿಯಿತು. ಅನಂತರ, ೬೦. ಚಂಚಲವಾದ ಕಣ್ಣಕಾಂತಿ ಮಿಂಚಲು ಸೌಂದರವತಿಯು ಸಾತ್ವಿಕ ಮನೋಭಾವದಿಂದ ಚಕ್ಕನೆ ಜೀರಿಗೆ ಬೆಲ್ಲವನ್ನು ಪ್ರಿಯನ ತಲೆಯಮೇಲೆ ಚೆಲ್ಲಿದಳು. ೬೧. ಅಡಕೆಯ ಮರದ ಪಕ್ಕದಲ್ಲಿ ಬೆಳೆದ ಎಳೆಯ ಬಳ್ಳಿಯ ಮೇಲೆ ಗಾಳಿಯ ಹೊಡೆತದಿಂದ ಅದರ ಹೂವಿನ ಗೊಂಚಲಿನಲ್ಲಿರುವ ಹಣ್ಣುಗಳು ಕಳಚಿ ಬೀಳುವಂತೆ ಸೌಂದರಿಯ ಮುಂದಲೆಯ ಮೇಲೆ ಮಹಾರಾಜನು ಹೆಚ್ಚಿನ ಮನದಾನಂದದಿಂದ ಹೊಳೆವ ಜೀರಿಗೆ ಬೆಲ್ಲವನ್ನು ಪ್ರೀತಿಯಿಂದ ನೋಡುತ್ತ ಕಣ್ಸೆಳೆಯುವಂತೆ ಚೆಲ್ಲಿದನು. ವ॥ ಹೀಗೆ ಜೀರಿಗೆ ಬೆಲ್ಲವನ್ನು ಚೆಲ್ಲಿದ ಮೇಲೆ, ೬೨. ಆ ಕುಮಾರಪಾಲ ಘೂರ್ಜರ ಮಹಾರಾಜನ ಕೈಯಲ್ಲಿ ರಾಜಕುಮಾರಿಯ ಕರಕಮಲವನ್ನು ಚೆನ್ನಾಗಿ ಸೇರಿಸಿ ಸಂಪತ್ತು

ಮತ್ತಮದಲ್ಲದೆ,

ಮಿಸುಗುವ ಶಶಿರೋಹಿಣಿಯರ
ನೆಸೆವ ಶರನ್ಮೇಘಮಾಲೆ ಬಳಸಿದವೋಲ್ಕೋ।
ಭಿಸಲಾಮದುವಕ್ಕಳನುಜು
ಪೊಸನೂಲಿಂ ಸುತ್ತಿದರ್ ಮಹೀಸುರರಾಗಳ್ ॥ ೬೩ ॥

ಆವರತಂತುವಂ ಘುಸೃಣಪಂಕರಸಾವಿಲಮಂ ಬುಧರ್ಕಳಂ
ದೀವಿನಮೊರ್ವರೊರ್ವರೊಲವಿಂ ತದನುಜ್ಞೆಯನಾಂತು ಕಟ್ಟಿದರ್।
ತೀವಿದ ಮೋದದಿಂದೆ ಮದುವಕ್ಕಳದೊರ್ವರ ಹಸ್ತಕೊರ್ವರಿಂ
ದೀವರ ನೇತ್ರೆಯರ್ ನಲಿದು ಶೋಭನಮಂ ಮಿಗೆ ಪಾಡುತಿರ್ಪಿನಂ ॥ ೬೪ ॥

ಇಂತು ಕುಂಕುಮಪಂಕಾಂಕಿತಮಾದ ಕಂಕಣದ ದಾರಮಂ ಕಟ್ಟಿ ಮನಂಗೊಳಿಪ ಮದುವಕ್ಕಳ ರಂಜಿಪ ಮುಂಜೆಱಗೆರಡಂ ಭೂದಿವಿಜಂ ಗಂಟಿಕ್ಕಿಸಿದ ಸಮನಂತರದಲ್ಲಿ,

ಮುತ್ತೈದೆಯರುಜ್ಜ್ವಳಿಪೆಳ
ಮುತ್ತಿನ ಸೇಸೆಯನೆ ಸೂಸಿ ಸೌಂದರಿಗೆ ಲಸ।
ದ್ವೃತ್ತಕುಚೆಗೈದೆ ತೊಡವಂ
ತತ್ತರುಣೀಮಣಿಯರೊಲ್ದು ತೊಡಿಸಿದರೊಲವಿಂ ॥ ೬೫ ॥

ಇಂದುಮುಖಿ ಸೌಂದರಿಯ ಕೈ
ಯಿಂದಂ ಮುತ್ತೈದೆಯರ್ಗೆ ಬಾಯಿನಗಳನಾ।
ನಂದಂಬಡೆದಂದು ಸಖೀ
ವೃಂದಂ ಕೊಡಿಸಿದುದು ನೆಗಱ್ದ ಮಂಗಳಗೀತಂ ॥ ೬೬ ॥

ಹಾಗೂ ಕಲೆಗಳನ್ನು ಚೆನ್ನಾಗಿ ಹೊಂದಿರುವ ಸುಧರ್ಮ ಮಹಾರಾಜನು ಹೊಳೆವ ವಂಶದ ಹಿರಿಯರು ಸಂತಸದಿಂದ ಉಬ್ಬುತ್ತಿರಲು ಧಾರೆ ಎರೆದನು. ವ॥ ಮತ್ತೆ ಅದಲ್ಲದೆ, ೬೩. ಮಿನುಗುವ ಚಂದ್ರ-ರೋಹಿಣಿಯರನ್ನು ಶೋಭಿಸುವ ಶರತ್ಕಾಲದ ಮೋಡಗಳ ಮಾಲೆಯು ಆವರಿಸಿದಂತೆ ಶೋಭಿಸಿರುವ ಆ ಮದುಮಕ್ಕಳನ್ನು ಚೆನ್ನಾಗಿ ಹೊಸ ನೂಲಿನಿಂದ ಬ್ರಾಹ್ಮಣರು ಆಗ ಸುತ್ತಿದರು. ೬೪. ಕಮಲಾಕ್ಷಿಯರು ಸಂತಸದಿಂದ ಸೋಬಾನೆಯನ್ನು ಹೆಚ್ಚಾಗಿ ಹಾಡುತ್ತಿರಲು ಕುಂಕುಮ ಕೇಸರಿಯ ಕೆಸರಿನಲ್ಲಿದ್ದಿರುವ ಶ್ರೇಷ್ಠವಾದ ದಾರವನ್ನು ಪಂಡಿತರು ಕೊಡಲು ಅವರ ಆಜ್ಞೆಯಂತೆ ಮದುಮಕ್ಕಳು ತುಂಬಿದ ಆನಂದದಿಂದ ಪರಸ್ಪರ ಪ್ರೀತಿಯಿಂದ ಒಬ್ಬರು ಮತ್ತೊಬ್ಬರ ಹಸ್ತಕ್ಕೆ ಕಟ್ಟಿದರು. ವ॥ ಹೀಗೆ ಕುಂಕುಮದ ಕೆಸರಿನಲ್ಲಿ ಅದ್ದಿದ ಕಂಕಣಧಾರವನ್ನು ಕಟ್ಟಿ ಮನಸೆಳೆಯುವ ಮದುಮಕ್ಕಳು ಶೋಭಿಸುವ ಸೆರಗಿನ ತುದಿಗಳೆರಡನ್ನು ಬ್ರಾಹ್ಮಣರು ಗಂಟು ಹಾಕಿಸಿದ ನಂತರ, ೬೫. ಮುತ್ತೈದೆಯರು ಪ್ರಜ್ವಲಿಸುವ ಎಳೆಯ ಮುತ್ತಿನ ಅಕ್ಷತೆಯನ್ನು ಚೆಲ್ಲಿ ಹೊಳೆವ ದುಂಡುಮೊಲೆಯ ಸೌಂದರಿಗೆ ಚೆನ್ನಾಗಿ ಆಭರಣಗಳನ್ನು ಸಖಿಯರು ಪ್ರೀತಿಯಿಂದ ತೊಡಿಸಿದರು. ೬೬. ಚಂದ್ರಮುಖಿ ಸೌಂದರಿಯ ಕೈಯಿಂದ ಮುತ್ತೈದೆಯರಿಗೆ ಬಾಗಿನಗಳನ್ನು ಆನಂದಹೊಂದಿ ಮಂಗಳಗೀತೆಗಳು ಮೊಳಗುತ್ತಿರಲು ಅಂದು ಸಖೀಜನರು ಕೊಡಿಸಿದರು. ವ॥ ಹೀಗೆ ಬಾಗಿನಗಳನ್ನು ಕೊಡಿಸಿದ

ಇಂತು ಬಾಯಿನಗಂಳಂ ಕೊಡಿಸಿದ ಸಮನಂತರದಲ್ಲಿ,

ಚಪಲಾಂಬಕೆವೆರಸುದ್ಭಟ
ನಪಸವ್ಯಾವರ್ತನಿಜಶಿಖಾಕಲಿತಂ ಹೋ।
ಮಪವನಸಖಿನಂ ಬಲವರಿ
ದು ಪದಪಿನಿಂ ಬೇಳ್ದನಮಲಲಾಜಾಹುತಿಯಂ ॥ ೬೭ ॥

ತದನಂತರದಲ್ಲಿ ,

ಲಾಜಾಹೋಮಂ ರಾಜಿಸ
ಲಾಜಲರುಹಪತ್ರನೇತ್ರೆ ಸೌಂದರವತಿ ತ।
ದ್ರಾಜಕುಲೋತ್ತಮನುದ್ಭಟ
ರಾಜನ ಬಲದಿಂದೆಡಕ್ಕೆ ಬಂದಳ್ಮುದದಿಂ ॥ ೬೮ ॥

ಇಂತು ಲಾಜಾಹೋಮಂ ಮಾಡಿ ಮತ್ತಂ ಮಹೋಲ್ಲಾಸದಿಂದಂ ಸತಿವೆರಸೊಯ್ಯನೆ ಬೂವದೆಡೆಗೆಳ್ತಂದು ತತ್ಸೌಂದರವತಿಗೂಡಿ ಆರೋಗಣೆಯಂ ಮಾಡಿ ಕೈದೊಳೆದು ಕಮ್ಮಿತ್ತಾದ ತಾಂಬೂಲಮಂ ಸ್ವೀಕರಿಸಿ ಸಂತೋಷಂದಳೆದು ಮನಂಗೊಳಿಪ್ಪುದ್ಭಟರಾಜೇಂದ್ರಚಂದ್ರಮಂಗೆ ಬಳಿಕ್ಕಂ ನಾಲ್ಕನೆಯ ದಿವಸದೊಳಗಣೆತಸಂಭ್ರಮದಿಂದಂ ನಾಕಬಲಿಯನೊಡರ್ಚಿ ಸುಧರ್ಮಂ ಮಗುಟ್ದು,

ಇಳೆ ನುತಿಪಂತೆ ನಾಕಬಲಿಯಂ ಮಿಗೆ ಮಾಡಿ ಮಗುಟ್ದು ಬಂದು ಸಂ
ಕುಳಮದು ಪೆರ್ಚೆ ಕಂಬವಲಿಯೊಳ್ನಲಿದೋಕುಳಿಯಾಡಲೆಂದು ನಿ।
ರ್ಮಳತರಮಾದ ಕಾಂಚನಕಟಾಹಗಳೋಳಿಗಳಲ್ಲಿ ಕುಂಕುಮಾ
ಕಲಿತಸುಗಂಧಗಂಧಿಜಳಮಂ ನೆಱೆ ತೀವಿದನಾಸುಧರ್ಮಕಂ ॥ ೬೯ ॥

ಮತ್ತಮಾಪ್ರಸ್ತಾವದೊಳ್,

ನಂತರ, ೬೭. ಚಂಚಲಾಕ್ಷಿಯೊಡನೆ ಬಲಗಡೆ ಕೂದಲು ಗಂಟಿಕ್ಕಿದ ಉದ್ಭಟನು ಹೋಮದ ಅಗ್ನಿಯನ್ನು ಬಲಗಡೆಯಿಂದ ಸುತ್ತುಹಾಕಿ ಪ್ರೀತಿಯಿಂದ ಪರಿಶುದ್ಧವಾದ ಬತ್ತದ ಹರಳುಗಳನ್ನು ಆಹುತಿ ಕೊಟ್ಟನು. ವ॥ ಅನಂತರ, ೬೮. ಬತ್ತದ ಹರಳುಗಳ ಆಹುತಿಯು ಹೊಳೆಯಲು ಆ ಕಮಲದಳದಂತೆ ಕಣ್ಣುಳ್ಳ ಸೌಂದರವತಿಯು ಆ ರಾಜವಂಶದಲ್ಲಿ ಶ್ರೇಷ್ಠನಾದ ಉದ್ಭಟ ರಾಜನ ಬಲಭಾಗದಿಂದ ಎಡಭಾಗಕ್ಕೆ ಸಂತಸದಿಂದ ಬಂದಳು. ವ॥ ಹೀಗೆ ಬತ್ತದ ಹರಳಿನ ಆಹುತಿ ಕೊಟ್ಟ ಮೇಲೆ ಮತ್ತೆ ಅತ್ಯಾನಂದದಿಂದ ಪತ್ನಿಯೊಡನೆ ಮೆಲ್ಲನೆ ಬೂವದ ಕಡೆಗೆ ಬಂದು ಆ ಸೌಂದರವತಿಯೊಡನೆ ಭೋಜನವನ್ನು ಮಾಡಿ ಕೈತೊಳೆದು ಪರಿಮಳಯುಕ್ತವಾದ ತಾಂಬೂಲವನ್ನು ಪಡೆದು ಸಂತೋಷಗೊಂಡು ಮನಸೆಳೆಯುವ ಉದ್ಭಟ ಮಹಾರಾಜ ಚಂದ್ರಮನಿಗೆ ನಂತರ ನಾಲ್ಕನೇ ದಿವಸದಲ್ಲಿ ಅತಿಶಯ ಸಂಭ್ರಮದಿಂದ ಭೂಬಲಿಗೊಟ್ಟು ಸುಧರ್ಮನು ಮತ್ತೆ, ೬೯. ಭೂಮಿಯ ಜನರೆಲ್ಲ ಹೊಗಳುವಂತೆ ಭೂಬಲಿಯನ್ನು ಚೆನ್ನಾಗಿ ಕೊಟ್ಟು ಮರಳಿ ಬಂದು ಸಮೂಹವು ಸಂತಸದಿಂದ ಉಬ್ಬುವಂತೆ ಕಂಬ ಬಲಿಯಲ್ಲಿ ಸಂತಸದಿಂದ ಓಕುಳಿಯಾಡಲೆಂದು ಚಿನ್ನದ ಕಡಾಯಿಗಳಲ್ಲಿ ಓಕುಳಿ ನೀರಿನಲ್ಲಿ ಕುಂಕುಮ ಮಿಶ್ರವಾದ ಪನ್ನೀರನ್ನು ಸುಧರ್ಮನು ಚೆನ್ನಾಗಿ ತುಂಬಿದನು. ವ॥ ಮತ್ತೆ ಆ ಸಂದರ್ಭದಲ್ಲಿ,

ಪಾಡೆ ಚಿರಂಟಿಯರ್ಪರಸೆ ದಿಂಮಿದರುಂನತಲೀಲೆಯಾಂತು ಕೊಂ
ಡಾಡೆ ಸುವಂದಿಗಳ್ ಜಯಜಯಧ್ವನಿಯುಣ್ಮೆಸೆ ಸರ್ವಸಜ್ಜನ।
ರ್ನಾಡೆ ಪೊಗಳ್ತೆವೆತ್ತ ಸತಿಗೂಡಿ ತದುದ್ಭಟರಾಜಕುಂಜರಂ
ಕೂಡೆ ವಿವಾಹಮಂಟಪಕೆ ಮೆಲ್ಲನೆ ಬಂದನನೂನರಾಗದಿಂ ॥ ೭೦ ॥

ವರಟಾಯುತಹಂಸಂ ಸಿತ
ಸರಸೀಸರಸೀಜಪೀಠದೊಳ್ಮಂಡಿಸುವಂ।
ತಿರೆ ಮುತ್ತಿನ ಪಸೆಯೊಳ್ ಸೌಂ
ದರಿವೆರಸೆಟ್ಟಿಂದು ಮಂಡಿಸಿದನವನೀಶಂ ॥ ೭೧ ॥

ಅಸಿಯಳ್ವೆರಸೆಳಮುತ್ತಿನ
ಪಸೆಯೊಳ್ ಕಂಗೊಳಿಸುವುದ್ಭಟನ ಮುಂದೆ ಸಮಂ।
ತೊಸೆದೋಕುಳಿಯಂ ನೃಪರ್ಗಳ
ವಿಸರಮದಾಡಿದುದು ರಾಜನಾರೀಜನದೊಳ್ ॥ ೭೨ ॥

ಮದುವಕ್ಕಳ್ಗಿದಿರೊಳ ಸ
ಮ್ಮದವಾಂತೋಕುಳಿಯ ನೀರನುಱೆ ಸೂಸುವಕೋ।
ವಿದಜನಮಂ ನೂತ್ನಕಲಾಕೋ
ವಿದೆಯರ್ತೊಯಿಸಿದರಮರ್ದ ಪರಿಮಳಜಲದಿಂ ॥ ೭೩ ॥

ಓಕುಳಿಯನಾಡುವಿನಿಯರ
ನಾಕೀರಂ ಕಂಡು ತನ್ನ ಶಾಪವಿಶಾಪ।
ಪ್ರಾಕಟಕಾಲಮಿದೆಂದ
ಸ್ತೋಕಮುದಂಬಡೆದು ಪೊಕ್ಕುದಬಲಾಗಣದೊಳ್ ॥ ೭೪ ॥

೭೦. ಪ್ರಾಯಕ್ಕೆ ಬಂದ ತರುಣಿಯರು ಹಾಡಲು, ಹಿರಿಯರು ಆಶೀರ್ವದಿಸಲು, ಹೆಚ್ಚಿನ ವಿಲಾಸದಿಂದ ಹೊಗಳುಭಟ್ಟರು ಕೊಂಡಾಡಲು ಸಕಲ ಸಜ್ಜನರು ಜಯ ಜಯ ಧ್ವನಿಮಾಡಲು ಖ್ಯಾತಿವೆತ್ತ ತನ್ನ ಪತ್ನಿಯೊಡನೆ ಆನೆಯಂತೆ ಬಲಿಷ್ಠನಾದ ಉದ್ಭಟರಾಜನು ಕೊರತೆಯಿಲ್ಲದ ಸಂತಸದಿಂದ ಕೂಡಿ ಮೆಲ್ಲನೆ ವಿವಾಹ ಮಂಟಪಕ್ಕೆ ಬಂದನು. ೭೧. ಹಂಸೆಯೊಡಗೂಡಿದ ಹಂಸವು ಸರಸದಿಂದ ಕೂಡಿ ಕಮಲ ಪೀಠದಲ್ಲಿ ಕೂರುವಂತೆ ಮುತ್ತಿನ ಹಸೆಯ ಮೇಲೆ ಸೌಂದರಿಯೊಡನೆ ಬಂದ ಮಹಾರಾಜನು ಕುಳಿತನು. ೭೨. ಕೋಮಲೆಯಾದ ಪತ್ನಿಯೊಡನೆ ಎಳೆಯ ಮುತ್ತಿನ ಹಸೆಯ ಮೇಲೆ ಕಣ್ಸೆಳೆಯುವಂತಿರುವ ಉದ್ಭಟನ ಮುಂದೆ ಪ್ರೀತಿಯಿಂದ ಚೆನ್ನಾಗಿ ತಮ್ಮ ಅಂತಃಪುರದ ಸ್ತ್ರೀಯರೊಡನೆ ಮಹಾರಾಜರುಗಳು ಓಕುಳಿಯಾಡಿದರು. ೭೩. ಮದುಮಕ್ಕಳ ಎದುರಿಗೆ ಸಂತೋಷದಿಂದ ಓಕುಳಿಯ ನೀರನ್ನು ಚೆನ್ನಾಗಿ ಚೆಲ್ಲುವ ವಿದ್ವಜನವನ್ನು ನೂತನ ಕಲಾಕೋವಿದೆಯರು ಪನ್ನೀರಿನಿಂದ ತೋಯಿಸಿದರು. ೭೪. ಓಕುಳಿಯಾಡುವ ದಂಪತಿಗಳನ್ನು ಆ ಗಿಳಿಯು ನೋಡಿ, ತನ್ನ ಶಾಪ ಪರಿಹಾರವಾಗುವ ಸರಿಯಾದ ಕಾಲವಿದೆಂದು (ಭಾವಿಸಿ) ಅತ್ಯಾನಂದವನ್ನು ಹೊಂದಿ ಸ್ತ್ರೀಯರ ನಡುವೆ

ಬಳ್ಕೆ ನಡು ಘುಸೃಣಜಲಮಂ
ತುಳ್ಕುತುಮಾನಂದವಾಂತೆಸೆವ ಕಾಂತೆಯರೊ।
ಳ್ತೆಳ್ಕಿಸೆ ಪೊಕ್ಕು ತದಂಬುವಿ
ನೊಳ್ಕೀರಂ ತೊಯ್ದುದುಣ್ಮಿ ಪೊಣ್ಮುವ ಮುದದಿಂ ॥ ೭೫ ॥

ಆಸಲಿಲಾಭಿಷೇಚನದಿನೋಸರಿಸಲ್ ಶುಕರೂಪಮಾಕ್ಷಣಂ
ಭಾಸುರಶೋಭೆಯಂ ಪಡೆದು ತಾಪಸರೂಪಮನಾಂತು ರಂಜಿಪಾ।
ಭೂಸುರನಂ ನಿರೀಕ್ಷಿಸುತುಮಿರ್ದುದು ತದ್ವನಿತಾಜನಂ ಮಹೋ
ಲ್ಲಾಸದಿನಾಡುವೋಕುಳಿಯನಂದುೞಿದಾಡುತೆ ವಿಸ್ಮಯಾಬ್ಧಿಯೊಳ್ ॥ ೭೬ ॥

ಇಂತೋಕುಳಿಯಂ ನೆಗೞ್ಚುವಂಗನೆಯರ್ಮೊದಲಾದಖಿಳಜನಮಚ್ಚರಿವಟ್ಟಿರಲರಗಿಳಿಯಂದ ಮನುೞಿದು ಮನಂಗೊಳಿಪ ತನ್ಮುನೀಶ್ವರನಂ ಕಂಡುದ್ಭಟಕ್ಷಿತೀಂದ್ರಚಂದ್ರಮನೆಯ್ತಂದು ಸೌಂದರವತಿವೆರಸು ನಮಸ್ಕರಿಸೆ,

ನಮಿಸಿದ ಕಾದಲರಂ ತ
ನ್ನಮಳಕರದೊಳೆತ್ತಿ ಪರಸಿ ನಿಮ್ಮಿಂದಾನಿಂ।
ದಮಲಾತ್ಮನಾದೆನಿನ್ನಾಂ
ಗಮಿಪೆಂ ಗುರುವಿನೆಡೆಗೆಂದೆನುತೆ ಬೀೞ್ಕೊಂಡಂ ॥ ೭೭ ॥

ನಡೆತಂದು ಸತ್ಯವತಿವೆರ
ಸಡಿಗಳ್ಗೆಱಗಿದ ಸುಧರ್ಮಭೂಮಿಪನಂ ಸ।
ಲ್ನುಡಿಯಿಂ ಬೀೞ್ಕೊಂಡಾಮುನಿ
ತಡೆಯದೆ ತನ್ನಾರ್ಯನಾಶ್ರಮಕ್ಕುೞಿತಳರ್ದಂ ॥ ೭೮ ॥

ಪ್ರವೇಶಿಸಿತು. ೭೫. ಸೊಂಟವನ್ನು ಬಳುಕಿಸುತ್ತ ಕೆನ್ನೀರನ್ನು ಚೆಲ್ಲುತ್ತ ಆನಂದದಿಂದ ಶೋಭಿಸುವ ಸುಂದರಿಯರ ನಡುವೆ ಕಾಂತಿ ಚೆಲ್ಲುತ್ತಾ ಹೊಕ್ಕು ಆ ಕೆನ್ನೀರಿನಲ್ಲಿ ಗಿಳಿಯು ಹೊಮ್ಮಿ ಹರಿಯುವ ಸಂತಸದಿಂದ ಒದ್ದೆಯಾಯಿತು. ೭೬. ಆ ನೀರಿನ ಅಭಿಷೇಕದಿಂದ ಗಿಳಿಯ ರೂಪವು ಮಾಯವಾಗಿ ಆ ಕ್ಷಣ ಅತ್ಯಂತ ಪ್ರಭಾವಪೂರ್ಣ ತಪಸ್ವಿಯ ರೂಪವನ್ನು ಧರಿಸಿ ಬೆಳಗುತ್ತಿರುವ ಬ್ರಾಹ್ಮಣನನ್ನು ಆ ಸ್ತ್ರೀಯರ ಬಳಗವು ಮಹೋತ್ಸಾಹದಿಂದ ಓಕುಳಿಯಾಡುವುದನ್ನು ನಿಲ್ಲಿಸಿ ಆಶ್ಚರ್ಯದಿಂದ ನೋಡುತ್ತಲಿದ್ದಿತು. ವ॥ ಹೀಗೆ ಓಕುಳಿಯಾಡುತ್ತಲಿದ್ದ ಸ್ತ್ರೀಯರೇ ಮೊದಲಾದ ಜನವು ಆಶ್ಚರ್ಯಹೊಂದಿ ಇರುತ್ತಿರಲು ಅರಗಿಳಿಯ ರೂಪ ಹೋಗಿ ಮನಸೆಳೆಯುವಂತಿರುವ ಆ ಮುನೀಶ್ವರನನ್ನು ನೋಡಿ ಉದ್ಭಟ ಮಹಾರಾಜಚಂದ್ರಮನು ಬಂದು ಸೌಂದರವತಿಯೊಡನೆ ನಮಸ್ಕರಿಸಲು, ೭೭. ನಮಸ್ಕರಿಸಿದ ಪ್ರೇಮಿಗಳನ್ನು ತನ್ನ ಪರಿಶುದ್ಧವಾದ ಕೈಯಿಂದೆತ್ತಿ ಹರಸಿ ನಿಮ್ಮಿಂದ ನಾನು ಇಂದು ಪವಿತ್ರಾತ್ಮನಾದೆನು, ಇನ್ನು ನಾನು ಗುರುವಿನೆಡೆಗೆ ಹೋಗುತ್ತೇನೆ ಎಂದು ಬೀಳ್ಕೊಂಡನು. ೭೮. ಸತ್ಯವತಿಯೊಡನೆ ಬಂದು ನಮಸ್ಕರಿಸಿದ ಸುಧರ್ಮ ಮಹಾರಾಜನನ್ನು ಪ್ರಿಯವಾದ ಮಾತುಗಳಿಂದ ಬೀಳ್ಕೊಂಡ ಆ ಮುನಿಯು ತಡಮಾಡದೆ ತನ್ನ ಗುರುವಿನ ಆಶ್ರಮಕ್ಕೆ

ಮದುವೆಗೆ ಬಂದ ನಿಬ್ಬಣಜನಂ ಬಿಡದಚ್ಚರಿವಟ್ಟಿರಲ್ಕರಂ
ಮುದದೊಳದೃಶ್ಯಮಾಗಿ ಮುನಿ ಪೋಗೆ ನಿಜಾಶ್ರಮಕಂದು ಕಂಗೊಳಿ।
ಪ್ಪುದಿತವಿಲಾಸನುದ್ಭಟಮಹೀಶ್ವರನಂ ಮನೆದುಂಬಲೆಂದು ತಾಂ
ಪದೆದು ಪೊದಟ್ಟಿ ಕಂಬವಲಿಯಂ ಬಟಿಕಾಗಿಸಿದಂ ಸುಧರ್ಮಕಂ ॥ ೭೯ ॥

ಮತ್ತಮದಲ್ಲದೆ,

ಪರಿಣಯಕೆಟ್ಟಿಂದೆಲ್ಲಾ
ಪುರಜನಪರಿಜನಮನಖಿಳವಸ್ತುಗಳಿಂ ಸ।
ತ್ಕರಿಸಿ ಸುಧರ್ಮನೃಪಂ ಸೌಂ
ದರಿಯಂ ಪತಿಯೊಡನೆ ಕಳುಪಲುದ್ಯೋಗಿಸಿದಂ ॥ ೮೦ ॥

ಬಟುವಟಿಗೆಂದು ಕಟ್ಟಿದ ಸಮಸ್ತಸುವಸ್ತುಸಮೂಹಮಂ ಸಮು
ಜ್ಜ್ವಳತರಮೋದದಿಂದೊಸೆದು ಕೊಟ್ಟು ನಿಜಾತ್ಮಜೆಗೂಡಿ ಬಂದು ನಿ।
ರ್ಮಳಯಶನುದ್ಭಟೋರ್ವಿಪನನೈದೆ ವಿಜೃಂಭಿಪಲಂಪಿನೇಟ್ಟಿಗೆಯೊಳ್
ಘಟಿಲನೆ ತಂದು ಕೂರ್ತು ಮನೆದುಂಬಿಸಿದಂ ನೆಗಬ್ದಾಸುಧರ್ಮಕಂ ॥ ೮೧ ॥

ಮನಮೊಲ್ದುದ್ಭಟನೃಪನಂ
ಮನೆದುಂಬಿಸಿ ತನ್ನ ಪುತ್ರಿಸೌಂದರವತಿಯಂ।
ವಿನಯದಿನಿರವೇಟ್ಟಿರಮನೆ
ಗನುನಯದಿಂ ಮಗುಟ್ದು ಬಂದನಂದು ಸುಧರ್ಮಂ ॥ ೮೨ ॥

ಬೇಗನೆ ನಡೆದನು. ೭೯. ಮದುವೆಗೆ ಬಂದ ದಿಬ್ಬಣ ಜನವು ಅಚ್ಚರಿಗೊಂಡಿರಲು, ಆನಂದದಿಂದ ಬೇಗನೆ ಅದೃಶ್ಯನಾದ ಮುನಿಯು ತನ್ನ ಆಶ್ರಮಕ್ಕೆ ಹೋಗಲು ಅಂದು ಕಣ್ಣಿಗೆ ಅಂದವಾಗಿ ಕಾಣುತ್ತಿದ್ದ ಅತ್ಯಾನಂದದಿಂದ ಕೂಡಿದ್ದ ಉದ್ಭಟ ಮಹಾರಾಜನನ್ನು ಮನೆಹೊಗಿಸಲೆಂದು ಪ್ರೀತಿಯಿಂದ ಪ್ರಸಿದ್ಧವಾದ ಕಂಬ ಬಲಿಯನ್ನು ಸುಧರ್ಮನು ಅನಂತರ ಮಾಡಿಸಿದನು. ವ॥ ಮತ್ತೆ ಅದಲ್ಲದೆ, ೮೦. ಮದುವೆಗೆಂದು ಬಂದ ಎಲ್ಲಾ ಪುರಜನರನ್ನು ಸೇವಕರನ್ನು ಸಕಲವಸ್ತುಗಳಿಂದ ಗೌರವಿಸಿದ ಸುಧರ್ಮಮಹಾರಾಜನು ಸೌಂದರಿಯನ್ನು ಅವಳ ಪತಿಯೊಡನೆ ಕಳುಹಿಸಲು ತೊಡಗಿದನು. ೮೧. ಪ್ರಸಿದ್ಧನಾದ ಸುಧರ್ಮನು ಬಳುವಳಿಯೆಂದು ಕಟ್ಟಿಡಲಾಗಿದ್ದ ಸಕಲ ವಸ್ತುಗಳನ್ನು ಅತ್ಯಂತ ಸಂತೋಷದಿಂದ ಪ್ರೀತಿಪಟ್ಟುಕೊಟ್ಟು ತನ್ನ ಮಗಳೊಡನೆ ಬಂದು ನಿರ್ಮಲವಾದ ಯಶಸ್ಸಿನಿಂದ ಕೂಡಿದ ಉದ್ಭಟ ಮಹಾರಾಜನ ಜೊತೆಗೂಡಿ ವಿಜೃಂಭಿಸಿರುವ ಸೊಗಸಿನ ಆಧಿಕ್ಯದಿಂದ ಬೇಗನೆ ಬಂದು ಪ್ರೀತಿಯಿಂದ ಮನೆದುಂಬಿಸಿದನು. ೮೨. ಮನದುಂಬಿ ಉದ್ಭಟ ಮಹಾರಾಜನನ್ನು ಮನೆದುಂಬಿಸಿ, ತನ್ನ ಮಗಳು ಸೌಂದರವತಿಯನ್ನು ವಿನಯದಿಂದ (ಪತಿಯೊಡನೆ) ಇರಲು ಹೇಳಿ ಅಂದು ಅರಮನೆಗೆ ಕ್ರಮವಾಗಿ ಸುಧರ್ಮನು ಹಿಂತಿರುಗಿ ಬಂದನು.

ಪಿರಿದುಂ ಸಂತಸದಿಂ ತ
ದ್ಧರಣೀಶೋತ್ತಮಸುಧರ್ಮನಂ ಬೀಱುಕೊಟ್ಟ।
ತ್ಯುರತರವಸ್ತುಗಳಿಂ ಸ
ತ್ಕರಿಸಿದನುದ್ಭಟಮಹೀಶನೆಲ್ಲಾ ಜನಮಂ ॥ ೮೩ ॥

ವಂದಿಗಳಂ ಗಣಿಕೆಯರಂ
ಸಂದಣಿಸುವ ಭಟರನಖಿಳವಸ್ತುಗಳಿಂದಾ।
ನಂದಮನೈದಿಸುತದ್ಭಟ
ನಂದೆಲ್ಲರನುಚಿತವಚನದಿಂ ಬೀಱುಕೊಟ್ಟಂ ॥ ೮೪ ॥

ಇಂತೊಲ್ದೆಲ್ಲಾ ಜನಮಂ
ಸಂತೋಷಂ ಬಡಿಸಿ ಮಗುಟ್ಚಿ ಬೀಱುಕೊಟ್ಟುರ್ವೀ।
ಕಾಂತಂ ಮುದದಿಂದಿರಲೋ
ರಂತಪರಾಂಬುಧಿಯನರ್ಕನೈದಿದನಾಗಳ್ ॥ ೮೫ ॥

ನಸುಸಂಜೆಯಾಗಲುದ್ಭಟ
ನೊಸೆದರ್ಘ್ಯಮನಿತ್ತು ಚಂದ್ರಭೂಷಣನಂ ಪೂ।
ಜಿಸಿ ಮೆಲ್ಲನೆ ಮಗುಟ್ಚಿದ್ದಾರೋ
ಗಿಸಿದಂ ಶಿವಭದ್ರವೆರಸು ಮುದದಿಂದಾಗಳ್ ॥ ೮೬ ॥

ಶಿವಭದ್ರಮುಖ್ಯಮಂತ್ರಿ
ಪ್ರವರಂಬೆರಸುಂಡು ಮಗುಟ್ಚಿ ಬೀಱುಕೊಟ್ಟವರಂ।
ಸುವಿಲಾಸದಿಂದೆ ಶಯ್ಯಾ
ಭವನಕ್ಕೆಟ್ತಿಂದನುದ್ಭಟಕ್ಷಿತಿಪಾಲಂ ॥ ೮೭ ॥

೮೩. ಅತ್ಯಾನಂದದಿಂದ ಆ ಮಹಾರಾಜನಾದ ಸುಧರ್ಮನನ್ನು ಬೀಳ್ಕೊಟ್ಟು ಅತ್ಯಂತ ಶ್ರೇಷ್ಠವಾದ ವಸ್ತುಗಳಿಂದ ಉದ್ಭಟ ಮಹಾರಾಜನು ಎಲ್ಲಾ ಜನರನ್ನು ಗೌರವಿಸಿದನು. ೮೪. ಹೊಗಳುಭಟ್ಟರನ್ನು, ವೇಶ್ಯಾಂಗನೆಯನ್ನು, ಗುಂಪುಗುಂಪಾದ ಸೈನಿಕರನ್ನು ಸಕಲ ವಸ್ತುಗಳಿಂದ ಆನಂದವನ್ನುಂಟುಮಾಡುತ್ತ ಉದ್ಭಟನು ಅಂದು ಎಲ್ಲರನ್ನು ಯೋಗ್ಯವಾದ ಮಾತುಗಳಿಂದ ಬೀಳ್ಕೊಟ್ಟನು. ೮೫. ಹೀಗೆ ಪ್ರೀತಿಯಿಂದ ಎಲ್ಲಾ ಜನರನ್ನು ಸಂತೋಷಪಡಿಸಿ ಹಿಂತಿರುಗಿ ಕಳುಹಿಸಿದ ಮಹಾರಾಜನು ಸಂತೋಷದಿಂದಿರಲು ಸೂರ್ಯನು ಪಶ್ಚಿಮ ಸಮುದ್ರಕ್ಕೆ ಒಂದೇ ಸಮನೆ ಸಾಗಿದನು. ೮೬. ನಸುಗತ್ತಲೆ ಕಾಣಿಸಿಕೊಳ್ಳುತ್ತಿರಲು ಉದ್ಭಟನು ಪ್ರೀತಿಯಿಂದ ಅರ್ಘ್ಯವನ್ನು ಕೊಟ್ಟು ಶಿವನನ್ನು ಪೂಜಿಸಿ ಮೆಲ್ಲನೆ ಹಿಂತಿರುಗಿ ಬಂದು ಸಂತೋಷದಿಂದ ಶಿವಭದ್ರನ ಜೊತೆಗೂಡಿ ಪ್ರಸಾದ ಸೇವನೆ ಮಾಡಿದನು. ೮೭. ಶಿವಭದ್ರನೇ ಆದ ಮಂತ್ರಿ ಶ್ರೇಷ್ಠರೊಡನೆ ಊಟಮಾಡಿ ಅವರನ್ನು ಹಿಂದಿರುಗಿ ಕಳುಹಿಸಿ ಸಂತೋಷದಿಂದ ಮಲಗುವ ಮನೆಗೆ ಉದ್ಭಟ ಮಹಾರಾಜನು ಬಂದನು.

ಶಯ್ಯಾಸದನಕ್ಕುದ್ಭಟ
ನೊಯ್ಯನೆ ನಡೆತರೆ ನವೀನಪರಿಮಳೊಳ್ಪಂ।
ಮೆಯ್ಯಾನುತೆ ಸೆಜ್ಜೆಯ ಮನೆ
ರಯ್ಯಮೆನಲ್ಕಿಗೆ ವಿರಾಜಿಸಿದುದಂದಿದಿರೊಳ್ ॥ ೮೮ ॥

ಪೊಸಗಂಪಂ ಸೂಸುತುಂ ಕಂಗೊಳಿಸುವ ಸಿರಿಯಂ ತುಳ್ಕುತುಂ ಮಂಜುರತ್ನ
ಪ್ರಸರಾಕೀರ್ಣಾಂಶುವಂ ಹಂಜರಿಸುತಮರ್ದರ್ಶೃಂಗಾರಮಂ ಬೀಱುತುಂಶೋ
ಭಿಸುವಂಚತ್ಕೀರಪಾರಾವತಕುಹುರವಮಂ ಪೆರ್ಚಿಸುತ್ತುಂ ಕರಂ ಕ
ಣ್ಗೆಸೆದಿರ್ಕುಂ ಕುಟ್ಟಿಮೀಭೂತವರಮರಕತಾಶ್ಮಂ ಸುಶಯ್ಯೋಚ್ಚವೇಶ್ಮಂ ॥ ೮೯ ॥

ಪ್ರಬಲಜ್ಯೋತಿಃಪ್ರಭಾಪೂರಿತಕನದಮಲಾಭ್ಯಂತರಂ ಬದ್ಧಪುಷ್ಪ
ಸ್ತಬಕೌಘಂ ನೂತ್ನಸಮ್ಮಾರ್ಜಿತಮೃಗಮದಕರ್ಪೂರರಜಂಬಾಲಪಿಂಡಾಂ।
ಕಬಹಿರ್ಭಾಗಂ ಸ್ಥಿರಪ್ರೋಜ್ಜ್ವಲಮಣಿಮಯಮಂಚಂ ಸುಗಂಧಾವಲಂಬಂ
ಸೊಗಸಿತ್ತತ್ತೈದೆ ಕುಡ್ಯೀಕೃತಹಿಮಕರಕಾಂತಂ ಸುಶಯ್ಯಾನಿಶಾಂತಂ ॥ ೯೦ ॥

ವಿಕಿರತ್ಕುಂಕುಮದಿಂದೆ ಮೃಗ್ಯಘುಸೃಣಶ್ರೀಖಂಡಸಂಯುಕ್ತರ
ತ್ನಕರಂಡಾಳಿಯಿನಂತಲರ್ಪುದಿದ ನಲ್ಬಿಬ್ಬಲ್ಗಳಿಂ ಶೀತಲೋ।
ದಕಕುಂಭಂಗಳಿನುದ್ಗಮವ್ಯಜನದಿಂ ಶೋಭಿಪ್ಪ ಪೊಂಗಿಂಡಿಮಾ
ಣಿಕಕಾಳಾಂಜಿಗಳಿಂ ವಿರಾಜಿಸಿದುದಂದಂಬೆತ್ತು ಶಯ್ಯಾಗೃಹಂ ॥ ೯೧ ॥

೮೮. ಮಲಗುವ ಮನೆಗೆ ಉದ್ಭಟನು ಮೆಲ್ಲನೆ ಬರಲು, ನವೀನವಾದ ಪರಿಮಳದ ಸೊಗಸನ್ನು ಧರಿಸಿದ ಮಲಗುವ ಮನೆಯು ಅಂದು ಮನೋಹರವಾಗಿ ಇದಿರಿಗೆ ಅತಿಶಯವಾಗಿ ಶೋಭಿಸಿತು. ೮೯. ಹೊಸ ಸುವಾಸನೆಯನ್ನು ಚೆಲ್ಲುತ್ತ, ಕಣ್ಣಿಗೆ ಅಂದವಾಗಿ ಕಾಣಿಸುವ ಸಂಪತ್ತನ್ನು ತುಳುಕುತ್ತ , ಮನೋಹರವಾದ ರತ್ನಗಳ ಸಮೂಹವು ಕಾಂತಿಯನ್ನು ಹರಡುತ್ತ, ಜೊತೆಗೆ ಶೃಂಗಾರವನ್ನು ಪ್ರಕಟಿಸುತ್ತ ಶೋಭಿಸುವ ಗಿಳಿ, ಪಾರಿವಾಳ, ಕೋಗಿಲೆಗಳ ಧ್ವನಿಯನ್ನು ವಿಸ್ತರಿಸುತ್ತ ಪಚ್ಚೆಯ ಕಲ್ಲಿನ ನೆಲಗಟ್ಟನ್ನು ಹೊಂದಿರುವ ಶ್ರೇಷ್ಠವಾದ ಮಲಗುವ ಮನೆಯು ಕಣ್ಣಿಗೆ ಒಪ್ಪಿದ್ದಿತು. ೯೦. ಪ್ರಬಲ ಜ್ಯೋತಿಃ ಪ್ರಭೆಯಿಂದ ಕೂಡಿ ಹೊಳೆಯುವ ಶುಭ್ರವಾದ ನಡುಭಾಗದಲ್ಲಿ ಇಡಲ್ಪಟ್ಟ ಪುಷ್ಪಗಳ ಮೊತ್ತ, ಕಸ್ತೂರಿ ಕರ್ಪೂರಗಳ ಕೆಸರ ಮೊತ್ತದಿಂದ ಚೆನ್ನಾಗಿ ಸಾರಿಸಲ್ಪಟ್ಟ ಹೊರಭಾಗ, ಗಟ್ಟಿಮುಟ್ಟಾದ ಪ್ರಜ್ವಲಿಸುವ ಮಣಿಖಚಿತವಾದ ಮಂಚ, ನೆಲೆಗೊಂಡ ಸುಗಂಧ, ಚಂದ್ರಕಾಂತ ಶಿಲೆಯಿಂದ ಕಟ್ಟಿದ ಗೋಡೆ - ಇವುಗಳಿಂದ ಮಲಗುಮನೆಯು ಚೆನ್ನಾಗಿ ಸೊಗಸುಗೊಂಡಿದ್ದಿತು. ೯೧. ಚೆನ್ನಾಗಿ ಶೋಭಿಸುವ ಕುಂಕುಮ, ಕಸ್ತೂರಿ, ಕುಂಕುಮಕೇಸರಿ, ಶ್ರೀಗಂಧ ಇವುಗಳಿಂದ ಕೂಡಿದ ರತ್ನದ ಭರಣಿಗಳಿಂದ, ಹೂವುಗಳನ್ನು ತುಂಬಿದ ಸೊಗಸಾದ ಬುಟ್ಟಿಗಳಿಂದ, ತಣ್ಣನೆಯ ನೀರು ತುಂಬಿದ ಮಡಕೆಗಳಿಂದ, ಮಾಣಿಕ್ಯದ ಪೀಕದಾನಿಗಳಿಂದ ಮಲಗು ಮನೆಯು ಅಂದಗೊಂಡು

ಇಂತಲಂಪಿನ ಪೆಂಪಂತಳೆದು ಮನಂಗೊಳಿಪ ಶಯ್ಯಾಗೃಹಮಂ ಪೊಕ್ಕು ತನ್ಮಂದಿರಮಧ್ಯಸ್ಥಿತಸಿತ ಪಟ್ಟಾಂಬರಾಚ್ಛಾದಿತಕಲಹಂಸತೂಲಿಕಾ ಸಮಂಚಿತಕಾಂಚನಮಂಚೋಪರಿಭಾಗದೊಳೊಲವಿಂದಂ ಬಂದುದ್ಭಟ ಕ್ಷಿತೀಂದ್ರಚಂದ್ರಮಂ ಕುಳ್ಳಿರ್ದತಿಹರ್ಷದಿಂದಮಿರೆ ಯಿರೆ,

ಸೆಜ್ಜೆವನೆಗರಸನೆಟ್ಟಿಂ
ದುಜ್ಜಗಮಂ ತಿಳಿದು ಚತುರಸಖಿಯರ್ನವಯೋ।
ಷಿಜ್ಜನಮಣಿಸೌಂದರಿಯಂ
ಪಜ್ಜಳಿಪವಿಲಾಸದಿಂದೊಸೆದು ಕರೆತಂದರ್ ॥ ೯೨ ॥

ಇಂತು ಶಶಿಲೇಖೆಮೊದಲಾದ ಚತುರಸಖಿಯರ್ ಸೌಂದರವತಿಯಂ ಕರೆತಂದು ತತ್ಸತಿವೆರಸು ಶಯ್ಯಾಗೃಹಮಂ ಪೊಕ್ಕರಸನ ಪರ್ಯಂಕೋಪ ಕಂಠದೊಳಾಸುಧರ್ಮನಂದನೆಯಂ ನಿಲಿಸಿ ಮೆಲ್ಲನುಲ್ಲಾಸದಿಂ ಸೆಜ್ಜೆಯ ಪೊಱಗಣ್ಗೊಂದೊಂದುಕೆಲಸದ ನೆವಮಂ ಕೈಕೊಂಡು ಪೋಗೆ,

ಚಂದ್ರನನೊಲ್ದು ರೋಹಿಣಿ ವಲಂ ರತಿ ಪಂಚಕಲಂಬನಂ ಸುಪ
ರ್ವೇಂದ್ರನನಟ್ಟಿವಟ್ಟು ಶಚಿ ಮೆಲ್ಲನೆ ಬಂದುಱೆ ಪೊರ್ದುವಂತೆ ತ।
ದ್ಭುಂದ್ರಚಕೋರಲೋಚನೆ ಸುಧರ್ಮತನೂಭವೆ ಬಂದು ಸಾರ್ದಳಾ
ಸಾಂದ್ರಯಶಃಪ್ರಭಾಧವಳನುದ್ಭಟನಿರ್ಪಸುವರ್ಣಮಂಚಮಂ ॥ ೯೩ ॥

ಮತ್ತಮದಲ್ಲದೆ,

ನವಚೈತ್ರನೇಳ್ಗೆಯಂ ಕಂ
ಡು ವಿಜೃಂಭಿಸುತಿರ್ಪ ಮಾಧವೀಲತಿಕೆಯವೊಲ್।

ಹೊಳೆಯುತ್ತಿದ್ದಿತು. ವ॥ ಹೀಗೆ ಚೆಲುವಿಕೆಯ ಹೆಚ್ಚಳವನ್ನು ಹೊಂದಿ ಮನಸೆಳೆಯುವ ಮಲಗುಮನೆಯನ್ನು ಪ್ರವೇಶಿಸಿ ಆ ಮಂದಿರದ ಮಧ್ಯದಲ್ಲಿರುವ ಬಿಳಿಯ ರೇಷ್ಮೆ ವಸ್ತ್ರದಿಂದ ಮುಚ್ಚಲ್ಪಟ್ಟ ಹಂಸದ ತುಪ್ಪಳದಿಂದ ಚೆನ್ನಾಗಿ ನಿರ್ಮಿಸಿದ ಚಿನ್ನದ ಮಂಚದ ಮೇಲ್ಭಾಗದಲ್ಲಿ ಸಂತಸದಿಂದ ಬಂದ ಉದ್ಭಟಮಹಾರಾಜ ಚಂದ್ರಮನು ಕುಳಿತು ಹರ್ಷದಿಂದಿರಲು, ೯೨. ಮಲಗು ಮನೆಗೆ ಅರಸನು ಬಂದ ಉದ್ದೇಶವನ್ನು ತಿಳಿದ ಚತುರ ಸಖಿಯರು ಎಳೆಯ ಜವ್ವನೆಯರಲ್ಲಿ ಅತ್ಯಂತ ಶ್ರೇಷ್ಠಳಾದ ಸೌಂದರಿಯನ್ನು ಪ್ರಜ್ವಲಿಸುವ ಬೆಡಗಿನಿಂದ ಪ್ರೀತಿಪಟ್ಟು ಕರೆತಂದರು. ವ॥ ಹೀಗೆ ಶಶಿಲೇಖೆಯೇ ಮೊದಲಾದ ಜಾಣಸಖಿಯರು ಸೌಂದರವತಿಯನ್ನು ಕರೆತಂದು ಅವಳೊಡನೆ ಮಲಗು ಮನೆಯನ್ನು ಪ್ರವೇಶಿಸಿ ಅರಸನ ಹಾಸುಗೆಯ ಸಮೀಪದಲ್ಲಿ ಆ ಸುಧರ್ಮನ ಮಗಳನ್ನು ನಿಲ್ಲಿಸಿ ಮೆಲ್ಲನೆ ಮಲಗು ಮನೆಯಿಂದ ಹೊರಗೆ ಒಂದೊಂದು ಕೆಲಸದ ನೆವವನ್ನು ತೆಗೆದು ಹೋಗಲು, ೯೩. ಚಂದ್ರನನ್ನು ರೋಹಿಣಿ, ಮನ್ಮಥನನ್ನು ರತಿ, ದೇವೇಂದ್ರನನ್ನು ಶಚಿ ಮೋಹಿಸಿ ಮೆಲ್ಲನೆ ಬಂದು ಚೆನ್ನಾಗಿ ಹೊಂದುವಂತೆ ಆ ಸುಧರ್ಮಮಹಾರಾಜನ ಮಗಳು ವಿಶಾಲಾಕ್ಷಿಯಾದ ಸೌಂದರಿಯು ವಿಶಾಲವಾದ ಯಶಸ್ಸೆಂಬ ಬೆಳ್ಳನೆಯ ಕಾಂತಿಯಿಂದ ಕೂಡಿದ ಉದ್ಭಟನಿರುವ ಚಿನ್ನದ ಮಂಚವನ್ನು ಬಂದು ಸಮೀಪಿಸಿದಳು. ವ॥ ಮತ್ತೆ ಅದಲ್ಲದೆ, ೯೪. ನವ ವಸಂತನ ಅಭಿವೃದ್ಧಿಯನ್ನು ಕಂಡು ಅರಳುವ ಮಾಧವೀ ಬಳ್ಳಿಯಂತೆ ಸೊಗಸಾಗಿ ಮಂಚದ ಮೇಲೆ ಕುಳಿತ

ಲ್ತವೆ ಮಂಚಸ್ಥಿತಭೂಮಿಾ
ಧವನಂ ನಡೆನೋಡಿ ಕಾಂತೆ ಪೊಂಪುಳಿವೋದಳ್ ॥ ೯೪ ॥

ಸಸಿಯ ಕರಸ್ಪರ್ಶನದಿಂ
ದೊಸರ್ವಿಂದೂಪಲದ ಬೊಂಬೆಯೆನೆ ಸೌಂದರಿ ತ।
ದ್ವಸುಧೇಶನ ಕೇಕರರುಚಿ
ವಿಸರಂ ಪಸರಿಸೆ ಬೆಮರ್ತಳತಿಕಾತರದಿಂ ॥ ೯೫ ॥

ಮನಮಂ ಕಲೆಯಂ ತವಕಮ
ನಿನಿಯನ ಲಾವಣ್ಯಮೂರ್ತಿಯೊಳ್ಬೆಚ್ಚು ತದಂ।
ಗನೆ ಬೆಱಗುವಟ್ಟು ನಿಲ್ತಪ
ಳೆನೆ ರುಚಿರಸ್ತಂಭಭಾವಮಂ ಕಂಡಾಗಳ್ ॥ ೯೬ ॥

ಕಮಲಗತಾಸವಮಗ್ನ
ಭ್ರಮರಾರವದಂತೆ ವಿಪುಳಹರ್ಷಾಂಬುಧಿಯ।
ಲ್ಲಿ ಮುಱುಂಗಿರಲೊಪ್ಪಿದುದಾ
ರಮಣಿಗೆ ಪಲ್ಲಟಿಸಿ ಭೇದಮಾದ ನಿನಾದಂ ॥ ೯೭ ॥

ತವಕದಿನೀಕ್ಷಿಪ ತದ್ಭೂ
ಧವನಕ್ಷಿಮರೀಚಿರಾಜಿ ವಿಸಟಂಬರಿದಂ।
ಗವನ್ನೆದೆ ಬಾಸಣಿಸಲಾ
ಯುವತಿ ವಿವರ್ಣಮನೆ ತಾಳ್ದು ಕಣ್ಗೆಸೆದಿರ್ದಳ್ ॥ ೯೮ ॥

ಮುಕುಳಿತನೀಲೋತ್ಪಲಮಮೃ
ತಕರೋದಯದೊಳಗಲರ್ದು ಪೊಱಸೂಸುವವೋ।
ಲ್ಮಕರಂದಮನಿನನಂ ಬಾ
ಲಿಕೆ ನೋಡುತೆ ತಳೆದಳೊಗುವ ಹರ್ಷಾಶ್ರುಗಳಂ ॥ ೯೯ ॥

ಮಹಾರಾಜನನ್ನು ಸೌಂದರಿಯು ಚೆನ್ನಾಗಿ ನೋಡಿ ರೋಮಾಂಚನಗೊಂಡಳು. ೯೫. ಚಂದ್ರನ ಕಿರಣಗಳ ತಾಗುವಿಕೆಯಿಂದ ಕರಗುವ ಚಂದ್ರಕಾಂತ ಶಿಲೆಯ ಮೂರ್ತಿಯಂತೆ ಆ ಮಹಾರಾಜನ ಕಡೆಗಣ್ಣ ನೋಟದ ಕಾಂತಿಯು ಹರಡಲು ಸೌಂದರಿಯು ಬಹುಬೇಗನೆ ಒದ್ದೆಯಾದಳು. ೯೬. ಮನಸ್ಸನ್ನು, ಕಾಮಕಲೆಯನ್ನು, ಕಾತರವನ್ನು ಪ್ರಿಯನ ಸುಂದರ ಆಕಾರದಲ್ಲಿ ಕಂಡು ಬೆದರಿದ ಆ ಸುಂದರಿಯು, ಅಚ್ಚರಿಗೊಂಡು ನಿಂತಳು ಎನ್ನುವಂತೆ ಮನೋಹರವಾದ ಕಂಬದ ಭಾವವನ್ನು ಕಂಡು ಆಗ, ೯೭. ಕಮಲದಲ್ಲಿನ ಮಕರಂದವನ್ನು ಸವಿಯುವುದರಲ್ಲಿ ಮಗ್ನವಾದ ದುಂಬಿಯ ಧ್ವನಿಯಂತೆ ಅತ್ಯಾನಂದಸಾಗರದಲ್ಲಿ ಮುಳುಗಿರಲು ಆ ಸುಂದರಿಗೆ ಬದಲಾಗಿ ಬೇರೆಯೇ ಆದ ಧ್ವನಿಯು ಅಂದವಾಗಿ ಕಂಡಿತು. ೯೮. ಕಾತರದಿಂದ ನೋಡುವ ಆ ಮಹಾರಾಜನ ಕಣ್ಣಕಾಂತಿ ಬೆಳಗು ಎಲ್ಲೆಡೆ ಹರಡಿ ದೇಹವನ್ನೆಲ್ಲ ಕವಿಯಲು, ಆ ಸುಂದರಿಯು ಬಣ್ಣಗೆಟ್ಟು ಕಣ್ಣೆಗೆ ಅಂದವಾಗಿ ಕಾಣುತ್ತಿದ್ದಳು. ೯೯. ಮುಚ್ಚಿದ ನೀಲಕಮಲವು ಚಂದ್ರನ ಕಿರಣಗಳು ತಾಗಲು ಅರಳಿ ಮಕರಂದವನ್ನು

ಚಲಿಪೆಲರಲೆಪಕ್ಕೆಳಲತೆ
ಯೊಲೆವಂತೆ ತದುರ್ವಿಪತಿಲಲಾಮನ ನಱುಸು।
ಯ್ಯಲರಿನಿಸು ಸೋಂಕೆ ತತ್ಕೋ
ಮಲೆ ಕಾತರದಿಂದೆ ಕಂಪಮಂ ಬಿಡದೆಸೆದಳ್ ॥ ೧೦೦ ॥

ಇಂತು ಸಾತ್ವಿಕೋದಯಂ ಪೆಣ್ಬರಿಜಾಗಿ ಮನಂಗೊಳಿಪಂತೆ ರಂಜಿಪ ತತ್ಕಂಜದಳಾಕ್ಷಿಯ ಭಾವಮನಱಿದುದ್ಭಟಕ್ಷಿತೀಂದ್ರಚಂದ್ರಮಂ ಮುಂಬರಿದಿಂದ್ರಿಯಂಗಳಂ ಬಲ್ವಿಡಿದು ವಿಶಾಲಲೀಲೆಯಿಂ ಲೋಲಚೇಲಾಂಚಲಮಂ ಪಿಡಿದು,

ಪಿಡಿದು ಸೆಱಂಗಂ ಮೆಲ್ಲನೆ
ಮೃಡಭಕ್ತೋದ್ಭಟಮಹೀಧವಂ ಬರಿಸಲ್ಕ।
ಜ್ಜಡಜಾಂಬಕೆ ಮಂಡಿಸಿದಳ್
ನಡೆತಂದೆಡದಲ್ಲಿ ನಮ್ರಮುಖಿ ನಾಣಿಂದಂ ॥ ೧೦೧ ॥

ವ್ರೀಡೆಯಿಂ ತಲೆವಾಗಿ ಕಂಗೊಳಿಪಾವಧೂಟಿಯ ಭಾವಮಂ
ನೋಡುತಾನನಮಂಡಲೋದಿತಘರ್ಮವಾಃಕಣಜಾಲಮಂ।
ನಾಡೆ ಶೋಭಿಪ ಸೆಳ್ಳುಗುರ್ಗೊನೆಯಿಂ ನಿವಾರಿಪ ಚಂದದಿಂ
ಗಾಡಿಕಾರ್ತಿಯನೊಲ್ದು ಸೋಂಕಿದನುದ್ಭಟಕ್ಷಿತಿಪಾಲಕಂ ॥ ೧೦೨ ॥

ಮತ್ತಮದಲ್ಲದೆ,

ಕೇತಕಿಗಳ್ಕನಕಾಬ್ಜದೊ
ಳೋತು ಸಖಿತ್ವಮನೆ ಬಯಸಿ ಬಂದೊಂದುವವೋ।
ಲ್ಪ್ರೀತಿಯಿನವಳಾನನಮಂ
ಶಾತನಖಿಸ್ಫುರಿತಕರದಿನೆತ್ತಿದನರಸಂ ॥ ೧೦೩ ॥

ಹೊರಚೆಲ್ಲುವಂತೆ ಬಾಲಿಕೆಯು ಪತಿಯನ್ನು ನೋಡುತ್ತ ಹೊಮ್ಮುವ ಆನಂದದ ಕಣ್ಣೀರನ್ನು ಹೊಂದಿದಳು. ೧೦೦. ಬೀಸುವ ಗಾಳಿಯ ಬೀಸಿಗೆ ಎಳೆಯ ಬಳ್ಳಿಯು ತೂಗುವಂತೆ ಆ ಮಹಾರಾಜ ತಿಲಕನ ಸುವಾಸನಾಯುಕ್ತ ಉಸಿರು ಕೊಂಚ ತಾಗಲು ಆ ಕೋಮಲಾಂಗಿಯು ಕೌತುಕದಿಂದ ನಡುಗಿ ಚೆನ್ನಾಗಿ ಶೋಭಿಸಿದಳು. ವ॥ ಹೀಗೆ ಸಾತ್ವಿಕಾಂಶವೇ ಹೆಣ್ಣಿನ ರೂಪುದಳೆದು ಮನಸೆಳೆಯುವಂತೆ ಹೊಳೆಯುತ್ತಿರುವ ಆ ಕಮಲಾಕ್ಷಿಯ ಭಾವವನ್ನು ತಿಳಿದು ಉದ್ಭಟ ಮಹಾರಾಜಚಂದ್ರಮನು ಮುಂದೆ ಬಂದು ಇಂದ್ರಿಯಗಳನ್ನು ಬಿಗಿಹಿಡಿದು ಹೆಚ್ಚಿನ ವಿನೋದದಿಂದ ಅಲುಗಾಡುವ ಸೀರೆಯ ಸೆರಗನ್ನು ಹಿಡಿದು, ೧೦೧. ಸೆರಗನ್ನು ಹಿಡಿದು ಮೆಲ್ಲನೆ ಶಿವಭಕ್ತನಾದ ಉದ್ಭಟ ಮಹಾರಾಜನು ಕರೆತರಲು ಆ ಜಲಜಾಕ್ಷಿಯು ಬಂದು ನಾಚಿಕೆಯಿಂದ ತಲೆಬಾಗಿ ಎಡಭಾಗದಲ್ಲಿ ಕುಳಿತಳು. ೧೦೨. ನಾಚಿಕೆಯಿಂದ ತಲೆಬಾಗಿ ಕಣ್ಣಿಗೆ ಅಂದವಾಗಿರುವ ಆ ಸುಂದರಿಯ ಭಾವವನ್ನು ನೋಡುತ್ತ ಮುಖಮಂಡಲದಲ್ಲಿ ಹುಟ್ಟಿದ ಬೆವರ ಹನಿಗಳನ್ನು ಚೆನ್ನಾಗಿ ಶೋಭಿಸುವ ಚೂಪಾದ ಉಗುರಿನ ತುದಿಯಿಂದ ತೆಗೆದುಹಾಕುವ ಚಂದದಿಂದ ಸುಂದರಿಯನ್ನು ಪ್ರೀತಿಯಿಂದ ಉದ್ಭಟ
19 ಮಹಾರಾಜನು ಸ್ಪರ್ಶಿಸಿದನು. ವ॥ ಮತ್ತೆ ಅದಲ್ಲದೆ, ೧೦೩. ತಾಳೆಯ ಹೂವು

ಮತ್ತಮದಲ್ಲದೆ ಅತಿಲಜ್ಜಾಭರದಿಂದಂ ನಮ್ರಶಿರಳಾಗಿ ಮನಂಗೊಳಿಪ್ಪ ತದಂಗನಾಮಣಿಯ ಸೌಂದರವತಿಯ ಮುಖಮಂಡಲಮಂ ಪಿಡಿದೆತ್ತಿ ಮುದ್ದಿಸಿ ಸರಸಸಲ್ಲಾಪೋಲ್ಲಾಸದಿಂ ಮೆಲ್ಲನಕ್ಷೀಣಮಾದ ನಾಣಂಬಿಡಿಸಿ ಸಮುದಂಚಿತಪರಿಮಳಕಲಿತತಾಂಬೂಲಮಂ ಸ್ವೀಕರಿಸಿ ಯುದ್ಭಟಕ್ಷಿತೀಂದ್ರಚಂದ್ರಮಂ ಮಗುಳ್ದು,

ವಾಮಕರಾಂಬುಜದಿಂ ತ
ದ್ವಾಮಾಕ್ಷಿಯ ಮುಖಮನೆತ್ತಿ ಮುದ್ದಿಸುತೆ ಕಲಾ।
ರಾಮಂ ಬಿಗಿಯಪ್ಪಿದನಾ
ರಾಮಾಜನಮಣಿಯನುದ್ಭಟಕ್ಷಿತಿಪಾಲಂ ॥ ೧೦೪ ॥

ಮಲಯಜಶಾಖೆಯನಹಿಗ
ಳ್ನಲವಿಂದಮರ್ದಪ್ಪುವಂತೆ ತತ್ಸತಿಯಂ ಮಂ।
ಜುಳಬಾಹುಗಳಿಂ ಬಿಗಿಬಿಗಿ
ದು ಲಸತ್ಪರಿರಂಭಣಮನೊಡರ್ಚಿದನರಸಂ ॥ ೧೦೫ ॥

ಸಮನಿಸೆ ತನುಪುಳಕವಿಳಾ
ಸಮದಪ್ಪುವ ತನ್ನರೇಂದ್ರಚಂದ್ರನನೊಲ್ದಾ।
ರಮಣೀಮಣಿಯಪ್ಪಿದಳತಿ
ರಮಣೀಯಾನಂದವಾರ್ಧಿಯೊಳ್ಮುಳುಗುತ್ತುಂ ॥ ೧೦೬ ॥

ಮನಮಂ ತವಕಂ ಮುಂಚಿರೆ
ತನುರೋಮಾಂಚನಮನೊಂದೆ ಕಾಂಚಿವೆರಸು ಮೆ।
ಲ್ಲನೆ ನೀವಿ ಜಗುಳ್ದೆ ತತ್ಕಾ
ಮಿನಿಯಾಲಂಗಿಸಿದಳುದ್ಭಟೋರ್ವೀಧವನಂ ॥ ೧೦೭ ॥

ಚೆಂದಾವರೆಯೊಡನೆ ಪ್ರೀತಿಯಿಂದ ಗೆಳೆತನವನ್ನು ಬಯಸಿ ಬಂದು ಸೇರಿತೋ ಎನ್ನುವಂತೆ, ಪ್ರೀತಿಯಿಂದ ಅವಳ ಮುಖವನ್ನು ಚೂಪಾದ ಉಗುರಕಾಂತಿಯಿಂದ ಬೆಳಗುವ ಕೈಗಳಿಂದ ಅರಸನು ಮೇಲೆತ್ತಿದನು. ವ॥ ಮತ್ತೆ ಅದಲ್ಲದೆ, ಹೆಚ್ಚಾದ ನಾಚಿಕೆಯಿಂದ ತಲೆಬಾಗಿ ಮನಸೆಳೆಯುತ್ತಿರುವ ಸ್ತ್ರೀಯರಲ್ಲಿ ಶ್ರೇಷ್ಠಳಾದ ಆ ಸೌಂದರವತಿಯ ಮುಖಮಂಡಲವನ್ನು ಹಿಡಿದೆತ್ತಿ ಮುದ್ದಿಸಿ ಸರಸ ಮಾತುಕತೆಯಿಂದ ಪುಳಕಗೊಳಿಸಿ ಮೆಲ್ಲನೆ ಕಡಿಮೆಯಾಗುತ್ತ ಬಂದ ನಾಚಿಕೆಯನ್ನು ಇಲ್ಲವಾಗಿಸಿ (ಪ್ರಿಯೆಯ ಕೈಯಿಂದ) ಶ್ರೇಷ್ಠವಾದ ಪರಿಮಳದಿಂದ ಕೂಡಿದ ತಾಂಬೂಲವನ್ನು ಪಡೆದ ಉದ್ಭಟ ಮಹಾರಾಜ ಚಂದ್ರಮನು ಮತ್ತೆ, ೧೦೪. ಎಡಗೈಯಿಂದ ಚೆಲುವಾದ ಕಣ್ಣುಳ್ಳ ಆ ಸೌಂದರಿಯ ಮುಖವನ್ನೆತ್ತಿ ಚುಂಬಿಸುತ್ತ ಕಲೆಗಳ ವಿಶ್ರಾಂತಿ ಸ್ಥಾನವಾದ ಉದ್ಭಟ ಮಹಾರಾಜನು ಚೆಲುವೆಯರ ತಲೆಮಣಿಯಾದ ಆ ಸೌಂದರಿಯನ್ನು ಬಿಗಿಯಾಗಿ ಅಪ್ಪಿದನು. ೧೦೫. ಶ್ರೀಗಂಧದ ಮರದ ಕೊಂಬೆಯನ್ನು ಹಾವುಗಳು ಪ್ರೀತಿಯಿಂದ ಬಿಗಿಯಾಗಿ ಅಪ್ಪುವಂತೆ ಆ ಹೆಣ್ಣನ್ನು ಮನೋಹರವಾದ ತೋಳುಗಳಿಂದ ಚೆನ್ನಾಗಿ ಬಿಗಿದು ಅರಸನು ಆಲಿಂಗನ ಮಾಡಿದನು. ೧೦೬. ಶರೀರದಲ್ಲಿ ನವಿರೇಳುವಂತೆ ಸೊಗಸಿನಿಂದ ಅಪ್ಪುವ ಆ ಮಹಾರಾಜಚಂದ್ರನನ್ನು ಬಯಸಿ ಮನೋಹರವಾದ ಅತ್ಯಾನಂದ ಸಾಗರದಲ್ಲಿ ಮುಳುಗುತ್ತ ಆ ಸುಂದರಾಗಿಯು ಅಪ್ಪಿದಳು. ೧೦೭. ಮನಸ್ಸನ್ನು ಕಾತರವು ಮೀರಿಹೋಗಿರಲು, ಶರೀರವು ರೋಮಾಂಚನಗೊಂಡಿರಲು

ಕಂಬುನಿಭಕಂಠಿ ತನುಪುಳ
ಕಂಬೂರಿಸೆ ಮಿಸುನಿ ರನ್ನಮಂ ಪತ್ತುವವೋಲ್।
ಲಂಬಾಳಕತತಿ ಮದರೋ
ಲಂಬಾಳಿಯನಿಟಿಸಲಪ್ಪಿದಳ್ವಲ್ಲಭನಂ ॥ ೧೦೮ ॥

ಮನಮಂ ಮೋದಂ ಕರಂ ಮೋದಮನನುಪಮರೋಮಾಂಚಮುಂ ಚಾರುರೋಮಾಂ
ಚನಮಂ ಮೇಣ್ಕಾತರಂಕಾತರಮನಮರ್ದಕಾಯಂ ಲಸತ್ಕಾಯಮಂ ಭೋಂ
ಕನೆ ತೋಳ್ಗಳ್ಮುಂಚೆ ತತ್ಸೌಂದರವತಿ ಪಡೆದಾಲಿಂಗನಂಗೈದಳುರ್ವೀ
ಶನನುನ್ನೀಲಾಕ್ಷಿವಿಕ್ಷೇಪಣವಿಲಸಿತೆ ಯಾನಂದಸಂದೋಹದಿಂದಂ ॥ ೧೦೯ ॥

ನಗೆಮೊಗದೊಳ್ಮೊಗಂ ತನುವಿನೊಳ್ತನು ನುಣ್ಗೊರಲೊಳ್ಕೊರಲ್ಕರಂ
ಬಗೆವೊಡೆ ತೋಳ್ಗಳೊಳ್ಮಿಸುಪತೋಳ್ಗಳಿನಿತ್ತೆಡೆಯಿಲ್ಲದೊಂದಿರಲ್।
ನೆಗಟ್ದ ವಿಲಾಸಮಂ ತಳೆದು ದಂಪತಿಗಳ್ಸವಿದುಕ್ಕುವಿಂಪನಂ
ದಗಲದೆ ಬೆಚ್ಚು ರಂಜಿಸಿದರಿರ್ವರ ಕಾಯಮದೊಂದೆನಿಪ್ಪಿನಂ ॥ ೧೧೦ ॥

ಆಲಿಂಗನದಿಂ ಪೊಡಲಂ
ಕೀಲಿಸಲಿರದುರ್ಬಿ ಸೌಂದರಿಯ ಚೆಂದುಟಿಯಂ।
ಮೇಲಿಕ್ಕುವ ಪೊಸತವಕದ
ಲೀಲೆಯಿನುದ್ಭಟಮಹೀಧವಂ ಚುಂಬಿಸಿದಂ ॥ ೧೧೧ ॥

ಕಟಿಸೂತ್ರದೊಡನೆ ಮೆಲ್ಲನೆ ಸೀರೆಯ ನಿರಿಯಗಂಟನ್ನು ಕಳಚಲು ಆ ಸುಂದರಿಯು ಉದ್ಭಟ ಮಹಾರಾಜನನ್ನು ಆಲಂಗಿಸಿದಳು. ೧೦೮. ಶಂಖದಂತೆ ಕೊರಳುಳ್ಳ ಸೌಂದರಿಯ ಶರೀರವು ರೋಮಾಂಚನಗೊಳ್ಳಲು ಚಿನ್ನವು ರತ್ನವನ್ನು ಹೊಂದುವಂತೆ, ಜೋಲುವ ಕೂದಲನ್ನು ಮಧಿಸಿ ಕವಿಯುವ ದುಂಬಿಯನ್ನು ಪರಿಹರಿಸುವಂತೆ ಪತಿಯನ್ನು ಅಪ್ಪಿದಳು. ೧೦೯. ಮನಸ್ಸನ್ನು ಸಂತೋಷ, ಅತಿಶಯವಾದ ಸಂತೋಷವನ್ನು ಎಣೆಯಿಲ್ಲದ ರೋಮಾಂಚನ, ಚೆಲುವಾದ ರೋಮಾಂಚನವನ್ನು ಕಾತರ, ಕಾತರವನ್ನು ಅಪ್ಪಿದ ದೇಹ, ಹೊಳೆವ ಶರೀರವನ್ನು ತೋಳುಗಳು ತ್ವರಿತವಾಗಿ ಉಲ್ಲಂಘಿಸಲು ಆನಂದದಿಂದ ಕಣ್ಣುಗಳನ್ನು ಅರಳಿಸಿ ಚಾಂಚಲ್ಯಗೊಂಡು ವಿಶೇಷವಾಗಿ ಬೆಳಗುವ ಸೌಂದರವತಿಯು ಮಹಾರಾಜನನ್ನು ಆಲಿಂಗನ ಮಾಡಿದಳು. ೧೧೦. ಅರಳಿದ ಮುಖದೊಡನೆ ಮುಖ, ದೇಹದೊಡನೆ ದೇಹ, ನುಣುಪಾದ ಕಂಠದೊಡನೆ ಕಂಠ, ತೋಳುಗಳೊಡನೆ ಹೊಳೆಯುವ ತೋಳುಗಳು ಸ್ವಲ್ಪವೂ ಜಾಗಬಿಡದೆ ಅಪ್ಪಿಕೊಂಡಿರಲು ಪ್ರಸಿದ್ಧವಾದ ಸೊಬಗನ್ನು ಹೊಂದಿ ಉಕ್ಕುವ ಆನಂದರಸವನ್ನು ಸವಿದು ಅಗಲದೆ ಕೂಡಿ ದೇಹವೊಂದೇ ಎನ್ನುವಂತೆ ಅವರಿಬ್ಬರೂ ಶೋಭಿಸಿದರು. ೧೧೧. ಅಪ್ಪುಗೆಯಿಂದ ಶರೀರಗಳನ್ನು ಒಂದುಗೂಡಿಸಿರಲು ಬಿಡದೆ ಉಬ್ಬಿ ಸೌಂದರಿಯ ಕೆಂಪಾದ ತುಟಿಯನ್ನು ಆವರಿಸಿ ಬರುವ ಹೊಸ ಕಾತರದ ವಿಲಾಸದಿಂದ ಉದ್ಭಟ ಮಹಾರಾಜನು

ಬಂದುಗೆಯಲರಂ ಸವಿವವೊ
ಲಿಂದಿಂದಿರನಾಮ್ರಫಲವನರಗಿಳಿ ನಲವಿಂ।
ಮಾಂದಳಿರಂ ಪಿಕನಿನಿಯಳ
ಕೆಂದುಟಿಯಂ ಚುಂಬಿಸಿದನಿಳಾಧಿಪನಾಗಳ್ ॥ ೧೧೨ ॥

ಬಿಂಬಾಧರಮಂ ಚುಂಬಿಸ
ಲಂಬುಜಮುಖಿ ತನ್ಮಹೀಶನಧರಾಧರಮಂ।
ಚುಂಬಿಸಿದಳ್ ರಾಕೇಂದುವ
ಬಿಂಬಮನೊಲವಿಂ ಚಕೋರಿ ಚುಂಬಿಪ ತೆಱದಿಂ ॥ ೧೧೩ ॥

ನಾಲಗೆಯೊಳ್ನಾಲಗೆಯಂ
ಕೀಲಿಸಿ ಮೇಣಲೆದು ನಿಲ್ಲದೋರೊರ್ವರ್ಸ।
ಲ್ಲೀಲೆಯಿನುರುಚುಂಬನಭರ
ಲಾಲಸಮಾನಸರಲಂಪುವಡೆದೆಸೆದಿರ್ದರ್ ॥ ೧೧೪ ॥

ವಿಲಸಚ್ಚುಂಬನದಿಂಪು ಪತ್ತೆ ಸಕಲಾಂಗೋಪಾಂಗಮಂ ನಿಲ್ಲದು
ಜ್ವಳಸಂಶ್ಲೇಷಮಮರ್ಚೆ ಮೇಣ್ಕನರಿ ಕಂದರ್ಪಾಂಬು ತಳ್ಪೊಯ್ಯೆ ಮಂ
ಜುಳಕಾಮಾತುರಮ್ಮೆದೆ ನಾಣ್ಸರಿಯೆ ತಾಂ ರೋಮಾಂಚನಂ ಪೊಣ್ಮೆ ನಿ
ರ್ಮಲಮೋದಂಬಡೆದಂದು ಕೂಡಿದರುದಂಚತ್ಪ್ರೇಮದಿಂ ಕಾದಲರ್ ॥ ೧೧೫ ॥

ಮಾನಿತರತಿತಂತ್ರಕಲಾ
ಸ್ಥಾನಮನಱಿದುರ್ಬುವತುಳಕಾತರದಿಂದಂ।
ಸಾನಂದದಿಂದೆ ನೆರೆದ
ರ್ಮೀನಾಂಕನ ಜವಳಿಜಂತ್ರಮೆಂಬಿನಮಿನಿಯರ್ ॥ ೧೧೬ ॥

ಚುಂಬಿಸಿದನು. ೧೧೨. ಬಂದೂಕ ಪುಷ್ಪವನ್ನು ದುಂಬಿಯೂ, ಮಾವಿನಹಣ್ಣನ್ನು ಅರಗಿಳಿಯೂ, ಮಾವಿನ ಚಿಗುರನ್ನು ಕೋಗಿಲೆಯೂ ಪ್ರೀತಿಯಿಂದ ಸವಿಯುವಂತೆ ಇನಿಯಳ ಕೆಂಪಾದ ತುಟಿಯನ್ನು ಮಹಾರಾಜನು ಆಗ ಚುಂಬಿಸಿದನು. ೧೧೩. ತೊಂಡೆಯ ಹಣ್ಣಿನಂತೆ ಇರುವ ಕೆಂಪಾದ ಕೆಳತುಟಿಯನ್ನು ಮಹಾರಾಜನು ಚುಂಬಿಸಲು ಆ ಮಹಾರಾಜನ ಕೆಳತುಟಿಯನ್ನು ಚಂದ್ರಬಿಂಬವನ್ನು ಚಕೋರ ಪಕ್ಷಿಯು ಚುಂಬಿಸುವ ರೀತಿಯಲ್ಲಿ ಚುಂಬಿಸಿದಳು. ೧೧೪. ನಾಲಗೆಯಲ್ಲಿ ನಾಲಗೆಯನ್ನು ಹೊಂದಿಸಿ ಪರಸ್ಪರ ಸೋಲಿಸಲಾಗದೆ ಒಬ್ಬರು ಮತ್ತೊಬ್ಬರನ್ನು ವಿನೋದದಿಂದ ಚುಂಬಿಸುವುದರಲ್ಲಿ ಉತ್ಕಟೇಚ್ಛೆಯನ್ನು ಹೊಂದಿದವರಾಗಿ ಶೋಭಿಸಿದ್ದರು. ೧೧೫. ಚೆನ್ನಾದ ಚುಂಬನದ ಸವಿಯು ಶರೀರವನ್ನೆಲ್ಲ ಆವರಿಸಲು, ಉಜ್ವಲವಾದ ಆಲಿಂಗನದಿಂದ ಕೂಡಿರಲು, ವಾಸನೆ ಹಿಡಿದ ಮನ್ಮಥಬಾಣವು ತಡ ಮಾಡದೆ ಅವರನ್ನು ಕೆಡಹಲು, ಮನೋಹರವಾದ ಕಾಮಾತುರವು ತಲೆದೋರಿ ನಾಚಿಕೆ ಸರಿದು ರೋಮಾಂಚನವು ಹೊಮ್ಮಿ ಬರಲು ಆ ಕಾದಲರು ಅತಿಶಯ ಪ್ರೇಮದಿಂದ ನಿರ್ಮಲವಾದ ಆನಂದವನ್ನು ಹೊಂದಿ ಅಂದು ಬೆಸುಗೆಗೊಂಡರು. ೧೧೬.ಗೌರವಾನ್ವಿತವಾದ ಮನ್ಮಥ ತಂತ್ರ ಕಲಾಸ್ಥಾನವನ್ನು ತಿಳಿದು ಉಬ್ಬುತ್ತ ಹೆಚ್ಚಿನ ಕಾತರದಿಂದ ಮನ್ಮಥನ

ಪೆಂಪುಱ್ ಕೊರ್ವಿ ಪರ್ವೆ ಸೊಗಗಂಬನಿಗಳ್ಪೊಱಸೂಸೆ ಗದ್ಗದ
ತ್ವಂ ಪಡೆದಿರ್ಪ ಲಲ್ಲೆನುಡಿ ಲೀಲೆಯನೀಯೆ ಪೊದಟ್ದ ಕಾತರಂ।
ತಾಂ ಪೊರೆಯೇಱು ತೇಲಿಸುವ ಲೋಚನಮೊಪ್ಪೆ ಮನೋಜಕೇಳಿಯೊಂ
ದಿಂಪಿನ ಪೆಂಪುವೆತ್ತೆಸೆವರೊಪ್ಪುವ ಸಾಂದರಿಯುದ್ಭಟೋರ್ವಿಪರ್ ॥ ೧೧೭ ॥

ಒಳಗಾಗೆ ಧೈರ್ಯಮತ್ಯು
ಜ್ಜ್ವಳಕಾತರಮುಣ್ಮೆನಸುಬೆಮರ್ಪಸರಿಸೆ ಮಂ
ಜುಳದಂತನಖಕ್ಷತಸಂ
ಕುಳಮಂದು ಬೆಡಂಗನೀಯೆ ಕೂಡಿದರಿನಿಯರ್ ॥ ೧೧೮ ॥

ನಸುದೇಲ್ಪಕ್ಷಿ ವಿಲುಪ್ತವರ್ಣವಚನಂ ರೋಮಾಂಚನಂ ಸ್ವೇದಬಿಂ
ದುಸಮೇತಾಂಗಮಲರ್ಪ ಸುಯ್ಯೆಲರುದಂಚತ್ಕಾಂತಿಸಂಬಾಧವ।
ಕ್ತ್ರಸರೋಜಂ ಕನರ್ಪಂಗಜಾಂಬು ವಿಗಳತ್ಕೇಶಂ ಕರಂ ಶೋಭಿಸಲ್
ಕುಸುಮಾಸ್ತ್ರೋನ್ನತಕೇಳಿಯೊಳ್ಬಿಡದೆ ತಾಂ ಬೆಚ್ಚಿರ್ದರಾಕಾದಲರ್ ॥ ೧೧೯ ॥

ಮಣಿಮಂಜೀರನಿನಾದಮುಣ್ಮೆ ಕಟಿಕಾಂಚೀಸುಸ್ವನಂ ಪೊಣ್ಮೆ ಕಂ
ಕಣಝೇಂಕಾರಮದುರ್ವೆ ದೀನತರವಾಕ್ಯಂ ಕೊರ್ವೆ ಬಿಂಬಾಧರೋ।
ಲ್ಬಣಸೀತ್ಕಾರರವಂ ಪಳಂಚೆ ಗಳನಾದಂ ಮುಂಚೆ ತಾಂ ಕೂಡಿದ
ರ್ಗಣನಾತೀತವಿಲಾಸಮಂ ಪಡೆದು ಕೂರ್ತಾಕಾದಲರ್ ಮೋದದಿಂ ॥ ೧೨೦ ॥

ಜೋಡಿಯಂತ್ರವೆಂಬಂತೆ ಪ್ರಿಯರು ಆನಂದದಿಂದ ಕೂಡಿದರು. ೧೧೭. ರೋಮಾಂಚನವು ಕೊಬ್ಬಿ ಹಬ್ಬಲು, ಸುಖವು ಆನಂದದ ಕಣ್ಣೀರಿನಿಂದ ವ್ಯಕ್ತವಾಗಲು, ಗದ್ಗದದಿಂದ ಕೂಡಿರುವ ಲಲ್ಲೆಮಾತು ವಿನೋದವನ್ನುಂಟುಮಾಡಿರಲು, ಪ್ರಕಟವಾಗುವ ಕಾತರವು ಉತ್ಸಾಹವೇರಿಸಿ ತೇಲಾಡಿಸುವ ಕಣ್ಣುಗಳು ಅಂದಗೊಂಡಿರಲು ಮನ್ಮಥನ ಆಟದಲ್ಲಿ ಸವಿಯ ಆಧಿಕ್ಯವನ್ನು ಹೊಂದಿ ಸೌಂದರಿ ಉದ್ಭಟಮಹಾರಾಜರು ಒಪ್ಪುವರು, ಶೋಭಿಸುವರು. ೧೧೮.ಧೈರ್ಯವು ಅಧೀನವಾಗಲು, ಉಜ್ವಲವಾದ ಕಾತರವು ಹೊಮ್ಮಲು, ಕಿರು ಬೆವರು ಹರಡಲು, ಮನೋಹರವಾದ ಹಲ್ಲು ಹಾಗೂ ಉಗುರುಗಳ ಕಲೆಗಳು ಬೆಡಗನ್ನೀಯಲು ಪ್ರಿಯರು ಕೂಡಿದರು. ೧೧೯. ಸ್ವಲ್ಪವೇ ಸ್ವಲ್ಪ ತೇಲುವ ಕಣ್ಣುಗಳು; ಬಣ್ಣಗೆಡುತ್ತ, ತೊದಲುತ್ತ ರೋಮಾಂಚನ ಬೆವರ ಹನಿಗಳಿಂದ ಕೂಡಿ ಅರಳುವ ದೇಹ; ನಿಡಿದಾದ ಉಸಿರು; ಉತ್ಕೃಷ್ಟವಾದ ಕಾಂತಿಯಿಂದ ಪೀಡಿತವಾದ ಮುಖಕಮಲ; ಕಮರುವ ಮನ್ಮಥಬಾಣ; ಚೆಲ್ಲಾಪಿಲ್ಲಿಯಾದ ಕೂದಲು - ಇವು ವಿಶೇಷವಾಗಿ ಶೋಭಿಸಿರಲು ಉನ್ನತವಾದ ಕಾಮ ಕೇಳಿಯಲ್ಲಿ ಆ ಕಾದಲರು ಬೆಸುಗೆಗೊಂಡಿದ್ದರು. ೧೨೦. ಮಣಿಖಚಿತವಾದ ಕಾಲ್ಗಡಗದ ಧ್ವನಿಯು ಹೊರಸೂಸಲು, ಸೊಂಟದ ಡಾಬಿನ ಗೆಜ್ಜೆಗಳ ಮಧುರ ಧ್ವನಿಯು ಹೊಮ್ಮಲು, ಕಡಗದ ಝೇಂಕಾರವು ಉಬ್ಬಲು, ದೈನ್ಯದಿಂದ ಕೂಡಿದ ಮಾತುಗಳು ಹೆಚ್ಚಾಗಲು, ತೊಂಡೆಯ ಹಣ್ಣಿನಂತಿರುವ ಕೆಳದುಟಿಯ ಚುಂಬನದಲ್ಲಿ ಚೀತ್ಕಾರ ಧ್ವನಿ ಅಡ್ಡಿಮಾಡಲು, ಗಂಟಲಿನಲ್ಲಿ ಒಂದು ಬಗೆಯ ಧ್ವನಿ ಹೆಚ್ಚಾಗಲು ಗಣನೆಯಿಲ್ಲದ ಅತೀತ ವಿಲಾಸವನ್ನು

ನೆಗೞ್ದುರುಸಮರತಿಸಾಖ್ಯಮ
ನಗಲದೆ ತಾಳ್ದಖಿಳಕರಣಕೌಶಲಮಱಿದೊ।
ಯ್ಯಗೆ ಸಂತಸದಿಂ ನೆರೆದ
ರ್ಮಿಗೆ ಸಾಂದರದೇವಿಯುದ್ಭಟಕ್ಷಿತಿಪಾಲರ್ ॥ ೧೨೧ ॥

ಆಲೋಲಾಕೀರ್ಣನೀಲಾಳಕಮಮಳಿನಗಂಡಸ್ಥಳೀಪಾತಿತಾಟಂ
ಕಾಲಂಬಶ್ರೋತ್ರಕಂ ಕಂಪಿತನಿಬಿಡಕುಚಂ ನಿಮ್ನ ಮಧ್ಯಂ ಲಸತ್ಸ್ವೇ।
ದಾಲೀಢಾಸ್ಯಾಂಬುಜಂ ಚಂಚಲಮಣಿಮಯಹಾರಂ ಮಿಳದ್ಗದ್ಗದಾವ್ಯ
ಕ್ತಾಲಾಪಂ ರಂಜಿಸಲ್ಕೇಱುಪರತಿಯೆಡೆಯೊಳ್ಕಾಂತೆ ಕಣ್ಗೆಡ್ಡಮಾದಳ್ ॥ ೧೨೨ ॥

ಮೊಗಮಂ ನಿಟ್ಟಿಪಳಲ್ಪಲಜ್ಜೆವೆರಸಾಲಿಂಗಿಪಳ್ಬೆರ್ಚುತೊ
ಯ್ಯಗೆ ನಲ್ದಂಬುಲವೀವಳೊತ್ತಿ ಸೊಗಸುಣ್ಮಲ್ಚುಂಬಿಸಳ್ ತೋರ್ಪಸೆ।
ಳ್ನುಗುರ್ವೊಯ್ಲಂ ನಸುಗಾಣಿಪಳ್ ಸುರಿವಳಾನಂದಾಶ್ರುವಂ ಕಾತರಂ
ಮಿಗೆ ತಾಂ ಕೂಡುವಳಂದು ಸೌಂದರಿ ಲಸತ್ಸುಂಭಾವದಿಂ ಕಾಂತನಂ ॥ ೧೨೩ ॥

ದಕ್ಷಿಣಪಾಣಿಯಿಂ ಕೊರಲನಪ್ಪಿ ಕಚಸ್ಥಿತವಾಮಪಾಣಿ ಕೂ
ರ್ತೀಕ್ಷಿಸುತಾಸ್ಯಮಂ ನೆಗಪಿ ಮುದ್ದಿಸುತೊತ್ತಿಕುಚಂಗಳಂ ಲಸ।
ದ್ವಕ್ಷದೊಳೊಲ್ದುಮೆಟ್ಟಿ ತೊಡೆಯಂ ಪುರುಷಾಯಿತಲೀಲೆಯಿಂ ತದ
ಬ್ಜಾಕ್ಷಿ ನೆಗೞ್ಚಿದಳ್ ಮುದಮದುಣ್ಮೆ ನೃಪಂಗೆ ಮನೋಜಕೇಳಿಯೊಳ್ ॥ ೧೨೪ ॥

ಪಡೆದು ಪರಸ್ಪರ ಪ್ರೀತಿಸಿದ ಆ ಕಾದಲರು ಸಂತೋಷದಿಂದ ಕೂಡಿದರು. ೧೨೧.ಪ್ರಸಿದ್ಧವಾದ ಸಮರತಿಸೌಖ್ಯವನ್ನು ಬಿಡದೆ ಪಡೆದು, ಸಕಲಕರಣ ಕೌಶಲವನ್ನು ತಿಳಿದು, ಮೆಲ್ಲನೆ ಸೌಂದರ ದೇವಿ-ಉದ್ಭಟ ಮಹಾರಾಜರು ಸಂತೋಷದಿಂದ ಚೆನ್ನಾಗಿ ಕೂಡಿದರು. ೧೨೨.ಚಂಚಲವಾಗಿ ಹರಡಿದ ಕಪ್ಪುಕೂದಲು, ಪರಿಶುದ್ಧವಾದ ಕೆನ್ನೆಗಳಲ್ಲಿ ಬೀಳುವ ಆಟವಾಡುವ ಕರ್ಣಾಭರಣ, ಅಲುಗಾಡುವ ವಿಶಾಲವಾದ ಮೊಲೆಗಳು, ತಗ್ಗಾದ ಸೊಂಟ, ಹೊಳೆಯುವ ಬೆವರ ಹನಿಗಳು ಆವರಿಸಿದ ಮುಖಕಮಲ, ಹಾರಾಡುವ ಮಣಿಖಚಿತವಾದ ಹಾರ, ಗದ್ಗದ ಧ್ವನಿ ಬಿಡುಗಡೆಗೊಂಡ ಮಾತುಗಳು - ಇವು ಶೋಭಿಸಿರಲು ವಿರಾಮ ವೇಳೆಯಲ್ಲಿ ಆ ಸುಂದರಿಯು ನೋಟಕ್ಕೆ ಬಹು ಸುಂದರವಾದಳು. ೧೨೩. ಮುಖವನ್ನು ನೋಡುವಳು, ಕಿರು ನಾಚಿಕೆಯೊಂದಿಗೆ ಆಲಂಗಿಸುವಳು, ಉಬ್ಬುತ್ತ ಮೆಲ್ಲನೆ ಸಿಹಿಯಾದ ತಾಂಬೂಲವನ್ನು ಕೊಡುವಳು, ಒತ್ತಿ ಸೊಗಸು ಹೊರಸೂಸುವಂತೆ ಚುಂಬಿಸುವಳು, ಕಾಣುವಂತೆ ಹರಿತವಾದ ಉಗುರುಗಳ ಹೊಡೆತದಿಂದಾದ ಗಾಯವನ್ನು ಕೊಂಚವೇ ತೋರಿಸುವಳು, ಆನಂದದ ಕಣ್ಣೀರನ್ನು ಹರಿಸುವಳು, ಕಾತರ ಹೆಚ್ಚಾಗಿ ತಾನು ಬೆಸುಗೆಗೊಳ್ಳುವಳು - ಹೀಗೆ ಸೌಂದರಿಯು ಹೊಳೆವ ಕಾಮಭಾವದಿಂದ ಪತಿಯೊಡನೆ ಕೂಡುವಳು. ೧೨೪. ಬಲಗೈಯಿಂದ ಕೊರಳನ್ನು ಅಪ್ಪಿ ಕೂದಲಲ್ಲಿ ಎಡಗೈಯನ್ನಿಟ್ಟು ಪ್ರೀತಿಯಿಂದ ನೋಡಿ ಮುಖವನ್ನು ಮೇಲೆತ್ತಿ, ಮುದ್ದಿಸುತ್ತ, ಮೊಲೆಗಳನ್ನು ಒತ್ತಿ ಪ್ರೀತಿಯಿಂದ ತೊಡೆಯನ್ನು ಎದೆಯಲ್ಲಿ ಮೆಟ್ಟಿ ಪುರುಷನಿಂದ ಬಂದ ವಿಲಾಸದಿಂದ ಆ ಕಮಲಾಕ್ಷಿಯು ಮಹಾರಾಜನಿಗೆ ಕಾಮಕೇಳಿಯಲ್ಲಿ ಸಂತೋಷವು

ಪಾಣಿತಳಂಗಳಿಂದೆಸೆವ ಗಲ್ಲಮನೊಲ್ದೊಲೆದೆತ್ತಿ ಮುದ್ದಿಪ
ಳ್ಮಾಣದೆ ಲಲ್ಲೆಗೈವಳಮಳಾಸ್ಯಸಮಾವೃತಲೋಲಕುಂತಳ।
ಶ್ರೇಣಿಯನುನ್ನಖಾಂಕುರದೆ ತಿರ್ದುವಳಪ್ಪುವಳಂದು ತದ್ಘನ
ಶ್ರೋಣಿ ಕರಂ ತೊಳಪ್ಪಪುರುಷಾಯಿತದಿಂ ತದನಂಗಕೇಳಿಯೊಳ್ ॥ ೧೨೫ ॥

ವರಪುರುಷಾಯಿತರತಿಯಿಂ
ಕರಮಂದು ಬಳಲ್ದು ತನ್ನ ಪೆರ್ಮೊಲೆಯಂ ಪೇ।
ರುರಕೊತ್ತು ತಪ್ಪಿ ನೆರೆವಾ
ಹರಿಣಕಿಶೋರಾಕ್ಷಿಯೊಳ್ನೆರೆದನವನೀಶಂ ॥ ೧೨೬ ॥

ಅತಿಶುಂಭತ್ಕಾಂತಿಯುಕ್ತಾನನಮುದಿತಮುದಶ್ರುಪ್ರಕಂಪೋರುರಾರಾ
ಜಿತಶೋಣಾಬ್ಜಪ್ರತೀಕಾಶನಯನಮವಿಲುಪ್ತಾಂಗಲೇಪಂ ಕಿರತ್ಸೋ
ನ್ನತಧಮ್ಮಿಲ್ಲಂ ಗತೋಷ್ಠಾರುಣರುಚಿ ವಿಗಳನ್ನೀವಿ ಘರ್ಮೋದಲೇಶಾ
ವೃತಗಾತ್ರಂಶೋಭಿಸಲ್ ಶೋಭಿಸಿದಳುರುತರಶ್ರಾಂತೆ ಸೌಧರ್ಮಿಯಾಗಳ್ ॥ ೧೨೭ ॥

ಇಂತತನುಕೇಳೀಸೌಖ್ಯಾಮೃತವಾರ್ಧಿಯೊಳ್ಮೂಡಿ ಮುಳುಂಗಾಡಿ ಬಳಿಕ್ಕಮಾವರಿಸಿದ ಮೂರ್ಛೆಯಿಂದಿಬ್ಟೆಚ್ಚೆತ್ತೊಯ್ಯನೆಚಿರ್ದೋಸರಿಸಿರ್ದ ಚೇಲಂಗಳನಳವಡಿಸಿ ಕಡು ಸಂತಸಮಂ ಪಡೆದು ನಡೆತಂದಚ್ಛೋದಕದೊಳ್ಕೈಕಾಲ್ಮೊಗದಾವರೆಗಳಂ ಕರ್ಚಿ ಮಗುಬ್ಟು ಬಂದು ಸೆಜ್ಜೆವನೆಯಂ ಪೊಕ್ಕುಜ್ವಳಿಪಮಣಿಮಂಚಾಗ್ರದೊಳಾಕಾದಲರ್ಮಂಡಿಸೆ,

ಹೊರಸೂಸುವಂತೆ ಮಾಡಿದಳು. ೧೨೫. ಅಂಗೈಗಳಿಂದ ಶೋಭಿಸುವ ಗಲ್ಲವನ್ನು ಪ್ರೀತಿಯಿಂದ ಮೇಲೆತ್ತಿ ಮುದ್ದಿಸುವಳು, ಬಿಡದೆ ಲಲ್ಲೆಗರೆವಳು, ಪರಿಶುದ್ಧವಾದ ಮುಖವನ್ನು ಕವಿದ ಚಂಚಲವಾದ ಕೂದಲುಗಳ ಮೊತ್ತವನ್ನು ಉಗುರ ತುದಿಯಿಂದ ತಿದ್ದುವಳು, ಅಪ್ಪುವಳು, ವಿಶಾಲವಾದ ನಿತಂಬಗಳಿಂದ ಕೂಡಿದ ಅವಳು ಪುರುಷನಿಂದ ಬಂದ ಮನ್ಮಥ ಕೇಳಿಯಲ್ಲಿ ಪ್ರಕಾಶಿಸುವಳು. ೧೨೬. ಪುರುಷನಿಂದ ಪ್ರಾಪ್ತವಾದ ರತಿಕ್ರೀಡೆಯಿಂದ ವಿಶೇಷವಾಗಿ ಆಯಾಸಗೊಂಡು ತನ್ನ ದುಂಡು ಮೊಲೆಗಳನ್ನು ವಿಶಾಲವಾದ ಎದೆಗೆ ಒತ್ತುತ್ತ ಅಪ್ಪಿ ಕೂಡುವ ಎಳೆಯ ಜಿಂಕೆಯ ಕಣ್ಣುಗಳಂತೆ ಚಂಚಲ ನೋಟವುಳ್ಳ ಅವಳೊಡನೆ ಮಹಾರಾಜನು ಕೂಡಿದನು. ೧೨೭. ವಿಶೇಷವಾಗಿ ಕಾಂತಿಗುಂದಿದ ಮುಖ ಹೊರಸೂಸಿದ ಆನಂದಾಶ್ರು ಅತಿಯಾದ ಕಂಪನ, ಚೆನ್ನಾಗಿ ಬೆಳಗುವ ಕೆಂದಾವರೆಯಂತಿರುವ ಕಣ್ಣುಗಳು ಸೂರೆಗೊಂಡ ಅಂಗಲೇಪ, ಬಿಚ್ಚಿಹೋದ ತುರುಬು ಬಿಸುಪಿಲ್ಲದ ಕೆಂಬಣ್ಣದ ಕಾಂತಿ ಕುಂದಿದ ಶರೀರ, ಕಳಚಿದ ನಿರಿಗೆಯ ಗಂಟು ಕಿರು ಬೆವರ ಹನಿಗಳಿಂದ ಕೂಡಿದ ದೇಹ ಶೋಭಿಸಿರಲು ವಿಶೇಷ ದಣಿವಿನಿಂದ ಕೂಡಿದ ಸೌಂದರಿಯು ಕಣ್ಣಿಗೆ ಅಂದವಾದಳು. ವ॥ ಹೀಗೆ ಕಾಮನಾಟವೆಂಬ ಸುಖವಾದ ಅಮೃತ ಸಮುದ್ರದಲ್ಲಿ ಮೂಡಿ ಮುಳುಗಾಡುತ್ತ ಬಳಿಕ ಕವಿದ ಸುಖಮೂರ್ಛೆಯಿಂದ ಎಚ್ಚೆತ್ತು ಮೆಲ್ಲನೆ ಎದ್ದು ಅಸ್ತವ್ಯಸ್ತವಾಗಿದ್ದ ಸೀರೆಯನ್ನು ಸರಿಗೊಳಿಸಿ ಅತ್ಯಾನಂದವನ್ನು ಹೊಂದಿ ಬಂದು ಸ್ವಚ್ಛವಾದ ನೀರಿನಲ್ಲಿ ಕೈಕಾಲು ಮುಖಕಮಲಗಳನ್ನು ತೊಳೆದು ಹಿಂತಿರುಗಿ ಬಂದು ಮಲಗು ಮನೆಯನ್ನು ಹೊಕ್ಕು

ರುಚಿಯಂ ತುಳ್ಕುವ ನಾಳಿಕೇರರಸಮಂ ಚಂದ್ರಾಂಶುವಂ ಪೀರ್ವಚಾ
ರುಚಕೋರೀಮಿಥುನಂಬೊಲೀಂಟಿ ಜಲಮಂ ಗಂಡೂಷಮಂ ಮಾಡಿ ಸ।
ದ್ರುಚಿರೋದ್ಯದ್ಧಿಮಖಂಡಮಿಶ್ರವಿಲಸತ್ತಾಂಬೂಲಮಂ ಕೊಂಡು ಮೇ
ಣ್ಣೆಚಿತೋತ್ತುಂಗರತಿಶ್ರಮಂಗಳೆದು ತಾವೊಪ್ಪಿರ್ದರಾಕಾದಲರ್ ॥ ೧೨೮ ॥

ಇಂತು ರತಾಂತಶ್ರಾಂತಿಯ
ನಾಂತೊಯ್ಯನೆ ತೀರ್ಚುತೊಲ್ದು ಮಗುಟ್ದುಂ ಮಗುಟ್ದುಂ।
ಸಂತಸದಿಂ ನೆರೆಯುತ್ತುಂ
ಕಂತುಸುಖಂ ಮೂರ್ತಿಗೊಂಡವೋಲ್ ಪ್ರಿಯರೆಸೆದರ್ ॥ ೧೨೯ ॥

ಇದು ಪಗಲಿದು ನಿಶೆಯೆಂದಱಿ
ಯದೆ ಸತಿವೆರಸತನುಸುಖದಾಕೃತಿಯೆನೆ ಸಂ।
ಮುದದಿಂ ತಂಜಾವರದೊ
ಳ್ಪದೆದುದ್ಭಟನಿರುತೆ ಮತ್ತಲೊಂದುಂ ದಿನದೊಳ್ ॥ ೧೩೦ ॥

ಸೌಂದರವತಿವೆರಸುದ್ಭಟ
ನಂದು ಸುಧರ್ಮಕ್ಷಿತೀಂದ್ರನಂ ಬೀೞ್ಕೊಂಡಾ।
ನಂದಂಬಡೆದಾಪೊಳಲಿಂ
ಕುಂದದ ಸಂರಂಭದಿಂದೊಸೆದು ಪೊಱಮಟ್ಟಂ ॥ ೧೩೧ ॥

ಇಂತನಂತಸಂಭ್ರಮದಿಂದಂ ತಂಜಾವರಮಂ ಪೊಱಮಟ್ಟೊಲವಿಂ ಪಲವುಪಯಣಗತಿಯಿಂ ಬಂದು ಮಗುಟ್ದು ಪಂಪಾಪುರಮಂ ಪೊಕ್ಕು ದೇವಲಮಹರ್ಷೀಶ್ವರನಂ ತನ್ನ ಸತಿವೆರಸು ಕಂಡಭಿವಂದಿಸಿ ತನ್ಮುನಿನಾಥನನುಜ್ಞೆಯಂ ಪಡೆದುದ್ಭಟಕ್ಷಿತೀಂದ್ರಚಂದ್ರಮಂ ವಿರೂಪಾಕ್ಷನ ದೇಗುಲಕ್ಕೆಯ್ತಂದು,

ಉಜ್ವಲಿಸುವ ಮಣಿಖಚಿತ ಮಂಚದ ಮೇಲೆ ಆ ಕಾದಲರು ಕುಳಿತು, ೧೨೮. ಕಾಂತಿ ಚೆಲ್ಲುವ ಎಳನೀರನ್ನು ಚಂದ್ರನ ಕಿರಣಗಳನ್ನು ಹೀರುವ ಮನೋಹರವಾದ ಜೋಡಿ ಚಕೋರಗಳಂತೆ ಸವಿದು, ನೀರಿನಿಂದ ಬಾಯಿ ಮುಕ್ಕುಳಿಸಿ, ಕಾಂತಿಯುಕ್ತವಾದ ಪಚ್ಚಕರ್ಪೂರದಿಂದ ಮಿಶ್ರವಾದ ಸವಿಯಾದ ತಾಂಬೂಲವನ್ನು ಪಡೆದು, ಅಪಾರವಾದ ಹಾಗೂ ಉನ್ನತವಾದ ರತಿಕ್ರೀಡೆಯ ಆಯಾಸವನ್ನು ಪರಿಹರಿಸಿಕೊಂಡು ಆ ಕಾದಲರು ಶೋಭಿಸಿದ್ದರು. ೧೨೯. ಹೀಗೆ ರತಿಕ್ರೀಡೆಯ ಬಳಲಿಕೆಯನ್ನು ಮೆಲ್ಲನೆ ಕಳೆಯುತ್ತ ಪ್ರೀತಿಪಟ್ಟು ಮೇಲಿಂದ ಮೇಲೆ ಸಂತಸದಿಂದ ಕೂಡುತ್ತ ಮನ್ಮಥ ಸುಖವು ಜೀವಪಡೆದಂತೆ ಪ್ರಿಯರು ಶೋಭಿಸಿದರು. ೧೩೦. ಇದು ಹಗಲು ಇದು ರಾತ್ರಿ ಎಂಬುದು ತಿಳಿಯದೆ ಪತ್ನಿಯೊಡನೆ ಕಾಮಸುಖದ ಆಕೃತಿಗಳೆನ್ನುವಂತೆ ಆನಂದದಿಂದ ತಂಜಾವೂರಿನಲ್ಲಿ ಪ್ರೀತಿಯಿಂದ ಉದ್ಭಟನು ಇರುತ್ತಿರಲು, ಮತ್ತೊಂದು ದಿನ, ೧೩೧. ಸೌಂದರವತಿಯೊಡನೆ ಉದ್ಭಟನು ಸುಧರ್ಮ, ಮಹಾರಾಜನನ್ನು ಬೀಳ್ಕೊಂಡು ಆನಂದ ಹೊಂದಿ ಆ ಪಟ್ಟಣದಿಂದ ಕುಂದದ ಸಂಭ್ರಮದಿಂದ ಪ್ರೀತಿಯಿಂದ ಹೊರ ಹೊರಟನು. ವ॥ ಹೀಗೆ ಹೆಚ್ಚಿನ ಸಂಭ್ರಮದಿಂದ ತಂಜಾವೂರನ್ನು ಬಿಟ್ಟು ಪ್ರೀತಿಯಿಂದ ಹಲವು ದಿವಸ ಪ್ರಯಾಣ ಮಾಡಿ ಪಂಪಾಪುರಕ್ಕೆ ಹಿಂತಿರುಗಿ ಬಂದು

ಗುಡಿಯಂ ಪೊಕ್ಕಿರೇೞ್ಜಗ
ದೊಡೆಯಂಗಭಿನಮಿಸಿ ಮಗುೞ್ದು ಸೌಂದರಿವೆರಸಾ।
ಮೃಡನಂ ಬೀೞ್ಕೊಂಡರಸಂ
ಬಿಡದೆ ಮನಂಗೊಳಿಪ ಪಂಪೆಯಂ ಪೊಱಮಟ್ಟಂ ॥ ೧೩೨ ॥

ಪಂಪಾಭಿಧಾನವರಪುರ
ಮಂ ಪೊಱಮಟ್ಟಧಿಕಸಂಭ್ರಮದೊಳುದ್ಭಟದೇ।
ವಂ ಪಲವುಪಯಣಗತಿಯಿಂ
ದಂ ಪೊರ್ದಿದನೊಲ್ದು ಬಂದು ನಿಜಪಟ್ಟಣಮಂ ॥ ೧೩೩ ॥

ಘನಸಂರಂಭಮಳುಂಬಮಾಗೆ ನಲಿದೆೞ್ತಂದುದ್ಭಟೋರ್ವೀಶನೊ
ಯ್ಯನೆ ಪೊಕ್ಕುನ್ನತಭಲ್ಲಕೀನಗರಮಂ ಸಂಬದ್ಧಮಾಣಿಕ್ಯವಂ।
ದನಮಾಲಾವಳಿಯಂ ಚಲತ್ಪವನಘಾತಾಲೋಲಪಟ್ಟೋದ್ಧಕೇ
ತನಸಂದೋಹಮನಂಚಿತಾಮಲಸುವರ್ಣೋತ್ತುಂಗಹರ್ಮ್ಯೌಘಮಂ ॥ ೧೩೪ ॥

ಇಂತು ಮನಂಗೊಳಿಪ ಪುರಮಂ ಪ್ರವೇಶಮಾಡಿ ಬಿಡದೊಡನೆೞ್ತಂದ ಶಿವಭದ್ರಮುಖ್ಯಸಚಿವರುಮಂ ತದ್ದಂಡಾಧಿನಾಥರುಮನವರಮನೆಗಳ್ಗೆ ಬೀೞ್ಕೊಟ್ಟರಮನೆಯಂ ಪೊಕ್ಕತ್ಯಾನಂದದಿಂ ಸೌಂದರಿವೆರಸುದ್ಭಟ ರಾಜೇಂದ್ರ ಚಂದ್ರಮನೆಸೆದಿರ್ದಂ॥

ಪುರವನ್ನು ಪ್ರವೇಶಿಸಿ ದೇವಲ ಮಹರ್ಷಿಯನ್ನು ಪತ್ನಿಯೊಡನೆ ಕಂಡು ನಮಸ್ಕರಿಸಿ ಆ ಮುನಿಗಳೊಡೆಯನ ಅಪ್ಪಣೆ ಪಡೆದು ಉದ್ಭಟ ಮಹಾರಾಜಚಂದ್ರಮನು ವಿರೂಪಾಕ್ಷ ದೇವಾಲಯಕ್ಕೆ ಬಂದು, ೧೩೨. ಗುಡಿಯನ್ನು ಪ್ರವೇಶಿಸಿ ಹದಿನಾಲ್ಕು ಲೋಕಗಳ ಒಡೆಯನಿಗೆ ನಮಸ್ಕರಿಸಿ ಮತ್ತೆ ಸೌಂದರಿಯೊಡನೆ ಶಿವನನ್ನು ಬೀಳ್ಕೊಂಡ ಮಹಾರಾಜನು ಬಿಡದೆ ಮನಸೆಳೆಯುವ ಹಂಪೆಯಿಂದ ಹೊರಬಂದನು. ೧೩೩. ಹಂಪೆ ಎಂಬ ಹೆಸರಿನ ಶ್ರೇಷ್ಠ ಪಟ್ಟಣದಿಂದ ಹೊರಟು ಹೆಚ್ಚಿನ ಸಂಭ್ರಮದಿಂದ ಉದ್ಭಟದೇವನು ಹಲವು ದಿವಸಗಳ ಪ್ರಯಾಣ ಮಾಡಿ ತನ್ನ ಪಟ್ಟಣವನ್ನು ಪ್ರೀತಿಯಿಂದ ಸಮೀಪಿಸಿದನು. ೧೩೪. ಸಡಗರವು ಅತಿಶಯವಾಗುವಂತೆ ಸಂತಸದಿಂದ ಬಂದ ಉದ್ಭಟ ಮಹಾರಾಜನು ಮೆಲ್ಲನೆ ಚೆನ್ನಾಗಿ ಜೋಡಿಸಿದ ಮಾಣಿಕ್ಯದ ತೋರಣಗಳಿಂದ, ಗಾಳಿಯ ಹೊಡೆತಕ್ಕೆ ಹಾರಾಡುವ ಒಳ್ಳೆಯ ರೇಷ್ಮೆ ವಸ್ತ್ರದ ಬಾವುಟಗಳ ಸಮೂಹದಿಂದ, ಚಿನ್ನದಿಂದ ಕೂಡಿದ ಎತ್ತರವಾದ ಭವನಗಳ ಮೊತ್ತದಿಂದ ಮೇಲಾದ ಭಲ್ಲಕೀನಗರವನ್ನು ಪ್ರವೇಶಿಸಿದನು. ವ॥ ಹೀಗೆ ಮನಸೆಳೆಯುವ ಪುರವನ್ನು ಪ್ರವೇಶಮಾಡಿ ಬಿಡದೆ ಜೊತೆಯಲ್ಲಿ ಬಂದ ಶಿವಭದ್ರನೇ ಮೊದಲಾದ ಮುಖ್ಯ ಸಚಿವರನ್ನು, ದಂಡಾಧಿನಾಥರನ್ನು ಅವರವರ ಮನೆಗಳಿಗೆ ಕಳುಹಿಸಿ ಅರಮನೆಯನ್ನು ಅತ್ಯಾನಂದದಿಂದ ಪ್ರವೇಶಿಸಿ ಸೌಂದರಿಯೊಡನೆ ಉದ್ಭಟ ಮಹಾರಾಜ ಚಂದ್ರಮನು

ಅಂತುಮಲ್ಲದೆಯುಂ,

ವಿಲಸಚ್ಚಂದ್ರಂ ಲಸಚ್ಚಂದ್ರಿಕೆ ನೆಗಟ್ದಿಮೃತಂ ಸ್ವಾದು ರನ್ನಂ ಕರಂ ರಂ
ಗಲಗೊಂಚಲ್ಕಂಪು ಜಾಂಬೂನದಮಮಲಿನವರ್ಣಂ ಸುಶಬ್ದಂವರಾರ್ಥಂ।
ಸಲೆ ತಾಂ ಬೆಚ್ಚಿರ್ಪವೊಲ್ಸೌಂದರವತಿವೆರಸೊಲ್ದುದ್ಭಟಕ್ಷೋಣಿಪಂ ಮಂ
ಜುಳ ಸೌಖ್ಯಂಬೆತ್ತುಕಣ್ಗೊಪ್ಪಿದನೆಡೆವಿಡಿದುತ್ತುಂಗಸಂರಂಭದಿಂದಂ ॥ ೧೩೫ ॥

ಚಕಿತಕುರಂಗಲೋಚನೆ ಸುಧರ್ಮತನೂಭವೆ ಗೂಡಿ ಸಂತತಂ
ವಿಕಸಿತಮೋದಮಂ ಬಡೆದು ನಾಡೆ ಮನಂಗೊಳಿಪುದ್ಭಟೋರ್ವಿಪಾ।
ಲಕನ ಮನಸ್ಸರೋಜದೆಡೆಯಲ್ಲಿ ತಳತ್ಥಳಿಸಿರ್ಪ ಚಿನ್ಮಯಾ
ತ್ಮಕ ಸಲಹೆನ್ನನೊಲ್ದು ಭವಸಾಗರದಿಂ ಬಿಡದಲ್ಲಮಪ್ರಿಯಾ ॥ ೧೩೬ ॥

ಇದು ಸಮಸ್ತಸುರಕದಂಬವಿಜೃಂಭಿತಮಕುಟತಟಘಟಿತನವರತ್ನಪುಂಜಸಂ
ಜಾತಪಿಂಜರಿತಮಯೂಖಮಂಜರೀರಂಜಿತಃ ಶ್ರೀ ಗುರುವಿರೂಪಾಕ್ಷಪಾ
ವನಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿ
ಕಾಪಟಲಪಟುಲಂಪಟಚಕೋರಾಯಮಾಣಮಾನಸಶ್ರೀ
ಸೋಮರಾಜೇಂದ್ರವಿರಚಿತಮಪ್ಪಶೃಂಗಾರಸಾರ
ಮಹಾಪ್ರಬಂಧದೊಳ್ ಸೌಂದರವತಿಯ
ವಿವಾಹವರ್ಣನಂ ಅಷ್ಟಮಾಶ್ವಾಸಂ
ಸಂಪೂರ್ಣಮಾದುದು

ಶೋಭಿಸಿದ್ದನು, ಅಷ್ಟಲ್ಲದೆ, ೧೩೫. ಚೆನ್ನಾಗಿ ಹೊಳೆಯುವ ಚಂದ್ರನೇ ಬೆಳುದಿಂಗಳು, ಪ್ರಸಿದ್ಧವಾದ ಅಮೃತವೇ ರುಚಿಯಾದುದು, ರತ್ನವೇ ವಿಶೇಷವಾದ ಸೌಂದರ್ಯ-ಯುಕ್ತವಾದುದು, ಹೂಗೊಂಚಲು ಸುವಾಸನೆಯಿಂದ ಕೂಡಿದುದು, ಸುವರ್ಣವೇ ಪರಿಶುದ್ಧವಾದ ಬಣ್ಣವು, ಒಳ್ಳೆಯ ಮಾತೇ ಶ್ರೇಷ್ಠವಾದ ಅರ್ಥವನ್ನು ಹೊಂದಿರುವಂತಹದು - ಹೀಗೆ ಇವು ಹೊಂದಿಕೊಂಡು ಇರುವಂತೆ ಸೌಂದರವತಿಯೊಡನೆ ಪ್ರೀತಿಯಿಂದ ಉದ್ಭಟ ಮಹಾರಾಜನು ಮಧುರವಾದ ಸುಖವನ್ನು ಹೊಂದಿ ಸದಾ ಉನ್ನತವಾದ ಸಡಗರದಿಂದ ಕೂಡಿ ಕಣ್ಣಿಗೆ ಅಂದವಾದನು. ೧೩೬. ಜಿಂಕೆಯ ಕಣ್ಣಿನಂತೆ ಚಂಚಲವಾದ ನೋಟವುಳ್ಳ ಸುಧರ್ಮನ ಮಗಳಾದ ಸೌಂದರವತಿಯೊಡನೆ ಸದಾ ಅತ್ಯಾನಂದವನ್ನು ಹೊಂದಿ ಚೆನ್ನಾಗಿ ಮನಸೆಳೆಯುವ ಉದ್ಭಟ ಮಹಾರಾಜನ ಹೃದಯ ಕಮಲದಲ್ಲಿ ಥಳಥಳಿಸುತ್ತ ಇರುವ ಚಿನ್ಮಯ ಮೂರ್ತಿಯ ಅಲ್ಲಮಪ್ರಿಯನೇ ಭವಸಾಗರದಲ್ಲಿ ನನ್ನನ್ನು ಬಿಡದೆ ಮೇಲೆತ್ತಿ ಕಾಪಾಡು. ವ॥ ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ (ಅವರ) ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು (ಅದನ್ನು) ಸೇವಿಸಲು ಚಕೋರ ಪಕ್ಷಿಯಂತೆ ಕಾತರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಎಂಟನೆಯ ಆಶ್ವಾಸವಾದ ಸೌಂದರವತಿಯ ವಿವಾಹ ವರ್ಣನೆಯು ಮುಗಿದುದು.

# ಒಂಬತ್ತನೆಯ ಆಶ್ವಾಸಂ

ಶ್ರೀಯೋಷಿಜ್ಜನಮಣಿ ಕಂ
ಜಾಯತಲೋಚನೆ ಸುಧರ್ಮಸುತೆವೆರಸನಿಶಂ।
ಕಾಯಜಸನ್ನಿಭನುದ್ಭಟ
ರಾಯಂ ಕಂಗೊಳಿಸಿದಂ ಮನೋಮುದದಿಂದಂ ॥ ೧ ॥

ಹರನ ಪದಾಬ್ಜದೊಳ್ನೆಗಟ್ದ ಚೇತನವಂಘ್ರಿನಖಾಂಶುರಾಜಿ ಭೂ
ವರರ ಕಿರೀಟರತ್ನಚಯದೊಳ್ನಿಡುಗಣ್ಗದಿರ್ದೊಂಗಲ್ಪೆದೆ ಸೌಂ।
ದರವತಿಯೊಪ್ಪುವಾನನಸುಧಾರುಚಿಮಂಡಲದೊಳ್ಸಮಂತು ಬೆ
ಚ್ಚಿರಲೆಸೆದಂ ಮನೋಮುದದಿನುದ್ಭಟನಿಂದುಕುಲಾಬ್ಧಿಚಂದ್ರಮಂ ॥ ೨ ॥

ಮತ್ತಮಲ್ಲದೆ,

ಭವಪಾದಾರವಿಂದಬಂಧುರಸುಗಂಧಲುಬ್ಧಭ್ರಮರಾಯಮಾಣಮಾನಸನುಂ ಸಕಲಜಗತ್ಪರಿಪೂರಿತ ಶರಚ್ಚಂದ್ರಸಂಜನಿತಸಾಂದ್ರಚಂದ್ರಿಕಾ ಪುಂಜಸಂಕಾಶಾದಭ್ರಶುಭ್ರಯಶೋ ವಿಭ್ರಾಜಿತನುಂ ಸಮಸ್ತರಾಜರಾಜಿತಕಿರೀಟಕೋಟೀರಮಣಿಗಣೋಲ್ಬಣಸ್ಫುರಣಕಿರಣಜಾಲಾಲಂಕೃತ ಚರಣರಾಜೀವನುದ್ಭಟಕ್ಷಿತೀಂದ್ರ ಚಂದ್ರಮಂ ಸೌಂದರವತಿವೆರಸತ್ಯಾನಂದಂ ತಾಳ್ದುಚಿತಗೋಷ್ಠಿಗಳಿಂದಮಿರೆಯಿರೆ,

೧. ಚೆಲುವೆಯರ ತಲೆ ಮಣಿಯೂ, ಕಮಲಾಕ್ಷಿಯೂ, ಸುಧರ್ಮ ಸುತೆಯೂ ಆದ ಸೌಂದರವತಿಯೊಡನೆ ಕಾಮನಂತಿರುವ ಉದ್ಭಟರಾಯನು ಮನದಾನಂದದಿಂದ ಸದಾ ಕಣ್ ಸೆಳೆಯುವಂತಿದ್ದನು. ೨. ಪ್ರಸಿದ್ಧ ಚೇತನವು ಶಿವನ ಪಾದಕಮಲಗಳಲ್ಲಿ, ಪಾದಗಳ ಬೆರಳಿನ ಉಗುರುಗಳ ಕಾಂತಿಯು ರಾಜರುಗಳ ಕಿರೀಟಗಳ ರತ್ನಗಳಲ್ಲಿ, ವಿಶಾಲವಾದ ಕಣ್ಣಿನ ಚಂಚಲವಾದ ಕಾಂತಿಯ ಮೊತ್ತವು ಸೌಂದರವತಿಯ ಚೆನ್ನಾದ ಮುಖವೆಂಬ ಚಂದ್ರಮಂಡಲದಲ್ಲಿ ಚೆನ್ನಾಗಿ ಹೊಂದಿಕೊಂಡು ಇರಲು ಚಂದ್ರವಂಶವೆಂಬ ಸಮುದ್ರವನ್ನು ಉಕ್ಕೇರಿಸುವ ಚಂದ್ರನಾದ ಉದ್ಭಟನು ಮನದಾನಂದದಿಂದ ಶೋಭಿಸಿದನು. ವ॥ ಮತ್ತೆ ಅಲ್ಲದೆ, ಶಿವನ ಪಾದಕಮಲಗಳ ಮನೋಹರವಾದ ಸುಗಂಧದಲ್ಲಿ ಆಸೆಯುಳ್ಳ ಭ್ರಮರದಂತಿರುವವನೂ, ಸಕಲಲೋಕವನ್ನೆಲ್ಲಾ ವ್ಯಾಪಿಸಿರುವ ಶರತ್ಕಾಲದ ಚಂದ್ರನಿಂದಾದ ದಟ್ಟವಾದ ಕಿರಣಗಳ ಮೊತ್ತದಂತಿರುವ ಶುಭ್ರವಾದ ಆಕಾಶದಂತೆ ಯಶಸ್ಸಿನಿಂದ ಚೆನ್ನಾಗಿ ಹೊಳೆಯುವವನೂ, ಸಕಲ ರಾಜರುಗಳ ಹೊಳೆಯುವ ಕಿರೀಟಗಳಲ್ಲಿರುವ ಮಣಿಗಳ ಸಮೂಹ ಪ್ರಜ್ವಲಿಸುವ ಕಿರಣಗಳ ಜಾಲದಿಂದ ಅಲಂಕಾರಗೊಂಡ ಪಾದಕಮಲಗಳುಳ್ಳವನೂ ಆದ ಉದ್ಭಟ ಮಹಾರಾಜ ಚಂದ್ರಮನು ಸೌಂದರವತಿಯೊಡನೆ

ಕೆಂಜಿಗುರೊತ್ತೆ ಸರ್ವಕುಜಮಾರಡಿಗಳ್ನಲವೇಱು ಕೋಕಿಳಂ
ಮಂಜುನಿನಾದಮಂ ನೆಗಱು ಪಂಡಿತವಕ್ಕಿಗಳುಬ್ಬೆ ಮಾಮರಂ।
ಸಂಜನಿತೋದ್ಗಮಂಗಳನೆ ಸಾಲಿಡೆ ಮಲ್ಲಿಗೆವಳ್ಳಿಗಳ್ ಲಸ
ನ್ಮಂಜರಿಯಂ ಬೆಳರ್ತೆಸೆಯೆ ಬಂದುದು ಚೈತ್ರಮಲಂಪನೀಯುತುಂ ॥ ೩ ॥

ಮತ್ತಮಾಸಮಯದಲ್ಲಿ,

ವಿಲಸತ್ಕಾಸಾರವೀಚೀಪ್ರಘಟನಜನಿತಾಂಭಃಕಣಾನೀಕದೊಳ್ಬಿ
ರ್ದಲರ್ಗೊಂಚಲ್ವಿಂಡಿನೊಳ್ಮೇಣುರುಳ್ದು ಪೊರಳ್ದು ತಳ್ತುರ್ವಿಜಾತಾಚ್ಛ ಶಾಖಾ।
ವಳಿಯೊಳ್ನಿಲ್ತಾಡಿ ಮತ್ತೇಂ ಬಿಡದೆ ಸುೞಿದುದೋ ಶೈತ್ಯಸೌರಭ್ಯಮಾಂದ್ಯೋ
ಜ್ಜ್ವಳಭಾವಂಬೆತ್ತು ತಚ್ಚೈತ್ರದೊಳುಱು ಸೊಗಸಿಂ ದಕ್ಷಿಣಾಶಾಸಮೀರಂ ॥ ೪ ॥

ಪಕ್ಷದಿನೊಲ್ದು ಬರ್ಪಳಿವಧೂಟಿಗೆ ಗಂಧಮನಿತ್ತು ಸೋಂಕಿ ತಾ
ನಾಕ್ಷಣಮಾಗಿಸುತ್ತೆ ಲತಿಕಾಂಗನೆಗಂಕುರರೋಮಹರ್ಷಮಂ।
ವೀಕ್ಷಿಸಿ ಪದ್ಮಿನೀವನಿತೆಗೀಯುತೆ ಶೀಕರತಾರಹಾರಮಂ
ದಕ್ಷಿಣವಾಯು ತೀಡಿದುದು ದಕ್ಷಿಣನಾಯಕನಂತೆ ಚೈತ್ರದೊಳ್ ॥ ೫ ॥

ಪೊದಟ್ದ ಬಸಂತನ ಬರವಿಂ
ಗೆರ್ದೆಗೊಂಡವನೀವಧೂಟಿ ಪೊಂಪುೞಿವೋದಂ।
ತದಿರ್ಮುತ್ತೆಯ ಲತೆಗಳ್ಮೇ
ಣುದಿತಾಂಕುರಮಾಗಿ ನಾಡೆ ಕಂಗೊಳಿಸಿರ್ಕುಂ ॥ ೬ ॥

ಅತ್ಯಾನಂದ ಹೊಂದಿ ಯೋಗ್ಯವಾದ ಗೋಷ್ಠಿಗಳಲ್ಲಿ ಇರುತ್ತಿರಲು, ೩. ಕೆಂಜಿಗ ಗಿಡಗಳು ಹಾಗೂ ಸಕಲ ವೃಕ್ಷಗಳು ಅರಳಲು, ದುಂಬಿಗಳು ಸಂತೋಷ ಹೊಂದಲು, ಕೋಗಿಲೆಗಳು ಮನೋಹರವಾದ ಧ್ವನಿಮಾಡಲು, ಗಿಳಿಗಳು ಉಬ್ಬಿ ಮುದಗೊಳ್ಳಲು, ಮಾವಿನ ಮರಗಳು ಚಿಗುರಲು, ಮಲ್ಲಿಗೆಯ ಬಳ್ಳಿಗಳು ಹೊಳೆಯುವ ಹೂಗಳನ್ನು ಹೊಂದಿ ಕಾಂತಿಯುಕ್ತವಾಗಿ ಶೋಭಿಸಿರಲು ಚೈತ್ರವು ಮುದವನ್ನುಂಟುಮಾಡುತ್ತಾ ಕಾಲಿಟ್ಟಿತು. ವ॥ ಮತ್ತೆ ಆ ಸಮಯದಲ್ಲಿ, ೪. ಆ ವಸಂತ ಕಾಲದಲ್ಲಿ ಅತ್ಯಂತ ಸೊಗಸಿನಿಂದ ಕೂಡಿ ದಕ್ಷಿಣ ದಿಕ್ಕಿನಿಂದ ಬೀಸಿಬಂದ ಗಾಳಿಯು ಹೊಳೆಯುವ ಸರೋವರದ ತೆರೆಗಳ ಹೊಡೆತದಿಂದ ಹುಟ್ಟಿದ ತುಂತುರು ಹನಿಗಳೊಡನೆ, ಬಿರಿದ ಹೂಗೊಂಚಲುಗಳ ಸಮೂಹದೊಡನೆ, ಉರುಳಿ ಹೊರಳಿ ಚಿಗುರಿದ ವೃಕ್ಷಗಳ ಕೊಂಬೆಗಳೊಡನೆ ನಿಂತು ವಿಶ್ರಮಿಸಿ ಮತ್ತೆ ಬಿಡದೆ ತಣ್ಣನೆಯ ಮಧುರವಾದ ಮಂದಗತಿಯ ಉಜ್ವಲ ಭಾವವನ್ನು ಹೊಂದಿದ ಗಾಳಿಯು ಸುಳಿಯಿತು. ೫. ವಸಂತ ಕಾಲದಲ್ಲಿ ದಕ್ಷಿಣ ನಾಯಕನಂತೆ ಸಮೀಪಕ್ಕೆ ಒಲಿದು ಬರುವ ಹೆಣ್ಣು ದುಂಬಿಗೆ ಪರಿಮಳವನ್ನಿತ್ತು, ಬಳ್ಳಿಯೆಂಬ ಸುಂದರಿಗೆ ಸ್ಪರ್ಶ ಮಾತ್ರದಿಂದಲೇ ರೋಮಾಂಚನವನ್ನುಂಟು-ಮಾಡುತ್ತ, ನೋಟದಿಂದ ಪದ್ಮಿನಿಯೆಂಬ ಸ್ತ್ರೀಗೆ ತುಂತುರು ಹನಿಯ ಮುತ್ತಿನ ಮಾಲೆಯನ್ನು ಕೊಡುತ್ತ ದಕ್ಷಿಣ ದಿಕ್ಕಿನಿಂದ ಬೀಸಿಬಂದ ಗಾಳಿಯು ಸುಳಿಯಿತು. ೬. ಪ್ರಸಿದ್ಧನಾದ ವಸಂತನ ಆಗಮನಕ್ಕೆ ಎದೆಗೊಟ್ಟ ಭೂವನಿಯು ರೋಮಾಂಚನಗೊಂಡಂತೆ ಮಾಧವೀಲತೆಗಳು

ನೂತನವಸಂತನೆಟ್ಟಿರೆ
ಸಾತಿಶಯೋದ್ಯಾನಲಕ್ಷ್ಮಿ ಗುಡಿದುಗುಲಗಳಂ
ಪ್ರೀತಿಮಿಗೆ ನೆಗಪಿದಂತಿರೆ
ಪೂತರಸಾಲದ್ರುಮಂಗಳೇನೊಪ್ಪಿದುವೋ ॥ ೭ ॥

ಅಲರ್ಗೊಂಚಲ್ಗೆಱಪುಂಚದುಂಬಿಗಳ ಝಂಭದ್ಧಾನದಿಂ ಪಲ್ಲವಾ
ವಲಿಯಂ ನಾಡೆ ಕರ್ದುಂಕಿ ನುಣ್ಚರಮನಿಂಬಾಗಲ್ಕೆಸಾರಿಪ್ಪ ಕೋ
ಗಿಲೆವಿಂಡಿಂದಿನಿವಣ್ಣಳಚ್ಚರಸಮಂ ಮೇಣೀಂಟಿ ಸಲ್ಲೀಲೆಯಿಂ
ದುಲಿವಂಚಚ್ಚುಕಜಾಲದಿಂದೆಸೆದುದಾಮ್ರವ್ರಾತಮಾಚೈತ್ರದೊಳ್ ॥ ೮ ॥

ಮಿಸುಪ ವಿಲಸದತ್ಯುತ್ಸಾಹಮಂ ಕಾಣುತುಂ ರಾ
ಗಿಸಿತೆನಲುರುಸೂನಾನೂನಶೋಣಾಚ್ಛಧೂಳಿ।
ಪ್ರಸರಮನುಱೆ ಸೂಸುತ್ತುಂ ಕರಂ ಶೋಭಿಸಿತ್ತಂ
ದಸುಕೆಗಳ ಕದಂಬಂ ಪಲ್ಲವೌಘಾವಲಂಬಂ ॥ ೯ ॥

ಬರ್ಪ ಬಸಂತನಲಂಪಿಂ
ಗೊಳ್ಪಿಂ ವನಲಕ್ಷ್ಮಿಯೊಲ್ದು ಮುತ್ತಿನ ತಡೆಯಂ।
ನೇರ್ಪಡಲಿಕ್ಕಿದವೋಲ್ ಸೊಗ
ಸಿರ್ಪುದು ಕುಸುಮಿತಸುಮಲ್ಲಿಕಾಲತಿಕೌಘಂ ॥ ೧೦ ॥

ಅಸುಕೆ ಪಳಂಚೆ ಚಂದಳಿರನೊಯ್ಯನೆ ತೆಂಕಣಗಾಳಿ ತೀಡೆ ಮೇ
ಣ್ಪಸರಿಸೆ ಕಾಂತಿಯಂ ತುಹಿನದೀಧಿತಿ ಶಂಬರವೈರಿ ಬಾಣಮಂ।
ಮಸೆಯೆ ವಿಲಾಸಮಂ ಪಡೆಯೆ ಭೋಗಿಗಳಂದು ವಿಯೋಗಿರಾಜಿ ತಾ
ಪಿಸೆ ನವಚೈತ್ರದೊಳ್ಪು ನೆಱೆ ಪರ್ವಿದುದುರ್ವಿಸಮಸ್ತಧಾತ್ರಿಯೊಳ್ ॥ ೧೧ ॥

ಚಿಗುರಿ ಚೆನ್ನಾಗಿ ಶೋಭಿಸಿದವು. ೭. ನವ ವಸಂತನು ಬರಲು ಹೆಚ್ಚಳಗೊಂಡ ವನಲಕ್ಷ್ಮಿಯು ಬಣ್ಣದ ವಸ್ತ್ರಗಳನ್ನು ಅತ್ಯಂತ ಪ್ರೀತಿಯಿಂದ ಮೇಲೆತ್ತಿ ಹಾರಿಸಿದಳೋ ಎನ್ನುವಂತೆ ಅರಳಿದ ಮಾವಿನ ಮರಗಳು ಬಹಳ ಸೊಗಸಾಗಿ ಶೋಭಿಸಿದವು. ೮. ಹೂಗಳ ಗೊಂಚಲಿಗೆ ಎರಗುವ ಎತ್ತರದ ಧ್ವನಿಯ ದುಂಬಿಗಳ ಝೇಂಕಾರದಿಂದ ಇನಿದಾದ ಕಂಠಕ್ಕೆ ಆಧಾರವಾದ ಚಿಗುರುಗಳನ್ನು ಚೆನ್ನಾಗಿ ಕಚ್ಚಿ ಹಾಡುವ ಕೋಗಿಲೆಗಳ ಸಮೂಹದಿಂದ, ಸಿಹಿಯಾದ ಹಣ್ಣುಗಳ ಶುದ್ಧವಾದ ರಸವನ್ನು ಸವಿದು ವಿಲಾಸದಿಂದ ಧ್ವನಿಮಾಡುವ ಸುಂದರವಾದ ಗಿಳಿಗಳ ಮೊತ್ತದಿಂದ ಆ ವಸಂತ ಕಾಲದಲ್ಲಿ ಮಾವಿನ ಮರಗಳು ಆನಂದಗೊಂಡವು. ೯. ಹೊಳೆಯುವ ಅತ್ಯುತ್ಸಾಹವನ್ನು ನೋಡಿ ಬಣ್ಣವೇರಿತೆನ್ನುವಂತೆ ಶ್ರೇಷ್ಠವಾದ ಹೂಗಳು ವಿಶೇಷವಾದ ಕೆಂಧೂಳಿನ ಮೊತ್ತವನ್ನು ಚೆನ್ನಾಗಿ ಚೆಲ್ಲುವ ಅಶೋಕ ವೃಕ್ಷಗಳ ಸಮೂಹವನ್ನು ಹಾಗೂ ಅವುಗಳ ಚಿಗುರುಗಳನ್ನು ಆಶ್ರಯಿಸಿ ಚೆನ್ನಾಗಿ ಶೋಭಿಸಿದವು. ೧೦. ಬರುತ್ತಿರುವ ವಸಂತನಿಗೆ ಸಂತೋಷದಿಂದ ಚೆನ್ನಾಗಿ ವನಲಕ್ಷ್ಮಿಯು ಪ್ರೀತಿಯಿಂದ ಮುತ್ತಿನ ತಡೆಯನ್ನು ಹೊಂದುವಂತೆ ಹಾಕಿದಳೊ ಎನ್ನುವಂತೆ ಅರಳಿದ ಮಲ್ಲಿಗೆಯ ಬಳ್ಳಿಗಳ ಸಮೂಹವು ಸೊಗಸಾಗಿರುವುದು. ೧೧. ತೆಂಕಣ ಗಾಳಿಯು ಮೆಲ್ಲನೆ ಬೀಸಲು ಅಶೋಕವು

ಇಂತಖಿಳದಿಕ್ಚಕ್ರಮನಂ ತುಂಬಿ ವಿಜೃಂಭಿಪ ವಸಂತಮಾಸದಲಂಪಿನ ಪೆಂಪಂ ಕಂಡು ತಾಂ ಪದೆದತಿಮುದದಿಂದಾಳೀಜನಪರಿವೃತಮಾದ ಸೌಂದರವತಿವೆರಸರಮನೆಯಂ ಪೊಱಮಟ್ಟುದ್ಭಟಕ್ಷಿತೀಂದ್ರ ಚಂದ್ರಮಂ ನಡೆತಂದುದ್ಯಾನಮಂ ಪೊಕ್ಕು ಬರೆವರೆ,

ಇಂಗೋಲಂ ನವದಾಡಿಮೀಫಲಮನೊಪ್ಪಂಬೆತ್ತ ಪೊಂಬಾಳೆಯಂ
ಮಾಂಗಾಯಂ ಸಿತಕಂಜಮಂ ಮಿಸುಪ ಮಲ್ಲೀಗುಚ್ಛಮಂ ಪಚ್ಚೆಯಂ।
ತೊಂಗಲ್ಗೊಂಡುರುಕರ್ಣಿಕಾರದಲರಂ ನಲ್ವಾಳೆವಣ್ಣಂ ಮಹೀ
ಶಂಗಿತ್ತಳ್ವನಪಾಲಿಕಾಂಗನೆ ಸಮುದ್ಯನ್ಮೋದದಿಂ ಕಾಣ್ಕೆಯಂ ॥ ೧೨ ॥

ಇಂತು ವನಪಾಲಿಕೆ ತಂದಿತ್ತ ಕಾಣ್ಕೆಯಂ ಕೈಕೊಂಡು ಸೌಂದರವತಿವೆರಸತ್ಯಾನಂದದಿಂದಂ ಮಂದಸ್ಮಿತವದನಾರವಿಂದನುದ್ಭಟಕ್ಷಿತೀಂದ್ರ ಚಂದ್ರಮಂ ತದ್ವನದಲಂಪಂ ನಡೆನೋಡುತ್ತಂ ಬರೆವರೆ,

ನಿಂಬೆಯು ಕೌಂಗು ತೆಂಗು ಪೊಸನೆಲ್ಲಿ ತಮಾಲಿಕೆ ಯೊಳೆ ಬಾಳೆ ದಾ
ಳಿಂಬಮಶೋಕೆ ಪಾಟಲಿ ನಮೇರು ಶಿರೀಷಕಮಾಮ್ರಮುಲ್ಲಸ।
ಜ್ಜಂಬು ಸುಚಂಪಕಾದಿತರುಸಂತತಿ ಶೋಭಿಸಿತ್ತು ಕ
ಣ್ಗೆಂಬನೊಡರ್ಚುತುಂ ವಿಪುಳಭೋಗಿಜನೋತ್ಕಟಜೀವನಂ ವನಂ ॥ ೧೩ ॥

ತನ್ನ ಚೆಂದಳಿರನ್ನು ಥಳಥಳಿಸಿತು. ಹಿಮಕಣಗಳು ಕಾಂತಿಯನ್ನು ಎಲ್ಲೆಡೆ ಹರಡಿದವು, ಮನ್ಮಥನು ಬಾಣಗಳನ್ನು ಮಸೆಯಲು ಭೋಗಿಗಳು ಆನಂದವನ್ನು ಹೊಂದಿದರು, ನವಚೈತ್ರದಲ್ಲಿ ವಿರಹಿಗಳು ತಾಪಗೊಂಡರು - [ಹೀಗೆ ಇದರ] ಶೋಭೆಯು ಇಡೀ ಭೂಮಂಡಲವನ್ನು ಚೆನ್ನಾಗಿ ಉಬ್ಬಿ ಹಬ್ಬಿತು. ವ॥ ಹೀಗೆ ಎಲ್ಲಾ ದಿಕ್ಕುಗಳನ್ನು ತುಂಬಿ ವಿಶೇಷವಾಗಿ ಶೋಭಿಸಿರುವ ವಸಂತಮಾಸದ ಚೆಲುವಿನ ಹೆಚ್ಚಳವನ್ನು ಕಂಡು ಅತ್ಯಾನಂದದಿಂದ ಸೇವಕಿಯರಿಂದ ಸುತ್ತುವರಿಯಲ್ಪಟ್ಟ ಸೌಂದರವತಿಯೊಡನೆ ಅರಮನೆಯಿಂದ ಹೊರಬಂದ ಉದ್ಭಟ ಮಹಾರಾಜಚಂದ್ರಮನು ಒಂದು ಉದ್ಯಾನವನ್ನು ಪ್ರವೇಶಿಸಿ ಬರುತ್ತಿರಲು, ೧೨. ಕಬ್ಬಿನ ಜಲ್ಲೆಯನ್ನು, ಹೊಸ ದಾಡಿಂಬದ ಹಣ್ಣನ್ನು, ಶೋಭೆ ಪಡೆದ ಹೊಂಬಾಳೆಯನ್ನು, ಮಾವಿನ ಹಣ್ಣನ್ನು, ಬೆಳ್ದಾವರೆಯನ್ನು, ಹೊಳೆವ ಮಲ್ಲಿಗೆಯ ಮಾಲೆಯನ್ನು, ಪಚ್ಚೆಯನ್ನು , ಕರ್ಣಿಕಾರ ಪುಷ್ಪದ ಗೊಂಚಲನ್ನು, ಒಳ್ಳೆಯ ಬಾಳೆಹಣ್ಣುಗಳನ್ನು ವನಪಾಲಿಕೆಯು ಮಹಾರಾಜನಿಗೆ ಆನಂದದಿಂದ ಕೂಡಿ ಕಾಣಿಕೆಯಾಗಿ ಕೊಟ್ಟಳು. ವ॥ ಹೀಗೆ ವನಪಾಲಿಕೆಯು ತಂದುಕೊಟ್ಟ ಕಾಣಿಕೆಯನ್ನು ಸ್ವೀಕರಿಸಿ ಸೌಂದರವತಿಯೊಡನೆ ಅತ್ಯಾನಂದದಿಂದ ಅರಳಿದ ಮುಖಕಮಲನಾದ ಉದ್ಭಟ ಮಹಾರಾಜಚಂದ್ರಮನು ಆ ವನದ ಸೌಂದರ್ಯವನ್ನು ಚೆನ್ನಾಗಿ ನೋಡುತ್ತ ಬರುತ್ತಲಿರಲು, ೧೩. ನಿಂಬೆ, ಅಡಿಕೆ, ತೆಂಗು, ಎಳೆಯ ನೆಲ್ಲಿ, ಹೊಂಗೆ, ಕಿತ್ತಳೆ, ಬಾಳೆ, ದಾಳಿಂಬಿ(ಬ), ಅಶೋಕ, ಪಾದರಿ, ಸುರಗಿ, ಶಿರೀಷ, ಮಾವು, ಚೆಲುವಾದ ಜಂಬುನೇರಿಳೆ, ಚಂಪಕ - ಇವೇ ಮೊದಲಾದ ವೃಕ್ಷಗಳಿಂದ ಕೂಡಿ ಯಥೇಚ್ಛ ವಿಲಾಸಿಗಳ ಜೀವವಾಗಿರುವ ವನವು ಕಣ್ಣಿಗೆ

ಮತ್ತಮದಲ್ಲದೆ,

ನಲವಿಂದಂ ಕಾಮನೆಂತೆಂಬತುಳ ಮಹಿವರಂಗಂದು ಸನ್ಮೋಹನಶ್ರೀ
ವಿಲಸತ್ಸಾಮ್ರಾಜ್ಯಪಟ್ಟಾಭಿಷವಮೊಸೆದೊಡರ್ಚಲ್ಪಸಂತಂ ಕರಂ ನಿ।
ರ್ಮಲ ಪೀಯೂಷಾಂಬುಪೂರ್ಣಂ ಕನಕಕಳಿಳಶಮಂ ತಾಳ್ದವೊಲ್ಕೋಭಿಕುಂ ಮಂ
ಜುಳರುಚ್ಯಾಚ್ಛನ್ನವಾಃಪೂರಿತನಿಜಫಲಭಾರಂ ಚಲನ್ನಾರಿಕೇಳಂ ॥ ೧೪ ॥

ವನವಧು ಮಧುವಿಂಗೆತ್ತಿದ
ಘನನವರತ್ನಾತಪತ್ರಮೆಂಬಂತೆ ತಳಿ।
ರ್ನನೆ ಪೂಮಿಡಿ ಬಲ್ಮಿಡಿಕಾಯ್
ತನಿವಣ್ಣನಿವಣ್ಗಳಿಡಿದ ಚೂತಮದೆಸೆಗುಂ ॥ ೧೫ ॥

ಅಂಗಜನೃಪಂಗೆ ಬನವೆಂ
ಬಂಗನೆ ಡಾಳಿಸುವ ಚಾರುಚಾಮರಮದೆನಲ್।
ತಂಗಾಳಿಗೊಲೆವ ಕುಹಳದ
ತೊಂಗಲನಾಂತೆಸೆದುದಲ್ಲಿ ಪೂಗಮಹೀಜಂ ॥ ೧೬ ॥

ನವಪುಷ್ಪಿತೆಯಾಗಿರಲೊ
ಪ್ಪುವ ಪಾದರಿಗೊಲ್ದೆಱಪ್ಪ ಮಧುಪಾವಳಿಯು।
ತ್ಸವಮಂ ನಿಟ್ಟಿಸುತುಂ ನಗು
ವವೊಲರೆವಿರಿವಣ್ಗಳಮರ್ದ ದಾಡಿಮಮೆಸೆಗುಂ ॥ ೧೭ ॥

ವನದೇವತೆಯನುರಾಗಮೊ
ನನೆವಿಲ್ಲನ ವಿಕ್ರಮಾನಲಜ್ವಾಲೆಯೊ ಚೈ।
ತ್ರನ ಮಣಿವಾಡವೊ ತಾನೆಂ
ದೆನೆ ಮಿಗೆ ಪಲ್ಲವಿತಮಾದಶೋಕಮದೆಸೆಗುಂ ॥ ೧೮ ॥

ಸಂತೋಷವನ್ನುಂಟುಮಾಡುತ್ತ ಶೋಭಿಸಿದ್ದಿತು. ವ॥ ಮತ್ತೆ ಅದಲ್ಲದೆ, ೧೪. ಸಂತಸದಿಂದ ಕಾಮನೆಂಬ ಮಹಾರಾಜನಿಗೆ ಮೋಹನಶ್ರೀಯು ಹೊಳೆಯುವ ಸಾಮ್ರಾಜ್ಯದ ಪಟ್ಟಾಭಿಷೇಕವನ್ನು ಪ್ರೀತಿಯಿಂದ ಮಾಡಲು ವಸಂತನು ಚೆನ್ನಾಗಿ ನಿರ್ಮಲವಾಗಿರುವ ಅಮೃತವೆಂಬ ನೀರನ್ನು ತುಂಬಿರುವ ಚಿನ್ನದ ಕಳಶವನ್ನು ಹೊಂದಿರುವಂತೆ ಮನೋಹರವಾದ ಕಾಂತಿಯಿಂದ ಕೂಡಿದ ಪರಿಶುದ್ಧವಾದ ನೀರನ್ನು ತುಂಬಿಕೊಂಡು ಫಲಭರಿತವಾದ ತೆಂಗು ಶೋಭಿಸಿತು. ೧೫. ವನಶ್ರೀಯು ಮಧುಮಾಸಕ್ಕೆ ಎತ್ತಿದ ನವರತ್ನಗಳ ಬೆಳ್ಗೊಡೆ ಎನ್ನುವಂತೆ ಚಿಗುರು, ಮೊಗ್ಗು, ಹೂವು, ಮಿಡಿ, ಕಾಯಿ, ದೋರೆಹಣ್ಣು, ಸಿಹಿಯಾದ ಹಣ್ಣು ಇವುಗಳಿಂದ ಕೂಡಿದ ಮಾವು ಶೋಭಿಸಿದವು. ೧೬. ಕಾಮದೇವನಿಗೆ ವನಕಾಂತೆಯು ಬೀಸುವ ಮನೋಹರವಾದ ಚಾಮರವೆನ್ನುವಂತೆ ತಂಗಾಳಿಗೆ ಹಾರಾಡುವ ಅಡಕೆ ಹೂವಿನ ಗೊಂಚಲುಗಳನ್ನು ಹೊಂದಿ ಮರಗಳ ಗುಂಪು ಅಲ್ಲಿ ಶೋಭಿಸಿದ್ದಿತು. ೧೭. ಹೊಸದಾಗಿ ಹೂಕಚ್ಚಿ ಸುಂದರವಾಗಿರುವ ಪಾದರಿಗೆ ಇಚ್ಛೆಪಟ್ಟು ಕವಿಯುವ ದುಂಬಿಗಳ ಸಡಗರವನ್ನು ನೋಡುತ್ತ ನಗುವ ರೀತಿಯಲ್ಲಿ ಅರೆಬಿರಿದ ಹಣ್ಣುಗಳನ್ನು ಹೊಂದಿರುವ ದಾಳಿಂಬವು ಶೋಭಿಸುವುದು. ೧೮. ವನದೇವತೆಯ ಪ್ರೇಮವೊ, ಮನ್ಮಥನ ಪರಾಕ್ರಮ ಜ್ವಾಲೆಯೊ,

ಕಂದು ಪೊರೆ ಪಲ್ಲಲಂ ಬಿಡ
ದೆಂದುಂ ಮಿಗೆ ಲೋಕಸೇವ್ಯಮಾಗಿಯುಮಕಟಂ।
ದಂದು ತಲೆವಾಗಿತೆನೆ ಫಲ
ವೃಂದದ ಭರನಮಿತಕದಳಿಯೇನೊಪ್ಪಿದುದೋ ॥ ೧೯ ॥

ನುಡಿಗುಡದನಿಶಂ ಸುಮ್ಮನೆ
ಕೊಡುವ ಮಹಾದಾನಿಯಂತಿರಲಲರೇಜಿದೆ ಸೊಂ।
ಪಿಡಿದಿನಿವಣ್ಣಳನೆಲ್ಲ
ರ್ಗೆಡೆವಿಡಿದೀವುತ್ತಮೊಪ್ಪುಗುಂ ಪನಸಕುಜಂ ॥ ೨೦ ॥

ನವಯೌವ್ವನದೊಳ್ಕಂಪು
ದ್ಭವಮಾಗದು ಮುಪ್ಪಿನಲ್ಲಿ ಸಂಜನಿಸುಗುಮೆಂ।
ದು ವಿಲಾಸಮಟಿದು ಮರವ
ಟ್ಟವೊಲೆಸೆಗುಂ............... ॥ ೨೧ ॥

ನೆಗಟ್ಟಿ ವಸಂತನ ಮುಂದಾ
ಶುಗನಟನಾಡಿಸೆ ಲತಾನಟಿನಿಯಂ ಬನವೆ।
ಣ್ಮಗೆ ಯೊತ್ತುವ ಪೊಂದಾಳದ
ಬಗೆಯಂ ಪೋಲ್ದಲರ್ದ ಕರ್ಣಿಕಾರಮದೆಸೆಗುಂ ॥ ೨೨ ॥

ರಂಜಿಪ ಚೈತ್ರನ ಕಾಣ್ಕೆಗೆ
ಸಂಜನಿತಾಂಕುರದ ಪುಳಕವಾಂತು ವನಶ್ರೀ।
ತಾಂ ಜವದೆ ತಳೆದ ನೀಲದ
ಮಂಜರಿಯೆನೆ ಪಣ್ತನೇರಿಲೇನೊಪ್ಪಿದುದೋ ॥ ೨೩ ॥

ವಸಂತನ ಮಣಿಖಚಿತವಾದ ಭವ್ಯವಾದ ಗೃಹವೊ ಎನ್ನುವಂತೆ ಚೆನ್ನಾಗಿ ಚಿಗುರಿದ ಅಶೋಕವು ಶೋಭಿಸಿರುವುದು. ೧೯. ಹೆಚ್ಚಾಗಿ ಲೋಕಸೇವೆ ಮಾಡಿದಾಗ್ಯೂ ಅಯ್ಯೋ ಕೆಂಪುಮಿಶ್ರವಾದ ಕಪ್ಪು ಪೊರೆಯೆ ಮರದ ತೊಗಟೆ ಎಂದು ತಲೆಬಾಗಿತು ಎನ್ನುವಂತೆ ಫಲದ ಭಾರದಿಂದ ಬಾಗಿದ ಕದಳಿ ಎಷ್ಟು ಸೊಗಸಾಗಿದೆ! ೨೦. ಮಾತನಾಡದೆ ಸುಮ್ಮನೆ ಕೊಡುವ ಮಹಾದಾನಿಯಂತೆ ಹೂವು ಏರದೆ ಹೆಚ್ಚಳವನ್ನು ಪಡೆದು ಸಿಹಿಯಾದ ಹಣ್ಣುಗಳನ್ನು ಎಲ್ಲರಿಗೆ ಕಾಣುವಂತೆ ಕೊಡುತ್ತ ಹಲಸಿನ ಮರವು ಶೋಭಿಸಿರುವುದು. ೨೧. ನವಯೌವನದಲ್ಲಿ ಕಂಪುದೋರದೆ ಮುಪ್ಪಿನಲ್ಲಿ ತೋರುವುದೆಂದು ಚೆಲುವುಗುಂದಿ ಮರಗಟ್ಟಿದ ರೀತಿಯಲ್ಲಿ ಶೋಭಿಸಿರುವುದು. ೨೨. ಪ್ರಖ್ಯಾತನಾದ ವಸಂತನ ಮುಂದೆ ಶುಕನೆಂಬ ನಟನು ಬಳ್ಳಿಯೆಂಬ ನಟಿಯನ್ನು ಆಡಿಸಲು ವನಕಾಂತೆಯು ಹಾಕುವ ಹೊನ್ನಿನ ತಾಳದ ರೀತಿಯಲ್ಲಿ ಹೋಲಿಕೆಯನ್ನು ಪಡೆದ ಅರಳಿದ ಕರ್ಣಿಕಾರವು ಶೋಭಿಸಿರುವುದು. ೨೩. ಶೋಭಾಯಮಾನನಾದ ಚೈತ್ರನ ನೋಟಕ್ಕೆ ಮೊಳಕೆಯೊಡೆದು ಸಂತಸಗೊಂಡ ವನಲಕ್ಷ್ಮಿಯು ಬೇಗನೆ ಪಡೆದ ನೀಲಿಯ ಗೊಂಚಲೆನ್ನುವಂತೆ ಹಣ್ಣುಗಳಿಂದ ತುಂಬಿದ ನೇರಿಳೆ ಎಷ್ಟು ಸೊಗಸಾಗಿದೆ!

ಪೊದದಟ್ಟೋಪಧಿಯುತರಸವಾ
ದದ ಗುಪ್ತಾನಲನ ಧೂಮದೆಡೆಯೆಡೆಯೊಳ್ಮೇ।
ಣುದಯಿಸಿದುರಿಯಂತಿರಲ
ರ್ಪ್ಪುದಿದಿರೆ ಪಸುರೇಱಿ ಸೊಗಸಿದುದು ಚಾಂಪೇಯಂ ॥ ೨೪ ॥

ಮತ್ತಮದಲ್ಲದೆ,

ಮಧುರದ್ರಾಕ್ಷೆಯ ಚಪ್ಪರಂಗಳಿನುರುಕ್ರೀಡಾವನೀಧ್ರಂಗಳಿಂ
ವಿಧುಕಾಂತೋದ್ಧತಬದ್ಧಚಾರುತಟಕಾಸಾರಂಗಳಿಂ ಪ್ರೋಲ್ಲಸ।
ನ್ಮಧುಪಾಚ್ಛಾದಿತಪುಷ್ಪಗುಚ್ಛಯುತವಲ್ಲೀಜಾಳದಿಂ ಸಂತತಂ
ವಿಧೃತಾಮೋದಮನೈದೆ ತುಳ್ಕುತೆ ಕರಂ ಕಣ್ಗೊಪ್ಪಿತಂತಾಬನಂ ॥ ೨೫ ॥

ಇಂಪಂಬೆತ್ತಿನವಣ್ಣನೊಲ್ದು ಸವಿ[ನೋ]ಡುತ್ತಿರ್ಪ ಕೀರೌಘದಿಂ
ಸೊಂಪಾದೊಳ್ದಳಿರ್ಗಚ್ಚಿ ಮೇಣುಲಿವ ಚಂಚತ್ಕೋಕಿಲವ್ರಾತದಿಂ।
ಕಂಪಂ ತುಳ್ಕುವ ಪೂವನಂಟಿ ಮಿಗೆ ಝೇಂಕಾರಿಪ್ಪ ಭೃಂಗಾಳಿಯಿಂ
ತಾಂ ಪಂಚಾಸ್ತ್ರನಶಾಲೆಯೆಂದು ನೆಱೆ ಕಣ್ಗಿಂಬಾದುದಂತಾಬನಂ ॥ ೨೬ ॥

ಇಂತು ತುಂಗಮಂಗಳಮಾದುದ್ಯಾನದೊಳ್ಪನುದ್ಭಟಕ್ಷಿತೀಂದ್ರ ಚಂದ್ರಮಂ ಸೌಂದರವತಿವೆರಸವ ಲೋಕಿಸುತ್ತುಂ ಬರೆವರೆ ಮತ್ತಮಾ ಬನದೊಳ್,

ರಸದಾಳಿಂಬದ ಬೀಜಮಂ ಕರ್ದುಕಲಾಸಾರಂ ಕರಂ ಸೃಕ್ವದೊಳ್
ಬಸಿಯಲ್ಕೋಭಿಕುಮಂದು ಕೀರಚಯಮಿಂಗೋಲ್ವಿಲ್ಲನೊಲ್ದೇಱಿ ತಾ।
ನೊಸೆದುದ್ರಕ್ತಖಲೀನಮಂ ಜಡಿಯೆ ತದ್ಘಾತೋದಿತಾಸೃಕ್ಸಮೇ
ತಸುಲಾಲಾರತಿಯೊಪ್ಪಲೊಪ್ಪುವ ತುರಂಗಾನೀಕಮೆಂಬಂತೆವೋಲ್ ॥ ೨೭ ॥

೨೪. ಮೋಸದಿಂದ ಕೂಡಿದ ಪ್ರಸಿದ್ಧವಾದ ರಸವಿದ್ಯೆಯ ಗುಪ್ತಜ್ವಾಲೆಯ ಹೊಗೆಯ ನಡುವೆ ಹುಟ್ಟಿದ ಬೆಂಕಿಯಂತೆ ಹಸುರು ಹಬ್ಬಿದ ಸಂಪಗೆಯು ಮನೋಹರವಾಗಿ ಕಂಡುಬಂದಿತು. ವ॥ ಮತ್ತೆ ಅಲ್ಲದೆ, ೨೫. ಸಿಹಿಯಾದ ದ್ರಾಕ್ಷಿಯ ಚಪ್ಪರಗಳಿಂದ, ಸೊಗಸಾದ ಕ್ರೀಡಾಂಗಣಗಳಿಂದ, ಚಂದ್ರಕಾಂತ ಶಿಲೆಗಳಿಂದ ನಿರ್ಮಿತವಾದ ಮನೋಹರವಾದ ಕೊಳದ ದಡದಿಂದ, ವಿಶೇಷವಾಗಿ ಹೊಳೆಯುವ ದುಂಬಿಗಳಿಂದ ಕವಿಯಲ್ಪಟ್ಟ ಪುಷ್ಪಗುಚ್ಛಗಳಿಂದ ಕೂಡಿದ ಬಳ್ಳಿಗಳಿಂದ ಸದಾ ಸಂತೋಷದಿಂದ ಬೇರ್ಪಡದೆ ಚೆನ್ನಾಗಿ ಅದನ್ನು ಹೊರಸೂಸುತ್ತಾ ಆ ವನವು ಕಣ್ಣಿಗೆ ಬಹಳ ಸೊಗಸಾಗಿ ಕಂಡಿತು. ೨೬. ಸುವಾಸನೆಯಿಂದ ಕೂಡಿದ ಸಿಹಿಯಾದ ಹಣ್ಣನ್ನು ಬಯಸಿ ರುಚಿನೋಡುತ್ತಿರುವ ಗಿಳಿಗಳ ಸಮೂಹದಿಂದ, ಚೆನ್ನಾಗಿ ಬೆಳೆದ ಚಿಗುರನ್ನು ಕಚ್ಚಿ ಮಧುರವಾಗಿ ಹಾಡುವ ಕಾಂತಿಪೂರ್ಣವಾದ ಕೋಗಿಲೆಗಳ ಗುಂಪಿನಿಂದ, ಕಂಪನ್ನು ಹೊರಸೂಸುವ ಹೂವನ್ನು ಸೇರಿ ಹೆಚ್ಚಾಗಿ ಝೇಂಕರಿಸುವ ದುಂಬಿಗಳಿಂದ ತಾನು ಮನ್ಮಥನ ಶಾಲೆಯೆಂದು ಭಾವಿಸಿದ ಆ ವನವು ಕಣ್ಣಿಗೆ ಬಹಳ ಹಿತವಾಯಿತು. ವ॥ ಹೀಗೆ ಅತಿಮಂಗಳಕರವಾದ ಉದ್ಯಾನದ ಹಿರಿಮೆಯನ್ನು ಉದ್ಭಟಮಹಾರಾಜ ಚಂದ್ರಮನು ಸೌಂದರವತಿಯೊಡನೆ ನೋಡುತ್ತಾ ಬರುತ್ತಿರಲು, ಮತ್ತೆ ಆ ವನದಲ್ಲಿ, ೨೭. ರಸಭರಿತವಾದ ದಾಳಿಂಬದ ಬೀಜವನ್ನು ಕುಕ್ಕಲು

ಸಲೆ ಚೈತ್ರಂ ಸಮೆದಾ ನಿ
ರ್ಮಲವನಕೆಟ್ಟಿಪ್ಪ ಕುಸುಮಶರನೃಪನಿದಿರೊ।
ಳ್ನಲವಿಂ ಚೀಱುವ ಕಹಳೆಗ
ಳುಲಿಯೆನೆ ಕೀಱಿಡುತೆ ಮೆಱೆದೆ ವೆಳೆಗೋಗಿಲೆಗಳ್ ॥ ೨೮ ॥

ಅಂಟಿ ಮಕರಂದಮದಿರಮ
ನೀಂಟುತುಮಾಕುಸುಮಗುಚ್ಛಗುಂಜಾಗೃಹದೊಳ್।
ಟೆಂಟಣೆಸದೆ ಗಳಪುವವೋಲ್
ನೀಂಟಾದಿಂಚರಮನೆಸಗುತೊಪ್ಪಿದುವಳಿಗಳ್ ॥ ೨೯ ॥

ಪೊಸಬನದೇೞ್ಗೆ ಕಾರ್ಮುಗಿಲ ಪರ್ಬುಗೆ ಬೀಳ್ವಲರಾಲಿಗಲ್ವಿಜೃಂ
ಭಿಸುವೆಳೆದುಂಬಿಯಿಂಚರಮೆ ವಾರಿಧರಧ್ವನಿ ಮಿಂಚು ಚಂಪಕ।
ಪ್ರಸರದ ಗೊಂಚೆ ಪುಷ್ಪರಸಧಾರೆಯೆ ವರ್ಷಮದಾಗೆ ಕಂಡು ರಾ
ಗಿಸಿ ಮೞೆಗಾಲಮೆಂದು ಮಿಗೆ ನರ್ತಿಸುತೊಪ್ಪಿದುವಲ್ಲಿ ಕೇಕಿಗಳ್ ॥ ೩೦ ॥

ನವಕಿಂಜಲ್ಕಮನುಂಡು ರಾಗಿಸಿ ಮುದಂಬೆತ್ತುರ್ಬಿ ಸಲ್ಲೀಲೆಯಿಂ
ತವೆ ನೂರೆಂಟಡಿಯಂ ವಲಂ ನಡೆವವೋಲ್ ತನ್ಮಂಜುಳೋದ್ಯಾನಮ।
ಧ್ಯವಿರಾಜದ್ಘನಪಂಕಜಾಕರಲಸತ್ತೀರಪ್ರದೇಶಂಗಳ
ಲ್ಲಿ ವಿಲಾಸಂಬಡೆದಂದು ಸಂಚರಿಸುತೇನೊಪ್ಪಿರ್ದುವೋ ಹಂಸೆಗಳ್ ॥ ೩೧ ॥

ಮುತ್ತಿಗೆ ಹಾಕಿ, ಚೆನ್ನಾಗಿ ರಸವನ್ನು ಹೀರುವಾಗ ಕಟ ಬಾಯಿಯಲ್ಲಿ ರಸವು ಸುರಿಯಲು ಆ ಗಿಳಿಗಳ ಸಮೂಹವು, ಮನ್ಮಥನು ಪ್ರೀತಿಯಿಂದ ಏರಿ ಸಂತಸದಿಂದ ರತ್ನದ ಕಡಿವಾಣವನ್ನು ಜಡಿಯಲು ಆ ಪೆಟ್ಟಿಗೆ ಕಟಬಾಯಿಯಿಂದ ಹೊರಬಂದ ಜೊಲ್ಲು ಶೋಭಿಸಿರಲು ಅಂದಗೊಂಡ ಕುದುರೆಗಳ ಸಮೂಹದಂತೆ ಚೆಲುವನ್ನು ಹೊಂದಿರುವುದು. ೨೮. ಚೈತ್ರನು ಚೆನ್ನಾಗಿ ಸಿದ್ಧಗೊಳಿಸಿದ ಶುಭ್ರವಾದ ವನಕ್ಕೆ ಬರುತ್ತಿರುವ ಮನ್ಮಥನ ಇದಿರಿನಲ್ಲಿ ಪ್ರೀತಿಯಿಂದ ಧ್ವನಿಮಾಡುವ ಕಹಳೆಗಳ ನಾದದಂತೆ ಎಳೆಯ ಕೋಗಿಲೆಗಳು ಕೂಗಿ ಶೋಭಿಸಿದವು. ೨೯. ಹೂವನ್ನು ಸೇರಿ ಮಕರಂದವೆಂಬ ಮದ್ಯವನ್ನು ಸವಿಯುತ್ತ ಆ ಹೂಗಳ ಗೊಂಚಲೆಂಬ ಹೆಂಡದಂಗಡಿಯಲ್ಲಿ ಎದುರು ಬೀಳದೆ ಹರಟುವ ರೀತಿಯಲ್ಲಿ ಒಂದೇ ಸಮನೆ ಸ್ಥೋಡದೆ ಝೇಂಕರಿಸುತ್ತ ದುಂಬಿಗಳು ಶೋಭಿಸಿದವು. ೩೦. ಹೊಸವನದ ಅಭಿವೃದ್ಧಿಯೇ ಕಪ್ಪಾದ ಮೋಡಗಳ ಹಬ್ಬುಗೆ, ಕೆಳಗೆ ಬೀಳುವ ಹೂವುಗಳೇ ಆಲಿಕಲ್ಲುಗಳು, ಶೋಭಿಸುವ ಎಳೆದುಂಬಿಯ ಝೇಂಕಾರವೇ ಮೋಡಗಳ ಗುಡುಗು, ಚಂಪಕದ ಸಮೂಹವೇ ಮಿಂಚು, ಪುಷ್ಪರಸಧಾರೆಯೇ ಮಳೆ - ಆಗಲು ಅದನ್ನು ನೋಡಿ ಮಳೆಗಾಲವೆಂದು ಸಂತೋಷಹೊಂದಿ ನವಿಲುಗಳು ಚೆನ್ನಾಗಿ ನರ್ತಿಸುತ್ತ ಅಲ್ಲಿ ಅಂದಗೊಂಡವು. ೩೧. ಎಳೆಯ ಹೂವಿನ ಕುಸುರನ್ನು ಸವಿದು ರಂಗೇರಿ ಸಂತೋಷಗೊಂಡು ಉಬ್ಬಿ ವಿಲಾಸದಿಂದ ಚೆನ್ನಾಗಿ ನೂರೆಂಟಡಿ ನಡೆದ ರೀತಿಯಲ್ಲಿ ಆ ಮನೋಹರವಾದ ಉದ್ಯಾನದ ಮಧ್ಯಭಾಗದಲ್ಲಿ ಶೋಭಿಸಿರುವ ಕಮಲಗಳ ಕೊಳದ ಹೊಳೆವ ದಡದಲ್ಲಿ ಲಾವಣ್ಯವನ್ನು ಹೊಂದಿ ಹಂಸಗಳು

ಮತ್ತಮದಲ್ಲದಿನಿವಣ್ಣ ತನಿರಸಮನುಂಡುರ್ಬಿ ಕೊರ್ಬಿ ಪರ್ಬಿದ ಹರ್ಷದಿಂದಿಂಚರಮಂ ಪಳಂಚುತೆ ಸಂಚರಿಸುವಗಣಿತಮನೋಜ್ಞ ವಿಹಗಜಾಲದಿಂ ಮಂಜುಳಕಂಜಕುಂಜಸಂಜನಿತಾಮೋದಸ್ತಬಕಾಮೋದಾಸಕ್ತ ಭ್ರಮರೀಸಂಕುಳಝೇಂಕಾರ ಪೂರ್ಣವಿಸ್ತೀರ್ಣ ಕಾಸಾರಂಗಳಿಂ ಮಿಸುಪ ಪೊಸಗಂಪಂ ದೆಸೆದೆಸೆಗೆ ಪಸರಿಸುತ್ತುಂ ಮನಂಗೊಳಿಪ ಪೆಂಪು ವಡೆದಾಲತಾಮಂಟಪಂಗಳಿಂ ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡಿರಿಸಿ ಕರುವಿಟ್ಟು ಪೊಂಗಿ ತೂಳ್ವ ಬೆಳ್ವೆಳಗನುಗಳ್ವೆಳೆ ಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮನುದ್ಯನ್ಮುದದಿಂದುದ್ಭಟಕ್ಷಿತೀಂದ್ರಚಂದ್ರಮಂ ಸೌಂದರವತಿವೆರಸವಲೋಕಿಸುತ್ತುಂ ಮೆಲ್ಲ ಮೆಲ್ಲನೆ ಬರೆವರೆ,

ಸೌಂದರವತಿಯುದ್ಭಟರಾ
ನಂದಂಬಡೆದೆಸೆವ ಬನದಲಂಪಂ ನೋಡು।
ತ್ತಂದೆಯ್ತರೆ ಕೂರ್ತಬಲಾ
ವೃಂದಂ ಪೂತಿಱಿಯಲೆಂದು ಪರೆದುದು ಬನದೊಳ್ ॥ ೩೨ ॥

ಪೊಸನಱುಗಂಪನೀವ ಸುಮನಸ್ಸಯಮಂ ತಿಱಿಯಲ್ಕೆ ಕಾಂತೆಯರ್
ಮಿಸುಪ ಮಹೀಜರಾಜಿಯನುದಂಚಿತಕಂಜನಿಕುಂಜಮಂ ಸಮಂ।
ತೆಸೆವ ಲತಾವಿತಾನಮನತಿಪ್ರಿಯವಾಂತುಱು ಬಂದು ನಿಂದು ಶೋ
ಭಿಸಿದರಲಂಪಿನಿಂದಲರ್ಗಳಂ ತಿಱಿಯುತ್ತೆ ವನಾಂತರಾಳದೊಳ್ ॥ ೩೩ ॥

ಮತ್ತಮದಲ್ಲದೆ,

ಓಡಾಡುತ್ತಾ ಎಷ್ಟು ಚೆಂದವಾಗಿದ್ದವೋ! ವ॥ ಮತ್ತೆ ಅದಲ್ಲದೆ, ಸಿಹಿಯಾದ ಹಣ್ಣಿನ ರಸವನ್ನು ಸವಿದು ಉಬ್ಬಿ ಕೊಬ್ಬಿ ಹಬ್ಬಿದ ಸಂತೋಷದಿಂದ ಮಧುರ ಧ್ವನಿಯನ್ನುಂಟುಮಾಡುತ್ತ ಓಡಾಡುವ ಅತಿಮನೋಹರವಾದ ಪಕ್ಷಿಗಳ ಸಮೂಹದಿಂದ, ಮಂಜುಳವಾದ ಕಮಲ ಬಳ್ಳಿ ಮಾಡಗಳಲ್ಲಿ ಹುಟ್ಟಿದ ಪರಿಮಳದ ಗೊಂಚಲಿನಲ್ಲಿ ಸಂತೋಷದಿಂದ ಆಸಕ್ತವಾದ ದುಂಬಿಗಳ ಝೇಂಕಾರದಿಂದ ತುಂಬಿದ ವಿಶಾಲವಾದ ಕೊಳಗಳಿಂದ, ಸುಳಿಯುವ ಹೊಸ ಸುವಾಸನೆಯನ್ನು ದಿಕ್ಕು ದಿಕ್ಕಿಗೆ ಹರಡುತ್ತ ಮನಸೆಳೆಯುವ ಚೆಲುವಿನಿಂದ ಕೂಡಿದ ಲತಾಮಂಟಪಗಳಿಂದ, ಚಂದ್ರನ ಗುಂಡನ್ನು, ಮಿಂಚಿನ ಗೊಂಚಲನ್ನು ಬಿಡದೆ ಕತ್ತರಿಸಿ ತುಂಡು ಮಾಡಿ ಎರಕ ಹೊಯ್ದು ಉಕ್ಕಿ ಮೇಲೆ ಬೀಳುವ ಬಿಳಿಯ ಕಿರಣವನ್ನು ಹೊರಚೆಲ್ಲುವ ಎಳೆಯ ಮುತ್ತಿನ ಕೃತಕ ಶೈಲಗಳಿಂದ ಶೋಭಿಸುವ ಉದ್ಯಾನವನ್ನು ಸಂತೋಷದಿಂದ ಉದ್ಭಟ ಮಹಾರಾಜಚಂದ್ರಮನು ಸೌಂದರವತಿಯೊಡನೆ ನೋಡುತ್ತ ಮೆಲ್ಲ ಮೆಲ್ಲನೆ ಬರುತ್ತಿರಲು, ೩೨. ಸೌಂದರವತಿ - ಉದ್ಭಟರು ಆನಂದ ಹೊಂದಿ ಶೋಭಿಸುವ ವನದ ವಿಲಾಸವನ್ನು ನೋಡುತ್ತ ಬರುತ್ತಿರಲು ಹೂವು ಕೀಳಲು ಒಲವು ತೋರಿದ ಸ್ತ್ರೀಯರ ಸಮೂಹವು [ಅದಕ್ಕಾಗಿ] ಉದ್ಯಾನದಲ್ಲಿ ಚೆದುರಿತು. ೩೩. ಹೊಸ ಸುವಾಸನೆಯನ್ನು ಕೊಡುವ ಹೂವುಗಳ ಸಮೂಹವನ್ನು ಕೀಳಲು ಸ್ತ್ರೀಯರು ಹೊಳೆವ ವೃಕ್ಷಗಳ ಗುಂಪನ್ನೂ, ಶ್ರೇಷ್ಠವಾದ ಕಮಲಗಳ ಕೊಳಗಳನ್ನೂ, ಚೆನ್ನಾಗಿ ಶೋಭಿಸುವ ಆ ಬಳ್ಳಿಗಳ ಸಾಲುಗಳನ್ನೂ ಅತ್ಯಾನಂದ ಹೊಂದಿ ಬೇಗನೆ ಸಮೀಪಿಸಿ ಬಂದು ನಿಂತು ಉದ್ಯಾನದ ಮಧ್ಯಭಾಗದಲ್ಲಿ ವಿಲಾಸದಿಂದ ಹೂಗಳನ್ನು ಕೀಳುತ್ತಾ ಶೋಭಿಸಿದರು. ವ॥ ಮತ್ತೆ ಅದಲ್ಲದೆ,

ಅಂಗಭವಂಗೆ ನಚ್ಚಿನ ಕಳಂಬಕಮಾನೆನಿಸಲ್ಪಟಿಕ್ಕೆ ತಾ
ನುಂ ಗಡ ಬಾಣಮೆಂದು ಬೆಱತಿರ್ಪುದಿದೆಂದತಿಕೋಪದಿಂ ಸಮು।
ತ್ತುಂಗಪದಪ್ರಘಾತಮನೊಡರ್ಚುವವೋಲ್ವಿಪುಳಾನುರಾಗವಾಂ
ತಂಗನೆಯೊರ್ವಳಂದೊದೆದಲರ್ಚಿಸಿ ಕೊಯ್ದಳಶೋಕಪುಷ್ಪಮಂ ॥ ೩೪ ॥

ಪೊದಟ್ಬೆನ್ನಧರದ ಸುಧೆ ತಾ
ನಿದೆ ಬೆಲೆ ಯೆಲ್ಲರ್ಗೆನುತ್ತೆ ನವಮಧುಗಂಡೂ।
ಷದಿನಲರೇಱಿಸಿ ಕೊಯ್ದಳ್
ಸುದತೀಮಣಿ ಯೊರ್ವಳೆಸೆವ ಬಕುಳದ ಪೂವಂ ॥ ೩೫ ॥

ಘರ್ಮಕೆ ಕುಳಿರ್ಕುಳಿರ್ಗತಿ
ಘರ್ಮಮನೀವೆನ್ನ ಮೊಲೆಯ ಸೊಂಕಂ ನೋಡೆಂ।
ದೊರ್ಮೆ ಬಿಗಿಯಪ್ಪಿ ತಿಱಿವ
ಳ್ಪೆರ್ಮೆಯಿನೊರ್ವಳೆ ಯಲರ್ದ ಕುರುವಕದಲರಂ ॥ ೩೬ ॥

ನುತವನಲಕ್ಷ್ಮಿಯ ಭಾಳಾಂ
ಕಿತತಿಲಕಮದಕ್ಕುಮೆಂದು ನಡೆನೋಡಿ ಸಮು।
ನ್ನತಕುಸುಮಮನಾಗಿಸಿ ತಾಂ
ಸತಿಯೊರ್ವಳ್ತಿಱಿದಳಮರ್ದ ತಿಲಕದ ಪೂವಂ ॥ ೩೭ ॥

ನೋಡೆ ಮನಕ್ಕಮರ್ದಿಂಪಂ
ಮಾಡದೆ ಪೇೞ್ನಿನ್ನ ರೂಪಮೆಂದುರ್ಬಿಸಿ ಮಾ।
ತಾಡುತ್ತೊರ್ವಳ್ತಿಱಿದಳ್
ನಾಡೆ ವಿಜೃಂಭಿಸುವ ಕರ್ಣಿಕಾರದ ಪೂವಂ ॥ ೩೮ ॥

೩೪. ಮನ್ಮಥನಿಗೆ ನಾನು ಪ್ರೀತಿಯ ಬಾಣವೆಂದೆನಿಸಿರಲು ಬಳಿಕ ತಾನು ಕೂಡ ಬಾಣವೆಂದು ಗರ್ವಿಸಿರುವುದೆಂದು ಅತಿಕೋಪದಿಂದ ಚೆನ್ನಾದ ಒಳ್ಳೆಯ ಪಾದಗಳನ್ನು ಬಲವಾಗಿ ನೆಲಕ್ಕೆ ಬಡಿಯುವಂತೆ, ಅತ್ಯಾನಂದ ಹೊಂದಿದ ಸ್ತ್ರೀಯೋರ್ವಳು ಒದೆದು ಅರಳುವಂತೆ ಮಾಡಿ ಅಶೋಕದ ಹೂವನ್ನು ಕೊಯ್ದಳು. ೩೫. ಪ್ರಸಿದ್ಧಿಯಾದ ನನ್ನ ತುಟಿಗಳ ಅಮೃತಕ್ಕೆ ಎಲ್ಲರಿಂದಲೂ ಮಾನ್ಯ ಎನ್ನುತ್ತ ಸಿಹಿಯಾದ ಮುಕ್ಕುಳಿಸಿದ ನೀರಿನಿಂದ ಹೂವೇರಿಸಿ ಸುಂದರ ದಂತಗಳುಳ್ಳ ಸುಂದರಿಯೋರ್ವಳು ಸುಂದರವಾದ ಬಕುಳದ ಹೂವನ್ನು ಕೊಯ್ದಳು. ೩೬. ಬೆವರಿಗೆ ತಂಪು, ತಂಪಿಗೆ ಅತಿ ಬೆವರನ್ನು ಕೊಡುವ ನನ್ನ ಮೊಲೆಯ ಸ್ಪರ್ಶವನ್ನು ನೋಡೆಂದು ಒಮ್ಮೆ ಬಿಗಿಯಾಗಿ ಅಪ್ಪಿ ಅರಳಿದ ಮದರಂಗಿಯ ಹೂವನ್ನು ಹೆಮ್ಮೆಯಿಂದ ಒಬ್ಬಳೇ ಕೊಯ್ದಳು. ೩೭. ಹೊಗಳುವ ವನಶ್ರೀಯ ಹಣೆಯ ಮೇಲಣ ಬೊಟ್ಟಿಗೆಂದು ಚೆನ್ನಾಗಿ ನೋಡಿ ಎತ್ತರದಲ್ಲಿರುವ ತಿಲಕದ ಹೂವನ್ನು ಕೈಗೆಟುಕುವಂತೆ ಮಾಡಿ ಸುಂದರಿಯೋರ್ವಳು ಕಿತ್ತಳು. ೩೮. ನೋಡಿದ ಮಾತ್ರಕ್ಕೆ ನಿನ್ನ ರೂಪವು ಮನಸ್ಸಿಗೆ ಹಿತವನ್ನುಂಟು ಮಾಡುವುದಿಲ್ಲವೆ ಹೇಳು ಎಂದು ಉಬ್ಬಿಸಿ ಮಾತನಾಡುತ್ತ ಶೋಭಿಸುವ

ಘನಮಧುಪಾಳಿಯ ಸಲೆ ಚುಂ
ಬನಕೆಡೆಯಾಗದ ಲತಾಂತವಿಟಪಿ ನೀನೆಂ।
ದೆನುತುಂ ಪೊಗಟುತ್ತೆಱೆಸಿ
ಮಿಸುಪೆಳೆಸಂಪಗೆಯ ಪೂವಂ ತಿಱಿದಳದೊರ್ವಳ್ ॥ ೩೯ ॥

ಕಣ್ಗೊಳೆ ಧಾತ್ರಿಗೆ ನಿನ್ನನಿ
ವಣ್ಗಳ ರಸಮಮರ್ದು ತಪ್ಪದೆಂದಂಟುವವೋಲ್।
ವೆಣ್ಗರುವೆ ಮೆಟ್ಟಲಲರ್ದಿರೆ
ನುಣ್ಗೆಗ್ನೆಯಂ ಪಿಡಿದು ಕೊಯ್ದಳಾಮ್ರದ ಪೂವಂ ॥ ೪೦ ॥

ಮಧುರಾಮೋದಮನಾಂತುಱು
ಮಧುಪಂಗೆಡೆಯಾದುದೆಂದು ನೋಡಿ ನಗುವವೋಲ್।
ವಿಧುಮುಖಿಯೊರ್ವಳ್ನಕ್ಕಲ
ರ್ದಧಿಕೋದ್ಗಮಮಂ ನಮೇರುಕುಜದೊಳ್ತಿಱಿದಳ್ ॥ ೪೧ ॥

ಸುಮನೋಮಂಜರಿಗೊಲ್ದೆಱಿಪ್ಪ ಮಧುಲಿಟ್‌ಝೇಂಕಾರಮಂ ಸೊಂಪುವೆ
ತ್ತಮನೋಜ್ಞಶ್ರುತಿಮಾಡಿಕೊಂಡು ರತಿ ಭಾಸ್ವಚ್ಚೈತ್ರಪಂಚಾಸ್ತ್ರಚಂ
ದ್ರಮರೊಪ್ಪಂಬಡೆದಂಕಮಾಲೆಗಳನಾಗಲ್ಪಾಡಿ ಕೊಯ್ದಳ್ವಿಕಾ
ಸಮಮಂದ್ಯೆದಿಸಿ ತಾಂ ಪ್ರಿಯಾಲಸುಮಮಂ ಪೆಣ್ಣೊರ್ವಳಾನಂದದಿಂ ॥ ೪೨ ॥

ಪೊಸಬಾಸೆಯ ಚೆಲ್ವಂ ನಿ
ಟ್ಟಿಸಲಾಂ ಮೊಲೆ ಕಾಣಲೀಯವೆಂದುಱು ಸುಯ್ವಂ।
ತುಸುರಂ ಪಸರಿಸಿ ಯಲರೇ
ಱೆಸಿದಳ್ ಸಿಂಧುವಾರದಲರನದೊರ್ವಳ್ ॥ ೪೩ ॥

ಬೆಟ್ಟದಾವರೆ ಹೂವನ್ನು ಚೆನ್ನಾಗಿ ಕಿತ್ತಳು. ೩೯. ವಿಸ್ತಾರವಾದ ದುಂಬಿಗಳ ಗುಂಪಿನ ಸೊಗಸಾದ ಚುಂಬನಕ್ಕೆ ಸಾಧ್ಯವಾಗದ ವೃಕ್ಷದ ಹೂವು ನೀನು ಎಂದು ಓರ್ವಳು ಹೊಗಳಿ ಕೈಚಾಚಿ ಹೊಳೆಯುವ ಸಂಪಗೆಯ ಹೂವನ್ನು ಕಿತ್ತಳು. ೪೦. ಭುವಿಯ ಕಣ್ಣಿಗೆ ಅಂದವಾಗಿ ಕಾಣುವ ನಿನ್ನ ಸಿಹಿಯಾದ ಹಣ್ಣುಗಳ ರಸವು ಅಮೃತ ಸಮಾನ. ಇದು ತಪ್ಪದು ಎಂದು ಮುಟ್ಟುವ ರೀತಿಯಲ್ಲಿ ಗುರುವಿಕೆಯಿಂದ ಕೂಡಿರುವ ಸ್ತ್ರೀಯೋರ್ವಳು ನುಣುಪಾದ ಕೊಂಬೆಯನ್ನು ಹಿಡಿದು ಮೆಟ್ಟಿ ಮಾವಿನ ಮರದ ಹೂವು ಅರಳಿರಲು, ಅದನ್ನು ಹಿಡಿದು ಕೊಯ್ದಳು. ೪೧. ಮಧುರವಾದ ಸುವಾಸನೆಯನ್ನು ಹೊಂದಿ ದುಂಬಿಗಳಿಗೆ ಚೆನ್ನಾಗಿ ಆಹಾರವಾಯಿತು ಎಂದು ನೋಡಿ ಹಾಸ್ಯಮಾಡುವ ರೀತಿಯಲ್ಲಿ ಚಂದ್ರಮುಖಿಯೋರ್ವಳು ನಕ್ಕು ಅಪಾರವಾದ ಹೂವುಗಳನ್ನು ಸುರಗಿಯ ಮರದಲ್ಲಿ ಕಿತ್ತಳು. ೪೨. ಹೂಗಳ ಗೊಂಚಲಿಗೆ ಒಲಿದು ಕವಿಯುವ ದುಂಬಿಯ ಝೇಂಕಾರವನ್ನು ಸಂತೋಷದಿಂದ ಹೃದಯಂಗಮವಾದ ಶ್ರುತಿಯನ್ನಾಗಿ ಮಾಡಿಕೊಂಡು ರತಿ ಹಾಗೂ ಹೊಳೆವ ವಸಂತ-ಮನ್ಮಥ-ಚಂದ್ರನಿಗೆ ಒಪ್ಪಿಗೆಯಾಗುವ ಬಿರುದುಗಳ ಮಾಲೆಯನ್ನು ಸೊಗಸಾಗಿ ಹಾಡಿದ ಹೆಣ್ಣೋರ್ವಳು ಆನಂದದಿಂದ ಪ್ರಿಯಾಲವೃಕ್ಷದ ಹೂವನ್ನು ಕೊಯ್ದಳು. ೪೩. ನಾಭಿಯಿಂದ ಎದೆಯವರೆಗಿನ

ಮತ್ತಮದಲ್ಲದೆ,

ಪಾದರಿ ಮೊಲ್ಲೆ ಮಲ್ಲಿಗೆ ಸುಮಾಧವಿ ಸಂಪಗೆ ಮಾವು ಪೊನ್ನೆ ಪೊಂ
ಗೇದಗೆ ತೋರ್ಪಶೋಕೆ ಪೊಸಬಂಧುಗೆ ಗೋರಟೆ ಕಂಜಮುತ್ಪಲಂ।
ಜಾದಿ ನಮೇರುಮುಖ್ಯಮೆನಿಸಿರ್ದ ಲತಾಂತನಿಕಾಯಮಂ ಘನಾ
ಮೋದದಿನಂದು ಕೂರ್ತು ತಿಱಿದತ್ತೆಡೆಯಾಡಿ ವಧೂಕದಂಬಕಂ ॥ ೪೪ ॥

ಮನಸಿಜನ ಪಡೆ ಮಸಗಿ ಧಾಳಿಯಂ ಪರಿವಂತೆ
ನನೆಗಣೆಗಳಣೆಯರಂ ಕೊರ್ವಿ ಸಂಚರಿಪಂತೆ।
ಪೊಸಗಂಪಿನಂಕುರಂಗಳ್ ಪೆರ್ಚಿ ಸುೞಿವಂತೆ
ಮಿಸುಪ ಗಾಡಿಯ ಲತೆಗಳ್ಬೈದೆ ಕುಡಿವರಿವಂತೆ ॥ ೪೫ ॥

ಲಾವಣ್ಯರಸತಟಿನಿ ಮೆಲ್ಲನಡಿಯಿಡುವಂತೆ
ಭಾವಕಿಯರಲರ್ಗಳಂ ತಿಱಿಯಲೆಂದೋರಂತೆ।
ಮಿಱುಪ ಸೊಂಪಮರ್ದ ಸೋರ್ಮುಡಿ ಬೆನ್ನೊಳೊಲಿದಾಡೆ
ಮಱಿದುಂಬಿಗುರುಳ್ಗಳಳಿಕಸ್ಥಲದೊಳೊಲೆದಾಡೆ ॥ ೪೬ ॥

ಕಡೆಗಣ್ಣ ನುಣ್ಗದಿರ್ಬೆಳ್ದಿಂಗಳಂ ತೋಱಿ
ನಿಡುಸುಯ್ಯಲರ್ ನವಸುಗಂಧಮನೆ ನೆಱಿ ಬೀಱಿ।
ಮಿನುಪ ಪಾಲ್ಗಡಲ ನಗೆವೀಚಿಗಳನಂದೊತ್ತೆ
ಸೊನೆಬೆಮರ್ಚಂದ್ರಮಂಡಲವದನಮಂ ಪತ್ತೆ ॥ ೪೭ ॥

ಕೂದಲ ಚೆಲುವಿಕೆಯನ್ನು ನೋಡ ಹೊರಟ ನಾನು ಮೊಲೆಯನ್ನೇ ಕಾಣಲಾಗಲಿಲ್ಲವೆಂದು ವಿಶೇಷವಾಗಿ ನಿಟ್ಟುಸಿರನ್ನು ಹೊರಸೂಸಿ ಸಿಂಧುವಾರ ಮರದ ಹೂವನ್ನು ಓರ್ವಳು ಕಿತ್ತಳು. ವ॥ ಮತ್ತೆ ಅದಲ್ಲದೆ, ೪೪. ಪಾದರಿ, ಮೊಲ್ಲೆ, ಮಲ್ಲಿಗೆ, ಮಾಧವಿ, ಸಂಪಿಗೆ, ಮಾವು, ಹೊನ್ನೆ, ಹೊಂಗೇದಗೆ, ಅಶೋಕ, ಬಂದೂಕ, ಗೋರಟೆ, ಕಮಲ, ಉತ್ಪಲ, ಜಾಜಿ, ಸುರಗಿ - ಇವೇ ಮೊದಲಾದ ಹೂಗಳ ಮೊತ್ತವನ್ನು ಅತ್ಯಾನಂದದಿಂದ ಪ್ರೀತಿಪಟ್ಟು ಹೆಂಗಳೆಯರ ಬಳಗವು ಸುತ್ತಾಡಿಕೊಯ್ದಿತು. ೪೫. ಮನ್ಮಥನ ಸೈನ್ಯವು ಅರ್ಭಟಿಸಿ ದಾಳಿಯನ್ನು ಮಾಡಲು ಬಂದಂತೆ, ಮೊಗ್ಗಿನ ಬಾಣಗಳು ಅತಿಶಯವಾಗಿ ಕೊಬ್ಬಿ ಸಂಚರಿಸುವಂತೆ, ಹೊಸಕಂಪಿನ ಚಿಗುರುಗಳು ಉಬ್ಬಿ ಸುಳಿದಾಡುವಂತೆ, ಹೊಳೆವ ಸುಂದರವಾದ ಬಳ್ಳಿಗಳು ಕುಡಿಯೊಡೆದು ಹರಿಯುವಂತೆ, ೪೬. ಲಾವಣ್ಯರಸದ ತೊರೆಯು ಮೆಲ್ಲನೆ ಹರಿದು ಬರುವಂತೆ, ಸುಂದರಿಯರು ಹೂಗಳನ್ನು ಕೊಯ್ಯಲೆಂದು ಬರಲು ಹೊಳೆಯುವ ಸೊಂಪಾಗಿ ಬೆಳೆದ ಬಳಲ್ಮುಡಿಯು ಬೆನ್ನಿನಲ್ಲಿ ಅಲುಗಾಡಲು, ಎಳೆಯ ಕಪ್ಪು ಮುಂಗುರುಳುಗಳು ಹಣೆಯ ಮೇಲೆ ತೊನೆದಾಡಲು, ೪೭. ಕಡೆಗಣ್ಣ ನುಣ್ಣನೆಯ ಕಾಂತಿಯು ಬೆಳುದಿಂಗಳನ್ನು ಕಾಣಿಸಲು, ನಿಟ್ಟುಸಿರು ಹೊಸ ಸುಗಂಧವನ್ನು ಚೆನ್ನಾಗಿ ಪ್ರಕಟಪಡಿಸಲು, ಹೊಳೆವ ಹಾಲುಗಡಲಿನ ನಗೆಯು ತೆರೆಗಳನ್ನುಂಟುಮಾಡಲು, ಕಿರುಬೆವರು

ಕಂಪಿಸೆ ರಥಾಂಗನಿಭವಕ್ಷೋಜಮಂಡಲಂ
ತಾಂ ಪೊಯ್ಯೆ ನುಣ್ಗದಂಪಂ ಕರ್ಣಕುಂಡಲಂ।
ತುಂಗಸ್ತನಾಚ್ಛನ್ನವಸ್ತ್ರಾಂಚಲಂ ಜಗುೞೆ
ಕಂಗೊಳಿಪ ಕಂಕಣಝಣತ್ಕಾರದುಲಿ ನೆಗೞೆ ॥ ೪೮ ॥

ಕಮನೀಯಕನಕಕಾಂಚೀಕಳಧ್ವನಿ ಪರ್ವೆ
ವಿಮಲಮಾಣಿಕ್ಯಮಂಜೀರದಿಂಚರಮುರ್ವೆ।
ನಿಲ್ಲದೆಡೆಯಾಡಿ ಮಘಮಘಿಪ ಪೊಸವೂಗಳಂ
ಸಲ್ಲಲಿತಪರಿಮಳವನೀವ ಪೊಸವೂಗಳಂ ॥ ೪೯ ॥

ನಡೆನೋಡಿಕೊಂಡು ಪೂಗಿಡುಗಳೊಳಗಾಂ ಪೊಕ್ಕು
ಕಡು ಮಿಱುಪ ಪುಷ್ಪಮಂ ತಿಱಿಯೆ ಹರ್ಷಂಮಿಕ್ಕು।
ತುಂಬಿಗಳ್ತುಱಿಯದಿನಿಗಂಪಮರ್ದ ಪೂಗಳಂ
ಇಂಬಾಗಿ ಕಂಪನೆಣ್ದೆಸೆಗೀವ ಪೂಗಳಂ ॥ ೫೦ ॥

ನಡೆನೋಡಿ ಕಂಜಮುಖಿಯರ್ಮಂಜುಕುಂಜಮಂ
ನಿಡುಗಣ್ಣ ನೀೞೆಯರ್ಕಲ್ಹಾರಪುಂಜಮಂ।
ಚಂಚಲಾಪಾಂಗೆಯರ್ಸಣ್ಣ ಮಲ್ಲಿಗೆಗಳಂ
ಕಾಂಚನಲತಾಂಗಿಯರ್ದುಂಡುಮಲ್ಲಿಗೆಗಳಂ ॥ ೫೧ ॥

ತಿಲಕುಸುಮಘ್ರಾಣೆಯರ್ಸಂಪಗೆಯ ನನೆಗಳಂ
ಜಲಜಾತಗಂಧಿಯರ್ಮಾಲತಿಯ ನನೆಗಳಂ।
ಕೆಂಬಲ್ಲ ಸೊಬಗಿಯರ್ಮೊಲ್ಲೆಯ ಮುಗುಳ್ಗಳಂ
ಬಿಂಬಾಧರೆಯರೆಸೆವ ಬಂದುಗೆಯ ಮುಗುಳ್ಗಳಂ ॥ ೫೨ ॥

ಮುಖಚಂದ್ರವನ್ನು ಸೇರಲು, ೪೮. ಚಕ್ರವಾಕ ಪಕ್ಷಿಗಳಂತಿರುವ ಮೊಲೆಗಳು ಕಂಪಿಸಲು, ಕರ್ಣಕುಂಡಲಗಳು ನುಣುಪಾದ ಕೆನ್ನೆಗಳನ್ನು ತಾಗಲು, ಉನ್ನತವಾದ ಮೊಲೆಗಳನ್ನು ಕವಿದ ವಸ್ತ್ರದ ಸೆರಗು ಜಾರಲು, ಕಣ್ಣಿಗೆ ಅಂದವಾದ ಕೈಬಳೆಗಳ ಝಣತ್ಕಾರದ ದನಿಯುಂಟಾಗಲು, ೪೯. ಮನೋಹರವಾದ ಚಿನ್ನದ ಕಟಿಸೂತ್ರದ ಗೆಜ್ಜೆಗಳ ಧ್ವನಿಯು ಹೆಚ್ಚಾಗಲು, ಶುಭ್ರವಾದ ಮಾಣಿಕ್ಯದ ಕಾಲ್ಗಡಗದ ಮಧುರ ಧ್ವನಿ ತೀವ್ರವಾಗಲು, ಒಂದೆಡೆ ನಿಲ್ಲದೆ ಸುತ್ತಾಡಿ ಮಘ ಮಘಿಸುವ ಹೊಸ ಹೂಗಳನ್ನು ಆಹ್ಲಾದಕರ ಪರಿಮಳವನ್ನು ಹೊರಸೂಸುವ ಹೊಸ ಹೂಗಳನ್ನು, ೫೦. ಚೆನ್ನಾಗಿ ನೋಡುತ್ತಾ ಹೂಗಿಡಗಳ ನಡುವೆ ಹೊಕ್ಕು ಚೆನ್ನಾಗಿ ಹೊಳೆವ ಹೂವನ್ನು ಕಿತ್ತು ಆನಂದವು ಮೀರಿ ತುಂಬಿಗಳು ತುಳಿಯದ ಸುವಾಸನೆಯನ್ನು ಹೊಂದಿರುವ ಹೂವುಗಳನ್ನು, ಚೆನ್ನಾಗಿ ಮಾಧುರ್ಯವನ್ನು ಎಂಟೂ ದಿಕ್ಕುಗಳಿಗೆ ಹರಡುವ ಹೂವುಗಳನ್ನು, ೫೧. ಚೆನ್ನಾಗಿ ಪರೀಕ್ಷಿಸಿದ ಕಮಲಮುಖಿಯರು ಮನೋಹರವಾದ ವೃಕ್ಷಗಳನ್ನು, ವಿಶಾಲಾಕ್ಷಿಯರು ಸುಂದರಿಯರು ನೈದಿಲೆಗಳ ಸಮೂಹವನ್ನು, ಚಂಚಲವಾದ ಕಡೆಗಣ್ನೋಟವುಳ್ಳವರು ಸಣ್ಣ ಮಲ್ಲಿಗೆ ಹೂಗಳನ್ನು, ಸುವರ್ಣ ಲತೆಯರು ದುಂಡು ಮಲ್ಲಿಗೆಗಳನ್ನು , ೫೨. ತಿಲಮರದ ಹೂವುಗಳ ಸುವಾಸನೆಯನ್ನು ನೋಡುವವರು ಸಂಪಗೆಯ

ಶುಕಚಾರುವಾಣಿಯರ್ಸುರಹೊನ್ನೆಯಲರ್ಗಳಂ
ಪಿಕನಿನಾದೆಯರೊಲ್ದು ಸುರಗಿಯ ಮಲರ್ಗಳಂ।
ನುತಕಂಬುಕಂಠೆಯರ್ನೂತ್ನಕರವೀರಮಂ
ಸಿತಕಿರಣಬಿಂಬಮುಖಿಯರ್ಸಿಂಧುವಾರಮಂ ॥ ೫೩ ॥

ಬೇಟದ ಬೆಡಂಗಿಯರ್ಪಾಟಳಿಯ ಕುಸುಮಮಂ
ಕೂಟದ ವಿದಗ್ಧೆಯರ್ಕುರುವಕದ ಕುಸುಮಮಂ।
ಚೆಂದಳದ ಚೆಲ್ವೆಯರಶೋಕೆಯ ತಳಿರ್ಗಳಂ
ಮಂದಯಾನದ ಸತಿಯರಾಮ್ರದೆಳೆದಳಿರ್ಗಳಂ ॥ ೫೪ ॥

ಶಾತನಖಿದಬಲೆಯರ್ಕೇತಕಿಯೆಸಳ್ಗಳಂ
ಶೋಣಾಧರೆಯರಚ್ಚಮರುಗದೊಳ್ಳೆಸಳ್ಗಳಂ।
ಲೀಲೆಬಿಡದುರ್ವಿ ಕಡುಗೊರ್ವಿ ಮಿಗೆ ಕುಡಿವಜೆಯೆ
ಲೋಲನೇತ್ರಾಂತರುಚಿರಾಜಿ ವಿಸಟಂಬರಿಯೆ ॥ ೫೫ ॥

ತಿಜೆದರಿನಿಗಂಪಮರ್ದ ಸಕಲಪುಷ್ಪಂಗಳಂ
ಸಜೆಮಿಂಡಿಯರ್ಮನಂಗೊಳಿಪ ಪುಷ್ಪಂಗಳಂ ॥ ೫೬ ॥

ಪರಿಮಳಕೊಲ್ದೆಜಿಪಿಂದಿಂ
ದಿರತತಿಯಂ ಸೋವುತ್ತೆದೆ ಮಘಮಘಿಪ ಮನೋ।
ಹರಕುಸುಮಪ್ರಸರಮನುರು
ತರಮುದದಿಂ ತಿಜೆಯುತೆಸೆದರಂಬುಜಮುಖಿಯರ್ ॥ ೫೭ ॥

ಮೊಗ್ಗುಗಳನ್ನು, ಕಮಲಗಂಧಿಯರು ಮಾಲತಿಯ ಮೊಗ್ಗುಗಳನ್ನು, ಕೆಂಪಾದ ಹಲ್ಲುಗಳುಳ್ಳ ಸುಂದರಿಯರು ಮೊಲ್ಲೆಯ ಮೊಗ್ಗುಗಳನ್ನು, ತೊಂಡೆ ಹಣ್ಣಿನಂತಹ ಕೆಳದುಟಿಯುಳ್ಳವರು ಬಂದು ಕಮರದ ಮೊಗ್ಗುಗಳನ್ನು, ೫೩. ಗಿಳಿಯಂತೆ ಮನೋಹರವಾಗಿ ಮಾತನಾಡುವವರು ಸುರ ಹೊನ್ನೆಯ ಹೂವುಗಳನ್ನು, ಕೋಗಿಲೆಯ ದನಿಯವರು ಪ್ರೀತಿಪಟ್ಟು ಸುರಗಿಯ ಹೂವುಗಳನ್ನು, ಹೊಗಳಲ್ಪಡುವ ಶಂಖದಂತೆ ಕೊರಳುಳ್ಳವರು ಎಳೆಯ ಕರವೀರ ಪುಷ್ಪವನ್ನು, ಚಂದ್ರಮುಖಿಯರು ಸಿಂಧುವಾರ ಮರದ ಪುಷ್ಪವನ್ನು, ೫೪. ಕಾಮಾಸಕ್ತ ಬೆಡಗಿಯರು ಪಾಟಳಿಯ ಹೂವನ್ನು, ಕೂಟದ ಪ್ರೌಢೆಯರು ಮದರಂಗಿಯ ಹೂವನ್ನು, ಕೆಂಪಾದ ಅಂಗೈಯುಳ್ಳ ಚೆಲುವೆಯರು ಅಶೋಕೆಯ ಚಿಗುರುಗಳನ್ನು, ಮಂದನಡಿಗೆಯುಳ್ಳ ಸ್ತ್ರೀಯರು ಮಾವಿನ ಎಳೆಯ ಚಿಗುರುಗಳನ್ನು, ೫೫. ಮೊನಚಾದ ಉಗುರುಗಳ ಸುಂದರಿಯರು ಕೇತಕಿಯ ಮೊಗ್ಗನ್ನು, ಕೆಂದುಟಿಯ ಚೆಲುವೆಯರು ಅಚ್ಚಮರುಗದ ಎಳಸುಗಳನ್ನು ವಿಲಾಸಯುಕ್ತರಾಗಿ ಉಬ್ಬಿಕೊಬ್ಬಿ ಚಂಚಲನೇತ್ರಗಳ ಕಿರಣಗಳ ಸಮೂಹವನ್ನು ಚೆಲ್ಲಾಪಿಲ್ಲಿಯಾಗುವಂತೆ ಚೆನ್ನಾಗಿ ಹರಡಿ, ೫೬. ಮಧುರವಾದ ಸುವಾಸನೆಯುಳ್ಳ ಎಲ್ಲಾ ಬಗೆಯ ಹೂವುಗಳನ್ನು ಮನಸ್ಸನ್ನು ಆಕರ್ಷಿಸುವ ಪುಷ್ಪಗಳನ್ನು ಸಮನಾದ ಪ್ರಾಯದ ಸುಂದರಿಯರು ಕೊಯ್ದರು. ೫೭. ಪರಿಮಳವನ್ನು ಬಯಸಿ ಕವಿಯುವ ದುಂಬಿಗಳ ಸಮೂಹವನ್ನು ಚೆನ್ನಾಗಿ ಹೊಡೆದೋಡಿಸುತ್ತ ಗಮಗಮಿಸುವ ಮನೋಹರವಾದ ಹೂಗಳ

ಇಂತಮರ್ದು ಪೊಸಗಂಪಂ ದೆಸೆದೆಸೆಗೆ ಪಸರಿಪ ಕುಸುಮವಿಸರಮನಸವಸದಿಂದೊಸೆದು ತಿಱಿವ ಸಖೀಜನಮಣಿಯೊರ್ವಳ್,

ಎಡಗಾಲಂ ನೆಲಕೂರಿ ದಕ್ಷಿಣಪದಾಂಭೋಜಾತಮಂ ಸಾರ್ಚಿ ಮೇ
ಗಡೆಯೊಳ್ನಿಲ್ತಮರ್ದಪ್ಪಿ ಜೋಲ್ವವರಶಾಖಾಗ್ರಮಂ ನಲ್ಮೆಯಿಂ।
ಪಿಡಿದೊಪ್ಪಂಬಡೆದಚ್ಚಪಾದರಿಯ ಪೂವಂ ಕೊಯ್ದಳಂದ್ಯೈದೆ ಕ
ನ್ನಡಿಸಲ್ತತ್ತನುಭಾವಮುಜ್ವಲಿಪ ವೃಕ್ಷಾರೋಹಣಪ್ರೌಢಿಯಿಂ ॥ ೫೮ ॥

ಅಳಿವೈರಿಯೆಂಬ ಮಾತಂ
ಕಳೆದಪೆನಾಸುಂದರಿಯ ಕುರುಳ್ದುಂಬಿಗಳೊ।
ಳ್ಕೆಳೆತನಮನಿತ್ತೆನುತ್ತೊ
ರ್ವೆಳೆಯಳ್ಕೊಯ್ದಳ್ನವೀನಚಂಪಕದಲರಂ ॥ ೫೯ ॥

ಮೊಗವೆತ್ತಿ ನಿಳ್ಕಿ ಪೊಸಸಂ
ಪಗೆಗೊಂಬಂ ಪಿಡಿದು ಪೂಗಳಂ ತಿಱುವಾಪೆ।
ಣ್ಬಗೆಗೊಂಡಳ್ಮಡಕೆಟಿಲ
ಲ್ಮಿಗೆ ಜಡಿವಂಗಜನ ಪೊಂಗಿನಿಂಗೋಲ್ವಿಲ್ಲೋಲ್ ॥ ೬೦ ॥

ಮತ್ತಮದಲ್ಲದೆ,

ನಾಡೆ ಮುತ್ತಿ ಮುಸುಂಕುತಿರ್ಪ್ಪುರುಚಂಚರೀಕನಿಕಾಯಮಂ
ಕೂಡೆ ಸೋವುತೆ ಕಂಪನೆಣ್ದೆಸೆಗೀವ ಮಲ್ಲಿಗೆಪೂಗಳಂ।
ಗಾಡಿಕಾರ್ತಿಯದೊರ್ವಳೊಯ್ಯನೆ ಕೊಯ್ದಳಿಂಗದಿರ್ದೊಂಗಲಂ
ನೋಡಿ ಕೌತುಕದಿಂ ತುಡುಂಕುವ ಸಚ್ಚಕೋರಿಕೆ ಯೆಂಬಿನಂ ॥ ೬೧ ॥

ಸಮೂಹವನ್ನು ಅತ್ಯಾನಂದದಿಂದ ಕಮಲಮುಖಿಯರು ಕೀಳುತ್ತ ಆನಂದಗೊಂಡರು. ವ॥ ಹೀಗೆ ನವೀನವಾದ ಕಂಪನ್ನು ಹೊಂದಿ ದಿಕ್ಕು ದಿಕ್ಕುಗಳಿಗೆ ಹರಡುವ ಹೂಗಳ ಸಮೂಹವನ್ನು ಬೇಗ ಬೇಗನೆ ಪ್ರೀತಿಯಿಂದ ಕೀಳುವ ಸಖೀ ಜನರಲ್ಲಿ ಮುಖ್ಯಳಾದವಳೊಬ್ಬಳು, ೫೮. ಎಡಗಾಲನ್ನು ನೆಲಕ್ಕೆ ಊರಿ, ಬಲಗೈಯನ್ನು ಮೇಲುಗಡೆಯಲ್ಲಿ ಚೆನ್ನಾಗಿ ಅಪ್ಪಿಕೊಂಡಂತೆ ಬಾಗಿರುವ ಮರದ ಕೊಂಬೆಯ ತುದಿಯನ್ನು ಪ್ರೀತಿಯಿಂದ ಹಿಡಿದು ಕಾಂತಿಯುಕ್ತವಾದ ಪಾದರಿಯ ಹೂವನ್ನು ತನ್ನ ಶರೀರದ ಹಾವಭಾವಗಳು ಚೆನ್ನಾಗಿ ಬಿಂಬಿಸುವಂತೆ ಶ್ಲಾಘ್ಯವಾದ ಮರವೇರುವ ಧೈರ್ಯದಿಂದ ಕೊಯ್ದಳು. ೫೯. ಆ ಸುಂದರಿಯ ಕಪ್ಪಾದ ಮುಂಗುರುಳುಗಳಲ್ಲಿ ಗೆಳೆತನವನ್ನುಂಟುಮಾಡಿ ದುಂಬಿಗಳ ಶತ್ರುವೆಂಬ ಮಾತನ್ನು ನಿವಾರಿಸುವೆನು ಎನ್ನುತ್ತ ಓರ್ವ ಸುಂದರಿಯು ಎಳೆಯ ಸಂಪಿಗೆ ಹೂವನ್ನು ಕೊಯ್ದಳು. ೬೦. ಮುಖವನ್ನು ಮೇಲೆತ್ತಿ ಸಂಪಿಗೆಯ ಮರದ ಕೊಂಬೆಯನ್ನು ಹಿಡಿದು ಹೂವನ್ನು ಕೀಳುವ ಆ ಹೆಣ್ಣು ಮನ್ಮಥನು ಹಿಗ್ಗಿನಿಂದ ತನ್ನ ಬಿಲ್ಲನ್ನು ಸೆಳೆಯುವಂತೆ ಹಿಮ್ಮಡಿಗೆ ತನ್ನ ಜೋಲುವ ಕೂದಲನ್ನು ತಾಗಿಸಿ ಮನಸ್ಸನ್ನು ಸೂರೆಗೊಂಡಳು. ವ॥ ಮತ್ತೆ ಅದಲ್ಲದೆ, ೬೧. ಚೆನ್ನಾಗಿ ಕವಿದು ಆವರಿಸುತ್ತಿರುವ ದುಂಬಿಗಳ ಸಮೂಹವನ್ನು ಕೂಡಲೇ ಓಡಿಸುತ್ತ ಸುವಾಸನೆಯನ್ನು ಎಂಟೂ ದಿಕ್ಕುಗಳಿಗೆ ಕೊಡುವ

ಮಲ್ಲಿಗೆಯಲರಂ ಕೊಯ್ಕಲ್
ಮೆಲ್ಲನೆ ಕೈಯಿಕ್ಕಲೊಗೆದ ನಖಿರದ್ಯುತಿಯಂ।
ಮಲ್ಲೀಕುಟ್ಮಲಮೆಂದಾ
ನಲ್ಲಳ್ಬಯಲಂ ತುಡುಂಕಿ ಕೌತುಕಮಾಂತಳ್ || ೬೨ ||

ಮತ್ತಮದಲ್ಲದೆ,

ಬೆಳರ್ವಣ್ಣದ ಗಜೆಯಂ ಮಣಿ
ಹಿಳುಕಿಂ ನೆಗಟ್ದಿತನುಶರಮನೊದಗಿಸುವ ಸುಮಾ।
ವಳಿಯೆನಲಂಗನೆಯೊರ್ವಳ್
ತೊಳಗುವ ಸುರಹೊನ್ನೆ ಯಲರ್ಗಳಂ ನೆಱ ಕೊಯ್ದಳ್ || ೬೩ ||

ಪೊಡವಿಯನೊತ್ತಿ ಮೆಟ್ಟಿ ನಸುಗುಂಕಿಸಿ ಗೋಣ ನೆಳಲ್ದ ಶಾಖೆಯಂ
ಪಿಡಿದು ನಮೇರುಮಂಜರಿಯನೀಕ್ಷಿಪ ಕಾಂತೆಯ ಸುಯ್ಯ ಗಂಧಕಿಂ।
ಪಿಡಿದಲರ್ಜೊಂಪ ತಾಟಿಪಳಿಮಾಲೆ ಮುಖದ್ಯುತಿಲಕ್ಷ್ಮಿಗೆತ್ತಿದು
ಗ್ಗಡದ ಸಿತಾತಪತ್ರದ ಸುನೀಲದ ದಂಡದವೋಲ್ವಿರಾಜಕುಂ || ೬೪ ||

ಒಸೆದಪ್ಪಿ ಮಹೀಜಮನಿಮಿ
ರ್ದಸುಗೆಯ ಪೂಗೊಯ್ಯುತೆಸೆದಳಸಿಯಳದೊರ್ವಳ್।
ಪೊಸಸಂಜೆಗೆಂಪಿನ ವಿಜೃಂ
ಭಿಸುವ ಮುದಂಬಡೆದು ತಳೆದ ಸಂಧ್ಯಾಂಗನೆಯೊಲ್ || ೬೫ ||

ಮಲ್ಲಿಗೆ ಹೂಗಳನ್ನು ಸುಂದರಿಯೊರ್ವಳು ಬೆಳುದಿಂಗಳಿನ ಕಿರಣಗಳ ಗೊಂಚಲನ್ನು ನೋಡಿ ಅತ್ಯಾಸಕ್ತಿಯಿಂದ ಹಿಡಿಯುವ ಚಕೋರ ಪಕ್ಷಿಯೋ ಎನ್ನುವಂತೆ ಮೆಲ್ಲನೆ ಕೊಯ್ದಳು. ೬೨. ಮಲ್ಲಿಗೆ ಹೂವನ್ನು ಕೊಯ್ಯಲು ಕೈಹಾಕಲು [ಆಗ] ಪ್ರಕಟವಾದ ಉಗುರಿನ ಕಾಂತಿಯನ್ನು ಮಲ್ಲಿಗೆಯ ಮೊಗ್ಗೆಂದು ಭಾವಿಸಿ ಬಯಲನ್ನು ಹಿಡಿದು [ಓರ್ವಳು] ಆಶ್ಚರ್ಯವನ್ನುಂಟು-ಮಾಡಿದಳು. ವ|| ಮತ್ತೆ ಅದಲ್ಲದೆ, ೬೩.ಬಿಳಿಯ ಬಣ್ಣದ ಬಾಣವನ್ನು ಬಾಣದ ತುದಿಯ ಮಣಿಯಿಂದ ಪ್ರಸಿದ್ಧವಾದ ಮದನನ ಬಾಣವನ್ನು ಕೊಡುವ ಹೂಗಳ ಸಮೂಹವೆನ್ನುವಂತೆ ಹೊಳೆಯುವ ಸುರಹೊನ್ನೆಯ ಹೂವುಗಳನ್ನು ಓರ್ವಳು ಕೊಯ್ದಳು. ೬೪. ನೆಲವನ್ನು ಒತ್ತಿ ಮೆಟ್ಟಿ ಕೊರಳನ್ನು ಸ್ವಲ್ಪ ಓರೆಮಾಡಿ ಬಾಗಿರುವ ಕೊಂಬೆಯನ್ನು ಹಿಡಿದು ಸುರಗಿಯ ಹೂವನ್ನು ನೋಡುವ ಹೆಣ್ಣಿನ ಉಸುರಿನ ಸುವಾಸನೆಗೆ ಪರಿಮಳಭರಿತವಾದ ಹೂವಿನ ಜೊಂಪೆಯನ್ನು ತಾಗಿರುವ ದುಂಬಿಗಳ ಸಮೂಹವು ಮುಖದ ಕಾಂತಿಗೆ ಎತ್ತಿದ ಅತಿಶಯವಾದ ಬೆಳ್ಗೊಡೆಯ ನೀಲಿಯ ಕೋಲಿನಂತೆ ವಿರಾಜಿಸುವುದು. ೬೫. ಮರವನ್ನು ಪ್ರೀತಿಯಿಂದ ಅಪ್ಪಿ ಚಾಚಿದ ಅಶೋಕದ ಹೂ ಕೊಯ್ಯುತ್ತ ಸುಂದರಿಯೋರ್ವಳು ಎಳೆಯ ಸಂಜೆಗೆಂಪಿನ ಅತಿಶಯವಾದ ಆನಂದವನ್ನು ಹೊಂದಿದ ಸಂಧ್ಯಾಂಗನೆಯ ರೀತಿಯಲ್ಲಿ

ಮತ್ತಮದೊರ್ವಳ್,

ನವಕಂಕೇಲ್ಲುದ್ಗಮಮಂ
ತವೆ ಕೊಯ್ಯಲ್ಕೆಯ್ಯನಿಕ್ಕಿ ಕರತಲದರುಣ।
ಚ್ಛವಿ ಪಸರಿಸೆ ಪೂತಿಜೆಯದೆ
ಯುವತೀಮಣಿ ಬೆಜಗುಪಟ್ಟು ನೋಡುತ್ತೆಸೆದಳ್ ॥ ೬೬ ॥

ಮತ್ತಮದಲ್ಲದೆ,

ಸುರಗಿಯ ಪೊಸಬಿರುಮುಗಳಂ
ಸರಸಿಜಮುಖಿ ಕೊಯ್ದಳೊರ್ವಳಿನನನಗಲ್ದಾ।
ಮಿರೆ ದರ್ಪಕಂಗೆ ಮುಂಗೈ
ಸುರಗಿಯದಾಗಿರ್ಪೆಯೆಂದು ಮೂದಲಿಸುತ್ತುಂ ॥ ೬೭ ॥

ಸುಮುದಂಬಡೆದೆಮ್ಮಕ್ಷಿಗೆ
ಕುಮುದಂ ತಾನೆನಿಸಿ ಮಾರ್ಮಲೆವುದೆಂದೆನುತುಂ।
ರಮಣೀಮಣಿಯೊರ್ವಳ್ ಕೋ
ಪಮನಾಂತಜೆವಂತೆ ತಿಜಿದಳುತ್ಪಲದಲರಂ ॥ ೬೮ ॥

ನೀವುಂ ಸುಧರ್ಮಪುತ್ರಿಯ
ಪಾವನವದನಕ್ಕೆ ಸಾಟಿಯೆಂದಿರ್ಪಿರಿ ತ।
ದ್ಭಾವೆಯ ಮುಖಮಂ ನೋಡ
ಲ್ತಾವರೆಗಳೆ ಬನ್ನಿ ಮೆನುತೆ ತಿಜಿದಳದೊರ್ವಳ್ ॥ ೬೯ ॥

ನಿಮ್ಮ ಸುಗಂಧಮನಾಕೆಯ
ಧಮ್ಮಿಲ್ಲಕೆ ಕೊಟ್ಟು ಸೌಂದರಿಯಧರರುಚಿಯಂ।
ಸಮ್ಮದದಿಂ ಕೊಳ್ವದೆನು
ತ್ತುಮ್ಮಹದಿಂ ಕುಂದದಲರನೆತ್ತಿದಳೊರ್ವಳ್ ॥ ೭೦ ॥

ಶೋಭಿಸಿದಳು. ವ॥ ಮತ್ತೆ ಓರ್ವಳು, ೬೬. ಎಳೆಯ ಅಶೋಕದ ಹೂವನ್ನು ಚೆನ್ನಾಗಿ ಕೊಯ್ಯಲೆಂದು ಕೈಯನ್ನು ಚಾಚಿ ಅಂಗೈನ ಕೆಂಬಣ್ಣವು ಹರಡಲು ಹೂ ಕೊಯ್ಯದೆ ಯುವತೀಮಣಿಯು ಅಚ್ಚರಿಗೊಂಡು ನೋಡುತ್ತ ಶೋಭಿಸಿದಳು. ವ॥ ಮತ್ತೆ ಅದಲ್ಲದೆ, ೬೭. ಓರ್ವಳು ಕಮಲಮುಖಿಯು ಪ್ರಿಯನನ್ನು ಅಗಲಿ ನಾವು ಇರುತ್ತ ಮನ್ಮಥನಿಗೆ ಕೈಯ ಮುಂಭಾಗವನ್ನು ಸುರಗಿಯ ಹೂವಾಗಿಸುವೆವು ಎಂದು ಮೂದಲಿಸುತ್ತ ಹೊಸದಾಗಿ ಅರಳಿದ ಸುರಗಿಯ ಮೊಗ್ಗನ್ನು ಕೊಯ್ದಳು. ೬೮. ಸಂತಸದಿಂದ ಕೂಡಿದ ನಮ್ಮ ಕಣ್ಣುಗಳಿಗೆ ನೈದಿಲೆಯು ತಾನು ಸಮವೆನಿಸಿ ಸ್ಪರ್ಧಿಸುವುದೆಂದು ಕೋಪಗೊಂಡ ರಮಣೀ ಮಣಿಯೋರ್ವಳು ಎಲ್ಲರಿಗೂ ತಿಳಿಯುವಂತೆ ಕನ್ನೈದಿಲೆ ಹೂವನ್ನು ಕೊಯ್ದಳು. ೬೯. ನೀವುಗಳು ಸುಧರ್ಮ ಮಹಾರಾಜನ ಮಗಳು ಸೌಂದರದೇವಿಯ ಪವಿತ್ರವಾದ ಮುಖಕ್ಕೆ ಸಮನೆಂದು ಇರುವಿರಿ. ಆ ಸುಂದರಿಯ ಮುಖವನ್ನು ನೋಡಲು ತಾವರೆಗಳೇ ಬನ್ನಿ ಎಂದು ಓರ್ವಳು [ತಾವರೆ ಹೂಗಳನ್ನು] ಕೊಯ್ದಳು. ೭೦. ನಿಮ್ಮ ಸುವಾಸನೆಯನ್ನು ಅವಳ ತುರುಬಿಗೆ ಕೊಟ್ಟು ಸೌಂದರಿಯ ತುಟಿಯ ಕಾಂತಿಯನ್ನು ಗರ್ವದಿಂದ

ಕುಂಜರಯಾನೆ ಸೌಂದರಿಯ ಚಾರುಚಕೋರಕಿಶೋರನೇತ್ರರು
ಕ್ಪುಂಜಮನೋಜನಸ್ತ್ರತತಿಗೊಪ್ಪುವ ಪೂದೊಣೆ ಯಕ್ಕುಮಿಕ್ಕಿಸಲ್।
ಮಂಜುಳದಾಡಿಮಿಕುಸುಮಮೆಂದಱಿದೊರ್ವ ಸುಧಾಂಶುವಕ್ತ್ರೆ ತಾಂ
ಸಂಜನಿತಪ್ರಮೋದಮನೆ ತಾಳ್ದು ಕರಂ ತಿಱಿದಳ್ಬೆಡಂಗಿನಿಂ ॥ ೭೧ ॥

ಇಂತತಿವಿಲಾಸದಿಂದಂ ಪಲತೆರದಲರ್ಗಳಂ ತಿಱಿದೆಳೆವಾಳೆಯ ತಿರುಳೆಲೆಗಳೊಳಳವಡಿಸಿಕೊಂಡೆಟ್ಟಿಂದು ವನವಿಹಾರಮಂ ಮಾಣ್ದು ಬಂದೊಂದು ವನಕಿಸಲಯಪ್ರಸನ್ನಕಷಾಯಕ್ಷಾಮಿತಕಲಕಂಠಕಂಠಸಂಜನಿತಮಂಜುಳನಿನಾದಾವಲಂಬಿತಸಮಾಕಾರಚ್ಛಾಯಾಸಂಸ್ಥಿತ ಚಂದ್ರೋಪಲಪೀಠಾಗ್ರದೊಳ್ಮನಂಗೊಳಿಪುದ್ಭಟಸೌಂದರವತಿಯರಂ ಕಂಡಮರ್ದದಾಡಿಮಕುಸುಮಮಂಜರಿಯಂ ಕಾಣ್ಕೆಯಿತ್ತಟ್ಟಿವಟ್ಟು ತಂದ ಪೊಸಪೂಗಳಂ ಮುಂದಿಟುಪಿ ಕಾಂತಾಕದಂಬಂ ಮಗುಟ್ದು,

ಧರಣಿಪನುದ್ಭಟಂ ಶಶಿಧರಂಗಿರದರ್ಪಿಸಿ ತಾಳ್ದು ಮಿಕ್ಕ ಭಾ
ಸುರತರಪುಷ್ಪಮಂ ಸರಮನಾಗಿಸಿ ತಂದು ಮನಂಗೊಳಿಪ್ಪ ಪಂ।
ಕರುಹದಳಾಯತೇಕ್ಷಣೆಯರಗ್ಗದಗಾಡಿ ನೆಗಱ್ಚಲೊಲ್ದಲಂ
ಕರಿಸಿದರಂದು ಸೌಂದರಿಯನಚ್ಛತಳೋದರಿಯಂ ವಿಲಾಸದಿಂ ॥ ೭೨ ॥

ಚಲಧಮ್ಮಿಲ್ಲಕ್ಕೆ ಚಾಂಪೇಯದ ಬಿರಿಮುಗುಳಂ ಕರ್ಣಯುಗ್ಮಕ್ಕೆ ರಕ್ತೋ
ತ್ಪಲಮಂ ಗ್ರೀವಕ್ಕೆ ಸುಣ್ಮಲ್ಲಿಗೆಯ ನನೆಗಳಂ ಚಾರುದೋರ್ವಲ್ಲಿಗಳ್ಗ।
ಜ್ವಲಿತೋದ್ಯತ್ಪಾಟಲೀಕೋರಕಮನುರುಕುಚಂಗಳ್ಗೆ ಸನ್ಮಾಧವೀಕು
ಟ್ಮಲಮಂ ನಲ್ವಚ್ಚಮಂ ಗೈದುಱು ತೊಡಿಸಿದರಾಕಾಂತೆಯರ್ಕಾಂತೆಗಾಗಳ್ ॥ ೭೩ ॥

ಸ್ವೀಕರಿಸುವುದೆಂದು ಉತ್ಸಾಹದಿಂದ ಓರ್ವಳು ಮೊಲ್ಲೆಯ ಹೂಗಳನ್ನು ಕೊಯ್ದಳು. ೭೧. ಸುಂದರವಾದ ಈ ದಾಳಿಂಬದ ಹೂವನ್ನು ನೋಡುತ್ತಿದ್ದರೆ, ಆನೆಯಂತೆ ಗಂಬೀರ ನಡಿಗೆಯುಳ್ಳ ಸೌಂದರಿಯ ಮನೋಹರವಾದ ಎಳೆಯ ಚಕೋರ ಪಕ್ಷಿಯಂತಿರುವ ಕಣ್ಣುಗಳ ಕಾಂತಿಯ ಮೊತ್ತವೆಂಬ ಮನ್ಮಥನ ಹೂಬಾಣಗಳ ಸಮೂಹಕ್ಕೆ ಯೋಗ್ಯವಾದ ಬತ್ತಳಿಕೆಯಾಗುತ್ತದೆ ಎಂದು ತಿಳಿದ ಓರ್ವ ಚಂದ್ರಮುಖಿಯು ಅತ್ಯಾನಂದವನ್ನು ಹೊಂದಿ ವಿಲಾಸದಿಂದ ಚೆನ್ನಾಗಿ ಅದನ್ನು ಕೊಯ್ದಳು. ವ॥ ಹೀಗೆ ಹೆಚ್ಚಿನ ಲಾವಣ್ಯದಿಂದ ಹಲವು ಬಗೆಯ ಹೂವುಗಳನ್ನು ಕಿತ್ತು ಎಳೆಯ ಬಾಳೆಯ ತಿರುಳೆಲೆಗಳಲ್ಲಿ ಹೊಂದಿಸಿಕೊಂಡು ವನವಿಹಾರವನ್ನು ಮಾಡಿ ಬಂದು ಒಂದು ವನದ ನಿರ್ಮಲವಾದ ಚಿಗುರಿನ ರಸದಿಂದ ಸೊರಗಿದ ಕೋಗಿಲೆಯ ಕಂಠದಲ್ಲಿ ಮನೋಹರವಾದ ಧ್ವನಿಯು ಹೊಮ್ಮಿರಲು ಅದನ್ನಾಶ್ರಯಿಸಿ ಸಮನಾದ ಕಾಂತಿಯಿಂದ ಕೂಡಿದ ಚಂದ್ರಕಾಂತ ಶಿಲೆಯ ಮೇಲೆ ಮನಸೆಳೆಯುವಂತಿರುವ ಉದ್ಭಟ-ಸೌಂದರವತಿಯರನ್ನು ನೋಡಿ ತಮ್ಮಲ್ಲಿನ ದಾಳಿಂಬದ ಹೂವಿನ ಗುಚ್ಛವನ್ನು ಕಾಣಿಕೆಯಾಗಿ ಕೊಟ್ಟು ಪ್ರೀತಿಯಿಂದ ತಂದ ಹೊಸ ಹೂವುಗಳನ್ನು ಮುಂದೆ ಸುರಿದ ಕಾಂತೆಯರ ಸಮೂಹವು ಮತ್ತೆ, ೭೨. ಮಹಾರಾಜ ಉದ್ಭಟನು ಶಿವನಿಗರ್ಪಿಸಿ ಧರಿಸಿ ಬಿಟ್ಟ ಹೊಳೆಯುವ ಹೂವುಗಳನ್ನು ಮಾಲೆಯಾಗಿ ಕಟ್ಟಿತಂದು ಮನಸೆಳೆಯುವ ಕಮಲದಳಾಕ್ಷಿಯರು ತಳೋದರಿಯಾದ ಸೌಂದರಿಯ ಶ್ರೇಷ್ಠವಾದ ಸೊಬಗನ್ನು ಮೆರೆಸಲು ಬಯಸಿ ಬೆಡಗಿನಿಂದ ಅಂದು ಅಲಂಕರಿಸಿದರು. ೭೩. ಸ್ಥಿರವಲ್ಲದ ಮುಡಿಗೆ ಚಂಪಕದ ಬಿರಿದ ಮೊಗ್ಗನ್ನು, ಕಿವಿಗಳೆರಡಕ್ಕೆ ಕೆಂದಾವರೆಯನ್ನು, ಕೊರಳಿಗೆ

ಮತ್ತಮದಲ್ಲದೆ,

ಪಗೆಗೆ ವಿಪತ್ತು ಬಂದಡಸಿದಾಗಳೆ ತಗ್ಗಿಸವೇಜ್ಕುಮೆಂದು ನೆ
ಟ್ಟಗೆ ನೆಲೆದಪ್ಪಿರಲ್ ಬಿಡದೆ ಮುತ್ತಿದ ತುಂಬಿಯ ಬಂಬಲೆಂಬಿನಂ।
ಸೊಗಯಿಸುವಿಂಪುಗಂಪನಮರ್ದಪ್ಪಿ ಮನಂಗೊಳಿಪಚ್ಚಪೊಚ್ಚಸಂ
ಪಗೆಯರಲಂ ತುಱುಂಬಿದ ತುಱುಂಬೆಸೆದಿರ್ದುದು ತದ್ವಧೂಟಿಯಾ ॥ ೭೪ ॥

ಮಂಜುಳತಮಾಲಿಕಾಘನ
ಕುಂಜೋತ್ಥಿತಕುಸುಮರಾಜಿ ಯೆನಲೊಪ್ಪಿದುದಾ।
ಕಂಜಾಕ್ಷಿಯ ಬೈತಲೆಯೊಳ್
ರಂಜಿಪ ಮಲ್ಲಿಮತಲ್ಲಿಕಾಮುಕುಳೌಘಂ ॥ ೭೫ ॥

ಪ್ರಣಯಕಲಹದಿನೊದೆಯೆ ರೋ
ಹಿಣಿ ತತ್ಪದಲಕ್ತಕಾಂಕಿತೇಂದುವ ಬಟ್ಟಿಂ
ಗೆಣೆಯಾದುದು ತನ್ನಾರೀ
ಮಣಿಯಾನನಮಬ್ಜರೇಣುತಿಲಕಸಮೇತಂ ॥ ೭೬ ॥

ಸಸಿಯಿರ್ವಕ್ಕಮನಮರ್ದಿ
ಪ್ಪ ಸಿತಾಭ್ರದ ಮಱಿಗಳಂತಿರಾಕಾಂತೆಯ ಶೋ।
ಭಿಸುವ ವರಕರ್ಣಯುಗ್ಮದೊ
ಳೆಸೆವುದು ನಸುಬಿರಿದು ಮಿಸುಪ ಚೆನ್ನೈದಿಲೆಗಳ್ ॥ ೭೭ ॥

ನುಣುಪಾದ ಮಲ್ಲಿಗೆಯ ಮೊಗ್ಗುಗಳನ್ನು, ಮನೋಹರವಾದ ತೋಳುಗಳೆಂಬ ಬಳ್ಳಿಗಳಿಗೆ ಹೊಳೆಯುವ ಶ್ರೇಷ್ಠವಾದ ಪಾದರಿಯ ಮೊಗ್ಗುಗಳನ್ನು, ಉನ್ನತವಾದ ಮೊಲೆಗಳಿಗೆ ಮಾಧವಿಯ ಮೊಗ್ಗನ್ನು ಆ ಕಾಂತೆಗೆ ಆ ಸುಂದರಿಯರು ತೊಡಿಸಿ ಚೆನ್ನಾಗಿ ಅಲಂಕರಿಸಿದರು. ವ॥ ಮತ್ತೆ ಅದಲ್ಲದೆ, ೭೪. ಶತ್ರುವಿಗೆ ಕಷ್ಟಗಳು ಬಂದು ಕವಿದಾಗಲೇ ಅವನನ್ನು ಬಗ್ಗಿಸಬೇಕೆಂದು ಆಶ್ರಯ ತಪ್ಪಿ ಬಿಡದೆ ಮುತ್ತಿದ ತುಂಬಿಗಳ ಸಮೂಹದಂತೆ ಚೆಲುವಾದ ಮಧುರ ಸುವಾಸನೆಯನ್ನು ತಳೆದು ಮನಸೆಳೆಯುವ ಎಳೆಯ ಸಂಪಿಗೆಯ ಹೂವನ್ನು ಮುಡಿದ ಆ ಸುಂದರಿಯ ತುರುಬು ಶೋಭಿಸಿದ್ದಿತು. ೭೫. ಮನೋಹರವಾದ ಹೂ ಮಾಲೆಯು ಬೆಳಗುತ್ತಿರುವ ಹೂಗಳ ಸಮೂಹವೆನ್ನುವಂತೆ ಕಮಲಾಕ್ಷಿಯ ಬೈತಲೆಯಲ್ಲಿ ಮಲ್ಲಿಗೆಯ ಮೊಗ್ಗುಗಳು ಶೋಭಿಸಿದ್ದವು. ೭೬. ಪ್ರಣಯ ಕಲಹದಲ್ಲಿ ರೋಹಿಣಿಯು ಒದೆಯಲು ಆ ಪಾದಗಳಿಗೆ ಲೇಪಿಸಿದ ಅರಗನ್ನು ಚಿಹ್ನೆಯಾಗಿ ಹೊಂದಿದ ಚಂದ್ರನ ತಿಲಕಕ್ಕೆ ಆ ನಾರೀಮಣಿಯ ಮುಖದ ಕಮಲ ಪರಾಗದ ತಿಲಕವು ಸಮಾನವಾಯಿತು. ೭೭. ಚಂದ್ರ ಎರಡೂ ಪಾರ್ಶ್ವಗಳಲ್ಲಿ ಚೆನ್ನಾಗಿ ಸೇರಿರುವ ಬೆಳ್ಳನೆಯ ಮೋಡದ ಮರಿಗಳಂತೆ ಆ ಕಾಂತೆಯ ಸುಂದರವಾದ ಕಿವಿಗಳಲ್ಲಿ ಸ್ವಲ್ಪವೇ ಬಿರಿದು ಹೊಳೆಯುವ ಚೆನ್ನೈದಿಲೆಗಳು

ಚಂದ್ರಮಂಡಲಜಾತರುಕ್ತತಿ ಪೆರ್ಚಿ ತಚ್ಛಶಿಬಿಂಬಮಂ
ಸಾಂದ್ರಕಾಂತಿಯನಾಂತು ವೇಷ್ಟಿಸಿಕೊಂಡು ಕಂಗೊಳಿಪಂತೆ ನಿ।
ಸ್ತಂದ್ರಲೋಲವಿಶಾಲನೇತ್ರೆಯ ಕಂಬುಕಂಠದೊಳೊಪ್ಪುಗುಂ
ರುಂದ್ರಶೋಭೆಯನೀವ ಮಲ್ಲಿಗೆಯಚ್ಚ ಮೊಗ್ಗೆಗಳೊಚ್ಚರಂ ॥ ೭೮ ॥

ಚಂದನ ಶಾಖೆಯನೆಳೆವಾ
ವಂದಪ್ಪಿ ವಿಜೃಂಭಿಪಂತೆ ಪಾದರಿನನೆಯಾ।
ಬಂದಿ ಮನಂಗೊಳಿಸಿದುದಾ
ಸೌಂದರದೇವಿಯ ತೊಳಪ್ಪ ನಳಿತೋಳೆಡೆಯೊಳ್ ॥ ೭೯ ॥

ಮಾನಿತದಾನಲಕ್ಷ್ಮಿ ಬಿಡದಿರ್ಪ ಕರಾಂಬುಜಸದ್ಮದುಚ್ಚಲಾ
ನೂನಮಣಿಪ್ರತಾನಸಮುದಂಚಿತವಂದನಮಾಲೆಯೆಂಬಿನಂ।
ತಾನೆಸೆದತ್ತಶೋಕೆಗಳೆಸಳ್ಗಳಿನಾಗಿಸಿದಚ್ಚಕಂಕಣಂ
ಮೀನಪತಾಕನೈಸಿರಿಗೆ ಸೌಂದರದೇವಿಗೆ ಚೆಲ್ವನೀಯುತುಂ ॥ ೮೦ ॥

ಇಂತಲರ್ವ ಪಲವುತೆರದಚ್ಚಮಂ ತಳೆದು ಮಿಸುಪ ಕುಸುಮವಿಸರಮನಾಂತ ಪೊಸಲತೆಯಂತೆಸೆವ ಶಶಿಮುಖಿಸೌಂದರವತಿಯನುದ್ಭಟಕ್ಷಿತೀಂದ್ರಚಂದ್ರಮಂ ನಡೆನೋಡಿ ಕಡು ಸಂತಸಮಂ ಪಡೆದು,

ನೆಗಟ್ದುಡುಜಾಲಮಧ್ಯಪರಿಶೋಭಿತಚಂದ್ರನ ಲೇಖೆಯಂತೆ ಮ
ಲ್ಲಿಗೆ ಮೊದಲಾದ ಪೂಗಳನೊಡರ್ಚಿದ ಪಚ್ಚಮನಾಂತು ರಂಜಿಪಾ।
ಮೃಗಶಿಶುನೇತ್ರೆಗೂಡಿ ನೃಪಪುಂಗವನುದ್ಭಟಭೂಮಿಪಾಲನೊ
ಯ್ಯಗೆ ನಡೆತಂದಪಂ ವನವಿಹಾರವಿನೋದವಿಲಾಸಮಾನಸಂ ॥ ೮೧ ॥

ಶೋಭಿಸಿದವು. ೭೮. ಚಂದ್ರಮಂಡಲದಿಂದ ಹೊಮ್ಮಿ ಬಂದ ಕಿರಣಗಳ ಸಮೂಹವು ಆ ಶಶಿಬಿಂಬವನ್ನು ಅರಳಿಸಿ ದಟ್ಟವಾದ ಕಾಂತಿಯನ್ನು ಹೊಂದಿ ಸುತ್ತುವರಿದು ಕಣ್ಣಿಗೆ ಸೊಗಸಾಗಿರುವಂತೆ ಚಂಚಲವಾದ ವಿಶಾಲ ನೇತ್ರಗಳನ್ನುಳ್ಳ ಸೌಂದರಿಯ ಶಂಬನಂತಹ ಕೊರಳಿನಲ್ಲಿ ವಿಶಾಲವಾದ ಶೋಭೆಯನ್ನುಂಟುಮಾಡುವ ಮಲ್ಲಿಗೆ ಮೊಗ್ಗುಗಳ ಸರಮಾಲೆಯೊಂದು ಅಂದಗೊಂಡಿರುವುದು. ೭೯. ಶ್ರೀಗಂಧದ ಕೊಂಬೆಯನ್ನು ಹಾವಿನ ಮರಿಯು ಅಪ್ಪಿ ಶೋಭಿಸುವಂತೆ ಪಾದರಿ ಹೂವಿನ ಮೊಗ್ಗು ತೋಳ್ಬಂದಿಯಾಗಿ ಸೌಂದರದೇವಿಯ ಕಾಂತಿಯುಕ್ತವಾದ ಕೋಮಲವಾದ ತೋಳಿನಲ್ಲಿ ನೆಲೆಸಿ ಮನಸ್ಸನ್ನು ಆಕರ್ಷಿಸಿತು. ೮೦. ಗೌರವಾನ್ವಿತಳಾದ ದಾನಲಕ್ಷ್ಮಿಯು ಮುಚ್ಚಿದ ತನ್ನ ಕರಕಮಲಗಳನ್ನು ಬಿಚ್ಚಲು ಅಸಂಖ್ಯ ಮಣಿಗಳಿಂದ ಕೂಡಿ ಯೋಗ್ಯವಾದ ವಂದನಮಾಲೆ ಎನ್ನುವಂತೆ ಅಶೋಕದ ಚಿಗುರುಗಳಿಂದ ನಿರ್ಮಿಸಿದ ಮನ್ಮಥನ ಸಂಪತ್ತಾದ ಕೈಬಳೆಗಳು ಸೌಂದರದೇವಿಗೆ ಸೊಬಗನ್ನುಂಟುಮಾಡುತ್ತ ಶೋಭಿಸಿದ್ದಿತು. ವ॥ ಹೀಗೆ ಅರಳುವ ಹಲವು ಬಗೆಯ ಶೃಂಗಾರವನ್ನು ಹೊಂದಿ ಹೊಳೆವ ಹೂಗಳ ಸಮೂಹವನ್ನು ಪಡೆದ ಎಳೆಯ ಬಳ್ಳಿಯಂತೆ ಶೋಭಿಸುವ ಚಂದ್ರಮುಖಿ ಸೌಂದರವತಿಯನ್ನು ಉದ್ಭಟ ಮಹಾರಾಜ ಚಂದ್ರಮನು ಚೆನ್ನಾಗಿ ನೋಡಿ ಅತ್ಯಾನಂದವನ್ನು ಹೊಂದಿ, ೮೧. ಪ್ರಸಿದ್ಧ ನಕ್ಷತ್ರಗಳ ಸಮೂಹದ ನಡುವೆ ಚೆನ್ನಾಗಿ ಶೋಭಿಸಿರುವ ಚಂದ್ರನ ಕಿರಣಗಳಂತೆ ಮಲ್ಲಿಗೆ ಮೊದಲಾದ ಹೂಗಳಿಂದ ಅಲಂಕೃತಳಾಗಿ

ಮತ್ತಮದಲ್ಲದೆಯುಂ,

ಸುಗಂಧಸಮ್ಮಿಶ್ರಿತವಿಕಚಕುಸುಮವಿಸರಸಂಜನಿತಪರಾಗಧೂಳೀ ಪಟಲಕ್ರೀಡಾಸಕ್ತೋನ್ಮತ್ತ ಚಂಚರೀಕ ಸಂಚಯ ಸಮಂಚಿತಲತಾಪ್ರತಾನಮುಂ ಚಂಚಚ್ಚಂಚೂಪುಟಕೋಟಿವಿಪಾಟಿತಮನೋಹರಪಕ್ವಫಲನಿಷ್ಯಂದ ಮಾನಾಸೂನರಸಾಸ್ವಾದಿಶುಕನಿಕರಕಳಕಳರವೋಜ್ಜೃಂಭಿತ ಜಂಬೂಕದಂಬಮುಂ ಸಲ್ಲಲಿತಪಲ್ಲವಾಗ್ರಗ್ರಸನಕ್ಷಾಳಿತ ಕಲಕಂಠ ಕಂಠ ಪಂಚಮಸ್ವರಕೋಲಾಹಲವಿಭ್ರಾಜಿತಮಾಕಂದವೃಂದಮುಂ ಮಂಜುಳಕಂಜಕಿಂಜಲ್ಕಪುಂಜ ಭುಂಜದ್ರಾಜದ್ರಾಜಮರಾಳಜಾಲಲೀಲಾವಿಲಾಸಾಸ್ಪದ ವೈಡೂರ್ಯಶಿಲಾಬದ್ಧ ತೀರೋಜ್ವಲಸರಸೀ ಪ್ರಸರಮುಂ ವಿಕೀರ್ಣಾಚ್ಛ ಪಿಂಛ ವಿಭಾಸಕಮಯೂರಪಟು ತರಚಟುಳನಟನಶೋಭಿತ ಮಂಗಳವನಾಂ ಗಣಮುಂ ಸೌಂದರವತಿವೆರಸವಲೋಕಿಸುತ್ತುದ್ಭಟಕ್ಷಿತೀಂದ್ರಚಂದ್ರಮಂ ನಡೆತಂದೊಂದು ಕಣ್ಗೆಂಬಾದ ಲತಾಮಂಟಪಮಂ ಪೊಕ್ಕು ತನ್ಮಂಟಪಮಧ್ಯಸ್ಥಿತಚಂದ್ರೋಪಲಪೀಠಾಗ್ರದೊಳೊಲವಿಂ ಕುಳ್ಳಿರ್ದು,

ಮಂದಸಮೀರಪೋತಚಲಿತೋದ್ಗಮಮಂಜರಿ ತಾಳವೃಂತದೊಂ
ದಂದಮನೀಯೆ ಸೇವಿತವಧೂಜನನಿಶ್ವಸಿತಪ್ರಮೋದಿತೇಂ।
ದಿಂದಿರಗಾನಮೊಪ್ಪೆ ಶಶಿಕಾಂತಶಿಲಾಕೃತವೇದಿಯಲ್ಲಿ ಪೂ
ರ್ಣೇಂದುನಿಭಾಸ್ಯೆ ಸೌಂದರಿಯನೀಕ್ಷಿಸುತುದ್ಭಟದೇವನೊಪ್ಪಿದಂ ॥ ೮೨ ॥

ರಂಜಿಸುತ್ತಿರುವ ಎಳೆಯ ಜಿಂಕೆಯ ಕಣ್ಣುಗಳಂತೆ ಚಂಚಲ ನೇತ್ರಗಳುಳ್ಳ ಸೌಂದರಿಯೊಡನೆ ರಾಜರುಗಳಲ್ಲಿ ಶ್ರೇಷ್ಠನಾದ ಉದ್ಭಟ ಮಹಾರಾಜನು ವನವಿಹಾರ ವಿನೋದದಿಂದ ಉಲ್ಲಾಸಗೊಂಡ ಮನಸ್ಸುಳ್ಳವನಾಗಿ ಮೆಲ್ಲನೆ ನಡೆದು ಬಂದನು. ವ॥ ಮತ್ತೆ ಅದಲ್ಲದೆ, ಸುಗಂಧದಿಂದ ಕೂಡಿದ ಮುಡಿಯ ಹೂವಿನ ಮಾಲೆಯ ಪರಾಗ ಕಣದಲ್ಲಿ ವಿಹರಿಸುವ ಸಲುವಾಗಿ ಮದಿಸಿ ಬಂದ ದುಂಬಿಗಳ ಸಮೂಹವನ್ನು ಹೊಂದಿರುವ ಬಳ್ಳಿಗಳನ್ನು ಮನೋಹರವಾದ ಮಾಗಿದ ಹಣ್ಣನ್ನು ಹೊಳೆಯುವ ಕೊಕ್ಕಿನಿಂದ ಕುಕ್ಕಿ ಒಸರುವ ಅಪಾರ ರಸವನ್ನು ಸವಿಯುವ ಗಿಳಿಗಳ ಸಮೂಹದ ಕಳಕಳ ಧ್ವನಿಯಿಂದ ಶೋಭಿಸಿರುವ ಜಂಬು ನೇರಿಳೆ ಮರಗಳನ್ನೂ, ಮನೋಹರವಾದ ಚಿಗುರನ್ನು ಸವಿದು ಮಧುರವಾದ ಕಂಠವನ್ನು ಹೊಂದಿದ ಕೋಗಿಲೆಯ ಪಂಚಮ ಸ್ವರದಿಂದ ಕೋಲಾಹಲಗೊಂಡು ವಿಶೇಷವಾಗಿ ಹೊಳೆಯುತ್ತಿರುವ ಮಾವಿನ ಮರಗಳ ಮೊತ್ತವನ್ನೂ, ಮನೋಹರವಾದ ಕಮಲದ ಕುಸುರ ರಾಶಿಯನ್ನು ಸವಿದು ಶೋಭಿಸಿರುವ ರಾಜಹಂಸಗಳ ಲಾವಣ್ಯಪೂರ್ಣವಾದ ಸೌಂದರ್ಯಕ್ಕೆ ಕಾರಣವಾದ ವೈಡೂರ್ಯಶಿಲೆಯಿಂದ ಕಟ್ಟಲ್ಪಟ್ಟ ಉಜ್ವಲವಾದ ದಡದಿಂದ ಕೂಡಿರುವ ಕೊಳಗಳನ್ನೂ, ಶುಭ್ರವಾದ ಗರಿಗಳನ್ನು ಹರಡಿ ಹೊಳೆಯುವ ನವಿಲುಗಳ ಚಟುವಟಿಕೆಯಿಂದ ಕೂಡಿದ ಲಾಸ್ಯದಿಂದ ಶೋಭೆಗೊಂಡ ಮಂಗಳಕರ ವನದ ಮಧ್ಯಭಾಗವನ್ನು ಸೌಂದರವತಿಯೊಡನೆ ನೋಡುತ್ತ ಉದ್ಭಟ ಮಹಾರಾಜ ಚಂದ್ರಮನು ಬಂದು ಕಣ್ಣಿಗೆ ಸುಂದರವಾದ ಒಂದು ಲತಾಮಂಟಪವನ್ನು ಹೊಕ್ಕು ಆ ಮಂಟಪದ ಮಧ್ಯಭಾಗದಲ್ಲಿನ ಚಂದ್ರಕಾಂತ ಶಿಲೆಯ ಪೀಠದ ಮೇಲೆ ಪ್ರೀತಿಯಿಂದ ಕುಳಿತು, ೮೨. ಮಂದಮಾರುತವು ಬೀಸಲು ಅಲುಗಾಡುವ ಹೂವುಗಳು ಬೀಸಣಿಗೆಯಂತೆ ಸೊಗಸನ್ನುಂಟುಮಾಡಲು, ಸೇವೆ ಮಾಡುತ್ತಿರುವ ಸೇವಕಿಯರ ವಿಶ್ವಾಸದಿಂದ ಮುದಗೊಂಡ ದುಂಬಿಗಳ ಝೇಂಕಾರವು ಶೋಭಿಸಿರಲು, ಚಂದ್ರಕಾಂತ ಶಿಲೆಯ ಜಗಲಿಯಲ್ಲಿ ಪೂರ್ಣಚಂದ್ರನಂತೆ ಮುಖವುಳ್ಳ

ಇಂತು ವನವಿಹಾರಲೀಲೆಯಿಂ ಸೌಂದರವತಿವೆರಸುದ್ಭಟಕ್ಷಿತೀಂದ್ರಚಂದ್ರಮಂ ಕತಿಪಯದಿವಸಮಾ ಬನದೊಳಾನಂದಮಂ ತಳೆದಿರೆ ಯಿರೆ,

ಅತಿಗಂಭೀರೀಕೃತಾಬ್ಜಾಕರಮುರುಪರಿತಪ್ತೋಚ್ಚಧೂಳೀಚಯಾಚ್ಛಾ
ದಿತಭೂಚಕ್ರಂ ಸುಗಾಢೋಷ್ಣಾಹೃತಸರಿದುದಕಂ ದ್ಯೋತಪಾತಾರ್ಕಕಾಂತೋ।
ದ್ಗತಚಂಚಜ್ಜ್ವಾಲಿಕಾತುಂದಿಲದವಶಿಖಿದಗ್ಧಾಖಿಲಾರಣ್ಯಮಾಲಂ
ಬಿತವಾತೂಲಾಂಕರೋಧಂ ನೆಗಟ್ದುದಸದಳಂ ನೂತನಗ್ರೀಷ್ಮಕಾಲಂ ॥ ೮೩ ॥

ಜಳನಿಧಿ ಬೆಚ್ಚನಾಗೆ ನೆಱೆ ಸೀಕರಿಯಾಗೆ ಪತಂಗಪಕ್ಷಿಸಂ
ಕುಳವವನೀತಳಂ ಬಿರಿಯೆ ಕೊಱಗೆ ಸವಜುಲೆ ಸರೋವರಂ ಮೃಗಾ।
ವಳಿ ತೃಷೆಯಿಂ ತೊಟಲ್ದು ಪರಿತಾಪಮನೈದೆ ವನಾಂತರಾಳಮಂ
ಬಳಸಿ ದವಾನಳಂ ಬಳಸಿತುಷ್ಣಮರೀಚಿಮರೀಚಿಸಂಚಯಂ ॥ ೮೪ ॥

ಪೊಗೆದುದು ಸಸ್ಯಾನೀಕಂ
ಮೃಗತೃಷ್ಣಾಂಬುವಿನ ವೀಚಿ ಪೊಂಗಿದುದಿರದಂ।
ದುಗುಟ್ದುದು ಕೆಂಗಿಡಿಯಂ ಬೇ
ಸಿಗೆ ಬಿಸಿವೊಯ್ಲನರ್ಕಮಣಿಗಣಮಾಗಳ್ ॥ ೮೫ ॥

ಮುನ್ನೀರಾವಗಮುರ್ಕುವ
ಬೆನ್ನೀರಾದತ್ತು ದಿಙ್ನಿ ಕಾಯಂ ಶಿಖಿದಿ।
ಕ್ಕನ್ನೆಱೆ ಪೋಲ್ತುದು ಜನಮೆ
ಲ್ಲನ್ನೋಟ್ಟಿಡೆ ವಿರಹಿಜನಮುದಾಯ್ತಾದಿನದೊಳ್ ॥ ೮೬ ॥

ಸೌಂದರಿಯನ್ನು ನೋಡುತ್ತ ಉದ್ಭಟದೇವನು ಅಂದಗೊಂಡನು. ವ॥ ಹೀಗೆ ವನವಿಹಾರ ವಿನೋದದಿಂದ ಸೌಂದರವತಿಯೊಡನೆ ಉದ್ಭಟಮಹಾರಾಜ ಚಂದ್ರಮನು ಹಲವು ದಿವಸ ಆ ವನದಲ್ಲಿ ಆನಂದವನ್ನು ಹೊಂದಿ ಇರುತ್ತಿರಲು, ೮೩. [ಬೇಸಗೆಯ ಆಗಮನವಾಗು-ತ್ತಿದ್ದಂತೆಯೇ] ಅತಿ ಗಂಭೀರವಾಗಿದ್ದ ಕಮಲ ಸರೋವರವು ಹೆಚ್ಚಿನ ತಳಮಳಕ್ಕೆ ಒಳಗಾಯಿತು, ಭೂಮಂಡಲವು ಧೂಳಿನಿಂದ ಕವಿಯಲ್ಪಟ್ಟಿತು, ಕಡು ಬಿಸಿಲ ಬೇಗೆಯಿಂದ ಹೊಳೆಗಳ ನೀರು ಬತ್ತಿತು, ಸೂರ್ಯ ಸಮಾನವಾದ ಉಗ್ರಶಾಖವು ಕಾಡಿನಲ್ಲಿ ತುಂಬಿರುವ ಜಾಲಿಯ ಮರಗಳ ಸಮೂಹಕ್ಕೆ ಕಾಡ್ಗಿಚ್ಚು ಹತ್ತಿ ಅರಣ್ಯವನ್ನೆಲ್ಲಾ ಕವಿಯಲು ಸುಂಟರಗಾಳಿಯು ಆಲಂಬನ ಕೊಟ್ಟು ಯಾವ ಅಡ್ಡಿಯೂ ಇಲ್ಲದೆ ಧ್ವಂಸನ ಕಾರ್ಯ ಮಾಡಿತು - ಹೀಗೆ ಅಸಾಧ್ಯವಾದ ಬೇಸಗೆಯು ಕಾಣಿಸಿಕೊಂಡಿತು. ೮೪. ಸಮುದ್ರದ ನೀರು ಬಿಸಿಯಾಗಿ, ಹುಳುಗಳು ಪಕ್ಷಿಸಮೂಹಗಳು ಚೆನ್ನಾಗಿ ಸುಟ್ಟು ಹೋಗಿ, ಭೂಮಿ ಬಿರುಕು ಬಿಟ್ಟು, ಅಜಿಗಿಜಿಯಾದ ಕೆಸರು ಒಣಗಿ ಹೋಗಿ, ಮೃಗಗಳು ಬಾಯಾರಿಕೆಯಿಂದ ಸುತ್ತಿ ಆಯಾಸ ಹೊಂದಿರಲು ಕಾಡಿನ ಒಳಭಾಗವನ್ನೆಲ್ಲಾ ಕಾಡ್ಗಿಚ್ಚು ಆವರಿಸಿ ಬೆಂಕಿಯ ಬೆಳಕಿನ ಕಿಡಿಗಳು ಎಲ್ಲೆಡೆ ಕವಿಯಿತು. ೮೫. ಸೂರ್ಯನ ಪ್ರಖರ ಕಿರಣಗಳು ಕೆಂಪನೆಯ ಕಿಡಿಗಳನ್ನು ಕಾರಿದವು, ಬೇಸಿಗೆಯ ಬಿರು ಬಿಸಿಲಿನ ಹೊಡೆತಕ್ಕೆ ಸಸ್ಯಗಳು ಒಣಗಿದವು, ಪ್ರಾಣಿಗಳ ಬಾಯಾರಿಕೆ ಬತ್ತಿ ಹೋಯಿತು. ೮೬. ಸಮುದ್ರದ ನೀರು ಸದಾಕಾದು ಬಿಸಿ ನೀರಾಯಿತು. ದಿಕ್ಕುಗಳು

ಮತ್ತಮಾಗ್ರೀಷ್ಮಕಾಲದೊಳ್,

ತೋಯಜಮಿತ್ರನೇೞ್ಗೆವಡೆದೊಪ್ಪಿರೆ ಜೀವನದಾಶೆ ಯಿರ್ದುಮಾ
ಚ್ಛಾಯೆಯನೆಲ್ಲರುಂ ಬಯಸುವರ್ಜನರ್ಕರದಂಡಮೆ ಪೆರ್ಚಿತಾವಗಂ।
ನೋಯದರಿಲ್ಲ ತಾಪಶಿಖಿಯಿಂದೆ ರಜಶ್ಚಯಮುರ್ವಿತಿಂತುಟ
ನ್ಯಾಯಮದಾಗಿಯುಂ ಕ್ಷಯಿಸುತಿರ್ಪುದು ದೋಷವಿದೇಂ ವಿಚಿತ್ರಮೋ ॥ ೮೭ ॥

ಮತ್ತಮದಲ್ಲದೆ,

ಅಂಬರತಳದೊಳ್ಖರಕರ
ಬಿಂಬಲಸಚ್ಚಕ್ರಯಂತ್ರಮಂ ಗ್ರೀಷ್ಮಕುಮಾ।
ರಂ ಬಿಡೆ ಕಿಡಿಸೂಸುವವೋ
ಲ್ಕೆಂಬಿಸಲುರಿ ಮಸಗಿತುರ್ವಿತುರ್ವೀತಳಮಂ ॥ ೮೮ ॥

ಇಂತು ಧಾತ್ರಿಯನುರ್ವಿ ಪರ್ವಿದ ತೀಕ್ಷ್ಣ ಹಸ್ತನ ಬೇಗೆಯಿಂ
ಕಾಂತೆಯರ್ಕಳ ಮೈ ಬೆಮರ್ತಿರೆ ಕಂಡು ಸೌಂದರಿಗೂಡಿ ಭೂ।
ಕಾಂತನುದ್ಭಟನಂಬುಕೇಳಿಯನಾಗಿಸಲ್ಮನಮೊಲ್ದು ತಾಂ
ಸಂತಸಂಬಡೆದಂದು ತಂಗೊಳಕಂದು ಬಂದನಲಂಪಿನಿಂ ॥ ೮೯ ॥

ನಿಖಿಲಸಖೀಪರಿವೃತಶಶಿ
ಮುಖಿ ಸೌಂದರಿಗೂಡಿ ಬರೆ ಮಹೀಶಂ ಭ್ರಮರೀ।
ಮುಖಘಾತಕೀರ್ಣಮಕರಂ
ದಖಚಿತಜಲಪೂರಮೊಪ್ಪಿದುದು ಕಾಸಾರಂ ॥ ೯೦ ॥

ಬೆಂಕಿಯ ಜ್ವಾಲೆಗಳ ದಿಕ್ಕಾದವು, ಜನಗಳೆಲ್ಲ ಆ ದಿನಗಳಲ್ಲಿ ವಿರಹಿ ಜನಗಳಾದರು. ವ॥ ಮತ್ತೆ ಆ ಬೇಸಿಗೆ ಕಾಲದಲ್ಲಿ, ೮೭. ಸೂರ್ಯನು ಹೆಚ್ಚಳವನ್ನು ಹೊಂದಿ ಶೋಭಿಸಿರಲು ಬದುಕುವ ಆಸೆಯಿದ್ದೂ ಅದರ ನೆರಳನ್ನು ಎಲ್ಲರೂ ಬಯಸುವರು. ಜನರ ಕೈಗಳು ಸಂಕಟದಿಂದ ಸದಾ ಚಾಚಿದವು, ಬಿಸಿಲಿನ ತಾಪದಿಂದ ನೋಯದ ಜನರೇ ಇಲ್ಲ. ಧೂಳಿನ ಮೊತ್ತ ಹರಡಿತು. ಹೀಗೆ ಅನ್ಯಾಯವಾಗಿಯೂ ಕ್ಷಯಿಸುತ್ತಿರುವುದು ದೋಷ ಇದೆಂತಹ ವಿಚಿತ್ರ! ವ॥ ಮತ್ತೆ ಅದಲ್ಲದೆ, ೮೮. ಆಕಾಶದಲ್ಲಿ ಗ್ರೀಷ್ಮಕುಮಾರನು ಸೂರ್ಯಬಿಂಬವೆಂಬ ಹೊಳೆಯುವ ಚಕ್ರ ಯಂತ್ರವನ್ನು ನಡೆಸಲು ಅದು ಕಿಡಿಕಾರುವಂತೆ ಕೆಂಪಾದ ಬಿಸಿಲಿನ ಬೇಗೆಯು ಭೂ ಭಾಗವನ್ನೆಲ್ಲಾ ವ್ಯಾಪಿಸಿತು. ೮೯. ಹೀಗೆ ಭೂಮಂಡಲವನ್ನು ಉಬ್ಬಿ ಹಬ್ಬಿದ ಸೂರ್ಯನ ಬೇಗೆಯಿಂದ ಅಂಗನೆಯರ ಕೋಮಲ ಶರೀರವು ಬೆವರಿರಲು ಅದನ್ನು ನೋಡಿ ಸೌಂದರಿಯೊಡನೆ ಮಹಾರಾಜ ಉದ್ಭಟದೇವನು ನೀರಾಟವನ್ನಾಡಲು ಬಯಸಿ ಸಂತಸದಿಂದ ಅಂದು ತಣ್ಣನೆಯ ಕೊಳದ ಬಳಿಗೆ ವಿಲಾಸಯುಕ್ತನಾಗಿ ಬಂದನು. ೯೦. ಎಲ್ಲಾ ಸಖಿಯರಿಂದ ಸುತ್ತುವರಿಯಲ್ಪಟ್ಟ ಚಂದ್ರಮುಖಿಯಾದ ಸೌಂದರಿಯೊಡಗೂಡಿ ಮಹಾರಾಜನು ಬರಲು ದುಂಬಿಗಳಿಂದ ಮುಖವು ಹೊಡೆತಗೊಂಡು ಮಕರಂದ ನೀರಿನಿಂದ

ತ್ರಿದಿವದವೋಲನಿಮಿಷಮಯ
ಮದು ಶಶಿಯಂತಮೃತಯುಕ್ತಮವನೀಪತಿಯಂ।
ದದೆ ಕುವಲಯಸಂಶೋಭಿತ
ಮೆರ್ದೆಗೊಂಡುದು ವಿಕಚದಂಬುಜಪ್ರಸರಸರಂ ॥ ೯೧ ॥

ಹರಿವಕ್ಷದವೋಲ್ಲುಗ್ಘ್ಯಕ
ಪರಿವೃಢಪುರದವೊಲುರಗರ ಲೋಕದವೋಲ್ ಸಿಂ।
ಧುರದವೊಲೊಪ್ಪಿದುದಜಿವ
ಗುರ್ಗುರುತರಪದ್ಮಾಭಿಶೋಭಿತಂ ಕಾಸಾರಂ ॥ ೯೨ ॥

ಮತ್ತಮಾರಾಜಹಂಸಂ ರಾಜಹಂಸಪಟುಚಂಚೂಪುಟವಿದಳಿತವಿ ಮಲಕಮಲೋದರವಿಗಳನ್ಮಂಜು ಪರಿಮಳಮಿಳಿತಪರಾಗರಜಃಪಟಲಾಸಕ್ತ ಶುಂಭದ್ಭಂಭರನಿಕುರುಂಬವಿಚಲತ್ಪಕ್ಷವಿಕ್ಷೇಪೋಚ್ಚಳಿತವಾತ ಪೋತಘಾತ ಜಾತರಂಗತ್ತರಂಗಸಂಘಟ್ಟನಾಕೀರ್ಣಸಲಿಲಕಣಗಣಾಕ್ಷಾಳಿತಚಂದ್ರಕಾಂತಶಿಲಾಬದ್ಧ ತೀರಾಲಂಕೃತಕಾಸಾರಮಂ ಕಂಡತಿಮುದದಿಂ ನಡೆತಂದು ಸಾರ್ದು,

ನಡೆತಂದು ಸಾರ್ದು ಸರಸಿಯ
ನೊಡನೆ ಜಲಕ್ರೀಡೆಗುಚಿತಭೂಷಣಮಂ ತಾ।
ಳ್ದೆಡೆವಿಡದ ಮೋದದಿಂ ಪೆ
ಗ್ರ್ಗಡಣಂಬೆರಸೊಲ್ದು ಪೊಕ್ಕನಬ್ಜಾಕರಮಂ ॥ ೯೩ ॥

ಮಾಣದೆ ನೀರಾಟಕ್ಕೆ ಕ
ರೇಣುಚಯಂಬೆರಸು ದಂತಿ ಮಡುವೊಗುವಂತಾ।
ಕ್ಷೋಣೀಶಂ ಕಾಸಾರಮ
ನೇಣಾಕ್ಷಿಶ್ರೇಣಿಗೂಡಿ ಪೊಕ್ಕನಲಂಪಿಂ ॥ ೯೪ ॥

ತುಂಬಿದ ಕೊಳವು ಶೋಭಿಸಿತು. ೯೧. ಸ್ವರ್ಗದಂತೆ ದೇವತೆಗಳಿಂದ ಕೂಡಿದುದು, ಅದು ಚಂದ್ರನಂತೆ ಅಮೃತಮಯವು, ಮಹಾರಾಜನಂತೆ ಭೂಮಂಡಲದಿಂದ ಶೋಭಿಸಿರುವುದು. [ಹೀಗೆ] ವಿಶೇಷವಾಗಿ ಬೆಳಗುವ ತಾವರೆ ಕೊಳವು ಹೃದಯವನ್ನು ಸೂರೆಗೊಂಡಿತು. ೯೨. ವಿಷ್ಣುವಿನ ಎದೆಯಂತೆ, ಪ್ರಭುವಿನ ಪುರದಂತೆ, ನಾಗಲೋಕದಂತೆ, ಆನೆಯಂತೆ, ತಿಳಿದವರಿಗೆ ಗುಟ್ಟಿನ ರೀತಿಯಲ್ಲಿ ಆ ಕೊಳವು ಶ್ರೇಷ್ಠವಾದ ಕಮಲಗಳಿಂದ ಶೋಭೆಗೊಂಡು ಕಣ್ಣಿಗೆ ಅಂದವಾಯಿತು. ವ॥ ಮತ್ತೆ ಆ ರಾಜಹಂಸವು ರಾಜಹಂಸದ ಚೂಪಾದ ಕೊಕ್ಕಿನಿಂದ ಸೀಳಿದ ಶುಭ್ರವಾದ ಕಮಲದ ಹೊಟ್ಟೆಯಿಂದ ಹೊರಸೂಸುವ ಮನೋಹರವಾದ ಪರಿಮಳ ಮಿಶ್ರವಾದ ಪರಾಗದ ಧೂಳಿನಲ್ಲಿ ಆಸಕ್ತವಾದ ಹೊಳೆಯುವ ದುಂಬಿಗಳ ಸಮೂಹದಿಂದ ಅಲುಗಾಡುವ ರೆಕ್ಕೆಗಳು, ಅರಳಿ ಮೇಲಕ್ಕೆ ಚಿಮ್ಮುವ ರೆಕ್ಕೆಗಳು, ಕಿರುಗಾಳಿಯ ಹೊಡೆತದಿಂದ ಅಲೆಗಳ ತಾಗುವಿಕೆಯಿಂದ ಕವಿದ ತುಂತುರು ಹನಿಗಳಿಂದ ಚೆನ್ನಾಗಿ ತೊಳೆಯಲ್ಪಟ್ಟ ಚಂದ್ರಕಾಂತ ಶಿಲೆಯಿಂದ ನಿರ್ಮಿತವಾದ ದಡದಿಂದ ಅಲಂಕೃತವಾದ ಕೊಳವನ್ನು ಕಂಡು ಅತ್ಯಾನಂದದಿಂದ ಬಂದು ಸಮೀಪಿಸಿ, ೯೩. ಕೊಳವನ್ನು ಬಂದು ಸಮೀಪಿಸಿ, ಒಡನೆಯೆ ನೀರಾಟಕ್ಕೆ ಯೋಗ್ಯವಾದ ವಸ್ತ್ರವನ್ನು ಧರಿಸಿ ಎಡೆಬಿಡದ ಸಂತಸದಿಂದ ದೊಡ್ಡ ಗುಂಪಿನೊಡನೆ ಪ್ರೀತಿಯಿಂದ ತಾವರೆ ಕೊಳವನ್ನು ಪ್ರವೇಶಿಸಿದನು. ೯೪. ಬಿಡದೆ ಹೆಣ್ಣಾನೆಗಳೊಡನೆ

ಇಂದುಮುಖೀಕುಳಪರಿವೃತ
ಸೌಂದರಿವೆರಸುದ್ಭಟಕ್ಷಿತೀಂದ್ರಂ ಕೊಳನಂ।
ಮಂದಸ್ಮಿತವದನಂ ಪೊ
ಕ್ಕಂದು ಜಲಕ್ರೀಡೆಯಂ ನೆಗಬ್ಚಿದನೊಲವಿಂ ॥ ೯೫ ॥

ತವೆಯದ ಸೊಬಗಿಂ ನೀರಾ
ಟವನಾಡುವ ಕಾಂತೆಯರ್ಕಳೊಳ್ಜನನಾಥಂ।
ಸವಿಲಾಸಂ ಪಸರಿಸಲು
ತ್ಸವದಿಂ ಜಲಕೇಳಿಯಂ ನೆಗಬ್ಚುತುಮೆಸೆದಂ ॥ ೯೬ ॥

ನೀರಾಟಮಂ ನೆಗಬ್ಚುತೆ
ರಾರಾಜಿಪ ಭೂಪನಂಗಮಂ ಸೌಂದರಿ ಪಂ।
ಕೇರುಹಮುಖಿಯರ್ವೆರಸುದ
ಧಾರೆಗಳಿಂ ನೆಱೆ ತೊಯ್ಸಿದಳಿರದೆ ಸೊಗಸುಣ್ಮಲ್ ॥ ೯೭ ॥

ಮೊಲೆ ಕಂಪಿಸೆ ಮಣಿಹಾರಂ
ಚಲಿಸೆ ಕುರುಳ್ಕುಣಿಯೆ ಬಳ್ಕೆ ನಡು ಸೌಂದರಿ ಭೂ।
ತಳನಾಥನ ಮೇಲೊಲವಿಂ
ಲಲನಾತತಿವೆರಸು ಸೂಸಿದಳ್ ಪೊಸನೀರಂ ॥ ೯೮ ॥

ಪದೆದುದಮಂ ಸೂಸುವ ಮೃದು
ಪದಯುಗೆ ಸೌಂದರಿಯ ಮೇಲೆ ಸೂಸಿದನುದಮಂ।
ಮದನಾಭನುದ್ಭಟಂಗಂ
ಮದಮಾನಸನತಿವಿಳಾಸಮಂ ತಳೆದಾಗಳ್ ॥ ೯೯ ॥

ಆನೆಯು ನೀರಾಟಕ್ಕೆಂದು ನದಿಯನ್ನು ಹೊಗುವಂತೆ ಮಹಾರಾಜನು ಜಿಂಕೆಯ ಕಣ್ಣವಳ ಬಳಗದೊಡನೆ ಸಂತಸದಿಂದ ಕೊಳವನ್ನು ಪ್ರವೇಶಿಸಿದನು. ೯೫. ಚಂದ್ರಮುಖಿಯರಿಂದ ಸುತ್ತುವರಿಯಲ್ಪಟ್ಟ ಸೌಂದರಿಯೊಡನೆ ನಸುನಗೆಯಿಂದ ಕೂಡಿದ ಉದ್ಭಟಮಹಾರಾಜ ಚಂದ್ರಮನು ಕೊಳವನ್ನು ಹೊಕ್ಕು ಪ್ರೀತಿಯಿಂದ ನೀರಾಟವಾಡಿದನು. ೯೬. ಮುಕ್ಕಾಗದ ಲಾವಣ್ಯದಿಂದ ನೀರಾಟವಾಡುವ ಸ್ತ್ರೀಯರೊಡನೆ ಮಹಾರಾಜನು ಸೊಬಗು ಹರಡಲು ಸಂತೋಷದಿಂದ ನೀರಾಟವಾಡುತ್ತ ಶೋಭಿಸಿದನು. ೯೭. ನೀರಾಟವಾಡುತ್ತ ಶೋಭಿಸುವ ಮಹಾರಾಜನ ಶರೀರವನ್ನು ಸೌಂದರಿಯು ಕಮಲಮುಖಿಯರೊಡನೆ ಜಲಧಾರೆಗಳಿಂದ ಸೊಗಸು ಪ್ರಕಟವಾಗುವಂತೆ ಬಿಡದೆ ಚೆನ್ನಾಗಿ ಒದ್ದೆ ಮಾಡಿದಳು. ೯೮. ಮೊಲೆಗಳು ಅಲುಗಾಡಲು, ಮಣಿಹಾರವು ಚಲಿಸಲು, ಕುರುಳುಗಳು ಕುಣಿಯಲು, ನಡು ಬಳುಕಲು ಸೌಂದರಿಯು ಮಹಾರಾಜನ ಮೇಲೆ ಸ್ತ್ರೀಯರ ಸಮೂಹದೊಂದಿಗೆ ಪ್ರೀತಿಯಿಂದ ಹೊಸ ನೀರನ್ನು ಚೆಲ್ಲಿದಳು. ೯೯. ಪ್ರೀತಿಯಿಂದ ನೀರನ್ನು ಚೆಲ್ಲುವ ಮೃದುವಾದ ಪಾದಗಳ ಸೌಂದರಿಯ ಮೇಲೆ ಮನ್ಮಥ ಸಮಾನನಾದ ಉದ್ಭಟನು ಚೆಲ್ಲಿದನು. ಉಲ್ಲಾಸಗೊಂಡ

ತಚ್ಚಪಲಲೋಚನೆಯ ಭಾ
ಸ್ವಚ್ಚಿತ್ತಾನಂದವಲ್ಲಿಯಭಿವೃದ್ಧಿಗೆ ಪೊ।
ಯ್ಯಚ್ಚಗೊಳಿಪ್ಪಂಬುವೆನ
ಲ್ಕುಚ್ಚವದಿಂದರಸನೊಲ್ದು ಸೂಸಿದನೊಲವಿಂ ॥ ೧೦೦ ॥

ಮತ್ತಮದಲ್ಲದೆ,

ಮುದದಿಂ ನಲ್ಲಳ ಮೇಲೆ ಸೂಸುವ ತದುರ್ವೀಪಾಲನುತ್ತುಂಗಹ
ಸ್ತದ ಮಾಣಿಕ್ಯವಿಶೇಷಮುಕ್ತವಿಮಲಾಂಭೋಧಾರೆ ಸಾಮಿಪ್ಯದೊ।
ಳ್ಪೊದಟ್ಡಾಸಲ್ಲತಿಕಾಗ್ರದೊಳ್ಮಿಸುಪ ಸತ್ಕಂಕೇಳಿಶಾಖಾಗ್ರಗು
ಚ್ಛದಳತ್ಸೂನಮರಂದರಾಜಿಯೆನೆ ಕಣ್ಗಿಂಬಾದುದೇಂ ಬಣ್ಣಿಪೆಂ ॥ ೧೦೧ ॥

ಕುಂಜರಯಾನೆ ಸೌಂದರಿಯ ಮೇಲೆ ನೃಪಂ ಮಿಗೆ ಸೂಸೆ ವಾಃಕಣಂ
ರಂಜಿಸಿದತ್ತು ಕೋಕಕುಚಯುಗ್ಮಮನಂಟಿ ಬೆಳರ್ತು ದರ್ಪಕಂ।
ಸಂಜನಿತಪ್ರಮೋದಮನೆ ತಾಳ್ದು ಸುವರ್ಣದ ಲಿಂಗಕೊಲ್ದು ಪು
ಷ್ಪಾಂಜಲಿಯಂ ನೆಗಟ್ಚಿದವೊಲಾಜಲಕೇಳಿಯೊಳೊಳ್ಪನೀಯುತುಂ ॥ ೧೦೨ ॥

ಪೂಣರ್ವಿಂದುದ್ಯುತಿ ಪಾರ್ಶ್ವದೊಳ್ಪೊಗಯಿಪುದ್ಯತ್ಕಾಂತಿವೆತ್ತಿರ್ಪ ರೋ
ಹಿಣಿಯಂ ಬಾಸಣಿಪಂತೆ ತನ್ಮಹಿಪಹಸ್ತನ್ಯಸ್ತಸಂಶೋಭಿತೋ।
ಲ್ಬಣಮುಕ್ತಾಫಲಶೃಂಗಮುಕ್ತವಿಲಸಚ್ಛ್ರೀಖಂಡಸಮ್ಮಿಶ್ರವಾಃ
ಕಣಜಾಲಂ ತನುವಲ್ಲಿಯಂ ಮುಸುಕಿದತ್ತಾಸೌಂದರೀದೇವಿಯಾ ॥ ೧೦೩ ॥

ಮನಸ್ಸು ಪ್ರಸನ್ನತೆಯನ್ನು ಪಡೆದು ಆಗ, ೧೦೦. ಆ ಚಂಚಲಾಕ್ಷಿಯ ಹೊಳೆವ ಹೃದಯದ ಆನಂದದ ಬಳ್ಳಿಯ ಪೋಷಣೆಗೆ ಸ್ವಚ್ಛವಾದ ನೀರನ್ನು ಎರೆಯುತ್ತಿರುವನೋ ಎಂಬಂತೆ ಉತ್ಸಾಹದಿಂದ ಅರಸನು ಪ್ರೀತಿಯಿಂದ ನೀರನ್ನು ಚೆಲ್ಲಿದನು. ವ॥ ಮತ್ತೆ ಅದಲ್ಲದೆ, ೧೦೧. ಆನಂದದಿಂದ ಪ್ರಿಯಳ ಮೇಲೆ ಚೆಲ್ಲುವ ಆ ಮಹಾರಾಜನ ಸುಂದರವಾದ ಕೈಯಲ್ಲಿನ ಮಾಣಿಕ್ಯ ವಿಶೇಷದಿಂದ ಹೊರಸೂಸುವ ಪವಿತ್ರವಾದ ನೀರು ಸಮೀಪದಲ್ಲಿ ಹರಡಿ, ಅಶೋಕ ವೃಕ್ಷದ ಕೊಂಬೆಯಲ್ಲಿನ ಬಳ್ಳಿಯ ಮೇಲೆ ಹೊಳೆಯುವ ಮಕರಂದಭರಿತವಾದ ಹೂವಿನ ಗೊಂಚಲು ಎನ್ನುವಂತೆ ಕಣ್ಣಿಗೆ ಸೊಗಸಾಯಿತು. ಅದನ್ನು ಹೇಗೆ ಬಣ್ಣಿಸಲಿ! ೧೦೨. ಆನೆಯ ನಡಿಗೆಯುಳ್ಳ ಸೌಂದರಿಯ ಮೇಲೆ ಮಹಾರಾಜನು ಚೆನ್ನಾಗಿ ಚೆಲ್ಲಲು ನೀರ ಹನಿಗಳು ಕೋಕಪಕ್ಷಿಗಳಂತಿರುವ ಮೊಲೆಗಳ ಮೇಲೆ ಅಂಟಿ ಮನ್ಮಥನು ಕಾಂತಿಗೊಂಡು ಸಂತಸವನ್ನು ತಾಳಿ ಸುವರ್ಣಲಿಂಗಕ್ಕೆ ಪ್ರೀತಿಯಿಂದ ಪುಷ್ಪಾಂಜಲಿಯನ್ನು ಮಾಡಿದ ರೀತಿಯಲ್ಲಿ ಆ ನೀರಾಟದಲ್ಲಿ ಸುಖವನ್ನುಂಟುಮಾಡುತ್ತ, ೧೦೩. ಬೆಳಗುವ ಚಂದ್ರನ ಕಾಂತಿಯು ಪಕ್ಕದಲ್ಲಿ ಹೆಚ್ಚಿನ ಕಾಂತಿಯನ್ನು ಹೊಂದಿ ಅಂದವಾಗಿ ಕಾಣುವ ರೋಹಿಣಿಯನ್ನು ಮುಚ್ಚಿದಂತೆ ಆ ಮಹಾರಾಜನ ಕೈಸೇರಿ ಚೆನ್ನಾಗಿ ಶೋಭಿಸಿರುವ ಅತಿಶಯವಾದ ಮುತ್ತುಗಳಂತೆ ಹೊಳೆವ ಶ್ರೀಗಂಧ ಮಿಶ್ರವಾದ ನೀರಹನಿಗಳು ಆ ಸೌಂದರೀದೇವಿಯ ಶರೀರವೆಂಬ ಬಳ್ಳಿಯನ್ನು

ಮತ್ತಮದಲ್ಲದೆ,

ಪ್ರಮಥವರೋದ್ಭಟಾಕನುಱು ಸೂಸಿದ ಕತ್ತುರಿ ನೀರ ಬಿಂದುಗಳ್
ಕಮಲದಳಾಯತಾಕ್ಷಿ ಸೌಂದರಿಯ ಪೆರ್ಮೊಲೆಯಿಕ್ಕೆಲದಲ್ಲಿ ಪತ್ತಿ ತಾಂ।
ಸಮುದಿತಶೋಭೆವೆತ್ತುವು ಮನೋಜಮಹೀಧವಕುಂಭಿಕುಂಭಮೂ
ಲಮಿಳದನೂನದಾನಬಿಂದುಗಳೆಂಬಿನಮಂಬುಕೇಳಿಯೊಳ್ ॥ ೧೦೪ ॥

ಈಪರಿಯಿಂ ಜಲಕೇಳಿಯೊಳೆಸೆವಾ
ಭೂಪನ ಮೇಲೆ ಸುಧರ್ಮಜೆ ನೀರಂ।
ಚಾಪಲಲೋಚನೆಯರ್ವರೆ ಖಂಡೇಂ
ದೂಪಮಶೃಂಗದೆ ಸೂಸಿದರಾಗಳ್ ॥ ೧೦೫ ॥

ಕಾಮಿನೀತತಿಗೂಡಿ ಸೌಂದರದೇವಿ ತುಳ್ಕುವ ವಾರಿಗು
ದ್ದಾಮಮೋದಮನಾಂತು ಪೆರ್ಚಿ ಮಗುಬ್ಬಿ ತದ್ವಿಮಳಾಂಗನಾ।
ಸ್ತೋಮಮಂ ನವಸೌರಭೋದಕಧಾರೆಯಿಂ ಮಿಗೆ ತೊಯ್ಸಿದಂ
ಕಾಮಸನ್ನಿಭರೂಪನುದ್ಭಟಭೂಮಿಪಾಲಕಕುಂಜರಂ ॥ ೧೦೬ ॥

ಫೂತ್ಕಾರಿತೇಂದ್ರಗಜಚಂ
ಚತ್ಕರಮುಕ್ತೋದಕಾರ್ದ್ರಕರಿಗಳೆನಿಸ।
ಲ್ಪತ್ಕಾಂತೆಯರಂ ನೃಪನಂ
ಚತ್ಕಾಂಚನಶೃಂಗಜಲದೆ ತೊಯ್ಸಿದನಾಗಳ್ ॥ ೧೦೭ ॥

ಗಣ್ಯಮಹೋದ್ಭಟಾಂಕನುಱು ಸೂಸಿದ ಮಂಜುಳವಾಃಕಣಾಳಿ ನೈ
ಪುಣ್ಯೆಯದೊರ್ವಳುನ್ನತಕುಚಾಂತರದಿಂ ಪರಿದತ್ತು ಚಾರುಹೈ।
ರಣ್ಯನವೀನಕುಂಭದೊಳನಂಗಮಹೀಪತಿ ತೀವಿದಚ್ಛಲಾ
ವಣ್ಯರಸಂ ಪೊದಟ್ಟು ಮಿಗೆ ತಾಂ ಪೊಱಸೂಸಿದುದೆಂಬ ಮಾಱ್ಕೆಯಿಂ ॥ ೧೦೮ ॥

ಕವಿದಿದ್ದಿತು. ವ॥ ಮತ್ತೆ ಅದಲ್ಲದೆ, ೧೦೪. ಪ್ರಮಥರಲ್ಲಿ ಶ್ರೇಷ್ಠನಾದಂತಹ ಉದ್ಭಟನು ನೀರಾಟವಾಡುವಲ್ಲಿ ಚೆನ್ನಾಗಿ ಚೆಲ್ಲಿದ ಕಸ್ತೂರಿಯ ನೀರಹನಿಗಳು ಕಮಲದಳ ನೇತ್ರೆಯಾದ ಸೌಂದರಿಯ ಭಾರವಾದ ಮೊಲೆಗಳ ಎರಡೂ ಪಕ್ಕಗಳಲ್ಲಿ ಹತ್ತಿ ಮನ್ಮಥರಾಜನ ಆನೆಯ ಕುಂಭಸ್ಥಳದಲ್ಲಿ ಸೇರಿದ ಅಸಂಖ್ಯವಾದ ನೀರಹನಿಗಳೆನ್ನುವಂತೆ ಚೆನ್ನಾಗಿ ಶೋಭೆಯನ್ನು ಪಡೆದವು. ೧೦೫. ಈ ರೀತಿ ನೀರಾಟದಲ್ಲಿ ಶೋಭಿಸುವ ಮಹಾರಾಜನ ಮೇಲೆ ಸೌಂದರಿಯು ಚಂಚಲಾಕ್ಷಿಯರು ಬರಲು ಅವರೊಡನೆ ಕೂಡಿ ಅರ್ಧಚಂದ್ರನ ರೀತಿಯಲ್ಲಿ ಕೊಂಬಿನಲ್ಲಿ ನೀರನ್ನು ಆಗ ಚೆಲ್ಲಿದರು. ೧೦೬. ಚೆಲುವೆಯರೊಡನೆ ಸೌಂದರದೇವಿಯು ಚೆಲ್ಲುವ ನೀರಿಗೆ ಅತ್ಯಾನಂದವನ್ನು ಹೊಂದಿ ಉಬ್ಬಿ, ಪ್ರತಿಯಾಗಿ ಆ ಚೆಲುವೆಯರಿಗೆ ಪರಿಮಳ ಜಲಧಾರೆಯಿಂದ ಮನ್ಮಥ ಸಮಾನನಾದ ಆನೆಯಂತೆ ಬಲಿಷ್ಠನಾದ ಉದ್ಭಟ ಮಹಾರಾಜನು ಚೆನ್ನಾಗಿ ತೊಯ್ಸಿದನು. ೧೦೭. ಗಜೇಂದ್ರನು ತನ್ನ ಹೊಳೆವ ಸೊಂಡಿಲಿನಿಂದ ಫೂತ್ಕರಿಸಿ ಹೊರಚೆಲ್ಲುವ ನೀರಿನಿಂದ ಒದ್ದೆಯಾದ ಆನೆಗಳೆನ್ನುವಂತೆ, ಸ್ತ್ರೀಯರನ್ನು ಮಹಾರಾಜನು ಹೊಳೆಯುವ ಚಿನ್ನದ ಕೊಂಬಿನಲ್ಲಿರುವ ನೀರಿನಿಂದ ಆಗ ತೊಯ್ಸಿದನು. ೧೦೮. ಗೌರವಾನ್ವಿತನಾದ ಉದ್ಭಟಮಹಾರಾಜನು ಚೆನ್ನಾಗಿ ಚೆಲ್ಲಿದ ಮನೋಹರವಾದ

ಜಲಕಣತತಿ ಯೊರ್ವಳ ಕುಂ
ತಳದೆಡೆಯಡಿಯಲ್ಲಿ ಸಿಲ್ಕಿ ರಾರಾಜಿಸುಗುಂ।
ಅಳಿಮಾಲಿಕ ಮುನ್ನುಂಡು
ಜ್ವಳಮಲ್ಲೀಗತಮರಂದಮಂ ಕಾಱುವವೋಲ್ ॥ ೧೦೯ ॥

ಮತ್ತಮದಲ್ಲದೆ,

ಮುಕ್ತವಿಲೋಚನೋದ್ಭಟಮಹೀಧವಪಾಣಿತಳಸ್ಥಶೃಂಗನಿ
ರ್ಮುಕ್ತಮನೋಜ್ಞಕುಂಕುಮರಸಾವಿಲನೂತನಸೌರಭೋದಕಾ।
ಸಿಕ್ತಲತಾಂಗಿಯೊರ್ವಳೆಸೆದಳ್ ಕಿಸುಸಂಜೆಯೊಳೊಪ್ಪಿತೋರ್ಪ ಸ
ಮ್ಯಕ್ತರ ಕಾಂತಿವೆತ್ತು ಪರಿಶೋಭಿಪ ಚಂದ್ರನ ಲೇಖೆಯೆಂಬಿನಂ ॥ ೧೧೦ ॥

ಸದಮಲಚಿತ್ತನುದ್ಭಟಮಹೀಪತಿ ತುಳ್ಕುವ ಕುಂಕುಮಾಂಬು ಪ
ತ್ತಿದ ಮೃಗಶಾಬಕಾಂಬಕೆಯದೊರ್ವಳ ಶುಂಭದುರೋಜಯುಗ್ಮಮೊ।
ಪ್ಪಿದುದುಱಿ ಸಿಂದುರಂಬೆರೆದ ದರ್ಪಕಭೂಪತಿಯಂಘ್ರಿಯಂಟಿ ಮೆ
ಟ್ಟಿದ ಕರಿಕುಂಭಮೆಂಬಿನಮಲಂಪಮದಾವಿಪುಳಾಂಬುಕೇಳಿಯೊಳ್ ॥ ೧೧೧ ॥

ಮತ್ತಮದಲ್ಲದೆ,

ಜನನುತನುದ್ಭಟಕ್ಷಿತಿಪಕುಂಜರನೊಯ್ಯನೆ ನೂಂಕಿದಚ್ಛಕಾಂ
ಚನಜಳಯಂತ್ರದಿಂ ಪರಿವ ನಿರ್ಮಳಚಂದನವಾರಿಧಾರೆಯಂ
ದನಿಮಿಷನೇತ್ರೆಯೊರ್ವಳಲರ್ಗಣ್ಬಳಿಗೊಂಡಿಳಿದೊಪ್ಪಿದತ್ತು ಚಾ
ರುನವಚಕೋರಿಗಳ್ ಬಿಡದೆ ಕರ್ಚಿದ ಚಂದ್ರಮರೀಚಿಯೆಂಬವೋಲ್ ॥ ೧೧೨ ॥

ನೀರಹನಿಗಳು ಮನೋಹರವಾದ ಚಿನ್ನದ ಹೊಸಮಡಿಕೆಯಲ್ಲಿ ಕಾಮರಾಜನು ತುಂಬಿದ ಶುದ್ಧವಾದ ಲಾವಣ್ಯರಸವು ವ್ಯಾಪಕವಾಗಿ ಹೊರಸೂಸಿತು ಎಂಬಂತೆ ಜಾಣತನದಿಂದ ಓರ್ವಳ ಎತ್ತರವಾದ ಮೊಲೆಗಳ ಮೇಲಿಂದ ಹರಿದವು. ೧೦೯. ನೀರ ಹನಿಗಳ ಮೊತ್ತವು ಓರ್ವಳ ಕೂದಲೆಡೆಯಲ್ಲಿ ಸಿಲುಕಿ ದುಂಬಿಗಳ ಸಮೂಹವು ಮನೋಹರವಾದ ಮಲ್ಲಿಗೆಗಳಲ್ಲಿರುವ ಮಕರಂದವನ್ನು ಸವಿದು ಕಾರುವ ರೀತಿಯಲ್ಲಿ ಶೋಭಿಸುವುದು. ವ॥ ಮತ್ತೆ ಅದಲ್ಲದೆ, ೧೧೦. ಅರಳಿದ ಕಣ್ಣುಳ್ಳ ಉದ್ಭಟ ಮಹಾರಾಜನ ಅಂಗೈಯಲ್ಲಿನ ಮನೋಹರವಾದ ನವಸುಗಂಧಯುಕ್ತವಾದ ಕುಂಕುಮದ ನೀರಿನಿಂದ ಒದ್ದೆಯಾದ ಬಳ್ಳಿಯಂತೆ ಬಳುಕುವ ಸುಂದರಿಯೋರ್ವಳು ಕೆಂಪು ಕವಿದ ಸಂಜೆಯಲ್ಲಿ ಅತಿಶಯ ಕಾಂತಿಯಿಂದ ಕೂಡಿ ಚೆನ್ನಾಗಿ ಶೋಭಿಸುವ ಚಂದ್ರನ ಕಿರಣಗಳಂತೆ ಅಂದಗೊಂಡಳು. ೧೧೧. ನಿರ್ಮಲ ಮನಸ್ಸಿನ ಉದ್ಭಟ ಮಹಾರಾಜನು ಚೆಲ್ಲಿದ ಕುಂಕುಮದ ನೀರು ಮೈಮೇಲೆ ಬಿದ್ದಾಗ ಜಿಂಕೆ ಮರಿಯ ಕಣ್ಣಿನಂತೆ ಚಂಚಲ ನೋಟವುಳ್ಳ ಸುಂದರಿಯೋರ್ವಳ ಹೊಳೆವ ಮೊಲೆಗಳು, ಮನ್ಮಥ ಮಹಾರಾಜನ ಕುಂಕುಮಲೇಪಿತವಾದ ಪಾದಗಳು ತಾಗಿ ಮೆಟ್ಟಿದ ದಪ್ಪನೆಯ ಕುಂಭಸ್ಥಲವೆನ್ನುವಂತೆ ಸೊಗಸಾದ ಆ ನೀರಾಟದಲ್ಲಿ ಚೆನ್ನಾಗಿ ಶೋಭಿಸಿದವು. ವ॥ ಮತ್ತೆ ಅದಲ್ಲದೆ, ೧೧೨. ಜನರ ಮೆಚ್ಚುಗೆಗೆ ಪಾತ್ರನಾದ ಉದ್ಭಟ ಮಹಾರಾಜನೆಂಬ

ಪೊಸಸಿರಿಕಂಡದ ಜಲಕಣ
ವಿಸರಂಬೊರೆದೊರ್ವಕಾಮಿನಿಯ ನಿಡುಜಡೆ ರಂ।
ಜಿಸಿದುದು ಪೊಗರೊಗೆಯೆ ವಿಜ್ರಂ
ಭಿಸುವಂಗಜನೃಪನ ಮಸೆದ ಸುರಗಿಯ ಪಾಂಗಿಂ ॥ ೧೧೩ ॥

ಮತ್ತಮದಲ್ಲದೆ,

ಭೂರಮಣೋದ್ಭಟಾಂಕನೃಪಕುಂಜರನೊಯ್ಯನೆ ತುಳ್ಕಿದಚ್ಛಕ
ಸ್ತೂರಿಯ ವಾರಿಯಿಂ ನನೆದು ಕಪ್ಪಿಡಿದಂಬರಮೊಪ್ಪಲೊಪ್ಪುಗುಂ।
ಸಾರಸನೇತ್ರೆಯೊರ್ವಳ ಸಿತಾಂಬುದಮಧ್ಯದೊಳುಣ್ಮಿ ಪೊಣ್ಮಿ ಮೇ
ಣ್ಕೋರಯಿಪಚ್ಚಪೊಚ್ಚಪೊಸಮಿಂಚುವ ಮಿಂಚಿದೆಂಬಿನಂ ॥ ೧೧೪ ॥

ಅಲರ್ದ ಸರೋಜಕಂದೆಱಪ ಭಾಕುಳಿದುಂಬಿಯ ಬಂಬಲೆಂಬಿನಂ
ಲಲನೆಯದೊರ್ವಳಾನನಮನೀಕ್ಷಿಸುತುದ್ಭಟದೇವನೊಲ್ದು ಮಂ।
ಜುಳಜಳಯಂತ್ರದಿಂದೆ ನಲಿದೊತ್ತಿದ ಕತ್ತುರಿನೀರ ಧಾರೆ ತ
ಲ್ಲಲಿತಮುಖಾಬ್ಜಮಂ ನಿಮಿರ್ದು ಮುತ್ತಿ ಮುಸುಂಕಿದುದಂಬುಕೇಳಿಯೊಳ್ ॥ ೧೧೫ ॥

ಅಳವಡಲುದ್ಭಟೋರ್ವಿಪತಿ ಯೊತ್ತಿದೊಡೊಯ್ಯನೆ ಪೊಚ್ಚಪೊನ್ನಚೀ
ರ್ಕೊಳವೆಯನುಣ್ಮಿ ಪೊಣ್ಮಿ ಪರಿವುಜ್ಜಳ ಕತ್ತುರಿಯಂಬುಧಾರೆ ಯೊ।
ರ್ವಳ ಕುಚಕುಂಕುಮಮಧ್ಯಕಿಟೆದತ್ತು ಮಹೀಧ್ರದಿರುಂಬಿಗೊಯ್ಯನು
ಚ್ಚಳಿಸಿ ಪೊದಟ್ದು ಮೇಣ್ಪರಿವ ಕೃಷ್ಣ ಭುಜಂಗಕಿಶೋರವೆಂಬಿನಂ ॥ ೧೧೬ ॥

ಆನೆಯು ಮೆಲ್ಲನೆ ತಳ್ಳಿದ ಶುಭ್ರವಾದ ಚಿನ್ನದ ಜಲಯಂತ್ರದಿಂದ ಸುರಿಯುವ ನಿರ್ಮಲವಾದ ಶ್ರೀಗಂಧದ ಜಲಧಾರೆಯು ಎವೆಯಿಕ್ಕದ ಚೆಲುವೆಯೋರ್ವಳ ಹೂವಿನಂತಹ ಕೋಮಲವಾದ ಕಣ್ಣುಗಳನ್ನು ಸಮೀಪಿಸಿ, ಸುಂದರವಾದ ಎಳೆಯ ಚಕೋರ ಪಕ್ಷಿಗಳು ಸವಿಯುತ್ತಲಿರುವ ಚಂದ್ರನ ಕಿರಣಗಳೋ ಎನ್ನುವಂತೆ ಶೋಭಿಸಿರುವುದು. ೧೧೩. ಎಳೆಯ ಶ್ರೀಗಂಧದ ನೀರಹನಿಗಳನ್ನು ಹೊಂದಿರುವ ಓರ್ವ ಚೆಲುವೆಯ ಉದ್ದವಾದ ಜಡೆಯು, ಕಾಂತಿ ಚೆಲ್ಲುತ್ತಾ ಶೋಭಿಸಿರುವ ಕಾಮರಾಜನ ಮಸೆದ ಕತ್ತಿಯ ರೀತಿಯಲ್ಲಿ ಅಂದಗೊಂಡಿತು. ವ॥ ಮತ್ತೆ ಅದಲ್ಲದೆ, ೧೧೪. ಭೂದೇವಿಗೆ ಪತಿಯಾದ ಉದ್ಭಟಮಹಾರಾಜನೆಂಬ ಆನೆಯು ಮೆಲ್ಲನೆ ಚೆಲ್ಲಿದ ಕಸ್ತೂರಿಯ ನೀರಿನಿಂದ ಒದ್ದೆಯಾಗಿ ಕಪ್ಪಾದ ವಸ್ತ್ರಗಳು, ಕಮಲಾಕ್ಷಿಯೋರ್ವಳು ಕಪ್ಪಾದ ಮೋಡದ ಮಧ್ಯದಲ್ಲಿ ಹಿಗ್ಗಿ ಹೊರಚೆಲ್ಲಿ ಕಣ್ಣನ್ನು ಕುಕ್ಕುವ ನವನವೀನವಾಗಿ ಹೊಳೆಯುವ ಮಿಂಚೆನ್ನುವಂತೆ ಒಪ್ಪಿ ಶೋಭಿಸಿರುವುದು. ೧೧೫. ಅರಳಿದ ಕಮಲಕ್ಕೆ ಎರಗುವ ಹೊಳೆವ ದುಂಬಿಗಳ ಸಮೂಹವೆನ್ನುವಂತೆ ಚೆಲುವೆಯೋರ್ವಳ ಮುಖವನ್ನು ನೋಡುತ್ತ ಉದ್ಭಟದೇವನು ನೀರಾಟವಾಡುವಾಗ ಪ್ರೀತಿಯಿಂದ ಮನೋಹರವಾದ ಜಲಯಂತ್ರದಿಂದ ಚೆಲ್ಲಿದ ಕಸ್ತೂರಿಯ ಜಲಧಾರೆಯು ಆ ಸುಂದರವಾದ ಮುಖಕಮಲವನ್ನು ಚೆನ್ನಾಗಿ ಮುತ್ತಿ ಕವಿಯಿತು. ೧೧೬. ಹೊಸ ಚಿನ್ನದ ನೀರ್ಕೊಳವೆಯನ್ನು ಹೊಂದಿಸಿ ಉದ್ಭಟಮಹಾರಾಜನು ಅದನ್ನು ಒತ್ತಲು ಮೆಲ್ಲನೆ ಹೊಮ್ಮಿ ಹರಿಯುವ ಹೊಳೆವ ಕಸ್ತೂರಿಯ ಜಲಧಾರೆಯು ಓರ್ವಳ ಮೊಲೆಗಳ ಮಧ್ಯದಲ್ಲಿನ ಕುಂಕುಮಕ್ಕೆ ಪರ್ವತದ

ಪಟುಭಟನುದ್ಭಟೋರ್ವಿಪಕುಲಾಗ್ರಣಿ ಮೆಲ್ಲನವುಂಕಿದುಜ್ವಳ
ಸ್ಫುಟರುಚಿವೆತ್ತ ಜೀರ್ಕೊಳವಿಯಿಂದ ವಿಜೃಂಭಿಸೆ ಪಾಯ್ದು ತಾಗಿ ಮೇ।
ಣ್ಪುಟನೆಗೆದುರ್ಬಿ ಬೀಱ್ವ ಪೊಸಕತ್ತುರಿನೀರ್ವನಿಯೊಪ್ಪಿತೊರ್ವಳು
ತ್ಕಟವದನೇಂದು ಕೂರ್ತು ತೆಗೆದಿಕ್ಕುವ ತನ್ನ ಕಳಂಕಮೆಂಬಿನಂ ॥ ೧೧೭ ॥

ಇಂತುಂ ಸೊಬಗಿನೊಳುರ್ವೀ
ಕಾಂತಂ ತಾನಾಸುಗಂಧಜಲಮಂ ಸೂಸಲ್।
ಸಂತಸದಿಂದರಸನ ಮೇ
ಲಂತಾಸತಿಯರ್ಮಗುೞ್ದು ಸೂಸಿದರುದಮಂ ॥ ೧೧೮ ॥

ಮಿನುಪೋಷ್ಠಂ ತುಳ್ಕೆ ಕೆಂಪಂ ತಳತಳಿಪಲರ್ಗಣ್ಗಳ್ಕರಂ ತುಳ್ಕೆ ಬೆಳ್ಪಂ
ಘನಕೇಶಂ ತುಳ್ಕೆ ಕಪ್ಪಂಪದೆದು ಸುದತಿಯರ್ಸೂಸಿದರ್ಚಾರುಕಾಶ್ಮೀ।
ರನವಶ್ರೀಖಂಡಕಸ್ತೂರಿಯ ನೆಗೞ್ದುದಮಂ ಮೋದದಿಂದಂ ಧರಿತ್ರೀ
ಶನ ಮೇಲರ್ಕಾಂಶುಚಂದ್ರಾತಪತಿಮಿರಚಯಂಕೂಡಿತೆಂಬಂತಿರೆತ್ತಂ ॥ ೧೧೯ ॥

ಕಮಲಂ ಕಮಲಂ ಕುಮುದಂ
ಕುಮುದಂ ಲತೆ ಲತೆಗಳುಱೆಪಳಂಚುವವೋಲಂ।
ದಮಲಾನನಾಕ್ಷಿತನುಗಳು
ಮಮರಲ್ನೀರಾಟವಾಡಿದರ್ಕಾಮಿನಿಯರ್ ॥ ೧೨೦ ॥

ಮತ್ತಮದಲ್ಲದೆ,

ಪೊಟರೆಗೆ ಮೆಲ್ಲನೆ ಉತ್ಸಾಹದಿಂದ ಹರಿಯುವ ಎಳೆಯ ಕೃಷ್ಣಸರ್ಪವೆನ್ನುವಂತೆ ಇಳಿಯಿತು. ೧೧೭. ವೀರಾಗ್ರಣಿಯಾದ ಉದ್ಭಟಮಹಾರಾಜನು ಕಾಂತಿಪೂರ್ಣವಾಗಿ ಹೊಳೆಯುವ ಜೀರ್ಕೊಳವೆಯನ್ನು ಮೆಲ್ಲನೆ ಒತ್ತಲು ಅದರಿಂದ ಜೋರಾಗಿ ಉಬ್ಬಿ ನೆಗೆದು ಚೆನ್ನಾಗಿ ಹರಡಿ ತಾಗುವ ಹೊಸ ಕಸ್ತೂರಿಯ ನೀರ ಹನಿಯು, ಓರ್ವಳ ಸೊಗಸಾದ ಮುಖಚಂದ್ರದಲ್ಲಿನ ಕಲೆಯನ್ನು ಪ್ರೀತಿಯಿಂದ ತೆಗೆದು ಹಾಕುವ ರೀತಿಯಲ್ಲಿ ಅಂದಗೊಂಡಿತು. ೧೧೮. ಹೀಗೆ ಸೊಬಗಿನಿಂದ ಮಹಾರಾಜನು ಆ ಸುಗಂಧದ ನೀರನ್ನು ಚೆಲ್ಲಲು, ಆನಂದದಿಂದ ಅರಸನ ಮೇಲೆ ಆ ಚೆಲುವೆಯರು ಪ್ರತಿಯಾಗಿ ನೀರನ್ನು ಚೆಲ್ಲಿದರು. ೧೧೯. ಹೊಳೆಯುವ ತುಟಿಗಳು ಕೆಂಪನ್ನು ಹೊರಚೆಲ್ಲಲು, ಥಳಥಳಿಸುವ ಹೂಗಣ್ಣುಗಳು ಕಾಂತಿಯನ್ನು ಚೆನ್ನಾಗಿ ತುಳುಕಲು, ದಟ್ಟವಾದ ಕೂದಲು ಕಪ್ಪನ್ನು ಹರಡಲು ಸುಂದರಿಯರು ಮನೋಹರವಾದ ಕಾಶ್ಮೀರದ ಎಳೆಯ ಶ್ರೀಗಂಧ ಕಸ್ತೂರಿ ಮೊದಲಾದವುಗಳ ನೀರನ್ನು ಸಂತಸದಿಂದ ಮಹಾರಾಜನ ಮೇಲೆ ಸೂರ್ಯ ಚಂದ್ರರ ಕಾಂತಿಯ ಮೊತ್ತವು ಎಲ್ಲೆಡೆ ತುಂಬಿತೆಂಬಂತೆ ಚೆಲ್ಲಿದರು. ೧೨೦. ಕಮಲ ಕಮಲಗಳು, ನೀಲೋತ್ಪಲ ನೀಲೋತ್ಪಲಗಳು, ಲತೆ ಲತೆಗಳು ಚೆನ್ನಾಗಿ ಹೊಳೆಯುವ ರೀತಿಯಲ್ಲಿ ನಿರ್ಮಲವಾದ ಮುಖ, ಕಣ್ಣು, ಶರೀರಗಳು ಚೆನ್ನಾಗಿ ಹೊಂದುವಂತೆ (ಕಮಲವು ಮುಖಕ್ಕೆ, ನೀಲೋತ್ಪಲಗಳು ಕಣ್ಣಿಗೆ, ಲತೆಗಳು ಶರೀರಕ್ಕೆ ಹೊಂದುವಂತೆ) ಚೆಲುವೆಯರು ನೀರಾಟವಾಡಿದರು. ವ॥ ಮತ್ತೆ

ಧರಣೀಶಂ ಕವಿದೊತ್ತಿ ಮುತ್ತಿ ಪೊಸನೀರಂ ಸೂಸುವಬ್ಜಾನನೋ
ತ್ಕರಮಧ್ಯೋಜ್ವಳಸೌಂದರೀಪ್ರಮುಖಶುಂಭತ್ಕಾಮಿನೀವೃಂದಮಂ।
ಪಿರಿದಾನಂದದಿನೊಲ್ದು ನೋಡಿ ನಗುತುಂ ಬೆಳ್ಪಂ ಪ್ರಸಾರಿಪ್ಪ ಸ
ಚ್ಛರದಿಂದೂಪಳಶೃಂಗಮುಕ್ತವಿಮಳಾಂಭೋಧಾರೆ ಧಾರಯ್ದಿದಂ ॥ ೧೨೧ ॥

ತಚ್ಚಿತ್ತೋದ್ಭವಸನ್ನಿಭೋದ್ಭಟಕರಾಂಭೋಜಸ್ಥಿತಸ್ವಚ್ಛಭಾ
ಸ್ವಚ್ಚಂದ್ರೋಪಲತುಂಗಶೃಂಗಕುಹರೋನ್ಮುಕ್ತಾಂಬುಧಾರಾಸಮಾ।
ಜೋಚ್ಚೇಂದುದ್ಯುತಿಜಾಲಲೋಲಘನಲೀಲಾಸಕ್ತಚೇತೋವಿಜೃಂ
ಭಚ್ಛಾಂಚಲ್ಯಚಕೋರರಾಜಿಯೆನೆ ಕಾಂತಾಶ್ರೇಣಿ ಕಣ್ಗೊಪ್ಪುಗುಂ ॥ ೧೨೨ ॥

ಮತ್ತಮದಲ್ಲದೆ,

ತಾಂ ಚೆಲ್ವಿಂ ಜಲಕೇಳಿಯಂ ಸಲಿಪ ಕಾಂತಾಕೇಶಮಂ ಮೇಘಮೆಂ
ದಂಚತ್ಕಂಕಣರಾವಮಂ ಘನನಿನಾದಂಗೆತ್ತು ದೃಕ್ಕಾಂತಿಯಂ।
ಮಿಂಚೆಂದುದ್ಭಟಭೂಭುಜವ್ರಜಮೃಗೇಂದ್ರಂ ಸೂಸುವಚ್ಛಾಂಬುವಂ
ಚಂಚದ್ವರ್ಷಮದೆಂದು ನೋಡಿ ಶಿಖಿಗಳ್ ನರ್ತಿಪ್ಪುವಾಪ್ರಾಂತದೊಳ್ ॥ ೧೨೩ ॥

ಮತ್ತಮದಲ್ಲದೆ,

ವಿಕಚತ್ಕಾಂಚನಕಂಜಗಂಧಮನಲಂಪಂಬೆತ್ತು ಪೀರ್ದುರ್ಬಿ ತ
ನ್ಮಕರಂದೋತ್ಕರದೊಳ್ಜಿಗಿಲ್ತು ಕಡು ಸೊರ್ಕಿಂ ಪತ್ತಿದಿಂದಿಂದಿರ।
ಪ್ರಕರಂಬೊಲ್ ನೃಪನೊಲ್ದು ಸೂಸಿದಮಳಾಂಭೋಧಾರೆಯಿಂ ತೊಯ್ದು ಕಾ
ನಕವರ್ಣಾಂಗಿಯ ಮಂಜುಫಾಲಕದೊಳೇನೊಪ್ಪಿರ್ದುದೋ ಕುಂತಳಂ ॥ ೧೨೪ ॥

ಅದಲ್ಲದೆ, ೧೨೧. ಮಹಾರಾಜನು ಆಕ್ರಮಿಸಿ ಮುತ್ತಿ ಹೊಸ ನೀರನ್ನು ಚೆಲ್ಲುವ ಕಮಲಾಕ್ಷಿಯರ ಮಧ್ಯದಲ್ಲಿ ಕಾಂತಿಪೂರ್ಣಳಾದ ಸೌಂದರಿಯೇ ಮೊದಲಾದ ಪ್ರಮುಖ ಸುಂದರಿಯರ ಸಮೂಹವನ್ನು ಅತ್ಯಾನಂದದಿಂದ ಪ್ರೀತಿಪಟ್ಟು ನೋಡಿ, ನಗುತ್ತ, ಬೆಳಗನ್ನು ಹರಡುವ ಅಮೃತಕಾಂತ ಶಿಲೆಯ ಕೊಂಬಿನಿಂದ ಜಲಧಾರೆಯನ್ನು ಸುರಿದನು. ೧೨೨. ಆ ಮನ್ಮಥ ಸಮಾನನಾದ ಉದ್ಭಟನ ಕರಕಮಲದಲ್ಲಿರುವ ಹೊಳೆವ ಚಂದ್ರಕಾಂತ ಶಿಲೆಯ ಕೊಂಬಿನ ಬಾಯಿಂದ ಹೊರಸೂಸುವ ಚಂದ್ರಕಿರಣಗಳ ಮೊತ್ತವನ್ನು ಸವಿಯುವುದರಲ್ಲಿ ವಿಲಾಸಪೂರ್ಣ ಮನಸ್ಸುಳ್ಳ ಪ್ರಕಾಶಮಾನವಾದ ಚಕೋರ ಪಕ್ಷಿಗಳ ಸಮೂಹವೆನ್ನುವಂತೆ ಚೆಲುವೆಯರ ಸಾಲು ಕಣ್ಣಿಗೆ ಅಂದವಾಗಿರುವುದು. ವ॥ ಮತ್ತೆ ಅದಲ್ಲದೆ, ೧೨೩. ಲಾವಣ್ಯದಿಂದ ನೀರಾಟವಾಡುತ್ತಿರುವ ಸುಂದರಿಯರ ಕಪ್ಪು ಕೂದಲನ್ನು ಮೋಡವೆಂದು, ಹೊಳೆವ ಕೈಬಳೆಗಳ ಧ್ವನಿಯನ್ನು ಮೋಡದ ಗುಡುಗೆಂದು, ಕಣ್ಣ ಕಾಂತಿಯನ್ನು ಮಿಂಚೆಂದು, ರಾಜರುಗಳ ನಡುವೆ ಸಿಂಹದಂತಿರುವ ಉದ್ಭಟ ಮಹಾರಾಜನು ಚೆಲ್ಲುವ ತಿಳಿಯಾದ ನೀರನ್ನು ಚಂಚಲವಾದ ಮಳೆಯೆಂದು ಭಾವಿಸಿ ನೋಡಿ ಆ ಭಾಗದಲ್ಲಿ ನವಿಲುಗಳು ನರ್ತಿಸುವುವು. ವ॥ ಮತ್ತೆ ಅದಲ್ಲದೆ, ೧೨೪. ಅರಳುತ್ತಿರುವ ಕೆಂದಾವರೆಯ ಪರಿಮಳದಲ್ಲಿ ಉತ್ಕಟವಾದ ಇಚ್ಛೆ ಹೊಂದಿ ಅದನ್ನು ಹೀರಿ ಉಬ್ಬಿ ಆ ಮಕರಂದದಲ್ಲಿ

ಮಿಸುಪ ಜಲಕ್ರೀಡೆಯನೊ
ಲ್ದೆಸಗುವ ತನ್ನೃಪನ ಮೂರ್ತಿಯಂ ಚುಂಬಿಸಿ ರಾ।
ಗಿಸುವುವೆನೆ ಕೆಂಪಮರ್ದು ರಂ
ಜಿಸಿದುವು ನೀರಾಟದಂಗನೆಯಲರ್ಗಣ್ಗಳ್ ॥ ೧೨೫ ॥

ಗಾಣರ್ಗೆ ಬುಧರ್ಗೆ ಕವಿ
ಶ್ರೇಣಿಗೆ ಪಗೆಯಾದವೆಂದು ತೊಂಡೆಯ ಪಣ್ಗಳ್।
ನಾಣಿಂ ಬೆಳರ್ತು ತೋರ್ಪವೊ
ಲೇಣಾಕ್ಷಿಯರಧರಮಂದು ಬೆಳ್ಪಮರ್ದೆಸೆಗುಂ ॥ ೧೨೬ ॥

ಮತ್ತಮದಲ್ಲದೆ,

ಕಳೆದುದು ಕಜ್ಜಳದ್ಯುತಿಯನಕ್ಷಿ ಲಸನ್ಮಣಿಕಾಂಚಿಕಾಂತೋ
ಜ್ವಳತರಕಿಂಕಿಣೀಪ್ರತತಿ ಮೌನಮನಾಂತುದು ಕುಂತಳಾಳಿ ತೊ।
ಯ್ದಳಿಕವಿಭಾಗದೊಳ್ಪೊರೆದುದೈದೆ ಬೆಳರ್ತುದು ಪಲ್ಲವೋಷ್ಠ ಮಂ
ದಳವೆಡೆ ಭೂಪನೊಳ್ ಸಲಿಲಕೇಳಿಯನಾಗಿಪ ಕಾಂತೆಯರ್ಕಳಾ ॥ ೧೨೭ ॥

ಇಂತತಿವಿಲಾಸದಿಂದಂ ಸೌಂದರವತಿವೆರಸು ನೀರಾಟಮಂ ನೆಗಟ್ಚುವೆಳವೆಣ್ಗಳೊಳಳವಡಿಕೆಯಂ ಕಂಡುದ್ಭಟರಾಜೇಂದ್ರಂ ಸಂತಸಮಂ ತಳೆದು ಮಗುಟ್ದಾಜಲಕೇಳಿಯನುಳಿದಲರ್ಗೊಳದಿಂ ಪೊಱಮಟ್ಟು ತತ್ತೀರದೊಳ್ನಿಲ್ತು,

ಒದ್ದೆಯಾಗಿ ಹೆಚ್ಚಿನ ಮತ್ತು ತಲೆಗೇರಿ ಮಲಗಿದ ದುಂಬಿಗಳ ಸಮೂಹದಂತೆ ಮಹಾರಾಜನು ಪ್ರೀತಿಯಿಂದ ಚೆಲ್ಲಿದ ತಿಳಿಯಾದ ಜಲಧಾರೆಯು ಹೊಂಬಣ್ಣದ ದೇಹವುಳ್ಳ ಚೆಲುವೆಯ ಸುಂದರವಾದ ಹಣೆಯಲ್ಲಿ ಮುಂಗುರುಳುಗಳು ಅದೇನು ಚೆಂದವಾಗಿ ಶೋಭಿಸಿರುವವೋ! ೧೨೫. ಹೊಳೆಯುವ ನೀರಾಟವನ್ನು ಪ್ರೀತಿಯಿಂದ ಆಡುವ ಆ ಮಹಾರಾಜನ ಮೂರ್ತಿಯನ್ನು ಚುಂಬಿಸಿ ಸಂತೋಷಗೊಳ್ಳುವೆವು ಎನ್ನುವಂತೆ ನೀರಾಟದ ಚೆಲುವೆಯ ಹೂಗಣ್ಣುಗಳು ಕೆಂಪುಗೂಡಿ ಶೋಭಿಸಿದುವು. ೧೨೬. ಹಾಡುಗಾರರಿಗೆ, ವಿದ್ವಾಂಸರಿಗೆ, ಕವಿಗಳ ಸಮೂಹಕ್ಕೆ ಶತ್ರುವಾದೆವೆಂದು ತೊಂಡೆಯ ಹಣ್ಣುಗಳು ನಾಚಿಕೆಯಿಂದ ಬಿಳುಪೇರಿ ಕಾಣುವಂತೆ ಜಿಂಕೆಯ ಕಣ್ಣಿನ ಚಾಂಚಲ್ಯವನ್ನು ಹೊಂದಿದ ಸುಂದರಿಯರ ತುಟಿಯು ಬಿಳುಪೇರಿ ಶೋಭಿಸುವುದು. ವ॥ ಮತ್ತೆ ಅದಲ್ಲದೆ, ೧೨೭. ಮಹಾರಾಜನೊಡನೆ ನೀರಾಟವಾಡುವ ಚೆಲುವೆಯರ ಕಣ್ಣು ಕಾಡಿಗೆಯ ಹೊಳಪನ್ನು ನಿವಾರಿಸಿತು, ಹೊಳೆವ ಮಣಿಖಚಿತವಾದ ಕಟಿಸೂತ್ರದ ಮನೋಹರ ಕಿರುಗೆಜ್ಜೆಗಳ ನಾದವು ಮೌನವನ್ನು ಹೊಂದಿತು, ಮುಂಗುರುಳುಗಳು ಒದ್ದೆಯಾದ ಹಣೆಯಲ್ಲಿ ಚೆನ್ನಾಗಿ ಅಂಟಿಕೊಂಡವು, ಚಿಗುರಿನಂತೆ [ಕೆಂಪಾದ] ತುಟಿಗಳು ಹೊಳೆದವು. ವ॥ ಹೀಗೆ ಹೆಚ್ಚಿನ ಸೊಗಸಿನಿಂದ ಸೌಂದರವತಿಯೊಡನೆ ನೀರಾಟವಾಡಿ, ಎಳೆಯ ಪ್ರಾಯದ ಸುಂದರಿಯರಲ್ಲಿನ ಹೊಂದಾಣಿಕೆಯನ್ನು ನೋಡಿ ಉದ್ಭಟಮಹಾರಾಜನು ಸಂತೋಷವನ್ನು ಹೊಂದಿ, ಮತ್ತೆ ಆ ನೀರಾಟವನ್ನು ನಿಲ್ಲಿಸಿ ತಾವರೆಕೊಳದಿಂದ ಹೊರಬಂದು ಅದರ ದಡದಲ್ಲಿ ನಿಂತು,

ನೋಡಿ ಸಮಸ್ತಲೋಕನುತನುದ್ಭಟಭೂಮಿಪನುಲ್ಲಸಜ್ಜಲ
ಕ್ರೀಡೆಯೊಳೈದೆ ಮಿಕ್ಕು ರಂಜಿಪ ಪಂಕಜನೇತ್ರೆಯರ್ಗೆ ನಲ್।
ಗಾಡಿಪೊಗೞ್ತೆವೆತ್ತ ಮಣಿಭೂಷಣವಸ್ತ್ರಮನಿತ್ತು ಕೂರ್ಮೆಯಿಂ
ಕೂಡೆ ಸಮಂತು ತಾಂ ತಳೆದು ಸೌಂದರಿಗೂಡಿ ನೃಪಾಲನೊಪ್ಪಿದಂ ॥ ೧೨೮ ॥

ಮತ್ತಮದಲ್ಲದೆ,

ಜಲಕೇಳಿಯನುೞಿದಬಲಾ
ವಳಿಬೆರಸಾವನದಲಂಪನೋಪಳ್ಗಿತ್ತು।
ಜ್ವಲಮುದದಿಂ ತೋಱುತೆ ನೃಪ
ಕುಲಕುಂಜರನುದ್ಭಟಾಂಕನುಱೆ ನಡೆತಂದಂ ॥ ೧೨೯ ॥

ತೀಡುವೆಲರ್ಗೆ ಚಂಚಲಿಪ ಪುಷ್ಪದ ಗೊಂಚಲನಂಟಿ ಪೆರ್ಚಿ ತೂ
ಗಾಡುವ ತುಂಬಿಯಂ ಕಿಸಲಯಾಗ್ರಮನೊಲ್ದು ಕರ್ದುಂಕಿ ಪೆರ್ಮೆಯಿಂ।
ಪಾಡುವ ಮತ್ತಕೋಕಿಲೆಯನಾಮ್ರದ ಶಾಖೆಯೊಳೊಪ್ಪುವುತ್ಸುಕ
ಕ್ರೀಡೆಯನಂತು ಕಾಂತೆವೆರಸೀಕ್ಷಿಸುತೊಯ್ಯನೆ ಬಂದನುದ್ಭಟಂ ॥ ೧೩೦ ॥

ಇಂತೆಸೆವ ಮಿಸುಪ ಪೊಸಬನದಲಂಪಿನ ಪೆಂಪಂ ತಾಂ ಪದೆದೀಕ್ಷಿಸುತ್ತುಂ ಕೆಲವುದಿನಮಾಬನದೊಳ್ವಿಲಾಸದಿಂದಮಿರ್ದೊಂದುದಿವಸಂ ಸೌಂದರವತಿವೆರಸುದ್ಭಟಕ್ಷಿತೀಂದ್ರಚಂದ್ರಮಂ ತದುದ್ಯಾನಮಂ ಪೊಱಮಟ್ಟೆಣಿಕೆಗಳವಡದಣಿಯರಮಾದ ವೈಭವದೇೞ್ಗೆಯಿಂದೆಯ್ತಿಂದರಮನೆಯಂ ಪೊಕ್ಕನಂತವಿನೋದಗೋಷ್ಠಿಗಳಿಂದಮಿರೆಯಿರೆ,

೧೨೮. ಲೋಕವೆಲ್ಲ ಹೊಗಳುವ ಉದ್ಭಟಮಹಾರಾಜನು [ಅದನ್ನು] ನೋಡಿ, ಉಲ್ಲಾಸದಿಂದ ಕೂಡಿ ನೀರಾಟದಲ್ಲಿ ಚೆನ್ನಾಗಿ ಶೋಭಿಸಿದ ಕಮಲಾಕ್ಷಿಯರಿಗೆ ಪ್ರೀತಿಯಿಂದ ಸೊಗಸಾದ ಹಾಗೂ ಪ್ರಸಿದ್ಧವಾದ ಮಣಿಖಚಿತ ಆಭರಣ, ವಸ್ತ್ರಗಳನ್ನಿತ್ತು ಸೌಂದರಿಯೊಡಗೂಡಿದ ಮಹಾರಾಜನು ಕಣ್ಣಿಗೆ ಚೆನ್ನಾಗಿ ಕಂಡುಬಂದನು. ವ॥ ಮತ್ತೆ ಅದಲ್ಲದೆ, ೧೨೯. ನೀರಾಟವನ್ನು ನಿಲ್ಲಿಸಿ ಸ್ತ್ರೀಯರ ಸಮೂಹದೊಡನೆ ಆ ಉದ್ಯಾನದ ಸೊಗಸನ್ನು ನೋಡಿ ಸವಿಯುತ್ತ ಪ್ರಿಯಳಿಗೆ ಅತ್ಯಾನಂದದಿಂದ ಆ ಸೊಗಸನ್ನು ಕಾಣಿಸುತ್ತ ಉದ್ಭಟ ಮಹಾರಾಜನು ಬೇಗನೆ ನಡೆದನು. ೧೩೦. ಬೀಸುವ ಗಾಳಿಗೆ ಚೆನ್ನಾಗಿ ಅಲುಗಾಡುವ ಹೂಗೊಂಚಲನ್ನು ಸೇರಿ ಉಬ್ಬಿ ತೂಗಾಡುವ ದುಂಬಿಯನ್ನು, ಚಿಗುರನ್ನು ಪ್ರೀತಿಯಿಂದ ಕಚ್ಚಿ ಹೆಮ್ಮೆಯಿಂದ ಹಾಡುವ ಮದಿಸಿದ ಕೋಗಿಲೆಯನ್ನು, ಮಾವಿನ ಕೊಂಬೆಯಲ್ಲಿ ಶೋಭಿಸುವ ಆನಂದೋತ್ಸವವನ್ನು ಉದ್ಭಟನು ನೋಡುತ್ತ ಮೆಲ್ಲನೆ ಬಂದನು. ವ॥ ಹೀಗೆ ಶೋಭಿಸುವ ಕಳೆಯಿಂದ ಕೂಡಿದ ಉದ್ಯಾನದ ಸೊಗಸಿನ ಹೆಚ್ಚಳವನ್ನು ಪ್ರೀತಿಯಿಂದ ನೋಡುತ್ತ, ಕೆಲವು ದಿವಸ ಆ ವನದಲ್ಲಿ ವಿಲಾಸದಿಂದ ಇದ್ದು, ಒಂದು ದಿವಸ ಸೌಂದರವತಿಯೊಡನೆ ಉದ್ಭಟಮಹಾರಾಜಚಂದ್ರಮನು ಆ ಉದ್ಯಾನದಿಂದ ಹೊರಬಂದು ಎಣಿಕೆಗೆ ಸಿಗದ ಅತಿಶಯವಾದ ವೈಭವ ವಿಶೇಷದಿಂದ ಬಂದು ಅರಮನೆಯನ್ನು ಹೊಕ್ಕು

ಸಮ್ಮದಮಂ ಕರಂ ತಳೆಯೆ ಜಾದಗೆಗಳ್ವಿಳಸತ್ಕದಂಬಜಾ
ಲಂ ಮುಗುಳೊತ್ತೆ ಹಂಸೆಗಳಡಂಗೆ ಮಯೂರಗಳುರ್ಬೆ ಸರ್ವಸ।
ಸ್ಯಂ ಮಿಗೆ ಪೊಂಗೆ ಬಾನ್ಪಡೆಯೆ ಕಾರ್ಮುಗಿಲಂ ಧರೆ ಕಣ್ಬನೇಱು ತಾಂ
ಮುಂಮಱುಗಾಲದೊಳ್ಮೊಳೆದು ತೀಡಿದುದೊಯ್ಯನೆ ಪಶ್ಚಿಮಾನಿಲಂ ॥ ೧೩೧ ॥

ಮತ್ತಮದಲ್ಲದೆ,

ಸ್ಫುರದುದ್ಯದ್ಧೂಳಿಯಂ ಮೇಣ್ಕೊಳಗಳುತುಱು ಕಲಂಕುತ್ತವೆತ್ತಂ ತಟಾಕೋ
ತ್ಕರಮಂಭೂಮಿಜಶಾಖಾವಳಿಯನುಡಿಯುತುಂಮಂಜುಕುಂಜಂಗಳಂನಿ।
ಟ್ಟೊರಸುತ್ತಂ ಮೆಟ್ಟಿ ನಾನಾಲತೆಗಳನಲೆಯುತ್ತಂದು ಜಂಝಾನಿಲಂ ಭೀ
ಕರಮಾದ್ಯತ್ಕುಂಜರಂಬೋಲ್ಸುಳಿದುದೊಗೆಯೆ ವರ್ಷಾಂಬು ದಾನಾಂಬುವಾಗಳ್ ॥ ೧೩೨॥

ಮತ್ತಮಾಸಮಯದೊಳ್,

ತವೆ ಘನಸಮಯನೃಪಂ ಮಾ
ಣ್ದವನಂ ಗೆಲ್ದೊಡನೆ ಕಡು ಪೊಡೆಯಿಸಿದ ಭೇರೀ।
ರವದೇೞ್ಗೆಯಂತೆನಲ್ಲಂ
ಭವಿಸಿ ತದಭ್ರಾಭ್ರನಾದಮಖಿಲಾಶೆಗಳೊಳ್ ॥ ೧೩೩ ॥

ವಿನುತಾಕಾಶಸ್ತ್ರೀ ತೊ
ಟ್ಟನುಪಮಮಣಿಭೂಷಣಾಂಶುವೆನೆ ಮುಂಗಾರೊ।
ಳ್ಜನಯಿಸಿದಮರೇಂದ್ರಶರಾ
ಸನವಗ್ಗದ ಸೊಬಗಬೀರುತೆಸೆದತ್ತಾಗಳ್ ॥ ೧೩೪ ॥

ತುದಿಮೊದಲಿಲ್ಲದ ವಿನೋದಗೋಷ್ಠಿಗಳಲ್ಲಿ ಇರುತ್ತಿರಲು, ೧೩೧. ಮಾಲತೀಪುಷ್ಪಗಳು ಆನಂದವನ್ನು ಚೆನ್ನಾಗಿ ಹೊಂದಿರಲು, ಶೋಭಾಯಮಾನವಾದ ತಾವರೆಯ ಮೊಗ್ಗುಗಳು ಅರಳಿರಲು, ಹಂಸಗಳು ಮಾಯವಾಗಿ ನವಿಲುಗಳು ಮುದಗೊಂಡು [ನರ್ತಿಸಲು], ಸಕಲ ಸಸ್ಯಗಳು ಸೊಂಪಾಗಿ ಬೆಳೆದಿರಲು, ಕಪ್ಪಾದ ಮೋಡಗಳನ್ನು ಆಕಾಶವು ಹೊಂದಲು, ಭೂಮಿ ತಂಪನ್ನು ತಾಳಲು, ಮಳೆಗಾಲದ ಮೊದಲಿಗೆ ಪಶ್ಚಿಮ ದಿಕ್ಕಿನಿಂದ ಗಾಳಿಯು ಮೆಲ್ಲನೆ ಬೀಸಿತು. ವ॥ ಮತ್ತೆ ಅದಲ್ಲದೆ, ೧೩೨. ಹೊಳೆವ ಧೂಳನ್ನು ಎಲ್ಲಾ ಕಡೆ ಪಸರಿಸುತ್ತ, ಕೊಳಗಳನ್ನು ಚೆನ್ನಾಗಿ ಕಲಕುತ್ತ, ವೃಕ್ಷಗಳ ಕೊಂಬೆಗಳನ್ನು ಮುರಿಯುತ್ತ, ಮನೋಹರವಾದ ಬಳ್ಳಿಮನೆಗಳನ್ನು ನಾಶಮಾಡುತ್ತ, ನಾನಾ ಬಗೆಯ ಬಳ್ಳಿಗಳನ್ನು ಮೆಟ್ಟಿ ಪೀಡಿಸುತ್ತ ಅಂದು ಮಳೆಹನಿಗಳಿಂದ ಕೂಡಿದ ಬಿರುಗಾಳಿಯು ಭೀಕರವಾದ ಆನೆಯಂತೆ ಕಾಣಿಸಿಕೊಂಡು, ಮಳೆಯನೀರು ಧಾರಾಕಾರವಾಗಿ ಸುರಿಯಿತು. ವ॥ ಮತ್ತೆ ಆ ಸಮಯದಲ್ಲಿ, ೧೩೩. ಮೋಡಗಳೆಂಬ ಧರ್ಮರಾಯನು ಬಿಡದೆ ಚೆನ್ನಾಗಿ ಗೆಲ್ಲಲು, ಒಡನೆಯೇ ಹೊಡೆಯಿಸಿದ ಜಯಭೇರಿ ಧ್ವನಿಯ ಹೆಚ್ಚಳವೋ ಎನ್ನುವಂತೆ ಆ ಮೋಡಗಳ ಗುಡುಗು ಎಲ್ಲಾ ದಿಕ್ಕುಗಳಲ್ಲಿ ಪ್ರತಿಧ್ವನಿಸಿತು. ೧೩೪. ಹೊಗಳಲ್ಪಡುವ ಆಕಾಶವೆಂಬ ಸ್ತ್ರೀಯು ಧರಿಸಿದ ಹೋಲಿಸಲಾಗದ ಮಣಿಖಚಿತವಾದ ಆಭರಣಗಳೆನ್ನುವಂತೆ

ನಿಟ್ಟಿಸಿ ಗಗನಾಂಗನೆ ಯಳ
ವಟ್ಟೆತ್ತಿಪ್ಪಭ್ರಕಾಲಮಂ ಸಂತಸದಿಂ।
ಕಟ್ಟಿದಸಿತಾಂಬರದ ಮೇ
ಲ್ಕಟ್ಟೆನೆ ಪರ್ವಿತು ಘನಾಘನಾವಳಿ ನಭಮಂ ॥ ೧೩೫ ॥

ಅಳುಪಿ ನಭೋವಧು ನಿಟ್ಟಿಸಿ
ಘಳಿಲನೆ ತತ್ಕಾಲಮೆಂಬ ನೀಱಿನಸಲರ್ಗ।
ಣ್ಗಳ ಕಾಂತಿ ಸೂಸಿತೆಂದೆನ
ಲಳವಟ್ಟುದು ಮುಗಿಲೊಳಮರ್ದ ಮಿಂಚಿನ ಗೊಂಚಲ್ ॥ ೧೩೬ ॥

ಮತ್ತಮಾಸಮಯದೊಳು,

ಮಿನುಪ ತಟಿದ್ವಿಲೋಚನದ ಶಕ್ರಶರಾಸನಶೃಂಗದಂಬುದ
ಸ್ವನಬಹುಹೂಂಕೃತೋನ್ನತಿಯ ಮೇಘಘಟೋಧ್ನಿಯನಿಂದ್ರಗೋಪನೊ।
ಯ್ಯನೆ ಕರೆಯಲ್ಪಡಲ್ಪಡುವ ಪಾಲ್ಗಡಲ ಧಾರೆಯದೆಂಬ ಪಾಂಗಿನಿಂ
ಘನತರಮಾದ ವೃಷ್ಟಿ ಸುಜೆದತ್ತು ಧರಾತಳದೊಳ್ನಿರಂತರಂ ॥ ೧೩೭ ॥

ಮತ್ತಮದಲ್ಲದೆ,

ಗಗನಾಂಗನೆ ಕುಡಿಮಿಂಚಿಂ
ಬುಗುರ್ಗೊನೆಯಿಂ ಮುಗಿಲೆನಿಪ್ಪ ಮುಡಿಯಂ ಹಿಕ್ಕ।
ಲ್ಮಿಗೆ ಮುಂತುಱುಂಬಿದೊಳ್ಳಲ
ರೊಗುವವೊಲುದಿರ್ದತ್ತು ಕರಕನಿಕರಮದಿಳೆಯೊಳ್ ॥ ೧೩೮ ॥

ಮಳೆಗಾಲದಲ್ಲಿ ಆಗ ಕಾಣಿಸಿಕೊಂಡ ಕಾಮನಬಿಲ್ಲು ಅತಿಶಯವಾದ ಸೊಬಗನ್ನು ಬೀರುತ್ತ ಶೋಭಿಸಿತು. ೧೩೫. ಹೊಂದಿಕೊಂಡು ಬರುತ್ತಿರುವ ಮೋಡಗಳನ್ನು ಆಕಾಶ ಸುಂದರಿಯು ನೋಡಿ ಆನಂದದಿಂದ ಕಟ್ಟಿಸಿದ ಬಟ್ಟೆಯ ಮೇಲುಕಟ್ಟೊ ಎನ್ನುವಂತೆ ದಪ್ಪನೆಯ ಮೋಡಗಳ ಸಮೂಹವು ಆಕಾಶವನ್ನು ಹಬ್ಬಿತು. ೧೩೬. ಆಕಾಶ ಸುಂದರಿಯು ಅತ್ಯಾಸೆಯಿಂದ ನೋಡಲು, ಬೇಗನೆ ವರ್ಷವೆಂಬ ಸುಂದರನ ಹೂಗಣ್ಣಿನ ಕಾಂತಿಯು ಚೆಲ್ಲಿತೊ ಎನ್ನುವಂತೆ ಮೋಡದಲ್ಲಿ ಸೇರಿದ ಮಿಂಚಿನ ಗೊಂಚಲು ಸೇರಿಹೋಗಿದ್ದಿತು. ವ॥ ಮತ್ತೆ ಆ ಸಮಯದಲ್ಲಿ, ೧೩೭. ಹೊಳೆಯುವ ಮಿಂಚೆಂಬ ಕಣ್ಣು, ಕಾಮನಬಿಲ್ಲಿನ ಕೋಡು, ಮೋಡಗಳ ಗುಡುಗಿನ ಹೂಂಕಾರ - [ಇವುಗಳಿಂದ ಶೋಭಿಸುವ] ಮೋಡಗಳೆಂಬ ಹಸುವನ್ನು ಇಂದ್ರನೆನ್ನುವ ಗೋಪಾಲಕನು ಮೆಲ್ಲನೆ ಕರೆದ ಹಾಲಿನ ಕಡಲ ಧಾರೆಯೊ ಎನ್ನುವಂತೆ ಭೂಮಿಯ ಮೇಲೆ ಸತತವಾಗಿ ಅತಿಶಯವಾದ ಮಳೆ ಸುರಿಯಿತು. ವ॥ ಮತ್ತೆ ಅದಲ್ಲದೆ, ೧೩೮. ಆಕಾಶ ಸುಂದರಿಯು ತನ್ನ ಕುಡಿಮಿಂಚೆಂಬ ಉಗುರ ತುದಿಯಿಂದ ಮೋಡವೆಂಬ ಕೂದಲನ್ನು ಉಜ್ಜಲು ಮುನ್ನವೇ ಚೆನ್ನಾಗಿ ಮುಡಿಸಿದ್ದ ಹೂಗಳು ಹೊರಚೆಲ್ಲುವಂತೆ ಆಲಿ ಕಲ್ಲುಗಳು

ಮತ್ತಮದಲ್ಲದೆಯುಂ,

ಕೆಸಱುಪ್ಪರಿಸೆ ಯಡಂಗೆ ರೇಣುಪಟಲಂ ಚಂದ್ರಾರ್ಕಬಿಂಬಂಗಳೊಂ
ದೆಸಕಂ ತಳ್ಗೆ ಯದೃಶ್ಯಮಾಗೆ ಗಗನಂ ಮಾರ್ಗಂಗಳೊಳ್ನಾಡೆ ವ।
ರ್ತಿಸೆ ಯಸ್ಪಷ್ಟತೆ ಕೂಡೆ ದಿಕ್ಸಮಿತಿ ಚಿತ್ತಭ್ರಾಂತಿಯಂ ಮಾಡೆ ಜೃಂ
ಭಿಸೆ ಪೊಂಗೇದಗೆ ಜಾತಿ ಪೂತೆಸೆಯೆ ಧಾರಾಪಾತಮೇನೊಪ್ಪಿತೋ ॥ ೧೩೯ ॥

ಒಡೆಯೆ ತಟಾಕರಾಜಿ ಪೊನಲೇಱೆ ಧರಿತ್ರಿಸಮಸ್ತಸಿಂಧುಗ
ಳ್ತಡಿಯನೆ ಮೀಱೆ ತಾಂ ಪರಿಯೆ ಬೆಂಚೆಗಳುರ್ವಿರೆ ನಿರ್ಝರಾಳಿ ಭೋ।
ರಿಡುತೆ ಮಹೀಧ್ರದಿಂ ಜಗುಱೆ ಡಂಗುರಗಳ್ ಪಿರಿದಾಗಿ ತೋಱೆ ಕ
ರ್ಮಡು ಕಡು ಪೆರ್ಚೆ ಕಟ್ಟಿ ಕಱೆದತ್ತು ಸುವೃಷ್ಟಿ, ಪೊದಟ್ಟು ಧಾತ್ರಿಯೊಳ್ ॥ ೧೪೦ ॥

ಮತ್ತಮಾಸಮಯದೊಳು,

ವಿಲಸತ್ಪಿಂಛಮನೆತ್ತುತುಂ ಕೆದಱುತುಂ ತುಪ್ಪಳ್ಗಳಂ ಪಕ್ಷಮಂ
ಸಲೆ ಮೋದಂಬಡೆದುರ್ಬುತುಂ ನಯನದೃಗ್ಜಾಲಂ ಪಳಂ ಚಲ್ಲಭ।
ಸ್ಥಳಸಂಛನ್ನಬಲಾಹಕಾವಳಿಯನೊಲ್ದಾಲೋಕಿಸುತ್ತುಂ ಗಳ
ಜ್ಜಲಧಾರಾತತಿಗೊಡ್ಡುತುಂತನುವನೇನೊಪ್ಪಿರ್ದುವೋ ಕೇಕಿಗಳ್ ॥ ೧೪೧ ॥

ಮೊಱಗಾರಾಜಿಪ್ಪ ತೂರ್ಯಧ್ವನಿ ಮಿಸುಪೆಳಮಿಂಚಚ್ಛದೀಪಾಘಮತ್ಯು
ಜ್ವಳನೀಲಾಂಭೋಧರಂ ಕಂಗೊಳಿಪ ತೆರೆ ಜಗುಟ್ದಾಲಿಗಲ್ತೋರ್ಪಪುಷ್ಪಾಂ।
ಜಲಿಯಾಗಲ್ನೋಡುತುಂ ಚಾತಕನೃಪನೆಸೆಯಲ್ ಮಂಜುಳೋದ್ಯಾನರಂಗ
ಸ್ಥಳದೊಳ್ಚಂಚನ್ಮಯೂರೀಗಣನಟನಮದೇಂ ಕಣ್ಗೆ ಬಂದತ್ತೊ ಚೆಲ್ವಿಂ ॥ ೧೪೨ ॥

ಭೂಮಿಯ ಮೇಲೆ ಉದುರಿಮವು. ವ॥ ಮತ್ತೆ ಅದಲ್ಲದೆ, ೧೩೯. ಕೆಸರೇಳಲು, ಧೂಳೀಪಟಲವು ಅಡಗಲು, ಚಂದ್ರ ಸೂರ್ಯ ಬಿಂಬಗಳ ಕಾಂತಿ ಕುಂದಲು, ಆಗಸವು ಕಣ್ಣಿಗೆ ಕಾಣದಿರಲು, ಮಾರ್ಗವು ಅಸ್ಪಷ್ಟಗೊಂಡಿರಲು, ದಿಕ್ಕುಗಳು ಮನಸ್ಸಿಗೆ ಭ್ರಮೆಯನ್ನುಂಟು ಮಾಡಿರಲು, ಹೊಂಗೇದಗೆಯು ಅರಳಿರಲು, ಜಾಜಿಯು ಸುವಾಸನೆಯನ್ನು ಬೀರಿರಲು ಮಳೆ ಹನಿಯುತ್ತಿರುವುದು ನೋಟಕ್ಕೆ ಎಷ್ಟು ಚೆನ್ನಾಗಿದೆ! ೧೪೦. ಕೆರೆಗಳು ಒಡೆದು, ಪ್ರವಾಹ ಉಕ್ಕೇರಿ, ಭೂಮಿಯ ಮೇಲಣ ಎಲ್ಲಾ ಸಮುದ್ರಗಳೂ ದಡಮೀರಿ ಹರಿಯಲು, ಹಂಸಗಳು ಉದ್ವೇಗಗೊಂಡಿರಲು, ಜಲಪಾತಗಳು ಭೋರೆಂದು ಪರ್ವತಗಳ ಮೇಲಿಂದ ಜಾರುತ್ತಿರಲು, ಡಂಗುರಗಳು ಹೆಚ್ಚಾಗಿ ಕಾಣಲು, ಯಮುನಾನದಿಯು ಉಕ್ಕಿ ಹರಿವಂತೆ ಭೂಮಿಯನ್ನು ವ್ಯಾಪಿಸುವಂತೆ ಮಳೆಯು ಚೆನ್ನಾಗಿ ಸುರಿಯಿತು. ವ॥ ಮತ್ತೆ ಆ ಕಾಲದಲ್ಲಿ, ೧೪೧. ಹೊಳೆಯುವ ತನ್ನ ಗರಿಗಳನ್ನು ಮೇಲೆತ್ತಿ ಕೆದರುತ್ತ, ತುಪ್ಪಳವನ್ನೂ ರೆಕ್ಕೆಯನ್ನೂ ಅತ್ಯಾನಂದದಿಂದ ಉಬ್ಬಿಸುತ್ತ, ಕಣ್ಣಕಾಂತಿಯ ಪುಂಜವು ಆಕಾಶವನ್ನು ತಾಗಿ ಅಲ್ಲಿ ಹೊಳೆಯುವ ಮೋಡಗಳನ್ನು ಪ್ರೀತಿಯಿಂದ ನೋಡುತ್ತ, ಸುರಿವ ಜಲಧಾರೆಗಳಿಗೆ ಶರೀರವನ್ನು ಒಡ್ಡುತ್ತ ನವಿಲುಗಳು ಅದೇನು ಚೆಲುವಿನಿಂದ ಶೋಭಿಸಿದ್ದುವೊ! ೧೪೨. ಗುಡುಗೇ ಶೋಭಾಯಮಾನವಾದ ತುತ್ತೂರಿಯ ಧ್ವನಿಯು, ಹೊಳೆವ ಎಳೆಯ ಮಿಂಚೇ ಶುಭ್ರವಾದ

ಮತ್ತಮದಲ್ಲದೆ,

ಮಿಂಚುವೆಱಂಕೆಗಳಿಂದೆ ಪ
ಳಂಚುತ್ತೊಗುವಾಲಿವರಲನಂಭಃಕಣಮಂ।
ಚಂಚೂಪುಟದಿಂದೀಂಟು
ತ್ತುಂ ಚೆಲ್ವಂ ತಳೆದು ಸೊಗಸಿದುವು ಜಾದಗೆಗಳ್ ॥ ೧೪೩ ॥

ಮತ್ತಮದಲ್ಲದೆ,

ಕಿಂಜಲ್ಕಪುಂಜಮಂ ಮಿಗೆ
ಭುಂಜಿಪುದಂ ಬಿಟ್ಟು ಮುಂದುಗೆಟ್ಟಂಚೆಗಳಾ।
ಕಂಜಾಕರದೊಳ್ನಿಲ್ಲದೆ
ತಾಂ ಜವದಿಂ ಮಾನಸಕ್ಕೆ ಪಾಱಿದುವಾಗಳ್ ॥ ೧೪೪ ॥

ಮತ್ತಮದಲ್ಲದೆ,

ಮಿಗಗಳ್ಕುಂಜಮನಿಂಬುಗೊಂಡು ತೊಲಗಲ್ವಾದೋದರಶ್ರೇಣಿ ನೆ
ಟ್ಟಗೆ ಭೂಮಿರುಹಕೋಟರಾವಳಿಯನಾದಂ ಮೋದದಿಂ ಸಾರೆ ಲೀ।
ಲೆಗಡರ್ಪ್ಪಾಯ್ತಿದೆನುತ್ತೆ ಭೋಗಿತತಿ ಕಣ್ಗಿಂಬಾದ ಪೆಣ್ಗಾಡಿದ
ಡ್ಡಿಗಳಂ ಸಾರ್ದಿರೆ ನೆಟ್ಟು ಕಟ್ಟೆ ಕಱುದಿತ್ತಾಸಾರಮಿಧಾತ್ರಿಯೊಳ್ ॥ ೧೪೫ ॥

ವಹ್ನಿ ಸೊಗಸಾಗಲಿನಮೃಗ
ಚಿಹ್ನದ್ಯುತಿ ಮಸುಳಿಸಲ್ ತಟಂಗಳಿದುದ್ಯ।
ಜ್ಜಾಹ್ನವಿ ತುಳ್ಕಿದುದೆನಲ
ತ್ಯಹ್ನಮದೆನೆ ಕಱುದುದವನಿಹರ್ಷಂವರ್ಷಂ ॥ ೧೪೬ ॥

ದೀಪಗಳು, ಉಜ್ವಲವಾದ ನೀಲಿಯ ಮೋಡಗಳೇ ಕಣ್ಣಿಗೆ ಅಂದವಾಗಿರುವ ತೆರೆ, ಸುರಿವ ಆಲಿಕಲ್ಲುಗಳೇ ಪುಷ್ಪಾಂಜಲಿಗಳಾಗಲು ನೋಡುತ್ತ ಚಾತಕಪಕ್ಷಿಯಂತಿರುವ ಮಹಾರಾಜನು ಕಣ್ಣಿಗೆ ಅಂದವಾಗಿ ಕಾಣುತ್ತಿರಲು ಮನೋಹರವಾದ ಉದ್ಯಾನ ರಂಗಸ್ಥಲದಲ್ಲಿ ಹೊಳೆಯುವ ನವಿಲುಗಳ ಕುಣಿತವು ಕಣ್ಣಿಗೆ ಅದೆಂತಹ ಚೆಲುವನ್ನು ಕಾಣಿಸಿದೆ! ವ॥ ಮತ್ತೆ ಅದಲ್ಲದೆ, ೧೪೩. ಮಿಂಚೆಂಬ ರೆಕ್ಕೆಗಳಿಂದ ತಾಗುತ್ತ, ಸುರಿವ ಆಲಿಕಲ್ಲೆಂಬ ಮಳೆಹನಿಗಳನ್ನು ಕೊಕ್ಕಿನಿಂದ ಸವಿಯುತ್ತ ಚಾತಕಪಕ್ಷಿಗಳು ಚೆಲುವಿಕೆಯನ್ನು ತಾಳಿ ಕಣ್ಣಿಗೆ ಅಂದವಾದವು. ವ॥ ಮತ್ತೆ ಅದಲ್ಲದೆ, ೧೪೪. ಹೂವಿನ ಕುಸುರನ್ನು ಚೆನ್ನಾಗಿ ಸವಿಯುವುದನ್ನು ಬಿಟ್ಟು, ಕಣ್ಗಾಣದೆ, ಹಂಸ ಪಕ್ಷಿಗಳು ತಾವರೆಕೊಳದಲ್ಲಿ ನಿಲ್ಲಲಾಗದೆ ವೇಗವಾಗಿ [ಹಿಮಾಲಯದ] ಮಾನಸ ಸರೋವರಕ್ಕೆ ಹಾರಿಹೋದವು. ವ॥ ಮತ್ತೆ ಅದಲ್ಲದೆ, ೧೪೫. ಪ್ರಾಣಿಗಳು ಗುಹೆಗಳನ್ನು ಆಶ್ರಯಿಸಿ ಅಲ್ಲಿಂದ ತೊಲಗದೆ ಇದ್ದುವು. ಪಕ್ಷಿಗಳು ಮರಗಳ ಪೊಟರೆಗಳನ್ನು ಅತ್ಯಾನಂದದಿಂದ ಸಮೀಪಿಸಿದವು. ಇದು ವಿಲಾಸಕ್ಕೆ ಆಸರೆಯಾಯಿತೆಂದು ರಸಿಕರು ಕಣ್ಣಿಗೆ ಮನೋಹರವಾದ ಸುಂದರಿಯರ ಸೌಂದರ್ಯದ ಬಲೆಯಲ್ಲಿ ಸಿಕ್ಕಿ ಬಿದ್ದಿರಲು ಧಾರಾಕಾರವಾದ ಮಳೆಯು ಭೂಮಿಯ ಮೇಲೆ ಬಲವಾಗಿ ಬಿದ್ದಿತು. ೧೪೬. [ಕೆಂಪನೆಯ]

ಇಂತಖಿಳದಿಶಾಚಕ್ರಮಂ ತೆಕ್ಕನೆ ತೀವಿ ಮಿಕ್ಕು ಮೊಱೆನೆಟ್ಟು ಕಟ್ಟಿ ಕಱೆವ ಮಱೆಗಾಲದೊಳ್ ತತ್ಕಾಲೋಚಿತಭೋಗದಲಂಪಿನ ಪೆಂಪಂ ತಳೆದು ಭೋಗಿಸುತ್ತುಂ ಸೌಂದರವತಿವೆರಸು ಸಮಸ್ತವಿನೋದಗೋಷ್ಠಿಗಳಿಂದಂ ಸಂತಸಂಬಡೆದುದ್ಭಟಕ್ಷಿತೀಂದ್ರಚಂದ್ರಮನೆಸೆದಿರ್ದಂ ॥ ೧೪೭ ॥

ಅಂತುಮಲ್ಲದೆಯುಂ,

ಕತ್ತುರಿಯಂಗಲೇಪನದಿಸಿಂಪಮದೊರ್ಳ್ಳಣಿಸಿಂ ಸುಶಯ್ಯೆಯಿಂ
ದುತ್ತಮವಸ್ತ್ರದಿಂದಮರ್ದಭೂಷಣದಿಂ ನವಪುಷ್ಪಮಾಲೆಯಿಂ।
ಚಿತ್ತಕಲಂಪನೀವ ತನಿದಂಬುಲದಿಂ ಸತಿಗೂಡಿ ತೋರ್ಪ ಸು
ಣ್ಮುತ್ತಿನ ಹರ್ಮ್ಯದೊಳ್ಪಿಡದೆ ಕಣ್ಗೆಸೆದಂ ನೃಪರಾಜಕುಂಜರಂ ॥ ೧೪೭ ॥

ಸನ್ನುತಗಾನಮುಖ್ಯಸರಸೋರುಕಲೋತ್ಕರಕೇಳಿಯಿಂಪಿನಿಂ
ರನ್ನದ ಮಾಡದೊಳ್ ತರಳಲೋಚನೆಸೌಂದರಿಗೂಡಿ ಕಂಗೊಳಿ।
ಪ್ಪುನ್ನತನುದ್ಭಟೋರ್ವಿಪನ ಚಿತ್ತಸರೋರುಹದಲ್ಲಿ ತೋರ್ಪ ನಿ
ರ್ಭಿನ್ನಕೃಪಾಂಬುರಾಶಿ ಸಲೆ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೪೮ ॥

ಉರಿ [ಆಗಸದಲ್ಲಿ] ಸೊಗಸುಗೊಂಡಿರಲು, ಚಂದ್ರನು ಕಾಂತಿಹೀನನಾಗಿರಲು, ದಡದಿಂದ ಮೇಲೇರಿದ ಗಂಗೆಯು ತುಳುಕಿತೊ ಎನ್ನುವಂತೆ, ಹಗಲೊ ಎನ್ನುವಂತೆ ಭೂಮಿಗೆ ಆನಂದದ ಕಣ್ಣೀರನ್ನು ಹರಿಸಿತು. ವ॥ ಹೀಗೆ ಸಕಲ ದಿಕ್ಕುಗಳನ್ನು ಬೇಗನೆ ಆವರಿಸಿ ಜೋರಾಗಿ ಮಳೆ ಸುರಿಯುತ್ತಿರುವ ಮಳೆಗಾಲದಲ್ಲಿ, ಆ ಕಾಲಕ್ಕೆ ಯೋಗ್ಯವಾದ ರೀತಿಯಲ್ಲಿ ಭೋಗಿಗಳು ಆನಂದದ ಹೆಚ್ಚಳವನ್ನು ಹೊಂದಿ ಸುಖಿಸುತ್ತ ಸೌಂದರವತಿಯೊಡನೆ ಸಕಲ ವಿನೋದಗೋಷ್ಠಿಗಳಿಂದ ಸಂತಸಗೊಂಡು ಉದ್ಭಟಮಹಾರಾಜಚಂದ್ರಮನು ಶೋಭಿಸಿದ್ದನು. ವ॥ ಮತ್ತೆ ಅಷ್ಟಲ್ಲದೆ, ೧೪೭. ಕಸ್ತೂರಿಯನ್ನು ಮೈಗೆ ಲೇಪಿಸುವುದರಿಂದ ಉಂಟಾಗುವ ಹಿತದಿಂದ, ಒಳ್ಳೆಯ ಆಹಾರದಿಂದ, ಒಳ್ಳೆಯ ನಿದ್ರೆಯಿಂದ, ಉತ್ತಮ ವಸ್ತ್ರದಿಂದ, ಮೈಮೇಲಿನ ಬೆಲೆಬಾಳುವ ಆಭರಣಗಳಿಂದ, ಎಳೆಯ ಹೂಮಾಲೆಯಿಂದ, ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ಸವಿಯಾದ ತಾಂಬೂಲದಿಂದ ಪತ್ನಿಯೊಡಗೂಡಿ ಚೆನ್ನಾಗಿ ಕಾಣುವ ಮುತ್ತಿನ ಉಪ್ಪರಿಗೆ ಮನೆಯಲ್ಲಿ ರಾಜರುಗಳ ನಡುವೆ ಆನೆಯಂತೆ ಶೋಭಿಸಿರುವ ಉದ್ಭಟನು ಚೆನ್ನಾಗಿ ಕಣ್ಣಿಗೆ ಅಂದಗೊಂಡನು. ೧೪೮. ವಿಶೇಷವಾಗಿ ಹೊಗಳಲ್ಪಡುವ ಗಾನದಿಂದ, ಸರಸ ಲಲಿತಕಲೆಗಳ ಶೃಂಗಾರಲೀಲೆಯಿಂದ, ಆನಂದದಿಂದ ರತ್ನದ ಉಪ್ಪರಿಗೆ ಮನೆಯಲ್ಲಿ ಜಿಂಕೆಯ ಕಣ್ಣವಳಾದ ಸೌಂದರಿಯೊಡಗೂಡಿ ಕಣ್ಣಿಗೆ ಮನೋಹರನಾಗಿರುವ ಉದ್ಭಟಮಹಾರಾಜನ ಹೃದಯಕಮಲದಲ್ಲಿ ಕಾಣುವ ಅಭಿನ್ನನಾದ, ಕೃಪಾಸಾಗರನಾದ

ಇದು ಸಮಸ್ತಸುರಕದಂಬವಿಜೃಂಭಿತಮಕುಟತಟಘಟಿತನವರತ್ನ ಪುಂಜಸಂಜಾ
ತಪಿಂಜರಿತಮಂಜುಳಮಯೂಖಮಂಜರೀರಂಜಿತ ಶ್ರೀಗುರುವಿರೂಪಾಕ್ಷ
ಪಾವನಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿ
ಕಾಪಟಲಪಟುಲಂಪಟಚಕೋರಾಯಮಾಣಮಾನಸ
ಶ್ರೀ ಸೋಮರಾಜೇಂದ್ರವಿರಚಿತಮಪ್ಪ ಶೃಂಗಾರಸಾ
ರಮಹಾಪ್ರಬಂಧದೊಳ್ ವಸಂತವರ್ಷಾಕಾಲ
ವರ್ಣನಂ ನವಮಾಶ್ವಾಸಂ ಮುಗಿದುದು

ಅಲ್ಲಮಪ್ರಿಯನೆ ನನ್ನನ್ನು ಚೆನ್ನಾಗಿ ಕಾಪಾಡುವುದು. ವ।। ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ [ಅವರ] ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರಪಕ್ಷಿಯಂತೆ ಕಾತರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಒಂಬತ್ತನೆಯ ಆಶ್ವಾಸವಾದ ವಸಂತ ವರ್ಷಾಕಾಲ ವರ್ಣನೆ ಮುಗಿಯಿತು.

# ಹತ್ತನೆಯ ಆಶ್ವಾಸಂ

ಶ್ರೀವರನಿಭನುದ್ಭಟನಿಂ
ದೀವರಲೋಚನೆ ಸುಧರ್ಮಸುತೆವೆರಸೊಲವಿಂ।
ದಾವರ್ಷಾಕಾಲದೊಳಂ
ದಾವರಿಸಿದ ಮೋದಮಂ ಪಡೆದು ರಂಜಿಸಿದಂ ॥ ೧ ॥

ತಪ್ಪದೆ ಕಟ್ಟೆಕಟ್ಟೆ ಕಱೆವಾಮಟೆಗಾಲದೊಳುದ್ಭಟಂ ತೊಳ
ಪ್ಪುಪ್ಪಳಗಣ್ಣನೀಱೆ ವರಸೌಂದರಿಗೂಡಿ ಬೆಡಂಗುವೆತ್ತಿರ।
ಲ್ಕಪ್ಪುರಗಂಪನೀವ ಮಣಿಹರ್ಮ್ಯದೊಳೊಪ್ಪಿರದ್ದೆದೆ ಲೀಲೆಯಿಂ
ದೊಪ್ಪುವವೋಲ್ ಬಲಾರಿಶಚಿಗೂಡಿ ಸಮುಜ್ವಲವೈಜಯಂತಿವೋಲ್ ॥ ೨ ॥

ಇಂತನರ್ಘ್ಯಮಣಿಖಚಿತರಮ್ಯಹರ್ಮ್ಯಸ್ಥಲದೊಳ್ ಸೌಂದರವತಿವೆರಸುದ್ಭಟಕ್ಷಿತೀಂದ್ರ ಚಂದ್ರಮಂ ಸಂತಸಂಬಡೆದಖಿಳವಿನೋದಗೋಷ್ಠಿಗಳಿಂದಮಿರಲಗಲದೆ ಕಟ್ಟೆ ಕಱೆವ ಮಟೆಗಾಲಂ ಮೈದೆಗೆದ ಸಮನಂತರದಲ್ಲಿ,

ಬೆಳಗಿದುದಂಬರಂ ನಲಿದುವಂಚೆಗಳಬ್ಜಚಯಂ ಮಕರಂದಮಂ
ತಳೆದುದು ಕೈರವಾಳಿ ಘನಕಾಂತಿಯನಾಂತುದು ಶಾಲಿಕಾವನಾ।
ವಳಿ ಬೆಳೆದೊಪ್ಪಿದತ್ತು ಗಿಳಿವಿಂಡಳವೇಱೆತು ಬೆಳ್ಮುಗಿಲ್ತಳ
ತ್ಥಳಿಸಿದುದು ಜೊನ್ನಮಿರದುಕ್ಕಿದುದಂದು ಶರತ್ಪ್ರವೇಶದೊಳ್ ॥ ೩ ॥

೧. ವಿಷ್ಣು ಸಮಾನನಾದ ಉದ್ಭಟನು ಕಮಲಾಕ್ಷಿ ಸೌಂದರವತಿಯೊಡನೆ ಪ್ರೀತಿಯಿಂದ ಆ ಮಳೆಗಾಲದಲ್ಲಿ ಆನಂದಹೊಂದಿ ಕಣ್ಣಿಗೆ ಅಂದವಾದನು. ೨. ಕಟ್ಟೆಗಳು ತುಂಬುವಂತೆ ಬಿಡದೆ ಸುರಿವ ಆ ಮಳೆಗಾಲದಲ್ಲಿ ಉದ್ಭಟನು ಹೊಳೆಯುವ ಕಮಲಗಣ್ಣಿನ ಸುಂದರಿ ಸೌಂದರಿಯೊಡಗೂಡಿ, ದೇವೇಂದ್ರನು ಶಚೀದೇವಿಯೊಡನೆ ಪ್ರಕಾಶಮಾನವಾದ ಬಾವುಟದೊಂದಿಗೆ ವಿಲಾಸದಿಂದ ಶೋಭಿಸುವಂತೆ ಕರ್ಪೂರದ ಸುವಾಸನೆಯನ್ನು ಹೊರಸೂಸುವ ಮಣಿಖಚಿತವಾದ ಭವನದಲ್ಲಿ ಚೆನ್ನಾಗಿ ಅಂದಗೊಂಡಿದ್ದನು. ವ॥ ಹೀಗೆ ಬೆಲೆಬಾಳುವ ಮಣಿಗಳಿಂದ ಕೂಡಿ ಮನೋಹರವಾಗಿರುವ ಭವನದಲ್ಲಿ ಸೌಂದರವತಿಯೊಡನೆ ಉದ್ಭಟಮಹಾರಾಜ ಚಂದ್ರಮನು ಸಂತೋಷಗೊಂಡು ಸಕಲ ವಿನೋದ ಗೋಷ್ಠಿಗಳಿಂದ ಅಗಲದೆ ಇರುತ್ತಿರಲು ಬಲವಾಗಿ ಸುರಿವ ಮಳೆಗಾಲವು ಹಿಂದೆಗೆದ ಅನಂತರ, ೩. ಶರತ್ಕಾಲದ ಆಗಮನವಾಗುತ್ತಿದ್ದಂತೆಯೇ, ಅಂದು ಆಕಾಶವು ಶುಭ್ರಗೊಂಡು ಹೊಳೆಯಿತು, ಹಂಸಗಳು ನಲಿದವು, ಕಮಲಗಳ ಸಮೂಹವು ಮಕರಂದವನ್ನು

ಮತ್ತಮದಲ್ಲದೆ,

ದುರ್ದಿನಮಡಂಗೆ ಸುದಿನಂ
ಪೊರ್ದಲ್ಕಕುಬಂಬರಾವನೀತಳಮೆಲ್ಲಂ।
ತಾಳ್ದುದೊ ವಿಮಲತೆಯನೆನೆ
ಲ್ಕೆಟ್ಟುದು ಬೆಳ್ವೆಳಗು ಬಳ್ವಿವರಿದಾದಿನದೊಳ್ ॥ ೪ ॥

ಕಂಜಪರಾಗಮಂ ಕೆದಱುತುಂ ಚಲಪಕ್ಷಸಮೀರಘಾತದಿಂ
ಮಂಜುಮೃಣಾಳನಾಳಲತೆಯಂ ಸವಿಯುತ್ತೆ ಮರಂದವಾರಿಯೊ।
ಳ್ತಾಂ ಜಲಕೇಳಿಯಂ ನೆಗಱ್ಚುತುಮಂಚೆಯ ವಿಂಡು ಲೀಲೆಯಿಂ
ರಂಜಿಸಿತಾಶರತ್ಸಮಯದೊಳ್ಸರಸೀಸರಸೀಜಷಂಡದೊಳ್ ॥ ೫ ॥

ಶರದಾಗಮರಮೆ ಬರಲಾ
ಸರಸೀರುಹಗೃಹದ ರಜಮನಳಿವೆಣ್ಬೊಱಗ।
ಣ್ಗೆರದೆ ತೆರಳ್ಚುವವೊಲ್ತ
ದ್ಗರುದನಿಲಗಳದ್ರಜಃಕದಂಬಕಮೆಸೆಗುಂ ॥ ೬ ॥

ಕ್ಷಿತಿಗೆ ಮುದಂಗೊಡುತ್ತೆ ಶರದುರ್ವಿಪನೆಟ್ಟಿರಲಂದು ರಂಜಿಪಾ
ರ‌ತಿಗಳನೆತ್ತಲೊಲ್ದು ಸರಸೀಸತಿ ತಾಂ ಹರಿದಶ್ವಪಾತ್ರಸಂ।
ತತಿಯೊಳಮರ್ಚುತೊ..........................
ಪ್ಪಿತು ಪಸುರೇಱಿ ತೋರ್ಪ ದಳವೃಂದದೊಳುಣ್ಮಿದ ಶೋಣಪಂಕಜಂ ॥ ೭ ॥

ಧರಿಸಿತು, ಬಿಳಿಯ ನೈದಿಲೆಯ ಸಮೂಹವು ಅತಿಶಯಕಾಂತಿಯನ್ನು ಪಡೆಯಿತು, ಬತ್ತದ ಗದ್ದೆಗಳು ಬೆಳೆದು ಶೋಭಿಸಿದವು, ಗಿಳಿಗಳ ಹಿಂಡು ಸಂತೋಷಗೊಂಡಿತು, ಬೆಳ್ಳನೆಯ ಮೋಡಗಳು ಥಳಥಳಿಸಿದವು, ಬೆಳದಿಂಗಳು ಬಿಡದೆ ಉಕ್ಕಿ ಹರಿಯಿತು. ವ॥ ಮತ್ತೆ ಅದಲ್ಲದೆ, ೪. ಮೋಡದಿಂದ ಕೂಡಿದ ದಿನವು ಹೋಗಿ ಮೋಡಗಳಿಲ್ಲದೆ ಶುಭ್ರವಾದ ದಿನವು ಬರಲು, ಆಕಾಶವೆಲ್ಲ ಶುಭ್ರತೆಯನ್ನು ಪಡೆಯಿತೊ ಎನ್ನುವಂತೆ ಬೆಳ್ಳನೆಯ ಬೆಳಕು ಹೊಮ್ಮಿ ಆ ದಿನ ಹರಡಿಕೊಂಡಿತು. ೫. ಆ ಶರತ್ಕಾಲದಲ್ಲಿ ಕಮಲಗಳ ಸರೋವರಗಳಲ್ಲಿ ತಮ್ಮ ಗರಿಗಳ ಚಲನೆಯಿಂದುಂಟಾದ ಗಾಳಿಯ ಹೊಡೆತದಿಂದ ಕಮಲಗಳ ಪರಾಗವನ್ನು ಚೆಲ್ಲುತ್ತ, ಮನೋಹರವಾದ ತಾವರೆಯ ಮೃದುವಾದ ದಂಟನ್ನು ಸವಿಯುತ್ತ, ಮಕರಂದ ಜಲದಲ್ಲಿ ನೀರಾಟವಾಡುತ್ತ ಹಂಸಗಳ ಸಮೂಹವು ಬೆಳಗಿನಿಂದ ಕೂಡಿ ಶೋಭಿಸಿದವು. ೬. ಶರತ್‌ಕಾಲ ಲಕ್ಷ್ಮಿಯು ಬರಲು ಕಮಲಗೃಹದ ಪರಾಗವನ್ನು ಹೆಣ್ದುಂಬಿಯ ಹೊರಗಣ್ಣಿಗೆ ಬಿಡದೆ ಸೇರಿಸುವಂತೆ ಸುವಾಸನೆಯಿಂದ ಕೂಡಿದ ಪರಾಗವನ್ನು ಹೊಂದಿರುವ ಹೂವುಗಳು ಶೋಭಿಸಿರುವುವು. ೭. ಲೋಕಕ್ಕೆ ಆನಂದವನ್ನುಂಟುಮಾಡುತ್ತ ಶರದ್‌ರಾಜನು ಅಂದು ಬರಲು ವಿಲಾಸಮಯವಾದ ಆರತಿಯನ್ನೆತ್ತಲು ಬಯಸಿ ಸರೋವರ ಸ್ತ್ರೀಯು ಸೂರ್ಯನೆಂಬ ಪಾತ್ರೆಯಲ್ಲಿ ಜೋಡಿಸುತ್ತ ................ ಹಸುರೇರಿ ತೋರುವ ದಳಗಳಿಂದ ಅರಳಿದ

ವಿಲಸಚ್ಛರದಾಗಮಮಂ
ನಲಿದೀಕ್ಷಿಸಲೆಂದು ನಾಡೆ ಸರಸೀವಧು ತಾಂ।
ಪಲಗಣ್ಗಳನಾಂತಂತೆವೊ
ಲಲರ್ದೊಪ್ಪಿದುದುಱ್ ಬೆಳರ್ತ ಕಲ್ಹಾರಂಗಳ್ ॥ ೮ ॥

ತಿಳಿದು ಮನಂಗೊಳಿಪ್ಪ ಜಲಪೂರ್ಣತಟಾಕದ ನೀರನುಂಡು ಮೇ
ಣ್ಬೆಳೆದೆಳೆನೆಲ್ಲನಲ್ಲದೆನೆಗೊಂಚಲನೊಲ್ದು ಕರ್ದುಂಕಿ ಪೊಂಗಿ ಕಂ।
ಗೊಳಸಿದುದಂದು ತೊಂಡುಗೆಡೆಯುತ್ತುಮತೀವವಿಲಾಸದಿಂ ಶುಕಾ
ವಳಿ ನಿಜಪಕ್ಷಸಂಭವಹರಿದ್ದ್ಯುತಿಶಾಡ್ವಲಿತಾಂಬರಾಂತರಂ ॥ ೯ ॥

ಗಗನಸ್ತ್ರೀಗೊಲವಿಂದಂ
ನೆಗಪಿದ ಪೊಸಮುತ್ತಿನಮರ್ದಸತ್ತಿಗೆಗಳೆನಲ್।
ಬಗೆಗೊಂಡುವಗಲದುಱ್ ಬೆ
ಳ್ಮುಗಿಲ್ಗಳ್ ಘನಶೋಭೆವೆತ್ತು ಶರದಾಗಮದೊಳ್ ॥ ೧೦ ॥

ಮಿಸುಪ ಶರದಿಳಾಧೀಶಂ ಬರಲ್ಕಂಡು ಕೂರ್ತೀ
ವಸುಧೆಯೆನಿಪ ನಲ್ವೆಣ್ಪೊಂಗಿ ಸಂತೋಷದಿಂದಂ।
ಪಸುರ್ಗುಡಿಗಳನಾಗಳ್ ಕಟ್ಟಿದಳ್ತಾನದೆಂಬಂ
ತೆಸೆದುವು ತರುಗಳ್ ತತ್ಕಾಲದೊಳ್ ತಳ್ತು ಪೊನ್ನಿಂ ॥ ೧೧ ॥

ಪ್ರಿಯದೆ ನೆಲವೆಣ್ತಳೆದ ಪ
ಚ್ಚೆಯ ಪಚ್ಚಡ ತೆರದೆ ಮಿಸುಪ ಪೊಸಪಸುರ್ವೆಳಗಂ।
ನಯಮಮರ್ದಿರೆ ತುಳ್ಕತ್ತತಿ
ಶಯಮಾದೊಳ್ಪಿಡಿದು ಬೆಳೆದ ಪಸಲೆಯದೆಸೆಗುಂ ॥ ೧೨ ॥

ಕೆಂದಾವರೆಯು ಶೋಭಿಸಿತು. ೮. ಹೊಳೆಯುವ ಶರತ್ಕಾಲದ ಆಗಮನವನ್ನು ಸಂತೋಷದಿಂದ ಚೆನ್ನಾಗಿ ನೋಡಲೆಂದು ಸರೋವರಾಂಗನೆಯು ಹಲವು ಕಣ್ಣುಗಳನ್ನು ಪಡೆದಂತೆ ಕಾಂತಿಪೂರ್ಣವಾದ ನೈದಿಲೆಗಳು ಅರಳಿ ಚೆನ್ನಾಗಿ ಶೋಭಿಸಿದವು. ೯. ತಿಳಿಯಾದ ಮನ ಸೆಳೆಯುವಂತಿರುವ ಜಲಭರಿತವಾದ ಕೊಳದ ನೀರನ್ನು ಸವಿದು ಬೆಳೆದ ಎಳೆಯ ಭತ್ತದ ತೆನೆಯ ಗೊಂಚಲನ್ನು ಪ್ರೀತಿಯಿಂದ ಕುಕ್ಕಿ ಹಿಗ್ಗಿ ಹೆಚ್ಚಿನ ವಿಲಾಸದಿಂದ ಅರ್ಥವಿಲ್ಲದ ಮಾತುಗಳನ್ನು ಹಾಡುತ್ತ, ತಮ್ಮ ರೆಕ್ಕೆಗಳಿಂದ ಹೊಮ್ಮಿದ ಹಸಿರಿನ ಕಾಂತಿಯಿಂದ ಆಕಾಶವನ್ನು ಹಸಿರು ಹುಲ್ಲುಗಾವಲನ್ನಾಗಿ ಮಾಡುತ್ತ ಗಿಳಿಗಳ ಮೊತ್ತವು ಅಂದು ಕಣ್ಣಿಗೆ ಅಂದವಾಗಿ ಕಂಡುಬಂದಿತು. ೧೦. ಗಗನ ಸ್ತ್ರೀಗೆ ಪ್ರೀತಿಯಿಂದ ಮೇಲೆತ್ತಿದ ಮುತ್ತುಗಳಿಂದ ಕೂಡಿದ ಸತ್ತಿಗೆಗಳು ಎನ್ನುವಂತೆ ಶರತ್ಕಾಲದ ಪ್ರದೇಶದಲ್ಲಿ ಬೆಳ್ಳನೆಯ ಮೋಡಗಳು ಅತಿಶಯವಾದ ಶೋಭೆಯನ್ನು ಪಡೆದು ಚೆನ್ನಾಗಿ ಮನಸ್ಸನ್ನು ಸೂರೆಗೊಂಡವು. ೧೧. ಹೊಳೆವ ಶರದ್‌ರಾಜನು ಬರಲು, ನೋಡಿ ಮುದಗೊಂಡ ಭೂಕಾಂತೆಯು ಹಸಿರು ಬಾವುಟಗಳನ್ನು ಆಗ ಕಟ್ಟಿದಳೊ ಎನ್ನುವಂತೆ ಆ ಕಾಲದಲ್ಲಿ ಮರಗಳು ಚಿಗುರೊಡೆದು ಬಂಗಾರದ ಕಾಂತಿಯನ್ನು ಚೆಲ್ಲುತ್ತ ಶೋಭಿಸಿದವು. ೧೨. ಭೂಕಾಂತೆಯು ಪ್ರೀತಿಯಿಂದ ಧರಿಸಿದ

ಮತ್ತಮದಲ್ಲದೆ,

ವಿಲಸಚ್ಚಂದ್ರಾತಪಂ ಮೋಹನತರರುಚಿಯಂ ನೂತನದ್ಯೋತಮತ್ಯು
ಜ್ವಲಹೇಮಚ್ಛಾಯೆಯಂ ತಾರತೆಯನುಡುಗಣಂ ಮಂಜುಕಂಜಂಮರಂದಾ।
ವಲಿಯಂಶ್ವೇತೋತ್ಪಲಂ ಶೋಭೆಯನಖಿಲತಟಾಕಾಳಿನೈರ್ಮಲ್ಯಮಂತಾಂ
ಸುಲತೌಘಂ ಸೂನಮಂ ತಾಳ್ದಿರೆ ಬಗೆಗೊಳಿಸಿತ್ತಾಶರತ್ಕಾಲಮಾದಂ ॥ ೧೩ ॥

ಇಂತೆಡೆವಿಡದೆ ಮನಂಗೊಳಿಪ ಶರತ್ಕಾಲಕ್ಕುಚಿತಮಾದ ಸಮಸ್ತ ಭೋಗದೊಳ್ಪಿರಿದು ಭೋಗಿಸುತುದ್ಭಟಕ್ಷಿತೀಂದ್ರಚಂದ್ರಮಂ ಸೌಂದರವತಿವೆರಸತ್ಯಾನಂದದಿಂದಿರಲೊಂದುದಿವಸಂ,

ನಳಿನೀಷಂಡಂ ಕರಂ ಕುಟ್ಮಲತೆಯನಿರದ್ಯೆದಲ್ ರಥಾಂಗಂ ಮನೋವ್ಯಾ
ಕುಳಮಂ ತಾಳುತ್ತಿರಲ್ಕೈರವವಿತತಿ ನಗಲ್ ತಣ್ಣೆಲರ್ಮೆಲ್ಲನಾಶಾ।
ವಳಿಯಂ ತೀವಲ್ಬಿಸಿಲ್ಬಾಂದಳನೊಡವುಟಿಯಲ್ತೇಜಮಟ್ಟಿಲ್ಪ್ರತೀಚ್ಯಾ
ಚಳಚಂಚಚ್ಚೂಡಚೂಡಾಮಣಿಯೆನಲೆಸೆದಂ ಪದ್ಮಿನೀಜೀವಿತೇಶಂ ॥ ೧೪ ॥

ಮಿಸುಪಪರಾಚಲದೊಳ್ ಜನಿ
ಯಿಸೆ ನಾಡೆ ಮನಂಗೊಳಿಪ್ಪ ಕಿಸುಸಂಜೆಯೆನಿ।
ಪ್ಪಸುಗೆಯಲರ್ಗೊಂಚಲೆನಲಂ
ದೊಗೆದುದು ರವಿಬಿಂಬಮರುಣರುಚ್ಯವಲಂಬಂ ॥ ೧೫ ॥

ಪಚ್ಚೆಯ ಅಲಂಕಾರದ ರೀತಿಯಲ್ಲಿ ಹೊಳೆವ ಹೊಸ ಹಸಿರಿನ ಕಾಂತಿಯ ಸುಕುಮಾರತೆಯನ್ನು ಹೊಂದಿ ಚೆಲ್ಲುತ್ತ ಅತಿಶಯವಾದ ಶೋಭೆಯನ್ನು ಪಡೆದು ಬೆಳೆದ ಹಸಿರು ಹುಲ್ಲು ಕಣ್ಣಿಗೆ ಅಂದವಾಗಿರುವುದು. ವ॥ ಮತ್ತೆ ಅದಲ್ಲದೆ, ೧೩. ಹೊಳೆಯುವ ಚಂದ್ರನು ಮೋಹಕವಾದ ಕಾಂತಿಯನ್ನು, ನೂತನ ಬೆಳಗು ಅತಿ ಉಜ್ವಲವಾದ ಸುವರ್ಣಕಾಂತಿಯನ್ನು, ನಕ್ಷತ್ರಗಳ ಸಮೂಹವು ಶುಭ್ರತೆಯನ್ನು, ಮನೋಹರವಾದ ಕಮಲವು ಮಕರಂದವನ್ನು, ಬಿಳಿಯ ನೈದಿಲೆಯು ಶೋಭೆಯನ್ನು, ಎಲ್ಲಾ ಕೊಳಗಳು ನೈರ್ಮಲ್ಯವನ್ನು, ಬಳ್ಳಿಗಳು ಹೂವುಗಳನ್ನು ಹೊಂದಿರಲು ಶರತ್ಕಾಲವು ವಿಶೇಷವಾಗಿ ಮನಸೆಳೆದಿದ್ದಿತು. ವ॥ ಹೀಗೆ ಸದಾ ಮನಸೆಳೆಯುವ ಶರತ್ಕಾಲಕ್ಕೆ ಯೋಗ್ಯವಾದ ಭೋಗದಲ್ಲಿ ಹೆಚ್ಚಿನ ಆನಂದವನ್ನು ಹೊಂದಿ ಉದ್ಭಟಮಹಾರಾಜ ಚಂದ್ರಮನು ಸೌಂದರವತಿಯೊಡನೆ ಸಂತಸದಿಂದ ಇರುತ್ತಿರಲು ಒಂದು ದಿವಸ. ೧೪. ಕಮಲಗಳು ವಿಶೇಷವಾಗಿ ಅರೆಬಿರಿದ ಮೊಗ್ಗನ್ನು ಬಿಡದೆ ತಾಳಿರಲು, ಚಕ್ರವಾಕಗಳು ಚಿಂತೆಗೊಂಡಿರಲು, ಬಿಳಿಯ ನೈದಿಲೆಗಳ ಸಮೂಹವು ಅರಳಿ ನಗುತ್ತಿರಲು, ತಂಗಾಳಿಯು ಮೆಲ್ಲನೆ ದಿಕ್ಕು ದಿಕ್ಕುಗಳನ್ನು ಕವಿಯುತ್ತಿರಲು, ಬಿಸಿಲು ಆಗಸದಿಂದ ಬೇರೆಯಾಗಿ ಅದರ ಕಾಂತಿಗುಂದಿರಲು, ಪಶ್ಚಿಮಾಚಲದ ಹೊಳೆವ ಶಿಖರದಲ್ಲಿರುವ ಚೂಡಾಮಣಿಯೋ ಎನ್ನುವಂತೆ ಕಮಲಗಳ ಪ್ರಾಣಕಾಂತನಾದ ಸೂರ್ಯನು ಶೋಭಿಸಿದನು. ೧೫. ಹೊಳೆವ ಪಶ್ಚಿಮಾಚಲದಲ್ಲಿ ಹುಟ್ಟಿ ಚೆನ್ನಾಗಿ ಮನಸೆಳೆಯುವ ಕೆಂಪಾದ ಸಂಜೆಯೆನ್ನುವ ಅಶೋಕ ವೃಕ್ಷದ ಹೂವಿನ ಗೊಂಚಲೋ ಎನ್ನುವಂತೆ ಕೆಂಬಣ್ಣದಿಂದ ಕೂಡಿದ ಸೂರ್ಯಬಿಂಬವು

ತಾಂ ತೊಳಗಿದುದಪರಾಶಾ
ಕಾಂತೆ ಪೊದೞ್ದಧಿಕಹರ್ಷದಿಂ ತಳೆದುರುಸೀ।
ಮಂತಮಣಿಯೆನಲರುಣರುಚಿ
ಯಂ ತುಳ್ಕುತೆ ಪಶ್ಚಿಮಾದ್ರಿಯೊಳ್ ರವಿಬಿಂಬಂ ॥ ೧೬ ॥

ರಣಕೇಳಿಯಿನರಿದಾನವ
ಗಣಮಂ ಗೆಲಲೆಂದು ಜಲಧಿಪಂ ತಳೆದತ್ಯು।
ಲ್ಬಣಕಾಂತಿವೆತ್ತ ಮಣಿಯೊ
ಡ್ಡಣಮೆನಲೆಸೆದತ್ತು ಸಾರಸಪ್ರಿಯಬಿಂಬಂ ॥ ೧೭ ॥

ಮತ್ತಮಾಸಮಯದಲ್ಲಿ,

ಖಳದನುಜರ್ಕಳೊಳ್ಪೊಣರ್ದು ನಾಡೆ ಬೞಲ್ದಪರಾಚಲಾಗ್ರಮಂ
ಘಳಿಲನೆ ಪೋಗಿ ಸಾರ್ದೆಸೆದಿನಂಗಮರ್ದಂ ಮಿಗೆ ತೀವಿ ಪೂರ್ವದಿ।
ಗ್ಗಲನೆ ತದೀಯಕಾಲಮೆನಿಪುನ್ನತಚಾರನ ಕೈಯ್ಯೊಳೊಲ್ಮೆಯಿಂ
ಕಳುಪಿದ ತಾರಕುಂಭಮೆನೆ ಮೂಡಿದುದಂದು ಸುಧಾಂಶುಮಂಡಲಂ ॥ ೧೮ ॥

ಪ್ರವಿಮಲರುಚಿಬಿಂಬಂ ವರ್ಧಿತೋದ್ಯನ್ಮನೋಜಂ
ವಿವಿಧಗುಣಸಮಾಜಂ ವಿಶ್ವಸಸ್ಯಪ್ರಭೂಜಂ।
ಕುವಲಯಸುರಭೂಜಂ ನೂತ್ನಪೀಯೂಷತೇಜಂ
ಸವಿಗಡಲ ತನೂಜಂ ಮೂಡಿದಂ ಪೂರ್ಣರಾಜಂ ॥ ೧೯ ॥

ಕಾಣಿಸಿತು. ೧೬. ಪಶ್ಚಿಮಾಂಗನೆಯು ಅತ್ಯಾನಂದದಿಂದ ಬೈತಲೆಯಲ್ಲಿ ಧರಿಸಿದ ಶ್ರೇಷ್ಠವಾದ ಚೂಡಾರತ್ನವೋ ಎನ್ನುವಂತೆ ಕೆಂಬಣ್ಣವನ್ನು ಚೆಲ್ಲುತ್ತ ಪಶ್ಚಿಮಾದ್ರಿಯಲ್ಲಿ ಸೂರ್ಯಬಿಂಬವು ಪ್ರಕಾಶಿಸಿತು. ೧೭. ಯುದ್ಧದಲ್ಲಿ ಶತ್ರುಗಳಾದ ರಾಕ್ಷಸರ ಸಮೂಹವನ್ನು ಗೆಲ್ಲಲು ಸಮುದ್ರರಾಜನು ಪಡೆದ ಅತ್ಯಂತ ಪ್ರಕಾಶಮಾನವಾದ ಮಣಿಗಳ ರಾಶಿಯೋ ಎನ್ನುವಂತೆ ಕಮಲಗಳಿಗೆ ಪತಿಯಾದ ಸೂರ್ಯಬಿಂಬವು ಶೋಭಿಸಿದ್ದಿತು. ವ॥ ಮತ್ತೆ ಆ ಸಮಯದಲ್ಲಿ, ೧೮. ದುಷ್ಟರಾಕ್ಷಸರೊಡನೆ ಹೋರಾಡಿ ಚೆನ್ನಾಗಿ ಬಳಲಿ ಪಶ್ಚಿಮಾಚಲದ ಶಿಖರಕ್ಕೆ ಬೇಗನೇ ಹೋಗಿ ಸಮೀಪಿಸಿ ಶೋಭಿಸುವ ಪ್ರಿಯನಾದ ಸೂರ್ಯನಿಗೆ ಪೂರ್ವದಿಗಂಗನೆಯು ಅಮೃತವನ್ನು ಚೆನ್ನಾಗಿ ತುಂಬಿ ಆ ಕಾಲನೆನ್ನುವ ಒಳ್ಳೆಯ ಸೇವಕನ ಕೈಯಲ್ಲಿ ಪ್ರೀತಿಯಿಂದ ಕಳುಹಿಸಿದ ಬೆಳ್ಳಿಯ ಕಳಶವೋ ಎನ್ನುವಂತೆ ಚಂದ್ರಮಂಡಲವು ಅಂದು ಕಾಣಿಸಿಕೊಂಡಿತು. ೧೯. ಮೇಲಿಂದ ಮೇಲೆ ಬೆಳೆದ ಮನ್ಮಥನೂ ವಿವಿಧ ಗುಣಗಳನ್ನು ಹೊಂದಿರುವವನೂ ಲೋಕದ ಸಸ್ಯ, ಗಿಡ, ಮರಗಳ [ಬೆಳವಣಿಗೆಗೆ ಕಾರಣನೂ], ಲೋಕದ ಪಾಲಿಗೆ ಕಲ್ಪವೃಕ್ಷನೂ, ನೂತನವಾದ ಅಮೃತದ ಕಾಂತಿಯನ್ನು ಹೊಂದಿರುವವನೂ, ಕ್ಷೀರಸಾಗರದ ಮಗನೂ, ಪೂರ್ಣರಾಜನೂ ಆದ ಪರಿಶುದ್ಧ ಕಾಂತಿಯ ಚಂದ್ರನು ಉದಯಿಸಿದನು.

ಮೂಡಿದ ಶಶಿಯಪರಾಚಳ
ಚೂಡದ ರವಿಯುಂ ಸಮನಿಸಿದರ್ಸಂಧ್ಯಾಸ್ತ್ರೀ।
ಕ್ರೀಡೆಯಿನಮರ್ಚಿದೊಳ್ಪಿಂ
ಗೀಡಾದರುಣೋತ್ಪಲೋರುಮುಕುಳಂಗಳವೋಲ್ ॥ ೨೦ ॥

ನವಸಂಧ್ಯಾವಧು ಕೂರ್ತಾ
ಡುವ ಮಣಿಯಂ ಮಾಲೆಯೆರಡಱೊಳ್ ಜಗುಳ್ದುಱೆ ಬಿ।
ಟ್ಟವೊಲಂದಬ್ಧಿಯೊಳಿೞಿದುದು
ರವಿಬಿಂಬಂ ಮೇಲಕಡರ್ದುದಿಂದುವ ಬಿಂಬಂ ॥ ೨೧ ॥

ಸ್ಫುರದುಡ್ಡೀನಮರೀಚಿರಾಜಿ ವಿಲಸತ್ಸೂತ್ರಂಗಳಂದಾಗೆ ಬಂ
ಧುರದಂಡಂ ನಭಮಾಗೆ ಕಾಲಮೆನಿಪುದ್ಯತ್ತಾಸಪಾತ್ರಂಗಳೊಳ್।
ಸರಸೀಜೋದ್ಭವನಿಂದುವಂ ತರಣಿಯಂ ತೂಗಲ್ಕಿನಂ ಭಾರದಿಂ
ಧರೆಗಿೞ್ದಂತಿಳಿದಂ ಹಿಮಾಂಶು ಚಿಗಿಯಲ್ ಬೆಳ್ಪಾದನಾನೋವಿನಿಂ ॥ ೨೨ ॥

ಸದಮಲಸೂರ್ಯನಬ್ಧಿಗಿೞಿಯಲ್ ಪೊಣರ್ವಕ್ಕಿಗೆ ದುಃಖಮಾದುದಾ
ಡಿದುವು ಚಕೋರಿಗಳ್ಕುಮುದರಾಜಿಯಲರ್ದುದು ಸಂಜೆಗೆಂಪು ತೋ।
ಱಿದುದಳಿಗೂಡಿ ನೀರಜಚಯಂ ಮುಗಿದತ್ತು ಪತತ್ರಿ ಗೂಡನೈ
ದಿದುದುಡುಜಾಲಮುಣ್ಮಿದುದು ಕಾಂತಿಯನಾಂತುದು ಚಂದ್ರಮಂಡಲಂ ॥ ೨೩ ॥

ವಿಪುಳವಿಯೋಗಿನಿಕರಮೆಂ
ಬ ಪತಂಗಮನುರುಪುವಂಗಜಜ್ಯೋತಿಯೊಳಂ।
ದುಪಮೆಗೆ ಬಂದತ್ತು ವಿಜೃಂ
ಭಿಪ ಕಳೆಯಂ ತುಳ್ಕುತುಂ ಸುಧಾರುಚಿಬಿಂಬಂ ॥ ೨೪ ॥

೨೦. ಮೂಡಿದ ಚಂದ್ರನು ಪಶ್ಚಿಮಾಚಲದ ಶಿಖರದಲ್ಲಿ ಸೂರ್ಯನೂ, ಸಂಧ್ಯಾ ಸ್ತ್ರೀಯ ಜೊತೆ ಸಂಭೋಗಿಸಿ ಆದರಿಂದ ಉಂಟಾದ ಸುಖಕ್ಕೆ ಕೆಂದಾವರೆಯ ಮೊಗ್ಗುಗಳ ರೀತಿಯಲ್ಲಿ ಪರವಶರಾದರು. ೨೧. ಎಳೆಯ ಪ್ರಾಯದ ಸಂಧ್ಯಾಸುಂದರಿಯು ಪ್ರೀತಿಯಿಂದ ಆಡುತ್ತಿದ್ದ ಮಣಿಯು ಎರಡು ಮಾಲೆಗಳಲ್ಲಿ ಜಾರಿ ಬಿದ್ದಂತೆ ಅಂದು ಸಮುದ್ರದಲ್ಲಿ ಸೂರ್ಯಬಿಂಬವು ಇಳಿಯಿತು, ಚಂದ್ರಬಿಂಬವು ಮೇಲಕ್ಕೆ ಏರಿ ಬಂದಿತು. ೨೨. ಆಕಾಶದಲ್ಲಿ ಹೊಳೆಯುತ್ತ ಸಂಚರಿಸುವ ಕಿರಣಗಳ ಮೊತ್ತವು ಜ್ವಲಿಸುವ ಸೂತ್ರಗಳಾಗಲು, ಆಕಾಶವು ಮನೋಹರವಾದ ದಂಡವಾಗಲು ಕಾಲವೆನ್ನುವ ಶ್ರೇಷ್ಠ ತಕ್ಕಡಿಯ ತಟ್ಟೆಗಳಲ್ಲಿ ಬ್ರಹ್ಮನು ಚಂದ್ರನನ್ನೂ ಸೂರ್ಯನನ್ನೂ ತೂಗಲು ಸೂರ್ಯನು ಭಾರದಿಂದ ಕೆಳಕ್ಕೆ ಸರಿದಂತೆ ಭೂಮಿಗೆ ಇಳಿದನು. ಚಂದ್ರನು ವೃದ್ಧಿಗೊಂಡಂತೆ ಆ ನೋವಿನಿಂದ [ಸೂರ್ಯನು] ದಿಗ್ಭ್ರಮೆಗೊಂಡನು. ೨೩. ಶುಭ್ರನಾದ ಸೂರ್ಯನು ಸಮುದ್ರಕ್ಕೆ ಇಳಿಯಲು ಜಕ್ಕವಕ್ಕಿಗೆ ದುಃಖವಾಯಿತು, ಚಕೋರ ಪಕ್ಷಿಗಳು ನಲಿದಾಡಿದವು, ನೈದಿಲೆಗಳ ಸಮೂಹವು ಅರಳಿತು, [ಆಕಾಶದಲ್ಲಿ] ಸಂಜೆಗೆಂಪು ಕಾಣಿಸಿತು, ದುಂಬಿಗಳೊಡನೆ ತಾವರೆಗಳ ಸಮೂಹವು ದಳಗಳನ್ನು ಮುಚ್ಚಿಕೊಂಡವು, ಪಕ್ಷಿಗಳು ಗೂಡಿಗೆ ಹಿಂತಿರುಗಿದವು, ನಕ್ಷತ್ರಗಳ ಗುಂಪು ಕಾಣಿಸಿಕೊಂಡಿತು, ಚಂದ್ರಮಂಡಲವು ಕಾಂತಿಯನ್ನು ಹೊಂದಿತು. ೨೪. ಅಸಂಖ್ಯ ವಿರಹಿಗಳ ಸಮೂಹವೆನ್ನುವ

ನಂದನದೊಳ್ಪೊದಟ್ದಿ ಸುರಭೂಮಿಜಪುಷ್ಪಗುಲುಂಚ್ಛದಂತೆ ಸಂ
ಕ್ರಂದನದಿಗ್ವಧೂಮಣಿಯ ಭಾಳದ ಮುತ್ತಿನ ಬೊಟ್ಟಿನಂತೆ ನಿ।
ಷ್ಪಂದಮದೋತ್ಕಟಾಮರಮತಂಗಜಸತ್ತಮಕುಂಭದಂತೆವೊ
ಲಿಂದುವ ಮಂಡಲಂ ಒಗೆಗೆ ಬಂದುದು ಕಾಂತಿಯನೈದೆ ತುಳ್ಕುತುಂ ॥ ೨೫ ॥

ಕಿಂಜಲ್ಕಂ ಭಗಣಂ ಮರಂದಪಟಲಂ ಚಂದ್ರಾತಪಂ ಪುಷ್ಪಲಿ
ಟ್ಕುಂಜಂ ಮಧ್ಯಗತಾತ್ಮಲಾಂಛನಮದಾಗಳ್ ನಿರ್ಜರಾಧೀಶದಿ।
ಕ್ಕಂಜಾತಾಕರಜಾತನೂತ್ನವಿಲಸಚ್ಛ್ವೇತಾಂಬುಜಾತಂಬೊಲಾ
ರಂಜಿಕ್ಕುಂ ಶಶಿಮಂಡಲಂ ಗಗನಕಾಂತಾಮೌಕ್ತಿಕೋತ್ಕುಂಡಲಂ ॥ ೨೬ ॥

ಚಂಚಚ್ಛಾರದನೀರದಂ ನೊಱೆ ಲಸತ್ತಾರಾಗಣಂ ವಿಪ್ರುಷಂ
ಪ್ರಾಂಚಚ್ಚಂದ್ರಿಕೆ ಶಂಬರಂ ಗ್ರಹಗಣಂ ಯಾದಂ ಸಮಂತಾಗಲಂ।
ದುಂಚಂಬೆತ್ತು ನಭಃಪಯೋನಿಧಿಯೊಳುದ್ಯತ್ಕಾಲಸಾಂಯಾತ್ರಿಕಂ
ತಾಂ ಚೆಲ್ವಿಂ ನಡೆಯಿಪ್ಪ ಬೈತ್ರಮೆನೆ ಬಿಂಬಂ ರಂಜಿಕುಂ ಚಂದ್ರನಾ ॥ ೨೭ ॥

ನವಚಂದ್ರಿಕೆಯೆನಿಪಪಮೃತಾ
ರ್ಣವದೊಳ್ಪೆಂಡೇಟ್ವಿ ಕಂಬುಯೆನಲತಿಧವಳ।
ಚ್ಛವಿಯಂ ಪಸರಿಸುತಿಳೆಗು
ತ್ಸವಮಂ ಮಾಡುತ್ತಮೆಸೆದುದಿಂದುವ ಬಿಂಬಂ ॥ ೨೮ ॥

ಮತ್ತಮದಲ್ಲದೆ,

ಚಿಟ್ಟೆಯನ್ನು ಮನ್ಮಥನು ದೀಪದಿಂದ ಸುಡುವನು ಎಂಬ ಹೋಲಿಕೆಗೆ ಒಂದು ಕಾಂತಿಯನ್ನು ಚೆಲ್ಲುತ್ತ ಚಂದ್ರನು ಶೋಭಿಸಿದನು. ೨೫. ತೋಟದಲ್ಲಿ ಹರಡಿದ ಕಲ್ಪವೃಕ್ಷದ ಪುಷ್ಪಗುಚ್ಛದಂತೆ, ಪೂರ್ವದಿಕ್ಕೆಂಬ ಹೆಣ್ಣಿನ ಹಣೆಯ ಮುತ್ತಿನಬೊಟ್ಟಿನಂತೆ, ಧಾರಾಕಾರವಾಗಿ ಸುರಿವ ಮದಜಲದಿಂದ ಕೂಡಿದ ದೇವಲೋಕದ ಆನೆಯ ಕುಂಭಸ್ಥಳದಂತೆ ಚಂದ್ರ ಮಂಡಲವು ಕಾಂತಿಯನ್ನು ಚೆನ್ನಾಗಿ ಚೆಲ್ಲುತ್ತ ಮನಸ್ಸಿಗೆ ಸೊಗಸಾಗಿ ಕಂಡುಬಂದಿತು. ೨೬. ಹೂವಿನ ಕುಸುರೇ ನಕ್ಷತ್ರಗಳು, ಮಕರಂದದ ಸಮೂಹವೇ ಬೆಳುದಿಂಗಳು, ಹೂವಿನ ಗೊಂಚಲೇ ಮಧ್ಯದಲ್ಲಿರುವ ಆತ್ಮಲಾಂಛನವು ಹೀಗೆ ಪೂರ್ವ ದಿಕ್ಕೆಂಬ ಸರೋವರದಲ್ಲಿನ ಶುಭ್ರವಾದ ಕಮಲದ ರೀತಿಯಲ್ಲಿ ಗಗನವೆಂಬ ಸ್ತ್ರೀಯ ಮುತ್ತಿನ ಕರ್ಣಕುಂಡಲವೆನ್ನುವಂತೆ ಚಂದ್ರಮಂಡಲವು ಶೋಭಿಸಿರುವುದು. ೨೭. ಹೊಳೆವ ಶರತ್ಕಾಲದ ಮೋಡವೇ ನೊರೆ, ಮಿನುಗುವ ನಕ್ಷತ್ರಗಳೇ ವಿಶೇಷವಾಗಿ ಹೊಳೆಯುವ ಬೆಳದಿಂಗಳು, ಗ್ರಹಗಳೇ ನೀರು - ಹೀಗೆ ಚೆನ್ನಾಗಿ ಆಗಲು ಶ್ರೇಷ್ಠತೆಯನ್ನು ಪಡೆದ ಆಗಸದ ಮೋಡಗಳು ಪ್ರಯತ್ನಶೀಲನಾದ ಕಾಲನೆನ್ನುವ ಯಾಂತ್ರಿಕನು ಸೊಗಸಾಗಿ ನಡೆಯಿಸುವ ಹಡಗೋ ಎನ್ನುವಂತೆ ಚಂದ್ರನ ಆ ಬಿಂಬವು ಶೋಭಿಸಿರುವುದು. ೨೮. ಎಳೆಯ ಬೆಳದಿಂಗಳೆಂಬ ಕ್ಷೀರಸಮುದ್ರದಲ್ಲಿ ಬೆಂಡೆದ್ದ ಶಂಖವೋ ಎನ್ನುವಂತೆ ಶುಭ್ರಕಾಂತಿಯನ್ನು ಹರಡುತ್ತ ಲೋಕಕ್ಕೆ ಆನಂದವನ್ನುಂಟುಮಾಡುತ್ತ ಚಂದ್ರಬಿಂಬವು ಶೋಭಿಸಿತು. ವ॥ ಮತ್ತೆ ಅದಲ್ಲದೆ,

ತೊಳಪಿಂದ್ರದಿಗ್ವಧೂಮಣಿ
ಪಳುಕಿನ ಕರಡಿಗೆಯೊಳೊಲ್ದು ಬೈತಲ ಸತ್ಕ।
ಜ್ಜಳಮೆನಲೆಡೆವಿಡದೆ ಮನಂ
ಗೊಳಿಸಿದುದಮೃತಾಂಶುಮಂಡಲಸ್ಥಕಲಂಕಂ ॥ ೨೯ ॥

ಸಸಿಯೆನಿಪ ಸುಧಾರಸಮಂ
ಮಿಸುಪ ಕಲಂಕೆಂಬಕಲಭನೊಲವಿಂ ಪೊಗಲೆ।
ಣ್ದೆಸೆಯೊಳ್ಸಿಮ್ಮಿದಮೃತಕಣ
ವಿಸರಮೆನಲ್ಮೆಱೆದುದಮರ್ದ ತಾರಾನಿಚಯಂ ॥ ೩೦ ॥

ಇಂದ್ರದಿಶಾವಧೂಟಿ ನಿಜಭಾಳದೊಳೊಲ್ದು ಮನಂಗೊಳಿಪ್ಪ ತ
ಚ್ಚಂದ್ರಮನೆಂಬ ಚಂದನದ ಬೊಟ್ಟನಮರ್ಚೆ ಬಟಿಕ್ಕ ಹಸ್ತಮಂ।
ರುಂದ್ರವಿಲಾಸಮಂ ಬಿದಿರ್ದೊಡಭ್ರದೊಳಣ್ಣಮರ್ದಂಟಿದಂತೆವೋಲ್
ಸಾಂದ್ರತೆವೆತ್ತ ಕಾಂತಿಯೆನೆ ತುಳ್ಕುತುಮೊಪ್ಪಿದುವೈದೆ ತಾರೆಗಳ್ ॥ ೩೧ ॥

ಶ್ರೀಚಂದ್ರಬಿಂಬಮೆಂದಂ
ಬಾಚಾರ್ವಮೃತಪರಿಪೂರ್ಣರೌಪ್ಯಕಳಶಮಂ।
ಖೇಚರಿಯರ್ಚಿಸಿದುರುಮ
ಲ್ಲೀಚಯಮೆನಲೆಸೆದುದಮರ್ದ ತಾರಾನಿಚಯಂ ॥ ೩೨ ॥

ಅಪ್ಪುವಿನೊಯ್ಲಿಂದೊಡೆದು ತೊ
ಳಪ್ಪುರುಮೌಕ್ತಾಳಿಸೂಸಲದಱೆಡೆಯೊಳ್ ಶೋ।
ಭಿಪ್ಪೆಳೆಮುತ್ತಿನ ಸಿಪ್ಪಿನ
ಲೊಪ್ಪಿದುದುಡುರಾಜಿಮಧ್ಯದೊಳ್ಶಶಿಬಿಂಬಂ ॥ ೩೩ ॥

೨೯. ಹೊಳೆವ ಪೂರ್ವದಿಕ್ಕೆಂಬ ಹೆಣ್ಣಿನ ಸ್ಫಟಿಕದ ಕರಡಿಗೆಯಲ್ಲಿ ಪ್ರೀತಿಯಿಂದ ಮುಚ್ಚಿಟ್ಟ ಪ್ರಕಾಶಿಸುವ ಕಣ್‌ಕಪ್ಪೆನ್ನುವಂತೆ ಚಂದ್ರನಲ್ಲಿರುವ ಕಲಂಕವು ಸದಾ ಮನಸೆಳೆಯುವಂತಿದ್ದಿತು. ೩೦. ಚಂದ್ರನೆನ್ನುವ ಅಮೃತರಸವನ್ನು ಹೊಳೆವ ಕಲಂಕವೆಂಬ ಆನೆಯ ಮರಿಯು ಪ್ರೀತಿಯಿಂದ ಹೊಗಲು [ಆಗ] ಎಂಟೂ ದಿಕ್ಕುಗಳಿಗೆ ಚಿಮ್ಮಿದ ಅಮೃತಕಣಗಳ ಸಮೂಹವೆನ್ನುವಂತೆ ಆಕಾಶವನ್ನು ಹೊಂದಿರುವ ನಕ್ಷತ್ರಗಳ ಮೊತ್ತವು ಹೊಳೆಯಿತು. ೩೧. ಪೂರ್ವದಿಕ್ಕೆಂಬ ಹೆಣ್ಣು ತನ್ನ ಹಣೆಯಲ್ಲಿ ಪ್ರೀತಿಪಟ್ಟು ಮನಸೆಳೆಯುವ ಚಂದ್ರ ಶ್ರೀಗಂಧದ ಬೊಟ್ಟನ್ನು ಇಟ್ಟುಕೊಂಡ ಬಳಿಕ ಅವಳ ಕೈ ಅತಿಶಯವಾದ ಶೋಭೆಯನ್ನು ಹರಡಲು ಆಕಾಶದಲ್ಲಿ ಲೇಪನವು ಚೆನ್ನಾಗಿ ಅಂಟಿದಂತೆ ವಿಸ್ತಾರವಾದ ಕಾಂತಿಯೊ ಎನ್ನುವಂತೆ ನಕ್ಷತ್ರಗಳು ಚೆಲ್ಲಿ ಚೆನ್ನಾಗಿ ಶೋಭಿಸಿದವು. ೩೨. ಪ್ರಕಾಶಮಾನವಾದ ಚಂದ್ರಬಿಂಬವೆನ್ನುವ ಮನೋಹರವಾದ ಬೆಳ್ಳಿಯ ಪೂರ್ಣಕುಂಭವನ್ನು ಅಪ್ಸರೆಯು ಪೂಜಿಸಿದ ಶ್ರೇಷ್ಠಮಲ್ಲಿಗೆಗಳ ಸಮೂಹವೆನ್ನುವಂತೆ ಆಕಾಶದಲ್ಲಿ ಸೇರಿದ ನಕ್ಷತ್ರಗಳ ಸಮೂಹವು ಅಂಗವಾಗಿ ಕಾಣಬಂದಿತು. ೩೩. ನೀರಿನ ಹೊಡೆತದಿಂದ ಒಡೆದು ಜ್ವಲಿಸುವ ಶ್ರೇಷ್ಠವಾದ ಮುತ್ತಿನ ಸಮೂಹವು ಕಾಣಿಸಲು ಅದರ ನಡುವೆ ಶೋಭಿಸುವ ಎಳೆಯ ಮುತ್ತಿನ ಚಿಪ್ಪು ಎನ್ನುವಂತೆ ನಕ್ಷತ್ರಗಳ

ಚಂದ್ರಬಿಂಬತಾರತಾರಕುಂಭಪೂರ್ಣದುಗ್ಧಮಂ
ರುಂದ್ರಮೋದಮೈದೆ ಪುಟ್ಟಲುಲ್ಲಸಚ್ಚಕೋರಿಗಳ್।
ಇಂದ್ರದಿಗ್ವಧೂಟಿ ಪೊಯ್ದ ತತ್ಪಯೋಚ್ಚಧಾರೆಯೋಲ್
ಸಾಂದ್ರಕಾಂತಿಯುರ್ವಿ ಕೊರ್ವಿಕೊರ್ವಿ ಪರ್ವಿತುರ್ವಿಯಂ ॥ ೩೪ ॥

ಸಿತರೋಚಿಸ್ಸುರಭೂಜಸೂನರಜದಿಂದುಚ್ಚೈಶ್ಶ್ರವಸ್ಸೃಕ್ವನಿ
ರ್ಗತಲಾಲಾಸಲಿಲಂ ಸುಧಾಕರಸಮುದ್ಯಚ್ಚಕ್ರದಂತಾವಳೋ।
ನ್ನತಧೂತ್ಕಾರಿತವಾರಿ ಚಂದ್ರಶಕಲಾಂಭೋರಾಶಿದುಗ್ಧಂ ನಿಶಾ
ಪತಿತಾರಾಚಲಕಾಂತಿಜಾಳಮೆನಲೊಪ್ಪಿತ್ತಂದು ಚಂದ್ರಾತಪಂ ॥ ೩೫ ॥

ಪರಿವೇಷಂ ಸುರಕಾರ್ಮುಕಂ ನಿಜಕಲಂಕಂ ಕಾರ್ಮುಗಿಲ್ ಮಿಂಚು ಬಂ
ಧುರರೋಚಿಶ್ಚಯಮಾಲಿಗಲ್ಭಗಣಮಭ್ರಧ್ವಾನಮಾನಂದದಿಂ।
ನೆರೆವುತ್ತುಂಗಚಕೋರಿಕಾರವಮದಾಗಲ್ ಸಾಂದ್ರವರ್ಷಾಗಮಂ
ಸುರಿದತ್ತೈದೆ ಮನಂಗೊಳಿಪ್ಪುರುವಿರಾಜಚ್ಚಂದ್ರಿಕಾಸಾರಮಂ ॥ ೩೬ ॥

ಇಳೆಯೆಲ್ಲಮನಿರುಳೆಂಬಾ
ನಳಿನಾಂಬಕೆ ನೂತ್ನಚಂದನದ ರಸದಿಂದಂ।
ತೊಳೆದೆಳಮಿಂಚಿನ ತಿರುಳಿಂ
ಬೆಳಗಿದುದೆನಲೆಸೆದುದಚ್ಚಪೊಸಬೆಳ್ದಿಂಗಳ್ ॥ ೩೭ ॥

ಮತ್ತಮದಲ್ಲದೆ,

ಸಮೂಹದ ನಡುವೆ ಚಂದ್ರಬಿಂಬವು ಅಂದಗೊಂಡಿತು. ೩೪. ಚಂದ್ರಬಿಂಬವೆಂಬುವ ದೊಡ್ಡ ಬೆಳ್ಳಿಯ ಕುಂಭದಲ್ಲಿ ತುಂಬಿದ ಹಾಲನ್ನು [ನೋಡಿ] ಅತಿಶಯವಾದ ಆನಂದ ಹೊಂದಿದ ಚಕೋರ ಪಕ್ಷಿಗಳು ಕಾಂತಿಗೊಂಡವು. ಪೂರ್ವದಿಕ್ಕೆಂಬ ಹೆಣ್ಣು ಸುರಿದ ಹಾಲಿನ ಧಾರೆಯಂತೆ ವಿಸ್ತಾರವಾದ ಕಾಂತಿಯು ಹರಡಿ ಅತಿಶಯವಾಗಿ ಹೆಚ್ಚಳಗೊಂಡು ಲೋಕವನ್ನೆಲ್ಲಾ ಆವರಿಸಿತು. ೩೫. ಬೆಳ್ಳನೆಯ ಕಿರಣಗಳೇ ಕಲ್ಪವೃಕ್ಷದ ಹೂವಿನ ಪರಾಗದಿಂದ ಇಂದ್ರನ ಕುದುರೆಯ ಕಟಬಾಯಿಯಿಂದ ಸುರಿವ ಲಾಲಾರಸ; ಚಂದ್ರನ ಮೇಲೆತ್ತಿದ ಚಕ್ರದ ಹಲ್ಲುಗಳ ಮೇಲಿಂದ ವೇಗವಾಗಿ ಸುರಿವ ನೀರೇ ಚಂದ್ರನ ತುಣುಕಾದ, ಕ್ಷೀರಸಾಗರವು; ಚಂದ್ರನೇ ರಜತಾದ್ರಿಯ ಕಾಂತಿಯ ಮೊತ್ತವೆನ್ನುವಂತೆ ಬೆಳುದಿಂಗಳು ಶೋಭಿಸಿತು. ೩೬. ಸುತ್ತುವರಿದಿರುವುದೇ ಕಾಮನಬಿಲ್ಲು, ತನ್ನಲ್ಲಿನ ಕಳಂಕವೇ ಕಪ್ಪು ಮೋಡ, ಮನೋಹರವಾದ ಕಿರಣಗಳ ಮೊತ್ತವೇ ಮಿಂಚು, ನಕ್ಷತ್ರಗಳ ಸಮೂಹವೇ ಆಲಿಕಲ್ಲು, ಆನಂದದಿಂದ ಸಂಭೋಗಿಸುವ ಶ್ರೇಷ್ಠ ಚಕೋರಿಗಳ ಧ್ವನಿಯೇ ಮೋಡಗಳ ಗುಡುಗು ಹೀಗೆ ಆಗಲು ವಿಶಾಲವಾದ ಮಳೆಗಾಲವು ಮನಸೆಳೆಯುವ ಶೋಭೆಯಿಂದ ಕೂಡಿದ ಬೆಳುದಿಂಗಳಿನ ಮಳೆಯನ್ನು ಚೆನ್ನಾಗಿ ಸುರಿಸುವುದು. ೩೭. ಲೋಕವೆಲ್ಲವನ್ನು ಕತ್ತಲೆಯೆಂಬ ಕಮಲಾಕ್ಷಿಯು ನೂತನ ಶ್ರೀಗಂಧದ ರಸದಿಂದ ತೊಳೆದು, ಎಳೆಯ ಮಿಂಚಿನ ತಿರುಳಿನಿಂದ ಬೆಳಗಿದಳೊ ಎನ್ನುವಂತೆ ಶುಭ್ರವಾದ ಎಳೆಯ ಬೆಳದಿಂಗಳು ಹೊಳೆಯಿತು. ವ॥ ಮತ್ತೆ

ಇಂಗಡಲ್ಗೆ ಫೇನಪಿಂಡಂ ಬಾಂದೊಱೆಗೆ ಕಲ್ಲೋಲಂ ನಭಕ್ಕೆ ಶರದಭ್ರಂ ಮಂಜುಳವನಕ್ಕೆ ಮಲ್ಲಿಕಾಕುಸುಮಂ ಪೂಗೊಳಕ್ಕೆ ಪುಂಡರೀಕಂ ತಾರಾಚಳಕ್ಕೆ ನಿರ್ಜರಪ್ರವಾಹಂ ಮಾನಸಸರೋವರಕ್ಕೆ ಮರಾಳಂ ತಾಮ್ರಪರ್ಣಿಗೆ ನವಮೌಕ್ತಿಕಂ ನಳಿನಾಳಿಗೆ ಮೃಣಾಳಂ ದಿಶಾಂಗನೆಯರ್ಗೆ ದುಗುಲಮಾಗಿ ಸರ್ವೋರ್ವಿಯೊಳ್ಪರ್ವಿ ಕೊರ್ವಿ ಮನಂಗೊಳಿಪ್ಪತಿಪೂರ್ಣಸಂಜನಿತಸಾಂದ್ರಚಂದ್ರಿಕಾಪಟಲಪ್ರಕಾಶ ದೇಟಿಗ್ಗಿಯಂ ಕಂಡು ನಗರ ನಾರೀಜನಂ ಚಂದ್ರಿಕಾಮಹೋತ್ಸವಮಂ ನೋಡಲೆಟ್ಟಿಂದಟ್ಟಿವಟ್ಟು ಸೌಂದರವತಿಯಂ ಬೀಱುಕ್ಕೊಂಡರಮನೆಯಂ ಪೊಱಮಟ್ಟು ಶಿವಭದ್ರಂಬೆರಸುದ್ಭಟಕ್ಷಿತೀಂದ್ರ ಚಂದ್ರಮಂ ನಾಗರಿಕವಿಟವಿದೂಷಕಪೀಠಮರ್ದನರೆಂಬಸಖರೆಡಬಲದೊಳ್ ನಗಿಸುತ್ತುಂ ಬರಲಖಿಳವೀಥಿಗಳೊಳಪ್ಪ ವಿನೋದಂಗಳನಾಲೋಕಿಸುತ್ತುಂ ಫುಲ್ಲೋಲ್ಲಾಸದಿಂ ಮೆಲ್ಲನೆಟ್ಟಿಂದಂಗಜಾಸ್ತ್ರನಾಡುಂಬೊಲನೆನಲನಂತ ಮೋಹನಮಂ ತಳೆದೊಪ್ಪುವ ಸೂಳೆಗೇರಿಯಂ ಪೊಕ್ಕು ಬರೆವರೆ,

ಪೆರ್ಮೆಯ ಲಂಜಿಕಾಜನಕುಚಾಂಕಿತಚಂದನದಣ್ಣನಂಟಿ ತಾಂ
ಸೋರ್ಮುಡಿಯೊಳ್ತುಱುಂಬಿದಲರೊಳ್ಪೊರಳ್ದೊಯ್ಯನೆ ಕಂಠದೇಶದೊ।
ಳ್ಪೊರ್ಮೆಯನಿಟ್ಟು ಹಾರಮಣಿಮಂಜರಿಯೊಳ್ಪಸು ಸಿಲ್ಕಿ ತೂಗುತುಂ
ನಿರ್ಮಲಮಾರ್ಗಮಂ ಪಿಡಿದು ತೀಡಿದುದಲ್ಲಿಯ ಮಂದಮಾರುತಂ ॥ ೩೮ ॥

ಕಂಪಂ ಪಸರಿಪ ಮೆಲ್ಲೆಲ
ರಿಂಪಂ ಶೂಲಿಗೆ ಸಮರ್ಪಿಸುತ್ತುದ್ಭಟದೇ।
ವಂ ಪರಿತೋಷದಿನೆಟ್ಟಿರೆ
ತಾಂ ಪಿರಿದೆನಲೆಸೆದುದಂದು ಗಣಿಕಾನಿವಹಂ ॥ ೩೯ ॥

ಅದಲ್ಲದೆ, ಹಾಲಿನ ಸಮುದ್ರಕ್ಕೆ ನೊರೆಯ ಮೊತ್ತ, ಗಂಗೆಗೆ ತೆರೆಗಳು, ಆಕಾಶಕ್ಕೆ ಶರತ್ಕಾಲದ ಮೋಡಗಳು, ಮನೋಹರವಾದ ಉದ್ಯಾನವನಕ್ಕೆ ಮಲ್ಲಿಗೆಯ ಹೂಗಳು, ಹೂವಿನ ಕೊಳಕ್ಕೆ ತಾವರೆಗಳು, ರಜತಾದ್ರಿಗೆ ದೇವತೆಗಳ ಪ್ರವಾಹ, ಮಾನಸ ಸರೋವರಕ್ಕೆ ಹಂಸಗಳು, ತಾಮ್ರಪರ್ಣಿಗೆ ಎಳೆಯ ಮುತ್ತುಗಳು, ಕಮಲಗಳಿಗೆ ತಾವರೆಯ ದೇಟು, ದಿಕ್ ದೇವತೆಗಳಿಗೆ ವಸ್ತ್ರವಾಗಿ ಭೂಮಿಯ ಮೇಲೆಲ್ಲಾ ಹಬ್ಬಿ ಕೊಬ್ಬಿ ಮನಸೆಳೆಯುವ ಪೂರ್ಣಚಂದ್ರನ ಕಿರಣಗಳ ಪ್ರಕಾಶದ ವಿಶೇಷತೆ ಇವನ್ನು ಕಂಡ ನಗರದ ಸ್ತ್ರೀಯರುಗಳು ಬೆಳದಿಂಗಳ ಮಹಾಸಂಭ್ರಮವನ್ನು ನೋಡಲೆಂದು ಬರಲು, ಪ್ರೀತಿಯಿಂದ ಸೌಂದರವತಿಯನ್ನು ಬೀಳ್ಕೊಂಡು ಅರಮನೆಯಿಂದ ಹೊರಬಂದು ಶಿವಭದ್ರನೊಡನೆ ಉದ್ಭಟ ಮಹಾರಾಜ ಚಂದ್ರಮನು ನಾಗರಿಕ ವಿಟ ವಿದೂಷಕ ಪೀಠಮರ್ದನರೆಂಬ ಗೆಳೆಯರು ಎಡ ಬಲಗಳಲ್ಲಿ ನಗಿಸುತ್ತ ಬರಲು, ಎಲ್ಲಾ ಬೀದಿಗಳಲ್ಲಿನ ವಿನೋದಗಳನ್ನು ನೋಡುತ್ತ ಉಲ್ಲಾಸದಿಂದ ಅರಳಿ ಮೆಲ್ಲನೆ ಬಂದು ಮನ್ಮಥನು ಆಡುವ ಸ್ಥಲವೆನ್ನುವಂತೆ ಅಪಾರ ಸೊಬಗನ್ನು ಹೊಂದಿ ಶೋಭಿಸುವ ಸೂಳೆಗೇರಿಯನ್ನು ಪ್ರವೇಶಿಸಿ ಬರುತ್ತಿರಲು, ೩೮. ಹಿರಿಮೆಯನ್ನು ಹೊಂದಿರುವ ವೇಶ್ಯೆಯರ ಮೊಲೆಗಳಿಗೆ ಅಂಕಿತಮಾಡಿದ ಶ್ರೀಗಂಧದ ಲೇಪನವನ್ನು ಸೇರಿ, ಸಡಿಲವಾಗಿ ಕಟ್ಟಿದ ತುರುಬಿನಲ್ಲಿ ಸೇರಿಸಿದ ಹೂವಿನಲ್ಲಿ ಮೆಲ್ಲನೆ ಹೊರಳಿ, ಕೊರಳಿನಲ್ಲಿ ಪ್ರೀತಿಯನ್ನು ಹೊಂದಿ, ಮಣಿಗಳಿಂದ ಕೂಡಿದ ಹಾರದಲ್ಲಿ ಸ್ವಲ್ಪ ಸಿಕ್ಕಿ ತೂಗಾಡುತ್ತ ನಿರ್ಮಲವಾದ ಹಾದಿ ಹಿಡಿದು, ೩೯. ಮೆಲ್ಲನೆ ಹಾರಿ ಬಂದು ಸುವಾಸನೆಯನ್ನು ಹರಡುವ ಗಾಳಿಯ ಮಾಧುರ್ಯವನ್ನು ಶಿವನಿಗೆ ಸಮರ್ಪಿಸುತ್ತ ಉದ್ಭಟದೇವನು ಸಂತೋಷದಿಂದ

ಕಡೆಗಣ್ಮಿಂಚಿನ ಗೊಂಚಲಂ ವದನಮಂಭೋಜಾತಮಂ ಸಿಂಗಮಂ
ನಡು ಜಾಂಬೂನದವಲ್ಲಿಯಂ ತನು ಲಸತ್ಕ್ರೀಡಾದ್ರಿಯಂ ಶ್ರೋಣಿಸೋ।
ರ್ಮುಡಿ ತಾಂ ಸೋಗೆಯನಂಚೆಯಂ ಮೃದುಪದನ್ಯಾಸಂ ಸಮಂತ್ಯೈದೆ ಕೀ
ಳ್ಪಡಿಸಲ್ಮೋಹನಮಾಂತು ಕಣ್ಗೆಸೆದುದುದ್ಯದ್ವಾರನಾರೀಕುಳಂ ॥ ೪೦ ॥

ಗುರುತರಜಘನಂ ಕುಂಭಂ
ಪೊರಜೆ ಲಸತ್ಕಾಂಚಿ ದೋರ್ಲತಿಕೆ ಸುಂಡಿಲ್ಬಂ।
ಘುರಮದಮೆಳೆಜವ್ವನಮಾ
ಗಿರೆ ಗಣಿಕೆಯರೆಸೆದರಂಗಜನ ಪಿಡಿಗಳವೋಲ್ ॥ ೪೧ ॥

ಸ್ಮಿತವಕ್ತ್ರಂ ಪಂಕಜಾತಂ ತ್ರಿವಳಿ ವಳಿ ವಲಂ ನಾಭಿ ಯಾವರ್ತವಂಗ
ದ್ಯುತಿ ನೀರಂ ಜತ್ತುಳಂ ಮೆಲ್ನಗೆಕುರುಳಳಿವಿಂಡಕ್ಷಿ ಮೀನಂ ರಥಾಂಗಂ।
ನುತವಕ್ಷೋಜಂ ಸಮುದ್ಯತ್ಕಬರಿಪರಿಲಸತ್ಕಾಳಶೈವಾಳಮಾಗಲ್
ಸತತಂ ಪಣ್ಯಾಂಗನಾಸಂತತಿ ಸೊಗಯಿಸುಗುಂ ಮಂಜುಕಂಜಾಕರಂಬೋಲ್ ॥ ೪೨ ॥

ಕುಚದೊಳ್ಚಕ್ರಂ ಮರಾಳಂ ನಡೆಯೊಳುರುಪಿಕಂ ನಾದದೊಳ್ ನೇತ್ರದೊಳ್ಪಾ
ರುಚಕೋರಂ ತಾಮ್ರತುಂಡಂ ನುಡಿಯೊಳತುಳಧಮ್ಮಿಲ್ಲದೊಳ್ಕೇಕಿಭೃಂಗಂ।
ವಿಚಲನ್ನೀಲಾಳಕಾನೀಕದೊಳಮರ್ದೆಸೆಯಲ್ ಶೋಭಿಕುಂ ವಾರನಾರೀ
ನಿಚಯಂ ಕಂದರ್ಪಭೂಮೀಶನ ನಿಜಬಲಮಂದೊಡ್ಡಿ ನಿಂದಂತಿರೆತ್ತಂ ॥ ೪೩ ॥

ಬರಲು ವೇಶ್ಯೆಯರ ಮನೆಗಳ ಸಮೂಹವು ಹಿರಿದೆನ್ನುವಂತೆ ಶೋಭಿಸಿದ್ದಿತು. ೪೦. ಕಡೆಗಣ್ಣು ಮಿಂಚಿನ ಗೊಂಚಲನ್ನು, ಮುಖವು ಕಮಲವನ್ನು, ನಡು ಸಿಂಹವನ್ನು, ದೇಹವು ಸುವರ್ಣ ಬಳ್ಳಿಯನ್ನು, ನಿತಂಬವು ವಿಹರಿಸುವ ಪರ್ವತವನ್ನು, ಸಡಿಲವಾಗಿ ಕಟ್ಟಿದ ತುರುಬು ನವಿಲನ್ನು, ಮೃದುವಾದ ಪಾದಗಳ ನಡಿಗೆಯು ಹಂಸವನ್ನು, ಚೆನ್ನಾಗಿ ಕೀಳು ಮಾಡುವಂತೆ ಮೋಹಕತೆಯನ್ನು ಹೊಂದಿದ ಶ್ರೇಷ್ಠ ವೇಶ್ಯೆಯರ ಸಮೂಹವು ಕಣ್ಣಿಗೆ ಅಂದಗೊಂಡು ಕಾಣಿಸಿತು. ೪೧. ಹಿರಿದಾದ ನಿತಂಬಗಳೇ ಕುಂಭ, ಹೊಳೆವ ಸೊಂಟಪಟ್ಟಿಯೇ ದಪ್ಪ ಹಗ್ಗ, ತೋಳುಗಳೆಂಬ ಬಳ್ಳಿಯೇ ಸೊಂಡಿಲು, ಎಳೆಯ ಜವ್ವನವೇ ಮನೋಹರ ಮದಧಾರೆ ಆಗಿರಲು ಮನ್ಮಥನ ಹೆಣ್ಣಾನೆಗಳೆಂಬಂತೆ ವೇಶ್ಯೆಯರು ಶೋಭಿಸಿದರು. ೪೨. ಅರಳಿದ ಮುಖವೇ ಕಮಲ, ತ್ರಿವಳಿವಳೇ ತೆರೆ, ಹೊಕ್ಕುಳೇ ಸುಳಿ, ದೇಹ ಕಾಂತಿಯೇ ಮುತ್ತು, ಕಿರುನಗೆಯೇ ನೊರೆ, ಮುಂಗುರುಳೇ ದುಂಬಿಗಳ ಸಮೂಹ, ಕಣ್ಣುಗಳೇ ಮೀನುಗಳು, ಮೊಲೆಗಳೇ ಚಕ್ರವಾಕಗಳು, ಚೆನ್ನಾಗಿ ಶೋಭಿಸಿದ ಕೂಡಲೇ ಕಾಳಸರ್ಪವಾಗಿರಲು ವೇಶ್ಯೆಯರ ಸಮೂಹವು ಯಾವಾಗಲೂ ಮನೋಹರವಾದ ಕೊಳದಂತೆ ಸೊಗಸಾಗಿ ಕಾಣಿಸುವುದು. ೪೩. ಚಕ್ರವಾಕ ಪಕ್ಷಿಗಳು ಮೊಲೆಯಲ್ಲಿ, ಹಂಸವು ನಡಿಗೆಯಲ್ಲಿ, ಕೋಗಿಲೆಯು ದನಿಯಲ್ಲಿ, ಚಕೋರವು ಕಣ್ಣುಗಳಲ್ಲಿ, ಗಿಳಿಯು ನುಡಿಯಲ್ಲಿ, ನವಿಲು ಮುಡಿಯಲ್ಲಿ, ದುಂಬಿಯು ಚಂಚಲವಾದ ನೀಳ ಮುಂಗುರುಳುಗಳಲ್ಲಿ ಕೂಡಿ ವೇಶ್ಯೆಯರ ಸಮೂಹವು ಶೋಭಿಸಲು ಮನ್ಮಥರಾಜನ ಸೈನ್ಯವು ಅಂದು ಎಲ್ಲಾ ಕಡೆ ಗುಂಪುಗೂಡಿ ನಿಂತಂತೆ ಚೆನ್ನಾಗಿ ಕಾಣುವುದು.

ನೋಡಿದೊಡನಿಮಿಷಪದಮಂ
ಮಾಡುತ್ತುಂ ವಿಟಜನಕ್ಕೆ ಮುದದಿಂ ಸೋಡಂ।
ಬಾಡಮಲಂಪಿನ ಪೆಂಪಿನ
ಗಾಡಿಯನಾಂತೆಸೆದುದಂದು ಗಣಿಕಾನಿವಹಂ ॥ ೪೪ ॥

ಪೊಸಗಂಪಂ ದೆಸೆಯೊಳ್ಪಸ
ರಿಸಲತಿಸುಲಲಿತತನುವಿನಮರ್ದ ಸುಗಂಧಂ।
ಮಸೆದೆಳಮಿಂಚಿನ ಪೊರಳಿಯೊ
ಲೆಸೆಮದು ಗಣಿಕಾಕುಳಂ ಮಹೋತ್ಸವದಿಂದಂ ॥ ೪೫ ॥

ಮುಳಿದಿನಿಯರ್ಕಳ ಮುನಿಸಂ
ತಿಳಿಪುತ್ತುಂ ನೂತ್ನಪಲ್ಲವಕರೊಳ್ಪ್ರಿಯಮಂ।
ಬಳಯಿಸುತುಂ ಪ್ರಿಯತಮರೊಳೆ
ಮುಳಿಸಂ ತೋಱುತ್ತುಮೊಪ್ಪಿದರ್ ಬೆಲೆವೆಣ್ಗಳ್ ॥ ೪೬ ॥

ಇಂತಪರಿಮಿತವಿಳಾಸಮಂ ತಳೆದು ಮನಂಗೊಳಿಪ್ಪ ವಾರನಾರೀಜನಮಂ ಶಿವಭದ್ರಂಬೆರಸುದ್ಭಟ ಕ್ಷಿತೀಂದ್ರಚಂದ್ರಮಂ ನೋಡುತ್ತುಂ ಬರೆವರೆ,

ಮತ್ತಮೊಂದೆಡೆಯೊಳ್ ಒರ್ವ ಕಳಾವತಿ ವಿಪಂಚಿಯಂ ಪಳಂಚುತ್ತೆಸೆದಿರ್ದಳ್,

ಅದೆಂತೆಂದೊಡೆ,

ಸಲ್ಲಲಿತಾಬ್ಜಕುಟ್ಮಲಪಯೋಧರಮಂ ನಸುದೋಱಿಸುತ್ತೆ ತಾಂ
ಮೆಲ್ಲನೆ ವಾಮದೋರ್ಲತೆಯನೆತ್ತಿ ಬೆರಲ್ಗಳನಿಟ್ಟು ತಂತಿಯಂ।
ನಿಲ್ಲದೆ ನೂಂಕುತೊಂದಿನಿಸುಗೋಣನೊಱಂಗಿಸಿ ನೋಡುತೋಪನಂ
ವಲ್ಲಕಿಯೊಪ್ಪುವಿಂಚರಮನೈದೆ ನೆಗಟ್ಚಿದಳೊರ್ವಳೊಲ್ಮೆಯಿಂ ॥ ೪೭ ॥

೪೪. ನೋಡಿದರೆ ರೆಪ್ಪೆ ಮುಚ್ಚದಂತೆ ಮಾಡುತ್ತ ವಿಟರಿಗೆ ಆನಂದದಿಂದ ಮದ್ಯ ಮಾಂಸಗಳನ್ನು ಅತಿಶಯವಾದ ಸೌಂದರ್ಯವನ್ನು ಹೊಂದಿರುವ ವೇಶ್ಯೆಯರ ಸಮೂಹವು ಅಂದು ಶೋಭಿಸಿತು. ೪೫. ಮನೋಹರವಾದ ದೇಹವನ್ನು ಸೇರಿದ ಸುಗಂಧವು ತನ್ನ ಮಧುರವಾದ ವಾಸನೆಯನ್ನು ದಿಕ್ಕುಗಳಿಗೆ ಹರಡಲು ತಿಕ್ಕಿತೀಡಿದ ಎಳೆಯ ಮಿಂಚಿನ ಗೊಂಚಲೊ ಎನ್ನುವಂತೆ ಮಹದಾನಂದದಿಂದ ವೇಶ್ಯೆಯರ ಬಳಗವು ಶೋಭಿಸಿತು. ೪೬. ಕೋಪಗೊಂಡ ಪ್ರಿಯರ ಮುನಿಸನ್ನು ತಿಳಿಗೊಳಿಸುತ್ತ, ಎಳೆಯ ವಿಟರಲ್ಲಿ ಪ್ರೀತಿಯನ್ನುಂಟು ಮಾಡುತ್ತ, ಪ್ರಿಯತಮರಲ್ಲಿ ಕೋಪವನ್ನು ಪ್ರಕಟಿಸುತ್ತ ವೇಶ್ಯೆಯರು ಶೋಭಿಸಿದರು. ವ॥ ಹೀಗೆ ಹೆಚ್ಚಿನ ಬೆಡಗನ್ನು ಹೊಂದಿ ಮನಸೆಳೆಯುವ ವೇಶ್ಯೆಯರನ್ನು ಶಿವಭದ್ರನೊಡನೆ ಉದ್ಭಟ ಮಹಾರಾಜಚಂದ್ರಮನು ನೋಡುತ್ತ ಬರುತ್ತಿರಲು, ಮತ್ತೆ ಒಂದೆಡೆಯಲ್ಲಿ ಓರ್ವ ಕಲಾವತಿಯು ವೀಣೆಯನ್ನು ನುಡಿಸುತ್ತ ಶೋಭಿಸಿದ್ದಳು. ಅದು ಹೇಗೆಂದರೆ, ೪೭. ಮನೋಹರವಾದ ಮೊಗ್ಗಿನಂತಹ ಮೊಲೆಗಳನ್ನು ಸ್ವಲ್ಪವೇ ಕಾಣಿಸುತ್ತ, ಮೆಲ್ಲನೆ ಎಡಗೈಯೆಂಬ ಬಳ್ಳಿಯನ್ನು ಮೇಲೆತ್ತಿ ಬೆರಳುಗಳನ್ನು ತಂತಿಯ ಮೇಲಿಟ್ಟು ಅದನ್ನು

ಇಂಚರದ ಸಂಚು ಮುಂಚೆ ವಿ
ಪಂಚಿಯ ನುಣ್ಚರಮನುಱು ಪಳಂಚುವ ಚದುರಿಂ।
ಮುಂಚುವ ವೀಣೆಯನುರ್ದು
ತ್ತುಂ ಚಾರುಚಕೋರನೇತ್ರೆ ಯೊಪ್ಪಿದಳೊರ್ವಳ್ ॥ ೪೮ ॥

ಮತ್ತಮೊಂದೆಡೆಯೊಳ್,

ಮಾಣವಕಮನೊಯ್ಯನೆ
ಕಣ್ಣಾಣ್ಮಿಂ ಪೆಱಿಸೂಂಕಿ ಗುರುಕುಚಾಗ್ರದೊಳಾದಂ।
ಮೇಣೊಂದಿಸಿ ಸೋರೆಯನದೊ
ರ್ವೇಣಾಕ್ಷಿ ಪಳಂಚಿದಳ್ಮಿಸುಪ ಕಿನ್ನರಿಯಂ ॥ ೪೯ ॥

ಮತ್ತಮೊಂದೆಡೆಯೊಳ್,

ಜಲಜಮನಿಂದುದ್ಯುತಿ ಪೊ
ಕ್ಕಲೆವಿನಮುದರಸ್ಥಿತಾಳಿ ಮೆಱವವೊಲಾಗ।
ಳ್ಚಲೆ ಸರಮಂಡಲದಿಂಚರ
ಮಲರ್ದುದದೊರ್ವಳ ತೊಳಪ್ಪ ನಖನರ್ತನದಿಂ ॥ ೫೦ ॥

ಮತ್ತಮೊಂದೆಡೆಯೊಳ್,

ಬೆಕ್ಕಿದೆ ನೇಹಂನೋಡು
ತ್ತಕ್ಕಾ ಪೊಂಗೊಲವಿಯ ಸವಿಗುಟಕಂ ನೀಂ ತಂ।
ದಿಕ್ಕೆಂದುಲಿವಾಕನ್ನಡ
ವಕ್ಕಿಯನೋದಿಸುತಲೆಸೆದಳೆಳವೆಣ್ಣೊರ್ವಳ್ ॥ ೫೧ ॥

ಮಿಡಿಯುತ್ತ, ಸ್ವಲ್ಪ ಕೊರಳನ್ನು ಬಾಗಿಸಿ ಪ್ರಿಯನನ್ನು ನೋಡುತ್ತ ಓರ್ವಳು ಪ್ರೀತಿಯಿಂದ ವೀಣೆಯಲ್ಲಿ ಒಳ್ಳೆಯ ನಾದವನ್ನು ಚೆನ್ನಾಗಿ ಹೊಮ್ಮಿಸಿದಳು. ೪೮. ವೀಣೆಯ ನುಣ್ದನಿಯನ್ನು ಮಧುರವಾದ ಧ್ವನಿಯು ಉಪಾಯವಾಗಿ ತಾಗುವ, ಜಾಣತನದಿಂದ ಮೀರುವ ವೀಣೆಯನ್ನು ನುಡಿಸುತ್ತ ಓರ್ವಳು ಸುಂದರ ಚಕೋರದಂತ ಕಣ್ಣುಳ್ಳವಳು ಶೋಭಿಸಿದ್ದಳು. ವ॥ ಮತ್ತೆ ಒಂದು ಸ್ಥಳದಲ್ಲಿ, ೪೯. ಇಪ್ಪತ್ತು ಎಳೆಗಳ ಹಾರವನ್ನು ಕಣ್ಣು ಚತುರತನದಿಂದ ಪಕ್ಕಕ್ಕೆ ತಳ್ಳಿ, ಪೆರ್ಮೊಲೆಯ ಮೇಲೆ ವೀಣೆಯ ಸೋರೆ ಬುರುಡೆಯನ್ನು ಚೆನ್ನಾಗಿ ಹೊಂದಿಸಿ, ಓರ್ವ ಜಿಂಕೆಯ ಕಣ್ಣುಳ್ಳ ಸುಂದರಿಯು ಹೊಳೆವ ತಂತಿವಾದ್ಯವನ್ನು ನುಡಿಸಿದಳು. ವ॥ ಮತ್ತೆ ಒಂದು ಸ್ಥಳದಲ್ಲಿ, ೫೦. ತಾವರೆಯನ್ನು ಚಂದ್ರನ ಕಿರಣಗಳು ಹೊಕ್ಕು ಪೀಡಿಸುವಂತೆ, ಹೊಟ್ಟೆಯ ಮೇಲಣ ದುಂಬಿಗಳು ಶೋಭಿಸುವಂತೆ, ಓರ್ವಳ ಹೊಳೆವ ಉಗುರುಗಳ ಲಾಸ್ಯದಿಂದ ಚೆನ್ನಾಗಿ ಸ್ವರಮಂಡಲದ ಮಧುರ ಧ್ವನಿಯು ಹರಡಿತು. ವ॥ ಮತ್ತೆ ಬಂದು ಸ್ಥಳದಲ್ಲಿ, ೫೧. ಬೆಕ್ಕು ಬಂದುದನ್ನು ಸ್ನೇಹಭಾವದಿಂದ ನೋಡುತ್ತ ಗಿಳಿಯೊಂದು ತನ್ನ ಒಡತಿಗೆ "ಅಕ್ಕಾ, ಹಿಗ್ಗಿ ನೀನು ಪ್ರೀತಿಯ ಸವಿಯಾದ ಒಂದು ಸಲ

ಇಂಬಾಗಿ ನುಡಿಯಲೋದಿಸು
ವಂಬುಜಲೋಚನೆಯ ಪಲ್ಗಳಂ ಪೊಸರಸದಾ।
ಳಿಂಬದ ಬಿಟ್ಟುಗಳೆನುತುಂ
ಚುಂಬಿಸಲಾರ್ಕೆದುದೊಂದು ಮಂಜುಳಕೀರಂ ॥ ೫೨ ॥

ಪೋದೊಡನಂಗಬಿಡಾಲಂ
ಮೋದುವುದಡಿಯಿಡದಿರಕ್ಕನಂ ಬಿಟ್ಟೆತ್ತಂ।
ಕಾದಲ ನೀನೆನುತುಂ ಬಿಡ
ದೋದುವ ಗಿಳಿಯುಲಿಗೆ ನಕ್ಕಳೆಳವೆಣ್ಣೊರ್ವಳ್ ॥ ೫೩ ॥

ನಗೆಬೆಳ್ಪೀಕ್ಷಿಸೆ ಕಪ್ಪೊ
ಯ್ಯಗೆ ಮುಟ್ಟಲ್ಕೆಂಪದಾಗಲೀಕೀರಂ ಭೂ।
ಮಿಗೆ ಚೋದ್ಯಮೆನುತೊರ್ವಳ್
ಬಗೆಯೊಳ್ಕೌತುಕಮನುತ್ಪಲಾಂಬಕಿ ತಳೆದಳ್ ॥ ೫೪ ॥

ಇಂತರಗಿಳಿಗಳನಾನಂದದಿಂದೋದಿಸುವೆಳವೆಣ್ಗಳ ವಿಲಾಸಮಂ ನಡೆನೋಡುತ್ತುದ್ಭಟಕ್ಷಿತೀಂದ್ರ ಚಂದ್ರಮಂ ಬರೆವರೆ,

ಮತ್ತೊಂದೆಡೆಯೊಳ್,

ಮಣಿದಾರವಂದಮಂ ಪಿಡಿ
ದಣಮೀಕ್ಷಿಸುತ್ತುಮೆಲ್ಲರ ಸುಮ್ಮನೆ ಯೆಮ್ಮ।
ಗ್ರಣಿ ಯಿನ್ನುಂ ಬಾರನೆನು
ತ್ತೆಣಿಸುತ್ತೆಸೆದಿರ್ದಳೆಯ್ದೆ ವಿರಹದ ಕತದಿಂ ॥ ೫೫ ॥

ಕುಡಿಯುವಷ್ಟು ಹಾಲನ್ನು ತಂದು ಹಾಕು" ಎಂದು ನುಡಿಯುವ ಅದಕ್ಕೆ ಮಾತನ್ನು ಕಲಿಸುತ್ತ ಎಳೆಯಪ್ರಾಯದ ಸುಂದರಿಯೋರ್ವಳು ಶೋಭಿಸಿದಳು. ೫೨. ಚೆನ್ನಾಗಿ ಹೇಳಿ ಕಲಿಸುತ್ತಿರುವ ಕಮಲಾಕ್ಷಿಯ ಹಲ್ಲುಗಳನ್ನು ಎಳೆಯ ದಾಳಿಂಬದ ಬೀಜಗಳೆಂದು ಭಾವಿಸಿ ಮನೋಹರವಾದ ಗಿಳಿಯೊಂದು ಅದನ್ನು ಕಚ್ಚುವ ವಿಚಾರಮಾಡಿತು. ೫೩. ಹೋದರೆ ಮನ್ಮಥನೆಂಬ ಬೆಕ್ಕು ಮೇಲೆ ಬೀಳುವುದು, ಪ್ರಿಯನೇ ಅಕ್ಕನನ್ನು ಬಿಟ್ಟು ನೀನು ಎಲ್ಲೂ ಹೋಗಬೇಡ ಎಂದು ಬಿಡದೆ ನುಡಿಯುವ ಗಿಳಿಯ ಮಾತಿಗೆ ಎಳೆಯ ಪ್ರಾಯದ ಸುಂದರಿಯೋರ್ವಳು ನಕ್ಕಳು. ೫೪. "ನಕ್ಕರೆ ಬಿಳಿ, ನೋಡಿದರೆ ಕಪ್ಪು, ಮೆಲ್ಲನೆ ಮುಟ್ಟಿದರೆ ಕೆಂಪು ಆಗಲು ಈ ಗಿಳಿಯು ಭೂಮಿಗೆ ಆಶ್ಚರ್ಯವನ್ನುಂಟುಮಾಡಿದೆ" ಎಂದು ಕಮಲಾಕ್ಷಿಯೋರ್ವಳು ಕುತೂಹಲವನ್ನು ಮನದಲ್ಲಿ ಹೊಂದಿದಳು. ವ॥ ಹೀಗೆ ಅರಗಿಳಿಗಳಿಗೆ ಆನಂದದಿಂದ ಕಲಿಸುವ ಎಳೆಯ ಜವ್ವನೆಯರ ಲಾವಣ್ಯವನ್ನು ಚೆನ್ನಾಗಿ ನೋಡುತ್ತ ಉದ್ಭಟ ಮಹಾರಾಜ ಚಂದ್ರಮನು ಬರುತ್ತಿರಲು, ಮತ್ತೊಂದು ಸ್ಥಳದಲ್ಲಿ, ೫೫. ಮಣಿಗಳಿಂದ ಕೂಡಿದ ಬಾಗಿಲಿನ ಚೌಕಟ್ಟನ್ನು ಹಿಡಿದು ಸುಮ್ಮನೆ ಎಲ್ಲರನ್ನೂ ಸ್ವಲ್ಪವೇ ನೋಡುತ್ತ ನಮ್ಮ ಮುಂದಾಳು ಇನ್ನೂ ಬರಲಿಲ್ಲವಲ್ಲ ಎಂದು ವಿಚಾರಮಾಡುತ್ತ ಓರ್ವಳು ವಿರಹದ

ಕೋಗಿಲೆಯಿಂಚರಂ ಸೊಗಸಿನೋದುವ ರಾಜಶುಕಪ್ರಣಾದವಿಂ
ಬಾಗಿರದೇವೆನೆನ್ನ ಮಣಿಮಂದಿರಮಧ್ಯದೊಳೆಂದು ಮುಂ।
ಬಾಗಿಲನಂದು ಸಾರ್ದಿನೆಯನೆಟ್ಟಿರವಂ ಬಯಸುತ್ತುಮೊಪ್ಪಿದಳ್
ಪೂಗಣೆಗಿತ್ತು ತನ್ನ ತನುವಂ ತರುಣೀಮಣಿ ಯೊರ್ವಳಚ್ಚರಿಂ ॥ ೫೬ ॥

ಊದುವ ತಣ್ಣೆಲರಿಂಗಳ
ಮಾದುದು ಕುಸುಮಾಳಿ ಶಸ್ತ್ರಮಾದುದು ಬಿಸಿಲಿ
ರ್ಪಾದುದು ಚಂದ್ರಿಕೆ ಯಿನ್ನುಂ
ಕಾದಲನೇಂ ಬಾರನೆಂದಟಿಲ್ದಳದೊರ್ವಳ್ ॥ ೫೭ ॥

ಇನಿಯನ ಬರವಂ ಬಯಸು
ತ್ತನುತಾಪಂಬಡುವ ಕಾಮಿನೀಮಣಿಯೆಡೆಗೊ।
ಯ್ಯನೆ ಬರ್ಪ ಚಾರುಪಲ್ಲವ
ಕನನೀಕ್ಷಿಸಿ ಪೆರ್ಚೆ ಸಂತಸಂದಳೆದಾಗಳ್ ॥ ೫೮ ॥

ಕುಸುಮಶರಾಳಿ ಯಿಂದೆರ್ದೆಯನಂಡಲೆಯಲ್ಲಡೆನೋಡದಿಂತುಪೇ
ಕ್ಷಿಸಲುಟಿವಂದವೆಂತುಟೆಲೆ ವಲ್ಲಭ ಪೇಟೆನುತೊಯ್ದು ತೋಳ್ಗಳಂ।
ಮಿಸುಪ ಭುಜಂಗಳೊಳ್ಪಿಡದೆ ಜೋಡಿಸಿ ನಿಲ್ಕಿ ಕದಂಪನೊತ್ತಿ ಚುಂ
ಬಿಸುತೆಸೆದಳ್ಸುಧಾಕರನಿಭಾನನೆ ಯೊರ್ವಳತೀವರಾಗದಿಂ ॥ ೫೯ ॥

ಜಾಱುವ ನೀವಿಯಂ ತೊಡೆಗಳಿಂ ಬಿಡದೌಂಕುತೆ ಪಾದದಿಂದಲಂ
ಪೇಱುವ ಕೂರ್ಮೆಯಂ ಬಳಸುತುಂ ನಿಮಿರ್ದೊರ್ಲ್ದಮರ್ದಪ್ಪಿ ಗಂಧಮಂ।
ಬೀಱುವ ಬಾಯದಂಬುಲಮನಿತ್ತೆಳೆದೊಯ್ಯನೆ ಸೆಜ್ಜೆಗೋಪನಂ
ನೀಱು ಕರಂ ಮನಂಗೊಳಿಸಿದಳ್ನವಪುಷ್ಪಕಳಂಬಕೇಳಿಯೊಳ್ ॥ ೬೦ ॥

ಕಾರಣದಿಂದ ಚೆನ್ನಾಗಿ ಶೋಭಿಸಿದ್ದಳು. ೫೬. ಕೋಗಿಲೆಯ ಮಧುರ ಧ್ವನಿಯೂ ಸೊಗಸಾಗಿ ಮಾತನಾಡುವ ರಾಜಗಿಳಿಗಳ ಧ್ವನಿಯೂ ಸಂತೋಷವನ್ನುಂಟುಮಾಡುತ್ತಿಲ್ಲವಲ್ಲಾ ಏನು ಮಾಡಲಿ ಎಂದು ಮಣಿಮಂದಿರದ ಮಧ್ಯ ಭಾಗದಿಂದ ಮುಂಬಾಗಿಲಿಗೆ ಬಂದು ಪ್ರಿಯನ ಆಗಮನವನ್ನು ನಿರೀಕ್ಷಿಸುತ್ತ ಪ್ರೀತಿಯಿಂದ ತನ್ನ ಶರೀರವನ್ನು ಹೂಬಾಣಕ್ಕೆ ಗುರಿಮಾಡಿ ತರುಣಿಯೋರ್ವಳು ಶೋಭಿಸಿದಳು. ೫೭. ಬೀಸುವ ತಂಗಾಳಿಯು ಬೆಂಕಿಯಾಯಿತು, ಹೂವುಗಳು ಶಸ್ತ್ರಗಳಾದವು, ಬೆಳದಿಂಗಳು ಕಟು ಬಿಸಿಲಾಯಿತು, ಪ್ರಿಯನು ಇನ್ನೂ ಏಕೆ ಬಂದಿಲ್ಲ ಎಂದು ಓರ್ವಳು ದುಃಖಿಸಿದಳು. ೫೮. ಪ್ರಿಯನ ಆಗಮನವನ್ನು ನಿರೀಕ್ಷಿಸುತ್ತ ಸಂತಾಪಗೊಂಡ ಸುಂದರಿಯೋರ್ವಳ ಬಳಿಗೆ ಮೆಲ್ಲನೆ ಬರುತ್ತಿರುವ ಸುಂದರ ವಿಟನನ್ನು ನೋಡಿದ ಮಾತ್ರಕ್ಕೇ ಉಬ್ಬಿ ಸಂತೋಷಗೊಂಡಳು. ೫೯. ಮನ್ಮಥನ ಹೂಬಾಣವು ಆವರಿಸುವಂತೆ ಚೆನ್ನಾಗಿ ನೋಡದೆ ಹೀಗೆ ಉಪೇಕ್ಷಿಸಿ ನನ್ನನ್ನು ಬಿಟ್ಟ ಉದ್ದೇಶವಾದರೂ ಏನು? ಪ್ರಿಯನೆ ಹೇಳು ಎಂದು ತೋಳುಗಳನ್ನು ಒಯ್ದು ಹೊಳೆವ ಪ್ರಿಯನ ಭುಜಗಳ ಮೇಲೆ ಬಿಡದೆ ಸೇರಿಸಿ ನಿಂತು ಕೆನ್ನೆಯನ್ನು ಒತ್ತಿ ಚುಂಬಿಸುತ್ತ ಚಂದ್ರನಂತೆ ಮುಖವುಳ್ಳ ಓರ್ವ ಸುಂದರಿಯು ಹೆಚ್ಚಿನ ಸೊಗಸಿನಿಂದ ಶೋಭಿಸಿದಳು. ೬೦. ಸೀರೆಯ ಸೊಂಟದ

ಇಂತು ಕಂತುವಿಲಾಸದಿಂದತ್ಯಂತಸಂತೋಷದಿಂದೆಸೆವಾಪಾರಕಾಂತಾಸಂತತಿಯನುದ್ಭಟೋರ್ವೀಕಾಂತಂ ನಡೆನೋಡುತ್ತುಂ ನಡೆತರೆ ಮತ್ತೊಂದೆಡೆಯೊಳೊರ್ವ ವೃದ್ಧಾಂಗನೆ ತನ್ನ ಮಗಳಂ ಕರೆದು ವೈಶಿಕ ಬುದ್ಧಿಯನುಪದೇಶಗಮ್ಯಮಾಗಿ ಬೆಸಸುತ್ತಿರ್ದ್ದಳ್,

ಅದೆಂತೆಂದೊಡೆ,

ತನಿಸೊಬಗಂ ಪ್ರಸಾರಿಸಿ ಸಮಂಚಿತಕೈತವಮಂ ನಿಮಿರ್ಚಿ ಮಿಂ
ಡನ ಕೆಳೆಯರ್ಕಳೊಳ್ ಬಱಿದೆ ಮೆಚ್ಚಿದವೊಲ್ಪೆಸರಂ ನಿಮಿರ್ಚಿ ಮೋ।
ಹನತರರೂಪನೆಂದು ಗುಣಿಯೆಂದು ಮಹೋನ್ನತದಾನಿ ಯೆಂದು ಸು
ಮ್ಮನೆ ಪೊಗಟುತ್ತೆ ಯಿರ್ಪುದೆ ವಸುಂಧರೆಯೊಳ್ಸೆಲೆವೆಣ್ಗೆ ಲಕ್ಷಣಂ ॥ ೬೧ ॥

ಅವರವರ್ಗಿಚ್ಛೆಯಾದವೊಲುದಂಚಿತವೈಶಿಕಮಂ ನೆಗಟ್ಚಿ ಮ
ತ್ತವರ ಭುಜಿಷ್ಯರೊಳ್ನೆಗಟ್ಟಿ ಕೂರ್ಮೆಯನಾಗಿಸಿ ಯೊರ್ವರೊಳ್।
ತವೆ ಮೊನೆಯಂ ಸಮಂತುದಿಸಲೀಯದೆ ಕೂರ್ತಿರದೆಲ್ಲರಲ್ಲಿ ಬೆ
ರ್ಚುವವೊಲಮರ್ವುದುತ್ತಮಗುಣಂ ಬೆಲೆವೆಣ್ಗೆ ಚಕೋರಲೋಚನೇ ॥ ೬೨ ॥

ಗಾಡಿಯನೈದೆ ಕಂಗೊಳಿಸಿ ಸುಮ್ಮನೆ ಮೆಚ್ಚಿದೆನೆಂದು ನಾಡೆ ಕೊಂ
ಡಾಡಿ ಪೊದಟ್ಚಿ ಸಂತಸಮನಾಗಿಸಿ ಮೆಲ್ಲನೆ ವಿತ್ತಮೆಲ್ಲಮಂ।
ಕೂಡೆ ಕವರ್ದು ಮತ್ತಗಜಭುಕ್ತಕಪಿತ್ಥದವೋಲ್ ವಿಟರ್ಕಳಂ
ಮಾಡಿ ನೆಗಱ್ತೆವೆತ್ತೆಸೆವಳಾವಳವಳೇ ಬೆಲೆವೆಣ್ಧರಿತ್ರಿಯೊಳ್ ॥ ೬೩ ॥

ನಿರಿಗೆಯ ಗಂಟು ಜಾರುತ್ತಿರಲು ತೊಡೆಗಳಿಂದ ಪಾದಗಳಿಂದ ಬಿಡದೆ ತಳ್ಳುತ್ತ, ಉತ್ಕಟವಾದ ಇಚ್ಛೆಯಿಂದ ಬಳಸುತ್ತ ಕೈ ಚಾಚಿ ಚೆನ್ನಾಗಿ ಅಪ್ಪಿ ಸುಗಂಧವನ್ನು ಹೊರಸೂಸುವ ಬಾಯ ತಾಂಬೂಲವನ್ನಿತ್ತು ಮೆಲ್ಲನೆ ಎಳೆದುಕೊಂಡು ಶಯ್ಯಾಗೃಹಕ್ಕೆ ಹೋಗುವವನನ್ನು ಆ ಸುಂದರಿಯು ಕಾಮಕೇಳಿಯಲ್ಲಿ ಚೆನ್ನಾಗಿ ತೃಪ್ತಿಪಡಿಸಿದಳು. ವ॥ ಹೀಗೆ ಮದನ ಕ್ರೀಡೆಯಿಂದ ಹೆಚ್ಚಿನ ಸಂತೋಷವನ್ನು ಹೊಂದಿ ಶೋಭಿಸುವ ಆ ವೇಶ್ಯಾಂಗನೆಯರನ್ನು ಉದ್ಭಟಮಹಾರಾಜನು ಚೆನ್ನಾಗಿ ನೋಡುತ್ತ ಬರುತ್ತಿರಲು, ಮತ್ತೊಂದು ಸ್ಥಳದಲ್ಲಿ ಓರ್ವ ವೃದ್ಧ ಸ್ತ್ರೀಯು ತನ್ನ ಮಗಳನ್ನು ಕರೆದು ವೇಶ್ಯೆಯರಿಗೆ ಸಂಬಂಧಿಸಿದ ಜಾಣತನವನ್ನು ತಿಳಿಯುವಂತೆ ಹೇಳುತ್ತಿದ್ದಳು. ಅದು ಹೇಗೆಂದರೆ, ೬೧. ಚೆಲುವನ್ನು ಚೆನ್ನಾಗಿ ಹರಡಿ ನೆಪಮಾಡಿ ಗೆಣೆಯನ ಸ್ನೇಹಿತರೊಡನೆ ಸುಮ್ಮನೆ ಮೆಚ್ಚಿದಂತೆ ಮಾಡಿ ಹೆಸರನ್ನು ವಿಸ್ತರಿಸಿ ಮನ್ಮಥರೂಪನೆಂದೂ ಗುಣಿಯೆಂದೂ ಮಹಾದಾನಿಯೆಂದೂ ಸುಮ್ಮನೆ ಹೊಗಳುತ್ತಲಿರುವುದೆ ಬೆಲೆವೆಣ್ಣಿಗೆ ಲಕ್ಷಣವು. ೬೨. ಅವರವರಿಗೆ ಇಚ್ಛೆಯಾಗುವಂತೆ ವೇಶ್ಯೆಯರಿಗೆ ಸಂಬಂಧಿಸಿದ ತಿಳುವಳಿಕೆಯನ್ನು ಹೇಳಿ ಮತ್ತೆ ಅವರ ವಿಟರಲ್ಲಿ ಪ್ರೀತಿಯನ್ನುಂಟುಮಾಡಿ, ಒಬ್ಬರಲ್ಲಿ ಜಗಳವು ತಲೆದೋರಲು ಅವಕಾಶವೀಯದೆ, ಎಲ್ಲರಲ್ಲೂ ಪ್ರೀತಿತೋರದೆ [ಎಲ್ಲರಿಗೂ] ಹೆದರಿ ನಡೆವಂತೆ ಇರುವುದು, ಚಕೋರಾಕ್ಷ ವೇಶ್ಯೆಗೆ ಉತ್ತಮಗುಣವು. ೬೩. ಚೆಲುವನ್ನು ಚೆನ್ನಾಗಿ ಕಾಣಿಸಿ ಸುಮ್ಮನೆ ಮೆಚ್ಚಿದೆನೆಂದು ಚೆನ್ನಾಗಿ

ಬೇಟದೊಳೆನ್ನನಂಗಜಮಹೀಶನ ಬಾಣಕೆ ಗೂಡುಮಾಡಿ ತಾಂ
ಕೂಟದಲಂಪಿನಿಂಪನಿನಿಸಂ ಮಿಗೆ ತೋಱದೊಡೆಂತು ಸೈರಿಪೆಂ।
ಕೋಟಿಯನಿತ್ತುದೊಂದುದಿನಮೊಲ್ದೊಡಗೂಡಿದೊಡೆಂದು ದೂತರೊ
ಳ್ನಾಟಕಮಂ ನೆಗೞ್ಚಿ ಧನವಂ ಪರಿಕೊಳ್ವಳೆ ಸೂಳೆ ಧಾತ್ರಿಯೊಳ್ ॥ ೬೪ ॥

ಒಂದುದಿನಂ ನೀಂ ತಳ್ವಿದೊ
ಡಂದಸುವಿಂಗುಪಟಳಂ ಮನಃಪ್ರಿಯ ಕೇಳೇ।
ನೆಂದಱಿಯೆನೆನಗೆ ನಿಕ್ಕುವ
ಮೆಂದಣಕಿಸಿ ಧನಮನುಗಿವಳಗ್ಗಳೆ ಧರೆಯೊಳ್ ॥ ೬೫ ॥

ಪಣಮಿಲ್ಲದೆ ಯಟಮಟಿಸುವ
ಬಣಗುಗಳಂ ನೆವವನಿಟ್ಟು ಬಿಟ್ಟು ಧನಿಕರೊಳ್।
ಗುಣಮಂ ನೆಗೞ್ಚಿ ಕೂರ್ಮೆಯಿ
ಪಣಮಂ ಸಾಧಿಸುವಳಾವಳವಳೇ ಬೆಲೆವೆಣ್ ॥ ೬೬ ॥

ಇಂತತಿಪಟುಕುಟಿಲತೆಯಂ ನಟಿಸಿ ವಿಟರ್ಕಳೊಳ್ ಸಟೆಹೇೞ್ ನೇಮಮಂ ನೆಗೞ್ಚಿ ಮೆಚ್ಚಿದಳಂತೆ ಮೈಮಱೆದು ಮೈವೊಳಗೆ ಸಂದಿಚ್ಛೆಯಱಿದುಚ್ಚವದಿಂದುಳ್ಳೊಡಮೆಯಂ ಕವರ್ದುಕೊಂಡು ವೊಂದೊಂದು ನೆವಮಿಟ್ಟು ಯೆಲ್ಲಮಂ ಮೆಲ್ಲನೆ ಕವರ್ತೆಗೊಂಡಖಿಳಗಣಿಕಾಜನಮಧ್ಯದೊಳ್ಸಿರಿವಂತೆ ಯೆಂದೆನಿಸಿ ನೆಗೞ್ತೆವಡೆವುದೀಮಹಿಯೊಳ್ಸೂಳೆಯರ್ಗೆ ಲಕ್ಷಣಮೆಂದೊಲ್ದು ವೃದ್ಧಗಣಿಕಾಂಗನೆ ತನ್ನ ಮಗಳಂ ಬೆಸಸುತ್ತಿರಲದನರಸಂ ಕೇಳ್ದು ನಸುನಗುತ್ತುಂ ಬರೆವರೆ,

ಹೊಗಳಿ ಅತ್ಯಾನಂದವನ್ನುಂಟುಮಾಡಿ ಮೆಲ್ಲನೆ ದ್ರವ್ಯವನ್ನೆಲ್ಲ ಜೊತೆಯಲ್ಲೇ ದೋಚಿ, ಮದಿಸಿದ ಆನೆ ತಿಂದ ಬೇಲದ ಹಣ್ಣಿನ ರೀತಿಯಲ್ಲಿ ವಿಟರುಗಳನ್ನು ಮಾಡಿ ಪ್ರಸಿದ್ಧಿಯನ್ನು ಪಡೆದು ಯಾವಳು ಶೋಭಿಸುವಳೊ ಅವಳೇ ಲೋಕದಲ್ಲಿ ವೇಶ್ಯೆಯು. ೬೪. ಕಾಮಾತುರದಲ್ಲಿ ನನ್ನನ್ನು ಕಾಮರಾಜನ ಬಾಣಕ್ಕೆ ಗುರಿಮಾಡಿ ಸಂಭೋಗದಲ್ಲಿ ಸಂತೋಷದ ಸವಿಯನ್ನು ಸ್ವಲ್ಪವೂ ಕಾಣಿಸದಿದ್ದರೆ ನಾನು ಹೇಗೆ ಸೈರಿಸಲಿ? ಒಂದು ದಿನ ಪ್ರೀತಿಯಿಂದ ಒಡಗೂಡಿದರೆ ಕೋಟಿ ಸಂಖ್ಯೆಯ ದ್ರವ್ಯವೆನ್ನಿಸುವಂತೆ, ಎಂದು ದೂತರೊಡನೆ ನಾಟಕವಾಡಿ ಧನವನ್ನು ಸೆಳೆದುಕೊಳ್ಳುವವಳೇ ಲೋಕದಲ್ಲಿ ಸೂಳೆಯು. ೬೫. ಮನದೊಡೆಯನೆ ಕೇಳು, ಒಂದು ದಿನ ನೀನು ತಡಮಾಡಿದರೆ ನನ್ನ ಪ್ರಾಣಕ್ಕೆ ಕೇಡು, ಏನೆಂದು ತಿಳಿಯೆ, ಇದು ಸತ್ಯ ಎಂದು ಮುಚ್ಚಿಟ್ಟು ನುಡಿದು ಧನವನ್ನು ಸೆಳೆಯುವವಳೇ ಲೋಕದಲ್ಲಿ ಶ್ರೇಷ್ಠಳು. ೬೬. ಹಣವಿಲ್ಲದೆ ಕೂಡಲು ಆತುರಪಡುವ ಅಲ್ಪರನ್ನು ನೆವ ಹೇಳಿ ಕಳುಹಿಸಿ ಧನಿಕರಲ್ಲಿ ಗುಣವನ್ನು ಉಂಟಾಗಿಸಿ ಪ್ರೀತಿಯಿಂದ ಹಣವನ್ನು ಯಾವಳು ಪಡೆಯುವಳೊ ಅವಳೇ ಸೂಳೆಯು. ವ॥ ಹೀಗೆ ಹೆಚ್ಚಿನ ಮೋಸವನ್ನು ನಟಿಸಿ ವಿಟರುಗಳಲ್ಲಿ ಸುಳ್ಳು ಹೇಳಿ ನೇಮವನ್ನು ಉಂಟು ಮಾಡಿ, ಮೆಚ್ಚಿದವಳಂತೆ ಮೈಮರೆತು ವಿಟನ ಅಂತರಂಗದ ಬಯಕೆಯನ್ನು ತಿಳಿದು ಅವನಲ್ಲಿರುವ ಸಂಪತ್ತನ್ನು ದೋಚಿಕೊಂಡು ಯಾವು ಯಾವುದೊ ನೆವದಿಂದ ಎಲ್ಲವನ್ನೂ ಮೆಲ್ಲ ಮೆಲ್ಲನೆ ಸುಲಿಗೆ ಮಾಡಿ ಸಕಲ ವೇಶ್ಯೆಯರ ನಡುವೆ

ಕಡೆಗಣ್ಣಿಂದೀಕ್ಷಿಸುತುಂ
ಬಿಡು ಹಸ್ತಮನಾನೊಲ್ಲೆನೆನುತೊತ್ತೆಗೊಡಂ।
ಬಡುತುಂ ಬೊಜಗರ್ವಿರಸಾ
ರಡಿಗುರುಳ್ಗಳ ಬಾಲೆಯರ್ಕಳೊಪ್ಪಿದರಾಗಳ್ ॥ ೬೭ ॥

ಕುಂಚಿತಕುಂತಳಾಳಿಗಳನೊಯ್ಯನೆ ನೇರ್ಪಡಿಪೊಂದುಲಕ್ಷ್ಯದಿಂ
ಕಾಂಚನಕುಂಭಮಂ ಪಚಿವ ಪೆರ್ಮೊಲೆಯಂ ನಸು ದೋಱುತುಂ ಸಮಂ।
ತಂಚಿತಮೋಹನಂಬಡೆದು ಪಲ್ಲವಕರ್ವಿರಸಾದಮೊಪ್ಪಿದ
ರ್ಪಂಚಶರಂಗಳಂತೆ ನವಯೌವನೆಯರ್ ಗಣಿಕಾನಿಕಾಯದೊಳ್ ॥ ೬೮ ॥

ಚಕಿತಮೃಗಾಂಬಕಾಂಶು ಕೆದಱಲ್ಪದೆದೀಕ್ಷಿಸುತಲ್ಪಹಾಸಮಂ
ಪ್ರಕಟಿಸುತುಂ ವಿಲಾಸಮನಲರ್ಚಿಸುತುಂ ಮುಳಿಸಂ ನೆಗಟ್ಚುತುಂ।
ವಿಕಸಿತಮೋದಮಂ ಬಳಸುತುಂ ಸಲೆ ಕಾಂತೆಯರಾದಮೊಪ್ಪಿದರ್
ಸಕಲವಿದಗ್ಧೆಯರ್ ಕುಟಿಲಮುಗ್ಧೆಯರಂಗಜತಾಪದಗ್ಧೆಯರ್ ॥ ೬೯ ॥

ಇಲ್ಲದ ತಪ್ಪಂ ಕಲ್ಪಿಸಿ
ಮೆಲ್ಲನೆ ಮುಳಿದೊಲ್ದು ಕೂರ್ಮೆಯಂ ಬಳೆಯಿಸುತುಂ।
ಪಲ್ಲವಕರ್ವಿರಸೆಸೆದ
ರ್ಸಲ್ಲೀಲೆಯನಾಂತು ಲೋಲೆಯರ್ ಮುದದಿಂದಂ ॥ ೭೦ ॥

ಮತ್ತಮದೊಂದೆಡೆಯೊಳ್,

ಐಶ್ವರ್ಯವಂತೆ ಎನ್ನಿಸಿ ಖ್ಯಾತಿಯನ್ನು ಪಡೆಯುವುದು ಲೋಕದಲ್ಲಿ ಸೂಳೆಯರಿಗೆ ಲಕ್ಷಣವೆಂದು ಪ್ರೀತಿಯಿಂದ ವೃದ್ಧ ವೇಶ್ಯೆಯು ತನ್ನ ಮಗಳಿಗೆ ಹೇಳುತ್ತಿರಲು ಅದನ್ನು ಮಹಾರಾಜನು ಕೇಳಿ ನಸುನಗುತ್ತ [ಮುಂದೆ] ಬರುತ್ತಿರಲು, ೬೭. ಕಣ್ಣಿನ ತುದಿಯಿಂದ ನೋಡುತ್ತ, ಕೈ ಬಿಡು, ನನಗೆ ಬೇಡ ಎನ್ನುತ್ತ ವಿಟರು ಕೊಡುವ ಹಣಕ್ಕೆ ಒಪ್ಪುತ್ತ ವಿಟರುಗಳೊಡನೆ ದುಂಬಿಯಂತಿರುವ ಮುಂಗುರುಳ ಸುಂದರಿಯರು ಆಗ ಶೋಭಿಸಿದರು. ೬೮. ಬಾಗಿದ ಮುಂಗುರುಳುಗಳನ್ನು ಮೆಲ್ಲನೆ ಸರಿಗೊಳಿಸುವ ನೆಪದಲ್ಲಿ ಸುವರ್ಣ ಕಳಶವನ್ನು ತಿರಸ್ಕರಿಸುವ ಪೆರ್ಮೊಲೆಯನ್ನು ಸ್ವಲ್ಪವೇ ಕಾಣಿಸುತ್ತ ಚೆನ್ನಾಗಿ ಪರವಶಗೊಳಿಸಿ ವಿಟರೊಡನೆ ಮನ್ಮಥ ಬಾಣಗಳಂತೆ ನವಯೌವನೆಯರು ವೇಶ್ಯೆಯರ ಸಮೂಹದಲ್ಲಿ ಶೋಭಿಸಿದರು. ೬೯. ಚಂಚಲವಾದ ಜಿಂಕೆಯ ಕಣ್ಣುಗಳ ನೋಟದ ಕಾಂತಿಯು ಹರಡಲು ಪ್ರೀತಿಯಿಂದ ನೋಡುತ್ತ, ಮಂದಹಾಸವನ್ನು ಪ್ರಕಟಿಸುತ್ತ, ಲಾವಣ್ಯವನ್ನು ಅರಳಿಸುತ್ತ, ಕೋಪವನ್ನು ತೋರುತ್ತ, ಸಂತೋಷವನ್ನು ಹೆಚ್ಚಿಸುತ್ತ ಸುಂದರಿಯರು, ಎಲ್ಲದರಲ್ಲೂ ಅನುಭವವಿರುವವರು, ವಂಚನೆಯ ಮುಗ್ಧೆಯರು, ಮನ್ಮಥತಾಪದಿಂದ ಬೇಯುತ್ತಿರುವವರು ಅಂದಗೊಂಡಿದ್ದರು. ೭೦. ಇಲ್ಲದ ತಪ್ಪನ್ನು ಹುಟ್ಟಿಸಿ ಮೆಲ್ಲನೆ ಕೋಪಗೊಂಡು ಒಲಿದು ಪ್ರೀತಿಯನ್ನು ಹೆಚ್ಚಿಸುತ್ತ ವಿಟರೊಡನೆ ಚೆಲ್ಲಾಟವಾಡುತ್ತ ಸುಖಪಡುವ ವಿಲಾಸಿನಿಯರು ಶೋಭಿಸಿದರು. ವ॥ ಮತ್ತೆ

ಸಜ್ಜಕಮಂ ತುಱುಂಬಿ ಮೊಲೆಗಳ್ಗೆ ಕರಂಟಮನಿಕ್ಕಿ ಕಟ್ಟಿ ಸ
ತ್ಕಜ್ಜಳಮಂ ವಿಲೋಚನಯುಗಕ್ಕಿರದೂಡಿ ವಳಕ್ಷಕೇಶಮಂ।
ಪಜ್ಜಳಿಪುದ್ಧನೀಲಪಟದಿಂದಮಡಂಗಿಸಿ ವೃದ್ಧವಾರಯೋ
ಷಿಜ್ಜನಮೊಪ್ಪಿತಲ್ಲಿ ವಿಟರಂ ಕರೆಯುತ್ತೆ ತದೀಯಮಾರ್ಗದೊಳ್ ॥ ೭೧ ॥

ಒಸೆದೊಯ್ಯನೆ ಸಾರ್ದುಱಿ ಸೂ
ಚಿಸಿ ವಿಟರಂ ಕರೆವ ವೃದ್ಧವಾರವಧುವನೀ।
ಕ್ಷಿಸಿ ಪಳೆವೆಣ್ಗಳ ಕಾಮ
ವ್ಯಸನಮಿದರಿದೆಂದನೊರ್ವ ಬಿತ್ತೆಗಮಿಂಡಂ ॥ ೭೨ ॥

ಅದಂ ಕೇಳ್ದು,

ಪಳೆಯೆಲೆ ದೋಷತ್ರಯಮಂ
ಕಳೆವವೊಲೆಳೆಯೆಲೆ ಕಳಲ್ಚುವುದೆ ಸುರತಕುತೂ।
ಹಳದಿಂ ವೃದ್ಧಾಂಗನೆಯ
ರ್ಕಳೆಯಂ ಪೆರ್ಚಿಸುವವೋಲ್ ಪೆಱರ್ಪೆರ್ಚಿಪರೇ ॥ ೭೩ ॥

ಎಂದಿಂತುತ್ತರಂಗೊಡೆ; ಮತ್ತೊಂದೆಡೆಯೊಳ್,

ಪಣ್ಣಿರೆ ಕಾಯಂ ಮೆಲ್ವ
ಕ್ಷುಣ್ಣವಿಟರ್ ಸುರತಸುಖಮನೇನೆಂದಱಿವರ್।
ತಿಣ್ಣಮೆನೆ ಗಾಡಿಯಂ ಪಳೆ
ವೆಣ್ಣೆಸೆಗುವ ತೆಱದಿನೆಸಗಲಾರ್ಪಳೆ ಪೊಸವೆಣ್ ॥ ೭೪ ॥

ಅದನೊರ್ವ ಭುಜಂಗಂ ಕೇ
ಳ್ದುದಿತದರಸ್ಮೇರನೊಲ್ದು ಪೋಗುತ್ತಾ ಹಾ।
ಮುದುಪರನಲೆವಲರ್ಗಣೆ ಮಾ
ಣ್ಬುದೆ ಮಿಕ್ಕರನೆಂದೊಡವಳವಂಗಿಂತೆಂದಳ್ ॥ ೭೫ ॥

ಒಂದು ಸ್ಥಳದಲ್ಲಿ, ೭೧.ಮೊಲೆಗಳಿಗೆ ರವೆಯನ್ನು ತುಂಬಿ ಕರಟವನ್ನು ಹಾಕಿ ಕಟ್ಟಿ; ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿ, ಬಿಳಿಯ ಕೂದಲನ್ನು ಹೊಳೆವ ಶ್ರೇಷ್ಠವಾದ ಕಪ್ಪುವಸ್ತ್ರದಿಂದ ಮುಚ್ಚಿ ಮುದಿ ಸೂಳೆಯರು ವಿಟರನ್ನು ಹಾದಿಯಲ್ಲಿ ನಿಂತು ಕರೆಯುತ್ತ ಒಪ್ಪಿದರು. ೭೨. ಪ್ರೀತಿಯಿಂದ ಮೆಲ್ಲನೆ ಸಮೀಪಿಸಿ ಸನ್ನೆ ಮಾಡಿ ವಿಟರನ್ನು ಕರೆಯುವ ಮುದಿಸೂಳೆಯನ್ನು ನೋಡಿದ ಪ್ರೌಢ ವಿಟನೊಬ್ಬನು ಮುದಿ ಹೆಣ್ಣುಗಳ ಕಾಮದ ಗೀಳಿದು ಅಸಾಧ್ಯವಾದುದು ಎಂದನು. ವ॥ ಅದನ್ನು ಕೇಳಿ, ೭೩. ಮುದಿ ಎಲೆ ಮೂರು ಬಗೆಯ ದೋಷಗಳನ್ನು ಪರಿಹರಿಸುವಂತೆ ಚಿಗುರೆಲೆಯು ನಿವಾರಿಸುವುದೆ? ಸುರತದಲ್ಲಿ ಆಸಕ್ತವಾಗಿ ಕಾಮಕಲೆಯನ್ನು ವಯಸ್ಸಾದವರು ಹೆಚ್ಚಿಸುವಂತೆ ಬೇರೆಯವರು ಹೆಚ್ಚಿಸುವರೆ? ವ॥ ಎಂದು ಹೀಗೆ ಉತ್ತರ ಕೊಡಲು; ಮತ್ತೊಂದು ಸ್ಥಳದಲ್ಲಿ, ೭೪. ಹಣ್ಣಿದ್ದೂ ಕಾಯನ್ನು ತಿನ್ನುವ ಕ್ಷುದ್ರ ವಿಟರು ಸಂಭೋಗಸುಖವನ್ನೇನು ಬಲ್ಲರು? ವಯಸ್ಸಾದ ಹೆಣ್ಣು ತೀವ್ರವಾಗಿ ಸೊಬಗನ್ನು ಹೊರಸೂಸುವಂತೆ ಎಳೆಯ ಹೆಣ್ಣು ತೋರ್ಪಡಿಸುವಳೆ? ೭೫. ಆ ಮಾತನ್ನು ವಿಟನೊಬ್ಬನು

ಮಾಣಿಕವೇಂ ಪಟು಼ದಾಗಲ್
ಕ್ಷೋಣೀಶಕಿರೀಟಸೇವ್ಯಮಲ್ತೆ ಧರೆಯೊ।
ಳ್ಮೇಣೆನ್ನೊಡಗೂಟದ ಬಿ
ನ್ನಾಣದ ಸವಿ ಭೋಗಿಪಂಗೆ ಕಾಣಿಪುದೆಂದಳ್ ॥ ೭೬ ॥

ವ॥ ಇಂತಟ್ಟಹಾಸಾಸ್ಪದಮಾದತಿವೃದ್ಧಗಣಿಕಾಲಾಪಂಗಳನಾಲಿಸುತ್ತುದ್ಭಟಕ್ಷಿತೀಂದ್ರಚಂದ್ರಮಂ ಬರೆ ಮತ್ತೊಂದೆಡೆಯೊಳೊರ್ವಬೆಲೆವೆಣ್ ಕುಟಿಲತ್ವದಿಂದುಳ್ಳೊಡಮೆಯನೊಂದೊಂದು ನೆವಮಿಟ್ಟೆಲ್ಲವಂ ಕವರ್ದತಿದರಿದ್ರನಂ ಮಾಡಿ ಪೊಱಮಡಿಸಲಬಿಲುತ್ತುಂ ಬಂದವಳ ಬಾಗಿಲ್ಗಿದಿರಾಗಿ ನಿಲ್ತು ಚಿಂತೆವೆತ್ತು ಮರುಳ್ಗೊಂಡಂತೆ ಮರವಟ್ಟಿಪ್ಪ ತನ್ನ ಮಿತ್ರನಂ ಕಂಡೊರ್ವವಿದಗ್ಧನಾಯಕನದೊರ್ವಂಗೆ ನೀತಿಯಂ ತಳೆದು ಬುದ್ಧಿವೇಟಿ಼ ತಿಳಿಪುತ್ತಿರ್ದ್ದಂ,

ಅದೆಂತೆಂದೊಡೆ,

ಎಲೆ ಮಿತ್ರ ಕೇಳ್ವಿದಗ್ಧಂ
ಕುಲವಧುವಂ ತೊಱೆದು ಪಾಪಕಳ್ಕದಜಸ್ರಂ।
ಬೆಲೆವೆಣ್ಗೊಳಗಾಗಿರ್ಪನೆ
ಜಲನಿಧಿವಳಯಿತಧರಿತ್ರಿವಳಯದೊಳೆತ್ತಂ ॥ ೭೭ ॥

ನಿಚ್ಚಂ ನಿರ್ಮಲಜಲಮಿರೆ
ಬಚ್ಚಲನೀರ್ಗೆಟು಼ವ ಕೀಟಕಂಬೊಲ್ತನ್ನಂ।
ನಚ್ಚಿದ ಸತಿ ಯಿರೆ ಬೆಲೆವೆ
ಣ್ಗೆಟ್ಟಿಸುವುದು ನೀತಿಯೇ ವಿದಗ್ಧಲಲಾಮಾ ॥ ೭೮ ॥

ಕೇಳಿ ಮಂದಹಾಸದಿಂದ ಮೆಚ್ಚಿ ಹೋಗುತ್ತ ಆಹಾ! ಮುದಿಯರನ್ನೇ ಪೀಡಿಸುವ ಹೂಬಾಣವು ಉಳಿದವರನ್ನು ಬಿಡುತ್ತದೆಯೆ? ಎನ್ನಲು, ಅದಕ್ಕೆ ಅವಳು, ಅವನಿಗೆ ಪ್ರತಿಯಾಗಿ ಹೀಗೆಂದಳು. ೭೬. ಮಾಣಿಕ್ಯವು ಹಳೆಯದಾಗಲು ಲೋಕದಲ್ಲಿ ಮಹಾರಾಜನ ಕಿರೀಟವನ್ನು ಸೇರಲು ಅದು ಅನರ್ಹವೇನಲ್ಲವಲ್ಲ! ನನ್ನೊಡನೆ ಸಂಭೋಗಿಸಿದಲ್ಲಿ ಅದರ ಸವಿಯು ವಿಲಾಸಿಗೆ ಪ್ರತ್ಯಕ್ಷವಾಗಿ ಕಾಣಿಸುವುದು ಎಂದಳು. ವ॥ ಹೀಗೆ ತಿರಸ್ಕಾರಕ್ಕೆ ಪಾತ್ರವಾದ ಮುದಿಸೂಳೆಯರ ಮಾತುಗಳನ್ನು ಕೇಳುತ್ತ ಉದ್ಭಟ ಮಹಾರಾಜ ಚಂದ್ರಮನು ಬರುತ್ತಿರಲು, ಮತ್ತೊಂದು ಸ್ಥಳದಲ್ಲಿ ಸೂಳೆಯೊಬ್ಬಳು ಮೋಸದಿಂದ ಇದ್ದ ಸಂಪತ್ತನ್ನೆಲ್ಲಾ ದೋಚಿ ಒಂದೊಂದು ನೆವ ಹೇಳಿ ಅವನನ್ನು ಅತಿ ದರಿದ್ರನನ್ನಾಗಿ ಮಾಡಿ ಮನೆಯಿಂದ ಹೊರನೂಕಿಸಲು ದುಃಖಿಸುತ್ತ ಅವಳ ಬಾಗಿಲಿಗೆ ಇದಿರಾಗಿ ನಿಂತು ಚಿಂತೆಗೊಂಡು ಹುಚ್ಚು ಹಿಡಿದವನಂತೆ ಮರದ ಕೊರಡಿನಂತೆ ಇರುವ ತನ್ನ ಗೆಳೆಯನನ್ನು ನೋಡಿದ ಒಬ್ಬ ಜಾಣನಾಯಕನು ಅವನಿಗೆ ನೀತಿಯನ್ನೂ, ಬುದ್ಧಿವಾದವನ್ನೂ ಹೇಳಿ ಎಚ್ಚರಿಸುತ್ತಿದ್ದನು. ಅದು ಹೇಗೆಂದರೆ, ೭೭. ಎಲೆ ಮಿತ್ರನೆ ಕೇಳು, ಜಾಣನಾದವನು ಪತಿವ್ರತೆಯಾದ ಹೆಂಡತಿಯನ್ನು ಬಿಟ್ಟು ಪಾಪಕ್ಕೆ ಹೆದರದೆ ಸೂಳೆಗೆ ವಶನಾಗಿರುವನೆ? ಸಮುದ್ರದಿಂದ ಆವೃತವಾದ ಭೂಮಂಡಲದಲ್ಲಿ, ೭೮. ನಿತ್ಯವೂ ಪರಿಶುದ್ಧವಾದ ನೀರು ಇರುತ್ತಿರಲು ಬಚ್ಚಲ ನೀರಿನಲ್ಲಿ ಸ್ನಾನ ಮಾಡುವ

ತನಿಗಂಪನುೞಿದು ಸೂಕರ
ನನಿಶಂ ದುರ್ಗಂಧಕೆಳಸುವವೊಲುರುಕುಲಜಾಂ।
ಗನೆಯರನೊಲ್ಲದೆ ವೇಶ್ಯಾ
ವನಿತೆಗೆ ಮರುಳಪ್ಪನಧಮನಕ್ಕೆಲೆ ಮಿತ್ರಾ ॥ ೭೯ ॥

ಕೀಳ್ವಾನಿಸರಶ್ರಾಂತಮು
ಗುಳ್ವ ಶರಾವಂಬೊಲಮರ್ದ ವೇಶ್ಯಾಧರಮಂ।
ತಳ್ವದೆ ಚುಂಬಿಸಿ ನರಕದೊ
ಳಾೞ್ವುದದೇಂ ನೀತಿಯೇ ವಿದಗ್ಧಲಲಾಮಾ ॥ ೮೦ ॥

ಕಲ್ಲಾದೊಡಮಿಂದುದ್ಯುತಿ
ಗುಲ್ಲಸದಿಂದೊಸರ್ವುದಂಗಜಾಗಮದೊಳ್ಪಂ।
ಬಲ್ಲವನೊಂದಲ್ಕವಮಿನಿ
ದಲ್ಲದ ಬೆಲೆವೆಣ್ಗೆ ಸಿಲ್ಕಿ ನೋವುದು ಸುಲಭಂ ॥ ೮೧ ॥

ಕೆಂಪಾಗಿರೆ ಸೊಡರೆಡೆಯೊಳ್
...................................
...................................
ತಾಂ ಪಡಲಿಟ್ಟೞಿವವೊಲ್ವಿವೇಕಾಭರಣಾ ॥ ೮೨ ॥

ಕಣ್ಗಿಂಬಾಗಿರೆ ತಾಂ ಬೆಲೆ
ವೆಣ್ಗಳಲಂಕಾರವೀಕ್ಷಿಸುತ್ತುಂ ಗಾಂಪಂ।
ಪುಣ್ಗೆೞಿವ ಮಕ್ಷಿಕಂಬೋಲ್
ಜಾಣ್ಗೆಟ್ಟುೞಿ ಮಗ್ನನಪ್ಪನಕ್ಕೆಲೆ ಮಿತ್ರಾ ॥ ೮೩ ॥

ಹುಳುವಿನಂತೆ ತನ್ನನ್ನು ನಂಬಿರುವ ಸತಿಯಿರಲು [ಅವಳನ್ನು ಬಿಟ್ಟು] ಸೂಳೆಯನ್ನು ಬಯಸುವುದು ನೀತಿಯೇ, ಪಂಡಿತರಲ್ಲಿ ತಿಲಕಪ್ರಾಯನೆ, ೭೯. ಎಲೆ ಮಿತ್ರಾ, ಹಂದಿಯು ಸುವಾಸನೆಯನ್ನು ಬಿಟ್ಟು ಸದಾ ದುರ್ಗಂಧವನ್ನು ಇಷ್ಟಪಡುವಂತೆ ಶ್ರೇಷ್ಠ ಕುಲದಲ್ಲಿ ಜನಿಸಿದ ಸ್ತ್ರೀಯನ್ನು ಇಷ್ಟಪಡದೆ ವೇಶ್ಯಾಸ್ತ್ರೀಗೆ ಮರುಳಾದವನು ಅಧಮನಾಗುವನು. ೮೦. ಪಂಡಿತರಲ್ಲಿ ತಿಲಕಪ್ರಾಯನೆ, ಕೀಳು ಮನುಷ್ಯರು ಅನಾರೋಗ್ಯದಿಂದ ಉಗುಳುವ ಮಣ್ಣಿನ ಮುಚ್ಚಳದಂತಿರುವ ಸೂಳೆಯರ ಕೆಳದುಟಿಯನ್ನು ತಡಮಾಡದೆ ಚುಂಬಿಸಿ ನರಕದಲ್ಲಿ ಮುಳುಗುವುದೇನು ನೀತಿಯೇ. ೮೧. ಚಂದ್ರಕಾಂತಿಯು ಕಲ್ಲಾದರೂ ಚಂದ್ರನ ಕಿರಣಗಳಿಗೆ ಉಲ್ಲಾಸದಿಂದ ಜಿನುಗುವುದು. ಕಾಮಶಾಸ್ತ್ರದ ತಿರುಳನ್ನು ಬಲ್ಲವನು ಮಧುರವಲ್ಲದ ಸೂಳೆಗೆ ವಶನಾಗಿ ನೋಯುವುದು ಸುಲಭ. ೮೨. ..........................................

.....................................................................................

೮೩. ಎಲೆ ಗೆಳೆಯಾ, ಕಣ್ಣಿಗೆ ಅಂದವಾಗಿರುವ ಸೂಳೆಯ ಅಲಂಕಾರವನ್ನು ನೋಡುತ್ತ ದಡ್ಡನು ಹುಣ್ಣನ್ನು ಕೆರೆವ ನೊಣದ ರೀತಿಯಲ್ಲಿ ಬುದ್ಧಿಗೆಟ್ಟು ಚೆನ್ನಾಗಿ ಮುಳುಗುವವನಾಗುವನು.

ನಿಡುಸುಯ್ಯುಣ್ಮಲ್ ಕಪಟದೆ
ಕೊಡುವೆಲೆಯಂ ಬಿಸುಟು ಮುಳಿದು ಪೊಯ್ಯಲ್ಕಂಡಾ।
ಕಡುಲೇಸು ತಮ್ಮೊಳುಂಟೆಂ
ದೆಡೆವಿಡದೊಪ್ಪಿಪ್ಪನೆಗ್ಗನಗ್ಗದ ಚತುರಾ ॥ ೮೪ ॥

ಪಣಮುಳ್ಳನ್ನೆವರಂ ಪೂ
ಗಣೆಯಂ ಮತ್ತವನನೆಂಬಳವನಲ್ಲಿಹ ಮೇ।
ಣ್ಪಣಮೆಲ್ಲಂ ತೀರಲೊಡಂ
ಪೆಣವೆಂಬಳ್ಪಣವಧೂಟಿ ಗುಣಮಣಿಹಾರಾ ॥ ೮೫ ॥

ನಾನಾವಿಧದಿಂ ಮಣಿಕನ
ಕಾನೀಕಮನೈದೆ ಕವರ್ದು ವಿಟನಂ ಕಡೆಯೊಳ್।
ಶ್ವಾನಂಗೆಡೆಮಾಡುವ ಗಣಿ
ಕಾನಾರಿಗೆ ಸೋಲ್ವನಧಮನಲ್ತೆ ಗುಣಾಢ್ಯಾ ॥ ೮೬ ॥

ವ॥ ಇಂತಖಿಳದುರ್ಗುಣಾವಾಸವೆನಿಸಿ ನೆಗಟ್ಟುವೆತ್ತ ಪಣ್ಯಾಂಗನೆಯೊಳೆತ್ತಾನುಂನೇಹಮ ನೊಡರ್ಚಲ್ವೇಟ್ಟಿನವಳ್ಮಾಟ್ಟಿಕುಟಿಲೋಪಚಾರಮಂ ಮಂಜಿನ ಸಿರಿಯೆಂದು ತಿಳಿದು ಎಚ್ಚತ್ತೊಳಗಾದನಂತೆ ಕೂರ್ಮೆಯಿಂ ಬಳೆಯಿಸಿ ಮೆಚ್ಚಿದನಂತೆ ಮೈವಳಿಗೆ ಸಂದು ಪೆಱರ್ಗೆ ಬಾಳ್ತೆಯೆನಿಸದೊಡಮೆಗಳನು ಚಿತವಱಿದಿತ್ತು ನುಡಿಯ ಬೆಡಂಗಿನಿಂ ಸಿಂಗರದೆಟ್ಟಿರದಿಂ ಸೊಬಗಿನೊಯ್ಯಾರದಿಂದೆರ್ದೆಗೊಳಿಸಿ ಯವಳಿಂಗಿತವನಱಿದು ಇನಿತುಮೊನೆಗಾಣಿಸದಿಚ್ಚೆ ವಟ್ಟೊಡಮೆಗಳನಿತ್ತಪೆನೆಂಬಂತಾಸೆದೋಱಿ ಶಾಲ್ಮಲಿಯ ಪುಷ್ಪದಂತೆ ನಿಷ್ಫಲಕ್ಕೆ ಪಕ್ಕಾಗಿ ಮಾಯಾವಿಯಂತೆ ಬಾಹ್ಯಸುಖಮನುಂಟುಮಾಡಿ ಪದ್ಮಪತ್ರಸ್ಥಿತಜಳಕಣದಂತೆ ಪೊರ್ದಿಯುಂ ಪೊರ್ದದೆ ಬರ್ದಂ ನೆಗಟ್ಟೆ ಚಾತುರ್ಯದಿಂ ವರ್ತಿಪುದು ವಿಟಾಗ್ರೇಸರಂಗೆ ಸಮ್ಮತಮಂತುಮಲ್ಲದೆಯುಂ,

೮೪. ಸಮರ್ಥಪ್ರೌಢನೇ, ನಿಟ್ಟುಸಿರು ಪ್ರಕಟವಾಗಲು, ಮೋಸದಿಂದ ಕೊಡುವ ಎಲೆಯನ್ನು ಚೆಲ್ಲಿ ಕೋಪಿಸಿ ಹೊಡೆಯಲು ಅದನ್ನು ನೋಡಿ ಒಳ್ಳೆಯದು ತಮ್ಮಲ್ಲಿದೆಯೆಂದು ಸದಾ ಸಮ್ಮತಿಸಿರುವವನು ಮೂರ್ಖನು. ೮೫. ಗುಣಮಣಿಹಾರನೇ, ಹಣವಿರುವವರೆಗೆ ಅವನನ್ನು ಮನ್ಮಥನೆಂದು ಕರೆಯುವಳು. ಅವನಲ್ಲಿರುವ ಹಣವೆಲ್ಲ ಮುಗಿಯಲು ಒಡನೆಯೆ ಅವನನ್ನು ಹೆಣವೆಂದು ಧನಿಕ ಸೂಳೆಯು ಕರೆಯುವಳು. ೮೬. ಗುಣಾಢ್ಯ, ನಾನಾ ರೀತಿಯಲ್ಲಿ ಮಣಿ, ಕನಕ ಮೊದಲಾದುವನ್ನು ಚೆನ್ನಾಗಿ ಸೂರೆಮಾಡಿ ವಿಟನನ್ನು ಕೊನೆಯಲ್ಲಿ ನಾಯಿಗೆ ಸಮಾನ ಮಾಡುವ ಸೂಳೆಗೆ ಸೋಲುವವನು ಅಧಮನಲ್ಲವೆ? ವ॥ ಹೀಗೆ ಎಲ್ಲಾ ಕೆಟ್ಟಗುಣಗಳ ನಿವಾಸ ಸ್ಥಾನವೆಂದು ಖ್ಯಾತಿ ಪಡೆದ ಸೂಳೆಯೊಡನೆ ಹೇಗಾದರೂ ಸ್ನೇಹ ಬೆಳೆಸಲಿಚ್ಛಿಸುವವನು ಅವಳು ಮಾಡುವ ಕುಟಿಲ ಉಪಚಾರವನ್ನು ಮಂಜಿನ ಸಂಪತ್ತೆಂದು ತಿಳಿದು ಎಚ್ಚರಗೊಂಡು [ಅವಳಿಗೆ] ವಶವಾದವನಂತೆ ಪ್ರೀತಿಯಿಂದ ಸಂಬಂಧವನ್ನು ವೃದ್ಧಿಗೊಳಿಸಿ [ಅವಳನ್ನು] ಮೆಚ್ಚಿದವನಂತೆ ಅವಳ ಬಳಿಗೆ ಬಂದು, ಬೇರೆಯವರ ಬದುಕಿನಲ್ಲಿ ಸಾಧ್ಯವೆನ್ನಿಸಿದಷ್ಟು ಸಂಪತ್ತನ್ನು ಸಂದರ್ಭೋಚಿತವಾಗಿ ಕೊಟ್ಟು, ನುಡಿಯ ಬೆಡಗಿನಿಂದ, ಶೃಂಗಾರ ವಿಶೇಷದಿಂದ, ಸೊಬಗಿನ ಒಯ್ಯಾರದಿಂದ, ಮನಸ್ಸನ್ನು ಸೆಳೆದು ಅವಳ

ಘನಪಾಂಸುಪಟಲದೊಳ್ ತೊಡ
ರ್ದನಿಲಂ ಸುೞಿವಂತೆ ವಾರಕಾಂತಾಜನದೊ।
ಳ್ಮನಮೊಲ್ದು ಬೆಚ್ಚನೆಂಬಂ
ತನಿಶಂ ವರ್ತಿಸುವನಾವನವನೇ ನಿಪುಣಂ ॥ ೮೭ ॥

ಎಂದಿಂತು ಹೀನನಪ್ಪ ತನ್ನ ಮಿತ್ರಂಗೊಲ್ದು ಬುದ್ಧಿವೇೞ್ದ ವಿದಗ್ಧ ನಾಯಕನುರುಪ್ರೌಢಾಲಾಪಂಗಳಂ ಕೇಳ್ದು ತನ್ನೀತಿಗೆ ಮೆಚ್ಚುತುದ್ಭಟಕ್ಷಿತೀಂದ್ರಚಂದ್ರಮಂ ನಡೆತರೆ ಮತ್ತೊಂದೆಡೆಯೊಳೆಳವೆಣ್ಣೊಳತಳಿಪ ಪೊನ್ನೊನಕೆಗಳಂ ಪಿಡಿದು ರುಂದ್ರಚಂದ್ರಕಾಂತದೊರಲೊಳ್ತಂಡುಲಮಂ ತೀವಿ ಚಳಿಸುತ್ತತಿವಿಲಾಸದಿಂ ಕಲಕಂಠಕಂಠಸಂಜನಿತಮಂಜುಳಮಧುರ ಸ್ವರಮಂ ಪೞಿವಿಂಚರದಿಂ ಪಾಡುತ್ತೆಸೆದಿರ್ದಳ್,

ಅದೆಂತೆಂದೊಡೆ,

ನೆವವಿಟ್ಟು ವಿತ್ತಮಂ ಕವರಲಱಿಯದೆ ಸುಮ್ಮ
ನವಿಚಾರದಿಂದೆ ವಿಟನನಂಡಲೆವುದೀ
ಯವನಿಯೊಳ್ನೀತಿ ಬೆಲೆವೆಣ್ಣೆ ॥ ೮೮ ॥

ಒಂದೊಂದು ನೆವದಿಂದಮಂದುಳ್ಳುದಂ ಕವರ್ದು
ಪಿಂದು ಗೈದವನನೊಡನೊರ್ವನಂ ಪತ್ತ
ಲಿಂದಿಂದಿರಂಬೊಲೆಲೆ ನೀಱೆ ॥ ೮೯ ॥

ಬಯಕೆಯನ್ನು ತಿಳಿದು ಸ್ವಲ್ಪವೂ ಕೋಪಗೊಳ್ಳದೆ ಪ್ರೀತಿಪಟ್ಟು ಐಶ್ವರ್ಯವನ್ನು ಕೊಡುವೆನೆಂದು ಆಸೆ ಕಾಣಿಸಿ, ಬೂರುಗದ ಮರದ ಪುಷ್ಪದಂತೆ ನಿಷ್ಪ್ರಯೋಜಕವಾಗಿ ಮಾಯಾವಿಯಂತೆ ಬಾಹ್ಯ ಸುಖವನ್ನುಂಟುಮಾಡಿ, ಕಮಲದೆಲೆಯ ಮೇಲಣ ನೀರ ಬಿಂದುವಿನಂತೆ ಹೊಂದಿಯೂ ಹೊಂದದ ಬದುಕನ್ನು ನಡೆಸಿ ಜಾಣತನದಿಂದ ವ್ಯವಹರಿಸುವುದು ವಿಟರಲ್ಲಿ ಮುಖ್ಯನಾದವನಿಗೆ ಒಪ್ಪುತ್ತದೆ. ಅದಲ್ಲದೆ, ೮೭. ದೊಡ್ಡ ಧೂಳಿನ ರಾಶಿಯಲ್ಲಿ ಸೇರಿದ ಗಾಳಿಯು ಬೀಸುವಂತೆ ಸೂಳೆಯರಲ್ಲಿ ಮನವಿಟ್ಟು ಬೆದರಿದವನಂತೆ ಸದಾ ಯಾವಾತ ವರ್ತಿಸುವನೊ ಅವನೇ ನಿಪುಣನು. ವ॥ ಹೀಗೆಂದು ಹೀನವಾದ ತನ್ನ ಗೆಳೆಯನಿಗೆ ಪ್ರೀತಿಯಿಂದ ಬುದ್ಧಿವಾದ ಹೇಳಿದ ಪ್ರೌಢನಾಯಕನ ಹೆಚ್ಚಿನ ಅನುಭವದಿಂದ ಕೂಡಿದ ಮಾತುಗಳನ್ನು ಕೇಳಿ, ಆ ನೀತಿಮಾತುಗಳಿಗೆ ಮೆಚ್ಚುತ್ತ ಉದ್ಭಟ ಮಹಾರಾಜ ಚಂದ್ರಮನು ಬರುತ್ತಿರಲು ಮತ್ತೊಂದು ಸ್ಥಳದಲ್ಲಿ ಎಳೆಯ ಪ್ರಾಯದ ಸುಂದರಿಯೋರ್ವಳು ಥಳಥಳಿಸುವ ಚಿನ್ನದ ಒನಕೆಗಳನ್ನು ಹಿಡಿದು ವಿಶಾಲವಾದ ಚಂದ್ರಕಾಂತ ಶಿಲೆಯ ಒರಳಿನಲ್ಲಿ ಬತ್ತವನ್ನು ತುಂಬಿ ಅತಿ ಒಯ್ಯಾರದಿಂದ ಕುಟ್ಟುತ್ತ ಕೋಗಿಲೆಯ ಕಂಠದಿಂದ ಹೊಮ್ಮಿಬಂದ ಮಂಜುಳ ಮಧುರ ಧ್ವನಿಯನ್ನು ತಿರಸ್ಕರಿಸುವ ಇನಿದನಿಯಲ್ಲಿ ಹಾಡುತ್ತ ಶೋಭಿಸಿದ್ದಳು. ಅದು ಹೇಗೆಂದರೆ, ೮೮. ಎಲೆ ವೇಶ್ಯೆಯೆ, ನೆಪ ಹೇಳಿ ಸಂಪತ್ತನ್ನು ದೋಚಲು ತಿಳಿಯದೆ ಸುಮ್ಮನೆ ಕಾರಣವಿಲ್ಲದೆ ವಿಟನನ್ನು ಪೀಡಿಸುವುದು ಲೋಕದಲ್ಲಿ ನೀತಿಯು. ೮೯. ಎಲೆ ಸುಂದರಿಯೆ, ಒಂದೊಂದೇ ನೆವದಿಂದ ಇರುವುದನ್ನು ದೋಚಿ ಅವನನ್ನು ಹಿಂದೆ ಸರಿಸಿ

ವಿತ್ತದಾಶೆಯನೆಣಿಸದಿತ್ತುದೇ ಕೋಟಿಯೆಂ
ದೊತ್ತೆಯಂ ಗೊಂಡು ಕಡೆಯಲ್ಲಿ ಬೊಜಗನಂ
ಪತ್ತಿ ಕವರೆಲೆಗೆ ಬೆಲೆವೆಣ್ಣೆ ॥ ೯೦ ॥

ಪೊಡೆದೊಡಂ ಬೈದೊಡಂ ಜಱಿದೊಡಂ......
ಒಡವೆಯುಳ್ಳವನನಂಟಿ ಬಿಡದಿಪ್ಪುದೀ
ಪೊಡವಿಯೊಳ್ನೀತಿ ಬೆಲೆವೆಣ್ಣೆ ॥ ೯೧ ॥

ಆಣೆಯಿಲ್ಲದ ಮುತ್ತು ಜಾಣಿಲ್ಲದಾ ಮಾತು
ಮೇಣರ್ಥಮಿಲ್ಲದಿರುತಿಪ್ಪ...... ನೀ
ಕ್ಷೋಣಿಯೊಳಿಲೆಗೆ ಬೆಲೆವೆಣ್ಣೆ ॥ ೯೨ ॥

ಚದುರಂಗೆ ನೆತ್ತಮಿಂಪೊದವಿದಾಪಾಡು ಸ
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪುಮಿ
ಲ್ಲದ ಸೂಳೆವನೆಯೆ ಬಱಿವನೆಯು ॥ ೯೩ ॥

ಸ್ತನದ ಬಿಣ್ಪನೆ ನೋಡಿ ಮನಮಿಕ್ಕುವರ್ವಿಟ
ರ್ಕನಕಪಂಕಜದ ಬಿರಿಮುಗಳ ನನೆನೋಡಿ
ಮನಮಿಕ್ಕುವಂತೆ ಮಱಿದುಂಬಿ ॥ ೯೪ ॥

ನಡೆಯದದು ಕೊಡದೊಡಂ ಕೆಡುವುದದು ಪಿರಿದೀಯೆ
ಸೊಡರಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ
ಕುಡುವುದದು ಹದಕೆ ಚದುರಿಗಂ ॥ ೯೫ ॥

ನಗೆನೋಟ ಮೆಲ್ವಾತು ಮುನಿಸು ಮೋಹನಗಳಿಂ
ಬಗೆಯಬಂದವರೊಳೊಳಗೂಡಿ ಮೋಹಿಪ
ಳ್ಮುಗುಳಂಬನರಸಿಗೆಣೆಯಲ್ತು ॥ ೯೬ ॥

ಅವನ ನಂತರ ಮತ್ತೊಬ್ಬನನ್ನು ದುಂಬಿಯಂತೆ ಹೊಂದುವುದು. ೯೦. ಎಲೆ ಸೂಳೆಯೆ, [ಮೊದಲಿಗೆ] ಹಣದಾಸೆಯನ್ನು ಪ್ರಕಟಿಸದೆ ಕೊಟ್ಟುದೇ ಕೋಟಿಯೆಂದು ಹಣವನ್ನು ಪಡೆದು, ಕೊನೆಯಲ್ಲಿ ವಿಟನನ್ನು ಚೆನ್ನಾಗಿ ಸೂರೆಮಾಡು. ೯೧. ಎಲೆ ಬೆಲೆವೆಣ್ಣೆ, ಹೊಡೆದರೂ ಬೈದರೂ ಅವಮಾನಿಸಿದರೂ ಸಂಪತ್ತುಳ್ಳವನನ್ನು ಸೇರಿ ಬಿಡದಿರುವುದೇ ಲೋಕದಲ್ಲಿ ನೀತಿಯು. ೯೨. ಎಲೆ ಬೆಲೆವೆಣ್ಣೆ, ದುಂಡಲ್ಲದ ಮುತ್ತು, ಜಾಣತನವಿಲ್ಲದ ಮಾತು ಹಣವಿಲ್ಲದ ಬಾಳುವೆ ಇಹಲೋಕದೊಳಗೆ [ವ್ಯರ್ಥ]. ೯೩. ಜಾಣನಿಗೆ ಪಗಡೆ, ಇಂಪಾದ ಹಾಡು, ಸಂಸ್ಕೃತ ಪಠಣ, ಹಾಸ್ಯ, ಮಧುರವಾದ ಕಾವ್ಯ, ಚಲುವು....... ಇವುಗಳಿಲ್ಲದ ಸೂಳೆ ಮನೆಯು ಖಾಲಿಯಾದ ಮನೆಯು. ೯೪. ಚಂದಾವರೆಯ ಅರೆಬಿರಿದ ಮೊಗ್ಗನ್ನು ನೋಡಿ ಮರಿದುಂಬಿಯು [ಅದರಲ್ಲಿ] ಮನಸ್ಸಿಡುವಂತೆ ಮೊಲೆಯ ಹಿರಿಮೆಯನ್ನು ನೋಡಿ ವಿಟರುಗಳು [ಅದರಲ್ಲಿ] ಮನವಿಡುವರು. ೯೫. [ಸೂಳೆಗೆ ಧನವನ್ನು] ಕೊಡದಿದ್ದರೆ ಕಾರ್ಯ ನೆರವೇರದು. ಹೆಚ್ಚಾಗಿ ಕೊಟ್ಟರೆ ಕೆಡುವುದು. ದೀಪದ ಕುಡಿಗೆ ಎಣ್ಣೆ ಹಾಕುವಂತೆ ಹದವರಿತು ಸೂಳೆಗೆ [ಹಣವನ್ನು] ಕೊಡುವವನೆ ಜಾಣನು. ೯೬. ನಗೆಯ ನೋಟ, ಮೆಲ್ಲನೆಯ

ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ
ಬಿದುವೆ ಗದಿರಿಂತು ನೆಲಸಿರ್ಕೆ ರತಿಗೆ ಸಂ
ಪದಮೆಂದು ತೊಲಗದಿರುತಿರ್ಕೆ ॥ ೯೭ ॥

ನೆಲೆಮೊಲೆಯದುಳ್ಳಿನಂ ನೆಲೆಯಕ್ಕು ಪೋಪರ್ಗೆ
ಯೆಲೆ ಪಣ್ತುಬಿದ್ದ ಮಟ್ಟೆಯುಂ ಮುಱಿದಂತೆ
ಮೊಲೆಬಿದ್ದ ಬಟಿಕ ಬೆಲೆವೆಣ್ಗೆ ॥ ೯೮ ॥

ಒರ್ವನೊಳ್ವಂಚಿಸುತೆ ಕೊರ್ವಿದಾ ಬೇಟಮ
ತ್ತೊರ್ವನಲ್ಲಿಲ್ಲದಿರ್ದೊಡೆ ತನಿವೇಟಮ
ನುರ್ವಿಸಿ ಪಣಮಂ ಪಡೆವುದು ॥ ೯೯ ॥

ಎಂದಿಂತು ಪಾಡುತುಂ ಪೊಸ
ಕುಂದಣದೊನಕೆಗಳಿನಕ್ಕಿಯಂ ಚಳಿಸುತ್ತುಂ।
ಮಂದಸ್ಮಿತವದನೆಯರಾ
ನಂದಂಬಡೆದಾದಮೊಪ್ಪಿದರ್ ಬೆಲೆವೆಣ್ಗಳ್ ॥ ೧೦೦ ॥

ಎಂದಿಂತಿವು ಮೊದಲಾದ ವಿನೋದಂಗಳನೀಕ್ಷಿಸುತ್ತಟಿವಟ್ಟುದ್ಭಟಕ್ಷಿತೀಂದ್ರಚಂದ್ರಮಂ ಚಂದ್ರಿಕಾವಿಹಾರಮಂ ಮಾಡಿ ನಾಗರಿಕವಿಟವಿದೂಷಕಪೀಠಮರ್ದನರೆಂಬ ಸಖಿರಂ ಮನೆಗಳ್ಗೆ ಕಳುಪಿ ಮಗುಟ್ದು ಬಂದರಮನೆಯಂ ಪೊಕ್ಕತಿವಿ ಲಾಸಂಬಡೆದೊಲ್ದು ಶಯ್ಯಾಸದನಕ್ಕೆಟ್ತಿಂದು ತನ್ಮಂದಿರಮಧ್ಯಸ್ಥಿತ ಶರದಿಂದುಸಾಂದ್ರಚಂದ್ರಿಕಾಪಟಲಪ್ರತೀಕಾಶಧವಲಾಂಬರಾಚ್ಛನ್ನ ಕಲಹಂಸತೂಲಿಕಾತಲ್ಪಸಮಂಚಿತಕಾಂಚನ ಮಂಚೋ ಪರಿಭಾಗದೊಳ್ಸೌಂದರವತಿವೆರಸೊಯ್ಯನೆ ಮೆಯ್ಯನೀಡಾಡಿ ಈಷನ್ಮುಕುಳಿತನಯನಾರವಿಂದ ದ್ವಿತಯನುಂ ಕಮನೀಯಕುಸುಮವಿಸರಶೋಭಿತಕಚಪ್ರಚಯನುಂ ಭಸಿತತ್ರಿಪುಂಡ್ರರೇಖಾವಿಭಾಸಿತಭಾಲ ಫಲಕನುಂ ಕರ್ಪೂರಮೃಗಮದವಟಕತಾಂಬೂಲಪರಿಪೂರಿತಕಪೋಲೋದರನುಂ ವಿಲಂಬಿತಹಾರ ಮೌಕ್ತಿಕೋಚ್ಚಳಿತದ್ಯುತಿವಿರಾಜಿತವಕ್ಷಃಸ್ಥಲನುಂ ಮಾಣಿಕ್ಯಕಟಕಾಂಚಿತಪಾಣಿದ್ವಯನುಮಾಗಿ ಬೆಳ್ವಟ್ಟೆಯಂ ಮುಸುಕಿಟ್ಟು ಬೆಳ್ಮುಗಿಲಾವರಿಸಿದಮಲಚಂದ್ರನಂತೆ ಶಿವಯೋಗನಿದ್ರಾನಂದನುದ್ಭಟಕ್ಷಿತೀಂದ್ರಚಂದ್ರಮಂ ಕಣ್ಗೆಸೆದಿರ್ದಂ,

ಮಾತು, ಮುನಿಸು, ಮೋಹನಗಳಿಂದ ಮನವಿಟ್ಟು ಬಂದವರೊಡಗೂಡಿ ಮೋಹಿಸುವವಳು ರತಿಗೆ ಸಮಾನಳು. ೯೭. ಮದನನಿಗೆ ಜಯವಾಗಲಿ, ಮಧುಮಾಸಕ್ಕೆ ಸಂಪದವಾಗಲಿ, ಚಂದ್ರನ ಕಿರಣಗಳು ಹೀಗೆಯೇ ನೆಲೆಸಿರಲಿ, ರತಿಯ ಸಂಪತ್ತು ಎಂದೂ ತೊಲಗದಿರುತ್ತಿರಲಿ. ೯೮. ಅಲುಗಾಡದೆ ನಿಂತ ಮೊಲೆಗಳಿರುವವರೆಗೂ [ಸೂಳೆ ಮನೆಗೆ] ಹೋಗುವವರಿಗೆ ಅದು ಆಶ್ರಯಸ್ಥಾನವಾಗುವುದು. ಸೂಳೆಗೆ ಮೊಲೆ ಜೋತು ಬಿದ್ದ ಮೇಲೆ ಎಲೆ ಹಣ್ಣಾಗಿ [ಉದುರಿದಂತೆ], ತೆಂಗಿನ ಗರಿಯು ಮುರಿದುಬಿದ್ದಂತೆ. ೯೯. ಒಬ್ಬನಲ್ಲಿ ಮೋಸಗೊಳಿಸಿ ಕೊಬ್ಬಿಸಿದ ಕಾಮಾತುರತೆಯು, ಮತ್ತೊಬ್ಬನಲ್ಲಿ ಇಲ್ಲದಿದ್ದಾಗ ಹೊಸದಾಗಿ ಕಾಮಾತುರವನುಕ್ಕಿಸಿ [ಅವನಿಂದ] ಹಣವನ್ನು ಪಡೆಯುವುದು. ೧೦೦. ಹೀಗೆಂದು ಹಾಡುತ್ತ ಹೊಸ ಚಿನ್ನದ ಒನಕೆಗಳಿಂದ ಅಕ್ಕಿಯನ್ನು ಕುಟ್ಟುತ್ತ ಮಂದಹಾಸದಿಂದ ಕೂಡಿದ ಮುಖವುಳ್ಳ ವೇಶ್ಯೆಯರು ಆನಂದದಿಂದ ಕೂಡಿ ಶೋಭಿಸಿದರು. ವ॥ ಹೀಗೆ ಇವೇ ಮೊದಲಾದ ವಿನೋದಗಳನ್ನು ನೋಡುತ್ತ ಮುದಗೊಂಡು ಉದ್ಭಟಮಹಾರಾಜಚಂದ್ರಮನು

ಅದೆಂತೆಂದೊಡೆ,

ಭುಜಗೇಂದ್ರತಲ್ಪದೊಳ್ಳೀ
ರಜನಯನಂ ಲಕ್ಷ್ಮಿವೆರಸೆಸೆವವೋಲ್ ಮುಕ್ತಾ।
ವ್ರಜಮಯಮಂಚದೊಳೆಸೆದಂ
ನಿಜಸತಿವೆರಸುದ್ಭಟಂ ಸುನಿದ್ರಾನಂದಂ ॥ ೧೦೧ ॥

ಜಲಧಿಪಗೆತ್ತಿದ ಮುಕ್ತಾ
ಕಲಿತಾತಪತ್ರಮೆಂದೆನ......
ಲಲರ್ದೊಪ್ಪಿದುದಪರಾಶಾ
ಚಲಚೂಳಿಕೆಯೊಳ್ಸುಧಾಮರೀಚಿಯ ಬಿಂಬಂ ॥ ೧೦೨ ॥

ಪಡುದೆಸೆವೆಣ್ ಸಮಂತಮರ್ದಚಂದ್ರಿಕೆಯೆಂಬ ಸುಸೀಧುಸಾರಮಂ
ಬಿಡದೊಸೆದೀಂಟಿ ತದ್ವಧೂಸಮಂಚಿತಮಂಜುಲತಾರಪಾತ್ರೆಯಂ।
ಜಡನಿಧಿಯಲ್ಲಿ ತಾಂ ತೊಳೆಯಲಟ್ಟಿದಳೋ ಯೆನಲಾಟ್ಟುದಬ್ಧಿಯೊಳ್
ಕಡು ಮಿಱುಪಿಂದುಮಂಡಲಮನಂಗನೃಪಾಲಕವಜ್ರಕುಂಡಲಂ ॥ ೧೦೩ ॥

ಬೆಳದಿಂಗಳಿನಲ್ಲಿ ವಿಹರಿಸುತ್ತ ಬಂದು ನಾಗರಿಕ, ವಿಟ, ವಿದೂಷಕ, ಪೀಠಮರ್ಧನರೆಂಬ ಗೆಳೆಯರನ್ನು ಅವರವರ ಮನೆಗಳಿಗೆ ಕಳುಹಿಸಿ ಹಿಂತಿರುಗಿ ಬಂದು ಅರಮನೆಯನ್ನು ಹೊಕ್ಕು ಅತ್ಯಾನಂದದಿಂದ ಮಲಗುವ ಮನೆಗೆ ಬಂದು ಆ ಮಂದಿರದ ಮಧ್ಯಭಾಗದಲ್ಲಿರುವ ಶರತ್ಕಾಲದ ಚಂದ್ರನ ವಿಸ್ತಾರವಾದ ಬೆಳುದಿಂಗಳ ಕಿರಣಗಳ ಮೊತ್ತದಂತಿರುವ ಬಿಳಿಯ ಬಟ್ಟೆಯಿಂದ ಕವಿದ ಶುಭ್ರವಾದ ಹಂಸಗಳ ತುಪ್ಪಳದಿಂದ ಮಾಡಿದ ಹಾಸುಗೆಯಿಂದ ಕೂಡಿದ ಚಿನ್ನದ ಮಂಚದ ಮೇಲೆ ಸೌಂದರವತಿಯೊಡನೆ ಮೆಲ್ಲನೆ ದೇಹವನ್ನು ಚೆಲ್ಲಿ ಸ್ವಲ್ಪವೇ ಮುಚ್ಚಿದ ಜೋಡಿ ಕಣ್‌ಕಮಲಗಳನ್ನು ಉಳ್ಳವನೂ, ಭಸ್ಮದಿಂದ ಕೂಡಿದ ಮೂರು ರೇಖೆಗಳನ್ನು ಹಣೆಯಲ್ಲಿ ಹೊಂದಿ ಶೋಭಿಸುವವನೂ, ಕರ್ಪೂರ ಕಸ್ತೂರಿ ಮಿಶ್ರ ಗುಳಿಗೆಗಳನ್ನೊಳಗೊಂಡ ತಾಂಬೂಲ ತುಂಬಿಕೊಂಡ ಕೆನ್ನೆಯಿಂದ ಕೂಡಿರುವವನೂ, ಇಳಿಬಿಟ್ಟ ಮುತ್ತಿನಹಾರದ ಹೊಮ್ಮುವ ಕಾಂತಿಯಿಂದ ಶೋಭೆಗೊಂಡ ಎದೆಯನ್ನು ಹೊಂದಿರುವವನೂ, ಮಾಣಿಕ್ಯದ ಕಡಗಗಳನ್ನು ತೊಟ್ಟ ಕೈಗಳನ್ನು ಹೊಂದಿರುವವನೂ, ಬಿಳಿಯ ವಸ್ತ್ರವನ್ನು ಮುಸುಗುಹಾಕಿಕೊಂಡು ಬೆಳ್ಳನೆಯ ಮೋಡ ಕವಿದು ಶುಭ್ರಚಂದ್ರನಂತೆ ಶಿವಯೋಗ ನಿದ್ರೆಯಲ್ಲಿ ಆನಂದಗೊಂಡ ಉದ್ಭಟ ಮಹಾರಾಜ ಚಂದ್ರಮನು ಕಣ್ಣಿಗೆ ಹಿತವಾಗಿ ಶೋಭಿಸಿದ್ದನು. ಅದು ಹೇಗೆಂದರೆ, ೧೦೧. ಹಾವಿನ ಹಾಸುಗೆಯಲ್ಲಿ ಕಮಲಾಕ್ಷನು ಲಕ್ಷ್ಮಿಯೊಡನೆ ಶೋಭಿಸುವಂತೆ ಮುತ್ತುಗಳ ಸಮೂಹದಿಂದ ಕೂಡಿರುವ ಮಂಚದಲ್ಲಿ ತನ್ನ ಪತ್ನಿಯೊಡನೆ ಉದ್ಭಟನು ಒಳ್ಳೆಯ ನಿದ್ರೆಯಲ್ಲಿ ಆನಂದಗೊಂಡು ಶೋಭಿಸಿದನು. ೧೦೨. ಸಮುದ್ರರಾಜನಿಗೆ ಎತ್ತಿದ ಮುತ್ತಿನಿಂದ ಕೂಡಿದ ಪತ್ರವೆನ್ನುವಂತೆ ಪಶ್ಚಿಮಾಚಲದ ಶಿಖರದಲ್ಲಿ ಚಂದ್ರಬಿಂಬವು ವಿಕಾಸಗೊಂಡು ಶೋಭಿಸಿತು. ೧೦೩. ಪಶ್ಚಿಮ ದಿಗಂಗನೆಯು

ಅಂಬುಜಪೀಠನೆಂದೆನಿಪ ಜೋಯಿಸನಾರಜನೀಪ್ರಮಾಣಮಂ
ತಾಂ ಬಗೆದೀಕ್ಷಿಸಲ್ ಗಳಿಗೆವಟ್ಟಲನಿಕ್ಕಿದ ಬಟ್ಟಲ್ಪೆದೆ ಕಾ।
ಲಂಬಡೆದಂದು ನೀರೊಳಿರದಾಳ್ವಿವೊಲಾಟ್ಟುದು ಪಶ್ಚಿಮಾಬ್ಧಿಯೊಳ್
ತಂಬೆಳಗೊಂದೆ ಜೋಡೆ ನಲಿದಾಡೆ ಸಮುಜ್ವಲಚಂದ್ರಮಂಡಲಂ ॥ ೧೦೪ ॥

ಸರಸೀಜಾತೌಘಮೀಷದ್ವಿಕಸಿತಮುಖಮಾಗಲ್ ಚಕೋರಪ್ರಣೀಕಂ
ಕೊರಗಲ್ತಾರಾಗಣಂ ನಿರ್ಮಲರುಚಿಯಡಗಲ್ ಸಾಂದ್ರಚಂದ್ರಾತಪಂ ಮೈ।
ಗರೆಯಲ್ ಪ್ರಧ್ವಾಂತಮೆತ್ತಂ ಪಸರಿಸಲಿಳೆಯಂ ತಂಬೆಲರ್ತೀಡಲಿಂದೀ
ವರಷಂಡಂ ಮುದ್ರಿಸಲ್ತಾಂ ಪಡುಗಡಲೆಡೆಯೊಳ್ಚಂದ್ರಮಂ ಮಗ್ನನಾದಂ ॥ ೧೦೫ ॥

ಇನಿಯನೆನಿಪಮೃತಕಿರಣಂ
ವನಧಿಯೊಳಿಟಿದಾಟ್ಟಿನೆಂಬ ನೋವಿಂ ರಜನೀ
ವನಿತೆ ಕಡುಗುಂದಿದಳೊ ಎಂ
ದೆನಲುರ್ವಿಯ ಪರ್ವಿ ಕೊರ್ವಿತುನ್ನತತಿಮಿರಂ ॥ ೧೦೬ ॥

ಇಂತು ಚಂದ್ರಾಸ್ತಮಾನವಾಗಲುರ್ವಿಯ ಪರ್ವಿದುನ್ನತಧ್ವಾಂತದೇಟ್ಟೆಯಂ ಕಂಡು ಇನಿವಣ್ಗೊಂಚಲಂ ಕಂಡರಗಿಳಿಯಂತೆ ಪೊಂಗಿ ಪೊಱಿಯೇಱಿ ರೋಮಾಂಚನಸಂಚಯಕಂಚುಕಸಮಂಚಿತಕಾಂಚನ ಲತಾವಿರಾಜಿತಜಾರೆಯರ್ಮೆಲ್ಲಮೆಲ್ಲನೆ ನಿಜವಲ್ಲಭರಂ ವಂಚಿಸಿ ಚಂಚಲಾಕ್ಷಂಗಳಿಂದೆಡ ಬಲಂಗಳನಾರೈವುತ್ತುಮೆಟ್ಟಿಂದುಪಕಾಂತರೊಳ್ಪಂಚಶರ ಕೇಳೀಪ್ರಪಂಚಮಂ ಪಳಂಚುತ್ತೆಸೆದಿರ್ದರ್,

ಚೆನ್ನಾಗಿ ಹೊಂದಿಕೊಂಡ ಬೆಳುದಿಂಗಳೆಂಬ ಒಳ್ಳೆಯ ಮದ್ಯಸಾರವನ್ನು ಬಿಡದೆ ಪ್ರೀತಿಯಿಂದ ಕುಡಿದು ಆ ಹೆಣ್ಣು ಯೋಗ್ಯವೂ ಮನೋಹರವೂ ಆದ ಬೆಳ್ಳಿಯ ಪಾತ್ರೆಯನ್ನು ಸಮುದ್ರದಲ್ಲಿ ತೊಳೆಯಲು ಕಳುಹಿಸಿದಳೊ ಎನ್ನುವಂತೆ ಸಮುದ್ರದಲ್ಲಿ ಮನ್ಮಥರಾಜನ ವಜ್ರಕುಂಡಲವೆನ್ನುವಂತೆ ಚೆನ್ನಾಗಿ ಹೊಳೆಯುವ ಚಂದ್ರಮಂಡಲವು ಮುಳುಗಿತು. ೧೦೪. ಬ್ರಹ್ಮನೆಂಬ ಜೋಯಿಸನು ಆ ಇರುಳಿನ ಪ್ರಮಾಣವನ್ನು ಪರೀಕ್ಷಿಸಿ ನೋಡಲು ಗಳಿಗೆ ಬಟ್ಟಲನ್ನು ಹಾಕಲು, ಆ ಬಟ್ಟಲು ಕಾಲೋಚಿತವಾಗಿ ನೀರಿನಲ್ಲಿ ತೇಲದೆ ಮುಳುಗುವಂತೆ ಪಶ್ಚಿಮ ಸಮುದ್ರದಲ್ಲಿ ಅರುಣಕಾಂತಿ ಕೂಡಲು ಜಕ್ಕವಕ್ಕಿಗಳು ಸಂತೋಷಗೊಂಡಿರಲು, ಚೆನ್ನಾಗಿ ಹೊಳೆಯುವ ಚಂದ್ರಮಂಡಲವು ಮುಳುಗಿತು. ೧೦೫. ಕಮಲಗಳು ಅರೆಬಿರಿಯುತ್ತಿರಲು, ಚಕೋರಪಕ್ಷಿಗಳು ಕೊರಗುತ್ತಿರಲು, ನಕ್ಷತ್ರಗಳ ಕಾಂತಿ ಕುಂದುತ್ತಿರಲು, ವಿಸ್ತಾರವಾದ ಚಂದ್ರನ ಬೆಳಗು ಅಡಗುತ್ತಿರಲು, ದಟ್ಟಕತ್ತಲೆಯು ಎಲ್ಲೆಡೆ ಭೂಮಿಯಲ್ಲಿ ಕವಿಯುತ್ತಿರಲು, ತಣ್ಣನೆಯ ಗಾಳಿ ಬೀಸುತ್ತಿರಲು, ಕನ್ನೈದಿಲೆಗಳು ತಮ್ಮ ದಳಗಳನ್ನು ಮುಚ್ಚುತ್ತಿರಲು ಚಂದ್ರಮನು ಪಶ್ಚಿಮ ಸಮುದ್ರದಲ್ಲಿ ಮುಳುಗಿದನು. ೧೦೬. ಪ್ರಿಯನಾದ ಚಂದ್ರನು ಸಮುದ್ರದಲ್ಲಿಳಿದು ಮುಳುಗಿದನೆಂಬ ನೋವಿನಿಂದ ಕತ್ತಲೆ ಎನ್ನುವ ಹೆಣ್ಣು ಚೆನ್ನಾಗಿ ಕುಗ್ಗಿದಳೊ ಎನ್ನುವಂತೆ ಲೋಕವನ್ನು ಕತ್ತಲೆಯು ಹಬ್ಬಿ ಕೊಬ್ಬಿ ಆವರಿಸಿತು. ವ॥ ಹೀಗೆ ಚಂದ್ರನು ಮುಳುಗಲು ಲೋಕವನ್ನು ಕವಿದ ಗಾಢವಾದ ಕತ್ತಲೆಯ ಏಳಿಗೆಯನ್ನು ಕಂಡು ಸಿಹಿಯಾದ ಹಣ್ಣಿನ ಗೊಂಚಲನ್ನು ಕಂಡ ಅರಗಿಳಿಯಂತೆ ಉಬ್ಬಿ ಉತ್ಸಾಹದಿಂದ ಕೂಡಿ

ಅಂತುಮಲ್ಲದೆಯುಂ,

ಅಂಗಡಿಯ ಸಂದಿಗಳೊಳು
ತ್ತುಂಗಾಲಯದ ಪಕ್ಕದಲ್ಲಿ ಪಾಳ್ಗೋಡೆಗಳೊಳ್।
ಪೊಂಗುತ್ತುಂ ನೆರೆದರ್ ಕುಟಿ
ಲಾಂಗನೆಯರ್ ಜಾರಕಾಂತರಂ ನಲವಿಂದಂ ॥ ೧೦೭ ॥

ಮತ್ತೊಂದೆಡೆಯೊಳ್,

ದೀಪಮನೊಯ್ಯನಾರಿಸಿ ಮುಖಾಂಬುಜಮಂ ಮುಡಿದಿತ್ತು ತನ್ನವಂ
ಗೋಪಳ ಮಾಱ್ಕೆಯಿಂ ಬಿಡದೆ ಮುದ್ದಿಸಿ ನಂಬಿಸುತಿತ್ತಲಂಗಭೂ।
ಕೂಪಮನೊಲ್ದು ಸೊಪ್ಪುಳಿನಿಸುಣ್ಮದವೋಲ್..... ನೂಂಕಿ ತಾಂ
ಚಾಪಲನೇತ್ರೆಯೊರ್ವಳುಪವಲ್ಲಭನೊಳ್ ಸೊಗಸುಣ್ಮೆ ಕೂಡಿದಳ್ ॥ ೧೦೮ ॥

ಬಾಗಿಲೊಳೊಳಗಂ ನೋಡು
ತ್ತಾಗಳ್ಚರಣಾಂಗುಲೀಯಕಮನುಱೆ ಕಣ್ಗಂ।
ಬಾಗಿರೆ ನೇರ್ಪಡಿಸುವವೋಲ್
ಬಾಗಿರ್ದುಪಪತಿಯನೊಲ್ದು ನೆರೆದಳದೊರ್ವಳ್ ॥ ೧೦೯ ॥

ಅತ್ತೆ ಮಲಂಗಿದಳೀಮನೆ
ಯತ್ತಲ್ ಸುಳಿವವನುವೊರ್ವನಿಲ್ಲಮೆನುತ್ತುಂ।
ಮತ್ತೇಂ ಕನಲ್ದವೊಲೊರ್ವ
ಳ್ಚಿತ್ತಂಬುಗಿಪರಳಿಗಂಗೆ ಮಿಗೆ ಸೂಚಿಸಿದಳ್ ॥ ೧೧೦ ॥

ರೋಮಾಂಚನವೆ ಕುಪ್ಪಸವಾಗಿ ಸುವರ್ಣ ಬಳ್ಳಿಗಳಿಂದ ಶೋಭಿತವಾಗಿ ಹಾದರಗಿತ್ತಿಯರು ಮೆಲ್ಲ ಮೆಲ್ಲನೆ ತಮ್ಮ ಗಂಡಂದಿರನ್ನು ವಂಚಿಸಿ ಚಂಚಲವಾದ ನೋಟದಿಂದ ಎಡಬಲವನ್ನು ಪರೀಕ್ಷಿಸುತ್ತ ಬಂದು ತಮ್ಮ ಮಿಂಡರಲ್ಲಿ ಕಾಮಕೇಳೀ ಪ್ರಪಂಚದಲ್ಲಿ ಥಳಥಳಿಸುತ್ತ ಶೋಭಿಸಿದ್ದರು. ಅದಲ್ಲದೆ, ೧೦೭. ಅಂಗಡಿಯ ಸಂದಿಗಳಲ್ಲಿ, ಎತ್ತರವಾದ ಮನೆಗಳ ಪಕ್ಕದಲ್ಲಿ, ಹಾಳು ಬಿದ್ದ ಗೋಡೆಗಳಲ್ಲಿ ಉಬ್ಬುತ್ತ ಮಿಂಡೆಯರು ಮಿಂಡರನ್ನು ಪ್ರೀತಿಯಿಂದ ಸೇರಿದರು. ವ॥ ಮತ್ತೊಂದು ಕಡೆಯಲ್ಲಿ, ೧೦೮. ದೀಪವನ್ನು ಮೆಲ್ಲನೆ ಆರಿಸಿ, ತನ್ನ ಪ್ರಿಯಕರನಿಗೆ ಮುಖಕಮಲವನ್ನು ಬಿಟ್ಟುಕೊಟ್ಟು ನಲ್ಲಳ ರೀತಿಯಲ್ಲಿ ಬಿಡದೆ ಮುದ್ದಿಸಿ [ಅವನನ್ನು] ನಂಬಿಸಿ, ಇತ್ತ ಭೂಮಿಯ ಮೇಲಣ ಹಳ್ಳವನ್ನು ಬಯಸಿ ಸದ್ದಾಗದಂತೆ [ಬಾಗಿಲು] ತಳ್ಳಿ ಚಂಚಲಾಕ್ಷಿಯೋರ್ವಳು ಮಿಂಡನೊಡನೆ ಸೊಗಸು ಹೊಮ್ಮುವಂತೆ ಸಂಭೋಗಿಸಿದಳು. ೧೦೯. ಬಾಗಿಲೊಳಗೆ ನೋಡುತ್ತ ಪಾದಗಳ ಬೆರಳುಗಳು ಚೆನ್ನಾಗಿ ಕಣ್ಣಿಗೆ ಸೊಗಸುವಂತೆ ಸರಿಪಡಿಸುವ ಹಾಗೆ ಬಾಗಿ ಮಿಂಡನನ್ನು ಓರ್ವಳು ಪ್ರೀತಿಪಟ್ಟು ಕೂಡಿದಳು. ೧೧೦. ಅತ್ತೆಯು ಮಲಗಿರುವಳು. ಈ ಮನೆಯ ಕಡೆ ಸುಳಿಯುವವರು ಒಬ್ಬರೂ ಇಲ್ಲವೆ ಎನ್ನುತ್ತ ಕೆರಳಿದ ರೀತಿಯಲ್ಲಿ ಮನಸೆಳೆವ ಓರ್ವ ಕಪಟಿಗೆ ಚೆನ್ನಾಗಿ

ಪಟ್ಟಿರ್ದೆಱುಯಿನನಾರೈ
ದುಟ್ಟುದನಲ್ಲಿರಿಸಿ ಮೆಲ್ಲನೆಟ್ಟಿಂದೊಲವಿಂ।
ನೆಟ್ಟನುಪವಲ್ಲಭನೊಳಳ
ವಟ್ಟಂಗಜಕೇಳಿಯಂ ನೆಗಟ್ಚಿದಳೊರ್ವಳ್ ॥ ೧೧೧ ॥

ತಪ್ಪಿಸಿ ಕಾಂತರಂ ಸಿಡಿದು ಮೆಲ್ಲನೆ ಬಂದುಪಕಾಂತರಂ ಸಮಂ
ತಪ್ಪಿ ಮುಖಾಬ್ಜದೊಳ್ಮುಖಮನೊಂದಿಸಿ ಚುಂಬಿಸಿ ಲೀಲೆ ಕೈಮಿಗಲ್।
ಸೊಪ್ಪುಳದಾಗದಂತೆಡಬಲಂಗಳನೀಕ್ಷಿಸುತೊಲ್ದು ಕೂಡುತಂ
ದೊಪ್ಪಿದುದಲ್ಲಿಗಲ್ಲಿ ಗುರುಸಮ್ಮದದಿಂ ಕುಲಟಾಂಗನಾಜನಂ ॥ ೧೧೨ ॥

ಇಂತನಂತವಿಧದಿಂದ ಕಾಂತರಂ ತಪ್ಪಿಸಿ ಯುಪಕಾಂತರೊಳ್ಕಂತು ಕೇಳಿಯಂ ನೆಗಟ್ಚುತುಂ ಜಾರಕಾಂತಾಸಂತತಿಯತ್ಯಂತಸಂತಸಮನಾಂತೆಸೆದಿರ್ದುದು,

ಅಂತುಮಲ್ಲದೆಯುಂ,

ನಂಟಂ ಬಯಸುತ್ತಿನಿಯನ
ನಂಟಿ ಮಹಾತುರದಿನಪ್ಪಿ ಮಿಗೆ ಪುಳುಕಿಸುತುಂ।
ಟೆಂಟಣಿಸುತ್ತುಂ ನಡೆಯದೆ
ಗೊಂಟುಗಳೊಳ್ ಜೋಡೆಯರ್ನೆರೆಯುತಂದೆಸೆದರ್ ॥ ೧೧೩ ॥

ತೆಕ್ಕನೆ ತೀವಿದ ಹರ್ಷಂ
ಮಿಕ್ಕುಪವಲ್ಲಭರೊಳೊಲ್ದು ಕುಲಟಾತತಿ ಸ
ಮ್ಯಕ್ಕಾಮಕ್ರೀಡೆಯಿನಿರೆ
ಕುಕ್ಕೂ ಕೂ ಯೆಂದು ಕೋಳಿ ಕೂಗಿದುದಾಗಳ್ ॥ ೧೧೪ ॥

ಮಾರ್ಗದರ್ಶನ ಮಾಡಿದಳು. ೧೧೧. ಓರ್ವಳು ಮಲಗಿರುವ ತನ್ನ ಗಂಡನನ್ನು ಪರೀಕ್ಷಿಸಿ ನೋಡಿ ಉಟ್ಟ ಸೀರೆಯನ್ನು ಅಲ್ಲಿಯೇ ಬಿಟ್ಟು ಮೆಲ್ಲನೆ ಬಂದು ಪ್ರೀತಿಯಿಂದ ಮಿಂಡನನ್ನು ಸೇರಿ ಮನ್ಮಥ ಕೇಳಿಯಲ್ಲಿ ತೊಡಗಿದಳು. ೧೧೨. ಗಂಡಂದಿರ ಕಣ್ತಪ್ಪಿಸಿ ಮೆಲ್ಲನೆ ಬಂದು ಮಿಂಡರನ್ನು ಚೆನ್ನಾಗಿ ಅಪ್ಪಿ ಮುಖಕಮಲದಲ್ಲಿ [ಮಿಂಡನ] ಮುಖವನ್ನು ಹೊಂದಿಸಿ ಮುದ್ದಿಸಿ, ಚೆಲುವು ಹೆಚ್ಚಳಗೊಳ್ಳುವಂತೆ, ಶಬ್ದವಾಗದಂತೆ ಎಡ ಬಲಗಳನ್ನು ನೋಡುತ್ತ ಪ್ರೀತಿಪಟ್ಟು ಸೇರುತ್ತ ಅತ್ಯಾನಂದದಿಂದ ಕುಲಟೆಯರು ಅಲ್ಲಲ್ಲಿ ಶೋಭಿಸಿದರು. ವ॥ ಹೀಗೆ ಹಲವಾರು ರೀತಿಯಲ್ಲಿ ಗಂಡಂದಿರನ್ನು ವಂಚಿಸಿ ಮಿಂಡರಲ್ಲಿ ಕಾಮನಾಟವಾಡುತ್ತ ವ್ಯಭಿಚಾರಿಣಿಯರು ಅತ್ಯಾನಂದವನ್ನು ಹೊಂದಿ ಶೋಭಿಸಿದ್ದರು. ಅದಲ್ಲದೆ, ೧೧೩. ಸ್ನೇಹವನ್ನು ಪ್ರಕಟಿಸುತ್ತ ಪ್ರಿಯನನ್ನು ಕಾತರದಿಂದ ಅಂಟಿ ಅತ್ಯಾನಂದವನ್ನು ಹೊಂದಿ ಕಂಪಿಸುತ್ತ ನಡೆಯಲಾಗದೆ ಮೂಲೆಗಳಲ್ಲಿ ಹಾದರಗಿತ್ತಿಯರು ಸಂಭೋಗಿಸುತ್ತ ಶೋಭಿಸಿದರು. ೧೧೪. ಅಧಿಕವಾಗಿ ತುಂಬಿದ ಹರ್ಷವು ಎಲ್ಲೆ ಮೀರಿ ಮಿಂಡರೊಡನೆ ಪ್ರೀತಿಪಟ್ಟು ಹಾದರಗಿತ್ತಿಯರು ಒಳ್ಳೆಯ

ಕೂಗುವ ಕೋಳಿಯ ನಿನದಮ
ನಾಗಳ್ಕೇಳ್ದಳ್ಕಿ ಪಾಣ್ಬರಂ ಬಿಋಯ್ಕೊಂಡಿಂ।
ಬಾಗಿ ನಿಜಮಂದಿರಕ್ಕು
ದ್ಯೋಗಿಸಿದರ್ಪೋಗಲೆಂದು ಜಾರಾಂಗನೆಯರ್ ॥ ೧೧೫ ॥

ಉಗುರ್ಗೊನೆಯಿಂ ವಿಕೀರ್ಣಕಚಮಂ ಮಿಗೆ ತಿರ್ದಿ ಸಡಿಲ್ದ ನೀವಿಯಂ
ತೆಗೆದೊಲವಿಂದೆ ನೇರ್ಪಡಿಸಿ ಚುಂಬನದಷ್ಟವರಾಧರೋಷ್ಠಮಂ।
ಬಗೆಗೊಳೆ ಜಿಹ್ವೆಯಿಂದಲೆವುತುಃಪ್ಪೆನುತಂದುಪಕಾಂತರಂ ಸಮಂ
ತಗಲದೆ ನೋಡಿ ತಂಬುಲಮನಿತ್ತು ಮರುಳ್ದುದು ಪುಂಶ್ಚಲೀಜನಂ ॥ ೧೧೬ ॥

ಎಡಬಲಮನೊಯ್ಯನಾರ್ಯೆ
ದೊಡನುಪವಲ್ಲಭರನಂದು ಬೀಋಯ್ಕೊಂಡು ಕರಂ।
ತಡಬಡಿಸುತ್ತ ಸತೀತತಿ
ಯಡಿಯಿಟ್ಟುದು ನಿಜನಿಶಾಂತಸಂಚಯಕಾಗಳ್ ॥ ೧೧೭ ॥

ಮತ್ತಮಾಸಮಯದೊಳ್,

ಸುರತಶ್ರಾಂತಾಂಗನೆಯ
ರ್ಗುರುತರಸಂತೋಷಮೀಯುತುಂ ಶೀತಲಮಂ।
ಪರೆಪುತ್ತೆಣ್ದೆಸೆಯೊಳ್ಸಂ
ಚರಿಸಿದುದೊಯ್ಯನೆ ಲಸತ್ಪ್ರಭಾತಸಮೀರಂ ॥ ೧೧೮ ॥

ಕಾಮಕ್ರೀಡೆಯಲ್ಲಿರಲು ಕುಕ್ಕೂ ಕೂಯೆಂದು ಕೋಳಿ ಕೂಗಿದವು. ೧೧೫. ಹಾದರಗಿತ್ತಿಯರು ಕೂಗುವ ಕೋಳಿಯ ದನಿಯನ್ನು ಕೇಳಿ ಹೆದರಿ ಮಿಂಡರನ್ನು ಕಳುಹಿಸಿ ನೇರವಾಗಿ ತಮ್ಮ ತಮ್ಮ ಮನೆಗಳಿಗೆ ಹೋಗಲು ತೊಡಗಿದರು. ೧೧೬. ಉಗುರುಗಳ ತುದಿಯಿಂದ ಕೆದರಿದ ಕೂದಲನ್ನು ಚೆನ್ನಾಗಿ ತಿದ್ದಿ, ಸಡಿಲಗೊಂಡ ನೆರಿಗೆಯ ಗಂಟನ್ನು ಪ್ರೀತಿಯಿಂದ ಸರಿಪಡಿಸಿ, ಚುಂಬನದ ವೇಳೆಯಲ್ಲಿ ಕಚ್ಚಲ್ಪಟ್ಟ ಕೆಳದುಟಿಯನ್ನು ಮನಸೆಳೆಯುವಂತೆ ತುಟಿಗಳ ಮೇಲೆ ನಾಲಗೆಯಾಡಿಸಿ ಉಃಪೆಂದು ಹೇಳಿ ಮಿಂಡರನ್ನು ಅಗಲದೆ ಚೆನ್ನಾಗಿ ನೋಡಿ ತಾಂಬೂಲವಿತ್ತು ಜಾರೆಯರ ಸಮೂಹವು ಮನೆಗಳಿಗೆ ಹಿಂತಿರುಗಿತು. ೧೧೭. ಎಡಬಲವನ್ನು ಮೆಲ್ಲನೆ ಪರೀಕ್ಷಿಸಿ ನೋಡಿ ಒಡನೆಯೇ ತಮ್ಮ ಗೆಣೆಯರನ್ನು ಕಳುಹಿಸಿ ಅಳುಕಿನಿಂದ ಜಾರೆಯರು ತಮ್ಮ ತಮ್ಮ ಮನೆಗಳಿಗೆ ನಡೆದರು. ವ॥ ಮತ್ತೆ ಆ ಸಮಯದಲ್ಲಿ, ೧೧೮. ಸಂಭೋಗದಿಂದ ಬಳಲಿದ ಸ್ತ್ರೀಯರಿಗೆ ಹೆಚ್ಚಿನ ಸಂತೋಷವನ್ನೀಯುತ್ತ ಶೈತ್ಯವನ್ನು ಎಂಟೂ ದಿಕ್ಕುಗಳಿಗೆ ಹರಡುತ್ತ ಹೊಳೆವ ತಂಗಾಳಿಯು ಮೆಲ್ಲನೆ ತೀಡಿತು. ೧೧೯. ಅಲುಗಾಡುವ ಎಳೆಯ ಮಾವಿನ ಚಿಗುರಿನ ಗೊಂಚಲುಗಳಲ್ಲಿ, ಹೊಳೆವ ಅಶೋಕದ ಮನೋಹರವಾದ ಚಿಗುರಿನ ಗೊಂಚಲುಗಳಲ್ಲಿ, ಹೊಕ್ಕು ಸುಳಿದು ಹೊರಳಾಡಿ ಗೊಂಚಲುಗಳನ್ನು ಕೆದರಿ, ಎಳೆಯ

ಮಿಳಿರ್ವ ನವಚೂತಪಲ್ಲವದ ಮಂಜರಿಗಳೊಳ್
ತೊಳಪಶೋಕೆಯ ಚಾರುಕಿಸಲಯವಲ್ಲರಿಗಳೊಳ್।
ಪೊಕ್ಕು ಸುೞಿದೋಲಾಡಿ ಕೆದಱಿ ಗೊಂಚಲ್ಗಳಂ
ಮಿಕ್ಕೊಯ್ಯನೊಲೆದೊಲೆದು ತೂಗಿ ಪೊಸತಳಿರ್ಗಳಂ ॥ ೧೧೯ ॥

ಮಲ್ಲಿಕಾಲತೆಗಳೊಳ್ಮಂಡಳಿಸಿ ಕೊನೆದಾಡಿ
ಸಲ್ಲಲಿತಮಾದಪರಿಮಳದೆಸಕದೊಳ್ಮೂಡಿ।
ಸಂಪಿಗೆಯ ಬಿರಿಮುಗುಳ ಬಾಗಿಲ್ಗಳಂ ತೆಗೆದು
ಸೊಂಪಮರ್ದ ಜಾದಿನನೆಗಳ ಕೊನೆಗಳಂ ಬಿಗಿದು ॥ ೧೨೦ ॥

ಪಾಟಳಿಯ ಸಂಫುಲ್ಲಕುಸುಮರಜದೊಳ್ಪೊರಳ್ದು
ಮೀಟೆನಿಸುವಿರವಂತಿಗೆಯ ಲತಾಂತದೊಳುರುಳ್ದು।
ಪರಿಮಳಿಪ ಮಲಯಜಮಹೀಜಮಂ ಬಿಗಿಯಪ್ಪಿ
ಸುರಗಿಸುರಹೊನ್ನೆಮೊದಲಾದಲರ್ಗಳೊಳ್ಚುಪ್ಪಿ ॥ ೧೨೧ ॥

ಕಂಜಾಕರಂಗಳೊಳ್ಕಾಲೂರಿ ನಿಲ್ತುರ್ಬಿ
ಮಂಜುಳವನಾನೀಕದೊಳ್ಮಿಡಲ್ತುಱಿ ಪರ್ಬಿ।
ಪೂತೆಸೆವ ಜಾದಿಯಲರ್ವಂಡನುಱಿಯುಂಡು ತಣಿದು
ಕೇತಕಿಯ ನಿಟ್ಟೆಸಳ ಬಂಬಲ್ಗಳೊಳ್ಕುಣಿದು ॥ ೧೨೨ ॥

ನಮಿತಕದಳೀಫಲಸ್ತಬಕಂಗಳಂ ತೂಗಿ
ವಿಮಲಪೂಗಾವಳಿಯ ಪೊಂಬಾಳೆಯೊಳ್ಬೀಗಿ।
ಮಿಸುಪಕುವಲಯಚಲತ್ಪತ್ರಂಗಳೊಳ್ಸುೞಿದು
ನಸುನಗುವ ನವನೀರಜಾತಂಗಳಂ ತುೞಿದು ॥ ೧೨೩ ॥

ಚಿಗುರುಗಳನ್ನು ತೊನೆದು ತೊನೆದು ತೂಗಿ, ೧೨೦. ಮಲ್ಲಿಗೆಯ ಬಳ್ಳಿಗಳಲ್ಲಿ ಸುತ್ತಿ ಕೊನೆದಾಡಿ, ಮನೋಹರವಾದ ಪರಿಮಳದ ಸೊಬಗಿನಲ್ಲಿ ಮೂಡಿ, ಸಂಪಿಗೆಯ ಅರೆಬಿರಿದ ಮೊಗ್ಗಿನ ಬಾಗಿಲುಗಳನ್ನು ತೆಗೆದು, ಸೊಗಸುಗೂಡಿದ ಜಾಜಿಯ ಮೊಗ್ಗುಗಳ ಕುಡಿಗಳನ್ನು ಬಿಗಿದು, ೧೨೧. ಅರಳಿದ ಪಾದರಿ ಹೂವಿನ ಮಕರಂದದಲ್ಲಿ ಹೊರಳಾಡಿ, ಶ್ರೇಷ್ಠವಾದ ಇರುವಂತಿಗೆಯ ಹೂವಿನಲ್ಲಿ ಉರುಳಿ, ಸುಗಂಧ ಬೀರುವ ಚಂದನವನ್ನು ಬಿಗಿಯಾಗಿ ಅಪ್ಪಿ ಸುರಗಿ, ಸುರಹೊನ್ನೆ ಮೊದಲಾದ ಹೂಗಳಲ್ಲಿ ಹಾರಾಡಿ, ೧೨೨. ತಾವರೆಯ ಕೊಳಗಳಲ್ಲಿ ಕಾಲೂರಿ ನಿಂತು ಉಬ್ಬಿ, ಮನೋಹರವಾದ ತೋಟಗಳಲ್ಲಿ ವ್ಯಾಪಿಸಿ ಚೆನ್ನಾಗಿ ಹಬ್ಬಿ, ಶುದ್ಧಗೊಂಡು ಶೋಭಿಸುವ ಜಾಜಿಯ ಹೂವಿನ ಮಧುವನ್ನು ತೃಪ್ತಿಯಾಗುವಂತೆ ಸವಿದು, ಕೇದಗೆಯ ಉದ್ದವಾದ ಎಸಳುಗಳ ಸಮೂಹದಲ್ಲಿ ಕುಣಿದು, ೧೨೩. ಬಾಗಿದ ಬಾಳೆಯ ಗೊನೆಗಳನ್ನು ತೂಗಿ, ಶುಭ್ರವಾದ ಅಡಕೆಯ ಮರಗಳ ಹೂವಿನಲ್ಲಿ ಬೀಗಿ, ಹೊಳೆವ ಕನ್ನೈದಿಲೆಯ ಅಲುಗಾಡುವ ಎಲೆಗಳಲ್ಲಿ ಸುಳಿದು, ನಸುನಗುವ ಎಳೆಯ

ಕಂಪುಂಡು ತಣಿದು ಪೂಗೊಂಚಲೆಡೆಯೊಳೊಱಂಗಿ
ಝೋಂಪಿಸುತ್ತುಂ ಪೊದಱ್ದ ಪೊಂಪುೞಿಯೊಳುಂ ಪೊಂಗಿ।
ಝೋಂಕರಿಪ ಮಱಿಯ ಮಲ್ಲಳಿಗಳೆರಂಕೆಗಳಲ್ಲಿ
ತಾಂ ಪರ್ವಿ ಕೊರ್ವಿ ಕುಡಿವರಿದುರ್ವಿ ಪೊಕ್ಕಲ್ಲಿ ॥ ೧೨೪ ॥

ಮೇಗಣ್ಗೆ ನೂಂಕಿ ತೆಗೆದೆತ್ತಿ ಪಾರಿಸಿ ಸೊರ್ಕಿ
ಪೂಗೊಳಂಗಳೊಳ್ಳಿದೆ ರಿಂಗಣಂಗುಣಿದುರ್ಕಿ।
ಕಿಂಜಲ್ಕಪುಂಜಮಂ ಭುಂಜಿಸಿ ವಿನೋದದಿಂ
ಕಂಜವನಮಧ್ಯದೊಳ್ಮೂಡುತತಿಮೋದದಿಂ ॥ ೧೨೫ ॥

ತಣಿಯದೊಪ್ಪುವ ಹಂಸದಂಪತಿಗಳೆಡೆವರಿದು
ಪೊಣರ್ವ ಪೊಸಗಂಪಿನಿಂಪಂ ಸಾರ್ಚಿ ಕುಡಿವರಿದು।
ನವಚಂದ್ರಿಕಾಪುಂಜದೇೞ್ಗೆಯಂ ಕೊಱಗುತುಂ
ರವಿಯ ಬರವಿಂಗಳ್ಕಿ ಲತೆಗಳಂ ಸಾರುತುಂ ॥ ೧೨೬ ॥

ಕಂಗೆಡುವ ಮಂಜುಳಚಕೋರಂಗಳಂ ಸೋಂಕಿ
ಪೊಂಗುವನುತಾಪಮಂ ಪೊಱಗಣ್ಗೆ ಸಲೆ ನೂಂಕಿ।
ಪಗಲೆೞಿಯನುದಯಮಂ ಬಯಸಿ ಕಡು ಪೆರ್ಚುತುಂ
ಪೊಗರೊಗುವ ಕೞ್ತಲೆಗೆ ಕಣ್ಗಳಂ ಮುಚ್ಚುತುಂ ॥ ೧೨೭ ॥

ತಕ್ಕೆಗೊಯ್ಯನೆ ಸಾರ್ವ ಚಕ್ರಂಗಳೆಡೆಯೊಕ್ಕು
ಸೊಕ್ಕು ಕಡು ಸೊಗಸಂ ಪ್ರಸಾರಿಸುತ್ತುಂ ಮಿಕ್ಕು
ಸೆಳೆಗೊಂಬನಡರ್ದುಲಿವ ಗಿಳಿವಿಂಡನೊಡೆವಾಯ್ದು
.................................... ॥ ೧೨೮ ॥

ಕಮಲಗಳನ್ನು ತುಳಿದು, ೧೨೪. ಸುವಾಸನೆಯನ್ನು ಉಂಡು ತಣಿದು ಹೂಗೊಂಚಲ ನಡುವೆ ಒರಗಿ ಮೈ ಮರೆಯುತ್ತ, ಪ್ರಕಟವಾದ ರೋಮಾಂಚನದಲ್ಲಿ ಉಬ್ಬಿ ಝೋಂಕರಿಸುವ ರೆಕ್ಕೆಗಳ ಮೂಲಕ ಹಿಮ್ಮೆಟ್ಟಿಸಿ, ೧೨೫. ಮೇಲುಗಡೆಗೆ ನೂಕಿ ತೆಗೆದು, ಎತ್ತಿ ಹಾರಿಸಿ, ಸೊಕ್ಕಿ, ಹೂವಿನ ಕೊಳಗಳಲ್ಲಿ ಚೆನ್ನಾಗಿ ನರ್ತಿಸಿ, ಹೂವಿನ ಕುಸಿರುಗಳ ಸಮೂಹವನ್ನು ಸವಿದು ವಿನೋದದಿಂದ ಸರೋವರ ಮಧ್ಯದಲ್ಲಿ ಮೂಡಿ ಅತ್ಯಾನಂದದಿಂದ, ೧೨೬. ತಣಿಯದೆ, ಶೋಭೆಗೊಂಡ ಹಂಸ ದಂಪತಿಗಳ ನಡುವೆ ಜಾಗಮಾಡಿಕೊಂಡು ಜೊತೆಗೂಡಿದಾಗಿನ ನವೀನವಾದ ಸುವಾಸನೆಯ ಸವಿಯನ್ನು ಹೊಂದಿ ಉಬ್ಬಿ, ಎಳೆಯ ಬೆಳುದಿಂಗಳಿನ ಏಳಿಗೆಯನ್ನು ಕಂಡು ಕೊರಗುತ್ತ ಸೂರ್ಯನ ಆಗಮನಕ್ಕೆ ಹೆದರಿ ಬಳ್ಳಿಗಳನ್ನು ಸಮೀಪಿಸುತ್ತ, ೧೨೭. ಕಂಗೆಟ್ಟ ಮನೋಹರ ಚಕೋರ ಪಕ್ಷಿಗಳನ್ನು ಸ್ಪರ್ಶಿಸಿ, ಹೊಮ್ಮುವ ಕನಿಕರವನ್ನು ಹೊರಗಣ್ಣಿಗೆ ಚೆನ್ನಾಗಿ ನೂಕಿ, ಹಗಲಿನ ಒಡೆಯನಾದ ಸೂರ್ಯನ ಉದಯವನ್ನು ಬಯಸಿ ಅತಿಯಾಗಿ ಉಬ್ಬುತ್ತ ಕಾಂತಿ ಪಸರಿಸುವ ಕತ್ತಲೆಗೆ ಕಣ್ಣುಗಳನ್ನು ಮುಚ್ಚುತ್ತ, ೧೨೮. ಅಪ್ಪುಗೆಗೆ ಮೆಲ್ಲನೆ ಬರುವ ಚಕ್ರವಾಕಗಳ ನಡುವೆ ಪ್ರವೇಶಿಸಿ ಸೊಕ್ಕಿ ಹೆಚ್ಚಿನ ಚೆಲುವನ್ನು ಹರಡುತ್ತ, ಕೊಂಬೆಯ ತುದಿಯನ್ನು ಏರಿ ಚಿಲಿಮಿಲಿಗುಟ್ಟುವ ಗಿಳಿಗಳ

ಕುಸುಮಗುಚ್ಛಂಗಳೊಳ್ ಕುಣಿಕುಣಿದು ಮದವೇಱಿ
ಪೊಸಗಂಪನೀವ ಮಕರಂದರಸಮಂ ತೂಱಿ।
ಸೂಳೆಗೇರಿಯ ಮುಂದಳುಪ್ಪರಿಗೆಗಳ ಮೇಲೆ
ತೋಳತೆಕ್ಕೆಯೊಳಮರ್ದು ಬೆಚ್ಚಂತೆ ಘನಲೀಲೆ ॥ ೧೨೯ ॥

ಪೆರಸು ಕಂದರ್ಪಕೇಳೀಶ್ರಾಂತಿಯೊಳ್ಳೊಂದು
ಗುರುತರಮದಾದಸೌಖ್ಯಾನೀಕವಂ ದಂದು।
ಮರದೊಱಂಗಿರ್ಪ ನವಕಾಂತೆಯರ ಕಬರಿಯೊಳ್
ನೆಱೆ ತುಂಬಿದಸವದ್ಯಕುಸುಮಮಾಲಿಕೆಗಳೊಳ್ ॥ ೧೩೦ ॥

ತಾಂ ಚೆಲ್ವಿನಿಂ ಪೊಕ್ಕು ಸಂಚರಿಸಿ ಪುಟವೇಱಿ
ಕುಂಚಿತಾಳಕಸಂಚಯಮನಲೆದು ತವೆ ಸೇರಿ।
ಬೆಮರ್ವನಿಯಿನಟ್ಟಿದ ಮೃಗಮದತಿಲಕಮಂದಿಕ್ಕಿ
ಕಮನೀಯಕಂಠಮುಕ್ತಾಹಾರದೊಳ್ಸಿಲ್ಕಿ ॥ ೧೩೧ ॥

ಮೇಲುದಂ ಸೆಳೆದು ಮೆಲ್ಲನೆ ಮೊಲೆಗಳಂ ಪತ್ತಿ
ಲೀಲಾನುಲೇಪನಾಮೋದಮಂ ಪೊತ್ತೆತ್ತಿ।
ಕುಚಹಾರರತ್ನಂಗಳೊಳ್ಕೂರ್ತು ಕುಣಿದಾಡಿ
ರುಚಿವಡೆದ ನಳಿತೋಳ್ಗಳಗ್ರದೊಳ್ಸಲೆ ಮೂಡಿ ॥ ೧೩೨ ॥

ಲಲಿತತನುಮಧ್ಯಲತೆಯೊಳ್ನಟನಮಂ ತೋಱಿ
ವಿಲಸದುತ್ತುಂಗಂಗಳಂ ಮೆಟ್ಟಿ ಸಲೆ ಜಾಱಿ।
ಕಾಲುಗುರ್ಗಮರ್ದ ಬೆಳಗಿನೊಳಲಂಪಿಂ ಸುಟ್ಟಿದು
ಸಾಲಿಡುವ ನಱುಸುಯ್ಯಲರ ಪರಿಮಳಂದಳೆದು ॥ ೧೩೩ ॥

ಸಮೂಹವನ್ನು ಬೇರ್ಪಡಿಸಿ ದಾಟಿ.......... ೧೨೯. ಹೂವಿನ ಗೊಂಚಲುಗಳಲ್ಲಿ ಕುಣಿಕುಣಿದು ಮದವೇರಿ ಹೊಸ ಕಂಪನ್ನು ಸೂಸುವ ಮಕರಂದ ರಸವನ್ನು ಚೆಲ್ಲಿ, ಸೂಳೆಗೇರಿಯ ಮುಂದಣ ಮಹಡಿ ಮನೆಗಳ ಮೇಲೆ ತೋಳ ತೆಕ್ಕೆಯಲ್ಲಿ ಸೇರಿ ಬೆಚ್ಚಗೆ ಅತ್ಯಾನಂದದಿಂದ, ೧೩೦. ಕೂಡಿ ಕಾಮಕೇಳಿಯ ಬಳಕೆಯಲ್ಲಿ, ಹೆಚ್ಚಿನದಾದ ಸುಖದಲ್ಲಿ ಪರವಶರಾಗಿರುವ ಎಳೆಯ ಜವ್ವನೆಯರ ತುರುಬಿನಲ್ಲಿ, ಅಪಾರವಾಗಿ ಸೇರಿದ ಸ್ವಚ್ಛವಾದ ಹೂಮಾಲೆಗಳಲ್ಲಿ, ೧೩೧. ಸೊಗಸಾಗಿ ಹೊಕ್ಕು ಅಲ್ಲಿ ಸುತ್ತಾಡಿ ಚೆನ್ನಾಗಿ ಸೇರಿ ಬೆವರ ಹನಿಯಿಂದ ಕೆಟ್ಟ ಕಸ್ತೂರಿ ತಿಲಕವನ್ನು ತಾಗಿ, ಮನೋಹರವಾದ ಕೊರಳಿನ ಮುತ್ತಿನ ಹಾರದಲ್ಲಿ ಸಿಕ್ಕಿ, ೧೩೨. ಸೀರೆಯ ಸೆರಗನ್ನು ಮೆಲ್ಲನೆ ಸರಿಸಿ ಮೊಲೆಗಳನ್ನು ಸೇರಿ, ಸೊಗಸಾಗಿ ಕಾಣಲೆಂದು ಲೇಪಿಸಿದ್ದ ಸುಗಂಧದ್ರವ್ಯಗಳ ಮಾಧುರ್ಯವನ್ನು ಹೊತ್ತುಕೊಂಡು ಸಾಗಿ, ಮೊಲೆಗಳ ಮೇಲಾಡುವ ರತ್ನಹಾರಗಳ ಜೊತೆ ಪ್ರೀತಿಯಿಂದ ಕುಣಿದಾಡಿ, ಕಾಂತಿಯುಕ್ತ ಮೃದು ತೋಳುಗಳ ಮೇಲೆ ಚೆನ್ನಾಗಿ ಮೂಡಿ, ೧೩೩. ಕೋಮಲವಾದ ಸೊಂಟವೆಂಬ ಬಳ್ಳಿಯಲ್ಲಿ ನಾಟ್ಯವಾಡಿ, ಹೊಳೆವ ಕೊಡೆಗಳನ್ನು ಮೆಟ್ಟಿ ಚೆನ್ನಾಗಿ [ಅಲ್ಲಿ] ಜಾರಿ, ಕಾಲಿನ

ಮೆಲ್ಲನನುಪಮಸುಗಂಧಾಳಿಯಂ ಪರಪುತುಂ
ನಿಲ್ಲದಿನಿಯರ್ಕಳಂ ಕೂರ್ಮೆಯಿಂ ನೆರಪುತುಂ।
ಮಣಿಮಂದಿರಂಗಳ ಗವಾಕ್ಷಂಗಳೊಳ್ಪೊಕ್ಕು
ಪೊಣರ್ವ ಪೊಸಗಂಪಿನಿಂಪಿನ ತಂಪಿನಿಂ ಮಿಕ್ಕು ॥ ೧೩೪ ॥

ಮಿಗೆ ಮಿಸುಪ ಪಂಚೇಂದ್ರಿಯಂಗಳ ಮಹಾಬಲಂ
ಸೊಗಸಮರ್ದು ತೀಡಿದುದು ಸುಪ್ರಭಾತಾನಿಲಂ ॥ ೧೩೫ ॥

ಈಪರಿಯಿಂ ಚರಿಪನಿಲ
ವ್ಯಾಪಾರಮದುರ್ವಿ ಪರ್ವಲುರ್ವಿಯನಾಗಳ್।
ಶ್ರೀಪಾರ್ವತೀಶ ಶರಣೆನು
ತಾಪರಮಾನಂದನುದ್ಭಟಂ ಕಣ್ದೆಱೆದಂ ॥ ೧೩೬ ॥

ಇಂತು ಬೆಳಗಪ್ಪಸಮಯದಯೆಱಿಸ್ಸೊಯ್ಯನೆ ಪಟ್ಟುಕೆವನೆಯಂ ಪೊಱಮಟ್ಟೊಲವಿನಿಂ ಪೊಸಗಂಪು ಪಸರಿಪಚ್ಛೋದಕದಿಂ ಕೈಕಾಲ್ಮೊಗದಾವರೆಗಳಂ ಕರ್ಚಿ ಶರಚ್ಚಂದ್ರಚಂದ್ರಿಕಾಪುಂಜಮಂ ಪೞಿವ ನೂತ್ನ ವಿಭೂತಿಯ ಲೇಖೆಗಳನಾಗಮಸ್ಥಾಪನಂಗಳಱಿದಳವಡಿಸಿ ಭದ್ರರುದ್ರಾಕ್ಷಾಭರಣಾಲಂಕೃತನಾಗಿ ಧೌತಧವಲಾಂಬರಮಂ ತೆಗೆದುಟ್ಟು ತವಕದಿಂದೀಶಾರ್ಚನೆಯ ಕಾಲವೋದುದೆಂದು ಸೌಂದರವತಿಯಂ ಬೀೞ್ಕೊಂಡಾನಂದದಿಂದೆಟ್ಟಿಂದು ಮೂಲಸ್ಥಾನದ ನೀಲಕಂಠಾಲಯಮಂ ಲೀಲೆಯಿಂ ಸಾರ್ದು ಬರೆವರೆ,

ಸಂಗೀತೋಜ್ವಲನಾದದಿಂ ವಿಪುಳಭೇರೀವಾದ್ಯಸಂರಾವದಿಂ
ತುಂಗಸ್ತೋತ್ರಮನೊಲ್ದು ಮಾಳ್ಪ ವರವಿದ್ವಚ್ಛ್ರೇಣಿಕಾಧ್ವಾನದಿಂ।
ರಂಗನ್ಮಂಜುಳನರ್ತಕೀಪದಲಸನ್ಮಂಜೀರಝಣತ್ಕಾರದಿಂ
ಮಾಂಗಲ್ಯಂಬಡೆದೈದೆ ರಂಜಿಸಿದುದುದ್ಯನ್ನೀಲಕಂಠಾಲಯಂ ॥ ೧೩೭ ॥

ಉಗುರುಗಳಲ್ಲಿ ಸೇರಿದ ಕಾಂತಿಯ ಸೊಗಸಿನಲ್ಲಿ ಸುಳಿದು, ಸಾಲಿಟ್ಟ ಸುವಾಸನಾಭರಿತ ನಿಟ್ಟುಸಿರ ಪರಿಮಳವನ್ನು ಹೊಂದಿ, ೧೩೪. ಮೆಲ್ಲನೆ ಎಣೆಯಿಲ್ಲದ ಸುಗಂಧವನ್ನು ಹರಡುತ್ತ, ಒಂದೆಡೆ ನಿಲ್ಲದೆ ಪ್ರಿಯರುಗಳನ್ನು ಸಂತಸದಿಂದ ಕೂಡಿಸುತ್ತ ಮಣಿಖಚಿತ ಮನೆಗಳ ಗವಾಕ್ಷಗಳ ಮೂಲಕ ಪ್ರವೇಶಿಸಿ ಹೊಸ ಕಂಪಿನೊಡನೆ ಸೇರಿ ಹಿತಕರವಾದ ತಂಪಿನಿಂದ ಹೆಚ್ಚುಗೆಗೊಂಡು, ೧೩೫. ಚೆನ್ನಾಗಿ ಹೊಳೆವ ಪಂಚೇಂದ್ರಿಯಗಳ ಮಹಾಬಲದ ಸೊಗಸನ್ನು ಹೊಂದಿ ಬೆಳಗಿನ ತಂಗಾಳಿಯು ಬೀಸಿತು. ೧೩೬. ಈ ರೀತಿ ಬೀಸುವ ತಂಗಾಳಿಯ ಚಟುವಟಿಕೆಗಳು ಲೋಕವನ್ನು ಹಬ್ಬಿ ಹರಡಲು, ಆಗ ಶಿವನೇ ಶರಣು ಎನ್ನುತ್ತ ಆ ಪರಮ ಆನಂದಮೂರ್ತಿಯಾದ ಉದ್ಭಟನು ಕಣ್ಣು ತೆರೆದನು. ವ॥ ಹೀಗೆ ಬೆಳಗಿನ ಸಮಯದಲ್ಲಿ ಮೆಲ್ಲನೆ ಮಲಗು ಮನೆಯಿಂದ ಹೊರಬಂದು ಪ್ರೀತಿಯಿಂದ ಸುವಾಸನೆಯನ್ನು ಹರಡುವ ಶುಭ್ರವಾದ ನೀರಿನಿಂದ ಕೈ ಕಾಲು ಮುಖಕಮಲಗಳನ್ನು ತೊಳೆದು ಶರತ್ಕಾಲದ ಬೆಳುದಿಂಗಳನ್ನು ಹೀಯಾಳಿಸುವ ನೂತನ ವಿಭೂತಿಯ ರೇಖೆಗಳನ್ನು ಆಗಮೋಕ್ತವಾಗಿ ಹೊಂದಿಸಿ ಮಂಗಳಕರವಾದ ರುದ್ರಾಕ್ಷಿಯ ಆಭರಣದಿಂದ ಅಲಂಕೃತನಾಗಿ ಶುಭ್ರವಾದ ಬಿಳಿಯ ವಸ್ತ್ರವನ್ನು ಧರಿಸಿ ಉತ್ಸಾಹದಿಂದ ಶಿವಾರ್ಚನೆಯ ಕಾಲ ಸಮೀಪಿಸಿತು ಎಂದು ಸೌಂದರವತಿಯನ್ನು ಬೀಳ್ಕೊಂಡು ಆನಂದದಿಂದ ಬಂದು ಮೂಲಸ್ಥಾನವಾದ ಶಿವನ ಆಲಯವನ್ನು ವಿಲಾಸದಿಂದ ಸಮೀಪಿಸಿ ಬರುತ್ತಿರಲು, ೧೩೭. ಸಂಗೀತದ ಸೊಗಸಾದ

ಮತ್ತಮಾಸಮಯದೊಳ್,

ಗಂಭೀರಾಭ್ರಪ್ರಣಾದಂ ಸುಜನಜನಮನಃಕೇಕಿಗುತ್ತುಂಗಪೀಯೂ
ಷಾಂಭೋರಾಶಿಪ್ರಣಾದಂ ಬುಧಜನಹೃದಯೋದ್ಯಚ್ಚಕೋರಕ್ಕೆಹೃದ್ಭೂ।
ಜೃಂಭಚ್ಚಾಪಪ್ರಣಾದಂ ಮುನಿಜನವರಚೇತೋರಥಾಂಗಕ್ಕದಾಗಲ್
ಭುಂ ಭುಂ ಭುಂ ಭೂಯೆನುತ್ತುಂ ಬಿಡದೆ ನೆಗಟ್ಟುದುಚ್ಚಂಡ ಶಂಖಪ್ರಣಾದಂ ॥ ೧೩೮ ॥

ಇಂತತಿಮಂಗಳಮಯಮಪ್ಪ ಶಂಖಧ್ವಾನಮನಾಲಿಸುತ್ತೆಟ್ಟಿಂದು ದೇವಾಗಾರಮಂ ಪೊಕ್ಕುಜ್ವಳಿಪ ನೀಲಕಂಠಲಿಂಗಮಂ ಕಂಡಿಂದುವಂ ಕಂಡಿಂಗದಿರ್ವಕ್ಕಿಯಂತೆ ಪೊಂಗಿ ಪೊಱುಯೇಱ ಪೊಂಪುಟಿವೋಗಿ ಭಯಭರಿತಭಕ್ತಿಯಿಂ ಸಾಷ್ಟಾಂಗಪ್ರಣತನಾಗಿ ಮಗುೞ್ದುಯ್ಯನೆ ಸಾರ್ದತ್ಯಾನಂದಂಬಡೆದುದ್ಭಟ ಕ್ಷಿತೀಂದ್ರಚಂದ್ರಮಂ ಪೂಜೆಯಂ ಮಾಡುತ್ತೆಸೆದಿರ್ದಂ॥

ಅಂತುಮಲ್ಲದೆಯುಂ,

ನಾನಾವಿಧಪೂಜೆಗಳಿಂ
ದಾನಂದಂ ಬಡೆದು ಶಂಕರನನರ್ಚಿಸುತುಂ।
ಜ್ಞಾನಾಬ್ಧಿಯೊಳಾೞುತ್ತುಂ
ಶ್ರೀನಿಳಯಂ ಕಂಗೊಳಿಸಿದನುದ್ಭಟದೇವಂ ॥ ೧೩೯ ॥

ಪುಳಕಮದಂಗಕಲ್ಪಕುಜಕುದ್ಗಮಮಾಗೆ ಮುದಶ್ರುಪೂರಮಾ
ತಳತಳಿಪಚ್ಚಿಮೊಸ್ಗೆ ನದಿಯಾಗೆ ಸಮುದ್ಭವಗದ್ಗದೋಕ್ತಿ ನಿ।
ರ್ಮಳತರಕಂಠಕಂಬುವಿಗುದಂಚಿತನಾದಮಾಗೆ ಮೋದದಿಂ
ದಳವಡೆ ಶಂಭುವಂ ನಲಿದು ಪೂಜಿಸುತುದ್ಭಟದೇವನೊಪ್ಪಿದಂ ॥ ೧೪೦ ॥

ನಾದದಿಂದ, ಅಸಂಖ್ಯ ಭೇರೀ ವಾದ್ಯಗಳ ನಾದದಿಂದ, ಮಿಗಿಲಾದ ಸ್ತೋತ್ರವನ್ನು ಪ್ರೀತಿಯಿಂದ ಮಾಡುವ ಶ್ರೇಷ್ಠ ವಿದ್ವಾಂಸರ ಧ್ವನಿಯಿಂದ, ರಂಗಸ್ಥಳದಲ್ಲಿ ಮನೋಹರಳಾದ ನರ್ತಕಿಯ ಕಾಲುಗಳಲ್ಲಿ ಹೊಳೆವ ಕಾಲಂದುಗೆಗಳ ಝಣತ್ಕಾರದಿಂದ, ಒಳಿತನ್ನು ಪಡೆದ ಶಿವಾಲಯವು ಚೆನ್ನಾಗಿ ಶೋಭಿಸಿತು. ವ॥ ಮತ್ತೆ ಆ ಸಮಯದಲ್ಲಿ, ೧೩೮. ಆಕಾಶದ ಗಂಭೀರ ಪ್ರಣಾದವು ಒಳ್ಳೆಯ ಜನರ ಮನವೆಂಬ ನವಿಲಿಗ ಶ್ರೇಷ್ಠವಾದ ಅಮೃತ ಸಮುದ್ರದ ಪ್ರಣಾದವು ವಿದ್ವಾಂಸರ ಮನವೆಂಬ ಶ್ರೇಷ್ಠ ಚಕೋರಕ್ಕೆ, ಹೃದಯ ಭೂಮಿಯಲ್ಲಿ ಹೊಳೆವ ಮನ್ಮಥನ ಬಿಲ್ಲಿನ ಝೇಂಕಾರವು ಮುನಿಜನವರ ಚೇತನವೆಂಬ ಚಕ್ರವಾಕಕ್ಕೆ ಆಗಲು ಭುಂ ಭುಂ ಭೂ ಎನ್ನುತ್ತ ಬಿಡದೆ ತೀವ್ರವಾದ ಶಂಖಧ್ವನಿಯುಂಟಾಯಿತು. ವ॥ ಹೀಗೆ ಅತಿಮಂಗಳಮಯವಾದ ಶಂಖಧ್ವನಿಯನ್ನು ಕೇಳಿ ಎದ್ದು ಬಂದು ದೇವಾಲಯವನ್ನು ಪ್ರವೇಶಿಸಿ ಪ್ರಜ್ವಲಿಸುವ ಶಿವಲಿಂಗವನ್ನು ನೋಡಿ ಚಂದ್ರನನ್ನು ಕಂಡ ಚಕೋರ ಪಕ್ಷಿಯಂತೆ ಉಬ್ಬಿ ಉತ್ಸಾಹದಿಂದ ಕೂಡಿ ರೋಮಾಂಚನಗೊಂಡು ಭಯಭರಿತ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಮತ್ತೆ ಮೆಲ್ಲನೆ ಸಮೀಪಿಸಿ ಅತ್ಯಾನಂದದಿಂದ ಉದ್ಭಟ ಮಹಾರಾಜ ಚಂದ್ರಮನು ಪೂಜೆಯನ್ನು ಮಾಡುತ್ತ ಶೋಭಿಸಿದ್ದನು. ಅದಲ್ಲದೆ, ೧೩೯. ನಾನಾ ಬಗೆಯ ಪೂಜೆಗಳಿಂದ ಸಂತೋಷ ಹೊಂದಿ ಶಿವನನ್ನು ಪೂಜಿಸುತ್ತ ಶಿವಜ್ಞಾನ ಸಾಗರದಲ್ಲಿ ಮುಳುಗುತ್ತ ಲಕ್ಷ್ಮೀನಿವಾಸವಾದ ಉದ್ಭಟದೇವನು ಕಣ್ಣಿಗೆ ಅಂದವಾಗಿ ಕಾಣಿಸಿದನು. ೧೪೦. ಆನಂದವು ಶರೀರವೆಂಬ

ಶ್ರೀ ಪರಮಾತ್ಮನಂ ನಿಗಮಸನ್ನುತನಂ ಗಿರಿಜಾಧಿನಾಥನಂ
ತಾಪವಿದೂರನಂ ವಿಪುಳಭಕ್ತಿಯಿನರ್ಚಿಸುತುಂ ಸುರಂಜಿಪಾ।
ಭೂಪವರೇಣ್ಯನುದ್ಭಟನ ಚಿತ್ತಸರೋರುಹದೊಳ್ತೊಳಪ್ಪ ಪಂ
ಪಾಪತಿ ರಕ್ಷಿಸೆನ್ನನೆಡೆಯಿಲ್ಲದ ಕೂರ್ಮೆಯಿನಲ್ಲಮಪ್ರಿಯಾ ॥ ೧೪೧ ॥

ಇದು ಸಮಸ್ತಸುರಕದಂಬವಿಜೃಂಭಿತಮಕುಟತಟಘಟಿತನವರತ್ನ ಪುಂಜ
ಸಂಜಾತ ಪಿಂಜರಿತಮಂಜುಳಮಯೂಖಮಂಜರೀರಂಜಿತ ಶ್ರೀಗುರು
ವಿರೂಪಾಕ್ಷಪಾವನಪಾದನಖೋಚ್ಛಳಿತಪ್ರಭಾನಿಸ್ತಂದ್ರರುಂದ್ರ
ಸಾಂದ್ರಚಂದ್ರಿಕಾಪಟಲಪಟುಲಂಪಟಚಕೋರಾಯಮಾಣ
ಮಾನಸಶ್ರೀಸೋಮರಾಜೇಂದ್ರವಿರಚಿತಮಪ್ಪಶೃಂಗಾರ
ಸಾರಮಹಾಪ್ರಬಂಧದೊಳ್ ರಾತ್ರಿವಿಹಾರವರ್ಣನಂ
ದಶಮಾಶ್ವಾಸಂ ಮುಗಿದುದು.

ಕಲ್ಪವೃಕ್ಷಕ್ಕೆ ಹೂವಾಗಲು, ಆನಂದಾಶ್ರುವಿನ ಪ್ರವಾಹವು ಥಳಥಳಿಸುವ ಮೀನುಗಳಿಗೆ ನದಿಯಾಗಿರಲು, ಕಾಣಿಸಿಕೊಂಡ ಗದ್ಗದ ಧ್ವನಿಯು ಶುಭ್ರವಾದ ಕೊರಳೆಂಬ ಶಂಖಕ್ಕೆ ಶ್ರೇಷ್ಠ ನಾದವಾಗಲು ಇವು ಸಂತಸದಿಂದ ಹೊಂದಿಕೆಯಾಗಿರಲು ಶಿವನನ್ನು ಉಲ್ಲಾಸದಿಂದ ಪೂಜಿಸುತ್ತ ಉದ್ಭಟದೇವನು ಶೋಭಿಸಿದನು. ೧೪೧. ಮಂಗಳಕರನಾದ ಪರಮಾತ್ಮನನ್ನು, ವೇದಗಳಿಂದ ಸ್ತುತಿಸಲ್ಪಡುವವನನ್ನು, ಗಿರಿಜೆಯ ಒಡೆಯನನ್ನು, ತಾಪತ್ರಯಗಳನ್ನು ಪರಿಹರಿಸುವವನನ್ನು, ಉನ್ನತ ಭಕ್ತಿಯಿಂದ ಪೂಜಿಸುತ್ತ ಚೆನ್ನಾಗಿ ಶೋಭಿಸಿರುವ ರಾಜರಲ್ಲಿ ಶ್ರೇಷ್ಠನಾದ ಉದ್ಭಟನ ಹೃದಯ ಕಮಲದಲ್ಲಿ ಜ್ವಲಿಸುವ ಅಲ್ಲಮಪ್ರಿಯನಾದ ಪಂಪಾಪತಿಯೆ ನನ್ನನ್ನು ಕೊನೆಯಿಲ್ಲದ ಪ್ರೀತಿಯಿಂದ ಕಾಪಾಡು.

ಇದು ಸಕಲ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸುವ [ಅವರ] ಕಿರೀಟದ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳ ಮೊತ್ತದಿಂದ ಉದ್ಭವಿಸಿದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀ ಗುರು ವಿರೂಪಾಕ್ಷನ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರ ಪಕ್ಷಿಯಂತೆ ಕಾತರನಾಗಿರುವ ಸೋಮರಾಜೇಂದ್ರನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಹತ್ತನೆಯ ಆಶ್ವಾಸವಾದ ರಾತ್ರಿ ವಿಹಾರ ವರ್ಣನೆಯು ಮುಗಿಯಿತು.

# ಹನ್ನೊಂದನೆಯ ಆಶ್ವಾಸಂ

ಶ್ರೀಚಂದ್ರಕಳಾಧರನಂ
ವಾಚಸ್ಪತಿನುತನನಗ್ನಿತರಣಿಸುಧಾರು।
ಗ್ಲೋಚನನಂ ಪೂಜಿಸುತುಂ
ಭೂಚಕ್ರಾಧೀಶನುದ್ಭಟಂ ರಂಜಿಸಿದಂ ॥ ೧ ॥

ಪೆರ್ಚುವನಪ್ಪುವಂ ನಲಿವನೈದೆ ಮುದಶ್ರುಗಳಿಂ ಕಪೋಲಮಂ
ಕರ್ಚುವನುರ್ಕುವಂ ಬಿಡದೆ ಪಾಡುವನಾಡುವನೊಲ್ದು ನೋಡುವಂ।
ಮೂರ್ಛೆಯೊಳೊಂದುವಂ ನುತಿಸುವಂ ಪುಟವೇಱ್ವನತಿಪ್ರಮೋದವಾಂ
ತರ್ಚಿಪನುದ್ಭಟಕ್ಷಿತಿಪನೆಂದು ಸುಧಾಂಶುಕಲಾವತಂಸನಂ ॥ ೨ ॥

ತನುವಂ ರೋಮಾಂಚನಕ್ಕಿತ್ತಮರ್ದರಸನೆಯಂ ಸ್ತೋತ್ರಕೊಲ್ದಿತ್ತು ಮೇಣ್ಚೇ
ತನಮಂ ತನ್ಮೂರ್ತಿಗಿತ್ತಕ್ಷಿಗಳನೊಗುವ ಹರ್ಷಾಶ್ರುಗಳ್ಗಿತ್ತು ವೇದಾಂ।
ತನಿಕಾಯಸ್ತುತ್ಯನಂ ಶಂಕರನನಭವನಂ ಶಾಂತನಂ ಪೂಜಿಸುತ್ತುಂ
ಜನನಾಥಾಗ್ರೇಸರಂ ರಾಜಿಸಿದನಕಲುಷಂ ಘೂರ್ಜರಕ್ಷೋಣಿಪಾಲಂ ॥ ೩ ॥

ಇಂತುದ್ಭಟನಗಕನ್ಯಾ
ಕಾಂತನನರ್ಚಿಸುತ್ತುಮಿರೆ ರಥಾಂಗೌಘದ ರಾ।
ಗಂ ತಲೆದೋರ್ಪವೊಲಿಂದ್ರಾ
ಶಾಂತದೊಳರುಣಾರುಣಾಂಶು ಪೊಣ್ಮಿದುದಾಗಳ್ ॥ ೪ ॥

೧. ಮಂಗಳವನ್ನುಂಟುಮಾಡುವ ಶಿವನನ್ನು ವಾಚಸ್ಪತಿಯಿಂದ ಸ್ತುತಿಸಲ್ಪಟ್ಟವನನ್ನು ಅಗ್ನಿ, ಸೂರ್ಯ, ಚಂದ್ರರನ್ನು ಕಣ್ಣಾಗಿ ಹೊಂದಿರುವವನನ್ನು ಪೂಜಿಸುತ್ತ ಉದ್ಭಟ ಮಹಾರಾಜನು ಶೋಭಿಸಿದನು. ೨. ಉಬ್ಬುವ, ಅಪ್ಪುವ, ನಲಿವ, ಆನಂದಾಶ್ರುಗಳಿಂದ ಕೆನ್ನೆಯನ್ನು ಚೆನ್ನಾಗಿ ತೊಳೆಯುವ, ಉತ್ಸಾಹ ಕುಂದದೆ ಹಾಡುವ, ಆಡುವ, ಪ್ರೀತಿಯಿಂದ ನೋಡುವ, ಮೂರ್ಛೆಯನ್ನು ಹೊಂದುವ, ಸ್ತುತಿಸುವ, ಕಾಂತಿಗೊಳ್ಳುವ - ಹೀಗೆ ಅತ್ಯಾನಂದ ಹೊಂದಿ ಶಿವನನ್ನು ಉದ್ಭಟ ಮಹಾರಾಜನು ಪೂಜಿಸುವನು. ೩. ಶರೀರವನ್ನು ರೋಮಾಂಚನಕ್ಕೆ ಕೊಟ್ಟು, ಹೊಂದಿದ ನಾಲಗೆಯನ್ನು ಸ್ತೋತ್ರಕ್ಕೆ ಪ್ರೀತಿಯಿಂದ ಇತ್ತು ಚೇತನವನ್ನು ಆ ಮೂರ್ತಿಗೆ ಕೊಟ್ಟು, ಕಣ್ಣುಗಳನ್ನು ಸುರಿವ ಆನಂದಾಶ್ರುಗಳಿಗೆ ಇತ್ತು, ಉಪನಿಷತ್ತುಗಳಿಂದ ಸ್ತುತಿಸಲ್ಪಟ್ಟವನನ್ನು, ಶಂಕರನನ್ನು, ಅಭವನನ್ನು, ಶಾಂತನನ್ನು ಪೂಜಿಸುತ್ತ ಕಳಂಕರಹಿತನೂ, ರಾಜರುಗಳಲ್ಲಿ ಮುಖ್ಯನಾದವನೂ ಆದ ಘೂರ್ಜರ ಮಹಾರಾಜನು ಶೋಭಿಸಿದನು. ೪. ಹೀಗೆ ಉದ್ಭಟನು ಪಾರ್ವತೀವಲ್ಲಭನಾದ ಶಿವನನ್ನು ಪೂಜಿಸುತ್ತಿರಲು

ಇಂದಿರದೆಸೆವೆಣ್ಣೆನ್ನನೆ
ಬ್ಟಿಂದಪನೆಂದೊಲ್ದು ಪೂಜಿಸಿದುರುಕುಂಕುಮದ।
ಣ್ಪಂದೆನಲರುಣೋದಯಮಿರ
ದಂದು ವಿಜೃಂಭಿಸಿದುದ್ಯೆದೆ ಕೆದಱುತೆ ಕೆಂಪಂ ॥ ೫ ॥

ಮತ್ತಮಾಸಮಯದೊಳ್,

ಕತ್ತಲೆ ಬೀಱುಕ್ಕೊಡೆ ತಾರಗೆ
ಗಳ್ತೇಜಂ ಗುಂದೆ ಕೊಱಗೆ ಚಾರುಚಕೋರಂ।
ಗಳ್ತವೆ ಬಾಡೆ ಕುವಲಯಂ
ಮಾರ್ತಾಂಡಂ ಪ್ರಾಚ್ಯಾಚಳಮನೆಟ್ಟಿಂದಡರ್ದಂ ॥ ೬ ॥

ನಳಿನಸಮಾಜಮುಳ್ಳಲರೆ ತಣ್ಣೆಲರೊಯ್ಯನೆ ತೀಡೆ ಚಕ್ರಸಂ
ಕುಳಮುರುಲೀಲೆಯಿಂ ನೆರೆಯೆ ಮೆಲ್ಲನೆ ಪಾಱೆ ವಿಹಂಗರಾಜಿ ಕೆಂ।
ಬೆಳಗಖಿಲೋರ್ವಿಯಂ ಪರೆದು ತೆಕ್ಕನೆ ತೀವೆ ನಿಳಿಂಪರಾಟದಿಶಾ
ಚಳಶಿಖರಾಗ್ರದೊಳ್ಬೆಳಗುತೊಪ್ಪಿದನಂದು ಕರಂ ದಿವಾಕರಂ ॥ ೭ ॥

ದೇವಕುಲೇಂದ್ರನುಪ್ಪರಿಗೆಯಗ್ಗದ ಕಾಂಚನಕುಂಭದಂತೆ ಚೆ
ಲ್ವಾವರಿಸಿರ್ಪಿನಂ ಮಿಱುಪ ಸಿಂದುರದಣ್ಪೊರೆದಾದಮೊಪ್ಪುವೈ।
ರಾವತಕುಂಭದಂತೆ ದಿವಿಜೇಂದ್ರದಿಶಾಸರದಲ್ಲಿ ತೋರ್ಪ ಚೆಂ।
ದಾವರೆಯಂತೆ ರಂಜಿಸಿದುದುಜ್ವಳಿಪಂಬುಜಮಿತ್ರಮಂಡಲಂ ॥ ೮ ॥

ಜಕ್ಕವಕ್ಕಿಗಳಿಗೆ ಸಂತೋಷವಾಗುವಂತೆ ಆಗ ಪೂರ್ವ ದಿಕ್ಕಿನಲ್ಲಿ ಸೂರ್ಯನ ಕೆಂಗಿರಣಗಳು ಪ್ರಕಟಗೊಂಡವು. ೫. ಪೂರ್ವದಿಕ್ಕೆಂಬ ಸ್ತ್ರೀಯು ಪ್ರಿಯನು ಬರುತ್ತಿರುವನೆಂದು ಪ್ರೀತಿಯಿಂದ ಶ್ರೇಷ್ಠವಾದ ಕುಂಕಮದ ಲೇಪನದಿಂದ ಪೂಜಿಸಿದಳೊ ಎನ್ನುವಂತೆ ಅರುಣೋದಯವು ಕೆಂಬಣ್ಣವನ್ನು ಚೆನ್ನಾಗಿ ಕೆದರುತ್ತ ಶೋಭಿಸಿತು. ವ॥ ಮತ್ತೆ ಅದಲ್ಲದೆ, ೬. ಕತ್ತಲೆಯನ್ನು ಬೀಳ್ಕೊಡಲು ನಕ್ಷತ್ರಗಳು ಕಾಂತಿಗುಂದಲು, ಮನೋಹರವಾದ ಚಕೋರ ಪಕ್ಷಿಗಳು ಕೊರಗಲು, ಕನ್ನೈದಿಲೆಗಳು ಚೆನ್ನಾಗಿ ಬಾಡಲು ಸೂರ್ಯನು ಪೂರ್ವದಿಕ್ಕಿನಲ್ಲಿರುವ ಪರ್ವತಕ್ಕೆ ಬಂದು ಅದನ್ನೇರಿದನು. ೭. ಕಮಲಗಳ ಸಮೂಹವು ಚೆನ್ನಾಗಿ ಅರಳಲು, ತಂಗಾಳಿಯು ಮೆಲ್ಲನೆ ಬೀಸಲು, ಚಕ್ರವಾಕ ಪಕ್ಷಿಗಳು ವಿಲಾಸದಿಂದ ಕೂಡಲು, ಪಕ್ಷಿಗಳ ಮೊತ್ತವು ಮೆಲ್ಲನೆ ಹಾರಲು, ಕೆಂಪನೆಯ ಕಿರಣಗಳು ಸಕಲಲೋಕವನ್ನು ಹರಡಿ ಥಕ್ಕನೆ ತುಂಬಲು ಪೂರ್ವಾಚಲದ ಶಿಖರದ ತುದಿಯಲ್ಲಿ ಸೂರ್ಯನು ಚೆನ್ನಾಗಿ ಬೆಳಗುತ್ತ ಶೋಭಿಸಿದನು. ೮. ದೇವೇಂದ್ರನ ಉಪ್ಪರಿಗೆಯ ಶ್ರೇಷ್ಠ ಚಿನ್ನದ ಕಳಶದಂತೆ ಚೆಲುವಿಕೆಯನ್ನು ತಳೆದು, ಕೇಸರಿ ಬಣ್ಣದ ಲೇಪನವನ್ನು ಹೊಂದಿ ಚೆನ್ನಾಗಿ ಶೋಭಿಸುವ [ದೇವೇಂದ್ರನ ಆನೆಯಿಂದ] ಐರಾವತದ ಕುಂಭಸ್ಥಲದಂತೆ, ಪೂರ್ವದಿಕ್ಕೆಂಬ ಕೊಳದಲ್ಲಿನ ಚೆಂದಾವರೆಯಂತೆ

ಸ್ಫುಟಪೂರ್ವದಿಗ್ವನಿತೆಯು
ದ್ಭಟನರ್ಚಿಪಲಿಂಗಕೊಲ್ದು ತೋರ್ಪುರುರತ್ನೋ
ತ್ಕಟದರ್ಪಣಮೆನಲೆಸೆದುದು।
ಪಟುರುಚಿಯಂ ಪರಪುತುಂ ದಿವಾಕರಬಿಂಬಂ ॥ ೯ ॥

ಮತ್ತಮದಲ್ಲದಾಸಮಯದಲ್ಲಿ ಸಮುದ್ರಕ್ಕೆ ವಿದ್ರುಮಲತಾನಿಕರಂ ಶೋಣಾದ್ರಿಗೆ ಮಾಣಿಕ್ಯಂ ಕೊಳಕ್ಕೆ ಕೋಕನದಂ ಜಂಬೂನದಿಗೆ ಜಾಂಬೂನದಂ ಸಲ್ಲಲಿತವನಕ್ಕೆ ಪಲ್ಲವಂ ತಟಾಕಕ್ಕೆ ತರಳಪಲ್ಲವಂ ದಿಕ್ಕರಿಕುಂಭಕ್ಕೆ ದಿವ್ಯಸಿಂದೂರಂ ಭೂತರುಣೀಮಣಿಗೆ ಪೀತಾಂಬರಂ ತಾನಾಗಿ ಸಮಸ್ತದಿಗಂತರಾಳಂಗಳೊಳುರ್ವಿ ಕೊರ್ವಿ ಪರ್ವಿದುದೆಳೆವಿಸಿಲ್॥

ಅಂತುಮಲ್ಲದೆಯುಂ,

ಪೂರ್ವದಿಶಾವಧೂಮಣಿ ಸಮಂಚಿತಕಾಂಚನಕುಂಭದೊಳ್ ಸಮಂ
ತುರ್ಪುವ ಕುಂಕುಮಾಂಬುವನೆತೀವಿ ಕರಂ ಸವಿಲಾಸಮುರ್ವಲಂ
ದುರ್ವಿಯೆನಿಪ್ಪ ಪೆಣ್ಮಣಿಯ ಮೇಲನುರಾಗದೆ ಸೂಸಿದಂತೆವೊ
ಲ್ಪರ್ವಿದುದಂಬುಜಾತಸಖಜಾತಘನಾನತನೂತನಾತಪಂ ॥ ೧೦ ॥

ಇಂತೆಳೆವಿಸಲಂ ಸಮಸ್ತದೆಸೆಯೊಳ್ ಪರಪುವರ್ಕಮಂಡಲಂ ಚಂದ್ರಕಲಾವತಂಸಂಗಿದಿರದೆ ದೆಸೆವೆಣ್ಣೆಡಿದೆತ್ತುವುತ್ತಮರತ್ನ ನೀರಾಜನದಂತಿರಲಂಬುಜಬಾಂಧವನಂ ಷೋಡಶೋಪಚಾರಂಗಳಿಂ ಪೂಜೆಯಂ ಮಾಡಿ ನೋಡಿ ನಿಜಸುಖದೊಳೋಲಾಡಿ ಪಾಡಿ ಕೊಂಡಾಡಿ ತಣೆದು ಕುಣಿದು ಮಣಿದು ಮಗುಳ್ದಿಘಹರಂಗರ್ಪಿಸಿದ ಶ್ರೀಗಂಧತಾಂಬೂಲಮಂ ಕೈಕೊಂಡು ಶಿವನಂ ಬೀಟುಕ್ಕೊಂಡು ದೇಗುಲಮಂ ಪೊಱಮಟ್ಟೆಟ್ಟಿಂದರಮನೆಯಂ ಪೊಕ್ಕತ್ಯಾನಂದದಿಂದಿರುತಿರುತ್ತೊಂದು ಸಮಯದಲ್ಲಿ,

ಪ್ರಜ್ವಲಿಸುವ ಸೂರ್ಯಮಂಡಲವು ಶೋಭಿಸಿತು. ೯. ಸ್ಫುಟವಾದ ಪೂರ್ವದಿಗಂಗನೆಯು ಉದ್ಭಟನು ಪೂಜಿಸುವ ಲಿಂಗಕ್ಕೆ ಪ್ರೀತಿಯಿಂದ ತೋರುವ ಶ್ರೇಷ್ಠರತ್ನಗಳಿಂದ ಕೂಡಿದ ಕನ್ನಡಿಯೊ ಎನ್ನುವಂತೆ ತೀಕ್ಷ್ಣವಾದ ಕಿರಣಗಳನ್ನು ಹರಡುತ್ತ ಸೂರ್ಯಬಿಂಬವು ಕಣ್ಣಿಗೆ ಅಂದವಾಗಿ ಕಂಡುಬಂದಿತು. ವ॥ ಮತ್ತೆ ಅದಲ್ಲದೆ, ಆ ಸಮಯದಲ್ಲಿ ಸಮುದ್ರಕ್ಕೆ ಹವಳದ ಬಳ್ಳಿಗಳ ಸಮೂಹ, ಕೆಂಪು ಪರ್ವತಕ್ಕೆ ಮಾಣಿಕ್ಯ, ಕೊಳಕ್ಕೆ ಕೆಂದಾವರೆ, ಜಂಬೂನದಿಗೆ ಚಿನ್ನ, ಮನೋಹರವಾದ ಉದ್ಯಾನವನಕ್ಕೆ ಚಿಗುರು, ಕೆರೆಗೆ ಎಳೆಯ ತಳಿರು, ದಿಗ್ದಂತಿಗೆ ದಿವ್ಯ ಸಿಂಧೂರ, ಭೂಕಾಂತೆಗೆ ಪೀತಾಂಬರ - ಇವು ಹೊಂದಿಕೆಯಾಗಿ ಸಕಲ ದಿಕ್ಕುಗಳಲ್ಲಿ ಎಳೆಯ ಬಿಸಿಲು ಉಬ್ಬಿಕೊಬ್ಬಿ ಹರಡಿತು. ಅದಲ್ಲದೆ, ೧೦. ಪೂರ್ವದಿಕ್ಕೆಂಬ ಸುಂದರಿಯು ಶ್ರೇಷ್ಠವಾದ ಚಿನ್ನದ ಕಳಶದಲ್ಲಿ ಚೆನ್ನಾಗಿ ತುಳುಕುವ ಕೆನ್ನೀರನ್ನು ತುಂಬಿ ಅತ್ಯಾನಂದದಿಂದ ಉಬ್ಬಿ ಅಂದು ಭೂಮಿಯೆಂಬ ಸುಂದರಿಯ ಮೇಲೆ ಪ್ರೀತಿಯಿಂದ ಚೆಲ್ಲಿದಂತೆ ಸೂರ್ಯನಿಂದ ಹೊಮ್ಮಿದ ತೀಕ್ಷ್ಣವಾದ ಕಿರಣಗಳು ಹರಡಿದುವು. ವ॥ ಹೀಗೆ ಎಳೆಯ ಬಿಸಿಲನ್ನು ಎಲ್ಲಾ ದಿಕ್ಕುಗಳಲ್ಲಿ ಹರಡುವ ಸೂರ್ಯಮಂಡಲವು ಚಂದ್ರನ ಕಾಂತಿಯನ್ನು ಆಭರಣವಾಗುಳ್ಳವನಿಗೆ ಎದಿರಿನಲ್ಲಿ ದಿಗ್ವನಿತೆಯು ಎತ್ತುವ ಉತ್ತಮ ರತ್ನದ ಆರತಿಯಂತಿರುವ ಸೂರ್ಯನನ್ನು ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ ಎಂಬ ಹದಿನಾರು

ಸೌಂದರವತಿಯೊಡನತ್ಯಾ
ನಂದಂ ಬಡೆದಮರ್ದ ಹರ್ಮ್ಯತಳದೊಳ್ಸಲೆ ನಿ।
ಷ್ಪಂದಾವಧಾನಿಯುದ್ಭಟ
ನಂದು ಕರಂ ಲೆತ್ತವಾಡುತುಂ ರಂಜಿಸಿದಂ ॥ ೧೧ ॥

ನೋಟಂ ತೋರ್ಪ ಬೆಡಂಗನೀಯೆ ಸರಸಾಲಾಪವ್ರಜಂ ಪೆರ್ಚೆ ನ
ಲ್ನೋಟಂ ಗಾಡಿಯಿನ್ನೆಂದೆ ತುಳ್ಕೆ ದರಹಾಸಂ ಪೊಣ್ಮೆ ಚಂಚದ್ಭ್ರುಕು
ಟ್ಯಾಟೋಪಂ ಸುವಿಲಾಸಮಂ ಪಡೆಯಲತ್ಯಾನಂದದಿಂ ಲೆತ್ತಮಂ
ಮಿಟುಂಜವ್ವನಮೊಪ್ಪುವೋಪಳೊಡನಾಡುತ್ತಿರ್ದನಂದುದ್ಭಟಂ ॥ ೧೨ ॥

ಸಖಿಯರಿರದಾಟಮಂ ಶಶಿ
ಮುಖಿ ಸೌಂದರದೇವಿಗಱುಪಲೊಸೆದೀಕ್ಷಿಸುತುಂ।
ಸುಖಿಮಯನಾಡುತೆ ಲೆತ್ತಮ
ನಖಿಲಕಲಾಭರಣನೆಸೆದನುದ್ಭಟದೇವಂ ॥ ೧೩ ॥

ನೆಗಳ್ದೀರೈದುಱುನೆಟ್ಟೆ ಯಿರ್ದುಗಮುಮಂ ಚೌಪಂಚಿ ಯಿರ್ಪಂಚಿ ಯಿ
ತ್ತಿಗದೊಳ್ಭದ್ರಿಕೆ ಕಚ್ಚೆ ಚೌಕದುಗಮಂ ಚೌಪಂಚಿ ಬಾ ಯೆಂದು ತ।
ನ್ಮೃಗಶಾಬಾಕ್ಷಿಸುಧರ್ಮಪುತ್ರಿನರರಾಟ್ಚಂದ್ರೋದ್ಭಟೋರ್ವೀಧವ
ರ್ಸೊಗಸುಣ್ಮಲ್ ಕರೆಯುತ್ತೆ ಲೆತ್ತಮನಲಂಪಂಬೆತ್ತು ತಾವಾಡಿದರ್ ॥ ೧೪ ॥*

ಬಗೆಯ ಉಪಚಾರಗಳಿಂದ ಪೂಜೆಯನ್ನು ಮಾಡಿ ನೋಡಿ ಆ ಸುಖದಲ್ಲಿ ಓಲಾಡಿ ಹಾಡಿ ಹೊರಳಿ ತಣಿದು ಕುಣಿದು ಮಣಿದು ಮತ್ತೆ ಶಿವನಿಗೆ ಅರ್ಪಿಸಿದ ಶ್ರೀಗಂಧ ತಾಂಬೂಲವನ್ನು ಸ್ವೀಕರಿಸಿ ಶಿವನನ್ನು ಬೀಳ್ಕೊಂಡು ದೇವಾಲಯದಿಂದ ಹೊರಬಂದು ಮನೆಯನ್ನು ಪ್ರವೇಶಿಸಿ ಅತ್ಯಾನಂದದಿಂದ ಇರುತ್ತಲಿರಲು ಒಂದು ದಿನ, ೧೧. ಸೌಂದರವತಿಯೊಡನೆ ಅತ್ಯಾನಂದ ಹೊಂದಿ ಭವನದಲ್ಲಿರುತ್ತ ವೇದಾದಿಗಳನ್ನು ಅಧ್ಯಯನ ಮಾಡಿದ ಉದ್ಭಟನು ಚೆನ್ನಾಗಿ ಪಗಡೆಯಾಡುತ್ತ ಶೋಭಿಸಿದನು. ೧೨. ನೋಟವು ಕಾಣುವಂತೆ ವಿಲಾಸವನ್ನುಂಟುಮಾಡಲು, ಸರಸ ಮಾತುಗಳು ಹೆಚ್ಚಲು ಸವಿಯಾದ ನೋಟವು ಚೆಲುವನ್ನು ಚೆನ್ನಾಗಿ ಹೊರಸೂಸಲು, ಮಂದಹಾಸವು ಹೊಮ್ಮಲು, ಚಂಚಲವಾದ ಹುಬ್ಬಿನ ಆಟಾಟೋಪವು ಲಾವಣ್ಯವನ್ನು ಹೊಂದಲು ತುಡಿವ ಜವ್ವನದಿಂದ ಶೋಭಿಸುವ ಪ್ರಿಯಳೊಡನೆ ಅತ್ಯಾನಂದದಿಂದ ಉದ್ಭಟನು ಪಗಡೆಯಾಡುತ್ತಿದ್ದನು. ೧೩. ಗೆಳತಿಯರಿರದ ಆಟವನ್ನು ಚಂದ್ರಮುಖಿ ಸೌಂದರದೇವಿಗೆ ತಿಳಿಸಲು ಪ್ರೀತಿಯಿಂದ ನೋಡುತ್ತ ಸುಖಮಯನೂ, ಸಕಲ ಕಲೆಗಳ ಆಭರಣನೂ ಆದ ಉದ್ಭಟನು ಪಗಡೆಯಾಡುತ್ತ ಶೋಭಿಸಿದನು. ೧೪. ಪ್ರಸಿದ್ಧವಾದ ಎರಡು ಐದು, ನೆಟ್ಟಿ, ಇರ್ದುಗ, ಚೌಪಂಚಿ, ಇರ್ಪಂಚಿ, ಇತ್ತಿಗದಲ್ಲಿ ಭದ್ರಿಕೆ ಹೊಡೆಯಲು ಚೌಕ, ದುಗ, ಚೌಪಂಚಿ ಬಾ ಎಂದು ಜಿಂಕೆಮರಿಯ ನೋಟದ ಸುಧರ್ಮ ಮಹಾರಾಜನ ಪುತ್ರಿ ಹಾಗೂ ರಾಜರುಗಳಲ್ಲಿ ಚಂದ್ರನಂತಿರುವ ಉದ್ಭಟ ಮಹಾರಾಜ ಇವರುಗಳು ಸೊಗಸು

---

* ಪದ್ಯ ೧೪ ರಿಂದ ೨೦ ರವರೆಗಿನ ಪದ್ಯಗಳು ಪಗಡೆಯಾಟದ ವರ್ಣನೆಯಾಗಿದ್ದು, ಇದರಲ್ಲಿ ಬರುವ ಆ ಆಟಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದಗಳು ದ್ವಂದ್ವಾರ್ಥವನ್ನೊಳಗೊಂಡಿವೆ.

ಬಿಡು ತಿಗದುಗಪಂಚಿಯನೊ
ಡ್ಡಡಸಿದ ಚಾರಿಯನೆ ಪೊಯ್ದು ಗುಣಿಸಾರೈದು।
ಗ್ಗಡದಿಂ ತ್ರಿಗುಣಿಪುದೆನಿಪ್ಪ
ನುಡಿ ನೆಗಟಿಲ್ ಲೆತ್ತವಾಡಿದರ್ ದಂಪತಿಗಳ್ ॥ ೧೫ ॥

ಮತ್ತಮದಲ್ಲದೆ,

ಥಾಳದ ಬೆಂಬಱಿವಿಡಿದು ಥ
ಡಾಳಿಸೆ ದೃಗ್ರುಚಿ ಸುಧರ್ಮಸುತೆ ಸರಸವಚಃ।
ಕೇಳಿಯದೊಪ್ಪಿರೆ ಧರಣೀ
ಪಾಲಕನೊಡನೊಲ್ದು ಲೆತ್ತವಾಡುತ್ತೆಸೆದಳ್ ॥ ೧೬ ॥

ಇಂತತಿಹರ್ಷಂಬೆತ್ತು ಲೆತ್ತಮನಾಡುವ ವೃತ್ತಸ್ತನಿಸೌಂದರವತಿಯೊಡನುದ್ಭಟಂ ಲೆತ್ತಮನಾಡುತ್ತೆಸೆದಿರ್ದಂ॥

ಅದೆಂತೆಂದೊಡೆ,

ಪೊಱಗಕ್ಷನಿಗ್ರಹಂ ಮೇ
ಣ್ದಱಿಸಂದೊಳಗಕ್ಷನಿಗ್ರಹಂ ತೊಲಗದಿರ।
ಲ್ಪೊಱಗೊಳಗದಕ್ಷನಿಗ್ರಹ
ಮುಱಿ ರಾಜಿಸೆ ರಾಜಯೋಗಿಯುದ್ಭಟನೆಸೆದಂ ॥ ೧೭ ॥

ಮದಮಾದಿಚೌಕಮುದ್ಯದ್ವಸನಮದು ವಲಂ ನಿಟ್ಟಿಸಲ್ಭಾವಿಕಂ ಚೌ
ಕದುಗಂ ಚೌಪಂಚಿ ಪಂಚೇಂದ್ರಿಯಮುರುಕರಣಂ ತೋರ್ಪ ತೀವಂಚಕಂ ಮೇ।
ಣ್ಪೊದಟ್ಟಿಂಚತ್‌ಭದ್ರೆ ಮತ್ತಂ ತ್ರಿಮಲಹರಮುಮಂ ರಂಜಿಪೀರೈದದಾಗಲ್
ಮುದಮಂ ತಾಳ್ದೀಕ್ಷಿಸುತ್ತೆಸೆಯೆ ಮಹಿವರಂ ಲೆತ್ತಮಂ ಕಣ್ಗೆತಂದಂ ॥ ೧೮ ॥

ಪ್ರಕಟಗೊಳ್ಳುವಂತೆ ಕರೆಯುತ್ತ ಸಂತೋಷಗೊಂಡು ಪಗಡೆಯಾಡಿದರು. ೧೫. ತಿಗ ದುಗ ಪಂಚಿಯನ್ನು ಬಿಡು, ಕಾಯಿಯನ್ನು ನಡೆಸಿ ಕವಿದ ಚಾರಿಯನ್ನು ಹೊಡೆ, ವಿಚಾರಮಾಡಿ ಗುಣಿಸು, ಅತಿಶಯವಾಗಿ ತ್ರಿಗುಣಿಸು ಎಂಬ ನುಡಿಯುಂಟಾಗುವಂತೆ ದಂಪತಿಗಳು ಪಗಡೆಯಾಡಿದರು. ವ॥ ಮತ್ತೆ ಅದಲ್ಲದೆ, ೧೬. ಪಗಡೆಯ ದಾಳದ ಹಿಂದೆಯೇ ಕಣ್ಣ ಕಾಂತಿ ಥಳಥಳಿಸಲು ಸೌಂದರಿಯ ಸರಸ ಮಾತುಗಳ ಚೆಲುವು ಶೋಭಿಸಿರಲು ಮಹಾರಾಜನೊಡನೆ ಪ್ರೀತಿಯಿಂದ ಪಗಡೆಯಾಡುತ್ತ [ಅವಳು] ಅಂದಗೊಂಡಳು. ವ॥ ಹೀಗೆ ಅತ್ಯಾನಂದವನ್ನು ಹೊಂದಿ ಪಗಡೆಯಾಡುವ ತುಂಬು ಮೊಲೆಯ ಸೌಂದರವತಿಯೊಡನೆ ಉದ್ಭಟನು ಪಗಡೆಯಾಡುತ್ತ ಶೋಭಿಸಿದ್ದನು. ಅದು ಹೇಗೆಂದರೆ, ೧೭. ಹೊರಗೆ ಪಗಡೆಯ ಆಟದ ದಾಳದ ಮೇಲೆ ಹತೋಟಿ, ಒಳಗೆ ನಿಶ್ಚಯಿಸಿ ಇಂದ್ರಿಯದ ಮೇಲೆ ಹತೋಟಿ. ಈ ಹೊರ-ಒಳಗಿನ ಹತೋಟಿ ಹೋಗದಂತೆ ಚೆನ್ನಾಗಿ ಶೋಭಿಸಿ ರಾಜಯೋಗಿಯಂತೆ ಉದ್ಭಟನು ತೋರಿದನು. ೧೮. ಪಗಡೆಯಾಟದ ಚೌಕದ ಶ್ರೇಷ್ಠವಾದ ವಸ್ತ್ರವು ಮದವೇ ಮೊದಲಾದ ಅರಿಷಡ್ವರ್ಗಗಳು. ಅದಷ್ಟೇ ಅಲ್ಲದೆ, ನೋಡಲು ಮತ್ತು ಪರಿಭಾವಿಸಲು ಚೌಕ ದುಗ ಚೌಪಂಚಿಗಳು [ಮೊದಲಾದವು] ಪಂಚೇಂದ್ರಿಯಗಳು. ಕಣ್ಣಿಗೆ ಕಾಣುವ ತೀವಂಚಕ ಹಾಗೂ ಎದ್ದುಕಾಣುವ ಭದ್ರೆ ಕಾಯಗಳು. ಮತ್ತೆ ಮನೋಹರವಾದ

ನಾಡೀತ್ರಯಮಧ್ಯದೊಳಡೆ
ಯಾಡುವೆಲರ್ಗೆತ್ತುರುಳ್ಚುವಂ ಥಾಳಮನಾ।
ನಾಡೆಱೆಯನಾಪಲಕದೊ
ಳ್ಮೂಡಿದ ರೇಖಾತ್ರಯಾಂತರಾಳದೊಳೊಲವಿಂ ॥ ೧೯ ॥

ತನುಗುಣರಾಜಿಯಂ ಬಿಡದೆ ತಟ್ಗಿಸಿ ಪೆರ್ಚಿಸಿ ಸದ್ವಿವೇಕಮಂ
ಘನಮೆನೆ ಪೂರ್ಣಸೌಖ್ಯದಿರವಂ ಪಡೆವಂತೆ ಪೊದಟ್ದಿ ಸಾರಿಯಂ।
ಮನಮೊಸೆದಂದು ಪೊಯ್ದು ಮಿಗೆ ಥಾಳದ ಲೆತ್ತಮನೈದೆ ಕಂಡು ಭೋಂ
ಕನೆ ನಲಿದೊಡ್ಡಿದಚ್ಚನೊಲವಿಂ ಗೆಲುತುಂ ಧರಣೀಶನೊಪ್ಪಿದಂ ॥ ೨೦ ॥

ಇಂತುಂ ಮುದದಿಂ ಬಾಹ್ಯಾ
ಭ್ಯಂತರದೊಳ್ಬಿಡದೆ ಕರಂ ಲೆತ್ತಮನಾಡು।
ತ್ತುಂ ತರುಣಿಯ ಮುಖಚಂದ್ರಮ
ನಂ ತಳ್ವದೆ ನೋಡಿ ನಕ್ಕನುದ್ಭಟದೇವಂ ॥ ೨೧ ॥

ಲೆತ್ತಮನಾಡುತ್ತುಂ ರಾ
ಜೋತ್ತಮನುದ್ಭಟಮಹೀಧವಂ ನಗಲಾಗಲ್।
ವೃತ್ತಸ್ತನಿ ಸೌಂದರಿ ಕಂ
ಡೆತ್ತಣವಿಹಾರಮೆನುತ್ತುಮಚ್ಚರಿದಳೆದಳ್ ॥ ೨೨ ॥

ನಿಬ್ಬೆರಗುವಟ್ಟು ಸೌಂದರಿ
ಯೊಬ್ಬುಳಿಗೊಂಡಳದುಣ್ಮದೀಕ್ಷಿಸಿ ನೃಪನಂ।
ಬಿಬ್ಬೋಕಂ ಕುಡಿವರಿಯಲ್
ನಿಬ್ಬೆಗದೆ ನಿನಗಕಾರಣಹಸನಮದೆಂದಳ್ ॥ ೨೩ ॥

ಈರೈದು (=ಇರ್ಪಂಚಿ) ಆಣವ ಮಾಯಾ ಕಾರ್ಮಿಕ ಮಲಗಳನ್ನು ಪರಿಹರಿಸುವವುಗಳು. ಹೀಗಿರಲು ಅವುಗಳನ್ನು ಸಂತಸದಿಂದ ನೋಡುತ್ತ ಮಹಾರಾಜನು ಪಗಡೆಯನ್ನು ಬಿಡಲು ಕಣ್ಣಿನ ಬಳಿಗೆ ತಂದನು. ೧೯. ಮಹಾರಾಜನ ಹಣೆಯಲ್ಲಿ ಥಾಳವಾಗಿ ಮೂಡಿದ ಮೂರು ರೇಖೆಗಳು ಮೂರು ನಾಡಿಗಳ ನಡುವೆ ಸಂಚರಿಸುವ ಪ್ರಾಣವಾಯುವೆಂದು ಭಾವಿಸಿ ದಾಳವನ್ನು ಉರುಳಿಸುವನು. ೨೦. ಶರೀರದ ಸಹಜಗುಣಗಳನ್ನು ಬಿಡದೆ ತಗ್ಗಿಸಿ, ಸದ್ವಿವೇಕವನ್ನು ಹೆಚ್ಚಿಸಿ, ಪೂರ್ಣಸುಖದ ಸ್ಥಿತಿಯನ್ನು ಪಡೆಯುವಂತೆ ಪ್ರಸಿದ್ಧವಾದ ಪಗಡೆಕಾಯಿಯನ್ನು ಪ್ರೀತಿಯಿಂದ ಹೊಡೆದು ವಿಶೇಷ ಕಾಂತಿಯುಕ್ತವಾದ ದಾಳವನ್ನು ನೋಡಿ ಅತ್ಯಾನಂದದಿಂದ ಬಿಟ್ಟು ಎದುರಾದ ಪಗಡೆಯನ್ನು ಸಂತಸದಿಂದ ಗೆಲ್ಲುತ್ತ ಮಹಾರಾಜನು ಶೋಭಿಸಿದನು. ೨೧. ಹೀಗೆ ಸಂತೋಷದಿಂದ ಹೊರ ಒಳಗೆ ಬಿಡದೆ ಚೆನ್ನಾಗಿ ಪಗಡೆಯಾಡುತ್ತ ಸೌಂದರಿಯ ಮುಖವೆಂಬ ಚಂದ್ರನನ್ನು ತಡಮಾಡದೆ ನೋಡಿ ಉದ್ಭಟದೇವನು ನಕ್ಕನು. ೨೨.ಪಗಡೆಯಾಡುತ್ತ ರಾಜರಲ್ಲಿ ಉತ್ತಮನಾದ ಉದ್ಭಟ ಮಹಾರಾಜನು ನಗಲು, ಆಗ ತುಂಬು ಮೊಲೆಯ ಸೌಂದರಿ ಅದನ್ನು ನೋಡಿ ಇದೆಲ್ಲಿಯ ನಗು ಎಂದು ಅಚ್ಚರಿಗೊಂಡಳು. ೨೩. ಅತ್ಯಾಶ್ಚರ್ಯಗೊಂಡ ಸೌಂದರಿಯು ಅದು ಒಟ್ಟುಗೂಡಿ ಹೊರಸೂಸುವಂತೆ ರಾಜನನ್ನು ನೋಡಿ, ಹುಸಿ ಮುನಿಸು ಹಬ್ಬಲು,

ಇರುಳೇಂ ತಪ್ಪಿದುದೋ ಲಸನ್ಮದನಕೇಳೀಕೌಶಲಂ ಲೆತ್ತದೊಳ್
ಪಿರಿದಾಂ ಸೋಲ್ತೆನೊ ಮಾಣದನ್ಯವಿಮಲಾಂಭೋಜಾತಪತ್ರಾಕ್ಷಿ ಮಾ।
ಟ್ಟುರುಬಿಬ್ಬೋಕದಲಂಪಿನಿಂಪು ಮನಮಂ ತಾಂ ನೆಟ್ಟುದೋ ಪೇಱೆನು
ತ್ತಿರಿದಾಸೌಂದರಿ ನೂಂಕಿ ಸಾರಿಗಳನುದ್ಯತ್ಕೋಪಮಂ ತಾಳಿದಳ್ ॥ ೨೪ ॥

ಈಪರಿಯಿಂ ಲೆತ್ತಮನುೞಿ
ದಾಪೆಣ್ಮಾಣಿ ಕೋಪಮಂ ತಳೆದು ಬೆಸಗೊಳಲಾ।
ಭೂಪಾಲಕನೀಕ್ಷಿಸಿ ಕೇ
ಳೋಪಳೆ ನೀನುಂಟು ನಗೆಗೆ ಕಾರಣಮೆಂದಂ ॥ ೨೫ ॥

ಎನೆ ಕೇಳ್ದುದ್ಭಟಭೂಮೀ
ಶನ ವಾಕ್ಯಮನೆಲೆ ಮಹೀಶ ತತ್ಕಾರಣಮಂ।
ಮನಮೊಸೆದೆನಗುಸುರ್ವುದೆನ
ಲ್ಜನಪತಿ ಸೌಂದರಿಗೆ ಮಗುಳ್ದು ತಾನಿಂತೆಂದಂ ॥ ೨೬ ॥

ಏಣಾಕ್ಷಿ ತ್ವತ್ಪ್ರಸಂಗಕ್ಕೊಗೆದ ನಗೆಯಿದಲ್ತಲ್ತು ತಾನೋಹಿಲಾಖ್ಯಂ
ಮೇಣೊರ್ವಂ ಕೂರ್ತು ಸೌರಾಷ್ಟ್ರಕಪರಿವೃಢನಂ ಶಾಂತನಂ ಶಂಭುವಂ ಗೀ।
ರ್ವಾಣಶ್ರೀನಾಥನಂ ಮೆಚ್ಚಿಸಿ ನಿಜತನುವಂ ನಾಡೆ ಧೂಪಾಗ್ನಿಗಿತ್ತ
ಕ್ಷೀಣಾನಂದಾಬ್ಧಿ ಕೈಲಾಸಕಿರದೆ ಗಮಿಸಲ್ಕಂಡು ನಕ್ಕೇಂ ವಧೂಟೀ ॥ ೨೭ ॥

ವಿಪುಲತರಾಯಾಸಂಬ
ಟ್ಟುಪಮೆಗೆ ಸಿಲ್ಕದ ಮಹೇಶನಂ ಮೆಚ್ಚಿಸಿ ಮೇ।
ಣಪವರ್ಗಕ್ಕೊರ್ವನೆ ಪೋ
ದಪನದಱಿಂ ನಕ್ಕೆನಿಂದುಮಂಡಲವದನೇ ॥ ೨೮ ॥

ಸೌಮ್ಯಮೂರ್ತಿಯಾದ ನೀನು ನಗಲು ಕಾರಣವೇನು ಎಂದು ಕೇಳಿದಳು. ೨೪. ಕತ್ತಲೆ ಏನಾದರೂ ತಪ್ಪಿತೆ? ಪಗಡೆಯಾಟಕ್ಕಿಂತ ಮನ್ಮಥ ಕೇಳಿಯಲ್ಲಿ ಚದುರು ಹೆಚ್ಚು. ನಾನು ಸೋತೆನೊ? ಇಲ್ಲವೆ, ಬೇರೆ ಕಮಲಾಕ್ಷಿಯೋರ್ವಳು ಮಾಡುವ ವಿಶೇಷವಾದ ಹುಸಿ ಮುನಿಸಿನ ಸೊಗಸು ಹಾಗೂ ಅದರ ಸವಿ ಮನಸ್ಸನ್ನೇನಾದರೂ ನಾಟಿತೊ ಹೇಳು ಎಂದು ನಿಲ್ಲದೆ ಆ ಸೌಂದರಿಯು ಪಗಡೆಕಾಯಿಗಳನ್ನು ತಳ್ಳಿ ಹೆಚ್ಚಿನ ಕೋಪವನ್ನು ತಾಳಿದಳು. ೨೫. ಈ ರೀತಿ ಪಗಡೆಯಾಡುವುದನ್ನು ಬಿಟ್ಟು ಆ ಸುಂದರಿಯು ಕೋಪಿಸಿಕೊಂಡು ಪ್ರಶ್ನಿಸಲು, ಮಹಾರಾಜನು ಅದನ್ನು ನೋಡಿ ಪ್ರಿಯಳೆ ನೀನೀಗ ಕೇಳು, ನಗೆಗೆ ಕಾರಣವುಂಟು ಎಂದನು. ೨೬. ಹಾಗೆನ್ನಲು ಉದ್ಭಟ ಮಹಾರಾಜನ ಮಾತನ್ನು ಕೇಳಿ, "ಎಲೆ ಮಹಾರಾಜ ಅದರ ಕಾರಣವನ್ನು ಮನವೊಲ್ದು ನನಗೆ ಹೇಳುವುದು" ಎನ್ನಲು, ಮಹಾರಾಜನು ಸೌಂದರಿಗೆ ಮತ್ತೆ ಹೀಗೆಂದನು. ೨೭. ಜಿಂಕೆಯ ನೋಟವನ್ನು ಕಣ್ಣುಗಳಲ್ಲಿ ಹೊಂದಿರುವವಳೆ, ಆ ಸಂದರ್ಭದಲ್ಲಿ ಮೂಡಿದ ನಗೆಗೆ ಇದು ತಾನೇ ಕಾರಣ: "ಎಲೆ ಸುಂದರಿ, ಓಹಿಲನೆನ್ನುವವನು ಸೌರಾಷ್ಟ್ರಕ್ಕೆ ಒಡೆಯನು. ಆತ ಶಾಂತನೂ ಗೀರ್ವಾಣಶ್ರೀಗೆ ಪತಿಯೂ ಆದ ಶಂಭುವನ್ನು ಮೆಚ್ಚಿಸಿ ತನ್ನ ದೇಹವನ್ನು ಧೂಪಾಗ್ನಿಗೆ ಇತ್ತು, ಆ ಕ್ಷಯಿಸದ ಆನಂದಸಾಗರನು ಕೈಲಾಸಕ್ಕೆ ತಡಮಾಡದೆ ಹೋಗುತ್ತಿರಲು ಅದನ್ನು ನೋಡಿ ನಕ್ಕೆನು." ೨೮. ಚಂದ್ರಮುಖೀ,

ಎಂದೆನೆ ನೃಪವಚನಕ್ಕಾ
ನಂದಿಸಿ ಧರಣೇಶ ತದ್ಗುಣಾಗ್ರಣಿ ತಾನಾ।
ರೆಂದೆಂಬುದನೆನಗಱುಪೆನೆ
ಸೌಂದರಿಗಿಂತೆಂದನುದ್ಭಟಕ್ಷಿತಿಪಾಲಂ ॥ ೨೯ ॥

ಕಂಜಾಂಬಕೆ ಕೇಳ್ಬಡಗಲ್
ರಂಜಿಪುದು ವಿಲಾಸಮೆಂಬ ನಗರಮದಕ್ಕಾ।
ಣ್ಮಾಂ ಜನಪಾಗ್ರಣಿ ನಿಷ್ಕಂ
ಭಂ ಜಸಮಂ ಪಡೆದಲಂಪುವಡೆದೆಸೆದಿರ್ಪಂ ॥ ೩೦ ॥

ತ್ಯಾಗಂ ಶಿವಪದಭಕ್ತಿ ಸು
ಭೋಗಂ ಸತ್ಕೀರ್ತಿ ವಿಕ್ರಮಂ ಸೌಭಾಗ್ಯಂ।
ನಾಗರತೆ ಕಳೆಗಳೊಂದೊಂ
ದಾಗಿ ಕರಂ ಮೂರ್ತಿವೆತ್ತವೋಲವನೆಸೆವಂ ॥ ೩೧ ॥

ಕತಿಪಯವತ್ಸರಮಾಭೂ
ಪತಿ ರಾಜ್ಯಶ್ರೀಯಲಂಪುವಡೆದಿರುತಿರುತುಂ।
ಸುತರಿಲ್ಲದ ಸಿರಿಯ ಫಲವೆ
ನುತೆ ಬುಧರಂ ಬರಿಸಿ ಕೇಳ್ದನಂದೊಂದುದಿನಂ ॥ ೩೨ ॥

ವರಸುತರಿಲ್ಲದವಂಗಾ
ಪರಲೋಕಮದಿಲ್ಲ ನೀವಿದಕ್ಕುಜ್ಜುಗಮಂ।
ಪಿರಿಯರ್ಪೇೞ್ವುದೆನಲ್ತ
ದ್ಧರಣೇಶಂಗೆ ನುಡಿದರಾಧರಣೀದೇವರ್ ॥ ೩೩ ॥

ಅತ್ಯಾಯಾಸವನ್ನು ಹೊಂದಿ ಹೋಲಿಕೆಗೆ ಸಿಗದ ಮಹೇಶನನ್ನು ಮೆಚ್ಚಿಸಿ ಮೋಕ್ಷಕ್ಕೆ ಒಬ್ಬನೆ ಹೋಗುತ್ತಿರುವನು. ಆದಕಾರಣ ನಾನು ನಕ್ಕೆನು. ೨೯. ಹಾಗೆ ಹೇಳಲು, ಮಹಾರಾಜನ ಮಾತಿಗೆ ಸಂತೋಷಪಟ್ಟು, "ಮಹಾರಾಜಾ, ಆ ಗುಣಾಗ್ರಣಿ ಯಾರೆಂಬುದನ್ನು ತಿಳಿಸು" ಎನ್ನಲು ಸೌಂದರಿಗೆ ಉದ್ಭಟ ಮಹಾರಾಜನು ಹೀಗೆಂದನು. ೩೦. ಕಮಲಾಕ್ಷಿ ಕೇಳು, ಉತ್ತರ ದಿಕ್ಕಿನಲ್ಲಿ ವಿಲಾಸವೆಂಬ ನಗರವು ಶೋಭಿಸಿರುವುದು. ಅದಕ್ಕೆ ನಿಷ್ಕಂಭನೆಂಬ ಮಹಾರಾಜನು ಒಡೆಯನಾಗಿ ಯಶಸ್ಸನ್ನು ಪಡೆದು ಸಂತೋಷದಿಂದಿರುವನು. ೩೧.ತ್ಯಾಗ, ಶಿವನ ಪಾದಗಳಲ್ಲಿ ಭಕ್ತಿ, ಚೆನ್ನಾದ ಭೋಗ, ಸತ್ಕೀರ್ತಿ, ಪರಾಕ್ರಮ, ಸೌಭಾಗ್ಯ, ಸುಸಂಸ್ಕೃತಿ, ಕಳೆ ಇವು ಒಂದೊಂದಾಗಿ ಸೊಗಸಾಗಿ ರೂಪಗೊಂಡಂತೆ ಅವನು ಶೋಭಿಸುವನು. ೩೨. ಹಲವಾರು ವರುಷ ಆ ಮಹಾರಾಜನ ರಾಜ್ಯಲಕ್ಷ್ಮಿಯು ಮೇಲ್ಮೆಯನ್ನು ಪಡೆದು ಇರುತ್ತ ಒಂದು ದಿನ ಮಕ್ಕಳಿಲ್ಲದ ಸಂಪತ್ತಿನಿಂದೇನು ಫಲ ಎಂದು ವಿದ್ವಾಂಸರನ್ನು ಕರೆಯಿಸಿ ಕೇಳಿದನು. ೩೩. ಒಳ್ಳೆಯ ಮಕ್ಕಳಿಲ್ಲದವರಿಗೆ ಪರಲೋಕವಿಲ್ಲ. ಹಿರಿಯರಾದ ನೀವು ಇದಕ್ಕೆ ಮಾಡಬೇಕಾದ ಕಾರ್ಯವೇನೆಂಬುದನ್ನು ಹೇಳಬೇಕು ಎಂದು ಹೇಳಲು ಆ ಬುಧರು

ಶಿವನಂ ಪೂಜಿಸಲಾತ್ಮೋ
ದ್ಭವರಪ್ಪರೆನಲ್ತದುರ್ವೀಪಾಲಂ ಗಿರಿಜಾ।
ಧವನಂ ಪೂಜಿಸಿ ಮೆಚ್ಚಿಸಿ
ಕುವರನನೊಲ್ದೊರ್ವನಂ ಪಡೆದನಬ್ಜಾಕ್ಷೀ ॥ ೩೪ ॥

ಆತನುಜಂಗೋಹಿಲನೆಂ
ದೋತೊಲ್ಪೆಸರಿತ್ತು ದೊರೆಯಲುರುವೈರಾಗ್ಯಂ।
ಸಾತಿಶಯಮೆನಿಸಿ ಬಳೆಯಲ್
ಪೋತಂ ತದ್ಬಾಲನೈದೆ ಬಳೆಯುತ್ತೆಸೆದಂ ॥ ೩೫ ॥

ಅಂತಕಮರ್ದನಭಕ್ತಿಸ
ಮಂತಱಿವು ವಿರಕ್ತಿ ಗೂಡಿ ಮುಪ್ಪುರಿಗೊಂಡೋ।
ರಂತೆ ಬಳೆವಂತೆ ಬಳೆದಂ
ಸಂತಸದಿಂದೋಹಿಲಂ ಸುವರ್ಣಲತಾಂಗೀ ॥ ೩೬ ॥

ನಳನಳಿಸಿ ವಿರತಿಯೆಂದೆಂ
ಬೆಳಸಸಿ ಬೆಳೆವಂತೆ ಬಳೆಯುತಿರ್ಪಿನಮತ್ಯು।
ಜ್ವಳಷೋಡಶವರ್ಷಂ ಬರೆ
ವಿಳಸದ್ರಾಕೇಂದುವಂತಿರೋಹಿಲನೆಸೆದಂ ॥ ೩೭ ॥

ಶಂಭುಪದಾಬ್ಜಷಟ್ಚರಣನೋಹಿಲನಾಗ ವಿರಕ್ತಿಮಾರ್ಗವಿ
ಸ್ರಂಭಮನಂ ನಿಜಾಂಗವಿಜಿತಾಂಗಜವಿಗ್ರಹನಾಕುಮಾರಕಂ।
ತಾಂ ಭವಮಾಲೆಗಳ್ಕಿ ಮಿಗೆ ಬಳ್ಕಿರಲಾತನ ತಾತನಾದ ನಿ
ಷ್ಕಂಭಮಹೀಶನೊಂದುದಿನದೊಳ್ ದಿವಮಂ ಪಡೆದಂ ಮೃಗೇಕ್ಷಣೇ ॥ ೩೮ ॥

ಮಹಾರಾಜನಿಗೆ ಹೀಗೆಂದು ನುಡಿದರು. ೩೪. ಕಮಲಾಕ್ಷೀ, ಶಿವನನ್ನು ಪೂಜಿಸಿದರೆ ಮಕ್ಕಳು ಹುಟ್ಟುವರು ಎಂದು ಬುಧರು ಹೇಳಲು ಮಹಾರಾಜನು ಶಿವನನ್ನು ಪೂಜಿಸಿ ಮೆಚ್ಚಿಸಿ ಒಬ್ಬ ಮಗನನ್ನು ಪಡೆದನು. ೩೫. ಆ ಮಗನಿಗೆ ಓಹಿಲನೆಂದು ಪ್ರೀತಿಯಿಂದ ಒಳ್ಳೆಯ ಹೆಸರಿಟ್ಟು ತೀವ್ರವಾದ ವೈರಾಗ್ಯ ಪ್ರಾಪ್ತವಾಗಲು, ಅತಿಶಯವಾಗಿ ಅದು ಬೆಳೆಯಲು ಆ ಎಳೆಯ ಬಾಲಕನೂ ಚೆನ್ನಾಗಿ ಬೆಳೆಯುತ್ತ ಶೋಭಿಸಿದನು. ೩೬. ಶಿವಭಕ್ತಿ, ಸುಜ್ಞಾನ, ವಿರಕ್ತಿ ಇವು ಕೂಡಿ ಮೂರು ಹುರಿಗಳು ಜೊತೆಗೊಂಡು ಚೆನ್ನಾಗಿ ಬೆಳೆಯುವಂತೆ ಸುವರ್ಣ ಬಳ್ಳಿಯಂತಹ ಶರೀರದ ಓಹಿಲನು ಸಂತಸದಿಂದ ಬೆಳೆದನು. ೩೭. ಕೋಮಲವಾಗಿ ವಿರಕ್ತಿಯೆಂಬ ಎಳೆಯ ಸಸಿಯು ಬೆಳೆಯುವಂತೆ ಓಹಿಲನು ಬೆಳೆಯುತ್ತಿರಲು ಅತಿ ಉಜ್ವಲವಾದ ಹದಿನಾರನೆಯ ವಯಸ್ಸು ಪ್ರಾಪ್ತವಾಗಲು ಶೋಭಾಯಮಾನವಾದ ಹದಿನಾರು ಕಲೆಗಳಿಂದ ಕೂಡಿದ ಹುಣ್ಣಿಮೆಯ ಚಂದ್ರನಂತೆ ಓಹಿಲನು ಅಂದವಾಗಿ ಕಂಡನು. ೩೮. ಜಿಂಕೆಯ ಕಣ್ಣಿನಂತೆ ನೋಟವುಳ್ಳವಳೇ, ಶಿವನ ಪಾದಕಮಲಗಳಲ್ಲಿ ದುಂಬಿಯಾಗಿರುವ ಓಹಿಲನು ವಿರಕ್ತಿ ಮಾರ್ಗದಲ್ಲಿ ವಿಶ್ವಾಸವುಳ್ಳವನೂ ತನ್ನ ರೂಪಿನಿಂದ ಮನ್ಮಥನನ್ನು ಸೋಲಿಸಿ ಮದನಂತಿರುವನೂ ಆದ ಆ ಕುಮಾರನು ಹುಟ್ಟು ಸಾವುಗಳ ಚಕ್ರಕ್ಕೆ ಹೆದರಿ ವಿಶೇಷವಾಗಿ

ಮಿಗೆ ಪಂಚತ್ವಮನೈದಿದಾಮಹಿಪನಿಷ್ಕಂಭಾಂಗಮಂ ತಂದು ಮೆ
ಲ್ಲಗೆ ಚಂಚಚ್ಚಿತಿವಹ್ನಿಗರ್ಪಿಸಿ ಯಬಲ್ವಾಮಿತ್ರರಂ ನೋವ ಮಂ।
ತ್ರಿಗಳಂ ಶೋಕಿಪ ಕಾಂತೆಯರ್ಕಳನತಿಕ್ಲೇಶಿಷ್ಟ ಪೌರರ್ಕಳಂ
ಬಗೆಗೊಂಡೀಕ್ಷಿಸುತೋಹಿಲಂ ಬೆರಗುವಟ್ಟಿಂತೆಂದನಬ್ಜಾನನೇ ॥ ೩೯ ॥

ಏನಿಂದೆಲ್ಲರ್ಗೆ ದುಃಖಂ ಬೆಸಸೆನಗರಸೇನಾದನೆಂದುಂ ನತಾಮಾ
ತ್ಯಾನೀಕಂ ಕೇಳ್ದೊಡಂತಾಕುವರನ ನುಡಿಯಂ ನಾಡೆ ಸಂತಾಪಿಸುತ್ತುಂ।
ಭೂನಾಥಂ ಕಾಲಧರ್ಮಂಬಡೆದನೆನೆ ನರರ್ಗಿಂತೆ ಸಾವೆಂದೊಡೊಂದಿ
ತ್ತಾನಂದಸ್ವಾಂತರಂದೋಹಿಲನ ವಚನಮಂ ಕೇಳುತಿಂತೆಂದನಾಗಳ್ ॥ ೪೦ ॥

ಅಕ್ಕಟ ರಾಜನಂದನನ ಮುಗ್ಧತೆಯೆಂತದೊ ತಾನೆನುತ್ತವ
ರ್ಬಿಕ್ಕುತಬುತ್ತುಮೆಲ್ಲಜನಕೀನಿಧನಂ ಬಿಡದೆಂದು ಪೇಟ್ ತ।
ದ್ವಾಕ್ಕಳಿಕಾಳಿಗೇಳ್ದೆನಗಮುಂಟೇ ಯೆನಲ್ಕಡು ನಂದಿ ಕುಂದಿ ಸ
ಮ್ಯಕ್ಕುಲದೀಪಕಂಗೆ ಮಗುಟ್ದಿಂದುಸಿರ್ದರ್ಸಚಿವರ್ವಿಷಾದದಿಂ ॥ ೪೧ ॥

ಸಸಿದಲೆಯಂ ನಿಮಿರ್ಚಿದುರುಕಲ್ಪನೆಯಂ ಪರಿಲಂಘಿಸಲ್ಕಮಂ
ತಸುರಹರಾದಿದೇವತತಿಗಾಗದೆನಲ್ದುರಿತೌಘಮೊಂದಿದೀ।
ವಸುಧೆಯ ಜೀವಗಳ್ಗಟೆವನೆಂತುಟು ಲಂಘಿಸಲೆಂದು ತಾವ್ ಕೂ
ರ್ತುಸಿರ್ದರಮಾತ್ಯರೋಹಿಲನೃಪಂಗೆ ಚಕೋರಕಿಶೋರಲೋಚನೇ ॥ ೪೨ ॥

ಬಾಗಿ ಇರುತ್ತಿರಲು ಆತನ ತಾತನಾದ ನಿಷ್ಕಂಭ ಮಹಾರಾಜನು ಒಂದು ದಿನ ಸ್ವರ್ಗಸ್ಥನಾದನು. ೩೯. ಕಮಲಮುಖೀ, ಚೆನ್ನಾದ ಸಾವನ್ನು ಪಡೆದ ಆ ನಿಷ್ಕಂಭ ಮಹಾರಾಜನ ಶರೀರವನ್ನು ತಂದು ಮೆಲ್ಲನೆ ಹೊಳೆವ ಚಿತೆಯ ಬೆಂಕಿಗೆ ಅರ್ಪಿಸಿ ದುಃಖಿಸುವ ಸಂಕಟಪಡುವ ಮಂತ್ರಿಗಳ, ಶೋಕಿಸುವ ಸ್ತ್ರೀಯರುಗಳ, ಅತಿಯಾಗಿ ದುಃಖಿಸುವ ಪ್ರಜೆಗಳ [ನೋವನ್ನು] ಮನಸ್ಸಿಗೆ ತಂದುಕೊಂಡು ನೋಡುತ್ತ ಓಹಿಲನು ಅಚ್ಚರಿಗೊಂಡು ಹೀಗೆಂದನು. ೪೦. ಇಂದು ಎಲ್ಲರಿಗೆ ದುಃಖವೇಕೆ? ಎಂದು ನಗರಸೇನಾದನೆಂಬ ಮುಖ್ಯಮಂತ್ರಿಯನ್ನು ಕೇಳಲು, ಆ ಕುಮಾರನ ಮಾತನ್ನು ಕೇಳಿ ಅತಿಶಯವಾಗಿ ದುಃಖಿಸುತ್ತ ಮಹಾರಾಜನು ಮರಣಹೊಂದಿದನು ಎನ್ನಲು ಮನುಷ್ಯರಿಗೆ ಸಾವು ಇಷ್ಟೆಯೆ? ಎಂದು ಕೇಳಲು, ಆನಂದಸ್ವಾಂತರು ಆಗ ಓಹಿಲನ ಮಾತನ್ನು ಕೇಳುತ್ತ ಹೀಗೆಂದನು. ೪೧. ಅಯ್ಯೋ, ರಾಜಕುಮಾರನ ಮುಗ್ಧತೆ ಎಂತಹದು ಎಂದು ಅವರು ಬಿಕ್ಕುತ್ತ, ಅಳುತ್ತ 'ಎಲ್ಲರಿಗೆ ಈ ಸಾವು ತಪ್ಪದು' ಎಂದು ಹೇಳಿ ಚೆನ್ನಾಗಿ ನಂದಿ ಕುಂದಿ ಸಮ್ಯಕ್ ಕುಲದೀಪಕನಾದ ಓಹಿಲನಿಗೆ ಮತ್ತೆ ಮಂತ್ರಿಗಳು ದುಃಖದಿಂದ ಕೂಡಿ ಹೇಳಿದರು. ೪೨. ಎಳೆಯ ಚಕೋರದಂತೆ ಕಣ್ಣುಳ್ಳವಳೇ, ಚಂದ್ರಧರನಾದ ಶಿವನು ಮಾಡಿದ ಅತಿಶಯವಾದ ಕಲ್ಪನೆಯನ್ನು ಮೀರಲು ರಾಕ್ಷಸರಿಗೇ ಆಗಲಿ ಹರನೇ ಮೊದಲಾದ ದೇವತೆಗಳಿಗೇ ಆಗಲಿ ಆಗದು ಎಂದಿರುವಾಗ ಪಾಪಗಳ ಮೊತ್ತವನ್ನು ಹೊಂದಿರುವ ಈ ಲೋಕದ ಮಾನವರಿಗೆ ಸಾವನ್ನು ಮೀರುವುದು ಹೇಗೆ ಸಾಧ್ಯ! ಎಂದು ಓಹಿಲ

ಎನಲಾಸಚಿವರ ಮಾತಿಂ
ಗನುತಾಪಿಸುತ್ತೆ ತವಮಲನಿಧನಂ ಗೆಲಲೊಂ।
ದನುವುಂಟೇ ಪೇಳಿರಿ ಯೆಂ
ದನಿಬರ್ಮಗುಱ್ಟ್ಯೊಹಿಲಂಗೆ ತಾವಿಂತೆಂದರ್ ॥ ೪೩ ॥

ಉಂಟೇ ಸಾವಂ ಗೆಲ್ವದ
ಟುಂಟಾದೊಡೆ ಶಿವನ ಸೇವೆಗೈದುವುದೆನೆ ತಾಂ।
ಟೆಂಟಣಿಸದೆ ಬಲ್ವಿಡಿದಂ
ಮೀಂಟುಂಜವ್ವನಿಗನಾನುಡಿಗಳಂ ಮನದೊಳ್ ॥ ೪೪ ॥

ಇದೆ ತಾನೆನಗುಪದೇಶಂ
ಪದೆದೀಸಂಸ್ಕೃತಿಯನೊದೆದು ನಿಜಸುಖಸಾಮ್ರಾ।
ಜ್ಯದೊಳೋಲಾಡುವುದೆಂದಂ
ದದಿರದೆ ವಿರತಿಯನೆ ತಾಳ್ದನೋಹಿಲದೇವಂ ॥ ೪೫ ॥

ಸಕಲಪ್ರಾಣಿವ್ರಜಕ್ಕೀಜನನಮರಣವೆಂತೆಂಬ ದುರ್ವಾರದುಃಖ
ಪ್ರಕರಂ ತಾಂ ತಪ್ಪದಾನಿಂತಿದನನುಪಮನಂ ಶಂಭುವಂ ಶೀತರುಙ್ಮ।
ಸ್ತಕನಂ ಸೌರಾಷ್ಟ್ರಸೋಮೇಶ್ವರನನನಘನಂ ಪೊರ್ದಿ ಸುಟ್ಟಿಕ್ಕಿ ನಿತ್ಯಾ
ತ್ಮಕನಪ್ಪೆಂ ಮಾಣೆನೆಂದಂದತುಳವಿರತಿಯಂ ತಾಳ್ದನಂದೋಹಿಲಾಂಕಂ ॥ ೪೬ ॥

ಸಮುದಿತವಿರಕ್ತಿಯಂ ತಾ
ಳ್ದಮಲಜ್ಞಾನಾತ್ಮನೋಹಿಲಂ ಸೌರಾಷ್ಟ್ರಾ।
ಭಿಮುಖಂ ತಾನಾಗಿ ಪಲಂ
ಗಮಿಸಲ್ಕಂಡಡಿಯೊಳುರುಳ್ದುದಖಿಳಾಪ್ತಜನಂ ॥ ೪೭ ॥

ಮಹಾರಾಜನಿಗೆ ಮಂತ್ರಿಗಳು ಪ್ರೀತಿಯಿಂದ ಹೇಳಿದರು. ೪೩. ಹಾಗೆ ಹೇಳಲು, ಆ ಮಂತ್ರಿಗಳ ಮಾತಿಗೆ ಕನಿಕರಿಸುತ್ತ "ಆ ಶುದ್ಧವಾದ ಸಾವನ್ನು ಗೆಲ್ಲಲು ಮಾರ್ಗವಿದೆಯೆ ಹೇಳಿರಿ" ಎಂದು ಕೇಳಲು ಅದಕ್ಕೆ ಅವರೆಲ್ಲರೂ ಮತ್ತೆ ಓಹಿಲನಿಗೆ ಹೀಗೆಂದು ಹೇಳಿದರು. ೪೪. ಸಾವನ್ನು ಗೆಲ್ವುದು ಎಲ್ಲಿಯಾದರೂ ಉಂಟೆ? ಹಾಗೆ ಗೆಲ್ಲುವುದೇ ಆದರೆ ಶಿವನ ಸೇವೆಯನ್ನು ಮಾಡುವುದು ಎನ್ನಲು, ಅದಕ್ಕೆ ವಿರೋಧಿಸದೆ ತುಡಿವ ಯೌವನದ ಓಹಿಲನು ಆ ಮಾತನ್ನು ಮನದಲ್ಲಿ ಬಲವಾಗಿ ಹಿಡಿದನು. ೪೫. ಇದು ತಾನೆ ನನಗೆ ಉಪದೇಶ. ಈ ಸಂಸಾರವನ್ನು ಪ್ರೀತಿಯಿಂದ ಒದ್ದು ಮೋಕ್ಷ ಸಾಮ್ರಾಜ್ಯದಲ್ಲಿ ಓಲಾಡುವುದು ಎಂದು ಬಿಡದೆ ಓಹಿಲನು ವಿರಕ್ತಿಯನ್ನು ತಾಳ್ದನು. ೪೬. ಸಕಲ ಪ್ರಾಣಿ ಸಮೂಹಕ್ಕೆ ಈ ಜನನ ಮರಣಗಳೆಂಬ ಸಹಿಸಲಸಾಧ್ಯವಾದ ದುಃಖದ ಮೊತ್ತವು ತಪ್ಪದು. ನಾನು ಎಣೆಯಿಲ್ಲದವನನ್ನು, ಶಂಭುವನ್ನು, ಶೀತಲಕಿರಣಗಳನ್ನು ತಲೆಯಲ್ಲಿ ಧರಿಸಿದವನನ್ನು, ಸೌರಾಷ್ಟ್ರ ಸೋಮೇಶ್ವರನನ್ನು, ಪಾಪಗಳೇ ಇಲ್ಲದವನನ್ನು ಹೊಂದಿ ದೇಹವನ್ನು ಸುಟ್ಟುಹಾಕಿ ನಿತ್ಯಾತ್ಮಕನಾಗುತ್ತೇನೆ, ಇನ್ನು ಸುಮ್ಮನಿರುವುದಿಲ್ಲ ಎಂದು ತೀವ್ರವಾದ ವಿರಕ್ತಿಯನ್ನು ಅಂದು ಓಹಿಲನು ಹೊಂದಿದನು. ೪೭. ಶ್ರೇಷ್ಠ ವೈರಾಗ್ಯವನ್ನು ಹೊಂದಿ ಪರಿಶುದ್ಧ ಜ್ಞಾನಿಯೂ,

ಬಂದಡಿಗಳ್ಗೆ ಬೀೞ್ವ ಸತಿಯರ್ಕಳನಿಷ್ಟರನಾಪ್ತಭೃತ್ಯರಂ
ವಂದಿಗಳಂ ಚಮೂವರರನಾನಿಜಬಂಧುಗಳಂ ಸಮಂತು ನಿ।
ಷ್ಪಂದಮನಸ್ಕನೊಂದಿನಿಸು ನಿಟ್ಟಿಸದೈದೆ ಮಹಾವಿರಕ್ತಿಯಿಂ
ದಂದೊಸೆದೋಹಿಲಂ ನಡೆದನೇಣಕಿಶೋರವಿಶಾಲಲೋಚನೇ ॥ ೪೮ ॥

ಒಡಲ ಬಟಲಿಕೆಯನೆಣಿಸದೆ
ಬಿಡದುಕ್ಕುವ ಭಕ್ತಿಯಿಂದಮೋಹಿಲದೇವಂ।
ನಡೆತಂದುರುಸೌರಾಷ್ಟ್ರದ
ಪೊಡವಿಯನೊಲ್ದಿರದೆ ಪೊಕ್ಕನಂಬುಜವದನೇ ॥ ೪೯ ॥

ವರಸೌರಾಷ್ಟ್ರದ ದೇಶಮಧ್ಯದೊಳಲಂಪಂಬೆತ್ತು ರಾಜಿಪ್ಪ ಬಂ
ಧುರದೇವಾಲಯಮಂ ಮುದಂಬಡೆದು ಪೊಕ್ಕದ್ವೈತನಂ ಚಂದ್ರಶೇ।
ಖರನಂ ಶಾಂತನನೀಶನಂ ಗಿರೀಶನಂ ಸೋಮೇಶನಂ ಕಂಡು ಶಂ
ಕರ ನೀನೋವೆನುತೋಹಿಲಂ ಪೊಗೞ್ದನುದ್ಯದ್ಭಕ್ತಿಯಿಂ ಶಂಭುವಂ ॥ ೫೦ ॥

ಸಾವಿಂಗಾನಳ್ಕಿ ಗೌರೀಧವ ಭವದುರುಪಾದಾಬ್ಜಮಂ ಬಂದು ಸಾರ್ದೆಂ
ನೋವಿಂಗಾಂ ಬೆರ್ಚಿ ಲೋಕಸ್ತವ ಭವದುರುಪಾದಾಬ್ಜಮಂ ಬಂದು ಸಾರ್ದೆಂ।
ಜೀವಾಯಾಸಕ್ಕೆ ಬಿರ್ದಾಂ ಭವಹರಣ ಭವತ್ಪಾದಮಂ ಬಂದು ಸಾರ್ದೆಂ
ದೇವಾ ದೇವೇಶ ಮುಖ್ಯಾಮರತತಿನುತ ಸೋಮೇಶ ರಕ್ಷಿಪ್ಪುದೆನ್ನಂ ॥ ೫೧ ॥

ಆತ್ಮನೂ ಆದ ಓಹಿಲನು ಸೌರಾಷ್ಟ್ರಕ್ಕೆ ಎದುರಾಗಿ ಚೆನ್ನಾಗಿ ಸಾಗಲು ಆಪ್ತ ಜನರೆಲ್ಲಾ ಬಂದು ಅವನ ಪಾದಗಳ ಮೇಲೆ ಉರುಳಿದರು. ೪೮. ಜಿಂಕೆಯಮರಿಯ ನೋಟದಂತೆ ಕಣ್ಣುಳ್ಳವಳೇ, ಬಂದು ಪಾದಗಳಿಗೆ ಬೀಳುವ ಸ್ತ್ರೀಯರುಗಳನ್ನು, ಇಷ್ಟರನ್ನು, ಆಪ್ತ ಸೇವಕರನ್ನು, ಹೊಗಳುಭಟ್ಟರನ್ನು, ಸೇನಾನಿಗಳನ್ನು, ಸ್ವಬಂಧುಗಳನ್ನು ಗಟ್ಟಿ ಮನದವನಾದ ಓಹಿಲನು ಸ್ವಲ್ಪವೂ ನೋಡದೆ ಮಹಾ ವಿರಕ್ತಿಯಿಂದ ಪ್ರೀತಿಪಟ್ಟು ನಡೆದನು. ೪೯. ಕಮಲಮುಖೀ, ಶರೀರಕ್ಕಾದ ಬಳಲಿಕೆಯನ್ನು ಲೆಕ್ಕಿಸದೆ ಬಿಡದೆ ಉಕ್ಕುವ ಭಕ್ತಿಯಿಂದ ಓಹಿಲದೇವನು ನಡೆದು ಬಂದು, ವಿಶಾಲವಾದ ಸೌರಾಷ್ಟ್ರದ ಭೂಭಾಗವನ್ನು ಪ್ರೀತಿಯಿಂದ ಬಿಡದೆ ಪ್ರವೇಶಿಸಿದನು. ೫೦. ಶ್ರೇಷ್ಠವಾದ ಸೌರಾಷ್ಟ್ರದೇಶದ ಮಧ್ಯದಲ್ಲಿ ಸೊಗಸನ್ನು ಹೊಂದಿ ಶೋಭಿಸುವ ಮನೋಹರ ದೇವಾಲಯವನ್ನು ಸಂತೋಷಗೊಂಡು ಹೊಕ್ಕು ಅದ್ವೈತನೂ ಚಂದ್ರಶೇಖರನೂ ಶಾಂತನೂ ಈಶನೂ ಗಿರೀಶನೂ ಆದ ಸೋಮನಾಥನನ್ನು ಕಂಡು ಶಂಕರ ನೀನೇ ಕಾಪಾಡು ಎಂದು ಶಿವನನ್ನು ಓಹಿಲನು ಹೊಗಳಿದನು. ೫೧. ಸಾವಿಗೆ ಹೆದರಿ ಶಿವನೇ ನಿನ್ನ ವಿಶೇಷವಾದ ಪಾದಕಮಲಗಳನ್ನು ಬಂದು ಸೇರಿದೆನು. ನೋವಿಗೆ ಹೆದರಿ ಲೋಕವೆಲ್ಲ ಸ್ತುತಿಸುವ ನಿನ್ನ ಶ್ರೇಷ್ಠ ಪಾದಕಮಲಗಳನ್ನು ಬಂದು ಸಮೀಪಿಸಿದೆನು. ಜೀವದ ಆಯಾಸಕ್ಕೆ ಬಿದ್ದು ನಾನು ಹುಟ್ಟು ಸಾವುಗಳನ್ನು ಕೊನೆಗೊಳಿಸುವ ನಿನ್ನ ಪಾದವನ್ನು ಬಂದು ಸೇರಿದೆನು. ದೇವ, ದೇವರ ಒಡೆಯ, ಪ್ರಮುಖ ದೇವತೆಗಳ ಸಮೂಹದಿಂದ

ಮದದಿಂದಂ ಮೋಹದಿಂದಂ ವಿಕಲವಿಷಯದಿಂದಂ ವಿಮಾತ್ಸರ್ಯದಿಂದಂ
...........................................................
ಮದನಪ್ರಧ್ವಂಸಿಯಂಬಿಟ್ಟುರುಳ್ದುಪೊಗಟ್ಟು ಕಣ್ಗೆಟ್ಟು ಬಂದಪ್ಪಿದೆಂ ತ್ವ
ತ್ಪದಮಂ ರಕ್ಷಿಪ್ಪುದೆನ್ನಂ ಬಿಡದುರುಕೃಪೆಯಿಂ ದೇವ ಸೌರಾಷ್ಟ್ರನಾಥಾ || ೫೨ ||

ಮಿಗೆ ಚೌರಾಯಿಸಿಲಕ್ಷಯೋನಿಮುಖಸಂಜಾತಪ್ರಯಾಸಂಗಳು
ಜ್ಜುಗವಾಮಧ್ಯದೊಳುಂಬದುಃಖತತಿಯೆಂ ದೇಹಂಗಳಂ ಬಿಟ್ಟು ನೆ।
ಟ್ಟಗೆ ಸಾವಿಂದನುತಾಪಮಿಂತಿವರ ಕರ್ಮಶ್ರೇಣಿಗಾನಳ್ಕಿ ಸ
ರ್ವಗ ಸೋಮೇಶ್ವರ ಬಂದು ನಿಮ್ಮಡಿಗಳಂ ಸಾರ್ದೆಂ ಕೃಪಾಂಭೋನಿಧೀ? || ೫೩ ||

ಪುಟ್ಟುವ ಸರ್ವಯೋನಿಜರನೀಕ್ಷಿಸಿ ಸಂಸೃತಿದುಃಖದಿಂದೆ ಬಾ
ಯ್ಬಿಟ್ಟು ಪಲುಂಬುವೆಲ್ಲಜನಮಂ ನಡೆನೋಡಿ ತದೀಯಕಾಯಮಂ।
ಬಿಟ್ಟು ಕೃತಾಂತಲೋಕಮನೆ ಪೊರ್ದುವವರಂ ಸಲೆ ಕಂಡು ಕಂಡು ಕಂ
ಗೆಟ್ಟು ಭವತ್ಪದಾಂಬುಜಮನಪ್ಪಿದೆನೋವುವುದೆನ್ನನೀಶ್ವರಾ || ೫೪ ||

ವಿಧುಲೇಖೋತ್ತಂಸನೆಂದಂತಕಮದಹರನೆಂದಬ್ಜಜಾತೋತ್ತಮಾಂಗ
ಪ್ರಧೃತಾಂಚತ್ಪಾಣಿಯೆಂದಚ್ಯುತವಿಬುಧಮುಖಸ್ತುತ್ಯನೆಂದುದ್ಧಪುಷ್ಪಾ
ಯುಧದರ್ಪಧ್ವಂಸಿಯೆಂದಾಂ ಭವದುರುಚರಣಾಂಭೋಜಮಂ ನಚ್ಚಿಸಾರ್ದೆಂ
ನಿಧನಾದ್ಯುತ್ತುಂಗದುಃಖಾವಳಿಯನುರುಪಿ ಸೋಮೇಶ ರಕ್ಷಿಪ್ಪುದೆನ್ನಂ || ೫೫ ||

ಸ್ತುತಿಸಲ್ಪಡುವ ಸೋಮೇಶ ನನ್ನನ್ನು ಕಾಪಾಡುವುದು. ೫೨. ಮದದಿಂದ, ಮೋಹದಿಂದ, ಕಳವಳಕಾರಿಯಾದ ಇಂದ್ರಿಯಾಸಕ್ತಿಯಿಂದ, ವಿಶೇಷ ಮಾತ್ಸರ್ಯದಿಂದ ........................... ಮನ್ಮಥನನ್ನು ಚೆನ್ನಾಗಿ ಉರುಹಿದ ನಿನ್ನ ಪಾದಗಳಲ್ಲಿ ಬಿದ್ದು ಉರುಳಿ ಹೊಗಳಿ ಕಂಗೆಟ್ಟು ಬಂದು ನಿನ್ನ ಪಾದಗಳನ್ನು ಅಪ್ಪಿದೆನು. ದೇವ, ಸೌರಾಷ್ಟ್ರ ಸೋಮನಾಥ ನನ್ನನ್ನು ಬಿಡದೆ ಕಾಪಾಡುವುದು. ೫೩. ನಾಲ್ಕು ಲಕ್ಷ ಯೋನಿ ಮೂಲಕ ಹುಟ್ಟಿದ ಕಷ್ಟ ಕಾರ್ಯಗಳ ನಡುವೆ ಉಣ್ಣುವ ದುಃಖ ಸಮೂಹವೆ ಆಗಿದ್ದೇನೆ. ದೇಹವನ್ನು ತ್ಯಜಿಸಿ ನೇರವಾಗಿ ಸಾವಿಂದಲೇ ಕನಿಕರ ಹೀಗೆ ಈ ಕರ್ಮಗಳ ಸಾಲಿಗೆ ನಾನು ಹೆದರಿ ಸರ್ವವ್ಯಾಪಿಯಾದ ಸೋಮೇಶ್ವರನೆ, ಕೃಪಾ ಸಮುದ್ರನೆ [ನಿಮ್ಮಲ್ಲಿಗೆ] ಬಂದು ನಿಮ್ಮ ಪಾದಗಳನ್ನು ಹೊಂದಿರುವೆನು. ೫೪. ಹುಟ್ಟು ಎಲ್ಲಾ ಜೀವಿಗಳನ್ನು ನೋಡಿ ಸಂಸಾರ ದುಃಖದಿಂದ ಬಾಯ್ಬಿಟ್ಟು ಗೋಳಿಡುವ ಎಲ್ಲಾ ಜನರನ್ನು ಚೆನ್ನಾಗಿ ನೋಡಿ ತಮ್ಮ ದೇಹ ತ್ಯಜಿಸಿ ಯಮನ ಪಟ್ಟಣವನ್ನು ಹೊಂದುವವರನ್ನು ಚೆನ್ನಾಗಿ ನೋಡಿ ನೋಡಿ ಕಂಗೆಟ್ಟು ಶಿವನೇ ನಿನ್ನ ಪಾದಕಮಲಗಳನ್ನು ಅಪ್ಪಿದೆನು, ನನ್ನನ್ನು ಕಾಪಾಡುವುದು. ೫೫. ಚಂದ್ರಧರನೆಂದು, ಯಮನ ಗರ್ವವನ್ನು ನಾಶಮಾಡಿದವನೆಂದು, ಬ್ರಹ್ಮನ ಶಿರಸ್ಸನ್ನು ಹೊಳೆಯುವ ಕೈಯಲ್ಲಿ ಚೆನ್ನಾಗಿ ಧರಿಸಿದವನೆಂದು, ವಿಷ್ಣು ಮೊದಲಾದ ದೇವತೆಗಳ ಬಾಯಿಂದ ಸ್ತುತಿಸಲ್ಪಟ್ಟವನೆಂದು, ಸುಖಮೂರ್ತಿಯಾದ ಪುಷ್ಪಬಾಣ ಮನ್ಮಥನ ಅಹಂಕಾರವನ್ನು ಧ್ವಂಸಮಾಡಿದವನೆಂದು ನಾನು ನಿನ್ನ ಪಾದಕಮಲಗಳನ್ನು ನಂಬಿ ಸಮೀಪಿಸಿದೆನು. ಸೋಮೇಶನೇ ಸಾವೇ ಆದಿಯಾದ ಅತಿಶಯ ದುಃಖಗಳನ್ನು ಸುಟ್ಟು

ಎಂದಿಂತು ಸ್ತೋತ್ರಮಂ ಮಾಡಿ ತಣಿಯದೆೞ್ದಿಂದಾ ಗರ್ಭಾಗಾರಮಂ ಪೊಕ್ಕುತ್ತುಂಗಲಿಂಗಮನಾಲಿಂಗಿಸಿ ರೋಮಾಂಚನಸಂಚಯಾಂಚಿತಾಂಗನುಂ ನಿಷ್ಪಂದಮಾನಾನಂದಾಶ್ರು ಸಂದೋಹನಿಷ್ಪಂದನಯನಾರವಿಂದದ್ವಯನುಂ ಕಮನೀಯಕಂಠಸಂಜನಿತಗದ್ಗದಿತರವಾಕುಲಿತ ಸ್ತುತಿನರ್ತಿತ ಜಿಹ್ವಾಂಕುರನುಂ ನಿಖಿಲಕರಣಾದಿಗುಣಂಗಳಂ ತೊಱೆದು ಮಾಯೆಯಂ ಜಱೆದು ಕೃಷ್ಣ ಪಾಶಮಂ ಪರಿದು ಜವನದಟಂ ಮುಱೆದುಚಿದಮೃತಮಂ ಸುಱೆದು ಕರುಣಮಂ ಕಱೆದು ತನುಧರ್ಮಮಂ ಮಱೆದು ಇದು ಪಗಲಿದು ನಿಶೆ ಯಿದೆಂದಱೆಯದೆ ಇಂಗದಿರ್ವಟ್ಟಂ ಕಂಡಿಂಗದಿರ್ವಕ್ಕಿಯಂತೆ ಯರ್ಕಮಂಡಲಮಂ ಕಂಡ ಮರಾಳನಂತೆ ನಱುಗಂಪಂ ಕಂಡ ಮಱೆದುಂಬಿಯಂತೆ ಮೞೆಗಾಲಮಂ ಕಂಡೆಳೆಜಾದಿಗೆಯಂತೆ ಪಯೋಧರಮಂ ಕಂಡ ಕೇಕಿಯಂತೆ ಮುಗಿಲಂ ಕಂಡ ಜೊನ್ನೊಡಲನಂತೆ ಪೊಂಗಿ ಪೊಱೆಯೇಱೆ ಮನಂಮಾಱೆ ಗುರುತರಭಕ್ತಿರಸಭರದುರುವಣೆಯಿಂದಂ ಸೌರಾಷ್ಟ್ರಸೋಮನಾಥನ ನಪ್ಪಿಕೊಂಡು ಮುಪ್ಪುರಿಗೊಂಡ ವಿರಕ್ತಿಯಿಂದೋಹಿಲದೇವನಗಲದೆ ಯಿರೆಯಿರೆ,

ಮನಮಂ ಸರ್ವೇಶನೊಳ್ಬೆಚ್ಚಮಲತರಸುಖಕ್ಷೀರವಾರಾಸಿಯಂ ಭೋಂ
ಕನೆ ಬಿರ್ದೋಲಾಡುತಂದೋಹಿಲನೃಪನಿರಲಸ್ತಂಗತಂ ಸೂರ್ಯನಾಗಲ್।
ತನಿಮರ್ವುರ್ವಲ್ ತದೀಶಾಲಯಮನೊಲವಿನಿಂ ಸೋದಿಸಲ್ಬಂದು ಸೋಮೇ
ಶನ ಸುತ್ತಂ ನೋಡಿ ಕಂಡರ್ಶಿವನನಗಲದಾಭಕ್ತನಂ ಜೀಯ್ಯರಾಗಳ್ ॥ ೫೬ ॥

ನನ್ನನ್ನು ಕಾಪಾಡುವುದು. ವ॥ ಹೀಗೆಂದು ಸ್ತುತಿಯನ್ನು ಮಾಡಿ ತೃಪ್ತಿಗೊಳ್ಳದೆ ಎದ್ದು ಬಂದು ಆ ಗರ್ಭಗುಡಿಯನ್ನು ಹೊಕ್ಕು ಉನ್ನತವಾದ ಲಿಂಗವನ್ನು ಅಪ್ಪಿ ರೋಮಾಂಚನಗೊಂಡ ಶರೀರದಿಂದಲೂ, ಧಾರಾಕಾರವಾಗಿ ಸುರಿವ ಆನಂದದ ಕಣ್ಣೀರಿನಿಂದಲೂ, ರೆಪ್ಪೆ ಮುಚ್ಚದೆ ಅಗಲಿಸಿದ ಕಣ್ಣುಗಳಿಂದಲೂ, ಮನೋಹರವಾದ ಕಂಠದಿಂದ ಹುಟ್ಟಿದ ಗದ್ಗದ ದನಿಯಿಂದ ಕೂಡಿದ ಸ್ತುತಿಯಲ್ಲಿ ಕುಣಿವ ಕುಡಿ ನಾಲಗೆಯಿಂದಲೂ, ಎಲ್ಲಾ ಇಂದ್ರಿಯ ಚಾಪಲ್ಯಗಳನ್ನು ಬಿಟ್ಟು ಮಾಯೆಯನ್ನು ನಿಂದಿಸಿ ಕಪ್ಪು ಹಗ್ಗವನ್ನು ಹರಿದು ಯಮನ ಪೌರುಷವನ್ನು ಧ್ವಂಸಮಾಡಿ ಚಿದಮೃತವನ್ನು ಸುರಿದು, ಕರುಣವನ್ನು ಸೂಸಿ, ಶರೀರಧರ್ಮವನ್ನು ಮರೆತು, ಇದು ಹಗಲು-ರಾತ್ರಿ ಎಂಬುದನ್ನು ತಿಳಿಯದೆ ಬೆಳುದಿಂಗಳಲ್ಲಿ ಕಂಡ ಚಕೋರನಂತೆ, ಸೂರ್ಯಮಂಡಲವನ್ನು ಕಂಡ ಮರಾಳಪಕ್ಷಿಯಂತೆ, ನರುಗಂಪನ್ನು ಕಂಡ ಮರಿದುಂಬಿಯಂತೆ, ಮಳೆಗಾಲವನ್ನು ಕಂಡ ಚಾತಕಪಕ್ಷಿಯಂತೆ, ಮೋಡವನ್ನು ಕಂಡ ನವಿಲಿನಂತೆ, ಮುಗಿಲನ್ನು ಕಂಡ ಜೊನ್ನವಕ್ಕಿಯಂತೆ, ಉಬ್ಬಿ ಹುರಿದುಂಬಿ ಮನ ಪರವಶವಾಗಿ ಅತಿಶಯವಾದ ಭಕ್ತರಸೋತ್ಕಟತೆಯಿಂದ ಸೌರಾಷ್ಟ್ರ ಸೋಮನಾಥನನ್ನು ಅಪ್ಪಿಕೊಂಡು ಮೂರು ಹುರಿ ಜೊತೆಗೂಡಿದ ವೈರಾಗ್ಯದಿಂದ ಓಹಿಲದೇವನು ಅಗಲದೆ ಇರುತ್ತಿರಲು,

೫೬. ಮನಸ್ಸನ್ನು ಸರ್ವೇಶನಲ್ಲಿ ಸೇರಿಸಿ ಪರಿಶುದ್ಧವಾದ ಆನಂದದ ಹಾಲಿನ ಹೊಳೆಯಲ್ಲಿ ಒಮ್ಮೆಲೆ ಬಿದ್ದು ಓಲಾಡುತ್ತ ಓಹಿಲ ಮಹಾರಾಜನು ಇರುತ್ತಿರಲು ಸೂರ್ಯನು ಮುಳುಗಿದನು. ಸುಖ ಮೂರ್ಛೆ ಕವಿಯಲು ಆ ಶಿವಾಲಯವನ್ನು ಪ್ರೀತಿಯಿಂದ ಶೋಧಿಸಲು ಬಂದ ಒಡೆಯರುಗಳು ಸೋಮೇಶನ ಸುತ್ತ ನೋಡಿ ಶಿವನನ್ನು ಅಗಲದ ಆ ಭಕ್ತನನ್ನು

ಕಂಡೋಹಿಲನಿರವನವ
ರ್ಮಂಡೆಯನೊಲೆದೆಲೆಲೆ ಭಕ್ತ ಪೊಱಗಣ್ಗೇಱುಂ।
ದಂಡಲೆಯದೇಟಿದಿರಲು
ದ್ದಂಡನಿವಂ ನೂಂಕೆನುತ್ತೆ ಪಿಡಿದರ್ ಕರಮಂ ॥ ೫೭ ॥

ಕರಮಂ ಪಿಡಿದೋಹಿಲನಂ
ಭರದಿಂದೆಟ್ಟಿಂದು ದೇಗುಲದ ಬಾಗಿಲೊಳಂ।
ದಿರಿಸಿ ಕವಾಟಂ ಬಂಧಿಸಿ
ಪಿರಿದುಂ ಬೀಯಗಮನಿಕ್ಕಿದರ್ ತಮ್ಮಡಿಗಳ್ ॥ ೫೮ ॥

ಬೀಯಗಮನಿಕ್ಕಿ ಮಗುಟ್ದಾ
ಜೀಯರ್ಮನೆಗಳ್ಗೆ ಪೋಗಲಾಬಾಗಿಲೊಳಿ।
ರ್ದೊಯ್ಯನೆ ಸೋಮೇಶಾ ಯೆನು
ತೊಯ್ಯನೆ ಮೊಱೆಯಿಕ್ಕುತಿರ್ದನೋಹಿಲದೇವಂ ॥ ೫೯ ॥

ನಗಜಾವಲ್ಲಭ ಬಾಲಚಂದ್ರಧರ ನೀಲಗ್ರೀವ ಚಿನ್ಮೂರ್ತಿ ಸ
ರ್ವಗ ನಿರ್ಲೇಪ ನಿರೀಹ ನಿಷ್ಕಲ ನಿಜಾನಂದಾಮೃತಾಂಭೋಧಿ ಸ।
ನ್ನಿಗಮಪ್ರಸ್ತುತಪಾದಪದ್ಮಯುಗ ಸೌರಾಷ್ಟ್ರೇಶ ಸೋಮೇಶ ನೀಂ
ತೆಗಿಸೀಬಾಗಿಲ ಪೊಂಗದಂಗಳನೆನುತ್ತಂದೋಹಿಲಂ ಕೂಗಿದಂ ॥ ೬೦ ॥

ಪದೆದುತ್ತುಂಗಕವಾಟಮಂ ಪೊಡೆಯುತುಂ ಸೋಮೇಶ ನಿನ್ನುಲ್ಲಸ
ತ್ಪದಮಂ ಬಿಟ್ಟಿರಲಾರೆನೆಂದಟಲುತುಂ ಶೋಕಿಪ್ಪ ತದ್ಭಕ್ತನೊ।
ಳ್ಪೆರ್ದೆಯಂ ಕಂಡು ಶಶಾಂಕಶೋಭಿತಕಿರೀಟಂ ಸ್ವಪ್ನದೊಳ್ಬಂದು ಸ
ಮ್ಮದದಿಂ ತಮ್ಮಡಿಗಳ್ಗೆ ಪೇೞಲವರೆೞ್ಚಿತ್ತಾಗಲಾರಾತ್ರಿಯೊಳ್ ॥ ೬೧ ॥

ಕಂಡರು. ೫೭. ಓಹಿಲನ ಸ್ಥಿತಿಯನ್ನು ನೋಡಿ ಅವನ ತಲೆಯನ್ನು ಅಲುಗಾಡಿಸಿ ಎಲೆ ಭಕ್ತ ಹೊರಗಡೆಗೆ ನಡೆ ಎನ್ನಲು ಹಿಮ್ಮೆಟ್ಟದೆ ಏಳದೆ ಇರಲು ಗರ್ವಿಷ್ಠನಾದ ಇವನನ್ನು ಹೊರತಳ್ಳಿ ಎಂದು ಕೈ ಹಿಡಿದರು. ೫೮. ಕೈಹಿಡಿದು ಓಹಿಲನನ್ನು ಬೇಗನೆ ಕರೆದುತಂದು ದೇವಾಲಯದ ಬಾಗಿಲಿನಲ್ಲಿರಿಸಿ ಬಾಗಿಲನ್ನು ಮುಚ್ಚಿ ತಮ್ಮಡಿ (ಅರ್ಚಕರು)ಗಳು ಚೆನ್ನಾಗಿ ಬೀಗ ಹಾಕಿದರು. ೫೯. ಬೀಗವನ್ನು ಹಾಕಿ ಮನೆಗಳಿಗೆ ಅರ್ಚಕರು ಹಿಂತಿರುಗಲು ಆ ಬಾಗಿಲಿನಲ್ಲಿದ್ದು ಮೆಲ್ಲನೆ ಸೋಮೇಶಾ ಎನ್ನುತ್ತಾ ಓಹಿಲದೇವನು ಆರ್ತನಾದ ಮಾಡುತ್ತಿದ್ದನು. ೬೦. ಪಾರ್ವತೀ ವಲ್ಲಭನೂ, ಬಾಲಚಂದ್ರಧರನೂ, ನೀಲಕಂಠನೂ, ಚಿನ್ಮೂರ್ತಿಯೂ ಎಲ್ಲೆಡೆ ವ್ಯಾಪಿಸಿರುವವನೂ, ನಿರ್ಲೇಪನೂ, ಆಸೆಗಳೇ ಇಲ್ಲದವನೂ, ನಿಷ್ಕಲನೂ, ಪರಮ ಆನಂದಸಾಗರನೂ, ವೇದಗಳಿಂದ ಸ್ತುತಿಸಲ್ಪಡುವ ಪಾದಕಮಲಗಳನ್ನು ಹೊಂದಿರುವವನೂ ಆದ ಸೌರಾಷ್ಟ್ರದೊಡೆಯ ಸೋಮೇಶನೆ ಈ ಹೊನ್ನಿನ ಬಾಗಿಲುಗಳನ್ನು ತೆರೆಸು ಎಂದು ಓಹಿಲನು ಕೂಗಿದನು. ೬೧. ಪ್ರೀತಿಯಿಂದ ಎತ್ತರವಾದ ಬಾಗಿಲುಗಳನ್ನು ಹೊಡೆಯುತ್ತ ಸೋಮೇಶಾ ನಿನ್ನ ಚೆನ್ನಾಗಿ ಹೊಳೆಯುವ ಪಾದಗಳನ್ನು ಬಿಟ್ಟಿರಲಾರೆ ಎಂದು ಗೋಳಾಡುತ್ತ ದುಃಖಿಸುವ ಆ ಭಕ್ತನ ಅಂತರಂಗ ಶುದ್ಧತೆಯನ್ನು ನೋಡಿ ಚಂದ್ರಧಾರಿಯಾದ ಶಿವನು

ನಡೆತಂದತಿಜವದಿಂದೆಡೆ
ವಿಡದೞುತುಂ ಪೊದೞ್ವ ಭಕ್ತನಂ ಕಂಡು ಭಯಂ।
ಬಡುತೆ ಕದಂದೆಗೆದಾತ
ಮ್ಮಡಿಗಳ್ಗುಡಿವೊಗಿಸಿ ಪೋಗಲೋಹಿಲನಿತ್ತಲ್ ॥ ೬೨ ॥

ದೇಗುಲಮಂ ಮುದಂಬಡೆದು ಪೊಕ್ಕತಿಭಕ್ತಿಯಿನಪ್ರಮೇಯನಂ
ನಾಗವಿಭೂಷನಂ ನಿಖಿಲನಿರ್ಜರಪೂಜಿತಪಾದಪೀಠನಂ।
ಯೋಗಿಮನಸ್ಸರೋಜರವಿಯಂ ಶಿವನಂ ವರಸೋಮನಾಥನಂ
ಶ್ರೀಗುರುಮೂರ್ತಿಯಂ ಪರಮನಂ ಮಿಗೆ ಕೊಂಡೊಸೆದೊಪ್ಪಿದಂ ಪ್ರಿಯೇ ॥ ೬೩ ॥

ಅಪ್ಪುವನುಕ್ಕುವಂ ಕಱಗುವಂ ಪೊಱಮ್ಡೆಯೇಱುವನುರ್ಬುವಂ ಕರಂ
ತಪ್ಪದೆ ನೋಡುವಂ ಬಿಡದೆ ಪಾಡುವನುನ್ನತಗದ್ಗದೋಕ್ತಿ ತಾ।
ನೊಪ್ಪೆ ಪೊಗೞ್ವನೊಲ್ದು ಕಱ್ಪಿವಂ ಸೊಗಗಂಬನಿಯಂ ಮನೋಬ್ಜದೊ
ಳ್ಮೆಪ್ಪುರಿಗೊಂಡ ಭಕ್ತಿಭರನೋಹಿಲನಂದು ಚಕೋರಲೋಚನೇ ॥ ೬೪ ॥

ಇಂತಗಲದಾಲಿಂಗಮನಾಲಿಂಗಿಸಿಕೊಂಡುರುತರಭಕ್ತಿರಸಭರದುರುವಣೆಯಿಂ ಪಿರಿದುಂ ಮುದ್ದಿಪ ಭಕ್ತನ ಮುಗ್ಧಭಾವಮಮಂ ಕಂಡಪಾರಕೃಪಾಕರನಪ್ಪ ಸೋಮನಾಥಂ ತಲ್ಲಿಂಗದೊಳಿರ್ದೆಂತೆಂದಂ,

ಎಲೆ ನಂದನ ಕೇಳ್ನೀನೆಮ
ಗಲಸದೆ ಪನ್ನೆರಡುವತ್ಸರಂ ಗುಗ್ಗುಳಮಂ।
ನಲಿದರ್ಪಿಸಲಪವರ್ಗಾವ
ನೊಲವಿಂ ನಿನಗಿತ್ತು ಪೊರೆವೆನೆಂದನುಮೇಶಂ ॥ ೬೫ ॥

ಅರ್ಚಕರ ಕನಸಿನಲ್ಲಿ ಬಂದು ಅವರಿಗೆ ತಿಳಿಸಲು ಅವರು ಎಚ್ಚರಗೊಂಡು ಆ ರಾತ್ರಿ ವೇಳೆಯಲ್ಲಿ, ೬೨. ಬೇಗನೆ ನಡೆದುಬಂದು ಎಡೆಬಿಡದೆ ಅಳುತ್ತ ಹೊರಳಾಡುವ ಭಕ್ತನನ್ನು ನೋಡಿ ಭಯಗೊಂಡು ಬಾಗಿಲು ತೆಗೆದು ದೇವಾಲಯದ ಒಳಗೆ ಓಹಿಲನನ್ನು ಕರೆದುಕೊಂಡು ಬಿಟ್ಟು ಅರ್ಚಕರು ಹೋಗಲು, ಇತ್ತ, ೬೩. ಪ್ರಿಯೇ ದೇವಾಲಯವನ್ನು ಸಂತಸದಿಂದ ಪ್ರವೇಶಿಸಿ, ಅತಿ ಭಕ್ತಿಯಿಂದ ಅಳೆಯಲಾಗದವನನ್ನು, ನಾಗಭೂಷಣನನ್ನು, ಸಕಲ ದೇವತೆಗಳಿಂದ ಪೂಜೆಗೊಳ್ಳುವ ಪಾದಪೀಠವನ್ನು, ಯೋಗಿಗಳ ಮನಸ್ಸೆಂಬ ಕಮಲವನ್ನು ಅರಳಿಸುವ ಸೂರ್ಯನನ್ನು, ಶಿವನನ್ನು, ಪ್ರಸಿದ್ಧನಾದ ಸೋಮನಾಥನನ್ನು, ಶ್ರೀ ಗುರುಮೂರ್ತಿಯನ್ನು, ಪರಮನನ್ನು ಅತಿಶಯವಾದ ಪ್ರೀತಿಯಿಂದ ಸೇರಿ [ಓಹಿಲನು] ಶೋಭಿಸಿದನು. ೬೪. ಚಕೋರದಂತೆ ಕಣ್ಣುಳ್ಳವಳೇ, ಮನಸ್ಸೆಂಬ ಕಮಲದಲ್ಲಿ ಭಕ್ತಿಪರವಶನಾದ ಓಹಿಲನು ಭಕ್ತಿ ಜ್ಞಾನಗಳೆಂಬ ಹುರಿ ಜೊತೆಗೂಡಿದಂತೆ ಅಪ್ಪುವನು, ಹೆಚ್ಚಳಗೊಳ್ಳುವನು, ಉತ್ಸಾಹಗೊಳ್ಳುವನು, ಉಬ್ಬುವನು, ತಪ್ಪದೆ ನೋಡುವನು, ಬಿಡದೆ ಹಾಡುವನು, ಹೆಚ್ಚಿನ ಗದ್ಗದ ಧ್ವನಿ ವ್ಯಕ್ತವಾಗಲು ಹೊಗಳುವನು, ಪ್ರೀತಿಯಿಂದ ಆನಂದದ ಕಣ್ಣೀರನ್ನು ಕರೆಯುವನು. ವ॥ ಹೀಗೆ ಅಗಲದೆ ಆ ಲಿಂಗವನ್ನು ತಬ್ಬಿಕೊಂಡು ಅತಿಶಯವಾದ ಭಕ್ತಿರಸೋತ್ಕಟತೆಯಿಂದ ವಿಶೇಷವಾಗಿ ಮುದ್ದಿಸುವ ಭಕ್ತನ ಮುಗ್ಧಭಾವವನ್ನು ನೋಡಿ ಅಪಾರ ಕರುಣಾಮೂರ್ತಿಯಾದ ಸೋಮನಾಥನು ಆ ಲಿಂಗದೊಳಗಿಂದ ಹೀಗೆಂದನು, ೬೫. "ಎಲೆ ಮಗನೆ ಕೇಳು, ನೀನು ನಮಗೆ ಉದಾಸೀನಮಾಡದೆ ಹನ್ನೆರಡು ವರುಷ

ಎಂದಿಂತು ಲಿಂಗದೊಳಗಿ
ರ್ದಂದೊಳ್ನುಡಿಪೊಣ್ಮಲೋಹಿಲಂ ಕೇಳ್ದೆದ್ದಾ।
ನಂದಿಸಿ ಮಗುಟ್ದಿತ್ತಿಂದೊಲ
ವಿಂದೆಸೆದಂ ಧೂಪಮಂ ಶಿವಂಗರ್ಪಿಸುತುಂ ॥ ೬೬ ॥

ಹಿಗ್ಗುತ್ತುಂ ನಾನಾಜನ
ಮಗ್ಗದ ಮುದಮಾಂತು ತಂದ ಪೊಸಗಂಪಿಡಿದಾ।
ಗುಗ್ಗುಳಮನೋಹಿಲೋರ್ವಿಪ
ನೊಗ್ಗೊಡೆಯದ ಭಕ್ತಿಯಿಂ ಶಿವಂಗರ್ಪಿಸುವಂ ॥ ೬೭ ॥

ಪೊಚ್ಚಪೊಸಗಂಪನೀಯುತು
ಮಚ್ಚಿಗೊಳಿಪ್ಪಮಲಧೂಪಮಂ ಶಾಂತಂಗಂ।
ಚೆಚ್ಚರಿತನರ್ಪಿಸುತ್ತುಂ
ಸಚ್ಚಿನ್ಮುದವಾಂತು ರಂಜಿಸಿದನಬ್ಜಾಕ್ಷೀ ॥ ೬೮ ॥

ಇಂತೀರಾರ್ಬರಿಸಂ ಘನ
ಸಂತೋಷದೆ ಧೂಪಮಂ ಸಮರ್ಪಿಸಿ ಮಗುಟ್ದೋ।
ರಂತೆ ನಡೆತಂದು ಗಿರಿಜಾ
ಕಾಂತಂಗಿಂತೆಂದನೋಹಿಲಂ ಮೃಗನಯನೇ ॥ ೬೯ ॥

ಪನ್ನೆರಡುಂ ವತ್ಸರಮಿರ
ದುನ್ನತಗುಗ್ಗುಳದ ಸೇವೆಯಾಯ್ತಪವರ್ಗ।
ಕ್ಕೆನ್ನೆನ್ನೈದಿಸೆನಲಾ
ಪನ್ನಗಕಟಕಂ ಸುತಂಗೆ ಮಗುಟ್ದಿಂತೆಂದಂ ॥ ೭೦ ॥

ಧೂಪವನ್ನು ಸಂತಸದಿಂದ ಅರ್ಪಿಸಿದರೆ ಮೋಕ್ಷವನ್ನು ನಿನಗೆ ಕೊಟ್ಟು ನಿನ್ನನ್ನು ಕಾಪಾಡುವೆನು" ಎಂದು ಶಿವನು ನುಡಿದನು. ೬೬. ಹೀಗೆಂದು ಲಿಂಗದೊಳಗಿದ್ದಂತೆ ನುಡಿ ಹೊಮ್ಮಿ ಬರಲು ಓಹಿಲನು ಕೇಳಿ ಮೇಲೆದ್ದು ಆನಂದಿಸಿ, ಹಿಂತಿರುಗಿ ಬಂದು ಪ್ರೀತಿಯಿಂದ ಧೂಪವನ್ನು ಶಿವನಿಗೆ ಅರ್ಪಿಸುತ್ತ, ೬೭. ಹಿಗ್ಗುತ್ತ ನಾನಾ ಜನರು ಸಂತೋಷದಿಂದ ತಂದ ಹೊಸ ಸುವಾಸನೆಯ ಗುಗ್ಗುಳವನ್ನು ಓಹಿಲ ಮಹಾರಾಜನು ರೂಢಿತಪ್ಪದ ಭಕ್ತಿಯಿಂದ ಶಿವನಿಗೆ ಅರ್ಪಿಸುವನು. ೬೮. ಕಮಲಾಕ್ಷೀ, ಹೊಚ್ಚ ಹೊಸ ಸುವಾಸನೆಯನ್ನೀಯುತ್ತ ದೃಷ್ಟಿಗೆ ಒಳಗಾಗುವ ಪರಿಶುದ್ಧವಾದ ಧೂಪವನ್ನು ಶಾಂತಮೂರ್ತಿಗೆ ಬೇಗ ಬೇಗನೆ ಅರ್ಪಿಸುತ್ತ ಸಚ್ಚಿದಾನಂದವನ್ನು ಹೊಂದಿ [ಓಹಿಲನು] ಶೋಭಿಸಿದನು. ೬೯. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಹೀಗೆ ಹನ್ನೆರಡು ವರುಷ ಅತ್ಯಾನಂದದಿಂದ ಧೂಪವನ್ನು ಸಮರ್ಪಿಸಿ ಮತ್ತೆ ಒಂದೇ ಸಮನೆ ನಡೆದು ಬಂದು ಶಿವನಿಗೆ ಓಹಿಲನು ಹೀಗೆಂದನು. ೭೦. ಹನ್ನೆರಡು ವರುಷ ಬಿಡದೆ ಶ್ರೇಷ್ಠವಾದ ಧೂಪದ ಸೇವೆ ಮಾಡಿದೆನು. ಮೋಕ್ಷಕ್ಕೆ ಇನ್ನು ನನ್ನನ್ನು ಮುಟ್ಟಿಸು ಎನ್ನಲು, ಹಾವನ್ನೆ ಬಳೆಯಾಗಿ ಹೊಂದಿರುವ ಶಿವನು ಮಗನಾದ ಓಹಿಲನಿಗೆ

ಸಲ್ವ ಭಟಾಳಿ ತಂದು ಕೊಡೆ ಧೂಪಮನೊಲ್ದೆಮಗಿತ್ತು ಕಾಲನಂ
ಗೆಲ್ವೆನೆನಲ್ಕೆ ನೀಂ ಬಟಿಲದೆಂತುಟದಪ್ಪುದು ನಾಡೆ ರೊಟ್ಟಿಯಂ।
ಮೆಲ್ವವನೊರ್ವನಂಬುತತಿಯಂ ಬಿಡದೀಂಟುವನೊರ್ವನುಂಟೆ ನೋ
ಡಲ್ವರಪುತ್ರ ಪೇಟುನೆ ಬಿಗುರ್ತುಱು ಹಮ್ಮದವೋದನೋಹಿಲಂ ॥ ೭೧ ॥

ಈಪರಿಯಿಂ ಶಿವಂ ನುಡಿಯಲಾನುಡಿಯಂ ಬಗೆಗೊಂಡು ಕೂಡೆ ತ
ದ್ಭೂಪನನೇಕಸಮ್ಮದಮನಂದು ವಿಸರ್ಜಿಸಿ ನಿರ್ಮಲಾಮೃತ।
ಶ್ರೀಪತಿಕಂಬಿಯಂ ಪಡೆದು ಪೊತ್ತು ಬಟಿಲ್ಕೆಗೆ ಸಲ್ಲದುಲ್ಲಸ
ದ್ಧೂಪಮನಾಸೆಮಾಡಿ ಮಲಯಾದ್ರಿಗೆ ಮೆಲ್ಲನೆ ಬಂದನೋಹಿಲಂ ॥ ೭೨ ॥

ನಡೆತಂದು ಪೊಕ್ಕೊಡನೆ ಪೇ
ರಡವಿಯನುಟಿು ತನ್ನ ತೂಕದುರುಗುಗ್ಗುಳಮಂ।
ಕಡಿಕಡಿದು ಕಂಬಿಯೊಳ್ಬಿಡಿ
ಪಿಡಿದೊದಗಿಸಿ ಪೊತ್ತು ತಂದನೋಹಿಲದೇವಂ ॥ ೭೩ ॥

ಪೊಸಗುಗ್ಗುಳಗಂಬಿಯನಾಂ
ತಸವಸದಿಂ ಮಗುಟ್ದು ಬಂದು ಸೋಮೇಶನ ಶೋ।
ಭಿಸುವ ಮಣಿಭವನಮಂ ಸಂ
ತಸಮಂ ಪಡೆದೋಹಿಲಾಂಕನೊಳಪೊಕ್ಕಾಗಳ್ ॥ ೭೪ ॥

ತಂದು ಧೂಪದ ಕಂಬಿಯಂ ಪದೆದೊಂದು ರಂಜಿಪ ತಾಣದೊಳ್
ಕುಂದದುನ್ನತಭಕ್ತಿಯಿಂ ಮಿಗೆ ಬೈತು ಬಂದುರುಕುಂಡದೊಳ್।
ಮಿಂದು ತಾಂ ಶುಚಿಯಾಗಿ ಭಸ್ಮಮನೈದೆ ಪೂಸಿ ಮಗುಟ್ದು ಬಾ
ಲೇಂದುಜೂಟನನರ್ಚಿಸಲ್ಮನಸಂದು ತದ್ಧರಣೀಧವಂ ॥ ೭೫ ॥

ಮತ್ತೆ ಹೀಗೆಂದನು. ೭೧. ಯೋಗ್ಯರಾದ ಸೇವಕರುಗಳು ಧೂಪವನ್ನು ತಂದುಕೊಡಲು ಪ್ರೀತಿಯಿಂದ ನೀನು ಅದನ್ನು ನಮಗೆ ಕೊಟ್ಟು ಯಮನನ್ನು ಗೆಲ್ಲುವೆನೆನ್ನಲು ನೀನು ಆಯಾಸಗೊಳ್ಳದೆ ಅದು ಹೇಗೆ ಸಾಧ್ಯವಾಗುವುದು. ನೋಡಲು ಚೆನ್ನಾಗಿ ರೊಟ್ಟಿಯನ್ನು ತಿನ್ನುವವನು ಒಬ್ಬನು, ನೀರನ್ನು ಬಿಡದೆ ಕುಡಿಯುವವನು ಮತ್ತೊಬ್ಬನು ಉಂಟೆ? ಸುಪುತ್ರನೆ ಹೇಳು ಎನ್ನಲು ಅತಿಯಾಗಿ ಬೆರಗುಗೊಂಡ ಓಹಿಲನು ಮೂರ್ಛೆಹೋದನು. ೭೨. ಈ ರೀತಿ ಶಿವನು ನುಡಿಯಲು ಆ ಮಾತನ್ನು ಮನಸ್ಸಿಗೆ ತಂದುಕೊಂಡು ಅತ್ಯಾನಂದವನ್ನು ಬಿಟ್ಟು ಮಹಾರಾಜನು ನಿರ್ಮಲಾಮೃತ ಶ್ರೀಪತಿ ಕಂಬಿಯನ್ನು ಪಡೆದು ಹೊತ್ತುಕೊಂಡು ಬಳಲಿಕೆಗೆ ಒಳಗಾಗದೆ ಹೊಳೆವ ಧೂಪಕ್ಕೆ ಆಸೆಪಟ್ಟು ಓಹಿಲನು ಮೆಲ್ಲನೆ ಮಲಯ ಪರ್ವತಕ್ಕೆ ಬಂದನು. ೭೩. ಬಂದು ಕಗ್ಗಾಡನ್ನು ಪ್ರವೇಶಿಸಿ ತನ್ನ ತೂಕದ ಶ್ರೇಷ್ಠವಾದ ಧೂಪವನ್ನು ಕತ್ತರಿಸಿ ಕಂಬಿಯಲ್ಲಿ (ಅಡ್ಡೆ ಅಥವಾ ಕಾವಡಿ) ಸೇರಿಸಿ ಸೇರಿಸಿ ಓಹಿಲದೇವನು ಹೊತ್ತು ತಂದನು. ೭೪. ಹೊಸ ಧೂಪದ ಕಂಬಿಯನ್ನು ಹೊತ್ತು ಬೇಗಬೇಗನೆ ಹಿಂತಿರುಗಿ ಬಂದು ಸೋಮೇಶನ ಶೋಭಿಸುವ ಮಣಿಭವನವನ್ನು ಸಂತೋಷಗೊಂಡು ಓಹಿಲದೇವನು ಪ್ರವೇಶಿಸಿದಾಗ, ೭೫. ಪ್ರೀತಿಯಿಂದ ತಂದು ಧೂಪದ ಕಂಬಿಯನ್ನು ಹೊಳೆವ ಒಂದು

ಪೊಚ್ಚಪೊಸಪೊನ್ನಕುಂಭದೊ
ಳಚ್ಚಗೊಳಿಪ್ಪುದಮನಳವಡಿಸಿಕೊಂಡಾ ಭಾ
ಸ್ವಚ್ಚರಿತನೋಹಿಲಾಂಕಂ।
ಸಚ್ಚಿನ್ಮುದದಿಂ ಶಿವಾಲಯಮನೊಳಪೊಕ್ಕಂ ॥ ೭೬ ॥

ಗುಡಿಯಂ ಪೊಕ್ಕೀರೇಳ್ಜಗ
ದೊಡೆಯಂ ಸೋಮೇಶ್ವರಂಗೆಱಗಿ ಸಂತೋಷಂ।
ಬಡುತುಂ ಮುಂಪೂಜೆಯನಟಿ
ದೊಡರ್ಚಿದಂ ನೂತ್ನಪೂಜೆಯಂ ತದ್ಭಕ್ತಂ ॥ ೭೭ ॥

ಪೂಜಿಸಿ ನಿಳಿಂಪಸಂಕುಲ
ಪೂಜಿತನಂ ಮಗುಟ್ದು ಪೊಗೆಗೊಳಿಸಲಂದಾದಂ।
ರಾಜಿತಧೂಪಮನೊಸೆದಾ
ರಾಜೋತ್ತಮನೋಹಿಲಾಂಕನೆಂದನುವಾದಂ ॥ ೭೮ ॥

ಬಲ್ಗೆಂಡಂಗಳನಾಯ್ದು ತಂದು ಪುಟವಪ್ಪಂತೂದಿ ಸದ್ಭಕ್ತೋಕ್ತಿತೊಂ
ಗಲ್ಗೊಂಡಿರ್ಪಿನಮೊಲ್ದು ನಿಟ್ಟಿಸಿ ಸಮಂತಾನಂದಮಂ ತಾಳ್ದು ತಾಂ।
ವಲ್ಗುಶ್ರೀಗುರುಸೋಮನಾಥನಡಿಯಂ ಕೊಂಡಾಡುತುಂ ಧೂಪಮಂ
ನಲ್ಗಂಪುಣ್ಮಿರಲಾಗಳರ್ಪಿಸಿದನಾಗಂಗಾಧರಂಗಳ್ಕಱಿಂ ॥ ೭೯ ॥

ಧೂರ್ಜಟಿಯವಧಾರೆಂದೆನು
ತರ್ಜುನವರದಂಗೆ ಗುಗ್ಗುಳವನರ್ಪಿಸುತುಂ।
ತರ್ಜಿತಭವನೋಹಿಲನ
ತ್ಯೂರ್ಜಿತಮುದದಿಂ ವಿರಾಜಿಸಿದನಬ್ಜಾಕ್ಷೀ ॥ ೮೦ ॥

ಪ್ರದೇಶದಲ್ಲಿ ಕುಂದದ ಉನ್ನತ ಭಕ್ತಿಯಿಂದ ಚೆನ್ನಾಗಿ ಮರೆಮಾಡಿ ಬಂದು ಶುಭ್ರವಾದ ಕೊಳದಲ್ಲಿ ಸ್ನಾನಮಾಡಿ ಶುಚಿಯಾಗಿ ಭಸ್ಮವನ್ನು ಸೊಗಸಾಗಿ ಧರಿಸಿ ಮತ್ತೆ ಶಿವನನ್ನು ಪೂಜಿಸಬಯಸಿ ಮಹಾರಾಜನು, ೭೬. ಹೊಚ್ಚ ಹೊಸದಾದ ಚಿನ್ನದ ಕಳಶದಲ್ಲಿ ಕಣ್ಸೆಳೆಯುವ ನೀರನ್ನು ತುಂಬಿಕೊಂಡು ಆ ಶುಭ್ರಚರಿತನಾದ ಓಹಿಲದೇವನು ಸತ್‌ಚಿತ್ ಆನಂದದಿಂದ ಶಿವಾಲಯವನ್ನು ಹೊಕ್ಕನು. ೭೭. ಗುಡಿಯನ್ನು ಹೊಕ್ಕು ಹದಿನಾಲ್ಕು ಲೋಕಗಳ ಒಡೆಯನಾದ ಸೋಮನಾಥನಿಗೆ ವಂದಿಸಿ ಸಂತೋಷಗೊಂಡು ಆ ಭಕ್ತನು ಮುನ್ನವೇ ಮಾಡಿದ ಪೂಜೆಯನ್ನು ಪರಿಹರಿಸಿ ನೂತನ ಪೂಜೆಯಲ್ಲಿ ತೊಡಗಿದನು. ೭೮. ರಾಜರುಗಳಲ್ಲಿ ಉತ್ತಮನಾದ ಓಹಿಲದೇವನು, ದೇವತೆಗಳ ಸಮೂಹದಿಂದ ಪೂಜೆಗೊಂಡ ಶಿವನನ್ನು ಪೂಜಿಸಿ, ಮತ್ತೆ ಚೆನ್ನಾಗಿ ಹೊಳೆಯುವ ಧೂಪವನ್ನು ಹೊಗೆ ಕೊಡಲು ಪ್ರೀತಿಪಟ್ಟು ಸನ್ನದ್ಧನಾದನು. ೭೯. ದಪ್ಪ ಕೆಂಡಗಳನ್ನು ಆಯ್ದು ತಂದು ಪುಟಗೊಳ್ಳುವಂತೆ ಊದಿ ಸದ್ಭಕ್ತಿ ಗುಂಪುಗೂಡಿರಲು ಪ್ರೀತಿಯಿಂದ ನೋಡಿ ಅತ್ಯಾನಂದವನ್ನು ಹೊಂದಿ ಶ್ರೀ ಗುರುಸೋಮನಾಥನ ಪಾದಗಳನ್ನು ಕೊಂಡಾಡುತ್ತ ಗಂಗಾಧರನಿಗೆ ಸೊಗಸಾದ ಕಂಪು ಹೊಮ್ಮಿರುವ ಧೂಪವನ್ನು ಪ್ರೀತಿಯಿಂದ ಅರ್ಪಿಸಿದನು. ೮೦. ಕಮಲಾಕ್ಷೀ, ಶಿವನೆ ಮನಸ್ಸಿಗೆ ತಂದುಕೊ ಎಂದು ಅರ್ಜುನನಿಗೆ ಅನುಗ್ರಹಿಸಿದವನಿಗೆ ಗುಗ್ಗುಳವನ್ನು ಅರ್ಪಿಸುತ್ತ,

ಅವಧಾರ್ತರುಣೇಂದುಕಳಾಧರನೇ
ಅವಧಾರ್ಕುಸುಮಾಯುಧಸಂಹರನೇ।
ಅವಧಾರ್ಕಮನೀಯಕೃಪಾಕರನೇ
ಅವಧಾರ್ವಿಲಸದ್ಗಿರಿಜಾಧವನೇ ॥ ೮೧ ॥

ಅವಧಾರ್ಕನಕಾಚಳಕಾರ್ಮುಕನೇ
ಅವಧಾರ್ಖ ಧುನೀಯುತಮಸ್ತಕನೇ।
ಅವಧಾರ್ದಶದಿಗ್ವಿಮಲಾಂಶುಕನೇ
ಅವಧಾರ್ನಿಜಮುಕ್ತಿಫಲೋತ್ಸುಕನೇ ॥ ೮೨ ॥

ಅವಧಾಸ್ಮೃತಿಸಂಕುಳದುರ್ಲಭನೇ
ಅವಧಾರ್ನಿಖಿಲಾಗಮವಲ್ಲಭನೇ।
ಅವಧಾರ್ವಿಪುಳತ್ರಿವಿಲೋಚನನೇ
ಅವಧಾರ್ನತದುಃಖವಿಮೋಚನನೇ ॥ ೮೩ ॥

ಅವಧಾರ್ಶಂಕರ ಸೋಮನಾಥ ಘನತೇಜೋರಾಶಿ ಸದ್ಭಕ್ತ ಬಾಂ
ಧವ ಮೃತ್ಯುಂಜಯ ನೀಲಕಂಠ ನಿಖಿಲಾಮ್ನಾಯಸ್ತುತಾಂಘ್ರ್ಯಬ್ಜಮಾ।
ಧವಚಿತ್ತಾಂಬುಜಚಂಚರೀಕವಿಲಸಚ್ಚಿನ್ಮೂರ್ತಿ ಯೆಂದೋಹಿಲಂ
ನವಧೂಪಾಳಿಯನುರ್ಬುತರ್ಪಿಸಿದನಾಗಂಗಾಧರಂಗಟ್ಟಳಿಂ ॥ ೮೪ ॥

ತಿಂಗಳಲೇಖೆಯಂ ಬಿಡದೆ ಗೂಡಿದವಂಗೆ ಮಹೇಶ್ವರಂಗೆ ಲೋ
ಕಂಗಳ ನಾಯಕಂಗೆ ನಿರಘಂಗೆ ಚಿದರ್ಣವಚಂದ್ರಮಂಗೆ ಶಾ।
ಸ್ತ್ರಂಗಳಮಾಲ್ಗೈದದಭವಂಗೆ ಸಮಸ್ತಜಗನ್ನುತಂಗೆ ಸೋ
ಮಂಗೆ ಸುಧೂಪಮಂ ಮಿಗೆ ಸಮರ್ಪಿಸಿದಂ ಪದೆದೋಹಿಲಂ ಪ್ರಿಯೇ ॥ ೮೫ ॥

ಹೆದರಿಸಿದ ಶಿವನ ಮುಂದೆ ಅತಿಶಯ ಆನಂದದಿಂದ ಓಹಿಲನು ಶೋಭಿಸಿದನು. ೮೧.ಬಾಲೇಂದು ಕಳಾಧರನೇ ಮನಸ್ಸಿಗೆ ತಂದುಕೊ, ಹೂಬಾಣವನ್ನು ಸಂಹರಿಸಿದವನೇ ಮನಸ್ಸಿಗೆ ತಂದುಕೊ, ಬಯಸಿದುದನ್ನು ಅನುಗ್ರಹಿಸುವವನೇ ಮನಸ್ಸಿಗೆ ತಂದುಕೊ, ಹೊಳೆವ ಗಿರಿಜೆಯ ಪತಿಯೇ ಮನಸ್ಸಿಗೆ ತಂದುಕೊ. ೮೨. ಕನಕಾಚಲವನ್ನು ಬಿಲ್ಲನ್ನಾಗಿ ಧರಿಸಿದವನೇ ಮನಸ್ಸಿಗೆ ತಂದುಕೊ, ದೇವನದಿಯಾದ ಗಂಗೆಯನ್ನು ಶಿರದಲ್ಲಿ ಧರಿಸಿದವನೇ ಮನಸ್ಸಿಗೆ ತಂದುಕೊ, ಹತ್ತೂ ದಿಕ್ಕುಗಳಿಗೆ ಪರಿಶುದ್ಧವಾದ ಕಿರಣಗಳನ್ನು ಚೆಲ್ಲುವವನೇ ಮನಸ್ಸಿಗೆ ತಂದುಕೊ, ಮುಕ್ತಿ ಫಲದಲ್ಲಿ ಉತ್ಸುಕನಾಗಿರುವವನೇ ಮನಸ್ಸಿಗೆ ತಂದುಕೊ. ೮೩. ಚಿಂತನೆಗೆ ಸಿಲುಕದವನೆ ಮನಸ್ಸಿಗೆ ತಂದುಕೊ, ಸಕಲ ಆಗಮಗಳಿಗೆ ಒಡೆಯನೇ ಮನಸ್ಸಿಗೆ ತಂದುಕೊ, ಮುಕ್ಕಣ್ಣನೇ ಮನಸ್ಸಿಗೆ ತಂದುಕೊ, ಶರಣಾದವರ ದುಃಖವನ್ನು ಪರಿಹರಿಸುವವನೇ ಮನಸ್ಸಿಗೆ ತಂದುಕೊ. ೮೪. ಸೋಮನಾಥನೆ, ಘನತೇಜೋರಾಶಿಯೆ, ಸದ್ಭಕ್ತ ಬಾಂಧವನೆ, ಮೃತ್ಯುಂಜಯನೆ, ನೀಲಕಂಠನೆ, ಸಕಲ ವೇದಗಳಿಂದ ಸ್ತುತಿಸಲ್ಪಟ್ಟ ಪಾದಕಮಲಗಳುಳ್ಳವನೆ, ವಿಷ್ಣುವಿನ ಮನವೆಂಬ ಕಮಲದ ದುಂಬಿಗೆ ಹೊಳೆವ ಚಿನ್ಮೂರ್ತಿಯೆ ಮನಸ್ಸಿಗೆ ತಂದುಕೊ ಎಂದು ಓಹಿಲನು ಹೊಸ ಧೂಪದ ಮೊತ್ತವನ್ನು ಗಂಗಾಧರನಿಗೆ ಪ್ರೀತಿಯಿಂದ ಉಬ್ಬುತ್ತ ಅರ್ಪಿಸಿದನು. ೮೫. ಪ್ರಿಯೆ, ಚಂದ್ರನ ಕಿರಣಗಳನ್ನು ಬಿಡದೆ ಹೊಂದಿರುವವನಿಗೆ,

ಕೋಟ್ಯಾದಿತ್ಯಪ್ರಕಾಶಂ ಗುರುನಿಜಕಟಕಕ್ಷಿಪ್ರಪಾತಾಳಲೋಕೀ
ಪೇಟ್ಯಾಭ್ಯಾಸಂಗನಾಥಂಗಮಲಿನಚರಿತಂಗೀಶ್ವರಂಗುನ್ನತಾಶಾ।
ಶಾಟ್ಯಾಲೀಢಂಗಭಿನ್ನಂಗವನತಜನಕಲ್ಪೋರ್ವಿಜಾತಂಗುದಂಚ
ನ್ನಾಟ್ಯಾಹ್ಲಾದಂಗೆ ಕೂರ್ತರ್ಪಿಸಿದನಗುರನಂದೋಹಿಲಾಂಕಂಮೃಗಾಕ್ಷೀ ॥ ೮೬ ॥

ಚಂದ್ರಾರ್ಕಾನಲಲೋಚನಂಗೆ ವಿಯದುರ್ವೀಮೂರ್ತಿಗಾರ್ಯಂಗೆ ದೇ
ವೇಂದ್ರೋಷ್ಣೀಷಸಮಂಚಿತಾಂಘ್ರಿಕಮಲಂಗಾದ್ಯಂತಶೂನ್ಯಂಗೆ ನಿ।
ಸ್ತಂದ್ರಾಮ್ನಾಯವಚಃಪ್ರಗುಂಫನವಿದೂರಂಗದ್ವಿತೀಯಂಗೆ ಮೇ
ಣ್ಸಾಂದ್ರಾನಂದಮನಸ್ಕನರ್ಪಿಸಿದನೊಲ್ದಂದೋಹಿಲಂ ಧೂಪಮಂ ॥ ೮೭ ॥

ಷಟ್ಚಕ್ರಾಂಭೋಜಹಂಸಂಗನುಪಮಮಹಿಮಾಲಂಕೃತಂಗುಲ್ಲಸದ್ಭೋ
ರಾಟ್ಚಂಚತ್ಕೇತನಂಗಚ್ಯುತನಮಿತಪದಂಗಪ್ರಮೇಯಂಗೆ ಶುಂಭದ್।
ದ್ವಿಟ್ಚೇತೋಜಾತಮಾರಂಗಹಿವರಕಟಕಂಗದ್ರಿಜೇಶಂಗೆ ತಾಂ ವೈ
ರಾಟ್ಚಿದ್ರೂಪಂಗೆ ಕೂರ್ತರ್ಪ್ಪಿಸಿದನವನಿಪಂ ಧೂಪಮಂ ಚಾಪಲಾಕ್ಷೀ ॥ ೮೮ ॥

ಮಹೇಶ್ವರನಿಗೆ, ಲೋಕಗಳ ನಾಯಕನಿಗೆ, ಪಾಪಗಳೇ ಇಲ್ಲದವನಿಗೆ, ಚಿತ್ ಎಂಬ ಸಮುದ್ರಕ್ಕೆ ಚಂದ್ರನಂತಿರುವವನಿಗೆ, ಶಾಸ್ತ್ರಗಳ ಮಾಲೆಗೆ ಸಿಲುಕದ ಶಿವನಿಗೆ, ಸಕಲ ಲೋಕಗಳಿಂದ ಸ್ತುತಿಸಲ್ಪಡುವವನಿಗೆ ಸೋಮನಾಥನಿಗೆ ಚೆನ್ನಾದ ಧೂಪವನ್ನು ಪ್ರೀತಿಪಟ್ಟು ಓಹಿಲನು ಯಥೇಚ್ಛವಾಗಿ ಸಮರ್ಪಿಸಿದನು. ೮೬. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಕೋಟಿ ಸೂರ್ಯರ ಪ್ರಭೆಯುಳ್ಳವನೂ ವಿಶಾಲವಾದ ತನ್ನ ಕಟಕವನ್ನು ಆಳವಾದ ನೋಟದಿಂದ ನೋಡುವ ಅಭ್ಯಾಸವುಳ್ಳವನೂ(?) ಅನಾಥನೂ ಪರಿಶುದ್ಧ ಚರಿತನೂ ಆದ ಈಶ್ವರನಿಗೆ, ಮೇಲಾದ ದಿಕ್ಕುಗಳನ್ನು ಅತಿಶಯವಾಗಿ ಆವರಿಸಿದವನಿಗೆ, ಅಭಿನ್ನನಿಗೆ ಶರಣು ಬಂದ ಭಕ್ತರ ಪಾಲಿಗೆ ಕಲ್ಪವೃಕ್ಷದಂತಿರುವವನಿಗೆ, ನಾಟ್ಯದಿಂದ ಸಂತೋಷಗೊಳ್ಳುವವನಿಗೆ ಅಂದು ಓಹಿಲನು ಧೂಪವನ್ನು ಪ್ರೀತಿಯಿಂದ ಅರ್ಪಿಸಿದನು. ೮೭. ಚಂದ್ರ, ಸೂರ್ಯ, ಅಗ್ನಿ ಲೋಚನನಿಗೆ, ಆಕಾಶವನ್ನು ವ್ಯಾಪಿಸಿದ ಮೂರ್ತಿಗೆ, ಗುರುವಿಗೆ, ದೇವೇಂದ್ರನ ಕಿರೀಟವು ಹೊಂದಿರುವ ಪಾದಕಮಲನಿಗೆ, ಆದಿ ಅಂತ್ಯಗಳಿಲ್ಲದವನಿಗೆ, ಅಪಾರವಾದ ವೇದಗಳ ಮಾತುಗಳ ಸಮೂಹಕ್ಕೆ ಸಿಲುಕಿದವನಿಗೆ, ಅದ್ವಿತೀಯನಿಗೆ, ತೀವ್ರವಾದ ಆನಂದವನ್ನು ಹೊಂದಿರುವವನಿಗೆ ಓಹಿಲನು ಒಲಿದು ಧೂಪವನ್ನು ಅರ್ಪಿಸಿದನು. ೮೮. ಚಂಚಲಾಕ್ಷೀ, ಷಟ್‌ಚಕ್ರಗಳೆಂಬ ಕಮಲದಲ್ಲಿ ಹಂಸನಂತಿರುವವನಿಗೆ, ಎಣೆಯಿಲ್ಲದ ಮಹಿಮೆಗಳಿಂದ ಅಲಂಕೃತನಾದವನಿಗೆ, ಉಲ್ಲಾಸದಿಂದ ಕೂಡಿದ ಹಾವುಗಳೇ ಚಂಚಲವಾದ ಬಾವುಟವಾಗಿರುವವನಿಗೆ, ವಿಷ್ಣುವಿನಿಂದ ನಮಸ್ಕರಿಸಲ್ಪಡುವ ಪಾದಗಳನ್ನು ಹೊಂದಿರುವವನಿಗೆ, ಅಳೆಯಲಾಗದವನಿಗೆ, ಹೊಳೆವ ದ್ವಿಟ್‌ಚೇತದಲ್ಲಿ ಹುಟ್ಟಿದ ಮನ್ಮಥನಿಗೆ, ಹಾವುಗಳನ್ನೇ ಒಳ್ಳೆಯ ಕಡಗವಾಗಿ ಧರಿಸಿದವನಿಗೆ, ಪಾರ್ವತೀಶನಿಗೆ, ವಿರಾಟ್ ಚಿದ್ರೂಪನಿಗೆ ಓಹಿಲದೇವನು ಪ್ರೀತಿಯಿಂದ ಧೂಪವನ್ನು ಅರ್ಪಿಸಿದನು.

ಸೋಮಾರ್ಕಾಗ್ನಿಜಲಾನಿಲಾತ್ಮವಿಯದುರ್ವೀಮೂರ್ತಿಗಾರ್ಯಂಗೆ ಸ
ತ್ಸೋಮಾರ್ಧಾಂಚಿತಮಸ್ತಕಂಗಖಿಳವೇದಸ್ತೋತ್ರಪಾತ್ರಂಗೆ ಮೇಣ್।
ಸೋಮಾಂಶುಪ್ರತಿಮಾನಮಂದಹಸಿತಂಗಾಕಾಶಕೇಶಂಗೆ ತ
ತ್ಸೋಮೇಶಂಗಗರಂ ಸಮರ್ಪಿಸಿದನೊಲ್ದಂದೋಹಿಲಂ ಕೋಮಲೇ ॥ ೮೯ ॥

ಇಂತನಂತನಿಗಮಸ್ತೋತ್ರಪಾತ್ರಂಗೆ ಶತಪತ್ರಮಿತ್ರಾರಿವೀತಿ ಹೋತ್ರನೇತ್ರತ್ರಯಂಗೆ ಸೌರಾಷ್ಟ್ರ ಸೋಮನಾಥಂಗತಿಭಕ್ತಿಯಿಂ ತನ್ನ ತೂಕದ ಧೂಪಮಂ ನಿಚ್ಚಂ ಕಾಯದಾಯಾಸಮಂ ನೋಡದೋಹಿಲದೇವನರ್ಪಿಸುತಿರ್ದಂ॥

ಅಂತುಮಲ್ಲದೆಯುಂ,

ನಿಚ್ಚಂ ವಿಲಾಸಮಂ ಪಡೆ
ದಚ್ಚಿಗೊಳಿಪ್ಪಮಲಧೂಪಮಂ ಸೋಮೇಶಂ।
ಗುಚ್ಚವದಿಂದರ್ಪಿಸುತುಂ
ಸಚ್ಚಿನ್ಮುದನಿರ್ಪನೋಹಿಲಂ ಮೃಗನಯನೇ ॥ ೯೦ ॥

ಭಿಕ್ಷಾನ್ನಮನುಂಡಾಭಾ
ಳಾಕ್ಷಂ ಸೌರಾಷ್ಟ್ರಪತಿಗತುಳಗುಗ್ಗುಳಮಂ।
ಸುಕ್ಷಮೆಯಿಂದರ್ಪಿಸುತೊಳ್ದ
ಕ್ಷಯಸುಖದೊಳ್ಪನೋಹಿಲಂ ಪಡೆದಿರ್ದಂ ॥ ೯೧ ॥

ಪಸಿವಂ ಬಿಟ್ಟು ದಶಾರ್ತಿಯಂ ತೊಱೆದು ದೇಹಾಯಾಸಮಂ ನೂಂಕಿ ಬ
ಲ್ಬಿಸಿಲಂ ನೋಡದೆ ವನ್ಯದಂತಿಮಹಿಷವ್ಯಾಘ್ರಾದಿನಾನಾಮೃಗ।
ಪ್ರಸರಕ್ಕಳ್ಕದೆ ಪೆಂಪುಗಂಪಮರ್ದ ಭಾಸ್ವದ್ಧೂಪಮಂ ತಂದು ಸಂ
ತಸಮಂತಾಳ್ದೊಸೆದರ್ಪಿಸುತ್ತೆಸೆದನೀಶಂಗೋಹಿಲಂ ಕೋಮಲೇ ॥ ೯೨ ॥

೮೯. ಕೋಮಲೇ, ಚಂದ್ರ, ಸೂರ್ಯ, ಅಗ್ನಿ, ಜಲ, ಅನಿಲ, ಆಕಾಶ, ಭೂಮಿ [ಇವೆಲ್ಲವೂ ಆದ] - ಮೂರ್ತಿಗೆ, ಗುರುವಿಗೆ, ಬಾಲಚಂದ್ರನನ್ನು ಶಿರದಲ್ಲಿ ಧರಿಸಿದವನಿಗೆ, ಸಕಲ ವೇದಗಳ ಸ್ತೋತ್ರಕ್ಕೆ ಪಾತ್ರನಾದವನಿಗೆ, ಬೆಳುದಿಂಗಳನ್ನು ಹೋಲುವ ಕಿರುನಗೆಯವನಿಗೆ, ಆಕಾಶಕೇಶನಿಗೆ ಆ ಸೋಮೇಶನಿಗೆ ಓಹಿಲನು ಧೂಪವನ್ನು ಪ್ರೀತಿಯಿಂದ ಸಮರ್ಪಿಸಿದನು. ವ॥ ಹೀಗೆ ಅಪಾರವಾದ ವೇದಗಳ ಸ್ತೋತ್ರಕ್ಕೆ ಪಾತ್ರನಾದವನಿಗೆ ಸೂರ್ಯ ಚಂದ್ರ ಅಗ್ನಿ ನೇತ್ರತ್ರಯನಿಗೆ ಸೌರಾಷ್ಟ್ರ ಸೋಮನಾಥನಿಗೆ ಹೆಚ್ಚಿನ ಭಕ್ತಿಯಿಂದ ತನ್ನ ತೂಕದ ಧೂಪವನ್ನು ದೇಹಾಯಾಸವನ್ನು ಲಕ್ಷಿಸದೆ ಓಹಿಲದೇವನು ನಿತ್ಯವೂ ಅರ್ಪಿಸುತ್ತಿದ್ದನು. ಅದಲ್ಲದೆ, ೯೦. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ನಿತ್ಯವೂ ಶೋಭಾಯಮಾನವಾಗಿ ಕಣ್ಸೆಳೆವ ಪರಿಶುದ್ಧವಾದ ಧೂಪವನ್ನು ಸೋಮೇಶನಿಗೆ ಸಂತಸದಿಂದ ಅರ್ಪಿಸುತ್ತ ಸತ್‌ಚಿತ್ ಆನಂದ ಸ್ವರೂಪನಾದ ಓಹಿಲನು ಇದ್ದನು. ೯೧. ಭಿಕ್ಷಾನ್ನವನ್ನು ಉಂಡ ಆ ಶಿವನಿಗೆ ಸೌರಾಷ್ಟ್ರಪತಿಗೆ ಅಪಾರವಾದ ಧೂಪವನ್ನು ಪ್ರೀತಿಯಿಂದ ಅರ್ಪಿಸಿ ಓಹಿಲನು ಅಕ್ಷಯ ಸುಖದ ಸೊಗಸನ್ನು ಪಡೆದಿದ್ದನು. ೯೨. ಕೋಮಲೇ, ಹಸಿವನ್ನು ಬಿಟ್ಟು, ಹತ್ತು ಬಗೆಯ ಅಪೇಕ್ಷೆಗಳನ್ನು ತೊರೆದು, ದೇಹಾಯಾಸವನ್ನು ನೂಕಿ, ಬಿರುಬಿಸಿಲನ್ನು ನೋಡದೆ, ಕಾಡಿನ ಆನೆ, ಕೋಣ, ಹುಲಿ

ಇದು ಮೞೆ ಯಿದು ಚಳಿ ಬಲ್ಬಿಸಿ
ಲಿದು ಕಟ್ತಲೆ ಯೆಂದು ನೋಡದೋಹಿಲನಗರಂ।
ಮುದದಿಂ ತಂದಾಸೌರಾ
ಷ್ಟ್ರದ ಸೋಮೇಶಂಗೆ ನಿಚ್ಚಮರ್ಪಿಸುತಿರ್ದಂ ॥ ೯೩ ॥

ವ॥ ಇಂತಾಯಾಸಮಂ ನೋಡದೆ ಸುಪ್ರಭಾತಸಮಯವೞಿದೆದ್ದು ಪೋಗಿ ಮಲಯಾಚಲ ದೊಳ್ಮನೋಹರಮಾದಗರನಾಯ್ದಱಿಸಿ ತನ್ನ ತೂಕದ ಸನ್ನುತಧೂಪಮನೊದಗಿಸಿ ತಂದು ಕಂಬಿಯಂ ಕಟ್ಟಿ ಪೊತ್ತುಕೊಂಡು ಮಗುೞ್ದಿಟ್ಟಿಂದು ಸೌರಾಷ್ಟ್ರನಾಥಾಲಯಮಂ ಪೊಕ್ಕು ಮುಂಪೂಜೆಯಂ ಪರಿಹರಿಸಿ ತಾಂ ಪೂಜೆಯಂ ಮಾಡಿ ನಿಚ್ಚಂ ಚಿಚ್ಚರಮುತ್ಸವದಿಂದಚ್ಚಗುಗ್ಗುಳಮನರ್ಪಿಸುತೋಹಿಲದೇವನುದ್ದಂಡಭಕ್ತಿಯಿ ನಾಸೋಮೇಶ್ವರನ ಪೂಜಾರಿಗಳ್ಕಂಡು,

ಇವನೇಂ ಮಾಯಾವಿಯೊ ತಾ
ನಿವನ ಕರಂ ಸೋಂಕಲೀಶಗೃಹದ ಕದಂಗಳ್।
ರವಿಕರಮುಂ ಮುಟ್ಟಲರ್ವ
ಬ್ಜವೆನಿಸಿದುದೆನುತ್ತೆ ಜೀಯ್ಯರಾಗಿಂತೆಂದರ್ ॥ ೯೪ ॥

ಈತಂಗಿಂತೀಪುರದೊಳ್
ಗೋತನ್ನಮನಿಕ್ಕದಂತೆ ಕಟ್ಟಳೆಯಂ ಮೇ।
ಣೀತೆಱದಿಂ ಮಾೞ್ಪೆವೆನು
ತ್ತಾಂತುಂ ಮಚ್ಚರವನಂತವರ್ಯೋಚಿಸಿದರ್ ॥ ೯೫ ॥

ಮೊದಲಾದ ನಾನಾ ಮೃಗ ಸಮೂಹಕ್ಕೆ ಹೆದರದೆ, ಹೆಚ್ಚಳ ಹಾಗೂ ಸುವಾಸನೆಯಿಂದ ಕೂಡಿದ ಹೊಳೆವ ಧೂಪವನ್ನು ಪ್ರೀತಿಯಿಂದ ತಂದು ನಿತ್ಯವೂ ಆ ಸೌರಾಷ್ಟ್ರದ ಸೋಮೇಶನಿಗೆ ಅರ್ಪಿಸುತ್ತಿದ್ದನು. ೨೩. ಇದು ಮಳೆ, ಇದು ಚಳಿ, ಇದು ಬಿರುಬಿಸಿಲು, ಇದು ಕತ್ತಲೆ ಎಂದು ನೋಡದೆ ಓಹಿಲನು ಧೂಪವನ್ನು ನಿತ್ಯವೂ ಸಂತೋಷದಿಂದ ತಂದು ಆ ಸೌರಾಷ್ಟ್ರದ ಸೋಮೇಶನಿಗೆ ಅರ್ಪಿಸುತ್ತಿದ್ದನು. ವ॥ ಹೀಗೆ ಆಯಾಸವನ್ನು ಗಮನಿಸದೆ, ಬೆಳಗಾಗುತ್ತಲೆ ಎದ್ದು ಹೋಗಿ ಮಲಯಾಚಲದಲ್ಲಿ ಮನೋಹರವಾದ ಧೂಪವನ್ನು ಆಯ್ದು ಹುಡುಕಿ ತನ್ನ ತೂಕದ ಪ್ರಸಿದ್ಧ ಧೂಪವನ್ನು ಒದಗಿಸಿಕೊಂಡು ಕಂಬಿಯನ್ನು ಕಟ್ಟಿ ಹೊತ್ತುಕೊಂಡು ಹಿಂತಿರುಗಿ ಬಂದು ಸೌರಾಷ್ಟ್ರನಾಥನ ಆಲಯವನ್ನು ಪ್ರವೇಶಿಸಿ ಮೊದಲಿನ ಪೂಜೆಯನ್ನು ತೆಗೆದಿರಿಸಿ ತಾನು [ಪುನಃ] ಪೂಜೆಯನ್ನು ಮಾಡಿ ನಿತ್ಯವೂ ಬೇಗ ಬೇಗನೆ ಸಂತಸದಿಂದ ಶುದ್ಧವಾದ ಧೂಪವನ್ನು ಅರ್ಪಿಸುವ ಓಹಿಲದೇವನ ಪ್ರಚಂಡ ಭಕ್ತಿಯನ್ನು ಆ ಸೋಮೇಶ್ವರನ ಅರ್ಚಕರು ನೋಡಿ, ೯೪. "ಇವನೇನು ಮಾಯಾವಿಯೊ, ಇವನ ಕರಸ್ಪರ್ಶದಿಂದ ಶಿವಾಲಯದ ಬಾಗಿಲುಗಳು ಸೂರ್ಯನ ಕಿರಣಗಳ ಸ್ಪರ್ಶದಿಂದ ಅರಳುವ ಕಮಲದಂತೆ ತೆಗೆಯಲ್ಪಡುತ್ತವೆ." ಎಂದು ಅರ್ಚಕರು ಹೇಳುತ್ತ ಮತ್ತೆ ಹೀಗೆಂದರು. ೯೫. ಈತನಿಗೆ ಈ ಪಟ್ಟಣದಲ್ಲಿ ಪ್ರೀತಿಯಿಂದ ಅನ್ನವನ್ನು ಯಾವ ರೀತಿಯಲ್ಲೂ ಕೊಡದಂತೆ ಆಜ್ಞೆಯನ್ನು ಮಾಡೋಣವೆಂದು ಮತ್ಸರವನ್ನು ತಾಳಿದ ಅವರು ಯೋಚಿಸಿದರು.

ಸನ್ನುತಭಕ್ತನೋಹಿಲನೃಪಂಗೆಸೆವಾಪುರದಲ್ಲಿ ಕೂರ್ತು ಭಿ
ಕ್ಷಾನ್ನಮನಿಕ್ಕದಂತಿರದೆ ಗೌಳತಪಸ್ವಿಗಳೈದೆ ಕಟ್ಟಿನಿಂ।
ದುನ್ನತಕೋಪದಿಂ ರಚಿಸಲೀಶನನರ್ಚಿಸಿದಚ್ಚಪತ್ರೆಯಂ
ತಾಂ ನಿಜತೋಷದಿಂ ಭುಜಿಸುತೊಪ್ಪಿದನೇಣಕಿಶೋರಲೋಚನೇ ॥ ೯೬ ॥

ಭರ್ಮಾಚಳಕೋದಂಡಂ
ಗೊರ್ಮೆ ಸಮರ್ಪಿಸಿ ಮಗುಟ್ಟು ನೂಂಕಿದ ವಿಲಸ।
ನ್ನಿರ್ಮಾಲ್ಯದ ಪತ್ರೆಯನಾ
ನಿರ್ಮಲಮತಿಯೋಹಿಲಾಂಕನುಱು ಭುಂಜಿಸಿದಂ ॥ ೯೭ ॥

ಹರನಿರ್ಮಾಲ್ಯದ ಪತ್ರೆಯಂ ಭುಜಿಸಿ ಮತ್ತಂ ತೋಷದಿಂದಂದು ಬಂ
ಧುರಸತ್ವಂಬಡೆದೆಂದಿನಂತೆ ವಿಲಸದ್ಧೂಪೌಘಮಂ ತಂದು ಭಾ।
ಸುರಲಿಂಗಕ್ಕನಿಶಂ ಸಮರ್ಪಿಸುವ ತದ್ಭಕ್ತಾರ್ಯನೊಂದೇಱ್ಗೆಯಂ
ಪಿರಿದಾಲೋಕಿಸಿ ನೊಂದು ತಮ್ಮಡಿಗಳೊಂದುದ್ಯೋಗಮಂ ಮಾಡಿದರ್ ॥ ೯೮ ॥

ಪತ್ರೆಗಳಂ ಮೆಲ್ವೀತಂ
ನೇತ್ರತ್ರಯಸೋಮನಾಥನಂ ಬಿಟ್ಟಗಲಂ।
ಧಾತ್ರಿಯೊಳಿದೊಂದುಮಿದಕೆ ವಿ
ಚಿತ್ರದ ಬಗೆಯುಂಟೆನುತ್ತೆ ಬಗೆದರ್ಜೀಯ್ಯರ್ ॥ ೯೯ ॥

ಬಿಡದಾಲೋಚಿಸಿ ಸಲೆ ತ
ಮ್ಮಡಿಗಳ್ ನಿರ್ಮಾಲ್ಯಪತ್ರೆಯಂ ಸುಟ್ಟಿರಿಸ।
ಲ್ಪುಡಿವೆತ್ತ ಬೂದಿಯೆನೆ ಯೆಡೆ
ವಿಡದೋಹಿಲನೊಲ್ದು ಭುಂಜಿಸುತೆ ರಂಜಿಸಿದಂ ॥ ೧೦೦ ॥

೯೬. ಜಿಂಕೆಮರಿಯ ನೋಟದಂತೆ ಕಣ್ಣುಳ್ಳವಳೇ, ಹೊಗಳಿಕೆಗೆ ಪಾತ್ರನಾದ ಭಕ್ತ ಓಹಿಲ ಮಹಾರಾಜನಿಗೆ ಶೋಭಿಸುವ ಆ ಪುರದಲ್ಲಿ ಪ್ರೀತಿಯಿಂದ ಭಿಕ್ಷಾನ್ನವನ್ನು ಕೊಡದಂತೆ ಗೌಳ ತಪಸ್ವಿಗಳು ಚೆನ್ನಾಗಿ ಕಟ್ಟುಮಾಡಿ ಅತಿಯಾದ ಕೋಪದಿಂದ ಬಹಿಷ್ಕರಿಸಲು ಶಿವನನ್ನು ಪೂಜಿಸಿದ ಶುದ್ಧಪತ್ರೆಯನ್ನು ಅತ್ಯಾನಂದದಿಂದ ಸವಿಯುತ್ತ ಓಹಿಲನು ಶೋಭಿಸಿದನು. ೯೭. ಸುವರ್ಣಾಚಲವನ್ನು ಧನುಸ್ಸನ್ನಾಗಿ ಹೊಂದಿದ ಶಿವನಿಗೆ ಒಮ್ಮೆ ಸಮರ್ಪಿಸಿ ಮತ್ತೆ ಸರಿಸಿದ ಹೊಳೆಯುವ ನಿರ್ಮಾಲ್ಯದ ಪತ್ರೆಯನ್ನು ಆ ನಿರ್ಮಲಮತಿಯ ಓಹಿಲದೇವನು ಸವಿದನು. ೯೮. ಶಿವಪೂಜೆ ಮಾಡಿ ತೆಗೆದ ಬಾಡಿದ ಪತ್ರೆಯನ್ನು ಸವಿದು ಮತ್ತೆ ಸಂತೋಷದಿಂದ ಮನೋಹರವಾದ ಸತ್ವವನ್ನು ಹೊಂದಿ ಎಂದಿನಂತೆ ಹೊಳೆವ ಧೂಪದ ಮೊತ್ತವನ್ನು ತಂದು ಪ್ರಕಾಶಿಸುವ ಲಿಂಗಕ್ಕೆ ಯಾವಾಗಲೂ ಸಮರ್ಪಿಸುವ ಆ ಹಿರಿಯ ಭಕ್ತನ ಆ ಒಂದು ಅಭಿವೃದ್ಧಿಯನ್ನು ಚೆನ್ನಾಗಿ ಗಮನಿಸಿ ನೊಂದ ತಮ್ಮಡಿಗಳು ಒಂದು ಆಲೋಚನೆಯನ್ನು ಮಾಡಿದರು. ೯೯. ಪತ್ರೆಗಳನ್ನು ಸವಿಯುವ ಈತನು ಮುಕ್ಕಣ್ಣನಾದ ಸೋಮನಾಥನನು ಬಿಟ್ಟು ಹೋಗಲಾರನು. ಲೋಕದಲ್ಲಿ ಇದಕ್ಕೆ ವಿಚಿತ್ರವಾದ ರೀತಿಯುಂಟು ಎಂದು ಅರ್ಚಕರು ವಿಚಾರಮಾಡಿದರು. ೧೦೦. ಬಿಡದೆ ಆಲೋಚಿಸಿದ ಅರ್ಚಕರು ಪೂಜೆಮಾಡಿ ತೆಗೆದ ಬಾಡಿದ ಪತ್ರೆಗಳನ್ನು ಸುಟ್ಟು ಬೂದಿಮಾಡಿ ಇರಿಸಿದರು. ಪುಡಿಯಾದ

ಹರನಿರ್ಮಾಲ್ಯದ ಪತ್ರೆಯಂ ದಹಿಸಿ ಬೈತಾಬೂದಿಯಂ ಪನ್ನೆರ
ಟ್ಬರಿಸಂ ಭುಂಜಿಸುತುಂ ಶ್ರುತಿಪ್ರಕರಸಂಸ್ತುತ್ಯಾಂಘ್ರಿಪದ್ಮಂಗೆ ಬಂ।
ಧುರಭಕ್ತ್ಯನ್ವಿತಮಾನಸಂ ಪರಿವಿರಾಜದ್ಧೂಪಮಂ ತಂದು ಚೆ
ಚ್ಚರಮೊಲ್ದೋಹಿಲನರ್ಪಿಸುತ್ತೆಸೆದನಂಭೋಜಾತಪತ್ರೇಕ್ಷಣೇ ॥ ೧೦೧ ॥

ಇಂತೀರಾರ್ಬರಿಸಂ ಪತ್ರೆಯಂ ಸುಟ್ಟಿರಿಸಿದ ಭಸಿತಮನೊಸೆದುಂಡತಿಭಕ್ತಿಭರದಲಂಪಿನ ಪೆಂಪಂ ತಾಂ ಪಡೆದೋಹಿಲದೇವಂ ಸೌರಾಷ್ಟ್ರನಾಥಂಗರ್ಪಿಸಲೆಂದೆಂದಿನಂತೊಂದು ದಿವಸಂ ಮಲಯಾದ್ರಿಗೆಯ್ತಂದಚ್ಚ ಪೊಸಗಂಪಂ ದೆಸೆದೆಸೆಗೆ ಪಸರಿಸುವಭಿನವಧೂಪವನಾಯ್ದಱಸಿ ಕಂಬಿಯಂ ಕಟ್ಟಿ ಯಾಗುಗ್ಗುಳದ ಕಾವಡಿಯಂ ಪೊತ್ತುಕೊಂಡುತ್ಸವಂಬಡೆದು ಚೆಚ್ಚರಂ ಬರೆವರೆ,

ಚೆಚ್ಚರಂ ನವಧೂಪಕೊಪ್ಪುವ ಕಂಬಿಯಂ ಮಿಗೆ ಪೊತ್ತು ಭಾ
ಸ್ವಚ್ಚರಿತ್ರನತಿಪ್ರಮೋದದಿನೆಯ್ತಿರಲ್ಜವದಿಂ ಸಮಂ।
ತುಚ್ಚವಂಗೆಡಲಂದು ವಾಮಪದಾಂಬುಜಾತವನೈದೆ ಕ
ಟ್ಟುರ್ಚಿ ಮೂಡಿದುದಂದು ಬಲ್ದಸಿ ತದ್ವನೀಪಥಮಧ್ಯದೊಳ್ ॥ ೧೦೨ ॥

ಕಡು ಮುದದಿಂ ಧೂಪದ ಕಾ
ವಡಿಯಂ ಪೊತ್ತಿರದೆ ಚೆಚ್ಚರಂ ಬರೆ ದಸಿ ಮೆ।
ಲ್ಲಡಿಯಂ ಕಟ್ಟುಗಿಯಲ್ನಡೆ
ಯುಡುಗಿ ಬಟಿಲ್ದಬಿಲ್ದನೋಹಿಲದೇವಂ ॥ ೧೦೩ ॥

ಬೂದಿಯನ್ನೆ ಎಡೆಬಿಡದೆ ಓಹಿಲನು ಪ್ರೀತಿಪಟ್ಟು ಸವಿಯುತ್ತ ಶೋಭಿಸಿದನು. ೧೦೧. ಕಮಲಾಕ್ಷಿ, ಶಿವನ ಪೂಜೆಮಾಡಿ ತೆಗೆದ ಬಾಡಿದ ಪತ್ರೆಯನ್ನು ಸುಟ್ಟು ಬಚ್ಚಿಟ್ಟ ಬೂದಿಯನ್ನು ಹನ್ನೆರಡು ವರುಷ ಸವಿಯುತ್ತ ವೇದಗಳಿಂದ ಸ್ತುತಿಸಲ್ಪಡುವ ಪಾದಕಮಲಗಳ ಶಿವನಿಗೆ ಸುಂದರ ಭಕ್ತಿಯಿಂದ ಕೂಡಿದ ಓಹಿಲನು ಚೆನ್ನಾಗಿ ಹೊಳೆಯುವ ಧೂಪವನ್ನು ತ್ವರೆಯಿಂದ ತಂದು ಪ್ರೀತಿಯಿಂದ ಅರ್ಪಿಸುತ್ತ ಶೋಭಿಸಿದನು. ವ॥ ಹೀಗೆ ಹನ್ನೆರಡು ವರುಷ ಪತ್ರೆಯನ್ನು ಸುಟ್ಟು ಇಟ್ಟ ಭಸ್ಮವನ್ನು ಪ್ರೀತಿಯಿಂದ ಸವಿದು ಅತಿಭಕ್ತಿಭರದಲ್ಲಿ ಅತಿಶಯವಾದ ಘನತೆಯನ್ನು ಹೊಂದಿ ಓಹಿಲದೇವನು ಸೌರಾಷ್ಟ್ರದೊಡೆಯನಿಗೆ ಅರ್ಪಿಸಲೆಂದು ಎಂದಿನಂತೆ ಒಂದು ದಿನ ಮಲಯಪರ್ವತಕ್ಕೆ ಬಂದು ನವನವೀನವಾದ ಸುವಾಸನೆಯನ್ನು ದಿಕ್ಕು ದಿಕ್ಕಿಗೆ ಹರಡುವ ಹೊಸದಾದ ಧೂಪವನ್ನು ಆಯ್ದು ಹುಡುಕಿ ಕಂಬಿಯನ್ನು ಕಟ್ಟಿ ಆ ಧೂಪದ ಕಾವಡಿಯನ್ನು ಹೊತ್ತುಕೊಂಡು ಸಂತಸಗೊಂಡು ಬೇಗನೆ ಬರುತ್ತಿರಲು, ೧೦೨. ಬೇಗನೆ ಹೊಸಧೂಪಕ್ಕೆ ಹೊಂದುವ ಕಂಬಿಯನ್ನು ಚೆನ್ನಾಗಿ ಹೊತ್ತು ಶುಭ್ರ ಚಾರಿತ್ರ್ಯವನ್ನು ಹೊಂದಿರುವ ಓಹಿಲನು ಅತ್ಯಾನಂದದಿಂದ ಬೇಗ ಬೇಗನೆ ಬರುತ್ತಿರಲು ವೇಗ ತಪ್ಪಲೆಂದು ಮಾರ್ಗ ಮಧ್ಯದಲ್ಲಿನ ದಪ್ಪ ಮುಳ್ಳೊಂದು ಅಂದು ಎಡಪಾದವೆಂಬ ಕಮಲವನ್ನು ಭೇದಿಸಿ ನಾಟಿತು. ೧೦೩.ಅತ್ಯಾನಂದದಿಂದ ಧೂಪದ ಕಾವಡಿಯನ್ನು ಹೊತ್ತು ತಡಮಾಡದೆ ಬೇಗನೆ ಬರುತ್ತಿರಲು ಮುಳ್ಳೊಂದು ಮೃದುಪಾದವನ್ನು ತಾಗಿ ನಾಟಲು ನಡೆಯ ವೇಗ ತಗ್ಗಿ ಬಳಲಿ

ಇಂತಂಗಾಲ ನೆಟ್ಟು ಕಟ್ಟುಗಿಯಲಾ ನೋವಿನಿಂ ನಡೆಯುಡುಗು ತಂದು ನೊಂದು ಕಂದಿ ಕುಂದಿ ಮುಂದುಗೆಟ್ಟು ಯಿಬಲ್ದಸಿಯಂ ತೆಗೆದಪೆನೆಂದೊಡಿಂದುಜೂಟಂಗೆ ತಂದ ಸುಗಂಧಾನುಬಂಧಿಧೂಪಮಂ ಮುಟ್ಟುವ ಕರಾಂಬುಜದಿನಂಘ್ರಿತಳಮನಂಟಿದೊಡೆ ಯಘಮಂಕುರಿಪುದಲ್ಲದ ತಿಜವದಿಂ ಪೋಪೆನೆಂದೆನಲಿತಡಿಯಿಡಬಾರದೇಗೈವೆನೆಂದೆನುತಾತಾಪಮಂ ತಳೆದು ನಿಂದ ಪಚ್ಚೆಯೊಳ್ನಿಲ್ಲುನ್ನತ ಚಿಂತಾಂಬುಧಿಯೊಳ್ಮೂಡಿ ಮುಳುಂಗಾಡುತ್ತೋಹಿಲದೇವನ ಮನದಳಲನಾ ಕೃಪಾಕರನಪ್ಪ ಸೋಮನಾಥಂ ಕಂಡು,

ಇನ್ನೀಭಕ್ತನ ದೃಢಭ
ಕ್ತ್ಯುನ್ನತಿಯಂ ಧರೆಗೆ ತೋರ್ಪೆನೆಂದಾಸೋಮೇ।
ಶಂ ನಿಲ್ಲದೆ ಶಬರಾಕೃತಿ
ಯಂ ನೆಱೆ ಮಡಗಯಾವಿನೋದದಿಂ ನಡೆತಂದಂ ॥ ೧೦೪ ॥

ಹಿಂದೆ ಧನಂಜಯಂ ಪದೆದು ಮಾಳ್ಪ ತಪಕ್ಕೆ ಪುಳಿಂದವೇಷದಿಂ
ದಂದು ವರಾಹನಂ ಬಿಡದೆ ಬಂದವೊಲೀಶ್ವರನಪ್ರಮೇಯನ।
ರ್ಧೇಂದುಕಪರ್ದನೊಲ್ದು ಮೊಲವೇಟಿಯನಾಡುವ ಲಕ್ಷ್ಯದಿಂದೆ ನಿ
ಷ್ಪಂದಮನಸ್ಕನೋಹಿಲನೊಯ್ಯನೆ ಪೊರ್ದಿದನಂಬುಜಾನನೇ ॥ ೧೦೫ ॥

ಸಾರ್ದೋಹಿಲನಂ ಚಂದ್ರಕ
ಪರ್ದಂ ಪೇಟಿಾ ಶರಣ ನಿನ್ನ ವದನಂ ಶಿಶಿರಂ।
ಪೊರ್ದಿದ ನೀರೇಜದ ವೋ
ಲಿರ್ದಪುದೀದೇಕೆನುತೆ ನಲವಿಂ ತಾನೆಂದಂ ॥ ೧೦೬ ॥

ಓಹಿಲದೇವನು ದುಃಖಿಸಿದನು. ವ॥ ಹೀಗೆ ಅಂಗಾಲಲ್ಲಿ ಮುಳ್ಳು ನಾಟಿರಲು ಆ ನೋವಿನಿಂದ ನಡೆಯು ಕುಗ್ಗಿತೆಂದು ನೊಂದು ಕಂದಿ ಕುಂದಿ ಮುಂದುಗೆಟ್ಟು ಈ ದಪ್ಪ ಮುಳ್ಳನ್ನು ತೆಗೆಯುತ್ತೇನೆಂದರೆ ಶಿವನಿಗೆ ತಂದ ಸುಗಂಧಮಿಶ್ರಧೂಪವನ್ನು ಮುಟ್ಟುವ ಕರಕಮಲವು ಪಾದತಳವನ್ನು ಸ್ಪರ್ಶಿಸಿದರೆ ಪಾಪವು ತಲೆದೋರುವುದು, ಅಷ್ಟಲ್ಲದೆ, ಬೇಗನೆ ಹೋಗೋಣವೆಂದರೆ ಸ್ವಲ್ಪವೂ ಹೆಜ್ಜೆ ಊರಲು ಸಾಧ್ಯವಾಗುತ್ತಿಲ್ಲ, ಏನು ಮಾಡಲಿ ಎಂದು ದುಃಖವನ್ನು ಹೊಂದಿ ಹಚ್ಚೆ ಹಾಕಿಸಿಕೊಳ್ಳುವಾಗ ನಿಲ್ಲುವಂತೆ ನಿಂತು ಹೆಚ್ಚಿನ ಚಿಂತಾಸಾಗರದಲ್ಲಿ ಮೂಡಿ ಮುಳುಗಾಡುತ್ತ ಓಹಿಲದೇವನ ಮನದ ಸಂಕಟವನ್ನು ಕೃಪಾಕರನಾದ ಸೋಮನಾಥನು ಕಂಡು, ೧೦೪. ಇನ್ನು ಈ ಭಕ್ತನ ದೃಢಭಕ್ತಿಯ ಹಿರಿಮೆಯನ್ನು ಲೋಕಕ್ಕೆ ಕಾಣಿಸುವೆನೆಂದು ಸೋಮೇಶನು ತಡಮಾಡದೆ ಬೇಡನ ರೂಪಧರಿಸಿ ಹೆಚ್ಚಿನದಾದ ಬೇಟೆಯ ವಿನೋದದಿಂದ ಬಂದನು. ೧೦೫. ಕಮಲಾಕ್ಷೀ, ಹಿಂದೆ ಅರ್ಜುನನು ಪ್ರೀತಿಯಿಂದ ಮಾಡಿದ ತಪಸ್ಸಿಗೆ ಬೇಡನ ವೇಷದಿಂದ ಹಂದಿಯನ್ನು ಅಂದು ಬೆನ್ನಟ್ಟಿ ಬಂದ ರೀತಿಯಲ್ಲಿ ಈಶ್ವರನು, ಅಳೆಯಲಾಗದವನು, ಅರ್ಧಚಂದ್ರನನ್ನು ಧರಿಸಿದ ಶಿವನು ಪ್ರೀತಿಯಿಂದ ಮೊಲದ ಬೇಟೆಯಾಡುವ ನೆವದಿಂದ ಗಟ್ಟಿಮನಸ್ಸಿನ ಓಹಿಲನನ್ನು ಮೆಲ್ಲನೆ ಸಮೀಪಿಸಿದನು. ೧೦೬.ಚಂದ್ರಶೇಖರನು ಓಹಿಲನನ್ನು ಸಮೀಪಿಸಿ, "ಎಲೆ ಶರಣನೆ ನಿನ್ನ ಮುಖವು ಶೈತ್ಯವು ಆವರಿಸಿದ ಕಮಲದಂತೆ ಬಾಡಿದೆ ಏಕೆ?" ಎಂದು ಕೇಳಲು ಅದಕ್ಕೆ ಓಹಿಲನು ಹೀಗೆಂದನು.

ಭಿಲ್ಲವರ ಕೇಳು ಗೌರೀ
ವಲ್ಲಭಸೋಮೇಶ್ವರಂಗೆ ಧೂಪಮನಾಂತಾಂ।
ಮೆಲ್ಲನೆ ಬರೆ ದಸಿ ಮುೞಿದಡಿ
ಯಲ್ಲಿ ವಲಂ ನಡೆಯಲೀಯದೇವೆನಿದೆಂದಂ ॥ ೧೦೭ ॥

ಎನೆ ಕೇಳ್ದೆಲೆ ಭಕ್ತನೆ ಮೆ
ಲ್ಲನೆ ತೆಗೆದಪೆನೆಲ್ಲಿ ತೋಱಿನಲ್ಮತ್ಪದಮಂ।
ವನಚರ ನೀಂ ಸೋಂಕುವುದ
ಲ್ತೆನಲಾನುಡಿಗೇಳ್ದು ಶಂಕರಂ ಮಗುೞ್ದಾಗಳ್ ॥ ೧೦೮ ॥

ಲಿಂಗಾಂಗಿಯಾನೆನಲ್ ಶಿವ
ಲಿಂಗಿ ಗಡಂ ನೀಂ ಮದಂಘ್ರಿಸಂಸ್ಪರ್ಶನಮುಂ।
ಸಂಗತಮಲ್ತೆನಲಿದೆ ಕಂ
ಕಂಗರುವನೆ ಯೆನಲದಕ್ಕೆ ಮಗುೞ್ದಿಂತೆಂದಂ ॥ ೧೦೯ ॥

ಮುಟ್ಟಿದೆನ್ನಮದಂಘ್ರಿಯಂ ದಸಿಯಂ ನಿವಾರಿಪುದೆಂದೊಡಾ
ದಿಟ್ಟಿಗಾಲಬೆಡಂಗನಂದು ವಿರಾಜಿಪಿಕ್ಕುಳದಿಂ ಕರಂ।
ನೆಟ್ಟ ಕಂಟಕಮಂ ದಲೊಯ್ಯನೆ ಕೀೞೆ ತತ್ಕೃತರಂಧ್ರದಿಂ
ತೊಟ್ಟನೊಕ್ಕುದು ಪೂರ್ವಭುಂಜಿತಭೂತಿ ಭೂತಳದೊಳ್ ಪ್ರಿಯೇ ॥ ೧೧೦ ॥

ಇಂತಂಗಾಲೊಳ್ನೆಟ್ಟು ಕಟ್ಟುರ್ಚಿ ತೋರ್ಪ ಪೊಸದಸಿಯಂನೊಸೆದಿಕ್ಕುಳದಿಂ ತೆಗೆದೊಂದುನೆವದಿಂದಾಘಾಯದೊಳೊಗುವ ಮುನ್ನುಂಡ ವಿಭೂತಿಯನಲಂಪಿನ ಪೆಂಪಂ ತಾಂ ಪದೆದು ಜಗಕ್ಕಱಿಪಿತಚ್ಛಬರಾಕೃತಿಯಾಗಿರ್ದೀಶ್ವರನದೃಶ್ಯಮಾಗಿ ಪೋಗೆ,

೧೦೭. "ಶ್ರೇಷ್ಠನಾದ ಬೇಡನೆ ಕೇಳು, ಗೌರೀಪತಿಯಾದ ಸೋಮೇಶ್ವರನಿಗೆ ಧೂಪವನ್ನು ಹೊತ್ತು ಮೆಲ್ಲನೆ ನಾನು ಬರುತ್ತಿರಲು ಮುಳ್ಳು ಕಾಲಿಗೆ ನಾಟಿ ನಡೆಯಲು ಸ್ವಲ್ಪವೂ ಬಿಡುತ್ತಿಲ್ಲ, ಏನು ಮಾಡಲಿ" ಎಂದನು. ೧೦೮. ಹಾಗೆ ಹೇಳಲು ಕೇಳಿ "ಎಲೆ ಭಕ್ತನೆ ಮೆಲ್ಲನೆ ಮುಳ್ಳನ್ನು ತೆಗೆಯುತ್ತೇನೆ ಎಲ್ಲಿ ಪಾದವನ್ನು ತೋರು" ಎನ್ನಲು ಅದಕ್ಕೆ ಓಹಿಲನು [ಎಲೆ] ವನಚರ ನೀನು ನನ್ನ ಕಾಲನ್ನು ಮುಟ್ಟಲಾಗದು ಎನ್ನಲು ಶಂಕರನು ಆಗ ಮತ್ತೆ ಹೀಗೆಂದನು. ೧೦೯. ನಾನು ಲಿಂಗಧಾರಿ ಎನ್ನಲು, ಶಿವಲಿಂಗ ಧರಿಸಿದ ನೀನು ನನ್ನ ಪಾದವನ್ನು ಮುಟ್ಟುವುದು ಸರಿಯಲ್ಲ ಎಂದು ಓಹಿಲ ನುಡಿಯಲು, ಎಲೆ ಉತ್ತಮನೆ, [ನನ್ನಲ್ಲಿ] ಚಿಮಟವಿದೆ ಎನ್ನಲು ಅದಕ್ಕೆ ಓಹಿಲನು ಮತ್ತೆ ಹೀಗೆಂದನು. ೧೧೦. ದೃಷ್ಟಿ ತಾಗುವಂತೆ ಸೊಗಸಾದ ಪಾದಗಳನ್ನು ಹೊಂದಿರುವ ಚೆಲುವನು ನನ್ನ ಪಾದವನ್ನು ಮುಟ್ಟದೆ ಮುಳ್ಳನ್ನು ತೆಗೆಯುವುದು ಎನ್ನಲು ಶೋಭಿಸುವ ಇಕ್ಕುಳದಿಂದ ಚೆನ್ನಾಗಿ ನಾಟಿದ್ದ ಮುಳ್ಳನ್ನು ಮೆಲ್ಲನೆ ತೆಗೆಯಲು ಪ್ರಿಯೆ, ಅದರ ತೂತಿನಿಂದ ಬೇಗನೆ ಹಿಂದೆ ಉಂಟುಮಾಡಿದ್ದ ಬೂದಿಯು ಭೂಮಿಯ ಮೇಲೆ ಹೊರಸೂಸಿತು. ವ॥ ಹೀಗೆ ಅಂಗಾಲಿನಲ್ಲಿ ಆಳವಾಗಿ ಬೇರೂರಿದ ಹೊಸದಸಿಯನ್ನು ಇಕ್ಕುಳದಿಂದ ತೆಗೆದು ಆ ನೆಪದಲ್ಲಿ ಹಿಂದೆ ತಿಂದ ಬೂದಿಯು ಗಾಯದಿಂದ ಹೊರಬರಲು ಅತಿಶಯವಾದ ಘನತೆಯನ್ನು ಪ್ರೀತಿಯಿಂದ ಲೋಕಕ್ಕೆ ತಿಳಿಸಿ ಆ ಬೇಡನ ರೂಪು ಧರಿಸಿದ್ದ

ಉಚ್ಚವದಿಂ ದಸಿಯಂ ತೆಗೆ
ದಚ್ಚಿಗೆ ಗೋಚರಿಸದೈದಲಾ ಲುಬ್ಧಕನಂ।
ದುಚ್ಚಮಹಿಮೆಯನೆ ಕಂಡಿರ
ದಚ್ಚರಿವಡುತೋಹಿಲಾಂಕನಂದೆಟ್ಟಿಂದಂ ॥ ೧೧೧ ॥

ಇಂತಚ್ಚರಿವಡುತ್ತುಂ ಬ್ರಹ್ಮಾರ್ಚಿತನರ್ಚನೆಯ ಕಾಲಂ ತಪ್ಪುಗುಮೆಂದಚ್ಚವೊಚ್ಚಪೊಸಗಂಪಂ ದೆಸೆದೆಸೆಗೆ ಪಸರಿಸುವ ಧೂಪದ ಕಾವಡಿಯಂ ಪೊತ್ತುಕೊಂಡುಚ್ಚವದಿಂ ಚರ್ಚರವೆಟ್ಟಿಂದಚ್ಚಿಗೊಳಿಪ್ಪ ಸೌರಾಷ್ಟನಾಲಯಮಂ ಪೊಕ್ಕಾಕಂಬಿಯಂ ತಂದೊಂದು ನಿರ್ಮಳಸ್ಥಳದೊಳಿಱಿಪಿ ಯೆಂದಿನಂದದಿನಂದೊಲ್ದು ಶುದ್ಧಸ್ನಾನಮಂ ಮಾಡಿ ವಿಭೂತಿ ರುದ್ರಾಕ್ಷಿಯಂ ತಳೆದತಿವಿಲಾಸಸುಧಾಶರಧಿಯೊಳ್ಮೂಡಿ ಮುಳುಂಗಾಡುತ್ತುಂ ಸೋಮಾರ್ಧಚೂಡಸೋಮೇಶ್ವರಂಗೋಹಿಲದೇವಂ. ಮನಂಮುಂಚಿ ಪಳಂಚುವುಂಚಭಕ್ತಿಯಿಂದದಂ ಷೋಡಶೋಪಚಾರಪೂಜೆಯಂ ಮಾಡುತ್ತಮಿರೆಯಿರೆ,॥

ಓಹಿಲದೇವಂ ವಿಗಳಿತ
ದೇಹಗುಣಾನೀಕನಮಳಚಾರಿತ್ರಂನಿ।
ರ್ಮೋಹಂ ನಿರಹಂ ಪುಣ್ಯಾ
ವ್ಯೂಹಂ ಸೋಮೇಶನಂ ಸಮರ್ಚಿಸುತೆಸೆದಂ ॥ ೧೧೨ ॥

ಪರಿತೋಷಂ ಬಡೆದಗಜಾ
ವರಸೋಮೇಶ್ವರನನರ್ಚಿಸುತ್ತೋಹಿಲನಂ।
ದಿರಲೀಕ್ಷಿಸಿ ತಮ್ಮಡಿಗಳ್
ಪಿರಿದುಮಸೂಯಾತಿರೇಕಮಂ ತಾವ್ ತಳೆದರ್ ॥ ೧೧೩ ॥

ಈಶ್ವರನು ಅದೃಶ್ಯವಾಗಿ ಹೋಗಲು, ೧೧೧. ಬೇಗನೆ ಮುಳ್ಳನ್ನು ತೆಗೆದು ಕಣ್ಣಿಗೆ ಕಾಣಿಸದೆ ಮರೆಯಾಗಿ ಹೋಗಲು, ಆ ಬೇಡನ ಅತಿಶಯವಾದ ಮಹಿಮೆಯನ್ನು [ಹಿಂದೆಂದೂ] ಕಂಡಿರದೆ ಅಚ್ಚರಿಗೊಂಡು ಓಹಿಲದೇವನು ನಡೆದುಬಂದನು. ವ॥ ಹೀಗೆ ಅಚ್ಚರಿ ತಾಳುತ್ತ ಬ್ರಹ್ಮನಿಂದ ಪೂಜೆಗೊಂಡ ಶಿವನ ಪೂಜೆಯ ಕಾಲ ತಪ್ಪುವುದೆಂದು ನವನವೀನವಾದ ಸುವಾಸನೆಯನ್ನು ದಿಕ್ಕು ದಿಕ್ಕಿಗೆ ಹರಡುವ ಧೂಪದ ಕಾವಡಿಯನ್ನು ಹೊತ್ತುಕೊಂಡು ಉತ್ಸವದಿಂದ ಬೇಗನೆ ಬಂದು ಕಣ್ಸೆಳೆವ ಸೌರಾಷ್ಟ್ರದೊಡೆಯನ ಆಲಯವನ್ನು ಹೊಕ್ಕು ಕಂಬಿಯನ್ನು ತಂದು ಒಂದು ನಿರ್ಮಲ ಸ್ಥಳದಲ್ಲಿ ಇಳಿಸಿ ಎಂದಿನಂತೆ ಪ್ರೀತಿಯಿಂದ ಸ್ನಾನಮಾಡಿ ಶುದ್ಧನಾಗಿ ವಿಭೂತಿ ರುದ್ರಾಕ್ಷಿಯನ್ನು ಧರಿಸಿ ಲಾವಣ್ಯ ಕ್ಷೀರ ಸಾಗರದಲ್ಲಿ ಮೂಡಿ ಮುಳುಗಾಡುತ್ತ ಅರ್ಧಚಂದ್ರನನ್ನು ಶಿರದಲ್ಲಿ ಧರಿಸಿದ ಸೋಮೇಶ್ವರನಿಗೆ ಓಹಿಲದೇವನು ಮನಸ್ಸನ್ನು ಮೀರಿ ತಾಗುವ ಶ್ರೇಷ್ಠ ಭಕ್ತಿಯಿಂದ ಹದಿನಾರು ಬಗೆಯ ಉಪಚಾರ ಪೂಜೆಯನ್ನು ಮಾಡುತ್ತಲಿರಲು, ೧೧೨. ಓಹಿಲದೇವನು ದೇಹಗುಣಗಳನ್ನು ಕಳಚಿಕೊಂಡವನೂ ಪರಿಶುದ್ಧ ಚಾರಿತ್ರನೂ ನಿರ್ಮೋಹನೂ ನಿರಹಂಕಾರಿಯೂ ಪುಣ್ಯವ್ಯೂಹನೂ ಆದ ಸೋಮೇಶನನ್ನು ಪೂಜಿಸುತ್ತ ಶೋಭಿಸಿದನು. ೧೧೩. ಓಹಿಲನು ಸಂತೋಷಗೊಂಡು ಪಾರ್ವತೀವಲ್ಲಭನಾದ ಸೋಮೇಶ್ವರನನ್ನು ಪೂಜಿಸುತ್ತಿರಲು ಅದನ್ನು

ಇವನೇಗೈದೊಡಮಾಮು
ತ್ಸವದಿಂ ಸೋಮೇಶನಂ ಸಮರ್ಚಿಸುವುದ್ದಂ।
ಡವಿಧಮನುಱಿಯಮಿದಕ್ಕುಂ
ಟು ವಿಚಾರಮದೆಂದು ತಮ್ಮಡಿಗಳಿಂತೆಂದರ್ ॥ ೧೧೪ ॥

ಈತಂ ಶಿವಂಗೆ ಶೂಲಿಗೆ
ಭೂತೇಶಂಗೆಸೆವ ಸೋಮನಾಥಂಗಧಿಕ।
ಪ್ರೀತಿ ಮಿಗೆ ತಂದ ಧೂಪಮ
ನೀತೆಱಿದಿಂದಱಿಯದಂತೆ ತೆಗೆವುದೆ ಕಜ್ಜಂ ॥ ೧೧೫ ॥

ನಿಚ್ಚಮಿವಂ ತಂದೊಲ್ದೀ
ತಚ್ಚಂದ್ರಧರಂಗೆ ಮೋದದಿಂದರ್ಪಿಸುವು।
ದ್ಯಚ್ಚಾರ್ವಗರಂ ಕಳ್ದೊಡೆ
ಬೆಚ್ಚರಮಿವನುಱಿದು ಪೋಪನೀಪಟ್ಟಣದಿಂ ॥ ೧೧೬ ॥

ಇದೆ ಬುದ್ಧಿಯೆಂದೊಡನೆ ದು
ರ್ಮದದಿಂ ತಮ್ಮಡಿಗಳೋಹಿಲಂ ಸೋಮೇಶಂ।
ಗೆರ್ದೆಗೊಂಡು ತಂದ ನವಧೂ
ಪದ ಕಂಬಿಯನಱಿಯದಂತೆ ಮೆಲ್ಲನೆ ತೆಗೆದರ್ ॥ ೧೧೭ ॥

ಇಂತು ಧೂಪದ ಕಂಬಿಯಂ ತೆಗೆದಂದು ತಮ್ಮಡಿಗಳ್ಕರಂ
ಸಂತಸಂಬಡೆದೊಂದು ಗೊಂಟಿನೊಳಂದಿನಂತಿರಲೋಹಿಲಂ।
ಕಂತುವೈರಿಯನೊಲ್ದು ಪೂಜಿಸಿ ಮೇಣ್ಸುಧೂಪಮನಿಕ್ಕಲೋ
ರಂತಿರೊಪ್ಪುವ ಕೆಂಡಮಂ ಪುಟಮಾಡಿದಂ ತರಳೇಕ್ಷಣೇ ॥ ೧೧೮ ॥

ನೋಡಿದ ಅರ್ಚಕರು ಹೆಚ್ಚಿನ ಅಸೂಯೆಯನ್ನು ಹೊಂದಿದರು. ೧೧೪. ನಾವು ಏನು ಮಾಡಿದರೂ ಇವನು ಉತ್ಸವದಿಂದ ಸೋಮೇಶನನ್ನು ಪೂಜಿಸುವ ಪ್ರಚಂಡ ವಿಧಾನವನ್ನು ಬಿಡನು. ಇದಕ್ಕೊಂದು ಆಲೋಚನೆಯಿದೆಯೆಂದು ಅರ್ಚಕರು ಹೀಗೆಂದರು. ೧೧೫. ಈತ ಶಿವನಿಗೆ, ಶೂಲಿಗೆ, ಭೂತೇಶನಿಗೆ, ಶೋಭಿಸುವ ಸೋಮನಾಥನಿಗೆ ಅಧಿಕ ಪ್ರೀತಿಯಿಂದ ಹೇರಳವಾಗಿ ತಂದ ಧೂಪವನ್ನು ಈ ರೀತಿ ಅವನಿಗೆ ತಿಳಿಯದಂತೆ ತೆಗೆಯುವುದೇ ನಾವು ಮಾಡಬೇಕಾಗಿರುವ ಕಾರ್ಯ. ೧೧೬. ನಿತ್ಯವೂ ಇವನು ಪ್ರೀತಿಯಿಂದ ತಂದು ಚಂದ್ರಧರನಾದ ಶಿವನಿಗೆ ಆನಂದದಿಂದ ಅರ್ಪಿಸುವ ಶ್ರೇಷ್ಠ ಧೂಪವನ್ನು ಕದ್ದು [ಬಚ್ಚಿಟ್ಟರೆ] ಇವನು ಈ ಪಟ್ಟಣದಿಂದ ಬೇಗನೆ ಹೊರಟುಹೋಗುವನು. ೧೧೭. ಇದೇ ಬುದ್ಧಿ ಎಂದು ಒಡನೆ ಕೆಟ್ಟಗರ್ವದಿಂದ ಅರ್ಚಕರು ಓಹಿಲನು ಸೋಮೇಶನಿಗೆಂದು ಮನಮೆಚ್ಚಿ ತಂದ ಹೊಸಧೂಪದ ಕಂಬಿಯನ್ನು ಅವನಿಗೆ ತಿಳಿಯದ ಹಾಗೆ ಕದ್ದೊಯ್ದರು. ೧೧೮. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಹೀಗೆ ಧೂಪದ ಕಾವಡಿಯನ್ನು ಕದ್ದೊಯ್ದು [ಬಚ್ಚಿಟ್ಟು] ಅತ್ಯಾನಂದದಿಂದ ಒಂದು ಮೂಲೆಯಲ್ಲಿ ಅರ್ಚಕರಿರಲು, ನಿತ್ಯದಂತೆ ಓಹಿಲನು ಮದನ ವೈರಿಯಾದ ಶಿವನನ್ನು ಪ್ರೀತಿಯಿಂದ ಪೂಜಿಸಿ ಒಳ್ಳೆಯ ಧೂಪವನ್ನು ಹಾಕಲು

ಕೆಂಡಮಂ ಪುಟಮಾಡಿ ಮೋಕ್ಷವಧೂಮಣಿಪ್ರಿಯನೋಹಿಲಂ
ಖಂಡಚಂದ್ರಧರಂಗೆ ಕೂರ್ತು ಸಮರ್ಪಿಸಲ್ಕಗರಂ ಮನಂ।
ಗೊಂಡು ನಿಟ್ಟಿಸೆ ಕಂಬಿಯಿಲ್ಲದಿರಲ್ಕರಂ ಭಯದಿಂದಮು
ಚ್ಚಂಡವಿಸ್ಮಯವಾಂತು ನಿಬ್ಬೆರಗಾದನುತ್ಪಲಲೋಚನೇ ॥ ೧೧೯ ॥

ಇನ್ನೀಸೌರಾಷ್ಟ್ರವರಂ
ಗುನ್ನತಧೂಪಮನೆ ತರ್ಪೆನೆಂದೆನಲತಿದೂ।
ರಂ ನಿತ್ಯಾರ್ಚನೆ ತಪ್ಪಿದೊ
ಡನ್ನೆಯಮೆಂದಂದು ಮಗುಟ್ದು ನೃಪನಿಂತೆಂದಂ ॥ ೧೨೦ ॥

ಧೂಪದೆಣೆಗೊಲ್ದು ಚಂದ್ರಕ
ಲಾಪಂಗರ್ಪಿಸುವೆನೆನ್ನ ದೇಹಮನೆಂದಾ।
ಭೂಪತಿ ಯಿಂತೆಂದು ಬಟಿ
ಕ್ಕೋಪಳೆ ಕೇಳ್ನಿಶ್ಚಯಿಸಿ ನುಡಿದನುಮ್ಮಳಮಂ ॥ ೧೨೧ ॥

ಆಂ ಕರಮೊಶನಲ್ಲದಿತರಾಶೆಗೆ ಚಿತ್ತಮನಿತ್ತೊಡಂ ಮನಂ
ಶಂಕಿಸಿತಾದೊಡಂ ರಸನೆ ಪಂಚಕವರ್ಣಮನೊರ್ಮೆ ಮಾಣ್ದೊಡಂ।
ಶಂಕರಭಕ್ತಭಕ್ತಿಪೆರಸಾರ್ದೊಡೆ ಮೆನ್ನಸಮುಲ್ಲಸಚ್ಛರೀ
ರಂ ಕಡು ನಾಱುಗಲ್ಲಾದೊಡೆ ಶೂಲಿಗೆ ಸಲ್ಗೆ ಧೂಪಮೆಂಬಿನಂ ॥ ೧೨೨ ॥

ಎಂದಿಂತು ಭಾಷೆಗೊಟ್ಟತಿವಿರಕ್ತಿಯಿಂದಂ ಭಕ್ತವತ್ಸಲನಪ್ಪ ಸೌರಾಷ್ಟ್ರಸೋಮನಾಥಂಗಭಿವಂದಿಸಿ ಯೆನ್ನೊಡಲಂ ನಿಮ್ಮಗೆ ನಿಚ್ಚಂ ಸಮರ್ಪಿಸುವಚ್ಚಗುಗ್ಗಳಕ್ಕೆ ಪಡಿಯಾಗಿ ಕೈಕೊಂಬುದೆಂದು ಪೊಗಟ್ಟು ಮುಂದೆ ಧಗಧಗಿಪ ಧೂಪಾಂಗಾರದೊಳ್ಮಂಡಿಸಲೆಂದೋಹಿಲದೇವನುದ್ಯುಕ್ತನಾಗಿ,

ಕೆಂಡವನ್ನು ಪುಟಮಾಡಿದನು. ೧೧೯. ಕಮಲಾಕ್ಷಿ, ಕೆಂಡವನ್ನು ಪುಟಮಾಡಿ ಮೋಕ್ಷವಧುವಿನ ಪ್ರಿಯನಾದ ಓಹಿಲನು ಶಿವನಿಗೆ ಪ್ರೀತಿಯಿಂದ ಧೂಪವನ್ನು ಅರ್ಪಿಸ ಬಯಸಿ ನೋಡಲು ಕಂಬಿಯು ಕಾಣದಿರಲು ಹೆಚ್ಚಿನ ಭಯದಿಂದ, ಅತಿಶಯವಾದ ಆಶ್ಚರ್ಯದಿಂದ ಕೂಡಿ ಬಲುಸೋಜಿಗಗೊಂಡನು. ೧೨೦. ಇನ್ನು ಈ ಸೌರಾಷ್ಟ್ರದೊಡೆಯನಿಗೆ ಶ್ರೇಷ್ಠಧೂಪವನ್ನು ತರೋಣವೆಂದರೆ [ಮಲಯಪರ್ವತವು] ಬಹಳ ದೂರದಲ್ಲಿದೆ. ನಿತ್ಯಾರ್ಚನೆ ತಪ್ಪಿದರೆ ಅನ್ಯಾಯವಾಗುತ್ತದೆ ಎಂದು ಮತ್ತೆ ಮಹಾರಾಜನು ಹೀಗೆಂದನು. ೧೨೧. ಪ್ರಿಯಳೇ ಕೇಳು, ಧೂಪಕ್ಕೆ ಸಮನಾಗಿ ಶಿವನಿಗೆ ನನ್ನ ದೇಹವನ್ನೆ ಅರ್ಪಿಸುವೆನು ಎಂದು ಆ ಮಹಾರಾಜನು ನಿಶ್ಚಯಿಸಿ, ಮನದ ದುಗುಡವನ್ನು ನುಡಿದನು. ೧೨೨. ನಾನು ವಿಶೇಷವಾಗಿ ಶಿವನನ್ನಲ್ಲದೆ ಇತರ ಆಸೆಗೆ ಮನಸ್ಸನ್ನು ಕೊಟ್ಟಿದ್ದರೆ, ಮನಸ್ಸು ಸಂದೇಹಿಸಿದ್ದೇ ಆದರೆ, ನಾಲಗೆ ಪಂಚಾಕ್ಷರಿಯನ್ನು ಒಮ್ಮೆ ಜಪಿಸದೆ ಉಳಿದಿದ್ದರೆ, ಶಿವಭಕ್ತನ ಭಕ್ತಿ ಹಿಂದೆ ಸರಿದಿದ್ದರೆ ನನ್ನ ಹೊಳೆವ ಶರೀರವು ಚೆನ್ನಾಗಿ ನಾರಲಿ ಇಲ್ಲದಿದ್ದರೆ ಶಿವನಿಗೆ ಸಲ್ಲುವ ಧೂಪವಾಗಲಿ ಎಂದನು. ವ॥ ಹೀಗೆಂದು ಭಾಷೆ ಕೊಟ್ಟು ಅತಿವಿರಕ್ತಿಯಿಂದ ಭಕ್ತವತ್ಸಲನಾದ ಸೌರಾಷ್ಟ್ರ ಸೋಮನಾಥನಿಗೆ ನಮಸ್ಕರಿಸಿ ನನ್ನ ಶರೀರವನ್ನು ನಿಮಗೆ ನಿತ್ಯವೂ ಸಮರ್ಪಿಸುವ ಶುದ್ಧವಾದ ಧೂಪಕ್ಕೆ ಪ್ರತಿಯಾಗಿ ಸ್ವೀಕರಿಸುವುದು ಎಂದು ಹೊಗಳಿ ಮುಂದೆ ಧಗಧಗಿಸುವ

ಇನಮಂಡಲಮಂ ತಾರೆಗ
ಳಿನನೊಡೆವೆರೆವಂತೆ ದರ್ಶೆಯೊಳ್ ಜ್ವಲಿಸುತ್ತಿ।
ರ್ಪನಲಂ ಬೊಕ್ಕೋಹಿಲನೃಪ
ನನಘಂ ತನ್ಮಧ್ಯದಲ್ಲಿ ಮಂಡಿಸಿದಾಗಳ್ ॥ ೧೨೩ ॥

ಪೊಸಗಂಪಿಂಗೆಱಪುದ್ಧಭೃಂಗತತಿಯಾಗಲ್ ತೋರ್ಪ ಧೂಮಂ ವಿರಾ
ಜಿಸುವುತ್ತುಂಗಪರಾಗಮಾಗೆ ನವಭಸ್ಮಂ ನಿಟ್ಟೆಸಳ್ನಾಡೆ ಜ್ಯಂ।
ಭಿಸುವುತ್ಕೀಲಮದಾಗೆ ತದ್ವಿಪುಳಧೂಪಾಂಗಾರವೆಂದೆಂಬ ಶೋ
ಣಸರೋಜಾತದೊಳೊಪ್ಪಿದಂ ಧರಣಿಪಂ ಬ್ರಹ್ಮಂಬೊಲಬ್ಜಾನನೇ ॥ ೧೨೪ ॥

ವರಜಿಹ್ವಾಂಕುರಮಂ ಕರಂ ನೆಗಟ್ದಿ ಸತ್ಪಂಚಾಕ್ಷರೀವರ್ಣಮೊಂ
ದಿರೆ ಸೌರಾಷ್ಟ್ರಕಸೋಮನಾಥಪದಪಂಕೇಜಾತಮಂ ಬಿಚ್ಚದ।
ಪ್ಪಿರೆ ಚಿತ್ತಂ ಘಣಘಣರಾವಯುಕ್ತಘನಘಂಟೋಲ್ಲಾಸಸದ್ದಕ್ಷಿಣೇ
ತರಹಸ್ತಂ ಪಿರಿದೊಪ್ಪಲೊಪ್ಪಿದನಿಳೇಶಂ ತನ್ಮಹಾಜ್ವಾಲೆಯೊಳ್ ॥ ೧೨೫ ॥

ಚಂಚಲತೆ ಪೊರ್ದದಿರೆ ರೋ
ಮಾಂಚನಮಂದಲರೆ ಮಿಗೆ ಮುದಂ ಚೇತನಮಂ।
ಮುಂಚೆ ತದಗ್ನಿಜ್ವಾಲೆ ಪ
ಳಂಚೆ ನಿಜಾಂಗಮನಿಳೇಶನೊಪ್ಪಿದನಬಲೆ ॥ ೧೨೬ ॥

ವಿಲಸದ್ಭಕ್ತಿ ವಿಜೃಂಭಿಸ
ಲಲರೆ ಮನಂ ತನು ಸುಗಂಧಮಂ ಪಸರಿಸಲಾ।
ಜ್ವಲನದೊಳೋಹಿಲನೆಸೆದಂ
ಚಲಿಸದೆ ತದ್ಧೂಪಕೆಣೆಯೆನಿಸಿ ಶಶಿವದನೇ ॥ ೧೨೭ ॥

ಧೂಪದ ಕೆಂಡದಲ್ಲಿ ಕುಳಿತುಕೊಳ್ಳಲು ತೊಡಗಿ, ೧೨೩. ಚಂದ್ರಮಂಡಲವನ್ನು ನಕ್ಷತ್ರಗಳ ಪತಿಯು ಕೂಡುವಂತೆ ಹಳ್ಳದಲ್ಲಿ ಹೊಳೆಯುತ್ತಿರುವ ಬೆಂಕಿಯನ್ನು ಪಾಪಗಳೇ ಇಲ್ಲದ ಓಹಿಲನು ಹೊಕ್ಕು ಅದರ ಮಧ್ಯದಲ್ಲಿ ಕುಳಿತಾಗ, ೧೨೪. ಕಮಲಮುಖೀ, ಕಾಣುವ ಹೊಗೆಯು ಹೊಸ ಸುವಾಸನೆಗೆ ಕವಿಯುವ ಶ್ರೇಷ್ಠ ದುಂಬಿಗಳಂತಿರಲು, ಶೋಭಿಸುವ ಶ್ರೇಷ್ಠವಾದ ಹೊಸ ಭಸ್ಮವು ಕಂಪನ್ನು ನಿವಾರಿಸಿದಂತಿರಲು, ನಿಡಿದಾದ ದಳವು ಉತ್ಕೀಲವಾಗಿರಲು ಅಪಾರವಾದ ಧೂಪದ ಕೆಂಡವೆಂಬ ಕಮಲದಲ್ಲಿ ಓಹಿಲ ಮಹಾರಾಜನು ಬ್ರಹ್ಮನ ರೀತಿಯಲ್ಲಿ ಶೋಭಿಸಿದನು. ೧೨೫. ನಾಲಗೆಯ ತುದಿಯು ಪ್ರಸಿದ್ಧವಾದ ಪಂಚಾಕ್ಷರಿ ಮಂತ್ರವನ್ನು ಹೊಂದಿರಲು, ಸೌರಾಷ್ಟ್ರದೊಡೆಯ ಸೋಮನಾಥನ ಪಾದಕಮಲಗಳನ್ನು ಬಿಡದೆ ಮನವು ಅಪ್ಪಿರಲು, ಘಣಘಣವೆನ್ನುವ ಗಂಟೆಯ ಧ್ವನಿಯನ್ನು ಚೆನ್ನಾಗಿ ಬಲಗೈ ಮಾಡುತ್ತಿರಲು ಆ ಮಹಾಜ್ವಾಲೆಯಲ್ಲಿ ಓಹಿಲ ಮಹಾರಾಜನು ಶೋಭಿಸಿದನು. ೧೨೬. ಅಬಲೇ, ಚಾಂಚಲ್ಯವನ್ನು ಹೊಂದದೆ ಇರುತ್ತಿರಲು ರೋಮಾಂಚನವಾಗುತ್ತಿರಲು ಹೆಚ್ಚಿನ ಆನಂದವು ಚೇತನವನ್ನು ಮೀರುತ್ತಿರಲು ಅಗ್ನಿಜ್ವಾಲೆಯು ಶರೀರವನ್ನು ಥಳಥಳಿಸುತ್ತಿರಲು ಮಹಾರಾಜನು ಶೋಭಿಸಿದನು. ೧೨೭. ಚಂದ್ರಮುಖೀ, ಪ್ರಜ್ವಲಿಸುವ ಭಕ್ತಿಯು ಶೋಭಿಸಿರಲು, ಮನವು ಅರಳಿರಲು,

ಇಂತತಿಭಕ್ತಿಯಿಂ ಪಿಡಿದ ಧೃಢವ್ರತಕ್ಕೆಡರಱಿಸದಂತೆ ಕಡುಗಂಪಮರ್ದ ಧೂಪದ ಪಡಿಗೆ ಯೆಂದು ತನ್ನೊಡಲನರ್ಪಿಸಿ ಬಿಡದೆ ಕಿಡಿಗಡಣಮನೆಡೆವಿಡಿದುಗುಳ್ವ ಕೆಂಡದೊಳ್ಕುಂಡಿಸಿ ಮನಂಗೊಳಿಪೋಹಿಲದೇವನ ಮನನಿಷ್ಠೆಯನಾಕೃಪಾಕರನಪ್ಪ ಸೋಮನಾಥಂ ಕಂಡು ಮೆಚ್ಚಿ ಪ್ರಸನ್ನನಾಗಲೆಂದುದ್ಯೋಗಿಸಿ,

ಸಸಿವಟ್ಟಂ ಕೋಟಿಯಂ ಕೀೞ್ಪಡಿಸುವಮಳಿನಾಂಗಪ್ರಭಾಸಂತಚಯಂಚುಂ
ಬಿಸೆ ಸರ್ವಾಶಾಂತಮಂ ಮಂಜುಲಫಣಿಕಟಕಂಪಂಚವಕ್ತ್ರಂ ತ್ರಿಣೇತ್ರಂ
ಲಸದುದ್ಯನ್ನೀಲಕಂಠಂ ಶಶಿಶಕಲಧರಂ ಕೃತ್ತಿವಾಸಂ ಪಿನಾಕಂ
ವಸುಧೇಶಂಗೋಹಿಲಂಗಕ್ಷಯನತಿಮುದದಿಂ ತೋಱಿದಂ ವಿಶ್ವರೂಪಂ ॥ ೧೨೮ ॥

ಇಂತಮಳಿನಮೂರ್ತಿಯನಾ
ದಂ ತೋಱಿದ ಸೋಮನಾಥನಂ ಕಂಡಾತಂ।
ಸಂತಸದಿಂ ಪೊಗೞಲುಮಾ
ಕಾಂತಂ ಕೂರ್ತೋಹಿಲಂಗೆ ಮಗುೞ್ದಿಂತೆಂದಂ ॥ ೧೨೯ ॥

ಮೆಚ್ಚಿದೆನೋಹಿಲ ನಿನ್ನಯ
ನಿಚ್ಚಟದುರುಭಕ್ತಿಗೆಂದು ಕೈವಿಡಿದೊಲ್ದಂ।
ಚಚ್ಚಂದ್ರಮೌಳಿ ಯಾತಂ
ಗುಚ್ಚವದಿಂದಿತ್ತನಧಿಕಗಣವರಪದಮಂ ॥ ೧೩೦ ॥

ದೇಹ ಸುಗಂಧವನ್ನು ಹರಡಿರಲು ಆ ಬೆಂಕಿಯಲ್ಲಿ ಆ ಧೂಪಕ್ಕೆ ಸಮನಾಗಿ ಅಲುಗಾಡದೆ ಓಹಿಲನು ಅಂದಗೊಂಡನು. ವ॥ ಹೀಗೆ ಅತಿಭಕ್ತಿಯಿಂದ ಹಿಡಿದ ದೃಢವ್ರತಕ್ಕೆ ಕೇಡಾಗದಂತೆ ಸುವಾಸನೆಯಿಂದ ಕೂಡಿದ ಧೂಪಕ್ಕೆ ಪ್ರತಿಯಾಗಿ ತನ್ನ ಶರೀರವನ್ನೇ ಅರ್ಪಿಸಿ ಬಿಡದೆ ಕಿಡಿಗಳನ್ನು ಎಡೆಬಿಡದೆ ಕಾರುವ ಕೆಂಡದಲ್ಲಿ ಕುಳಿತು ಮನ ಸೆಳೆಯುವ ಓಹಿಲದೇವನ ಮನಸ್ಸಿನ ನಿಷ್ಠೆಯನ್ನು ಆ ಕೃಪಾಕರನಾದ ಸೋಮನಾಥನು ಕಂಡು ಮೆಚ್ಚಿ ಪ್ರಸನ್ನವಾಗಲು ತೊಡಗಿ, ೧೨೮. ಪೂರ್ಣಚಂದ್ರನ ಕೋಟಿಸಂಖ್ಯೆಯ ಕಿರಣಗಳನ್ನು ಕೀಳ್ಮಾಡುವ ತನ್ನ ಪರಿಶುದ್ಧವಾದ ದೇಹಕಾಂತಿಯಿಂದ ಎಲ್ಲಾ ದಿಕ್ಕುಗಳನ್ನು ಮುತ್ತಿಡುತ್ತ, ಮನೋಹರವಾದ, ನಾಗಕಂಕಣನೂ, ಪಂಚಮುಖನೂ, ತ್ರಿನೇತ್ರನೂ, ಹೊಳೆವ ಶ್ರೇಷ್ಠ ನೀಲಕಂಠನೂ, ಬಾಲಚಂದ್ರನನ್ನು ಧರಿಸಿರುವವನೂ, ಚರ್ಮದ ಬಟ್ಟೆಯನ್ನು ಧರಿಸಿರುವವನೂ, ತ್ರಿಶೂಲಧಾರಿಯೂ, ನಾಶರಹಿತನೂ ಆದ ಶಿವನು ವಿಶ್ವರೂಪವನ್ನು ಅತ್ಯಾನಂದದಿಂದ ಮಹಾರಾಜನಾದ ಓಹಿಲನಿಗೆ ತೋರಿದನು. ೧೨೯. ಹೀಗೆ ಪರಿಶುದ್ಧ ಮೂರ್ತಿಯನ್ನು ಚೆನ್ನಾಗಿ ತೋರಿದ ಸೋಮನಾಥನನ್ನು ಕಂಡು ಓಹಿಲನು ಆನಂದದಿಂದ ಹೊಗಳಲು ಶಿವನು ಓಹಿಲನನ್ನು ಕುರಿತು ಮತ್ತೆ ಹೀಗೆಂದನು. ೧೩೦. ಓಹಿಲಾ, ನಿನ್ನ ದೃಢಭಕ್ತಿಗೆ ಮೆಚ್ಚಿದೆನು ಎಂದು ಕೈಹಿಡಿದು ಚಂದ್ರಮೌಳಿಯು ಕೃಪೆಮಾಡಿ ಆತನಿಗೆ ಉತ್ಸವದಿಂದ

ಗಣಪದಮಂ ನೆಗಱ್ತೆವಡೆದೋಹಿಲಧರಾಧಿಪಂಗೆ ಕೊ
ಟ್ಟಣಿಮಹದಾದಿಸರ್ವಗತನಾಗಲದೃಶ್ಯಮನೈದಲೀಗಳೊ।
ಳ್ದೆಣಿಕೆಗಳುಂಬಮಾದ ಮುದದಿಂದ ಪೋದಪನೊರ್ವನುಲ್ಲಸ
ದ್ಘಣರವಘಂಟಿಕಾಕಲಿತವಾಮಕರಂ ಮೃಗಶಾಬಕೇಕ್ಷಣೇ ॥ ೧೩೧ ॥

ಈಸನನಾಯಸಂ ಬಡೆದು ಮೆಚ್ಚಿಸಿ ಯೊರ್ವನೆ ಕಂಗೊಳಿಪ್ಪ ಕೈ
ಲಾಸಪುರಕ್ಕೆ ಪೋಪ ನೃಪನೋಹಿಲನುದ್ಧಚರಿತ್ರಮಂ ಮಹೋ।
ಲ್ಲಾಸದಿನಂದು ತನ್ನ ಸತಿಗೊಲ್ದುಸುರುತ್ತೆಸೆವುದ್ಭಟಾಂಕಹೃ
ದ್ವಾಸಸುಧಾಂಶುಮೌಳಿ ಸಲೆ ರಕ್ಷಿಪುದೆನ್ನನೆ ಯಲ್ಲಮಪ್ರಿಯಾ ॥ ೧೩೨ ॥

ಇದು ಸಮಸ್ತಸುರಾಸುರಕದಂಬವಿಜೃಂಭಿತಮಕುಟತಟಘಟಿತನವರತ್ನ ಪುಂಜಸಂ
ಜಾತಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾ
ವನಪಾದನಖೋಚ್ಚಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣಮಾನಸಶ್ರೀಸೋಮರಾಜೇಂ
ದ್ರವಿರಚಿತಮಪ್ಪ ಕರ್ಣಾಟಕಶೃಂಗಾರಸಾರಮಹಾಪ್ರಬಂ
ಧದೊಳ್ ಓಹಿಲಚಾರಿತ್ರವರ್ಣನಂ ಏಕಾದಶಾ
ಶ್ವಾಸಂ ಸಂಪೂರ್ಣಮಾದುದು.

ಮೇಲಾದ ಗಣವರ ಪದವಿಯನ್ನು ಅನುಗ್ರಹಿಸಿದನು. ೧೩೧. ಜಿಂಕೆಯ ಮರಿಯ ನೋಟದಂತೆ ಕಣ್ಣುಳ್ಳವಳೇ, ಗಣಪದವಿಯನ್ನು ಪ್ರಖ್ಯಾತನಾದ ಓಹಿಲ ಮಹಾರಾಜನಿಗೆ ಕೊಟ್ಟು ಸಚರಾಚರಗಳಲ್ಲೆಲ್ಲಾ ಅಡಗಿರುವ ಶಿವನು ಅದೃಶ್ಯನಾಗಲು ಈಗ ಎಣಿಸಲು ಅಸಾಧ್ಯವಾದ ಆನಂದದಿಂದ ಹೊಳೆವ ಘಣ ಘಣ ಧ್ವನಿಯನ್ನುಂಟುಮಾಡುವ ಗಂಟೆಯನ್ನು ಬಲಗೈಯಲ್ಲಿ ಹಿಡಿದು [ಓಹಿಲನು] ಒಬ್ಬನೇ ಕೈಲಾಸಕ್ಕೆ ಹೋಗುತ್ತಿರುವನು. ೧೩೨. ಶಿವನನ್ನು ಆಯಾಸಗೊಂಡು ಮೆಚ್ಚಿಸಿ ಒಬ್ಬನೇ ಕಣ್ಣಿಗೆ ಅಂದವಾಗಿ ತೋರುವ ಕೈಲಾಸಕ್ಕೆ ಹೋಗುತ್ತಿರುವ ಓಹಿಲ ಮಹಾರಾಜನ ಉತ್ತಮ ಚರಿತ್ರವನ್ನು ಅಂದು ತನ್ನ ಪತ್ನಿಗೆ ಹೇಳುತ್ತ ಶೋಭಿಸಿರುವ ಉದ್ಭಟನ ಹೃದಯನಿವಾಸಿಯಾದ ಅಲ್ಲಮಪ್ರಿಯನಾದ ಚಂದ್ರಮೌಳಿಯೇ ನನ್ನನ್ನು ಚೆನ್ನಾಗಿ ಕಾಪಾಡುವುದು.

ಇದು ಸಮಸ್ತ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ ಕಿರೀಟಗಳ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳಿಂದುಂಟಾದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀ ಗುರು ವಿರೂಪಾಕ್ಷನ ಪವಿತ್ರವಾದ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರ ಪಕ್ಷಿಯಂತೆ ಕಾತರನಾಗಿರುವ ಸೋಮರಾಜನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದಲ್ಲಿ ಹನ್ನೊಂದನೆಯ ಆಶ್ವಾಸವಾದ ಓಹಿಲ ಚಾರಿತ್ರ ವರ್ಣನೆಯು ಮುಗಿಯಿತು.

# ಹನ್ನೆರಡನೆಯ ಆಶ್ವಾಸ

ಶ್ರೀಪಾರ್ವತೀಶ ಲೋಕಕೆ
ಪೋಪ ತದೋಹಿಲದೇವನ ಚಾರಿತ್ರಮನೊ।
ಲ್ದೋಪಳ್ಗೆ ಪೇಱುತ್ತೆಸೆದಂ
ಭೂಪಾಲಕತಿಲಕನುದ್ಭಟಕ್ಷಿತಿಪಾಲಂ ॥ ೧ ॥

ವಾಕ್ಚಿತ್ತಕ್ಕೆ ವಿದೂರನಂ ನಿರಘನಂ ನಿರ್ಮಾಯನಂ ನಿತ್ಯನಂ
ದಿಕ್ಚೇಲೋಜ್ವಲನಂ ಸುರೇಂದ್ರಮುಖದೇವಸ್ತುತ್ಯನಂ ಕೂರ್ತು ಸ।
ಮ್ಯಕ್ಚಿದ್ರೂಪನನೈದೆ ಮೆಚ್ಚಿಸಿ ಲಸತ್ಕೈಲಾಸಕೋರ್ವಂ ಸುಧಾ
ರುಕ್ಚೂಡಪ್ರಮಥತ್ವಮಂ ಪಡೆದು ಪೋಪಂ ತನ್ನೃಪಂ ಮಾನಿನೀ ॥ ೨ ॥

ಸಚ್ಚಿದ್ರೂಪನನಾದಂ
ಮೆಚ್ಚಿಸಿ ಕೈಲಾಸಕೋಹಿಲಂ ತಾನೊರ್ವಂ।
ಚಚ್ಚರಮೈದಲ್ಕಂಡಾ
ನುಚ್ಚವದಿಂ ಕಂಡು ನಕ್ಕೆನಂಬುಜಾಯತನೇತ್ರೇ ॥ ೩ ॥

ಎಂದಿತೋಹಿಲದೇವನುನ್ನತಚರಿತ್ರಮನುಸಿರ್ದು ನಕ್ಕ ಕಾರಣಮಂ ಪೇೞ್ದತದುರ್ವೀಪಾಲನಾಲಾಪಮಂ ಲೀಲೆ ಮಿಗಲಾಲಿಸಿ ಮಗುೞ್ದುದ್ಭಟರಾಜೇಂದ್ರಚಂದ್ರಮಂಗಾಸೌಂದರಿ ಮುಕುಳಿತಕರ ಸರೋಜೆಯಾಗಿ,

೧. ಕೈಲಾಸಕ್ಕೆ ಹೋಗುತ್ತಿರುವ ಓಹಿಲದೇವನ ಚಾರಿತ್ರವನ್ನು ಪ್ರೀತಿಯಿಂದ ನಲ್ಲೆಗೆ ಹೇಳುತ್ತಾ ರಾಜರುಗಳಲ್ಲಿ ತಿಲಕಪ್ರಾಯನಾದ ಉದ್ಭಟ ಮಹಾರಾಜನು ಶೋಭಿಸಿದನು. ೨. ಮಾನಿನೀ, ಮಾತು ಮನಗಳಿಗೆ ಮೀರಿದವನನ್ನು, ಪಾಪಗಳೇ ಇಲ್ಲದವನನ್ನು, ಮಾಯೆಗೆ ಒಳಗಾದವನನ್ನು, ನಿತ್ಯನನ್ನು, ದಿಕ್ಕುಗಳೇ ವಸ್ತ್ರವಾಗಿ ಹೊಳೆಯುವನನ್ನು, ಸುರೇಂದ್ರನೇ ಮೊದಲಾದ ಮುಖ್ಯ ದೇವತೆಗಳಿಂದ ಸ್ತುತಿಸಲ್ಪಟ್ಟವನನ್ನು ಸಮ್ಯಕ್ ಚಿದ್ರೂಪನನ್ನು ಪ್ರೀತಿಯಿಂದ ಚೆನ್ನಾಗಿ ಮೆಚ್ಚಿಸಿ, ಹೊಳೆವ ಕೈಲಾಸಕ್ಕೆ ಚಂದ್ರನ ಕಿರಣಗಳನ್ನು ಶಿರದಲ್ಲಿ ಧರಿಸಿರುವ ಶಿವನ ಪ್ರಮಥ ಗಣವರನಾಗಿ ಆ ಓಹಿಲ ಮಹಾರಾಜನು ಒಬ್ಬನೇ ಹೋಗುತ್ತಿರುವನು. ೩. ವಿಶಾಲವಾದ ಕಮಲದಂತಹ ಕಣ್ಣುಳ್ಳವಳೇ, ಸತ್-ಚಿತ್ ರೂಪನಾದ ಶಿವನನ್ನು ಚೆನ್ನಾಗಿ ಮೆಚ್ಚಿಸಿ ಕೈಲಾಸಕ್ಕೆ ಓಹಿಲನು ತಾನೊಬ್ಬನೇ ಬೇಗಬೇಗನೆ ಹೋಗುತ್ತಿರಲು ಅದನ್ನು ನಾನು ಉತ್ಸವದಿಂದ ನೋಡಿ ನಕ್ಕೆನು. ವ॥ ಹೀಗೆಂದು ಓಹಿಲದೇವನ ಉನ್ನತ ಚರಿತ್ರವನ್ನು ಹೇಳಿ, ನಕ್ಕ ಕಾರಣವನ್ನು ತಿಳಿಸಿದ ಮಹಾರಾಜನ ಮಾತುಗಳನ್ನು ಅತ್ಯಾನಂದದಿಂದ ಕೇಳಿ ಮತ್ತೆ ಉದ್ಭಟ ರಾಜೇಂದ್ರ ಚಂದ್ರಮನಿಗೆ

ಮನ್ಮನವೆಂಬ ತಾವರೆಗೆ ಭಾಸ್ಕರ ಕೇಳ್ ಶಿವನಂ ಮಹೇಶನಂ
ಜನ್ಮವಿದೂರನಂ ಪರಮನಂ ಮಿಗೆ ಮೆಚ್ಚಿಸಿ ಶಂಭುಲೋಕಕು।
ದ್ಯನ್ಮುದದಿಂದೆ ಪೋಪನವನೀಕ್ಷಿಪೆನೀಗಳೆ ತೋಱುನೆಲ್ಲಲಂ
ಸನ್ಮತಿವಂತೆ ಸೌಂದರಿಗೆ ತೋಱಿದನೋಹಿಲನಂ ನೃಪಾಲಕಂ ॥ ४ ॥

ಅದೆ ನೋಡಗ್ಗದ ಗುಗ್ಗುಳಕ್ಕೆ ಪಡಿಯೆಂದಿತ್ತಂಗಮಂ ವಹ್ನಿಗೊ
ಲ್ದೆರ್ದೆಗೊಂಡೀಶ್ವರಲೋಕಕೊರ್ವನೆ ವಲಂ ಪೋದಪ್ಪನೆಂದೆತ್ತಿ ಹ।
ಸ್ತದೆ ತೋರ್ಪಾತನನುಜ್ಞೆಯಂ ಪಡೆದು ಬಾನಂ ನಿಟ್ಟಿಸಲ್ಕೂಡೆ ತೋ
ಱಿದುದಂದೋಹಿಲನಚ್ಚಮೂರ್ತಿ ನಿಡುಗಣ್ಣಾಗ್ಗದ್ಮಪತ್ರಾಕ್ಷಿಯಾ ॥ ೫ ॥

ಭುವನಾಧಿಪನಂ ಮೆಚ್ಚಿಸಿ
ಜವದಿಂ ಕೈಲಾಸಕೊಲ್ದು ತಳರ್ವೋಹಿಲನಂ।
ಸವಿಲಾಸಂಬಡೆದೀಕ್ಷಿಸಿ
ಯುವತೀಮಣಿ ಪೆರ್ಚಿ ಮೆಯ್ಯನಿಕ್ಕಿದಳಾಗಳ್ ॥ ೬ ॥

ಮೆಯ್ಯಿಕ್ಕಿ ಮಗುಟ್ದು ಭಕ್ತಿಯಿ
ನೊಯ್ಯನೆ ನಿಲ್ತಂದು ನೆಗಟ್ದಿ ಸಂತಸದಿಂದಂ।
ಕೈಯ್ಯೆತ್ತಿ ಮುಗಿಯುತುಂ ಮಿಗೆ
ರೈಯ್ಯಮೆನಲ್ತತ್ಸುಧರ್ಮಸುತೆ ಶೋಭಿಸಿದಳ್ ॥ ೭ ॥

ನೆಗಟ್ದಿಟ್ಟಿಱಿಂದೆ ನಿಟ್ಟಿಪ
ಳಗಲದೆ ಕೀರ್ತಿಸುವಳುಬ್ಬುವಳ್ಮಣಿವಳ್ಳೈ।
ಮುಗಿವಳ್ ಸಂತಸಗಡಲೊ
ಳ್ಮಿಗೆ ತೇಂಕಾಡುತ್ತುಮಾಸುಧರ್ಮಜೆ ಯೆಸೆದಳ್ ॥ ೮ ॥

ಸೌಂದರಿಯು ಕರ ಕಮಲಗಳನ್ನು ಮುಗಿದು, ೪. ನನ್ನ ಮನವೆಂಬ ತಾವರೆಗೆ ಸೂರ್ಯನಂತಿರುವವನೆ ಕೇಳು, ಶಿವನನ್ನು, ಮಹೇಶನನ್ನು, ಜನ್ಮಗಳೇ ಇಲ್ಲದವನನ್ನು, ಪರಮನನ್ನು ಚೆನ್ನಾಗಿ ಮೆಚ್ಚಿಸಿ ಶಿವಲೋಕಕ್ಕೆ ಅತ್ಯಾನಂದದಿಂದ ಹೋಗುತ್ತಿರಲು ಅವನನ್ನು [ನಾನೂ] ನೋಡುತ್ತೇನೆ, ನೀನೀಗಲೇ ತೋರು, ಎನ್ನಲು ಒಳ್ಳೆಯ ಬುದ್ಧಿಯನ್ನು ಹೊಂದಿರುವ ಸೌಂದರಿಗೆ ಮಹಾರಾಜನು ಓಹಿಲನನ್ನು ತೋರಿದನು. ೫. ಅದೆ ನೋಡು ಶ್ರೇಷ್ಠ ಧೂಪಕ್ಕೆ ತನ್ನ ಶರೀರವೆ ಸಮನೆಂದು ಬೆಂಕಿಗೆ ತನ್ನ ಶರೀರವನ್ನು ಪ್ರೀತಿಯಿಂದ ಇತ್ತು , ಮನಸೆಳೆಯುವ ಶಿವಲೋಕಕ್ಕೆ ಒಬ್ಬನೆ ಹೋಗುತ್ತಿರುವನು ಎಂದು ಕೈ ಎತ್ತಿ ತೋರುವ ಆತನ ಒಪ್ಪಿಗೆಯನ್ನು ಪಡೆದು ಆಕಾಶವನ್ನು ನೋಡಲು ಕಮಲಾಕ್ಷಿಯ ವಿಶಾಲವಾದ ನೋಟಕ್ಕೆ ಓಹಿಲನ ಶುಭ್ರ ಮೂರ್ತಿಯು ಚೆನ್ನಾಗಿ ಕಾಣಿಸಿತು. ೬. ಲೋಕದೊಡೆಯನಾದ ಶಿವನನ್ನು ಮೆಚ್ಚಿಸಿ ಬೇಗನೆ ಕೈಲಾಸಕ್ಕೆ ಪ್ರೀತಿಯಿಂದ ಹೋಗುತ್ತಿರುವ ಓಹಿಲನನ್ನು ಮುದಗೊಂಡು ನೋಡಿ ಆ ನಾರೀಮಣಿಯು ಉಬ್ಬಿ ನಮಸ್ಕರಿಸಿದಳು. ೭. ನಮಸ್ಕರಿಸಿ ಮತ್ತೆ ಭಕ್ತಿಯಿಂದ ಮೆಲ್ಲನೆ ನಿಂತು ಅಂದು ಉಂಟಾದ ಸಂತೋಷದಿಂದ ಕೈಯೆತ್ತಿ ಮುಗಿಯುತ್ತ ಅತಿ ರಮಣೀಯವಾಗಿ ಸುಧರ್ಮನ ಮಗಳು ಸೌಂದರದೇವಿಯು ಶೋಭಿಸಿದಳು. ೮. ಉಂಟಾದ ಪ್ರೀತಿಯಿಂದಾಗಿ

ಇಂತುರುಭಕ್ತಿಯಿನೋಹಿಲ
ನಂ ತಳ್ವದೆ ನೋಟ್ಟಿ ಸತಿಯನೀಕ್ಷಿಸಿ ತದ್ಭೂ।
ಕಾಂತೋತ್ತಮನುದ್ಭಟಾಂಕ
ನಿಂತೆಂದಂ ಮಂದಹಾಸಭಾಸಿತವದನಂ ॥ ೯ ॥

ಬಿಡು ಬಿಡು ಕಾಂತೆ ಯೇನನೊಸೆದೀಕ್ಷಿಪೆ ತಾನಿದು ಚೋದ್ಯಮೆಂದು ತ
ನ್ನೊಡಲನದಗ್ನಿಗಿತ್ತು ಗಣನಾಥಪದಕ್ಕಿರದೊರ್ವನೊಲ್ಮೆಯಿಂ।
ನಡೆವನನೆಂದೆನಲ್ಕುಱಿದು ನಿಟ್ಟಿಸಿ ಸೌಂದರಿ ನಲ್ಲನಾಸ್ಯಮಂ
ಪಿಡಿದಳುಮೇಶಲೋಕಕುಸುರಿಂತುಟು ಪೋದವರಾರ್ ಧರಿತ್ರಿಯೊಳ್ ॥ ೧೦ ॥

ಎನೆ ಕೇಳ್ದೋಪಳ ವಚನ
ಕ್ಕನುರಾಗಂ ತಳೆದು ಕೇಳು ಪೇೞ್ದಪೆನೆಲೆ ಕಾ।
ಮಿನಿ ಯಿೀತನೆಯಧಿಕನೊ ಯಿೀ
ಶನ ಲೋಕಕೆ ಸುಖದಿಮಿರ್ದು ಪೋದರ ಕಥೆಯಂ ॥ ೧೧ ॥

ನುತಸೌರಾಷ್ಟ್ರದ ನಾಯಕಂಗಗಲದೀರಾಱಬ್ದಮಾಧೂಪಸಂ
ತತಿಯಂ ತಂದೊಸೆದಿಕ್ಕಿ ಮತ್ತೆ ತನುವಂ ತದ್ವಹ್ನಿಗಿತ್ತೊರ್ವನುಂ।
ನತಕೈಲಾಸಕೆ ಪೋಪನೇಂ ಘನನೆ ಕೇಳ್ಕಾಂತಾದ್ವಯಂಗೂಡಿ ಸಂ
ತತಮುಂ ಭೋಗದೊಳಿರ್ದು ನಂಬಿ ಶಿವಲೋಕಕ್ಕೈದನೇ ಕೋಮಲೇ ॥ ೧೨ ॥

ಶಿವರೂಪಂ ಶಿವನೆಂದು ನಂಬಿ ಸತಿಯಂ ಕೂರ್ತಿತ್ತು ತಾಂ ಶೂಲಿಗು
ತ್ಸವದಿಂದಂ ಪಿತೃವಾಗಿ ಸರ್ವಜನಮೆಲ್ಲಂ ಕಂಡು ಕೊಂಡಾಡೆ ತ।
ದ್ಭುವತೀರತ್ನಸಮೇತಮೈದನೆ ವಲಂ ಶ್ರೀಸಿಂಧುಬಲ್ಲಾಳಭೂ
ಧವನಂ ಬಾಂಧವಜಾಲಮಂದು ಮಧುಲಿಣ್ಮಾಲೋಲ್ಲಸತ್ಕುಂತಳೇ ॥ ೧೩ ॥

ನೋಡುವಳು, ಬಿಡದೆ ಸ್ತುತಿಸುವಳು, ಉಬ್ಬುವಳು, ಬಾಗುವಳು, ಕೈಮುಗಿಯುವಳು -ಹೀಗೆ ಸಂತೋಷ ಸಾಗರದಲ್ಲಿ ಚೆನ್ನಾಗಿ ತೇಲಾಡುತ್ತಾ ಆ ಸುಧರ್ಮ ಮಹಾರಾಜನ ಮಗಳು ಸೌಂದರಿಯು ಶೋಭಿಸಿದಳು. ೯. ಹೀಗೆ ಹೆಚ್ಚಿನ ಭಕ್ತಿಯಿಂದ ಓಹಿಲನನ್ನು ತಡಮಾಡದೆ ನೋಡುವ ಪತ್ನಿಯನ್ನು ಗಮನಿಸಿದ, ಮಂದಹಾಸದಿಂದ ಕೂಡಿದ ಮುಖವುಳ್ಳ ಉದ್ಭಟ ಮಹಾರಾಜನು, ೧೦. ಬಿಡು ಬಿಡು ಸುಂದರಿ ಅದೇನೆಂದು ಪ್ರೀತಿಯಿಂದ ನೋಡುವೆ. ತನ್ನ ಶರೀರವನ್ನು ಅಗ್ನಿಗಿತ್ತು ಗಣನಾಥ ಪದವಿಗೆ ಬಿಡದೆ ಒಬ್ಬನೇ ಪ್ರೀತಿಯಿಂದ ಹೋಗುವುದೇನು ಆಶ್ಚರ್ಯ ಎನ್ನಲು ಪ್ರಿಯನ ಮುಖವನ್ನು ಕೊಂಕಿಸಿ ನೋಡಿದ ಸೌಂದರಿ, ಶಿವಲೋಕಕ್ಕೆ ಹೀಗೆ ಮರ್ತ್ಯಲೋಕದಿಂದ ಹೋದವರಾರು? ಎಂದು ಪ್ರಶ್ನಿಸಿದಳು. ೧೧. ಹೀಗೆಂದು ಕೇಳಿದ ಪ್ರಿಯಳ ಮಾತಿಗೆ ಎಲೆ ಕಾಮಿನಿ, ಸಂತೋಷಗೊಂಡು ಈತನಿಗಿಂತ ಮಿಗಿಲಾಗಿ ಶಿವನ ಲೋಕಕ್ಕೆ ಸುಖದಿಂದ ಇದ್ದು ಹೋದವರ ಕಥೆಯನ್ನು ಹೇಳುವೆನು ಕೇಳು. ೧೨. ಕೋಮಲೇ, ಪ್ರಸಿದ್ಧ ಸೌರಾಷ್ಟ್ರದೊಡೆಯನಿಗೆ ಬಿಡದೆ ಹನ್ನೆರಡು ವರುಷ ಧೂಪದ ಮೊತ್ತವನ್ನು ತಂದು ಪ್ರೀತಿಯಿಂದ ಹಾಕಿ ಮತ್ತೆ ಶರೀರವನ್ನು ಅಗ್ನಿಗಿತ್ತು ಒಬ್ಬನೇ ಕೈಲಾಸಕ್ಕೆ ಹೋಗುತ್ತಿರುವವನೇನು ಹೆಚ್ಚೆ? ಕೇಳು, ಇಬ್ಬರು ಹೆಂಡಿರೊಡನೆ ಸದಾ ಭೋಗದಲ್ಲಿದ್ದು ನಂಬಿಯಣ್ಣ ಶಿವಲೋಕಕ್ಕೆ ಹೋಗಲಿಲ್ಲವೆ? ೧೩. ದುಂಬಿಗಳ ಮೊತ್ತದಂತೆ

ನೆಗಟ್ದುದ್ಯಚ್ಛಿವಮೂರ್ತಿಗೀಯೆ ಸತಿಯಂ ತದ್ಬಾಂಧವಶ್ರೇಣಿ ಬಂ
ದು ಗಡಂ ತಾಂ ಬಿಡದಟ್ಟಿ ಮುಟ್ಟಿ ಕವಿಯಲ್ ತನ್ಮಿತ್ರರಂ ತೀರ್ಚಿ ಮೇ।
ಣಗಜಾನಾಥನನ್ಯೆದೆ ಮೆಚ್ಚಿಸಿ ಕರಂ ತತ್ಕಾಂತೆಗೂಡೊಲ್ದಿಹ
ಪ್ಪಗೆಯಂ ತಾಂ ಶಿವಲೋಕಕ್ಕೆದನೆ ಸುಧಾಸಂಜಾತಬಿಂಬಾಧರೇ ॥ ೧೪ ॥

ಸಸಿವಚ್ಚಂಗೆಂದು ತಂದಂದಿರಿಸಿದಲರ್ಗಗಳಂ ನಾಡೆ ಕೊಂಡಾಡೆ ತಾಂ ಪಾ
ಸಿಸಿ ತಂದೋಹೋ ಯೆನುತ್ತುಂ ಮಿಗೆ ಚಿರುತೊಣೆಯಾಂಡಂ ಲಸದ್ಘ್ರಾಣಮಂ ಛೇ।
ದಿಸಲಾತಂ ಶೋಕಿಪಾನಲ್ಲಳವರಕರಮಂ ಕೊಯ್ದು ಸರ್ವೇಶನಂ ಮೆ
ಚ್ಚಿಸಿ ಕೈಲಾಸಕ್ಕೆ ತತ್ಕಾಂತೆವೆರಸು ಕಳಚೆಂಗಂ ವಲಂ ಪೋದುದಿಲ್ಲೇ ॥ ೧೫ ॥

ಮದುವೆಗೆ ಬಂದ ನಿಬ್ಬಣಿಗರುಚ್ಚವಮೊಲ್ದು ಕನಲ್ದುಪೋಗೆ ಬೇ
ಡಿದೊಡುಜುಿಕೊಯ್ದು ಕೊಟ್ಟು ಶಿವಮೂರ್ತಿಗೆ ಪುತ್ರಿಯ ಕೇಶಪಾಶಮಂ।
ಮುದಮನೊಡರ್ಚಿ ಶೂಲಿ ಗಳಿಯಂ ಸತಿ ವಲ್ಲಭೆ ಮೇಣವರ್ವರಲ್
ಸದಮಲಮಾನಕಂಜರನುಮೇಶನ ಲೋಕಕೆ ಪೋದುದಿಲ್ಲಲೇ ॥ ೧೬ ॥

ಎಂಜಲ ಪುಳ್ಗಿಯಂ ಕಳುಪಿ ನಾಡೆ ವಿರಾಜಿಪ ಭೀಮನಾಥನಂ
ತಾಂ ಜವದಿಂ ಮನಂಗೊಳಿಸಿ ಮೆಚ್ಚಿಸಿ ತತ್ಸತಿ ಭೀಮಿಗೂಡಿ ಲೋ।
ಕಂ ಜಯನಾಥಮಂ ನೆಗಟಲೊಂದಿನಿಸಾಯಸಮಿಲ್ಲದ್ಯೆದಳೇ
ಮಂಜುಳಚೋಳಿಯಕ್ಕನುಮೆಯಾಣ್ಮನ ಲೋಕಕೆ ಲೋಲಲೋಚನೇ ॥ ೧೭ ॥

ಮುಂಗುರುಳುಗಳನ್ನು ಹೊಂದಿರುವವಳೇ, ಜಂಗಮವೇ ಶಿವನೆಂದು ನಂಬಿ ತನ್ನ ಹೆಂಡತಿಯನ್ನು ಶಿವನಿಗೆ ಪ್ರೀತಿಯಿಂದ ಒಪ್ಪಿಸಿ, ಸಡಗರದಿಂದ ತಂದೆಯಾಗಿ, ಜನರೆಲ್ಲ ಅದನ್ನು ನೋಡಿ ಹೊಗಳಲು ಆ ಸ್ತ್ರೀರತ್ನ ಸಮೇತ ಬಂಧುಗಳ ಸಮೂಹದೊಡನೆ ಮಂಗಳಕರನಾದ ಸಿಂಧು ಬಲ್ಲಾಳನು ಹೋಗಲಿಲ್ಲವೆ? ೧೪. ಸುಧೆಯಲ್ಲಿ ಹುಟ್ಟಿದ ತೊಂಡೆಯ ಹಣ್ಣಿನಂತಿರುವ ಕೆಳದುಟಿಯನ್ನು ಹೊಂದಿರುವವಳೇ, ಪ್ರಸಿದ್ಧನಾದ ಶ್ರೇಷ್ಠ ಶಿವಮೂರ್ತಿಗೆ ಹೆಂಡತಿಯನ್ನು ಅರ್ಪಿಸಲು [ಅದನ್ನು ಕೇಳಿದ] ಬಂಧುಗಳ ಸಮೂಹವು ಬಂದು ಮುತ್ತಲು ಅವರನ್ನು ಓಡಿಸಿ, ಮಿತ್ರರುಗಳು ಬಂದು ಕವಿಯಲು ಅವರನ್ನೂ ತೀರಿಸಿ, ಪಾರ್ವತೀವಲ್ಲಭನನ್ನು ಚೆನ್ನಾಗಿ ಮೆಚ್ಚಿಸಿ ತನ್ನ ಹೆಂಡತಿಯೊಡನೆ ಇಹಪ್ಪಗೆಯನು ಪ್ರೀತಿಯಿಂದ ಶಿವಲೋಕಕ್ಕೆ ಹೋಗಲಿಲ್ಲವೆ? ೧೫. ಶಿವನಿಗೆಂದು ತಂದಿರಿಸಿದ ಹೂಗಳನ್ನು ಚೆನ್ನಾಗಿ ಹೊಗಳುತ್ತಾ ಆಘ್ರಾಣಿಸಲು, ಓಹೋ ಎನುತ್ತಾ ಚಿರುತೊಣೆಯಾಂಡನು ಹೊಳೆವ ಮೂಗನ್ನು ಕತ್ತರಿಸಲು ಶೋಕಿಸುತ್ತಿದ್ದ ಪ್ರಿಯಳ ಶ್ರೇಷ್ಠ ಕೈಗಳನ್ನೂ ಕೊಯ್ದು ಶಿವನನ್ನು ಮೆಚ್ಚಿಸಿ ಕೈಲಾಸಕ್ಕೆ ತನ್ನ ಹೆಂಡತಿಯೊಡಗೂಡಿ ಕಳಚೆಂಗನು ದಿಟವಾಗಿ ಹೋಗಲಿಲ್ಲವೆ? ೧೬. ಮದುವೆಗೆ ನಿಬ್ಬಣಿಗರು ಪ್ರೀತಿಪಟ್ಟು ಉತ್ಸವದಿಂದ ಬಂದಿರಲು [ಅವರ ಮುಂದೆ] ಶಿವಮೂರ್ತಿಯೂ ಮಗಳ ಕೂದಲನ್ನು ಕೇಳಲು ಚೆನ್ನಾಗಿ ಕತ್ತರಿಸಿಕೊಟ್ಟು [ನಿಬ್ಬಣಿಗರು ಕೋಪಿಸಿಕೊಂಡು ಹೋಗಲು] ಶಿವನಿಗೆ ಸಂತೋಷವನ್ನುಂಟು ಮಾಡಿ ಅಳಿಯ-ಮಗಳು ಹೆಂಡತಿಯೊಡನೆ ಪರಿಶುದ್ಧ ಮಾನಸನಾದ ಮಾನಕಂಜರನು ಶಿವಲೋಕಕ್ಕೆ ಹೋಗಲಿಲ್ಲವೆ? ೧೭.ಚಂಚಲಾಕ್ಷೀ, ಎಂಜಲ ಹುಗ್ಗಿಯನ್ನು ಚೆನ್ನಾಗಿ ಶೋಭಿಸಿರುವ ಭೀಮನಾಥನಿಗೆ ಕಳುಹಿಸಿ ಬೇಗನೆ ಅವನ

ಪ್ರಿಯನಂ ಕೂಡುವ ತಾಣದಲ್ಲಿ ತಲೆಗಿಂಪಂ ಮಾಡಿ ತಾಂ ಲಿಂಗಮಂ
ದ್ವಯಭಾವಂ ಸಲೆ ಪಿಂಗಿದಚ್ಚಸುಸಿಲೊಳ್ಪಂ ಶಂಕರಂಗಿತ್ತನಾ।
ಮಯನಂ ಮೆಚ್ಚಿಸಿ ನಿಂಬಿಯಕ್ಕನೊಲವಿಂ ಕೈಲಾಸಮಂ ನಾಡೆ ಸೂ
ಱ್ಯಿಯನೊಲ್ದೀಯಳೆ ಯೆಟ್ದಿನಂಬರೆಗಮಾ ಪೌರರ್ಗೆ ಪದ್ಮಾನನೇ ॥ ೧೮ ॥

ನಗವೃಂದಾಧಿಪಕನ್ಯಕಾಧಿಪತಿಗಾದಾತುತ್ತುತುತ್ತಿಂಗೆ ಮೆ
ಲ್ಲಗೆ ಕೂರ್ತರ್ಪಿಸುತಿರ್ದದೊಂದುದಿವಸಂ ಶ್ರೀಲಿಂಗಮಂ ನಿಟ್ಟಿಸ
ಲ್ಪೊಗಲಡ್ಡಂ ತಿವಿದಿರ್ದರಂ ಶಿವಪುರಕ್ಕಾಭಕ್ತರಂ ಕೊಂಡು ಶೀ
ಲೆಗಡರ್ಪಾಗಿರೆ ಪೋಗನೇ ಸುರಗಿಚೌಡಯ್ಯಂ ಚಕೋರೇಕ್ಷಣೇ ॥ ೧೯ ॥

ಮಣಲಿಂದಂ ಲಿಂಗಮಂ ನಿರ್ಮಿಸಿ ಪದೆದನಿಶಂ ಪೂಜೆಗೈದುಲ್ಲಸದ್ಗೋ
ಗಣಸುಕ್ಷೀರಾಭಿಷೇಕಂ ರಚಿಸುತುಮಿರಲೊಂದುಂ ದಿನಂ ಬಂದು ಕಂಡು।
ಲ್ಬಣಕೋಪಂಬೆತ್ತು ತಲ್ಲಿಂಗಮದಟಿವಿನಮಾತಂದೆಯಂ ಹಿಂಸೆಗೈದಾ
ಕ್ಷಣದೊಳ್ ಕೈಲಾಸಕಾಗೋಸಮಿತಿವೆರಸು ಚಂಡೇಶನೇಂ ಪೋದುದಿಲ್ಲೇ ॥ ೨೦ ॥

ತನ್ನಯ ದೇಶದೊಳ್ ನೆಗಟ್ದಿ ಸರ್ವಜನಕ್ಕನುರಾಗಮಿತ್ತು ಮೇ
ಱುನ್ನತಶಂಭುಭಕ್ತರನೆ ಮಾಡಿ ಬಟಿಕ್ಕಗಜೇಶ್ವರಂಗೆ ಲೋ।
ಕಂ ನೆಱೆ ಮೆಚ್ಚಲಂದು ಗುರುವಾಗಿ ವಲಂ ನಿಖಿಲಪ್ರಜಾನ್ವಿತಂ
ಸನ್ನುತಮೋದದಿಂ ಕಲಿಗಣಂ ಗಣನಾಥಪದಕ್ಕೆ ಪೋಗನೇ ॥ ೨೧ ॥

ಮನಸೆಳೆದು ಮೆಚ್ಚಿಸಿ ಭೀಮಿಯೊಡಗೂಡಿ ಲೋಕವೆಲ್ಲ ಜಯಘೋಷ ಮಾಡುತ್ತಿರಲು ಒಂದಿಷ್ಟೂ ಆಯಾಸವಿಲ್ಲದೆ ಉಮೆಯ ಪತಿಯ ಲೋಕಕ್ಕೆ ಸುಂದರಾಂಗಿಯಾದ ಚೋಳಿಯಕ್ಕಳು ಹೋಗಲಿಲ್ಲವೆ? ೧೮. ಕಮಲಮುಖೀ, ಪ್ರಿಯನನ್ನು ಸೇರುವ ಸ್ಥಳದಲ್ಲಿ ಲಿಂಗವನ್ನು ತಲೆಗೆ ಆಶ್ರಯವನ್ನಾಗಿಟ್ಟುಕೊಂಡು ಶರೀರವೆರಡು ಏಕವಾಗಿ ಪರಿಶುದ್ಧವಾದ ಭೋಗದ ಸೊಗಸನ್ನು ಶಿವನಿಗಿತ್ತು ನಿರೋಗಿಯಾದ ಶಂಕರನನ್ನು ಮೆಚ್ಚಿಸಿ ನಿಂಬಿಯಕ್ಕಳು ಕೈಲಾಸಕ್ಕೆ ನಡೆದು ಸೂರ್ಯನಿರುವವರೆಗೂ [ಶಾಶ್ವತವಾಗಿ] ಪುರಜನರಿಗೆ ಚೆನ್ನಾದ ಕೈಲಾಸ ಸುಖವನ್ನು ಪ್ರೀತಿಯಿಂದ ಕೊಡಲಿಲ್ಲವೆ? ೧೯. ಚಕೋರನಂತೆ ನೋಟವುಳ್ಳವಳೇ, ಶಿವನಿಗೆ ತುತ್ತು ತುತ್ತನ್ನೂ ಮೆಲ್ಲಗೆ ಪ್ರೀತಿಯಿಂದ ಅರ್ಪಿಸುತ್ತಿರಲು ಒಂದು ದಿವಸ ಲಿಂಗವನ್ನು ನೋಡ ಹೋಗಲು ಅಡ್ಡಗಟ್ಟಿ ತಿವಿದ ಭಕ್ತರನ್ನೂ ಕೈಲಾಸಕ್ಕೆ ಸೊಗಸುಗೂಡಿ ಸುರಗಿ ಚೌಡಯ್ಯನು ಕರೆದುಕೊಂಡು ಹೋಗಲಿಲ್ಲವೆ? ೨೦. ಮಳಲಿನಿಂದ ಲಿಂಗವನ್ನು ಮಾಡಿ ಪ್ರೀತಿಯಿಂದ ಶಿವಪೂಜೆ ಮಾಡಿ ಉಲ್ಲಾಸದಿಂದ ಗೋವುಗಳ ಹಾಲನ್ನು ಲಿಂಗಕ್ಕೆ ಅಭಿಷೇಕ ಮಾಡುತ್ತಿರಲು, ಒಂದು ದಿನ ಅದನ್ನು ನೋಡಿ ತೀವ್ರ ಕೋಪಗೊಂಡು ಆ ಲಿಂಗವನ್ನು ನಾಶ ಮಾಡಿದ ತನ್ನ ತಂದೆಯನ್ನೇ ಹಿಂಸಿಸಿ ಆ ಕ್ಷಣವೇ ಗೋವುಗಳೊಡನೆ ಚಂಡೇಶನು ಕೈಲಾಸಕ್ಕೆ ಹೋಗಲಿಲ್ಲವೆ? ೨೧. ತನ್ನ ದೇಶದಲ್ಲಿ ಪ್ರಸಿದ್ಧರಾದ ಜನರನ್ನು ಸಂತೋಷಗೊಳಿಸಿ [ಅವರನ್ನು] ಶ್ರೇಷ್ಠ ಶಿವಭಕ್ತರನ್ನಾಗಿ ಮಾಡಿ, ಬಳಿಕ ಲೋಕವು ಚೆನ್ನಾಗಿ ಮೆಚ್ಚುವಂತೆ ಶಿವನಿಗೆ ಗುರುವಾಗಿ ಸಕಲ ಪ್ರಜೆಗಳೊಡನೆ ಅತ್ಯಾನಂದದಿಂದ ಕಲಿಗಣನು ಗಣನಾಥ

ವಿನುತೇಚ್ಛಾನ್ನಮನಿಕ್ಕೆ ಜಂಗಮಚಯಕ್ಕಂದೀಶ್ವರಂ ಬಂದು ನಂ
ದನನಂ ಬೇಡೆ ತದುಲ್ಲಸತ್ತನುಜನಂ ಕೊಂಡಟ್ಟಿ ಕೂರ್ತಿಕ್ಕಿ ಶ।
ರ್ವನ ಚಿತ್ತಂಬಡೆದುಂಚಕಂಚಿಯ ತೊಳಪ್ಪೇಳ್ಕೇರಿಯಂ ಕೊಂಡು ಪೋ
ಗನೆ ಕೈಲಾಸಪುರಕ್ಕೆ ತೋರ್ಪ ಸಿರಿಯಾಳಂ ಪೂರ್ಣಚಂದ್ರಾನನೇ ॥ ೨೨ ॥

ಸ್ವಪಚೈಯ್ಯಂಗಳನೊರ್ಮೆ ಕಂಡವರ ಚಾರಿತ್ರಕ್ಕೆ ಮೇಣ್ಮೆಚ್ಚಿ ಕೂ
ರ್ತುಪದೇಶಂ ಬಡೆದಲ್ಲಿ ನೀಗಿ ಭವಿಜನ್ಮಾನೀಕಮಂ ಶುದ್ಧರಾ।
ಗಿ ಪಿನಾಕಾಂಚಿತಪಾಣಿಯಂ ಬರಿಸಿ ತಾಂ ಶ್ರಾದ್ಧಕ್ಕೆ ಚತ್ತೀಸಚಾ
ರುಪುರಂಗೂಡಿ ಸುಸಾಮವೇದಿಗಳದೇಂ ಕೈಲಾಸಕೇನ್ಯೆದರೇ ॥ ೨೩ ॥

ಸಮುದಂ ಸೌಂದರಭೂಷಣಾರ್ಯನ ಸುಲೋಕಕ್ಕೈದಲುತ್ತುಂಗವಿ
ಭ್ರಮರುದ್ರಾಕ್ಷಿಯಿನೆಟ್ಟಿವಕ್ಕರೆಯ ಜಾತ್ಯಶ್ವಂ ಪಯಿಂಚ್ಛಾಸಿರಂ।
ಕ್ರಮದಿಂದೆಟ್ಟಿಱು ಕೂಡೆ ತಾನಿರದೆ ಕೈಲಾಸಕ್ಕಲಂಪಾಂತು ಚೇ
ರಮನೇಂ ದಾಟಿಯನಿಕ್ಕನೇ ಕದಳಿಕಾಸ್ತಂಭೋರುವಿಭ್ರಾಜಿತೇ ॥ ೨೪ ॥

ಹರನಿತ್ತಾಯುಷಮಂತು ಪರ್ವಿರಲುಮಾಪ್ರಾಣೇಶನಂ ಪೂಜೆಗೈ
ದುರುಮೋದಂಬಡೆದಂದು ಮೆಚ್ಚಿಸಿ ವಲಂ ನೂರ್ವತ್ಸರಂ ಧಾತ್ರಿಯಂ।
ಪೊರೆದಂತಾನವಲಕ್ಷದೇಶಮಸಲಂಪಿಂ ಕೊಂಡು ಕೈಲಾಸಭೂ
ಧರಕೇಂ ಪೋಗನೆ ರಾಜರಾಣ್ಮಳಿಯರಾಜಂ ರಾಜಬಿಂಬಾನನೇ ॥ ೨೫ ॥

ಪದವಿಗೆ ಹೋಗಲಿಲ್ಲವೆ? ೨೨. ಪೂರ್ಣಚಂದ್ರನಂತೆ ಮುಖವುಳ್ಳವಳೇ, ಹೊಗಳಲಾಗುವ ಶುದ್ಧ ಅನ್ನವನ್ನು ಜಂಗಮ ಸಮೂಹಕ್ಕೆ ಬಡಿಸಲು, ಈಶ್ವರನು ಆಗ ಬಂದು ಮಗನನ್ನು ಬೇಡಲು ಕಾಂತಿಯುಕ್ತನಾದ ಮಗನನ್ನು ಕೊಂದು ಅಡಿಗೆ ಮಾಡಿ ಪ್ರೀತಿಯಿಂದ ಬಡಿಸಿ ಶಿವ ಕೃಪೆ ಪಡೆದು ಘನವಾದ ಕಂಚೀಪುರವನ್ನು ಹಾಗೂ ಅದರ ಹೊಳೆವ ಏಳು ಕೇರಿಯನ್ನೂ ಸಿರಿಯಾಳನು ಕೈಲಾಸಕ್ಕೆ ಕರೆದುಕೊಂಡು ಹೋಗಲಾರನೆ? ೨೩. ಶ್ವಪಚಯ್ಯಗಳನ್ನು ಒಮ್ಮೆ ಕಂಡು ಅವರ ಚಾರಿತ್ರಕ್ಕೆ ಮೆಚ್ಚಿ ಅವರಿಂದ ಉಪದೇಶವನ್ನು ಪ್ರೀತಿಯಿಂದ ಪಡೆದು, ಭವಿ ಜನ್ಮವನ್ನು ನೀಗಿ, ಶುದ್ಧರಾಗಿ ಶ್ರಾದ್ಧಕ್ಕೆ ಶಿವನನ್ನು ಬರಿಸಿ, ಮನೋಹರವಾದ ಚತ್ತೀಸಪುರಗಳೊಡನೆ ಸಾಮವೇದಿಗಳು ಕೈಲಾಸಕ್ಕೆ ಹೋಗಲಿಲ್ಲವೆ? ೨೪. ಬಾಳೆಯ ಕಂಬದಂತೆ ತೊಡೆಗಳನ್ನು ಹೊಂದಿ ಶೋಭಿಸುವವಳೇ, ಶ್ರೇಷ್ಠವಾದ ಹೊಳೆಯುವ ರುದ್ರಾಕ್ಷಿಗಳಿಂದ ಐದು ಸಾವಿರ ಒಳ್ಳೆ ಜಾತಿಯ ಕುದುರೆಗಳು ಉದ್ಭವವಾಗಿ ಸಂತೋಷದಿಂದ ಕೂಡಿದ ಸೌಂದರ ಭೂಷಣಾರ್ಯನ ಚೆಲುವಾದ ಪಟ್ಟಣಕ್ಕೆ ಹೋಗಲು ಕ್ರಮವಾಗಿ ಬರಲು ಅವುಗಳೊಡನೆ ಕೈಲಾಸಕ್ಕೆ ಪ್ರೀತಿಯಿಂದ ಚೇರಮನು ಧಾಳಿ ಮಾಡಲಿಲ್ಲವೆ? ೨೫. ಚಂದ್ರಬಿಂಬದಂತೆ ಮುಖವುಳ್ಳವಳೇ, ಶಿವನಿತ್ತ ಆಯುಷ್ಯವು ಮುಗಿಯುತ್ತಾ ಬಂದಿರಲು ಶಂಕರನನ್ನು ಪೂಜೆ ಮಾಡಿ ಅತ್ಯಾನಂದವನ್ನು ಹೊಂದಿ ಅವನನ್ನು ಮೆಚ್ಚಿಸಿ ನೂರು ವರುಷ ಲೋಕವನ್ನು ರಕ್ಷಿಸಿದ ಆ ನವಾಲಕ್ಷ ದೇಶವನ್ನು ಪ್ರೀತಿಯಿಂದ ಕೈಲಾಸಕ್ಕೆ ರಾಜರಲ್ಲಿ

ಆಯಾಸಂಬೊಗದಾದಮಿರ್ದನಿಶಮುದ್ಯತ್ಸೌಖ್ಯದಿಂ ಮೇಲೆ ಭೂ
ಗೋಯೋಷಿತ್ಪುರಬಂಧುಸೈನ್ಯಸಹಿತಂ ಸರ್ವೇಶಲೋಕಕ್ಕೆ ಸು।
ಸ್ಥಾಯಿಯಾನಂದದೆ ಪೋದ ಭಕ್ತರಿರಲಂತಿಂತಾಯಸಂ ಬಟ್ಟು ಮೇ
ಣ್ಕಾಯಂಗೊಟ್ಟುರುಧೂಪವಹ್ನಿಗಿರದೊರ್ವಂ ಪೋಪನೇಂ ಪೂಜ್ಯನೇ ॥ ೨೬ ॥

ಎಂದಿಂತು ಪ್ರಯಾಸದಿಂದ ಭವನಂ ಮೆಚ್ಚಿಸಿ ಕೈಲಾಸಕ್ಕೆ ಪೋದರೆಂಬಶರಣರ ಕಥೆಗಳನೋಹಿಲನಂ ಕುರಿತು ಪೇಳ್ದ ತತ್ಕುಮಾರಪಾಲಘೂರ್ಜರನಾಲಾಪದ ಕಟಕಿಯನಾಸೌಂದರವತಿ ಕಂಡು,

ಆತಂ ನಿಷ್ಕಾಮಿ ನೀಂ ಕಾಮುಕನತುಳವಿರಕ್ತಂ ದಲಾತಂ ಸರಕ್ತಂ
ಖ್ಯಾತಕ್ಷೋಣೀಧವಂ ನೀಂ ವಿಗತವಿಷಯನಾತಂ ಕರಂ ನೀಂ ಸಮಂ।
ದ್ಯೂತಕ್ರೀಡಾಭಿಸಕ್ತಂ ನಿನಗುಱು ನೆಗಟ್ದಾಭಕ್ತನಂ ಪೊಲ್ಲಗೈದೀ
ಮಾತಿಂದೇಂ ಸಿದ್ಧಿಯಾದತ್ತೆನೆಮಗುಟ್ಟು ನೃಪಂ ಕಾಂತೆಗಿಂತೆಂದನಾಗಳ್ ॥ ೨೭ ॥

ಸತಿ ಕೇಳ್ಮಲ್ಲಣನೆಂಬನೊರ್ವ ಕವಿ ಕಾಮಾಸಕ್ತನೇನಲ್ಲವೇ
ಕ್ಷಿತಿನಾಥಂ ಮನುಚೋಳನಲ್ಲವೆ ವಿರಾಜನ್ಮೂರ್ಖನೈನಾರಿ ತಾ।
ನತುಳದ್ಯೂತವಿನೋದಿಯಲ್ಲವೆ ಯವರ್ ತತ್ಕೃತ್ಯದೊಳ್ನಿರ್ತು ಸಂ
ತತಮಿರ್ದೇಂ ಶಿವಲೋಕಕೈದರೆ ಲಸದ್ವೀಣಾಸದೃಗ್ಭಾಷಿಣೀ ॥ ೨೮ ॥

ಎಂದಿಂತು ಪೇಳ್ದಿನುದ್ಭಟಕ್ಷಿತೀಂದ್ರಚಂದ್ರಮನಾಲಾಪಮಂ ಕೇಳ್ದಾನಂದಮಂ ತಾಳ್ದು ಮಗುಟ್ದಾಸೌಂದರವತಿ ತನ್ನಪಾಲಂಗೆ ಮುಕುಳಿತಕರಸರೋಜೆಯಾಗಿ,

ಅಗ್ರಗಣ್ಯನಾದ ಮಳೆಯರಾಜನು ತೆಗೆದುಕೊಂಡು ಹೋಗಲಿಲ್ಲವೆ? ೨೬. ಆಯಾಸಗೊಳ್ಳದೆ ಸದಾ ಹೆಚ್ಚಿನ ಸುಖದಿಂದಿದ್ದು ಗೋವುಗಳು, ಸ್ತ್ರೀಯರು, ಪುರ, ಬಂಧು, ಸೈನ್ಯಗಳೊಡನೆ ಶಿವಲೋಕಕ್ಕೆ ಆನಂದದಿಂದ ಹೋದ ಭಕ್ತರಿರಲು, ಆಯಾಸಗೊಂಡು ಮೇಲಾಗಿ, ಅತಿಶಯವಾದ ಧೂಪದ ಬೆಂಕಿಗೆ ಶರೀರವನ್ನೇ ಅರ್ಪಿಸಿ, ಬಿಡದೆ ಕೈಲಾಸಕ್ಕೆ ಒಬ್ಬನೇ ಹೋಗುವವನು ಪೂಜ್ಯನೇನು? ವ॥ ಹೀಗೆ ಕಷ್ಟಪಟ್ಟು ಶಿವನನ್ನು ಮೆಚ್ಚಿಸಿ ಕೈಲಾಸಕ್ಕೆ ಹೋದರೆಂಬ ಶರಣರ ಕಥೆಗಳನ್ನು ಓಹಿಲನನ್ನು ಗಮನದಲ್ಲಿಟ್ಟುಕೊಂಡು ಹೇಳಿದ ಆ ಕುಮಾರಪಾಲ ಘೂರ್ಜರನ ಮಾತಿನ ವ್ಯಂಗ್ಯವನ್ನು ಸೌಂದರವತಿಯೂ ತಿಳಿದು ೨೭.ಆತ ನಿಷ್ಕಾಮಿ ನೀನು ಕಾಮುಕನು, ನಿಶ್ಚಯವಾಗಿಯೂ ಆತ ಅತಿ ವಿರಕ್ತ ನೀನಾದರೊ ಲೋಕಾಸಕ್ತ ಪ್ರಸಿದ್ಧ ಭೂಪತಿ, ಆತ ವಿಷಯ ವಾಸನೆಗಳನ್ನು ಚೆನ್ನಾಗಿ ಬಿಟ್ಟವನು. ನೀನೋ ಜೂಜಾಟದಲ್ಲಿ ವಿಶೇಷ ಆಸಕ್ತನು. ನೀನು ವಿಶೇಷವಾಗಿ ಪ್ರಸಿದ್ಧನಾದ ಆ ಭಕ್ತನನ್ನು ನಿಂದಿಸಿದ ಮಾತಿದೇನು ನಿಜವಾಗುವುದೆ ಎಂದು ಹೇಳಲು, ಅದಕ್ಕೆ ಪ್ರತಿಯಾಗಿ ಮಹಾರಾಜನು ತನ್ನ ಪತ್ನಿಗೆ ಹೀಗೆಂದನು. ೨೮. ವೀಣೆಯಂತೆ ಮಧುರವಾಗಿ ನುಡಿವ ಸತಿಯೇ ಕೇಳು, ಮಲುಹಣನೆಂಬ ಓರ್ವ ಕವಿಯೂ ಕಾಮಾಸಕ್ತನೇನಲ್ಲವೆ? ಮನುಚೋಳ ಭೂನಾಥನಲ್ಲವೆ? ಶೋಭಾಯಮಾನನಾದ ಮೂರ್ಖ ನೈನಾರಿಯೂ ಜೂಜಾಟದಲ್ಲಿ ಸಂತೋಷಗೊಳ್ಳು-ವವನಲ್ಲವೆ? ಇವರು ತಮ್ಮ ತಮ್ಮ ಕಾರ್ಯಗಳಲ್ಲಿ ಸದಾ ಪ್ರೀತಿಯಿಂದಿದ್ದು ಶಿವಲೋಕಕ್ಕೆ ಅವರು ಹೋಗಲಿಲ್ಲವೆ? ವ॥ ಹೀಗೆಂದು ಕೇಳಿದ ಉದ್ಭಟ ಮಹಾರಾಜ ಚಂದ್ರಮನ ಮಾತುಗಳನ್ನು ಕೇಳಿ ಆನಂದ ಹೊಂದಿ ಮತ್ತೆ ಆ ಸೌಂದರವತಿಯೂ ಮಹಾರಾಜನಿಗೆ

ಧರಣೀಧವ ಪೇೞುನಗಾ
ವರಮಲ್ಲಣಚೋಳಮೂರ್ಖನಯನಾರಿಗಳಂ।
ಬರ ಚಾರಿತ್ರಮನೆನೆ ತ
ತ್ತರುಣೀಮಣಿಗುದ್ಭಟಾಂಕನೊಲ್ದಿಂತೆಂದಂ ॥ ೨೯ ॥

ಕಾಠಿನ್ಯೇತರವಾಣಿ ಕೇಳ್ ಬಿಡದಲಂಪಂ ತುಳ್ಕುತುಂ ಭಾರತೀ
ಪೀಠಾಖ್ಯಂ ಪುರಮೊಂದು ರಂಜಿಪುದು ಕಾಶ್ಮೀರಾವನೀಮಧ್ಯದೊಳ್।
ಪಾಠೀನಧ್ವಜರಾಜಿರಾಜಿತಸಮುತ್ತುಂಗಾಂಕಮಾಲೋಲ್ಲಸ
ತ್ಪಾಠಾಸಕ್ತನಿತಂಬಿನೀಜನಯುತೋದ್ಯದ್ವರ್ಮ್ಯಹರ್ಮ್ಯೋತ್ಕರಂ ॥ ೩೦ ॥

ಆ ಜೃಂಭತ್ಪುರಕೀಶ್ವರಂ ಪ್ರವರಸೇನಂ ತನ್ನೃಪಾಪ್ತಂ ದ್ವಿಜಂ
ರಾಜತ್ಸೂರಿಸುವರ್ಣಭಟ್ಟನೆನಲಿರ್ಪಂ ತದ್ದ್ವಿಜಾತೋದ್ಭವಂ।
ರಾಜೋತ್ತಂಸನ ಭಕ್ತನಾತಕವಿರಾಜಂ ಮಲ್ಲಣಂ ತೀಕ್ಷ್ಣರು
ಕ್ತೇಜಂ ರಾಜಿಪನಂಗಮಂ ಪಡೆದನಂಗಂಬೋಲ್ಕುರಂಗೇಕ್ಷಣೇ ॥ ೩೧ ॥

ಕಂಜಜಾತಸದೃಗ್ವಚೋವಿಭವೋನ್ನತಂ ಕವಿಮಲ್ಲಣಂ
ಮಂಜುಯೌವನಮಂ ಕರಂ ತಳೆದುಲ್ಲಸದ್ಘನಲೀಲೆಯಿಂ
ರಂಜಿಸಲ್ನಿಜತಾತನಾದ ಸುವರ್ಣಭಟ್ಟಕನೈದಿದಂ
ತಾಂ ಜರಾಭಿಹತಾಂಗನಾಗಿ ಸುರೇಂದ್ರಲೋಕಮನಂಗನೇ ॥ ೩೨ ॥

ಸುವರ್ಣಭಟ್ಟಂ ಸುರಲೋಕಕ್ಕೈದಲು
ತ್ಸವಂ ಮಗುೞ್ದಾತನ ಕಾಯಮಂ ಚಿತಿ।
ಪ್ರವಹ್ನಿಗಂದರ್ಪಿಸಿ ಮಲ್ಲಣೋಲ್ಲಸ
ತ್ಕವೀಂದ್ರನಿರ್ದಂ ಘನಶೋಕದಿಂ ಸತೀ ॥ ೩೩ ॥

ಕರಕಮಲಗಳನ್ನು ಮುಗಿದು, ೨೯. ಮಹಾರಾಜಾ, ನನಗೆ ಆ ಶ್ರೇಷ್ಠರಾದ ಮಲುಹಣ, ಮನುಚೋಳ, ಮೂರ್ಖನಯನಾರಿಗರ ಶುಭ್ರಚಾರಿತ್ರವನ್ನು ತಿಳಿಸು ಎನ್ನಲು, ಆ ರಮಣೀಮಣಿಗೆ ಉದ್ಭಟನು ಪ್ರೀತಿಯಿಂದ ಹೀಗೆಂದನು. ೩೦. ಮೃದುವಾಗಿ ನುಡಿವವಳೆ ಕೇಳು, ಸೊಗಸನ್ನು ಬಿಡದೆ ಚೆಲ್ಲುತ್ತ ಭಾರತೀಪೀಠವೆಂಬ ಪುರವು ಕಾಶ್ಮೀರ ಭೂಮಧ್ಯದಲ್ಲಿ ಮೀನಧ್ವಜಗಳ ಸಮೂಹದಿಂದ ಶೋಭಿಸುವ, ಬಿರುದಿನ ಸರಮಾಲೆಯ ಸೊಗಸಾದ ಪಠನದಲ್ಲಿ ಆಸಕ್ತ ಚೆಲುವೆಯರುಗಳಿಂದ ಕೂಡಿದ ಶ್ರೇಷ್ಠ ಸೌಧಗಳು ರಂಜಿಸಿರುವವು. ೩೧. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಹೊಳೆವ ಆ ಪುರಕ್ಕೆ ಒಡೆಯನು ಪ್ರವರಸೇನನು. ಆ ರಾಜನ ಆಪ್ತನೂ ಬ್ರಾಹ್ಮಣರಲ್ಲಿ ಶೋಭಿಸುವವನೂ ಆದ ಸುವರ್ಣಭಟ್ಟನೆನ್ನುವವನು ಇರುವನು. ಆ ಬ್ರಾಹ್ಮಣನ ಮಗನು ಶಿವನ ಭಕ್ತನು. ಆತ ಕವಿರಾಜನು. ಆ ಮಲುಹಣನು ಅಪಾರ ತೇಜೋಪೂರ್ಣನಾಗಿ ಮನ್ಮಥನಂತೆ ಹೊಳೆಯುವ ಶರೀರವನ್ನು ಪಡೆದನು. ೩೨. ಅಂಗನೆಯೇ, ಬ್ರಹ್ಮನಿಂದ ಬಂದ ಕಾಂತಿಯುಕ್ತ ಮಾತಿನ ಸೊಗಸಿನಿಂದ ಶ್ರೇಷ್ಠನಾದ ಕವಿ ಮಲುಹಣನು ಮನೋಹರವಾದ ಯೌವನವನ್ನು ಚೆನ್ನಾಗಿ ತಾಳಿ, ಉಲ್ಲಾಸದಿಂದ ಕೂಡಿ, ವಿಲಾಸಯುತನಾಗಿ ಶೋಭಿಸಲು, ಆತನ ತಂದೆಯು ಮುಪ್ಪಿನ ಹೊಡೆತಕ್ಕೆ ಗುರಿಯಾಗಿ ದೇವಲೋಕವನ್ನು ಸೇರಿದನು. ೩೩. ಸತೀ, ಸುವರ್ಣಭಟ್ಟನು ದೇವಲೋಕಕ್ಕೆ

ಸುರವರಪುರಿಗಯ್ಯಂ ಪೋದನೋ ವೋ ಯೆನುತ್ತಿ
ರ್ದಿರಲದು ಪರಿಯಲ್ತತ್ತಾತಲೋಭಾರ್ಜಿತಾರ್ಥೋ।
ತ್ಕರಕೊಡನಧಿಪಂ ತಾನಾಗಿ ಸಲ್ಲೀಲೆಯಿಂದಂ
ಪಿರಿದಮರ್ದೆಸೆದಿರ್ದಂ ಮಲ್ಲಣಂ ಮಂಜುವಾಣೀ ॥ ೩೪ ॥

ಕೋಟಿಮೂಱುನಿಪ್ಪಲೆಕ್ಕದರ್ಥಗಾಣ್ಮನಾಗಿ ನ
ಲ್ನೋಟಕೊಳ್ವನೀವ ಯೌವನಾತಿರೇಕಮಲ್ಲಣಂ
ಪಾಟಿಯಿಲ್ಲದುಂಚಚಾಗಿಯೊಪ್ಪಿದಂ ತುಷಾರರು
ಗ್ಕೂಟಪಾದಪಂಕಜಾತಪೂಜಿತಂ ಮೃಗೇಕ್ಷಣೇ ॥ ೩೫ ॥

ವಾಣಿಗೆ ಜಾಣಿನೊಳುದ್ಗಮ
ಬಾಣದವಂಗಮರ್ದ ಮೂರ್ತಿಯೊಳ್ಚಂದ್ರಂಗ।
ಕ್ಷೀಣಕಳೆಯೊಳ್ಬೆಗಳ್ವುಱು
ಕಾಣಿಸಲಾಮಲ್ಲಣಂ ಮನಂಗೊಳಿಸಿರ್ದಂ ॥ ೩೬ ॥

ಪೂಗಣೆಯಂ ಸಾವಯವಕ
ನಾಗಿ ಶಿವಾಧವನನರ್ಚಿಸಲ್ಕೆಂದಿರದು।
ದ್ಯೋಗಿಸಿ ಕೊಂಡೆಟ್ಟಿಂದವೊ
ಲಾಗರುವಂ ಮಲ್ಲಣಂ ಮನಂಗೊಳಿಸಿರ್ದಂ ॥ ೩೭ ॥

ಕೈರವನೇತ್ರೆಯರ್ಲಲಿತಚಂದ್ರಮನೆಂದು ಸರೋಜವಕ್ತ್ರೆಯ
ರ್ವಾರಿಜಮಿತ್ರನೆಂದು ಕಿಸಲಾಧರೆಯರ್ನವಚೈತ್ರನೆಂದು ಶೃಂ।
ಗಾರಸುಯೋಗಿಯೆಂದುಱಿದಮಿಂಡಿಯರಾವಗಮೊಲ್ದು ನೋಡಲಾ
ಚಾರುವಚೋವಿಲಾಸನಿಧಿ ರಂಜಿಸುವಂ ಕವಿಮಲ್ಲಣಂ ಪ್ರಿಯೇ ॥ ೩೮ ॥

ಹೋಗಲು ಉತ್ಸವದಿಂದ ಕೂಡಿ ಆತನ ಶರೀರವನ್ನು ಚಿತೆಯ ಅಗ್ನಿಗೆ ಅರ್ಪಿಸಿ ತೀವ್ರವಾದ ದುಃಖದಿಂದ ಮಲುಹಣ ಕವೀಂದ್ರನಿದ್ದನು. ೩೪. ಮನೋಹರವಾಗಿ ನುಡಿವವಳೆ, ದೇವಲೋಕಕ್ಕೆ ತಂದೆಯು ಹೋದನೋ ವೋ ಎಂದು ದುಃಖಿಸುತ್ತಿರಲು, ಅದೂ [ದಿನದಿನಕ್ಕೆ] ಕಡಿಮೆಯಾಗುತ್ತಾ ಹೋಗಲು ತಂದೆಯು ಗಳಿಸಿ ಆಸೆಯಿಂದ ಕೂಡಿಟ್ಟಿದ್ದ ಸಂಪತ್ತಿಗೆ ಒಡೆಯನಾದ ಮಲುಹಣನು ಹೆಚ್ಚಿನ ವಿಲಾಸದಿಂದ ಕೂಡಿ ಶೋಭಿಸುತ್ತಿದ್ದನು. ೩೫. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಮೂರು ಕೋಟಿ ಎನಿಸುವ ಲೆಕ್ಕದ ಸಂಪತ್ತಿಗೆ ಒಡೆಯನಾಗಿ ಸವಿನೋಟಕ್ಕೆ ಒಲಿವ ತುಂಬು ಯೌವನದ ಮಲುಹಣನು ಎಣೆಯಿಲ್ಲದ ಮಹಾತ್ಯಾಗಿಯಾಗಿ, ಶಿವನ ಪಾದಕಮಲಗಳನ್ನು ಪೂಜಿಸುವವನಾಗಿ ಶೋಭಿಸಿದನು. ೩೬. ಸರಸ್ವತಿಗೆ ಜಾಣತನದಲ್ಲಿ, ಮನ್ಮಥನಿಗೆ ಸುಂದರವಾದ ಆಕಾರದಲ್ಲಿ, ಚಂದ್ರನಿಗೆ ಪ್ರಖರ ತೇಜಸ್ಸಿನಲ್ಲಿ ಬೆರಗು ಚೆನ್ನಾಗಿ ವ್ಯಕ್ತಗೊಳ್ಳುತ್ತಿರಲು ಆ ಮಲುಹಣನು [ನೋಡುವವರ] ಮನಸ್ಸನ್ನು ಆಕರ್ಷಿಸಿದ್ದನು. ೩೭. ಮನ್ಮಥನೇ ಸಾಕಾರಗೊಂಡು ಶಿವನನ್ನು ಪೂಜಿಸಲೆಂದು ಬಿಡದೆ ತೊಡಗಿ ನಡೆದು ಬಂದನೋ ಎನ್ನುವಂತೆ ಮಲುಹಣನು ಮನಸ್ಸನ್ನು ಆಕರ್ಷಿಸಿದ್ದನು. ೩೮. ಪ್ರಿಯೇ, ಕಮಲಾಕ್ಷಿಯರು ಸುಂದರವಾದ ಚಂದ್ರನೆಂದು, ಕಮಲಮುಖಿಯರು

ಇಂತೊಪ್ಪುವ ಮಲ್ಲಣನೊ
ಲ್ವಂತಾಪುರಿಗಾಣ್ಮನಾದ ವಿಜಯೇಶ್ವರನಂ।
ಸಂತಸದಿಂದರ್ಚಿಸಲೋ
ರಂತಿರೆ ದೇಗುಲಕೆ ಬಂದನಂಬುಜವದನೇ ॥ ೩೯ ॥

ಬಂದು ವಿಜಯೇಶನುರುಮಣಿ
ಮಂದಿರಮಂ ಪೊಕ್ಕು ತೊಳಪ ಲಿಂಗಮನಾ।
ನಂದದಿನರ್ಚಿಸುತೊಪ್ಪಿದ
ನೊಂದುದಿನಂ ಸಕಲಸುಕವಿನಿಕರನಿಳಿಂಪಾ ॥ ೪೦ ॥

ವಿಜಯೇಶ್ವರನಂ ರಿಪುಕವಿ
ವಿಜಿಗೀಷುವೆನಿಪ್ಪ ಸುಕವಿಮಲ್ಲಣದೇವಂ।
ಭಜಿಸಲ್ಕಮಲ್ಲಣೆ ಗಜಕುಂ
ಭಜಿತಸ್ತನಿ ಬಂದಳಾಶಿವಾಲಯಕಾಗಳ್ ॥ ೪೧ ॥

ನಡೆತಂದಾವಿಜಯೇಶನಂ ಜ್ವಲಿಪರತ್ನಾಗಾರಮಂ ಪೊಕ್ಕು ಸಂ
ಘಡಿಸಿರ್ದುನ್ನತಮಾದ ಮೇಳದೆಡೆಯೊಳ್ ಶಾಂತಂಗೆ ತನ್ನೃತ್ಯಮಂ।
ಬಿಡದಾನಂದದಿನಂದು ತೋಱಿಸುವ ತತ್ಪದ್ಮಾಕ್ಷಿಯಂ ಕಂಡು ತ
ನ್ನೊಡಲಂ ಮಲ್ಲಣೆಗಿತ್ತನಂಗಜಶರಕ್ಕಂಭೋಜಪತ್ರೇಕ್ಷಣೇ ॥ ೪೨ ॥

ಪ್ರಣವಾಧೀಶನ ಪಾದಪಂಕರುಹಮಂ ಪೂಜಿಪ್ಪುದಂ ಬಿಟ್ಟು ಮ
ಲ್ಲಣದೇವಂ ಬೆಱಗಾಗಿ ನಿಟ್ಟಿಸುತಿರಲ್ ನರ್ತಿಪ್ಪ ತತ್ಕಾಂತೆ ಮ।
ಲ್ಲಣೆ ಯಾನೀಱನನೊಲ್ದು ನೋಡಿ ಮನಮಿಕ್ಕಲ್ಕಂಡು ಮೇಣಿರ್ವರು
ಲ್ಬಣಾಭಾವಜ್ವಲ್ಗೆಯರ್ಯ್ದೆ ಕೂಡಿಸಿದರೊಲ್ದಂದಾತ್ಮಮಿತ್ರರ್ ಪ್ರಿಯೇ ॥ ೪೩ ॥

ಸೂರ್ಯನೆಂದು, ಚಿಗುರಿನಂತಹ ಕೆಂದುಟಿಯವರು ನವಚೈತ್ರನೆಂದು, ಉಳಿದ ತರುಣಿಯರು ಶೃಂಗಾರಯೋಗಿಯೆಂದು ಪ್ರೀತಿಪಟ್ಟು ನೋಡಲು ಮನೋಹರವಾದ ಮಾತುಗಳ ಸೌಂದರ್ಯ ನಿಧಿಯಾಗಿ ಕವಿ ಮಲುಹಣನು ಶೋಭಿಸುವನು. ೩೯. ಕಮಲಮುಖೀ, ಹೀಗೆ ಶೋಭಿಸುವ ಮಲುಹಣನು ಬಯಸಿ ಆ ಪಟ್ಟಣದ ಒಡೆಯನಾದ ವಿಜಯೇಶ್ವರನನ್ನು ಪ್ರೀತಿಯಿಂದ ಪೂಜಿಸಲೆಂದು ದೇವಸ್ಥಾನಕ್ಕೆ ಬಂದನು. ೪೦. ಬಂದು ವಿಜಯೇಶ್ವರನ ವಿಶಾಲವಾದ ಮಣಿಮಂದಿರವನ್ನು ಪ್ರವೇಶಿಸಿ ಬೆಳಗುವ ಲಿಂಗವನ್ನು ಆನಂದದಿಂದ ಪೂಜಿಸುತ್ತ ಶೋಭಿಸಿದನು. ಒಂದು ದಿನ ಸಕಲ ಸುಕವಿಗಳ ಸಮೂಹಕ್ಕೆ ದೇವತೆಯಂತಿರುವ ಮಲುಹಣನು ೪೧. ಶತ್ರು ಕವಿಗಳೊಡನೆ [ವಾದಿಸಿ] ಜಯವನ್ನು ಬಯಸುವವನಾದ ಸುಕವಿ ಮಲುಹಣದೇವನು ವಿಜಯೇಶ್ವರನನ್ನು ಪೂಜಿಸುತ್ತಿರಲು ಆಗ ಆನೆಯ ಕುಂಭಸ್ಥಳದಂತೆ ಮೊಲೆಗಳುಳ್ಳ ಮಲುಹಣೆಯು ಶಿವಾಲಯಕ್ಕೆ ಬಂದಳು. ೪೨. ಕಮಲಾಕ್ಷೀ, ಬಂದು ಆ ವಿಜಯೇಶನ ಹೊಳೆವ ರತ್ನ ಮಂದಿರವನ್ನು ಹೊಕ್ಕು ಒಟ್ಟುಗೂಡಿದ್ದ ತನ್ನ ಶ್ರೇಷ್ಠ ಮೇಳದ ನಡುವೆ ಶಾಂತಮೂರ್ತಿಯಾದ ವಿಜಯೇಶ್ವರನಿಗೆ ನೃತ್ಯ ಸೇವೆಯನ್ನು ಆನಂದದಿಂದ ಮಾಡುವ ಆ ಪದ್ಮದಂತಹ ಕಣ್ಣುಗಳುಳ್ಳ ಮಲುಹಣೆಯನ್ನು ನೋಡಿ ಮನ್ಮಥನ ಬಾಣದಂತಿದ್ದ ಅವಳಿಗೆ ತನ್ನ ಮನವನ್ನಿತ್ತನು. ೪೩. ಪ್ರಿಯೇ, ಓಂಕಾರಕ್ಕೆ ಒಡೆಯನಾದ

ಓರೊರ್ವರ್ೞ್ತಮಗೆಳಸಿದ
ಸಾರಸಲೋಚನೆಯನಾಸುಕವಿಮಲ್ಲಣನಂ।
ಚಾರುಭವನಕ್ಕೆ ತಂದುೞಿ
ಸೇರಿಸಿ ಬೀೞ್ಕೊಂಡು ಪರಿದರಾಪ್ತರ್ ಸಖಿಯರ್ ॥ ೪೪ ॥

ಕೆಳಯರ್ಪರಿಯಲ್ ಸ್ಮರವಿ
ಹ್ವಳಮಲ್ಲಣದೇವಮಲ್ಲಣೆಯರತಿಕೌತೂ।
ಹಳಕಾಮಕೇಳಿಯೊಂದ
ಗ್ಗಳಬರ್ದಂ ತಾವ್ ನೆಗೞ್ಚಿದರ್ಮುದದಿಂದಂ ॥ ೪೫ ॥

ಅಹರ್ನಿಶಂ ತತ್ಪ್ರಿಯರಾವಗಂ ಸರೋ
ರುಹಸ್ಥಿತೇಂದಿಂದಿರಯುಗ್ಮದಂತೆವೋ।
ಲ್ಮಹೋಲ್ಲಸನ್ಮನ್ಮಥಕೇಳಿಯಿಂದೆ ರ
ತ್ನಹರ್ಮ್ಯದೊಳ್ಶೋಭಿಸಿದರ್ಮ್ಮೃಗೇಕ್ಷಣೇ ॥ ೪೬ ॥

ಇದು ಪಗಲಿದು ನಿಶೆಯೆಂದೆಂ
ಬುದನಱಿಯದೆ ಜನಕಸಂಚಿತಾಗಣಿತಾರ್ಥಂ।
ಮೊದಲಿಲ್ಲದೆ ಸವೆಯಲ್ತ
ತ್ಸುದತೀಮಣಿಗೂಡಿ ಮಲ್ಲಣಂ ರಂಜಿಸಿದಂ ॥ ೪೭ ॥

ಧನಮೆಲ್ಲಂ ತೀರ್ದೊಡಮಾ
ಮನದಟ್ಟಿರ್ತೀರದಂತೆ ಮಲ್ಲಣದೇವಂ।
ತನಿಸೊಬಗಿಂ ಮಲ್ಲಣೆಯೊಂ
ದಿನಿಸಾನುಂ ಪೊತ್ತು ಬಿಚ್ಚದೊಪ್ಪಿದನಬಲೇ ॥ ೪೮ ॥

ವಿಜಯೇಶ್ವರನ ಪಾದಕಮಲವನ್ನು ಪೂಜಿಸುವುದನ್ನು ಬಿಟ್ಟು ಮಲುಹಣದೇವ ಅಚ್ಚರಿಗೊಂಡು ನೋಡುತ್ತಿರಲು ನರ್ತಿಸುತ್ತಿದ್ದ ಮಲುಹಣೆಯೂ ಆ ಸುಂದರನನ್ನು ನೋಡಿ ಮನಸ್ಸನ್ನು ತೆರಲು, ಎರಡೂ ಕಡೆಯವರ ಪ್ರಿಯಮಿತ್ರರು, ಇಬ್ಬರ ತೀವ್ರವಾದ ಮನದ ಭಾವವನ್ನು ತಿಳಿದ ಜ್ಞಾನಿಗಳು ಇಬ್ಬರನ್ನೂ ಪ್ರೀತಿಪಟ್ಟು ಕೂಡಿಸಿದರು. ೪೪. ಒಬ್ಬರು ಮತ್ತೊಬ್ಬರನ್ನು ಬಯಸಿರಲು, ಕಮಲಲೋಚನೆ ಮಲುಹಣೆಯನ್ನೂ ಆ ಸುಕವಿ ಮಲುಹಣನನ್ನೂ ಮನೋಹರವಾದ ಮನೆಗೆ ಕರೆತಂದ ಆಪ್ತ ಸಖಿಯರು ಅವರೀರ್ವರನ್ನು ಚೆನ್ನಾಗಿ ಒಟ್ಟುಗೂಡಿಸಿ ಅಲ್ಲಿಂದ ಬೀಳ್ಕೊಂಡು ನಡೆದರು. ೪೫. ಮಿತ್ರರು ಹೋಗಲು ಕಾಮತಾಪಕ್ಕೆ ಒಳಗಾದ ಮಲುಹಣ-ಮಲುಹಣೆಯರು ಅತಿ ಕುತೂಹಲದ ಕಾಮಕೇಳಿಯನ್ನು ಶ್ರೇಷ್ಠ ಪ್ರೌಢಿಮೆಯಿಂದ ಸಂತಸದಿಂದ ಮಾಡಿದರು. ೪೬. ಜಿಂಕೆಯ ನೋಟದಂತೆ ಕಣ್ಣುಳ್ಳವಳೇ, ಹಗಲಿರುಳು ಆ ಪ್ರಿಯರು ಅರಳಿದ ಕಮಲದಲ್ಲಿ ಸದಾ ಜೊತೆಗೂಡಿರುವ ದುಂಬಿಗಳಂತೆ ಅತ್ಯಂತ ಆನಂದಮಯವಾದ ಮನ್ಮಥ ಕೇಳಿಯಿಂದ ರತ್ನಮಂದಿರದಲ್ಲಿ ಶೋಭಿಸಿದರು. ೪೭. ಇದು ಹಗಲು ಇದು ರಾತ್ರಿ ಎಂಬುದನ್ನು ತಿಳಿಯದೆ ತಂದೆ ಕೂಡಿಟ್ಟಿದ್ದ ಅಪಾರ ಧನವು ತುದಿಮೊದಲಿಲ್ಲದೆ ವ್ಯಯವಾಗಲು ಆ ಸುಂದರಿಯೊಡಗೂಡಿದ ಮಲುಹಣನು ಶೋಭಿಸಿದನು. ೪೮. ಅಬಲೇ, ಸಂಪತ್ತೆಲ್ಲ

ಕಾಣ್ಕೆಯಂ ಕೊಡಲೊಲ್ಲದೇಣಶಿಶುನೇತ್ರೆಯಂ।
ಮಾಣದೇ ಪತ್ತಿ ಬಿಡದೆ ಮಲ್ಲಣನಿರ
ಲ್ಲಾಣೆಯವರಬ್ಬೆ ನಡೆನೋಡಿ ॥ ೪೯ ॥

ನಂಟು ಮಿಗೆ ಮಲ್ಲಣನ ನಂಟದೀಮಲ್ಲಣೆಯ।
ನುಂಟುಮಿಗೆ ಪಿಂಗಿಸಲ್ಕೆಂದು ಮನದಲ್ಲಿ
ಕಂಟಕವನಾಂತಳವಳಂದು ॥ ೫೦ ॥

ಮಿಗೆ ಮಲ್ಲಣ ಮಲ್ಲಣೆಯರ
ಸೊಗಯಿಸುವಿನಿದಕ್ಕೆಯೊಳ್ಪನಿಂತಿರೆ ಕಂಡೊ।
ಯ್ಯಗೆ ಪದ್ಮಾವತಿ ತನ್ನಯ
ಮಗಳಂ ಸೂಚಿಸಿ ಸುಖಾರಿ ಯೆಕ್ಕಟಿಗಜಱಿದಳ್ ॥ ೫೧ ॥

ಎಕ್ಕಟಿಯಾಗಿ ಮಲ್ಲಣೆಗೆ ಕೈತವಬುದ್ಧಿಯನ್ನೆದೆ ಪೇೞ್ದು ಬೇ
ಡಕ್ಕ ಬಿಡಾತನಂ ಧನವಿಹೀನನೆಂದೆನಲೊಪ್ಪದಿರ್ಪಿನಂ।
ತಕ್ಕುದೆ ನಾನೆ ಗೈದಪೆನೆನುತ್ತವಳಂ ಜಱಿದಂದು ಬಂದು ಸ
ಮ್ಯಕ್ಕವಿರಾಜಕುಂಜರನನಾಲಯದಿಂ ಕಿಸುಗಣ್ಣೆ ನೂಂಕಿದಳ್ ॥ ೫೨ ॥

ಪರಿಭವಿಸಿ ಬರ್ದ್ದೆ ನೂಂಕಲ್
ವಿರಹಾನಲತಪ್ತ ಕಾಯನಾಕವಿಕುಲಕುಂ।
ಜರನ ತನು ಗ್ರಹಮೊಂದಲ್
ಪಿರಿದುಂ ಮರುಳಾದನಂಬುಜಾಯತನೇತ್ರೇ ॥ ೫೩ ॥

ತೀರಿದರೂ ಆ ಮನದ ಪ್ರೀತಿ ತೀರದಂತೆ ಮಲುಹಣದೇವನು ಅನುಪಮ ಲಾವಣ್ಯವತಿ ಮಲುಹಣೆಯೊಡನೆ ಸ್ವಲ್ಪ ಹೊತ್ತೂ ಅಗಲಿರದೆ ಶೋಭಿಸಿದನು. ೪೯. ಕಾಣಿಕೆಯನ್ನೂ ಕೊಡಲಾಗದೆ ಜಿಂಕೆಯ ಮರಿಯ ನೋಟದಂತೆ ಚಂಚಲವಾದ ಕಣ್ಣುಳ್ಳ ಮಲುಹಣೆಯನ್ನೂ ಬಿಡಲಾಗದೆ ಮಲುಹಣನು ಜೊತೆಗೂಡಿರಲು ಜಾಣೆಯಾದ ಮಲುಹಣೆಯ ತಾಯಿಯು ಅವರನ್ನು ಚೆನ್ನಾಗಿ ನೋಡಿ ೫೦. ಮಲುಹಣನ ಸಂಬಂಧ ಅತಿಯಾಯ್ತು. ಮಲುಹಣನನ್ನು ಮಲುಹಣೆಯೂ ಸೇರದಂತೆ ಮಾಡಲು ಅವರ ಸಂಬಂಧವನ್ನು ತೊರೆಯಿಸಲು ಅವಳು ಮನದಲ್ಲಿ ಕೇಡನ್ನು ಬಗೆದಿದ್ದಳು. ೫೧. ಮಲುಹಣ-ಮಲುಹಣೆಯರು ಅತಿಶಯವಾಗಿ ಸಂತೋಷಗೊಂಡಿರಲು ಅವರ ಮಧುರ ಸಂಬಂಧದ ಸೊಗಸನ್ನು ಕಂಡ ಪದ್ಮಾವತಿಯು ಸುಖದ ಶತ್ರುವಾಗಿ ಮೆಲ್ಲಗೆ ತನ್ನ ಮಗಳನ್ನು ಸಂಜ್ಞೆ ಮಾಡಿ ಗುಟ್ಟಾಗಿ ಕರೆದಳು. ೫೨. ಏಕಾಂತದಲ್ಲಿ ಮಲುಹಣೆಗೆ ಕಪಟ ಬುದ್ಧಿಯನ್ನು ಚೆನ್ನಾಗಿ ಹೇಳಿ ಹಣವಿಲ್ಲದ ಅವನನ್ನು ಬೇಡಕ್ಕ, ಬಿಡು ಎಂದು [ನಯವಾಗಿ] ಹೇಳಲು ಮಲುಹಣೆ ಒಪ್ಪದಿರಲು, ಇದಕ್ಕೆ ಸರಿಯಾದುದನ್ನು ನಾನೇ ಮಾಡುತ್ತೇನೆಂದು ಮಗಳನ್ನು ನಿಂದಿಸಿ, ಮಲುಹಣನಲ್ಲಿಗೆ ಬಂದು, ಕೆಂಗಣ್ಣಿನಿಂದ ನೋಡಿ, ಪರಿಪೂರ್ಣತೆಯಿಂದ ಶೋಭಿಸಿ ಆನೆಯಂತಿರುವ ಮಲುಹಣನನ್ನು ಮನೆಯಿಂದ ಹೊರದಬ್ಬಿದಳು. ೫೩. ವಿಶಾಲವಾದ ಕಮಲನೇತ್ರೆ, ಪ್ರೌಢೆಯು ಅವಮಾನಿಸಿ ಹೊರದಬ್ಬಲು ವಿರಹ ಜ್ವರದಿಂದ ಸುಡಲ್ಪಟ್ಟ ಶರೀರನಾದ ಕವಿಸಮೂಹಕ್ಕೆ ಆನೆಯಂತಿರುವ

ಅಪ್ಪಿದಗ್ಗದ ಯಲ್ಲಕಂ ಕಡು ಪೆರ್ಚಲುತ್ಸವಮೊಂದಿರಲ್
ತಪ್ಪದಾವಗಮೇ ವಧೂಮಣಿ ಮಲ್ಲಣಿ ಯೆಕ್ಕಟೆನ್ನನಿಂ।
ತೊಪ್ಪಿಸಲ್ ಮದನಾಸ್ತ್ರಕಾನುೞಿವಂದಮೆಂದೆನುತುಂ ಸಮಂ
ತೊಪ್ಪಿದಂ ಕವಿಮಲ್ಲಣಂ ಮರುಳಾದವೋಲ್ ತರಳೇಕ್ಷಣೇ ॥ ೫೪ ॥

ಬಲ್ಪುಚ್ಚಾದಂ ಪೆರ್ಚಿದ
ಪೊಲ್ಪೊಳೆಯಿಸುತಂದು ರಾತ್ರಿ ದರ್ಪಕಶಿಖಿ ಪೊಂ।
ಗಲ್ಪದ್ಮಾವತಿ ಜುಣುಗಿರೆ
ನಲ್ಪೊಂಬಾಗಿಲ್ಗೆ ಬಂದನಾಕವಿರಾಜಂ ॥ ೫೫ ॥

ಏ ಮಲ್ಲಣಿ ಮಲ್ಲಣಿ ಯೆನು
ತಾಮಲ್ಲಣಕವಿವರಂ ವಹಿಲದೊಳ್ನಿಲ್ತು।
ದ್ದಾಮವಿಕಲತೆಯನಾಂತು ಮ
ನೋಮುದವಟ್ಟಿದಿರೆ ತದೀಯಸಮಯದೊಳೊರ್ವಳ್ ॥ ೫೬ ॥

ಗುರುಕುಚೆ ಮಲ್ಲಣೆಯುಂಡೊ
ಳ್ವರಿವಣಮಂ ಕರ್ಚಿ ಸೂಸಿದೆಂಜಲ ನೀರ್ತ।
ದ್ವರಕವಿಮಲ್ಲಣನಂಗಮ
ನಿರದಂಟಲ್ ಬೆರ್ಚುತಾಗ ಮಲ್ಲಣಿ ಯೆಂದಂ ॥ ೫೭ ॥

ಇಂತುರುತರವಿರಹವಿಹ್ವಲಂ ಬಂದವಳ ಮುಂಬಾಗಿಲೊಳ್ನಿಲ್ತು ಮರುಳಾದಂತೆ ಮಲ್ಲಣಿ ಮಲ್ಲಣಿಯೆಂದು ಪಲಂಬುತ್ತುಮಿರ್ಪಾಮಲ್ಲಣನ ಮೃದುದೈನ್ಯೋಕ್ತಿಗಳಂ ಕೇಳ್ದುತ್ಸವಂಗೆಟ್ಟಾಮಲ್ಲಣಿ ಚಚ್ಚರಂ ಮನೆಯಿಂ ಪೊಱಮಟ್ಟು,

ಮಲುಹಣನ ಶರೀರಕ್ಕೆ ಗರಬಡಿದಂತಾಗಲು ಅವನು ಅತಿಶಯವಾಗಿ ಮರುಳಾದನು. ೫೪. ಜಿಂಕೆಯ ನೋಟದಂತೆ ಚಂಚಲವಾದ ಕಣ್ಣುಳ್ಳವಳೇ, ಅತಿ ಮರುಳು ಆವರಿಸಲು, ಅತಿ ಉತ್ಸಾಹದಿಂದ ಕೂಡಿ ಸುಂದರಿ ಮಲುಹಣೀ ಅಯ್ಯೋ, ನನ್ನನ್ನು ಹೀಗೆ ಮನ್ಮಥ ಬಾಣಕ್ಕೆ ಒಪ್ಪಿಸಿದರೆ ನಾನು ಉಳಿಯುವುದಾದರೂ ಹೇಗೆ? ಎಂದು ಹುಚ್ಚು ಹಿಡಿದವನಂತೆ ಕವಿ ಮಲುಹಣನು ಹೇಳುತ್ತಾ ಚೆನ್ನಾಗಿ ಶೋಭಿಸಿದನು. ೫೫. ಅತಿಯಾದ ಉನ್ಮಾದವು ಇನ್ನಷ್ಟು ಹೆಚ್ಚಳಗೊಂಡಂತೆ ಅಂದು ರಾತ್ರಿ ಮದನಾಗ್ನಿಯೂ ಹೆಚ್ಚಿ ಹೊಳೆಯಲು ಪದ್ಮಾವತಿ ಮರೆಯಾಗಿರಲು ಅವಳ ಮನೆಯ ಹೊನ್ನಿನ ಬಾಗಿಲಿಗೆ ಕವಿರಾಜನು ಬಂದನು. ೫೬. ಏ ಮಲುಹಣಿ, ಮಲುಹಣೀ ಎನ್ನುತ್ತಾ ಕವಿಶ್ರೇಷ್ಠನಾದ ಮಲುಹಣನು ನೆಲದ ಮೇಲೆ ನಿಂತು ಅತಿಯಾದ ಬುದ್ಧಿಭ್ರಮೆಗೆ ಒಳಗಾಗಿ ಮನದಾನಂದವು ಕುಗ್ಗಿ ಕೂಗುತ್ತಿರಲು, ಆ ಸಮಯದಲ್ಲಿ ಓರ್ವಳು ೫೭. ಘನವಾದ ಮೊಲೆಗಳನ್ನು ಹೊಂದಿರುವ ಮಲುಹಣಿಯು ಊಟ ಮಾಡಿದ ತಟ್ಟೆಯನ್ನು ತೊಳೆದು ಚೆಲ್ಲಿದ ಎಂಜಲ ನೀರು ಆ ವರಕವಿ ಮಲುಹಣನ ಶರೀರವನ್ನು ಬಿಡದೆ ತಾಗಲು ಆಗ ಬೆದರಿ ಮಲುಹಣೀ ಎಂದನು. ವ॥ ಹೀಗೆ ವಿಶೇಷವಾದ ವಿರಹದಿಂದ ವ್ಯಾಕುಲನಾಗಿ ಬಂದು ಅವಳ ಮನೆಯ ಮುಂಬಾಗಿಲಿನಲ್ಲಿ ನಿಂತು ಮತಿವಿಕಲವಾದಂತೆ ಮಲುಹಣಿ ಮಲುಹಣಿ ಎಂದು ಹಲುಬುತ್ತಲಿರುವ ಮಲುಹಣನ

ಮಿಸುಪ್ಪ ಗೇಹಂ ಪೊಱಮಟ್ಟು ಬಂ
ದೊಸರ್ವ ನೀಹಾರದೊಳಾಳ್ದು ಮಲ್ಲಣೋ।
ಲ್ಲಸತ್ಕವೀಂದ್ರ ನಡುಗುತ್ತಿರಲ್ಪುವ
ರ್ಣಸಾರಸಾಭಾನನೆ ಕಂದಿ ಕುಂದಿದಳ್ ॥ ೫೮ ॥

ಅತಿದುಃಖಿಸುತುಂ ಪದ್ಮಾ
ವತಿಯಾತ್ಮಜೆ ಬಂದುಱು ಮಲ್ಲಣನಂ ಹಿಮಸಂ।
ಗತನಂ ಪರಿರಂಭಿಸಿ ತ
ತ್ಸತಿ ಪಂಕಜಪತ್ರನೇತ್ರೆ ಮಗುೞ್ದಿಂತೆಂದಳ್ ॥ ೫೯ ॥

ಎಲೆ ಕಾಂತನೆ ಯೆನ್ನಯ ಮೇಲಿಡುವು
ಜ್ವಲಚಿತ್ತಮ ನಾವಿಜಯೇಶನ ನಿ।
ರ್ಮಲಪಾದದೊಳೊಲ್ದಿಡೆ ನಿನ್ನ ತಪಃ
ಫಲಸಿದ್ಧಿಯದಾಗದೆ ಪೇೞ್ಪ್ರಿಯನೇ ॥ ೬೦ ॥

ಎಂದೆನಲ್ತದಾಯತಾಕ್ಷಿ ಯಿಂಪುವಾತು ಕೇಳುತು
ನ್ಮಂದಚೇತನಂ ಮರಲ್ದು ನೋಡಿ ಚಂದ್ರವಕ್ತ್ರೆ।
ನೊಂದಿನಿತ್ತಗಲ್ದೊಡಾನದೆಂದು ತಾಳ್ವೆನೆಂದೊಡಿಂ
ತೆಂದಳಾವಧೂಟಿ ಯಾಮನಃಪ್ರಿಯಂಗೆ ಮೋದದಿಂ ॥ ೬೧ ॥

ಆನುಂ ಬರ್ಪೆಂ ನೀಂ ಪೊಗ
ೞ್ದಾನತಜನಕಾಮಧೇನುವಂ ಮೆಚ್ಚಿಸೆನ।
ಲ್ಲಾನಂದಂ ಮಲ್ಲಣನೊಸೆ
ದಾನಲ್ಲಳ್ವೆರಸಭವಭವನಕ್ಕೆೞ್ತಂದರ್ ॥ ೬೨ ॥

ಮೃದುವಾದ ದೈನ್ಯತೆಯಿಂದ ಕೂಡಿದ ಮಾತುಗಳನ್ನು ಕೇಳಿ ಉತ್ಸಾಹಗುಂದಿದ ಮಲುಹಣೆಯೂ ಬೇಗನೆ ಮನೆಯಿಂದ ಹೊರಗೆ ಬಂದು, ೫೮. ಹೊಳೆಯುವ ಮನೆಯಿಂದ ಹೊರಬಂದು, ಹಿಮದಲ್ಲಿ ಮುಳುಗಿ ನಡುಗುತ್ತಿರುವ ಸತ್ಕವೀಂದ್ರನಾದ ಮಲುಹಣನನ್ನು ನೋಡಿ ಚೆಂದಾವರೆಯ ಮುಖದ ಮಲುಹಣೆಯು ಕರಿಕಾಗಿ ಬಾಡಿದಳು. ೫೯. ಅತಿಯಾಗಿ ದುಃಖಿಸುತ್ತ ಪದ್ಮಾವತಿಯ ಮಗಳು ಮಲುಹಣೆಯು ಬಂದು ದಟ್ಟವಾದ ಹಿಮದಲ್ಲಿ ಸೇರಿ ಹೋಗಿದ್ದ ಮಲುಹಣನನ್ನು ಆಲಂಗಿಸಿ ಆ ಸುಂದರಿ ಕಮಲಾಕ್ಷಿಯು ಮತ್ತೆ ಹೀಗೆಂದಳು. ೬೦. ಎಲೆ ಪ್ರಿಯನೆ, ನನ್ನ ಮೇಲಿಡುವ ಉಜ್ವಲವಾದ ಮನಸ್ಸನ್ನು ಆ ವಿಜಯೇಶ್ವರನ ಪವಿತ್ರಪಾದಗಳಲ್ಲಿ ಪ್ರೀತಿಯಿಂದ ಇಟ್ಟರೆ, ನಿನ್ನ ತಪಸ್ಸಿಗೆ ಫಲ ಸಿಗುವುದಿಲ್ಲವೆ ಹೇಳು ಪ್ರಿಯನೇ. ೬೧. ಎಂದು ಹೇಳಲು, ವಿಶಾಲಾಕ್ಷಿಯ ಇನಿದಾದ ಮಾತುಗಳನ್ನು ಕೇಳುತ್ತಾ ಚೈತನ್ಯಗೊಂಡು ಮರಳಿ ನೋಡಿ, ಚಂದ್ರನಂತೆ ಮುಖವುಳ್ಳವಳೆ, ಕೊಂಚ ಅಗಲಿದರೇ ನೋಯುವೆನು, [ಈ ಅಗಲಿಕೆಯನ್ನು] ನಾನು ಹೇಗೆ ಸಹಿಸಲಿ? ಎಂದು ಮಲುಹಣನು ಹೇಳಲು, ಮನದೊಡೆಯನಿಗೆ ಸಂತಸದಿಂದ ಆ ಸುಂದರಿ ಹೀಗೆಂದಳು. ೬೨. "ನಾನೂ ನಿನ್ನೊಡನೆ ಬರುವೆನು. ನೀನು ಸ್ತುತಿಸಿ ಶರಣಾಗತ ಜನರ ಕಾಮಧೇನುವಾದ ಶಿವನನ್ನು ಮೆಚ್ಚಿಸು" ಎನ್ನಲು ಆನಂದದಿಂದ ಕೂಡಿ ಮಲುಹಣನು ಹಿಗ್ಗುತ್ತಾ ನಲ್ಲೆಯೊಡನೆ ಶಿವನ

ಕಾದಲೆವೆರಸೆಟ್ಟೆಂದು ಮ
ಹಾದೇವಾಲಯಮನಂದು ಮಲ್ಲಣನೊಳಪೊ।
ಕ್ಕಾದಿವ್ಯಲಿಂಗವಂ ಘನ
ಮೋದಂಬಡೆದೊಲ್ದು ಪೊಗಟ್ದನಂಬುಜವದನೇ ॥ ೬೩ ॥

ವಿಲಸತ್ಕಾಂತಾಕಚೌಘಸ್ಥಿತಕುಸುಮಸುಗಂಧಭ್ರಮಚ್ಚಂಚರೀಕೋ
ಜ್ವಲನೀಲಗ್ರೀವ ಗಂಗಾಧರ ನಿರುಪಮ ಗಂಧರ್ವಗೀರ್ವಾಣಯಕ್ಷಾ।
ವಳಿಕೋಟೀರೋರುಕೋಟಿಪ್ರಘಟಿತಪದಪಂಕೇಜ ಪಂಪೇಶ ಯೆಂದೀ
ಜಲಜಾಕ್ಷಾರಾಧ್ಯನಂ ಸನ್ನುತಿಸಿದನೊಲವಿಂ ಮಲ್ಲಣಂ ಮಂಜುವಾಣೀ ॥ ೬೪ ॥

ಇಂತತಿಭಕ್ತಿಯಿಂದ ಸ್ತುತಿಪ ಮಲ್ಲಣನ ಮೃದುಮಧುರಪದ ಸಂದರ್ಭಮಾಗಿ ಮನಂಗೊಳಿಪ್ಪ ಸಂಸ್ತವಕ್ಕೆ ಮೆಚ್ಚಿ ಬೆಚ್ಚರಮಾಗಿ ವಿಜಯೇಶ್ವರಂ ಪ್ರಸನ್ನನಾಗಿ,

ಕವಿಶೇಖರ ತಾವಕಸಂ
ಸ್ತವಕಾಂ ಮೆಚ್ಚಿದೆನೊಡರ್ಚುವೆಂ ಪೇಳ್ವಿನ್ನಿ।
ಷ್ಟವನೆನೆ ಮಲ್ಲಣನಭವಂ
ಗೆ ವಿಲಾಸದಿ ಬಿನ್ನವಿಸಿದನಿಂತೆಂದು ಸಖೀ ॥ ೬೫ ॥

ಮಿಗೆ ಜಾತಸ್ಮರಣತ್ವಮಂ ನಿಖಿಳಧಾತ್ರೀಶತ್ವಮಂ ಭೋಗಮಂ
ನೆಗಟ್ದುದ್ಯಚ್ಛಿವಭಕ್ತಿಯಂ ಪರಿಲಸಲ್ಲಾವಣ್ಯಮಂ ವೇದಶಾ।
ಸ್ತ್ರಗಣಜ್ಞತ್ವಮನುನ್ನತಪ್ರತಿಭೆಯಂ ಕೂರ್ತಿತ್ತು ಕಾಯೆಂದೆನ
ಲ್ಕಗಜೇಶಂ ಕವಿಮಲ್ಲಣಂಗನಿತುಮಂ ಕೊಟ್ಟಂ ಕಲಾಕೋವಿದೇ ॥ ೬೬ ॥

ಮಂದಿರಕ್ಕೆ ಬಂದನು. ೬೩. ಕಮಲಮುಖೀ, ಕಾದಲೆಯೊಡನೆ ಬಂದು ದೇವಾಲಯವನ್ನು ಪ್ರವೇಶಿಸಿದ ಮಲುಹಣನು ಆ ದಿವ್ಯಲಿಂಗವನ್ನು ಅತ್ಯಾನಂದದಿಂದ ಮೆಚ್ಚಿ ಹೊಗಳಿದನು. ೬೪. ಮಂಜುಳವಾಣೀ, ಹೊಳೆವ ಪತ್ನಿಯ ತುರುಬಿನಲ್ಲಿ ಸೇರಿಸಿರುವ ಹೂಗಳ ಸುಗಂಧಕ್ಕೆ ಆಕರ್ಷಿತವಾದ ದುಂಬಿಯೇ, ಪ್ರಕಾಶಿಸುವ ನೀಲಕಂಠನೆ, ಗಂಗೆಯನ್ನು ಶಿರದಲ್ಲಿ ಧರಿಸಿರುವವನೆ, ಹೋಲಿಕೆಗೆ ಬಾರದವನೆ, ಗಂಧರ್ವರು ದೇವತೆಗಳು ಯಕ್ಷರು -ಇವರುಗಳ ಕೋಟಿ ಸಂಖ್ಯೆಯ ಕಿರೀಟಗಳಿಂದ ತಾಗಿದ ಪಾದಕಮಲನೆ, ಪಂಪಾಪತಿಯೆ ಎಂದು ಕಮಲಾಕ್ಷನ ಆರಾಧ್ಯಮೂರ್ತಿಯಾದ ಶಿವನನ್ನು ಮಲುಹಣನು ಪ್ರೀತಿಯಿಂದ ಚೆನ್ನಾಗಿ ಸ್ತುತಿಸಿದನು. ವ॥ ಹೀಗೆ ಅತಿಭಕ್ತಿಯಿಂದ ಸ್ತುತಿಸುವ ಮಲುಹಣನ ಮೃದುಮಧುರವಾದ ಪದಗಳು ಹೊಂದಿಕೆಯಾಗಿ ಮನಸೆಳೆಯುವ ಆ ಪ್ರಾರ್ಥನೆಗೆ ಮೆಚ್ಚಿ ಬೇಗನೆ ವಿಜಯೇಶ್ವರನು ಪ್ರಸನ್ನನಾಗಿ, ೬೫. ಕವಿಶೇಖರನೆ, ನಿನ್ನ ಸ್ತುತಿಗೆ ನಾನು ಮೆಚ್ಚಿದೆನು. ನಿನ್ನ ಇಷ್ಟವನ್ನು ನೆರವೇರಿಸುವೆನು ಹೇಳು ಎನ್ನಲು, ಮಲುಹಣನು ಶಿವನಿಗೆ ಆನಂದದಿಂದ ಹೀಗೆಂದು ಬಿನ್ನವಿಸಿದನು. ೬೬. ಕಲಾಕೋವಿದೇ, ಅತಿಶಯವಾದ ಜಾತಸ್ಮರಣತ್ವವನ್ನು ಸಕಲ ಭೂಮಂಡಲಾಧಿಪತ್ಯವನ್ನು, ಭೋಗವನ್ನೂ ಪ್ರಸಿದ್ಧವಾದ ಶ್ರೇಷ್ಠ ಶಿವಭಕ್ತಿಯನ್ನೂ ಹೊಳೆವ ಲಾವಣ್ಯವನ್ನೂ ವೇದಶಾಸ್ತ್ರಗಳ ಹೆಚ್ಚಿನ ತಿಳುವಳಿಕೆಯನ್ನೂ ಉನ್ನತ ಪ್ರತಿಭೆಯನ್ನೂ ಪ್ರೀತಿಯಿಂದ ಕೊಟ್ಟು ರಕ್ಷಿಸು ಎನ್ನಲು, ಶಿವನು ಕವಿ ಮಲುಹಣನಿಗೆ ಅವೆಲ್ಲವನ್ನು

ಚೆಚ್ಚರಮಿತ್ತು ಮಲ್ಲಣಕವೀಶ್ವರನಿಷ್ಟಮನಿತ್ತಳತ್ತಳಿ
ಪ್ಪೊಚ್ಚರೆಗಣ್ಣ ನೀಱುವೆರಮಲ್ಲಣೆ ದಶಾಬ್ದಮಾಳ್ದು ನೀ।
ನುಚ್ಚವದಿಂ ಧರಾತಳಮನೈದೆಲೆ ಮಾಮಕಲೋಕಮಂ ಬಱಿ
ಕ್ಕಚ್ಚರಿಪುಟ್ಟಲೆಲ್ಲ ಜನಕೆಂದುಸಿರ್ದೀಶನದೃಶ್ಯಮೈದಿದಂ ॥ ೬೭ ॥

ಇಂತು ಮಲ್ಲಣನಿಷ್ಟಾರ್ಥಮನೊಲ್ದಿತ್ತು ವಿಜಯೇಶ್ವರನದೃಶ್ಯಮಾಗಿ ಪೋಗಲೆಡೆವಿಡದ ಕಡು ಸಂತಸಂಬಡೆದು ಮಲ್ಲಣಿವೆರಸೆಣಿಕೆಗಳವಡದ ಭೋಗಂಗಳಂ ಭೋಗಿಸುತ್ತನಂತವೈಭವದಿಂ ಶತವತ್ಸರಮುರ್ವರೆಯಂ ಪರಿಪಾಲಿಸುತಿರ್ದಾಕವಿಕುಂಜರಂ ಮಗುಟ್ದು,

ಶತವರ್ಷಂ ಧಾತ್ರಿಯೊಳು
ನ್ನತವಿಭವದೊಳಿರ್ದು ತತ್ಕಳತ್ರಂ ಬೆರಸೂ।
ರ್ಜಿತಕೈಲಾಸಕ್ಕಾಭೂ
ನುತಮಲ್ಲಣನೈದಿದಂ ಸುವರ್ಣಲತಾಂಗೀ ॥ ೬೮ ॥

ಕಾಮುಕಮಲ್ಲಣಕವಿ ತ
ತ್ಕಾಮಿನಿವೆರಸಭವಲೋಕಕೈದನೆ ಕೇಳಿ।
ನ್ನಾಮನುಚೋಳನೆನಿಪ್ಪ ಮ
ಹಾಮಹಿಮನ ಕಥೆಯನುಸುರ್ವೆನಂಬುಜವದನೇ ॥ ೬೯ ॥

ಕಮಲಾನನೆ ಪುರಮೆಸೆಗುಂ
ಕಮಲಾಲಯಮೆಂಬುದೊಂದು ಚೋಳಾವನಿಯೊಳ್।
ರಮಣೀಯಂ ತನ್ನಗರಿಗೆ
ರಮಣಂ ಮನುಚೋಳನಖಿಲಸಜ್ಜನಪಾಲಂ ॥ ೭೦ ॥

ಅನುಗ್ರಹಿಸಿದನು. ೬೭. ಮಲುಹಣ ಕವೀಶ್ವರನ ಕೋರಿಕೆಯನ್ನು ಬೇಗನೆ ನೆರವೇರಿಸಿ, ಚಂಚಲನೇತ್ರೆಯೂ ಸುಂದರಿಯೂ ಆದ ಮಲುಹಣೆಯೊಡನೆ ನೂರು ವರುಷ ನೀನು ಸಂತೋಷದಿಂದ ಭೂಮಂಡಲವನ್ನು ಆಳಿ ನಂತರ ಲೋಕದ ಜನರಿಗೆಲ್ಲಾ ಆಶ್ಚರ್ಯವಾಗುವಂತೆ ಕೈಲಾಸಕ್ಕೆ ಬರುವುದು" ಎಂದು ಹೇಳಿ ಶಿವನು ಅದೃಶ್ಯನಾದನು. ವ॥ ಹೀಗೆ ಮಲುಹಣನ ಬಯಕೆಯನ್ನು ಒಲಿದು ಅನುಗ್ರಹಿಸಿ ವಿಜಯೇಶ್ವರನು ಅದೃಶ್ಯನಾಗಲು ಎಡೆಬಿಡದ ಅತ್ಯಾನಂದವನ್ನು ಹೊಂದಿ ಮಲುಹಣೆಯೊಡನೆ ಎಣಿಕೆಗೆ ಅಸಾಧ್ಯವಾದ ಭೋಗಗಳನ್ನು ಅನುಭವಿಸುತ್ತಾ ನೂರು ವರುಷ ಅಪಾರ ವೈಭವದಿಂದ ಭೂಮಂಡಲವನ್ನು ರಕ್ಷಿಸುತ್ತಾ ಆ ಕವಿಕುಂಜರನು ಮತ್ತೆ, ೬೮. ಸುವರ್ಣ ಬಳ್ಳಿಯಂತೆ ಬಳುಕುವ ಕೋಮಲ ಶರೀರಳೇ, ನೂರು ವರುಷ ಭೂಮಿಯಲ್ಲಿ ವಿಶೇಷ ವೈಭವದಿಂದ ಇದ್ದು ಹೆಂಡತಿಯೊಡನೆ ಶಾಶ್ವತ ಪದವಾದ ಕೈಲಾಸಕ್ಕೆ ಲೋಕವೆಲ್ಲ ಹೊಗಳುವ ಮಲುಹಣನು ಹೋದನು. ೬೯. ಕಮಲಮುಖೀ, ಕಾಮುಕನಾದ ಮಲುಹಣಕವಿಯು ತನ್ನ ಪತ್ನಿಯೊಡನೆ ಶಿವಲೋಕಕ್ಕೆ ಹೋದನು. ಇನ್ನು ಮನು ಚೋಳನೆಂಬ ಮಹಾಮಹಿಮನ ಕಥೆಯನ್ನು ಹೇಳುವೆನು ಕೇಳು. ೭೦. ಕಮಲಮುಖೀ, ಚೋಳ ದೇಶದಲ್ಲಿ ಕಮಲಾಲಯವೆಂಬ ಒಂದು ಪಟ್ಟಣವು ಶೋಭಿಸಿರುವುದು. ಆ ಸುಂದರ ನಗರಕ್ಕೆ ಸಕಲ

ನೀತಿವಿಭವಂ ಪರಾಕ್ರಮ
ಮಾತತಯಶಮಮರ್ದ ಶೌಚಮುತ್ತುಂಗಕಲಾ।
ವ್ರಾತಂ ಮೂರ್ತಿಯನಾಂತವೊ
ಲಾತಪನಾನ್ವಯಸುಧಾಬ್ಧಿಚಂದ್ರಮನೆಸೆವಂ ॥ ೭೧ ॥

ಅಕಂಜಾತಕುಲಾಗ್ರಗಣ್ಯಮನುಚೋಳೋರ್ವೀಶರಾಟ್ಕೀರ್ತಿಯಂ
ರಾಕೇಂದುದ್ಯುತಿಗೆತ್ತರಾತಿನೃಪವಕ್ತ್ರಾಬ್ಜಂ ಕರಂ ಬಾಡುಗುಂ।
ವ್ಯಾಕೋಚತ್ವಮನೈದುಗುಂ ಸಕಲಮಿತ್ರಾಕ್ಷೋತ್ಪಲಂ ಮೇಣ್ಸುಧಾ
ನೀಕಾನಂದಸುಧಾಬ್ಧಿ ಪೆರ್ಚುಗುಮಿಭೇಂದ್ರೋತ್ತುಂಗಕುಂಭಸ್ತನೀ ॥ ೭೨ ॥

ತಚ್ಚೋಳಾವನಿಪಪ್ರಭೂತದೆಸಕಂ ತನ್ನುರ್ವರಾಮಂಡಲ
ಕ್ಕಚ್ಚಂಬೊಯ್ದ ಪರಂಜಿಯಾದುದಹಿತವ್ರಾತಕ್ಕೆ ಕಿರ್ಚಾದುದು
ದ್ಯಚ್ಚಂಡಾತಪಮಾದುದುನ್ನತಸುಹೃನ್ನೀರೇಜಜಾತಕ್ಕೆನ
ಲ್ಪಿಚ್ಚಂ ಕಾಂಚನಕಾಂಚಿಶೋಭಿತಘನಶ್ರೋಣಿಸ್ಥಲಾಭಾಸಿತೇ ॥ ೭೩ ॥

ಪದಪದ್ಮಂ ಪರರಾಜರಾಜಿತಕಿರೀಟಾನೀಕದೊಳ್ನಾಡೆ ಮಾ
ಟ್ಪುದು ಮಿತ್ರತ್ವಮನಚ್ಛಮೂರ್ತಿ ರಮಣೀಸ್ವಾಂತಾಬ್ಜದೊಳ್ಬೆಚ್ಚು ತೋ
ರ್ಪುದು ಚಿತ್ತಂ ತರುಣೇಂದುಚೂಡಚರಣಾಂಭೋಜಾತದೊಳ್ಪಿಂಗದಿ
ರ್ಪುದು ವಿದ್ವಜ್ಜನವಾಂಛಿತಪ್ರದಸುರೋರ್ವೀಜಾತತಚ್ಚೋಳನಾ ॥ ೭೪ ॥

ಸಜ್ಜನರನ್ನು ಕಾಪಾಡುವ ಮನುಚೋಳನು ಒಡೆಯನು. ೭೧. ನೀತಿ, ವೈಭವ, ಪರಾಕ್ರಮ, ಹರಡಿರುವ ಕೀರ್ತಿ, ಹೊಂದಿರುವ ಪರಿಶುದ್ಧತ್ವ, ಶ್ರೇಷ್ಠ ಕಲೆಗಳ ಮೊತ್ತ -ಇವು ಆಕಾರಗೊಂಡಂತೆ ಸೂರ್ಯವಂಶವೆಂಬ ಸಮುದ್ರಕ್ಕೆ ಚಂದ್ರನಂತೆ ಮನುಚೋಳನು ಶೋಭಿಸುವನು. ೭೨. ಐರಾವತದ ಎತ್ತರವಾದ ಕುಂಭಸ್ಥಲದಂತೆ ಘನವಾದ ಮೊಲೆಯನ್ನು ಹೊಂದಿರುವವಳೇ ಆ ಸೂರ್ಯವಂಶದಲ್ಲಿ ಮುಖ್ಯನಾದ ಮನುಚೋಳ ಮಹಾರಾಜನ ಪ್ರಜ್ವಲಿಸುವ ಕೀರ್ತಿಯನ್ನು ಪೂರ್ಣಚಂದ್ರನ ಕಿರಣಗಳೆಂದು ಭಾವಿಸಿ ಶತ್ರುಗಳ ಮುಖವೆಂಬ ಕಮಲಗಳು ಬಾಡುವವು. ಸಕಲ ಮಿತ್ರರ ಕಣ್ಣುಗಳೆಂಬ ಕನ್ನೈದಿಲೆಗಳು ಅರಳುವವು. ಆನಂದವೆಂಬ ಕ್ಷೀರಸಾಗರವು ಹೆಚ್ಚುವುದು. ೭೩. ಚಿನ್ನದ ಕಟಿಸೂತ್ರವು ಘನ ನಿಂತಂಬದಲ್ಲಿ ಶೋಭಿಸಿ ಹೊಳೆಯುವವಳೇ, ಆ ಚೋಳ ಮಹಾರಾಜನ ಸಮೃದ್ಧ ಕಾರ್ಯಗಳು ನಿತ್ಯವೂ ಆ ಭೂಮಂಡಲಕ್ಕೆ ಪುಟಕ್ಕಿಟ್ಟ ಅಪರಂಜಿಯಾಯಿತು. ಶತ್ರುಗಳ ಸಮೂಹಕ್ಕೆ ಬೆಂಕಿಯಾಯಿತು. ಆತ್ಮೀಯ ಮಿತ್ರರೆಂಬ ಕಮಲಗಳಿಗೆ ಪ್ರಖರ ಕಿರಣಗಳ ಸೂರ್ಯನಂತಾಯಿತು. ೭೪. ವಿದ್ವಾಂಸರ ಕೋರಿಕೆಯನ್ನು ನೆರವೇರಿಸುವ ದೇವಲೋಕದ ಕಲ್ಪವೃಕ್ಷದಂತಿರುವ ಆ ಚೋಳನ ಪಾದ ಕಮಲಗಳು ಶತ್ರುರಾಜರ ಹೊಳೆವ ಕಿರೀಟಗಳ ಸಮೂಹದಲ್ಲಿ ಚೆನ್ನಾಗಿ ಗೆಳೆತನವನ್ನು ಮಾಡುವವು. ಶುಭ್ರವಾದ ಮೂರ್ತಿಯು ಸುಂದರಿಯರ ಮುಖಕಮಲದಲ್ಲಿ ಸೇರಿ, ಮನವು ಬಾಲೇಂದುವನ್ನು ಶಿರದಲ್ಲಿ ಧರಿಸಿರುವ ಶಿವನ

ಇಂತೆಸೆವ ಚೋಳಮಹಿಪಂ
ಗಂತುಂ ನೃಪನರಸಿ ರತ್ನಮಾಲಿಕೆಗಂ ಮೇ।
ಣ್ಕಂತುಸಮರೂಪನೊಸೆದೆಸೆ
ವಂತಾಚಂಚಲನೆನಿಪ್ಪ ನಂದನನೊರ್ವಂ ॥ ೭೫ ॥

ಚಂಚಲಾಭಿಧಾನದಾಕುಮಾರನೊಂದುವಾಸರಂ
ಮುಂಚುವಟ್ಟಿಯುಣ್ಮಿಲೇಱಿ ಪೊನ್ನಭಂಡಿಯುಂ ಸಮಂ।
ತುಂಚಮಾದ ತತ್ಪುರೋಪವೀಥಿಯಲ್ಲಿ ನೂಂಕಿದಂ
ಕಾಂಚನೋಲ್ಲಸದ್ಘಟಾಭಪೀವರಸ್ತನದ್ವಯೇ ॥ ೭೬ ॥

ಭಂಡಿಯಂ ನಲವಿಂದ ನೂಂಕೆ ತದುಲ್ಲಸತ್ಪುರವೀಥಿಯೊಳ್
ತೊಂಡುಗೊಂಡಿರಲೊಂದು ತರ್ಣಕಮಂದು ತಚ್ಚಕಟಾಂಗಕು।
ಚ್ಚಂಡಲೀಲೆಯನಾಡುತುಂ ಮಿಗೆ ಪೊರ್ದಿ ಬಿರ್ದಟಿಯಲ್ವಲಂ
ಕಂಡು ತಚ್ಛಿಶುಮಾತೃ ಬಂದುದು ಚೋಳಗೇಹಕೆ ಶೋಕದಿಂ ॥ ೭೭ ॥

ಕಱು ಸತ್ತಟಿಲಂ ಚೋಳಂ
ಗಱುಪಲ್ ತದ್ಗೋಮತಲ್ಲಿ ಮುಂಬಾಗಿಲೊಳಂ।
ದುಱುವಪರಂಜಿಘಂಟೆಯ
ನಿಱಿದುದು ಶೃಂಗಾಗ್ರದಿಂ ಸುಧಾಕರವಕ್ತ್ರೇ ॥ ೭೮ ॥

ತವೆ ತಚ್ಛೃಂಗವಿಘಾತೋ
ದ್ಭವಘಂಟಾನಾದಮಂದು ಜಕ್ಕುಲಿಸಲ್ಕೊ।
ಧವಚೋಳನ ಕರ್ಣಮನು
ತ್ಸವಮಟಿದಾನೃಪತಿ ನೊಂದು ಮಗುಟ್ದಿಂತೆಂದಂ ॥ ೭೯ ॥

ಪಾದಕಮಲಗಳಲ್ಲಿ ಬಿಡದೆ ಸೇರಿರುವುದು. ೭೫. ಹೀಗೆ ಶೋಭಿಸಿರುವ ಚೋಳ ಮಹಾರಾಜನಿಗೂ ಅವನ ಪಟ್ಟದರಸಿ ರತ್ನಮಾಲಿಕೆಗೂ ಮನ್ಮಥ ಸಮಾನನಾದ ಚಂಚಲನೆಂಬ ಮಗನೋರ್ವನು ಹುಟ್ಟಿ ಸಂತೋಷದಿಂದ ಶೋಭಿಸಿದನು. ೭೬. ಹೊಳೆವ ಚಿನ್ನದ ಕಳಶದಂತಿರುವ ಮೊಲೆಗಳನ್ನು ಹೊಂದಿರುವವಳೇ, ಚಂಚಲನೆಂಬ ಹೆಸರಿನ ಆ ಸುಕುಮಾರನು ಒಂದು ವರ್ಷ ಕಳೆಯುವ ಮುನ್ನವೇ ಪ್ರೀತಿ ಹೆಚ್ಚಿ ವಿಶಾಲವಾದ ಆ ಪುರದ ಬೀದಿಗಳಲ್ಲಿ ಹೊನ್ನಿನ ಬಂಡಿಯನ್ನು ನೂಕಿದನು. ೭೭. ಚಿನ್ನದ ಗಾಡಿಯನ್ನು ಪ್ರೀತಿಯಿಂದ ಆ ವಿಶಾಲವಾದ ಪುರದ ಬೀದಿಯಲ್ಲಿ ನೂಕಲು, ತುಂಟತನದಿಂದ ಕರುವೊಂದು ತೀವ್ರವಾಗಿ ಆಟವಾಡುತ್ತ ಆ ಗಾಡಿಯ ಚಕ್ರಗಳ ಬಳಿ ಬಂದು ಬಿದ್ದು ಪ್ರಾಣ ಬಿಡಲು ಅದನ್ನು ಕಂಡ ಆ ಕರುವಿನ ತಾಯಿ ಚೋಳನ ಅರಮನೆಗೆ ದುಃಖಿಸುತ್ತ ಬಂದಿತು. ೭೮. ಚಂದ್ರಮುಖೀ, ತನ್ನ ಕರು ಸತ್ತ ದುಃಖವನ್ನು ಚೋಳನಿಗೆ ತಿಳಿಸಲು ಆ ಹಸುವು ಮುಂಬಾಗಿಲಿಗೆ ಬಂದು ಹೊಳೆವ ಅಪರಂಜಿಯ ಘಂಟೆಯನ್ನು ತನ್ನ ಕೋಡಿನಿಂದ ಬಾರಿಸಿತು. ೭೯. ಕೊಂಬಿನ ವಿಶೇಷ ಹೊಡೆತದಿಂದ ಚೆನ್ನಾಗಿ ಘಂಟಾನಾದವು ವ್ಯಕ್ತವಾಗಿ ಚೋಳ ಮಹಾರಾಜನ ಕಿವಿಗಳಿಗೆ ಆ ನಾದವು ವ್ಯಾಪಿಸಲು ಉತ್ಸಾಹಗೆಟ್ಟು ಆ ಮಹಾರಾಜನು

ಅಕಾರಣಂ ಕಾಂಚನಘಂಟಿಕಾರವಂ
ಪ್ರಕಾಶಮಾದತ್ತೆನುತೆದ್ದು ತನ್ನೃಪಾ।
ಲಕಂ ನಿಜದ್ವಾರಕೆ ಬಂದು ಕಂಡನಂ
ದು ಕಣ್ಣನೀರಂ ಕಱುಪಿವಾಘಟೋಧ್ನಿಯಂ ॥ ೮೦ ॥

ಏನಿಂತಿದು ವಿಸ್ಮಯಮೀ
ಧೇನುವಿನಟಿಲೇನತೀವ ಪುಣ್ಯಸಹಾಯರ್।
ಭೂನಾಯಕ ಕೇಳ್ವಿಧಿಕೃತ
ಮೇನೆಂದೆನೆ ಬರ್ಕುಮೆಂದು ಮಗುಟ್ದಿಂತೆಂದಂ ॥ ೮೧ ॥

ಅವರ ನುಡಿಯನಾಚೋಳಾವನೀವಲ್ಲಭಂ ಕೇ
ಳ್ದವಿರಳಘನಚಿಂತಾಕ್ರಾಂತನೆಟ್ತಿಂದು ಶೋಭಿ।
ಪ್ಪವನಜಪುರವೀಧೀಮಧ್ಯದೊಳ್ಸತ್ತು ಮೇಣ್ತೋ
ಱುವ ಪಶುಶಿಶುವಂ ಕಂಡಂ ತದುರ್ವೀಶನಾಗಳ್ ॥ ೮೨ ॥

ಇಂದೆನಗೀಘನಪಾಪಂ
ಬಂದುದಿದಕ್ಕೇನನೊಡರ್ಚುವೆನೆನುತುಂ।
ಮುಂದಿರ್ದ ವಿಬುಧರಂ ಮುಱಿ
ದಂದಾಲೋಕಿಸಲವರ್ಮಗುಟ್ದಿಂತೆಂದರ್ ॥ ೮೩ ॥

ಕನಕಾಂಬರಕರಿರತ್ನಾ
ವನಿಮುಖ್ಯಾನೇಕದಾನಮಂ ರಚಿಸಿದೊಡೀ।
ಘನಪಾಪಂ ಪೋದಪ್ಪುದೆಂ
ದೆನೆ ತತ್ಪಂಡಿತಜನಕ್ಕೆ ನೃಪನಿಂತೆಂದಂ ॥ ೮೪ ॥

ನೊಂದು ಮತ್ತೆ ಹೀಗೆಂದನು. ೮೦. ಅಕಾರಣವಾಗಿ ಚಿನ್ನದ ಘಂಟೆಯ ಧ್ವನಿಯು ಕೇಳಿ ಬರುತ್ತಿದೆ ಎಂದು ಮೇಲೆದ್ದ ಮಹಾರಾಜನು ತನ್ನ ಅರಮನೆಯ ಬಾಗಿಲಿಗೆ ಬಂದು ಕಣ್ಣೀರು ಸುರಿಸುವ ಹಸುವನ್ನು ಆಗ ಕಂಡನು. ೮೧. ಏನಿದಾಶ್ಚರ್ಯ! ಈ ಹಸುವಿನ ದುಃಖವೇನು ಎನ್ನಲು, ಆಗ ಹೆಚ್ಚಿನ ಪುಣ್ಯಾರ್ಜನೆಗೆ ಸಹಾಯಕನಾದ ಮಂತ್ರಿಯು "ಮಹಾರಾಜ ಕೇಳು, ವಿಧಿ ಮಾಡಿದುದನ್ನು ಯಾರು ಏನೇ ಹೇಳಿದರೂ ತಪ್ಪಿಸಲಾಗದು, ವಿಧಿ ಲಿಖಿತದಂತೆ ಆಗುವುದು ಆಗೇ ಆಗುತ್ತದೆ" ಎಂದು ಹೇಳಿದನು. ೮೨. ಅವರ ಮಾತನ್ನು ಆ ಚೋಳದೇಶದೊಡೆಯನು ಕೇಳಿ ಅತ್ಯಂತ ಹೆಚ್ಚಿನ ಚಿಂತೆಯಲ್ಲಿ ಮುಳುಗಿ ಬರುತ್ತ, ಶೋಭಿಸುವ ಕಮಲಪುರದ ಬೀದಿಯ ಮಧ್ಯದಲ್ಲಿ ಸತ್ತು ಬಿದ್ದಿರುವ ಕರುವನ್ನು ಆಗ ಮಹಾರಾಜನು ಕಂಡನು. ೮೩. ಇಂದು ನನಗೆ ಈ ಹಿರಿಯ ಪಾಪವು ಬಂದುದಕ್ಕೆ ಏನು ಮಾಡಲಿ ಎಂದು ಮುಂದಿದ್ದ ವಿದ್ವಾಂಸರನ್ನು ಭಗ್ನ ಹೃದಯನು ನೋಡಲು ಅವರು ಪ್ರತಿಯಾಗಿ ಹೀಗೆಂದರು. ೮೪. ಚಿನ್ನ, ವಸ್ತ್ರ, ಆನೆ, ರತ್ನ, ಭೂ - ಇವೇ ಮೊದಲಾದ ಅನೇಕ ದಾನಗಳನ್ನು ಮಾಡಿದರೆ ಈ ಹಿರಿಯ ಪಾಪವು ನಿವಾರಣೆಯಾಗುವುದೆಂದು ಹೇಳಲು ಆ ಪಂಡಿತಜನರಿಗೆ ಮಹಾರಾಜನು ಹೀಗೆಂದನು. ೮೫. ಕಮಲಮುಖೀ,

ಪ್ರಾಣಿಗಚೇತನಂಬಡೆದ ಭೂಮಣಿಕಾಂಚನಮುಖ್ಯವಸ್ತುಕ
ಶ್ರೇಣಿಯಿದೇಂ ಸಮಾನಮೆನಿದಕ್ಕೆಣೆಯಾಗಿ ಮದೀಯಪುತ್ರನಂ।
ಮಾಣದೆ ತಂದು ಭಂಡಿಗಿರಿದಿಕ್ಕುವೆನೆಂದು ನಿಜಾತ್ಮಜಾತನಂ
ಕ್ಷೋಣಿಪನಂದು ತಚ್ಛಕಟಮಾರ್ಗಕೆ ಸಾರ್ಚಿದನಂಬುಜಾನನೆ ॥ ೮೫ ॥

ಕಱುವೇ ತತ್ತನುಜಂ ದಲಾಂಕುವರನೆಂದೆಲ್ಲಾಜನಂ ವೀಧಿಯೊಳ್
ತಱಿಸಂದೀಕ್ಷಿಪುದೆಂದು ತಚ್ಛಕಟಮಂ ತಾನೇಱಿ ಚೋೞೋರ್ವಿಪಂ।
ನೆಱೆ ನೂಂಕಲ್ ನಿಜಪುತ್ರಗಾತ್ರಮಿರದಾದಂ ಖಂಡಿಸಲ್ಕಂಡು ನಿ
ಬ್ಬೆಱಗಂ ತಾಳ್ದತಿವಿಸ್ಮಯಂ ಬಡೆದರಾಪೌರರ್ಕಳಬ್ಜಾನನೇ ॥ ೮೬ ॥

ಇಂತತಿಧರ್ಮನೀತಿಯಂ ಬಲ್ಪಿಡಿದು ಸುತನಂ ತಂದಱಿದ ತರ್ಣಕಕ್ಕೆಣೆಯಾಗಿ ಭಂಡಿಗಡ್ಡಮಾಗಿ ಮಲಂಗಿಸಿ ಸಮಸ್ತಜನಂ ವಿಸ್ಮಯ ಸ್ವಾಂತರಾಗಿ ನೋಡುತ್ತಿರಲಾಪವಿತ್ರಗಾತ್ರಪುತ್ರನ ಮೇಲೆ ಶಕಟಮಂ ಕಡುಸಂತಸಂ ಬಡೆದು ನಡಿಸಿದ ತನ್ಮನುಚೋೞನ ಧರ್ಮದೇೞ್ಗೆಯಂ ಭರ್ಮಾಚಲಕಾರ್ಮುಕಂ ಕಂಡು ಮೆಚ್ಚಿ ಬೆಚ್ಚರಮುತ್ಸವದಿಂ ಪ್ರಸನ್ನಮಾಗೆ,॥

ಮೆಚ್ಚಿದನು ಚೋೞರಾಯಂ
ಗುಚ್ಚವದಿಂದಂ ಪ್ರಸನ್ನನಾಗಲುಮೇಶಂ।
ಎಚ್ಚತ್ತೆರ್ದಂ ಕುವರಂ
ಬೆಚ್ಚರಮಾತರ್ಣಕಕ್ಕೆ ಬಂದುದು ಜೀವಂ ॥ ೮೭ ॥

ಪ್ರಾಣಕ್ಕೆ ಜೀವವಿಲ್ಲದ ಭೂಮಿ, ಮಣಿ, ಚಿನ್ನ -ಇವೇ ಮೊದಲಾದ ವಸ್ತುಗಳ ಸಮೂಹವೇನು ಸಮಾನವೆ? ಇದಕ್ಕೆ ಸಮಾನವಾಗಿ ನನ್ನ ಮಗನನ್ನು ಬಿಡದೆ ತಂದು ಬಂಡಿಗೆ ಇದಿರಾಗಿ ಹಾಕುವೆನು ಎಂದು ಮಹಾರಾಜನು ತನ್ನ ಮಗನನ್ನು ಆ ಬಂಡಿಯ ದಾರಿಗೆ ತಳ್ಳಿದನು. ೮೬. ಕಮಲಮುಖೀ, ಕರುವೇ ನನ್ನ ಮಗನು. ನಿಶ್ಚಯವಾಗಿಯೂ ನನ್ನ ಮಗನೇ ಎಂದು ನಿಶ್ಚಯಿಸಿ ಎಲ್ಲಾ ಜನರು ಬೀದಿಯಲ್ಲಿ ನೋಡುವುದು ಎಂದು ಬಂಡಿಯನ್ನು ತಾನೇ ಏರಿದ ಚೋಳ ಮಹಾರಾಜನು ನೂಕಲು ಅವನ ಮಗನ ಶರೀರವು ಚೆನ್ನಾಗಿ ಕತ್ತರಿಸಲ್ಪಡಲು ಪೌರರು ಅತ್ಯಾಶ್ಚರ್ಯಗೊಂಡು ಅತಿ ವಿಸ್ಮಯವನ್ನು ಹೊಂದಿದರು. ವ॥ ಹೀಗೆ ಧರ್ಮ ನೀತಿಯನ್ನು ಬಲವಾಗಿ ಅನುಸರಿಸಿ ತನ್ನ ಮಗನನ್ನೇ ಸತ್ತ ಕರುವಿಗೆ ಪ್ರತಿಯಾಗಿ ಬಂಡಿಗೆ ಅಡ್ಡಲಾಗಿ ಮಲಗಿಸಿ ಸಕಲ ಜನರೂ ವಿಸ್ಮಯದಿಂದ ಕೂಡಿ ನೋಡುತ್ತಿರಲು ಆ ಪವಿತ್ರ ಶರೀರನಾದ ಮಗನ ಮೇಲೆ ಅತ್ಯಾನಂದದಿಂದ ಬಂಡಿಯನ್ನು ನಡೆಯಿಸಿದ ಆ ಮನುಚೋಳನ ಧರ್ಮದ ಏಳಿಗೆಯನ್ನು ಸುವರ್ಣಾಚಲವೇ ಧನಸ್ಸಾಗಿ ಉಳ್ಳ ಶಿವನು ನೋಡಿ ಮೆಚ್ಚಿ ಬೇಗನೆ ಪ್ರತ್ಯಕ್ಷನಾಗಿ, ೮೭. ಶಿವನು ಚೋಳರಾಯನ ಧರ್ಮನಿಷ್ಠೆಗೆ ಮೆಚ್ಚಿ ಬೇಗನೆ ಪ್ರತ್ಯಕ್ಷವಾಗಲು ಕುಮಾರನು ಎಚ್ಚರಗೊಂಡು ಮೇಲೆದ್ದನು. ಬೇಗನೆ ಆ ಕರುವಿಗೂ ಜೀವ

ಇಂತಟಿದ ತನುಜಂಗಂ ತರ್ಣಕಕ್ಕಂ ಜೀವಂ ಬರಲ್ ಪ್ರಸನ್ನನಾದಂತಾತತತೇಜೋಮಯಮಪ್ಪ ರಾಜಕಲಾವತಂಸನ ಮೂರ್ತಿಯಂ ಕಂಡಾನಂದಂಬಡೆದಭಿವಂದಿಸಿ ಮಗುಟ್ಟೆದ್ದು ನಿಂತು ಕೊಂಡಾಡುವ ತನ್ಮನುಚೋಳಂಗೆ ಸಾಮೀಪ್ಯಪದಮಂ ಕೊಟ್ಟು ಗೋಮತಲ್ಲಿಕೆಯಂ ತದ್ವತ್ಸಗೂಡಿ ಗೋಲೋಕಕ್ಕೆ ಕಳುಪಿ ಯಖಂಡಪರಿಪೂರ್ಣನದೃಶ್ಯಮಾಗಿ ಪೋಗೆ,

ಪ್ರಾಣಂ ಬಂದು ಮನಂಗೊಳಿಪ್ಪ ತನುಜಂಗಾರಾಜ್ಯಮಂ ಕೊಟ್ಟತತ್
ಕ್ಷೋಣೀಶಂ ಮನುಚೋಳನೈದನೆ ಲಸತ್ಕೈ ಲಾಸಕಿನ್ನಾಲಿಸ।
ಕ್ಷೀಣದ್ಯೂತವಿನೋದಿ ಮೂರ್ಖನೈನಾರೆಂಬಾತನ ಖ್ಯಾತಿಯಂ
ಮೇಣಾಲಾಪಿಸು ಪೇಟುವೆಂ ಮುಕುರಶೋಭಾಸ್ನಿಗ್ಧಗಂಡಸ್ಥಲೀ ॥ ೮೮ ॥

ತೊಂಡಮಂಡಲದಲ್ಲಿ ಶೋಭಿಪ ಶಕ್ಯರಣ್ಯಮೆನಿಪ್ಪ ನಿ
ಖ್ಖಂಡಿತೋತ್ಸವಮೊಂದು ಪಟ್ಟಣಮಿರ್ಪುದಾಪುರದೊಳ್ಮಹೋ।
ಚ್ಚಂಡಧಾರ್ಮಿಕಚಿತ್ತರುತ್ತಮಶೂದ್ರರೊಪ್ಪುವರಿಕ್ಷುಕೋ
ದಂಡಘಸ್ಮರಪಾದಪಂಕಜಶಾಬಕರ್ಮ್ಯಗಲೋಚನೇ ॥ ೮೯ ॥

ಶಿವಪೂಜೆಯನೆಡೆವಿಡದೊ
ಪ್ಪುವ ತತ್ಪುರದಮಳಶೂದ್ರಜಾತಿಯೊಳಂದೊ।
ರ್ವವಿಶಿಷ್ಟಭಕ್ತನುದರೋ
ದ್ಭವನೆಸೆದಂ ನಾಡೆ ಮೂರ್ಖನೈನಾರೆನಿಪಂ ॥ ೯೦ ॥

ಧನಮಂ ವರಜಂಗಮಕಿತ್ತು ಲಸ
ತ್ತನುಮಂ ಗುರುಸೇವೆಗೆ ತೆತ್ತು ಕರಂ।
ಮನಮಂ ಶಿವನಂಘ್ರಿಗೆ ಮಾರಿ ಬಟಿ
ಕ್ಕನಿಶಂ ಪರಿರಂಜಿಪನಾಶರಣಂ ॥ ೯೧ ॥

ಬಂದಿತು. ವ॥ ಹೀಗೆ ಸತ್ತ ಮಗನಿಗೆ ಕರುವಿಗೆ ಜೀವ ಬರಲು ಪ್ರಸನ್ನವಾದ ಅಪಾರ ತೇಜದಿಂದ ಕೂಡಿರುವ ಚಂದ್ರನನ್ನು ಶಿರದಲ್ಲಿ ಧರಿಸಿರುವ ಶಿವನ ಮೂರ್ತಿಯನ್ನು ನೋಡಿ ಆನಂದಗೊಂಡು ನಮಸ್ಕರಿಸಿ ಮೇಲೆದ್ದು ನಿಂತು ಸ್ತುತಿಸುವ ಆ ಮನುಚೋಳನಿಗೆ ಸಾಮೀಪ್ಯ ಪದವನ್ನು ಕೊಟ್ಟು ಹಸುವನ್ನು ಕರುವಿನೊಡನೆ ಕೈಲಾಸಕ್ಕೆ ಕಳುಹಿಸಿ ಅಖಂಡ ಪರಿಪೂರ್ಣನು ಅದೃಶ್ಯನಾಗಿ ಹೋಗಲು ೮೮. ಕನ್ನಡಿಯಲ್ಲಿ ಶೋಭಿಸುವ ಶುಭ್ರವಾದ ಕಪೋಲಗಳನ್ನುಳ್ಳವಳೇ, ಜೀವ ಮರಳಿ ಬಂದು ಮನಸೆಳೆಯುವ ಮಗನಿಗೆ ಆ ರಾಜ್ಯವನ್ನು ಕೊಟ್ಟು ಮಹಾರಾಜ ಮನುಚೋಳನು ಹೊಳೆವ ಕೈಲಾಸಕ್ಕೆ ಹೋದನು. ಇನ್ನು ಮುಂದೆ ಕೊರತೆಯಾಗದಂತೆ ಜೂಜಾಡುವ ಮೂರ್ಖನೈನಾರೆಂಬಾತನ ಖ್ಯಾತಿಯನ್ನು ಹೇಳುವೆ ಕೇಳುವವಳಾಗು. ೮೯. ಜಿಂಕೆಯ ಮರಿಯ ನೋಟದಂತೆ ಚಂಚಲನಾದ ಕಣ್ಣುಳ್ಳವಳೇ, ತೊಂಡಮಂಡಲದಲ್ಲಿ ಶಕ್ಯರಣ್ಯವೆಂಬ ಸದಾ ಸಂತಸದಿಂದ ಕೂಡಿರುವ ಪಟ್ಟಣವು ಶೋಭಿಸಿರುವುದು. ಆ ಪಟ್ಟಣದಲ್ಲಿ ಅತ್ಯಂತ ಹೆಚ್ಚಿನ ಧಾರ್ಮಿಕ ಶ್ರದ್ಧೆಯುಳ್ಳ ಕಬ್ಬನ್ನೆ ಬಿಲ್ಲಾಗಿ ಹೊಂದಿದ ಮನ್ಮಥನನ್ನು ದಹಿಸಿದ ಶಿವನ ಪಾದಕಮಲವನ್ನು ನಂಬಿರುವ ಉತ್ತಮ ಶೂದ್ರರು ಶೋಭಿಸಿರುವರು. ೯೦. ಶಿವಪೂಜೆಯನ್ನು ಎಡೆಬಿಡದೆ ಮಾಡುವ ಆ ಪುರದ ಶುಭ್ರವಾದ ಶೂದ್ರ ಜಾತಿಯಲ್ಲಿ ಓರ್ವ ವಿಶಿಷ್ಟ ಭಕ್ತನ ಹೊಟ್ಟೆಯಲ್ಲಿ ಜನಿಸಿದ ಮೂರ್ಖನೈನಾರ್ ಎನ್ನುವವನು ಚೆನ್ನಾಗಿ ಶೋಭಿಸಿದನು. ೯೧. ಧನವನ್ನು ಶ್ರೇಷ್ಠರಾದ

ನಿಚ್ಚಂ ಪಣ್ಣೆಯದಾಗೆ ಜೂಜುತನಗಾಜೂಜಾಟದಿಂ ಬಂದ ಭಾ
ಸ್ವಚ್ಚಾಮೀಕರದಿಂದೆ ಜಂಗಮಪದಾಬ್ಜಾರಾಧನಂ ಗೈಯ್ಯುತುಂ।
ಸಚ್ಚಿನ್ಮೂರ್ತಿಯೆನಿಪ್ಪ ಮೂರ್ಖನೈನಾರಿಂತೊಪ್ಪೆ ತದ್ಭಕ್ತನು
ದ್ಯಚ್ಚಾರಿತ್ರಮನೊಲ್ದು ನೋಟುಸ್ಟಿಡುಮೆಯಾಣ್ಮಂ ಬಂದನೇಣೇಕ್ಷಣೇ ॥ ೯೨ ॥

ಜೂಜನಾಡುವ ತನ್ಮಹಾಶಿವಭಕ್ತನೊಳ್ಪರಮೇಶ್ವರಂ
ಜೂಜುಗಾಱನ ಮಾಟ್ಕೆಯಿಂ ನಡೆತಂದು ಮೆಲ್ಲನೆ ಸಾರ್ದು ತಾಂ।
ಜೂಜನಾಡಿ ಸಮಂತು ಸೋಲ್ದು ಸುವರ್ಣಮೀಯದೆ ಪೋಗಲಾ
ಜೂಜಿನರ್ಥಕೆ ಕಟ್ಟಿದಂ ಬಿಡದಾತನಂಗಜವೈರಿಯಂ ॥ ೯೩ ॥

ಪಿಡಿದೆತ್ತಿ ತನ್ನಪಾಂಗಿಂ
ಬಿಡದಡಿಯಂ ಕಟ್ಟಿ ತೂಗಿ ವಿತ್ತಮನಿಕ್ಕೆಂ।
ದಡಿಗಡಿಗೆ ಜಡಿಯುತುಂ ಬಿಡು
ನುಡಿಯಂ ನುಡಿಯುತ್ತುಮಿರ್ದನಾಶಿವಭಕ್ತಂ ॥ ೯೪ ॥

ಶಿವಭಕ್ತರ್ಬಂದುಱು ಮ
ದ್ಭವನದೊಳೊಲ್ದಿರ್ಪರವರ ಸೇವೆಗೆ ಮೇಣಾ।
ದ್ರವಿಣಂ ತಪ್ಪಿದೊಡಸುವಂ
ಜವದಿಂದ ಬಿಡುವೆನೆಂದನಾಶಿವಭಕ್ತಂ ॥ ೯೫ ॥

ಎನ್ನಸುವಿನೊಡನೆ ನಿನ್ನಸು
ತಾಂ ನಿಲ್ಲದೆ ಪೋಗವೇಟ್ಕುಮೇನಿಕ್ಕುವ ಪೊ।
ನ್ನಂ ನೀಂ ಚಕ್ಕನೆ ತರಿಸೆಂ
ಬನ್ನೆಗಮೀಶಂ ಪ್ರಸನ್ನನಾದಂ ತರುಣೀ ॥ ೯೬ ॥

ಜಂಗಮರಿಗಿತ್ತು, ಹೊಳೆವ ಶರೀರವನ್ನು ಗುರುಸೇವೆಗೆ ತೆತ್ತು, ಅತಿಶಯವಾಗಿ ಮನಸ್ಸನ್ನು ಶಿವನ ಪಾದಗಳಿಗೆ ಮಾರಿ ಸದಾ ಆ ಶರಣನು ಚೆನ್ನಾಗಿ ಶೋಭಿಸಿರುವನು. ೯೨. ಜಿಂಕೆಯ ನೋಟದಂತೆ ಚಂಚಲ ನೇತ್ರಗಳನ್ನು ಹೊಂದಿರುವವಳೇ, ಜೂಜಾಡುವುದು ನಿತ್ಯವೂ ಅಭ್ಯಾಸವಾಗಿ, ಆ ಜೂಜಾಟದಿಂದ ಬಂದ ಹೊಳೆವ ಚಿನ್ನದಿಂದ ಜಂಗಮ ಪಾದಕಮಲಗಳನ್ನು ಆರಾಧಿಸುತ್ತ, ಸತ್‌ಚಿತ್ ಮೂರ್ತಿಯಾದ ಮೂರ್ಖನೈನಾರು ಹೀಗೆ ಶೋಭಿಸಿರಲು ಆ ಭಕ್ತನ ಘನವಾದ ಚಾರಿತ್ರವನ್ನು ಮೆಚ್ಚಿ ಪರೀಕ್ಷಿಸಿ ನೋಡೋಣವೆಂದು ಉಮೆಯ ಗಂಡನಾದ ಶಿವನು ಬಂದನು. ೯೩. ಜೂಜಾಡುವ ಆ ಮಹಾಶಿವಭಕ್ತನಲ್ಲಿಗೆ ಪರಮೇಶ್ವರನು ಜೂಜುಗಾರನ ರೀತಿಯಲ್ಲಿ ಬಂದು ಮೆಲ್ಲನೆ ಸಮೀಪಿಸಿ ಅವನೊಡನೆ ಜೂಜನಾಡಿ ಚೆನ್ನಾಗಿ ಸೋತು ಚಿನ್ನವನ್ನು ಕೊಡದೆ ಹೋಗಲು ಮನ್ಮಥ ವೈರಿಯಾದ ಶಿವನನ್ನು ಜೂಜಿನ ಪಣಕ್ಕಾಗಿ ಬಿಡದೆ ಕಟ್ಟಿ ಹಾಕಿದನು. ೯೪. ಆ ಶಿವಭಕ್ತನು ತನ್ನ ಹಗ್ಗದಲ್ಲೇ ಹಿಡಿದೆತ್ತಿ ಬಿಡದೆ ಪಾದಗಳನ್ನು ಕಟ್ಟಿಹಾಕಿ ತೂಗಿ ಹಣವನ್ನು ಕೊಡು ಎಂದು ಮೇಲಿಂದ ಮೇಲೆ ಹೊಡೆಯುತ್ತ ಕಠಿಣವಾದ ಮಾತುಗಳನ್ನು ಆಡುತ್ತಲಿದ್ದನು. ೯೫. ಶಿವಭಕ್ತರು ಬಂದು ನನ್ನ ಮನೆಯಲ್ಲಿ ಮೆಚ್ಚಿ ಇರುವರು. ಅವರ ಸೇವೆಗೆ ಅಗತ್ಯವಾದ ದ್ರವ್ಯ ತಪ್ಪಿದರೆ ಪ್ರಾಣವನ್ನು ಬೇಗನೆ ಬಿಡುವೆನೆಂದು ಆ ಶಿವಭಕ್ತನು ನುಡಿದನು. ೯೬. ಸುಂದರೀ, "ನನ್ನ ಪ್ರಾಣದೊಡನೆ ನಿನ್ನ ಪ್ರಾಣವು ತಡಮಾಡದೆ ಹೋಗುತ್ತದೆ.

ಪ್ರಸನ್ನಮಾದಂತಕವೈರಿಯಂ ನಿರೀ
ಕ್ಷಿಸುತ್ತೆ ಸಂತ್ರಾಸಮನಾಂತು ಕಟ್ಟಿದಾ।
ಮಿಸುಪ್ಪಪಾಂಗಂ ಜವದಿಂದೆ ಕೋಯಲಂ
ದು ಸಂತಸಂದಾಳ್ದಿರದಾಗಳೀಶ್ವರಂ ॥ ೯೭ ॥

ಮೆಚ್ಚಿದನೀಮೂರ್ಖತೆಯೊಳ್
ಬೆಚ್ಚ ಮಹಾಭಕ್ತಗೆಂದು ತಚ್ಛರಣಂ ಚಂ।
ಚಚ್ಚಂದ್ರಧರಂ ಕೈಲಾ
ಸೋಚ್ಚಪದಂಗೊಟ್ಟನಿಂದುಮಂಡಲವದನೇ ॥ ೯೮ ॥

ಪರಿವರ್ತಿಸಿ ಜೂಜಿನೊಳೀ
ಶ್ವರನಂ ಮೆಚ್ಚಿಸಿ ಸಮಸ್ತಭಕ್ತರ್ ನಲಿಯಲ್।
ಪಿರಿದುಂ ಮೂರ್ಖಂನೈನಾ
ರ್ವರಕೈಲಾಸಕ್ಕೆ ಪೋದನಬ್ಜದಳಾಕ್ಷೀ ॥ ೯೯ ॥

ನುತಕೇಳೀಪ್ರಿಯನಲ್ತೆ ಮಲ್ಲಣಕವೀಶಂ ಚೋಳರಾಜೇಂದ್ರನುಂ
ನತರಾಜಾಧಿಪನಲ್ತೆ ಮೂರ್ಖನೈನಾರ್ದ್ಯೂತಾರ್ಥಿ ತಾನಲ್ತುಮಾ।
ಪತಿಸಂಸ್ತುತ್ಯನನ್ಕೆದೆ ಮೆಚ್ಚಿಸಿ ಯವರ್ಕೈಲಾಸಮಂ ಪೋಗರೇ
ಕ್ಷಿತಿಯೊಳ್ ನಿಸ್ಪೃಹ ಭಕ್ತರೆಂತು ನಡೆಯಲ್ ಕುಂದುಂಟೆ ಚಂದ್ರಾನನೇ ॥ ೧೦೦ ॥

ಎಂದಿಂತು ಪೂರ್ವಕಥೆಗಳ
ನಂದೊಜು'ದುದ್ಭಟಮಹೀಧವಂಗಾಸಂಪೂ।
ರ್ಣೇಂದುಮುಖಿ ಮಗುಳ್ದಿಂ
ತೆಂದಳ್ ಮೃದುಮಧುರವಚನರಚನೆಯಿನಾಗಳ್ ॥ ೧೦೧ ॥

ಏನು, ತೆರಬೇಕಾದ ಹೊನ್ನನ್ನು ನೀನು ಬೇಗನೆ ತರಿಸು" ಎನ್ನುವಷ್ಟರಲ್ಲಿ ಶಿವನು ಪ್ರತ್ಯಕ್ಷನಾದನು. ೯೭. ಪ್ರತ್ಯಕ್ಷನಾದ ಯಮನ ವೈರಿಯಾದ ಶಿವನನ್ನು ನೋಡಿ ಅಚ್ಚರಿಗೊಂಡು ಕಟ್ಟಿದ ಆ ಹೊಳೆವ ಹಗ್ಗವನ್ನು ಬೇಗನೆ ಕತ್ತರಿಸಿ ಸಂತೋಷಗೊಂಡು ಇರುತ್ತಿರಲು ಆಗ ಶಿವನು, ೯೮. ಚಂದ್ರಮುಖೀ, ಈ ಮೂರ್ಖತೆಯಲ್ಲೂ ನಿನ್ನನ್ನು ಮೆಚ್ಚಿರುವೆ ಎಂದು ಬೆದರಿದ ಮಹಾಭಕ್ತನಿಗೆ ಹೇಳಿ, ಆ ಶರಣನಿಗೆ ಶಿವನು ಕೈಲಾಸದ ಉಚ್ಚ ಪದವಿಯನ್ನು ಅನುಗ್ರಹಿಸಿದನು. ೯೯. ಕಮಲನಯನೇ, ಜೂಜಿನಲ್ಲಿ ಪರಿವರ್ತನೆಗೊಂಡು, ಶಿವನನ್ನು ಮೆಚ್ಚಿಸಿ, ಸಕಲ ಭಕ್ತರು ಅತಿಶಯವಾಗಿ ಸಂತೋಷಗೊಳ್ಳಲು ಮೂರ್ಖನೈನಾರು ಕೈಲಾಸಕ್ಕೆ ಹೋದನು. ೧೦೦. ಚಂದ್ರಮುಖೀ, ಮಲುಹಣ ಕವೀಂದ್ರನು ಪ್ರಸಿದ್ಧ ವಿಲಾಸಿಯಲ್ಲವೆ, ಚೋಳರಾಜೇಂದ್ರನು ಶ್ರೇಷ್ಠ ಮಹಾರಾಜನಲ್ಲವೆ, ಮೂರ್ಖನೈನಾರು ಜೂಜುಕೋರನಲ್ಲವೆ, ಉಮೆಯ ಪತಿಯನ್ನು ಚೆನ್ನಾಗಿ ಕೀರ್ತಿಸಲ್ಪಡುವವನನ್ನು ವಿಶೇಷವಾಗಿ ಮೆಚ್ಚಿಸಿ ಅವರುಗಳು ಕೈಲಾಸಕ್ಕೆ ಹೋಗಲಿಲ್ಲವೆ? ಲೋಕದಲ್ಲಿ ಸ್ವಾರ್ಥವಿಲ್ಲದ ಭಕ್ತರು ಹೇಗೆ ನಡೆಯಲಿ ಕುಂದುಂಟೆ? ೧೦೧. ಹೀಗೆಂದು ಪೂರ್ವ ಕಥೆಗಳನ್ನು ಆಗ ಹೇಳಿದ ಉದ್ಭಟ ಮಹಾರಾಜನಿಗೆ ಬಾಲೇಂದುಮುಖಿಯಾದ ಸೌಂದರದೇವಿಯು ಮೃದುಮಧುರವಾದ ಮಾತುಗಳಿಂದ ಮತ್ತೆ

ಎಲ್ಲಾ ಕಥೆಗಳನಾದಂ
ಸೊಲ್ಲಿಪುದರಿದಲ್ತು ತನುವೆರಸು ಕೈಲಾಸ।
ಕ್ಕುಲ್ಲಸದೆ ಪೋಪನವನಿಯೊ
ಳಿಲ್ಲೆನಲಾಕಾಂತೆಗುರ್ವಿಪತಿ ಯಿಂತೆಂದಂ ॥ ೧೦೨ ॥

ವನಜಾತೇಕ್ಷಣೆ ಕೇಳಿದಂ ಗಹನಮೇ ಭಕ್ತರ್ಗೆ ಕೈಲಾಸಕೊ
ರ್ವನೆ ತಾಂ ಪೋಪುದು ನೋಡು ನೀನಿರದೆ ತತ್ಪಟ್ಟಣಂಗೂಡಿಯಾಂ।
ಮನಮೊಲ್ದುರ್ವರೆ ಮೆಚ್ಚಲಿಂದುಧರಲೋಕಕ್ಕಿಂದೆ ಪೋದಪ್ಪೆನೆಂ
ದೆನುತುಂ ಸುಂದರನೀಲಕಂಠಗೃಹಕೆಟ್ತಿಂದಂ ಸಮಂತುದ್ಭಟಂ ॥ ೧೦೩ ॥

ಸೌಂದರಿಗೂಡಿ ನೃಪಾಲಕನೊಲ್ದೆ
ಯ್ತಿಂದು ಶಿವಾಲಯಮಂ ತವೆ ಪೊಕ್ಕಾ।
ನಂದದಿನಿಂದುಕಲಾಧರನಂ ಕಂ
ಡಂದುರುಭಕ್ತಿಸುಧಾಬ್ಧಿಯೊಳಾಟ್ದಿಂ ॥ ೧೦೪ ॥

ಶ್ರೀನೀಲಕಂಠನತಿನಿರ್ಮಲಮೂರ್ತಿಯಂ ಕಂ
ಡಾನಂದಮಂ ತಳೆದು ವಂದಿಸಿ ಮತ್ತೆ ನಿಲ್ತಂ।
ದಾನೀಱಿಗೂಡಿ ನಡೆತಂದೊಳಪೊಕ್ಕಲಂಪಿಂ
ತಾನೊಲ್ದು ಪೂಜಿಸಿದನಾಹರನಂ ನೃಪಾಲಂ ॥ ೧೦೫ ॥

ಷೋಡಶೋಪಚಾರದಿಂದೆ ಪೂಜೆಗೈದು ಶೀತರು
ಕ್ಚೂಡನೀಲಕಂಠದೇವನಂ ಬಟಿಕ್ಕಮುರ್ಬಿ ಕೊಂ।
ಡಾಡುತಂದು ತುಂಗಭಕ್ತಿಯೆಂಬ ವಾರ್ಧಿಯೊಳ್ಮುಳುಂ
ಗಾಡುತೊಪ್ಪಿದಂ ಲಸತ್ಕುಮಾರಪಾಲಘೂರ್ಜರಂ ॥ ೧೦೬ ॥

ಹೀಗೆಂದಳು. ೧೦೨. ಎಲ್ಲಾ ಕಥೆಗಳನ್ನು ಚೆನ್ನಾಗಿ ನಿರೂಪಿಸುವುದರಲ್ಲಿ ವಿಶೇಷವೇನಿದೆ? ಸದೇಹನಾಗಿ ಕೈಲಾಸಕ್ಕೆ ಸಂತಸದಿಂದ ಹೋಗುವಂತಹ ಅರಸನು ಭೂಮಿಯ ಮೇಲೆ ಇಲ್ಲ ಎನ್ನಲು, ಆ ಕಾಂತೆಗೆ ಮಹಾರಾಜನು ಹೀಗೆಂದನು. ೧೦೩. ಕಮಲಾಕ್ಷೀ, ಇದನ್ನು [ಮನವಿಟ್ಟು] ಕೇಳು, "ಭಕ್ತರಿಗೆ ಕೈಲಾಸಕ್ಕೆ ಒಬ್ಬರೆ ಹೋಗುವುದು ಅಸಾಧ್ಯವೆ? ನೀನೇ ನೋಡುತ್ತಿರು, ಪಟ್ಟಣದೊಂದಿಗೆ ಲೋಕ ಮೆಚ್ಚುವಂತೆ ನಾನು ಶಿವಲೋಕಕ್ಕೆ ಇಂದೇ ಹೋಗುವೆನು" ಎನ್ನುತ್ತ ಉದ್ಭಟನು ಸುಂದರವಾದ ಶಿವಾಲಯಕ್ಕೆ ಬಂದನು. ೧೦೪.ಸೌಂದರಿಯೊಡನೆ ಉದ್ಭಟನು ಪ್ರೀತಿಯಿಂದ ಬಂದು ಶಿವಾಲಯವನ್ನು ಬೇಗನೆ ಪ್ರವೇಶಿಸಿ, ಆನಂದದಿಂದ ಚಂದ್ರಶೇಖರನನ್ನು ನೋಡಿ ಅತಿಶಯವಾದ ಭಕ್ತಿಯೆಂಬ ಹಾಲ್ಗಡಲಲ್ಲಿ ಮುಳುಗಿ, ೧೦೫. ನೀಲಕಂಠನ ಅತಿ ನಿರ್ಮಲಮೂರ್ತಿಯನ್ನು ಕಂಡು ಆನಂದಹೊಂದಿ ನಮಸ್ಕರಿಸಿ, ಮತ್ತೆ ನಿಂತು ಆ ಸುಂದರಿಯೊಡನೆ ಬಂದು [ಗರ್ಭಗುಡಿಯ] ಒಳಗೆ ಹೋಗಿ, ಅತಿಶಯವಾದ ಆನಂದದಿಂದ ಶಿವನನ್ನು ಪೂಜಿಸಿದನು. ೧೦೬. ಹೊಳೆವ ಕುಮಾರಪಾಲ ಘೂರ್ಜರನು [ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ,

ಶ್ರೀಪಾರ್ವತೀವದನಪದ್ಮದಿವಾಕರಾಯ
ತಾಪತ್ರಯಾದಿಬಹುದುಃಖನಿವಾರಣಾಯ।
ಪಾಪದ್ವಿಪಾಳಿದಳನೋಗ್ರಮೃಗಾಧಿಪಾಯ
ಸೌಪರ್ಣವಾಹವಿನುತಾಯ ನಮಃ ಶಿವಾಯ ॥ ೧೦೭ ॥

ಪಂಚೇಷುದರ್ಪದಹನಾಯ ನಿರಂಜನಾಯ
ಚಂಚನ್ಮೃಗಾಂಕಶಕಲಾಂಚಿತಚೂಳಿಕಾಯ।
ಕ್ರೌಂಚಾಚಲಾತಿಜನಕಾಯ ಜನಾರ್ದನಾಯ
ಪ್ರಾಂಚತ್ಪಿನಾಕವಿಧೃತಾಯ ನಮಃ ಶಿವಾಯ ॥ ೧೦೮ ॥

ಹಂಸಾನಲೇಂದುನಯನತ್ರಯಶೋಭಿತಾಯ
ಕಂಸಾಂತಕಾಮಲಮನೋಂಬುಜಷಟ್ಪದಾಯ
ಹಿಂಸಾದಿದುಷ್ಕೃತಿಹರಾಯ ಜಗನ್ನುತಾಯ
ಸಂಸಾರದುಃಖದಹನಾಯ ನಮಃ ಶಿವಾಯ ॥ ೧೦೯ ॥

ಕ್ಷೋಣೀಧ್ರಜಾಂಬಕಸಿತೋತ್ಪಲಚಂದಿರಾಯ
ವಾಣೀಧವಸ್ತುತಮಹಾಮಹಿಮಾರ್ಣವಾಯ
ಪ್ರಾಣಾದಿಮಾರುತಗತಾಯ ಪರಾಪರಾಯ
ಬಾಣಪ್ರಿಯಾಯ ನಿರಘಾಯ ನಮಃ ಶಿವಾಯ ॥ ೧೧೦ ॥

ನೈವೇದ್ಯ, ವಂದನೆ ಎಂಬ] ಹದಿನಾರು ಬಗೆಯ ಉಪಚಾರದಿಂದ ಪೂಜೆಮಾಡಿ ಬಳಿಕ ಶೀತಲಕಿರಣಗಳ ಚಂದ್ರನನ್ನು ಶಿರದಲ್ಲಿ ಧರಿಸಿರುವ ನೀಲಕಂಠನನ್ನು ಉಬ್ಬಿ ಕೊಂಡಾಡುತ್ತ ಅತಿಶಯವಾದ ಭಕ್ತಿಸಮುದ್ರದಲ್ಲಿ ಮುಳುಗಾಡುತ್ತ ಶೋಭಿಸಿದನು. ೧೦೭. ಪಾರ್ವತಿಯ ಮುಖವೆಂಬ ಕಮಲವನ್ನು ಅರಳಿಸುವ ಸೂರ್ಯನೆ, ತಾಪತ್ರಯಾದಿ ಬಹುದುಃಖಗಳನ್ನು ನಿವಾರಿಸುವವನೆ, ಪಾಪವೆಂಬ ಆನೆಗಳನ್ನು ಧ್ವಂಸಮಾಡುವ ಸಿಂಹನೆ, ವಿಷ್ಣುವಿನಿಂದ ನಮಸ್ಕರಿಸಲ್ಪಡುವವನೆ, ಶಿವನೇ, ನಿನಗೆ ವಂದನೆ. ೧೦೮. ಪಂಚಬಾಣನಾದ ಮದನನ ಅಹಂಕಾರವನ್ನು ಸುಟ್ಟವನೆ, ನಿರಂಜನನೆ, ಹೊಳೆವ ಚಂದ್ರನನ್ನು ಶಿರದ ಅಗ್ರಭಾಗದಲ್ಲಿ ಧರಿಸಿದವನೆ, ಕ್ರೌಂಚದಂತೆ ಮೋಕ್ಷಾಪೇಕ್ಷಿಗಳಾದ ಜನರ ಶರೀರದಲ್ಲಿ ನೆಲೆಸಿರುವ ಜನಾರ್ಧನನೆ, ಹೊಳೆವ ತ್ರಿಶೂಲವನ್ನು ಹಿಡಿದಿರುವವನೆ, ಶಿವನೇ, ನಿನಗೆ ವಂದನೆ. ೧೦೯. ಸೂರ್ಯ, ಅಗ್ನಿ, ಚಂದ್ರ -ಇವರನ್ನೇ ಕಣ್ಣುಗಳನ್ನಾಗಿ ಹೊಂದಿರುವವನೆ, ವಿಷ್ಣುವಿನ ಪರಿಶುದ್ಧ ಹೃದಯಕಮಲದಲ್ಲಿರುವವನೆ, ಹಿಂಸೆಯೇ ಮೊದಲಾದ ದುಷ್ಕೃತ್ಯಗಳನ್ನು ನಾಶಮಾಡುತ್ತ, ಲೋಕದ ಜನರ ಸ್ತುತಿಗೆ ಪಾತ್ರನಾದವನೆ, ಸಂಸಾರದಿಂದ ಬರುವ ದುಃಖವನ್ನು ದಹಿಸುವವನೆ, ಶಿವನೇ, ನಿನಗೆ ವಂದನೆ. ೧೧೦. ಪರ್ವತಗಳಿಗೆ ಕಣ್ಣಾಗಿರುವವನೆ, ಕಪ್ಪು-ಕೆಂಪು ಮಿಶ್ರವಾಗಿರುವ ನೈದಿಲೆಯನ್ನು ಅರಳಿಸುವ ಚಂದ್ರನೆ, ಬ್ರಹ್ಮನಿಂದ ಸ್ತುತಿಸಲ್ಪಟ್ಟವನೆ, ಮಹಾಮಹಿಮಾಸಾಗರನೆ, ಪ್ರಾಣವಾಯುವಿನಲ್ಲಿರುವವನೆ,

ಭೃಂಗೀಪ್ರಿಯಾಯ ಭುವನತ್ರಯಪೂಜಿತಾಯ
ಮಾಂಗಲ್ಯದಾನನಿರತಾಯ ಮಹೇಶ್ವರಾಯ
ತುಂಗಶ್ರುತಿಪ್ರಕರಮಸ್ತಕಸನ್ನುತಾಯ
ಗಂಗಾಧರಾಯ ಪರಮಾಯ ನಮಃ ಶಿವಾಯ ॥ ೧೧೧ ॥

ಕಾಲಾಂತಕಾಯ ಕನಕಾಚಲಕಾರ್ಮುಕಾಯ
ಕೈಲಾಸಶೈಲಶಿಖರಾಗ್ರನಿಕೇತನಾಯ।
ಬಾಲಾರ್ಕಕೋಟಿರುಚಿಸನ್ನಿಭವಿಗ್ರಹಾಯ
ಹಾಲಾಹಲಸ್ಥಿತಗಳಾಯ ನಮಃ ಶಿವಾಯ ॥ ೧೧೨ ॥

ಗೀರ್ವಾಣವೃಂದನತಪಾದಸರೋರುಹಾಯ
ದೂರ್ವಾಸಮುಖ್ಯಮುನಿಪುಂಗವಭಾವಿತಾಯ।
ದರ್ವೀಕರಾರ್ಭಕಸಮಾಜವಿಭೂಷಣಾಯ
ಸರ್ವೇಶ್ವರಾಯ ವಿಮಲಾಯ ನಮಃ ಶಿವಾಯ ॥ ೧೧೩ ॥

ಜ್ಞಾನಾಮೃತಾಂಬುನಿಧಿವರ್ಧನಚಂದಿರಾಯ
ನಾನಾಗಮಸ್ತುತಮನೋಹರವಿಗ್ರಹಾಯ।
ಸಾನಂದಚಿತ್ತಸದನಾಯ ಸದಾಶಿವಾಯ
ಶ್ರೀನೀಲಕಂಠವರದಾಯ ನಮಃ ಶಿವಾಯ ॥ ೧೧೪ ॥

ಎಂದಿಂತು ನೀಲಕಂಠನಂ ನಿಷ್ಪಂದಾನಂದದಿಂದುದ್ಭಟಕ್ಷಿತೀಂದ್ರಚಂದ್ರಮಂ ಸ್ತೋತ್ರಮಂ ಮಾಡುತ್ತುಮಿರೆ ಯಿರೆ,

ಪರಾತ್ಪರರೂಪನೆ, ಬಾಣನಿಗೆ ಪ್ರಿಯನಾದವನೆ, ಪಾಪಗಳೆ ಇಲ್ಲದವನೆ, ಶಿವನೇ, ನಿನಗೆ ವಂದನೆ. ೧೧೧. ಭೃಂಗಿಗೆ ಪ್ರಿಯನಾದವನೆ, ಮೂರುಲೋಕಗಳಿಂದ ಪೂಜೆಗೊಳ್ಳುವವನೆ, ಮಂಗಳಪ್ರದನೆ, ಮಹೇಶ್ವರನೆ, ವೇದಗಳೆಲ್ಲ ಸ್ತುತಿಸುವವನೆ, ಗಂಗಾಧರನೆ, ಪರಮನೆ, ಶಿವನೇ, ನಿನಗೆ ವಂದನೆ. ೧೧೨. ಯಮನಿಗೆ ಮೃತ್ಯುಪ್ರಾಯನಾದವನೆ, ಸುವರ್ಣಾದ್ರಿಯನ್ನೆ ಬಿಲ್ಲನ್ನಾಗಿ ಹೊಂದಿರುವವನೆ, ಕೈಲಾಸಪರ್ವತದ ತುದಿಯಲ್ಲಿ ಮನೆಯನ್ನು ಹೊಂದಿರುವವನೆ, ಬಾಲಸೂರ್ಯನ ಕೋಟಿಪ್ರಭೆಗೆ ಸಮಾನವಾದ ಶರೀರವುಳ್ಳವನೆ, ಹಾಲಾಹಾಲ ವಿಷವನ್ನು ಕೊರಳಿನಲ್ಲಿ ನೆಲೆಗೊಳಿಸಿದವನೆ, ಶಿವನೇ, ನಿನಗೆ ವಂದನೆ. ೧೧೩. ದೇವತೆಗಳ ಸಮೂಹದಿಂದ ನಮಸ್ಕಾರ ಪಡೆವ ಪಾದಕಮಲಗಳನ್ನು ಹೊಂದಿರುವವನೆ, ದೂರ್ವಾಸನೇ ಆದಿಯಾದ ಮುಖ್ಯ ಮುನಿಶ್ರೇಷ್ಠರ ನೆನೆಕೆಗೆ ಬರುವವನೆ, ಎಳೆಯನಾಗಗಳನ್ನು ಧರಿಸಿದವನೆ, ಸರ್ವೇಶ್ವರನೆ, ಪರಿಶುದ್ಧನೆ, ಶಿವನೇ, ನಿನಗೆ ವಂದನೆ. ೧೧೪. ಜ್ಞಾನಾಮೃತಸಾಗರದ ಹೆಚ್ಚಳಕ್ಕೆ ಚಂದ್ರನಾಗಿರುವವನೆ, ನಾನಾ ಆಗಮಗಳಿಂದ ಸ್ತುತಿಸಲ್ಪಟ್ಟ ಸುಂದರ ಶರೀರನೆ, ಆನಂದದಿಂದ ಕೂಡಿದ ಹೃದಯದಲ್ಲಿ ನೆಲೆಗೊಂಡವನೆ, ಸದಾಶಿವನೆ, ವರವನ್ನು ಅನುಗ್ರಹಿಸುವ ನೀಲಕಂಠನೆ, ಶಿವನೇ, ನಿನಗೆ ವಂದನೆ. ವ॥ ಹೀಗೆಂದು ನೀಲಕಂಠನನ್ನು

ಒಂದೊಂದುಪದ್ಯಪದ್ಯ
ಕ್ಕೊಂದೊಂದುಸಹಸ್ರಯೋಜನಮನಾನಗರಂ।
ಕುಂದದೆ ಗಗನಕ್ಕಡರ್ದ
ತ್ತಿಂದುಕಲಾಧರನ ಭಕ್ತರೇನಗ್಺ಳರೋ ॥ ೧೧೫ ॥

ಹರನ ಶುಭಪದಾಂಭೋಜಾತಮಂ ಕೀರ್ತಿಸುತ್ತುಂ
ಧರಣಿಪನಿರದಂತಾಪಟ್ಟಣಂ ಭೂಮಿಯಂ ಬಿ
ಟ್ಟಿರದೆ ದಿನಕರೋದ್ಯದ್ಬಿಂಬಮಂ ಪಿಂದುಗೈದಂ
ದುರುತರಜವದಿಂದೆಟ್ಟಿತ್ತು ಸನ್ಮಾರ್ಗಕಾಗಳ್ ॥ ೧೧೬ ॥

ನಗರಂ ಕೈಲಾಸಕಂದ್ಯೆದುವ ಘನತೆಯನೊಲ್ದೀಕ್ಷಿಸುತ್ತುಂ ನೃಪಾಲಂ
ನಗಕನ್ಯಾಧೀಶನಂ ಕೀರ್ತಿಸುತಿರಲನಿತರ್ಕರ್ಬಿಂಬಂ ತಳಕ್ಕೊ।
ಯ್ಯಗೆ ಪೋಗಲ್ಬಲ್ಬಿಸಿಲ್ಮೈಗಱುಿಯಲಿರದದಂ ಕಂಡು ಸೌಧರ್ಮಿಯಿನ್ನೇ
ಳ್ವಗನಸ್ತಂಬೊಂದಿದಂ ತಾನೆನೆ ತದಬಲೆಗಿಂತೆಂದನಾರಾಜಚಂದ್ರಂ ॥ ೧೧೭ ॥

ಪುಸಿಯುಂಟೆ ಭಕ್ತವಚನದೊ
ಳೊಸೆದೀಕ್ಷಿಸು ಬಾಲೆ ಬಾನೆಲೆ ಯೆಂದೆನಲಂತಾ।
ಬಿಸಜಾಕ್ಷಿ ನೋಡಲಂದಾ
ಗಸಮಂ ತೊಳತೊಳಗಿ ಬೆಳಗಿದುದು ಕೈಲಾಸಂ ॥ ೧೧೮ ॥

ಎಳಮಿಂಚಂ ಕಡೆಗೈದು ಕಂಡರಸಿ ನೀಟ್ವಿಟ್ಟಂತೆ ಪೂರ್ಣೇಂದುಮಂ
ಡಳಸಂಜಾತಮರೀಚಿಕಾನಿಚಯಮಂ ಮೇಣ್ಕೇಸಿ ಪೊಯ್ದಂತೆ ನಿ।
ರ್ಮಳನಕ್ಷತ್ರಸಮಾಜಮಂ ನೆಗಟ್ದಿಲಂಪಿಂ ರಾಸಿಗೈದಂತೆ ಕ
ಣ್ಗಳವಟ್ಟಿಂತುರುಕಾಂತಿಯಂ ಪರಪುತುಂ ಪ್ರೋತ್ತುಂಗತಾರಾಚಳಂ ॥ ೧೧೯ ॥

ಅತ್ಯಾನಂದದಿಂದ ಉದ್ಭಟಮಹಾರಾಜ ಚಂದ್ರಮನು ಸ್ತುತಿಸುತ್ತಿರಲು, ೧೧೫. ಒಂದೊಂದು ಪದ್ಯಕ್ಕೆ ಆ ನಗರದ ಒಂದೊಂದು ಸಹಸ್ರಯೋಜನದಳತೆಯ ಭೂಭಾಗವನ್ನು ಬಿಡದೆ ಮೇಲೆತ್ತಲಾಯಿತು. ಶಿವಭಕ್ತರೇನು ಮಹಿಮಾಶಾಲಿಗಳೋ! ೧೧೬. ಶಿವನ ಶುಭವನ್ನು ಅನುಗ್ರಹಿಸುವ ಪಾದಕಮಲವನ್ನು ಬಿಡದೆ ಸ್ತುತಿಸುತ್ತ, ಮಹಾರಾಜನು ಆ ಪಟ್ಟಣವನ್ನು ಭೂಮಿಯ ಮೇಲಿರಲು ಅವಕಾಶ ಕೊಡದೆ ಸೂರ್ಯಬಿಂಬವನ್ನು ಹಿಂದೆ ಮಾಡಿದನು. [ಹೀಗೆ] ಆ ಪಟ್ಟಣವು ಆಕಾಶದಲ್ಲಿ ತೀವ್ರತರವಾಗಿ ಸಾಗಿತು. ೧೧೭. ಮಹಾರಾಜನು ಕೈಲಾಸಕ್ಕೆ ಹಿರಿಮೆಯಿಂದ ಸಾಗುತ್ತಿರುವ ತನ್ನ ಪಟ್ಟಣವನ್ನು ಮೆಚ್ಚುಗೆಯಿಂದ ನೋಡುತ್ತ ಶಿವನನ್ನು ಸ್ತುತಿಸುತ್ತಿರಲು ಸೂರ್ಯನು ಮೆಲ್ಲನೆ ಕೆಳಗೆ ಸರಿಯಲು, ಬಿರುಬಿಸಿಲು ಮರೆಯಾಗಲು, ಅದನ್ನು ಗಮನಿಸಿದ ಸೌಂದರಿಯು, “ಇನ್ನು ಮೇಲೇಳು, ಸೂರ್ಯನು ಮುಳುಗಿದನು” ಎನ್ನಲು, ಆಕೆಗೆ ರಾಜಚಂದ್ರಮನು ಹೀಗೆಂದನು. ೧೧೮. “ಭಕ್ತರ ಮಾತಿನಲ್ಲಿ ಹುಸಿಯುಂಟೆ? ಬಾಲೆ, ಆಕಾಶವನ್ನು ಸಂತಸದಿಂದ ನೋಡು” ಎಂದೆನ್ನಲು, ಅಂತೆಯೇ ಕಮಲಾಕ್ಷಿಯು [ಆಕಾಶವನ್ನು] ನೋಡಲು ಅಲ್ಲಿ ಕೈಲಾಸವು ತೊಳತೊಳಗಿ ಬೆಳಗಿತು. ೧೧೯. ಎಳೆಯ ಮಿಂಚನ್ನು ಕಡೆಮಾಡಿ ಕಡೆದು ವಿಶಾಲವಾಗಿ ಇಟ್ಟಂತೆ, ಪೂರ್ಣಚಂದ್ರನಿಂದ

ಫಣ್ಯಾಧಿಪಸ್ತುತಿಗೈದದ
ಪುಣ್ಯಪ್ರಭೆವಡೆದು ತೋರ್ಪ ಮೋಕ್ಷವಧೂಲಾ।
ವಣ್ಯದ ತಿರುಳೊಳ್ಪನೆ ತ
ತ್ಪುಣ್ಯರ ಕಣ್ಗೆಸೆದುದಮರ್ದ ತಾರಮಹೀಂಧ್ರಂ ॥ ೧೨೦ ॥

ಮತ್ತಮದಲ್ಲದೆ,

ಸುರಭೂಜಾರಾಮದಿಂದಂ ಮರುಜೆವಣೆಯ ಪುಂಜಂಗಳಿಂ ಗಳದ್ಭಂ
ಧುರಪೀಯೂಷಪ್ರವಾಹಂಗಳಿನುರುದಿವಿಷದ್ರತ್ನಸಂತಾನದಿಂ ಸಿ।
ದ್ಧರಸೋದ್ಗರ್ತೌಘದಿಂದಂ ಪರುಸಗಣೆಗಳಿಂದಂ ಮಹಾಶೋಭೆಯಂ ಬೆ
ತ್ತಿರದಾದಂ ರಾಜಿಸಿತ್ತಾನಿರುಪಮವರಶೈಲಂ ಮಹಾಪುಣ್ಯಜಾಲಂ ॥ ೧೨೧ ॥

ಇಂತೆಡೆವಿಡದೆ ತೊಳತೊಳಗಿ ಬೆಳಗುವ ಬೆಳಗಿನೊಬ್ಬುಳಿಯೆನೆ ಮನಂಗೊಳಿಪ್ಪ ಕೈಲಾಸಶೈಲಮಂ ಕಂಡಚ್ಚರಿವಟ್ಟುರುತರಭರದಿಂದಂ ಪರವಶೆಯಾಗಿರ್ಪ ಸೌಂದರವತಿಯನವಲೋಕಿಸಿ ಪೆರ್ಚಿ ಶಿವನಂ ಸ್ತುತಿಪ ಉದ್ಭಟಕ್ಷಿತೀಂದ್ರಚಂದ್ರಮನಿರೆಯಿರೆ,

ನರಲೋಕಂ ನಡೆನೋಡಲಾತ್ಮಪುರಮಂ ಕೊಂಡೀಶಲೋಕಕ್ಕೆ ಬಂ
ಧುರಮೋದಂಬಡೆದಂದು ಬರ್ಪ ನೆಗಟ್ಬುದ್ಯದ್ಘೂರ್ಜರಾಧೀಶನಂ।
ಪಿರಿದಾಲೋಕಿಸಿ ಪೊಂಗಿ ತುಂಗಗಣವೃಂದಂ ಪುಷ್ಪಸಂತಾನಮಂ
ಸುರಿದತ್ತೈದೆ ಸುಪರ್ವದುಂದುಭಿರವಂ ಪೊಣ್ಮಲ್ಮಹಾಲೀಲೆಯಿಂ ॥ ೧೨೨ ॥

ಹೊಮ್ಮಿದ ಕಿರಣಗಳ ಮೊತ್ತವನ್ನು ತೇದು ಇಟ್ಟಂತೆ, ಶುಭ್ರ ನಕ್ಷತ್ರಗಳ ಸಮೂಹವನ್ನು ಅತ್ಯಾನಂದದಿಂದ ರಾಶಿಹಾಕಿದಂತೆ, ಕಣ್ಣಿಗೆ ಮನೋಹರವಾಗಿ ಅತಿಶಯವಾದ ಕಾಂತಿಯನ್ನು ಹರಡುತ್ತ ಬೆಳ್ಳಿಯ ಬೆಟ್ಟವು ಹೊಳೆಯಿತು. ೧೨೦. ಆ ಬೆಳ್ಳಿಯ ಬೆಟ್ಟವು ಆದಿಶೇಷನ ಸ್ತುತಿಗೆ ಒಳಪಡದ ಪುಣ್ಯಪ್ರಭೆಯಿಂದ ಕೂಡಿ ಶೋಭಿಸುವ ಮೋಕ್ಷಾಂಗನೆಯ ಸೌಂದರ್ಯದ ತಿರುಳಿನ ಶೋಭೆಯೊ ಎನ್ನುವಂತೆ ಪುಣ್ಯವಂತರ ಕಣ್ಣಿಗೆ ಅಂದವಾಗಿ ತೋರಿತು. ವ॥ ಮತ್ತೆ ಅದಲ್ಲದೆ, ೧೨೧. ಕಲ್ಪವೃಕ್ಷಗಳ ತೋಟದಿಂದ, ಸಂಜೀವಿನಿ ಬಳ್ಳಿಗಳ ಸಮೂಹದಿಂದ, ಹರಿವ ಮಂಜುಳವಾದ ಅಮೃತ ಪ್ರವಾಹಗಳಿಂದ, ಶ್ರೇಷ್ಠವಾದ ದೇವಲೋಕದ ರತ್ನಗಳ ಸಮೂಹದಿಂದ, ಸಿದ್ಧರಸದ ನೀರಿನ ಸುಳಿಗಳಿಂದ, ಪರುಷ ಗಣಿಗಳಿಂದ ಮಹಾಶೋಭೆಯನ್ನು ಪಡೆದು ಬಿಡದೆ ಎಣೆಯಿಲ್ಲದ ಆ ಶ್ರೇಷ್ಠಪರ್ವತವು ಪುಣ್ಯದ ಮೊತ್ತದಿಂದ ಪ್ರಕಾಶಿಸಿತು. ವ॥ ಹೀಗೆ ಎಡೆಬಿಡದೆ ಥಳಥಳಿಸುವ ಪ್ರಕಾಶದ ಚಿಲುಮೆಯೊ ಎನ್ನುವಂತೆ ಮನಸೆಳೆಯುವ ಕೈಲಾಸಪರ್ವತವನ್ನು ನೋಡಿ ಬೆರಗುಗೊಂಡು ಬಹುಬೇಗನೆ ಮೈಮರೆತಿದ್ದ ಸೌಂದರವತಿಯನ್ನು ನೋಡಿ ಉಬ್ಬಿ ಶಿವನನ್ನು ಸ್ತುತಿಸುತ್ತ ಉದ್ಭಟಮಹಾರಾಜ ಚಂದ್ರಮನಿರಲು, ೧೨೨. ಭೂಲೋಕದವರು ಚೆನ್ನಾಗಿ ನೋಡುತ್ತಿರುವಲ್ಲಿ ತನ್ನ ಪಟ್ಟಣವನ್ನು ಶಿವಲೋಕಕ್ಕೆ ಅತ್ಯಂತ ಸಂತೋಷದಿಂದ ತೆಗೆದುಕೊಂಡು ಬರುತ್ತಿರುವ ಘೂರ್ಜರ ಮಹಾರಾಜನನ್ನು ಶ್ರೇಷ್ಠರಾದ ಗಣಸಮೂಹವು ಚೆನ್ನಾಗಿ ನೋಡಿ ಮಹಾಲೀಲೆಯಿಂದ ಪುಷ್ಪವೃಷ್ಟಿಯನ್ನು ಕರೆದರು; ಮಂಗಳ ವಾದ್ಯಗಳನ್ನು ನುಡಿಸಿದರು.

ಇಂತಭವನಂ ಪೊಗಟ್ದಿಪ್ರಯಾಸದಿಂದಂ ಪಟ್ಟಣಮಂ ಬೆರಸು ನೆಟ್ಟನೆ ಕೈಲಾಸಕೆಟ್ಟಿಂದ ತತ್ಕುಮಾರಪಾಲಘೂರ್ಜರನಂ ಪ್ರಮಥಗಣಂಗಳಿದಿರ್ಗೊಂಡು,

ಮಣಿದಿದಿರ್ವಪ್ಪ ಘೂರ್ಜರಮಹೀಪತಿಯಂ ಸತಿಗೂಡಿ ತಂದು ತ
ದ್ಗಣತತಿ ನಂದಿಕೇಶ್ವರನನುಜ್ಞೆಯನಾಂತು ಸುಧಾಮರೀಚಿಭೂ।
ಷಣನ ಪದಾಬ್ಜಮಂ ಪದೆದು ಕಾಣಿಸಲೆಂದೊಡಗೂಡಿ ಬಂದು ಕ
ಣ್ಗಣೆಯರಮಾದಲಂಪುವಡೆದೀಶಸಭಾಂತಮನೈದಿತಳ್ಕಱಿಂ ॥ ೧೨೩ ॥

ಪ್ರಮಥಗಣಂ ತರತರಲಾ
ಪ್ರಮಥಾಮಣಿಗೂಡಿ ಬಂದು ಗುರ್ಜರಧಾತ್ರೀ।
ರಮಣಂ ಪೊಕ್ಕನಲಂಪಿಂ
ರಮಣೀಯಮದಾದ ಶಿವಸಭಾಮಂದಿರಮಂ ॥ ೧೨೪ ॥

ಇಂತುದ್ಭಟಕ್ಷಿತೀಂದ್ರಚಂದ್ರಮಂ ಸೌಂದರವತಿವೆರಸುತ್ತುಂಗ ಭಕ್ತಿಯೆಂಬಿಂಗಡಲೊಳ್ ಮುಱುಂಗಾಡುತ್ತುಮಾಬಾಲೇಂದುಜೂಟನೋಲಗಶಾಲೆಯಂ ಲೀಲೆಯಿಂ ಪೊಱಮಟ್ಟು ವರೆವರೆ,

ನಂದೀಶವೀರಭದ್ರ
ಸ್ಕಂದಗಜಾನನಮುಖಾಖಿಲಪ್ರಮಥಗಣಂ।
ಕುಂದದ ಲೀಲೆಯಿನಾಬಾ
ಲೇಂದುಕಲಾಧರನ ಸನ್ನಿಧಿಯೊಳೆಸೆದಿರ್ಕುಂ ॥ ೧೨೫ ॥

ಮತ್ತಮದಲ್ಲದೆ,

ಕೌಶಿಕದಧೀಚ್ಯಗಸ್ತ್ಯಪ
ರಾಶರಗೌತಮವಶಿಷ್ಠ ಭೃಗುಲೋಮಶದೂ।

ವ॥ ಹೀಗೆ ಶಿವನನ್ನು ಸ್ತುತಿಸಿ ನಿರಾಯಾಸದಿಂದ ಪಟ್ಟಣದೊಂದಿಗೆ ನೇರವಾಗಿ ಕೈಲಾಸಕ್ಕೆ ಬಂದ ಆ ಕುಮಾರಪಾಲ ಘೂರ್ಜರನನ್ನು ಪ್ರಮಥಗಣಗಳು ಎದುರುಗೊಂಡು ೧೨೩. ನಮಸ್ಕರಿಸಿ ಪತ್ನಿಯೊಡನೆ ಇದಿರಾಗಿ ಬರುವ ಘೂರ್ಜರಮಹಾರಾಜನನ್ನು ನಂದಿಕೇಶ್ವರನ ಆಜ್ಞೆಯಂತೆ ಗಣಸಮೂಹವು ಕರೆತಂದು ಚಂದ್ರಶೇಖರನ ಪಾದಕಮಲಗಳನ್ನು ಪ್ರೀತಿಯಿಂದ ಕಾಣಿಸಲೆಂದು ಜೊತೆಗೂಡಿ ಬಂದು, ಕಣ್ಣಿಗೆ ಅತಿಮನೋಹರವಾದ ಚೆಲುವಿಕೆಯನ್ನು ಪಡೆದ ಶಿವನ ಸಭೆಯ ಮಧ್ಯಭಾಗವನ್ನು ಪ್ರೀತಿಯಿಂದ ಸಮೀಪಿಸಿತು. ೧೨೪. ಪ್ರಮಥ ಗಣವರರು ಕರೆತರಲು, ಆ ಪ್ರಮಥ ಶ್ರೇಷ್ಠರೊಡನೆ ಬಂದ ಗುರ್ಜರ ಮಹಾರಾಜನು ಸಂತಸದಿಂದ ರಮಣೀಯವಾದ ಶಿವನ ಸಭಾಮಂದಿರವನ್ನು ಪ್ರವೇಶಿಸಿದನು. ವ॥ ಹೀಗೆ ಉದ್ಭಟ ಮಹಾರಾಜಚಂದ್ರಮನು ಸೌಂದರವತಿಯೊಡನೆ ಶ್ರೇಷ್ಠಭಕ್ತಿಯೆಂಬ ಕ್ಷೀರಸಾಗರದಲ್ಲಿ ಮುಳುಗಾಡುತ್ತ ಬಾಲಚಂದ್ರನನ್ನು ಶಿರದಲ್ಲಿ ಧರಿಸಿದ ಶಿವನ ಓಲಗಶಾಲೆಯಿಂದ ವಿಲಾಸದಿಂದ ಹೊರಬರುತ್ತಿರಲು, ೧೨೫. ನಂದೀಶ, ವೀರಭದ್ರ, ಕುಮಾರಸ್ವಾಮಿ, ಗಣಪತಿ - ಇವರೇ ಮುಖ್ಯರಾದ ದೇವಗಣಗಳು ಅತ್ಯಾನಂದದಿಂದ ಎಳೆಯ ಚಂದ್ರನನ್ನು ಶಿರದಲ್ಲಿ ಧರಿಸಿರುವ ಶಿವನ ಸನ್ನಿಧಿಯಲ್ಲಿ ಶೋಭಿಸಿದ್ದರು. ವ॥ ಮತ್ತೆ ಅದಲ್ಲದೆ, ೧೨೬. ಕೌಶಿಕ, ದಧೀಚ, ಅಗಸ್ತ್ಯ, ಪರಾಶರ, ಗೌತಮ, ವಶಿಷ್ಠ,

ರ್ವಾಸಕಪಿಲಾತ್ರಿಮುಖ್ಯಋ
ಷೀಶರ್ಶೋಭಿಸಿದರಾಸದಾಶಿವಸಭೆಯೊಳ್ ॥ ೧೨೬ ॥

ಬಿಸಜಾಕ್ಷರ್ಪದ್ಮಪೀಠರ್ಮನುಗಳಮರರೇಕಾದಶೇಶರ್ಮಹಾರಾ
ಕ್ಷಸನಾಥರ್ಧ್ವಾದಶಾರ್ಕರ್ಸುರಪರಮರ್ದ ಚಂದ್ರರ್ಫಣೀಂದ್ರರ್ನಗೇಂದ್ರರ್।
ವಸುಗಳ್ ಭೂತೇಶ್ವರರ್ಭೈರವರಖಿಲಪಿಶಾಚಾಧಿಪರ್ ನಿಲ್ತು ರಾರಾ
ಜಿಸಿದರ್ಬಾಲೇಂದುಚೂಡಾಮಣಿಯೆಸೆವ ಸಭಾಮಧ್ಯದೊಳ್ತೋಷದಿಂದಂ ॥ ೧೨೭ ॥

ಗೀರ್ವಾಣಸಂಚಯಂ ಗಂ
ಧರ್ವಗಣಂ ಖಚರರಾಜಿ ಯೇಕಾನೀಕಂ।
ಸರ್ವಾಮರಯೋನಿಜತತಿ
ಪಾರ್ವತಿಯಾಣ್ಮನ ಸಭಾಂತರಾಳದೊಳೆಸುಗುಂ ॥ ೧೨೮ ॥

ಫಣೀಂದ್ರವೃಂದಂ ನಿಖಿಲಾಮರಾಸುಹೃ
ದ್ಗಣಂ ಖಗೇಶಪ್ರಕರಂ ಮನೋಜ್ಞಚಾ।
ರಣವ್ರಜಂ ಕಿಂಪುರುಷೌಘಮೊಪ್ಪಿತಾ
ತ್ರಿಣೇತ್ರನುತ್ತುಂಗಸಭಾಂತರಾಳದೊಳ್ ॥ ೧೨೯ ॥

ವರಸಿದ್ಧಚಯಂ ವಿದ್ಯಾ
ಧರನಿಕರಂ ಗುಹ್ಯಕಾಳಿ ಭೂತಾವಳಿ ಕಿ।
ನ್ನರಜಾಳಮೆಸೆದುದಾಭಾ
ಸ್ಕರಚಂದ್ರಕೃಶಾನುನೇತ್ರನೊಡ್ಡೋಲಗದೊಳ್ ॥ ೧೩೦ ॥

ಭೃಗು, ಲೋಮಶ, ದೂರ್ವಾಸ, ಕಪಿಲ, ತ್ರಿಮುಖ್ಯ ಋಷಿಗಳು ಆ ಸದಾಶಿವನ ಸಭೆಯಲ್ಲಿ ಶೋಭಿಸಿದ್ದರು. ೧೨೭. ವಿಷ್ಣು, ಬ್ರಹ್ಮ, ಮನುಗಳು, ಅಮರರು, ಏಕಾದಶ ರುದ್ರರು, ಮಹಾ ರಾಕ್ಷಸೇಂದ್ರರು, ಧಾತಾ, ಮಿತ್ರ, ಆರ್ಯಮಾ, ರುದ್ರ, ವರುಣ, ಸೂರ್ಯ, ಭಗ, ವಿವಸ್ವಾನ್, ಪೂಷಾ, ಸವಿತಾ, ತ್ವಷ್ಟಾ, ವಿಷ್ಣುಗಳೆಂಬ ಹನ್ನೆರಡು ಮಂದಿ ಸೂರ್ಯರು, ದೇವೇಂದ್ರರು - ಇವರುಗಳಿಂದ, ಚಂದ್ರ, ನಾಗೇಂದ್ರ, ಬೆಟ್ಟಗಳೊಡೆಯರು, ವಸುಗಳು, ಭೂತೇಶ್ವರರು, ಭೈರವರು, ಸಕಲ ಪಿಶಾಚಿಗಳೊಡೆಯರು ಸಂತೋಷದಿಂದ ಕೂಡಿ ಬಾಲೇಂದುಧರನ ಶೋಭಿಸುವ ಸಭೆಯ ಮಧ್ಯದಲ್ಲಿ ಬೆಳಗಿದರು. ೧೨೮. ದೇವತೆಗಳು, ಗಂಧರ್ವರು, ಆಕಾಶದಲ್ಲಿ ಚಲಿಸುವವರು, ಅಕ್ಷೌಹಿಣಿಯ ಹತ್ತನೆಯ ಒಂದು ಭಾಗದಷ್ಟು ಅಮರರಿಂದ ಹುಟ್ಟಿದವರು - ಇವರ ಬಳಗವು ಪಾರ್ವತೀವಲ್ಲಭನ ಸಭೆಯ ಮಧ್ಯದಲ್ಲಿ ಶೋಭಿಸುವುದು. ೧೨೯. ನಾಗರು, ಸಕಲ ದೇವತೆಗಳ ಮಿತ್ರರು, ಗರುಡರು, ಮನುಷ್ಯ ಶರೀರವನ್ನುಳ್ಳ ದೇವತೆಗಳು, ಮನೋಹರರಾದ ಗಂಧರ್ವರು -ಇವರುಗಳ ಸಮೂಹವು ತ್ರಿನೇತ್ರನ ಶ್ರೇಷ್ಠ ಸಭೆಯ ಮಧ್ಯದಲ್ಲಿ ಶೋಭಿಸಿತು. ೧೩೦. ಶ್ರೇಷ್ಠರಾದ ಸಿದ್ಧರು, ವಿದ್ಯಾಧರರು, ಯಕ್ಷರು, ಭೂತಗಳು, ಕಿನ್ನರರು - ಇವರುಗಳ ಸಮೂಹವು ಸೂರ್ಯ-ಚಂದ್ರ-ಅಗ್ನಿಗಳನ್ನೇ ಕಣ್ಣುಗಳಾಗುಳ್ಳ ಶಿವನ ಒಡ್ಡೋಲಗದಲ್ಲಿ ಶೋಭಿಸಿತು.

ಯೋಗೀಂದ್ರರ್ಜತಿಗಳ್ನಿಖಿ
ಳಾಗಮವಿದರೂರ್ವಶಿಪ್ರಮುಖಸುರಸತಿಯರ್।
ನಾಗಾಬಲೆಯರ್ಗೋಮಿನಿ
ವಾಗಂಗನೆಯರ್ವಿರಾಜಿಸಿದರಾಸಭೆಯೊಳ್ ॥ ೧೩೧ ॥

ಮತ್ತಮದಲ್ಲದೆ,

ವೇದಂ ಶಾಸ್ತ್ರಂ ಪುರಾಣಂ ನಿಖಿಲನಿರಘಮಂತ್ರಂ ಸಮಸ್ತಾಗಮಂ ಸ
ದ್ವಾದಂ ವರ್ಣಂ ಸುಶಬ್ದಂ ಸ್ಮೃತಿತತಿ ಇತಿಹಾಸಂ ಲಚ್ಛ್ರುತಿವೃಂದಂ।
ನಾದಂ ಗಾನಂ ಬಹುವ್ಯಾಕರಣಮಮರ್ದರೂಪಂ ವಲಂ ಸಂತತಂ ತಾ
ಳ್ದಾದಿತ್ಯವ್ರಾತತೇಜೋಮಯಶಿವಸಭೆಯಲ್ಲೊಪ್ಪಿದರ್ಸರ್ವವಿದ್ಯರ್ ॥ ೧೩೨ ॥

ದಾನಂ ಧರ್ಮಂ ವ್ರತಂ ಶೌಚಮಮಳಿನಜಪಂ ನಿತ್ಯಕರ್ಮಂ ಸುಯಜ್ಞಂ
ಶ್ರೀನೇಮಂ ಪೂಜೆ ಚಾಂದ್ರಾಯಣಮತುಳತಪಂ ಸತ್ಯಮತ್ಯಂತಕೃತ್ಯಂ
ನಾನಾಶೀಲಂ ವಿಜೃಂಭತ್ಕರುಣಮಮರ್ದಯೋಗಂ ಕರಂ ಮೂರ್ತಿವೆತ್ತಂ
ತಾನೀಲಗ್ರೀವನೊಡ್ಡೋಲಗದೊಳೆಸೆದುವಾನಂದಸಂದೋಹದಿಂದಂ ॥ ೧೩೩ ॥

ಕಾಲಂ ಸುಕರ್ಮಮಮಲಂ ಧೃತಿಶಕ್ತಿಸೌಖ್ಯಂ
ಲೋಕೋರುಕೀರ್ತಿನುತಿವಿಕ್ರಮಮುರ್ವಿ ಖಂ ದಿ।
ಗ್ಜಾಲಂ ಸಮಸ್ತರುಚಿಸತ್ಪುರುಷಾರ್ಥವೃಂದಂ।
ಬಾಲೇಂದುಜೂಟನ ಸಭಾಸ್ಥಲದಲ್ಲಿ ತೋರ್ಕುಂ ॥ ೧೩೪ ॥

ಇಂತೆಣಿಕೆಗಳವಡದಲಂಪಿನ ಪೆಂಪಂ ತಳೆದೊಪ್ಪುವ ತತ್ಸಭೆಯಮಧ್ಯದಲ್ಲಿ,

೧೩೧. ಯೋಗೀಂದ್ರರು, ಯತಿಗಳು, ಸಕಲ ಆಗಮಗಳನ್ನು ಬಲ್ಲವರು, ಊರ್ವಶಿಯೇ ಮೊದಲಾದ ದೇವಲೋಕದ ಸ್ತ್ರೀಯರು, ನಾಗಕನ್ಯೆಯರು, ಲಕ್ಷ್ಮೀ- ಸರಸ್ವತಿಯರು ಆ ಸಭೆಯಲ್ಲಿ ಶೋಭಿಸಿದರು. ವ॥ ಮತ್ತೆ ಅದಲ್ಲದೆ, ೧೩೨. ವೇದ, ಶಾಸ್ತ್ರ, ಪುರಾಣ, ಸಕಲ ಪುಣ್ಯಮಂತ್ರಗಳು, ಸಮಸ್ತ ಆಗಮಗಳು, ವಾದ, ವರ್ಣ, ಶಬ್ದ, ಸ್ಮೃತಿ, ಇತಿಹಾಸ, ಉಪನಿಷತ್ತು, ನಾದ, ಗಾನ, ವ್ಯಾಕರಣ, ಮನೋಹರ ರೂಪ -ಇವುಗಳಿಂದ ಸದಾ ಶೋಭಿಸುವವರು ಸೂರ್ಯನ ಪ್ರಖರ ಕಿರಣಗಳ ತೇಜಸ್ಸಿನಂತೆ ಶಿವನ ಸಭೆಯಲ್ಲಿ ಸಕಲ ವಿದ್ಯೆಗಳಲ್ಲಿ ಬಲ್ಲಿದವರಾದವರು ಶೋಭಿಸಿದರು. ೧೩೩. ದಾನ, ಧರ್ಮ, ವ್ರತ, ಶೌಚ, ಶುದ್ಧ ಜಪ, ನಿತ್ಯಕರ್ಮ, ಯಜ್ಞ, ಪವಿತ್ರ ನೇಮ, ಪೂಜೆ, ಚಾಂದ್ರಾಯಣ ವ್ರತ, ಶ್ರೇಷ್ಠ ತಪ, ಸತ್ಯ ಎಲ್ಲಕ್ಕೂ ಮಿಗಿಲಾದ ಕಾರ್ಯಗಳು, ನಾನಾ ಬಗೆಯ ಶೀಲ, ಕಾರುಣ್ಯ, ಯೋಗ -ಇವೇ ಮೂರ್ತಿಗೊಂಡಂತೆ ಆ ನೀಲಕಂಠನ ಒಡ್ಡೋಲಗದಲ್ಲಿ ಆನಂದದಿಂದ ಶೋಭಿಸಿದವು. ೧೩೪. ನಿಯಮಪಾಲರೂ, ಪುಣ್ಯವಂತರೂ, ಶುದ್ಧರೂ, ಮನೋಸ್ಥೈರ್ಯರೂ, ಸುಖಪುರುಷರೂ, ಲೋಕದಲ್ಲಿನ ವಿಶೇಷ ಕೀರ್ತಿಶಾಲಿಗಳೂ, ಪ್ರಸಿದ್ಧ ಪರಾಕ್ರಮಿಗಳೂ, ಭೂಮಿ-ಆಕಾಶ, ದಿಕ್ಕುಗಳೂ, ಸಕಲ ತೇಜದಿಂದ ಕೂಡಿದ ಧರ್ಮ-ಅರ್ಥ-ಕಾಮ-ಮೋಕ್ಷಗಳನ್ನು ಹೊಂದಿದವರೂ ಶಿವನ ಸಭೆಯಲ್ಲಿ ಶೋಭಿಸಿರುವರು. ವ॥ ಹೀಗೆ ಎಣಿಕೆಗೆ ಸಿಗದ ಶೋಭೆಯ ಔನ್ನತ್ಯವನ್ನು ಪಡೆದು ಅಂದವಾಗಿರುವ ಆ

ಜಿನುಗುವನಂತಾಮ್ನಾಯ
ಕ್ಕಿನಿತೈದದಖಂಡತತ್ವಮಾಕಾರಂ ಬೆ।
ತ್ತನಿಶಂ ತೊಳತೊಳಗುವವೋ
ಲ್ಘನಸಿಂಹಾಸನದೊಳೂಪ್ಪಿದಂ ಗಿರಿಜೇಶಂ ॥ ೧೩೫ ॥

ಶಶಿಜೂಟಂ ವೇದಘೋಟಂ ಪ್ರವಿಮಲತರಗಾತ್ರಂ ಲಸತ್ಪಂಚವಕ್ತ್ರಂ
ವಿಷದಾಂಗಂ ನಿಷ್ಪಸಂಗಂ ತೊಳತೊಳಪಳಿಕಾಕ್ಷಂ ಸದಾಭಕ್ತರಕ್ಷಂ।
ಪಶುಪಾಲಂ ಕೃತ್ತಿಚೇಲಂ ಸುರಗಿರಿವರಚಾಪಂ ತ್ರಿಲೋಕೈಕದೀಪಂ
ಸುಶಿವೇಶಂ ಚಿತ್ಪ್ರಕಾಶಂ ಕರಕಲಿತಪಿನಾಕಂ ದಲೊಪ್ಪಿರ್ದನೇಕಂ ॥ ೧೩೬ ॥

ಗಿರಿಜೇಶಂ ಕಾಮಪಾಶಂ ನತಜನಸುರಭೂಜಂ ದಿನೇಶೌಘತೇಜಂ
ಪರಿಪೂಜ್ಯಂ ಕ್ಷ್ವೇಳಭೋಜ್ಯಂ ನಿಗಮತತಿಗಸಾಧ್ಯಂ ಸದಾ ವಾಗಭೇದ್ಯಂ
ಪರಿಪೂರ್ಣಂ ಪಾಂಡುವರ್ಣಂ ವಿಗಳಿತಘನಮೋಹಂ ಚಿದಾನಂದಗೇಹಂ
ಗುರುಪುಣ್ಯಂ ಶಾಸ್ತ್ರಗಣ್ಯಂ ಬಿಡದೆಸೆದನಜಾತಂ ಕರಂ ದೂತಭೀತಂ ॥ ೧೩೭ ॥

ಧೃತಧೈರ್ಯಂ ತುಂಗಶೌರ್ಯಂ ರಜತಶಿಖರಿಧಾಮಂ ಲಸತ್ಪುಣ್ಯನಾಮಂ
ಸ್ತುತವೇದಂ ದುಃಖಭೇದಂ ನೆಗಟ್ದಿ ಗಗನಕೇಶಂ ತ್ರಿಲೋಕಕ್ಕಧೀಶಂ।
ಗತಕರ್ಮಂ ಶುದ್ಧಧರ್ಮಂ ನಿರುಪಮಮಹಿಮಾಢ್ಯಂ ಸಮಸ್ತಾವನೀಡ್ಯಂ
ಜಿತಮಾಯಂ ಸತ್ಯಕಾಯಂ ಕರಮೆಸೆದನನಾಥಂಸುಪಂಪಾಧಿನಾಥಂ ॥ ೧೩೮ ॥

ಸಭೆಯ ಮಧ್ಯದಲ್ಲಿ, ೧೩೫. ವೇದಗಳಿಗೆ ಸ್ವಲ್ಪವೂ ನಿಲುಕದ, ಅಖಂಡತ್ವವೇ ಆಕಾರ ಪಡೆದು ಸದಾ ತೊಳಗಿ ಬೆಳಗುವ ರೀತಿಯಲ್ಲಿ ಗಿರಿಜೇಶನು ಘನಸಿಂಹಾಸನದಲ್ಲಿ ಶೋಭಿಸಿ ಮನಸ್ಸಿಗೆ ಹಿತವಾದನು. ೧೩೬. ಚಂದ್ರನನ್ನು ಶಿರದಲ್ಲಿ ಧರಿಸಿದವನೂ, ವೇದಗಳನ್ನೇ ಕುದುರೆಗಳಾಗಿ ಹೊಂದಿರುವವನೂ, ಮನೋಹರಾಂಗನೂ, ಹೊಳೆವ ಪಂಚಮುಖನೂ, ವಿಷಸರ್ಪಗಳನ್ನು ಧರಿಸಿರುವವನೂ, ಘಟನಾತೀತನೂ ಥಳಥಳಿಸುತ್ತ ಉರುಹಿ ನಾಶಮಾಡುವ ಕಣ್ಣುಗಳನ್ನು ಹೊಂದಿರುವವನೂ, ಸದಾ ಭಕ್ತರನ್ನು ರಕ್ಷಿಸುವವನೂ, ಪಶುಪಾಲನೂ, ಚರ್ಮಾಂಬರಧಾರಿಯೂ, ಸುವರ್ಣಾದ್ರಿಯನ್ನೆ ಬಿಲ್ಲನ್ನಾಗಿ ಹಿಡಿದಿರುವವನೂ, ಮೂರು ಲೋಕಗಳಿಗೂ ಏಕೈಕ ದಾರಿದೀಪವಾಗಿರುವವನೂ, ಅಭ್ಯುದಯಪರನೂ, ಒಡೆಯನೂ, ಚಿತ್‌ಪ್ರಕಾಶನೂ, ತ್ರಿಶೂಲಧರನೂ ಆದ ಶಿವನು ಏಕೈಕ [ದೈವ]ವಾಗಿ ಶೋಭಿಸಿದ್ದನು. ೧೩೭. ಗಿರಿಜೇಶನೂ, ಕಾಮನನ್ನು ಬಂಧಿಸಿದವನೂ, ಭಕ್ತರ ಪಾಲಿಗೆ ಕಲ್ಪವೃಕ್ಷನೂ, ಸೂರ್ಯರಂತೆ ತೇಜೋವಂತನೂ, ಚೆನ್ನಾಗಿ ಪೂಜೆಗೊಳ್ಳುವವನೂ, ವಿಷವನ್ನು ಸೇವಿಸಿದವನೂ, ವೇದ ಸಮೂಹಕ್ಕೆ ಅಸಾಧ್ಯನೂ, ಸದಾ ಭೇದಿಸಲಾಗದವನೂ, ಪರಿಪೂರ್ಣನೂ, ಹಳದಿಮಿಶ್ರವಾದ ಬಿಳಿಯ ಬಣ್ಣದವನೂ, ಅತಿಶಯವಾದ ಮೋಹವನ್ನು ಬಿಟ್ಟವನೂ, ಚಿದಾನಂದವೆ ನಿಲಯವಾಗಿರುವವನೂ, ಅಪಾರ ಪುಣ್ಯಮೂರ್ತಿಯೂ, ಶಾಸ್ತ್ರಗಳಲ್ಲಿ ಗಣ್ಯನಾದವನೂ, ಅಜಾತನೂ, ಭಕ್ತರ ದೂತನೂ, ನಿರ್ಭಯನೂ ಆದ ಶಿವನು ಬಿಡದೆ ಶೋಭಿಸಿದನು. ೧೩೮. ಧೈರ್ಯಶಾಲಿಯೂ, ಅತುಲ ಪರಾಕ್ರಮಿಯೂ, ಬೆಳ್ಳಿಯ ಬೆಟ್ಟದ ಶಿಖರದಲ್ಲಿ ವಾಸಿಸುವವನೂ, ಹೊಳೆವ ಪುಣ್ಯನಾಮನೂ, ವೇದಗಳಿಂದ ಸ್ತುತಿಸಲ್ಪಟ್ಟವನೂ, ದುಃಖವನ್ನು ನಿವಾರಿಸುವವನೂ,

ಇಂತೆಸೆವ ಮಹಾದೇವನ ಮೂರ್ತಿಯಂ ಕಂಡಿಂಗದಿರ್ವಟ್ಟಂ ಕಂಡಿಂಗದಿರ್ವಕ್ಕಿಯಂತೆ ಪೊಂಗಿ ಪೊಱ್ಯೇಱ್ ಪೊಂಪುೞಿವೋಗಿ ಮಹಾನಂದಂಬಡೆದುದ್ಭಟಕ್ಷಿತೀಂದ್ರಚಂದ್ರಮಂ ಸೌಂದರವತಿವೆರಸು ಮೈಯ್ಯನೀಡಾಡಿ ಮಗುೞ್ದೆೞ್ದು ನಿಲ್ತುರುತರಭಕ್ತಿರಸಭರದುರುವಣೆಯಿಂದಂ ಕರಂಗುತಿರ್ಪ ತನ್ನೃಪಾಲನ ನಪಾರಕೃಪಾಕರನಪ್ಪ ಶಂಕರಂ ಕಂಡು,

ಕುಂದದೆ ಪೊಂಗುವ ಪರಮಾ
ನಂದಂಬಡೆದಂದು ಶೋಭಿಪಾನೃಪನಂ ಬಾ।
ಲೇಂದುಧರಂ ಕೈವಿಡಿದೊಲ
ವಿಂದಂ ಮೈದಡವಿ ಮಗುೞ್ದು ಗಣಪದವಿತ್ತಂ ॥ ೧೩೯ ॥

ಗಣನಾಥತ್ವಮನುದ್ಭಟಂಗೆ ಪದೆದಿತ್ತಾತಂ ವಲಂ ತಂದ ಪ
ಟ್ಟಣಮಂ ತಚ್ಛಿವಲೋಕದಲ್ಲಿ ಬಿಡದೊಲ್ದಿಂಬಿಟ್ಟು ಮೇಣ್ಕಾಮಿನೀ।
ಮಣಿಸೌಧರ್ಮಿಗೆ ಕೂರ್ತು ಪಾಲಿಸಿ ಸಮುದ್ಯದ್ರುದ್ರಕನ್ಯಾತ್ವಮಂ
ಗುಣದೂರಂ ನೆಗೞ್ದೊಪ್ಪಿದಂ ಗುರುವಿರೂಪಾಕ್ಷಂ ಗುಹೇಶಪ್ರಿಯಂ ॥ ೧೪೦ ॥

ಒಸೆದಿತ್ತುದ್ಭಟಭೂಮಿಪಂಗುರುಗಣಾಧೀಶತ್ವಮಂ ನಾಡೆ ರಂ
ಜಿಸಿದಂ ಚಂದ್ರದಿವಾಕರಾಗ್ನಿ ನಯನಂ ಗಂಗಾಧರಂ ನಿರ್ಮಲಂ।
ಸಸಿವಚ್ಚಂ ಕರುಣಾಕರಂ ನಿರುಪಮಂ ಸರ್ವಾಂತಕಂ ಶಂಕರಂ
ಬಿಸಜಾಕ್ಷಾಕ್ಷಿಸಮರ್ಚಿತಾಂಘ್ರಿಕುಮಲಂ ಪಂಪಾಂಬಿಕಾವಲ್ಲಭಂ ॥ ೧೪೧ ॥

ಗಗನವೇ ಕೇಶವಾಗುಳ್ಳ ಪ್ರಸಿದ್ಧನೂ, ಮೂರೂ ಲೋಕಗಳ ಒಡೆಯನೂ, ಕರ್ಮಗಳನ್ನು ಬಿಟ್ಟವನೂ, ಶುದ್ಧ ಧರ್ಮಿಯೂ, ಎಣೆಯಿಲ್ಲದ ಮಹಿಮಾಶಾಲಿಯೂ, ಸಕಲ ಭೂಮಂಡಲವನ್ನು ಆವರಿಸಿರುವವನೂ, ಮಾಯೆಯನ್ನು ಗೆದ್ದವನೂ, ಸತ್ಯ ಶರೀರನೂ, ಒಡೆಯನೇ ಇಲ್ಲದವನೂ ಆದ ಪಂಪಾಪತಿಯು ಚೆನ್ನಾಗಿ ಶೋಭಿಸಿದನು. ವ॥ ಹೀಗೆ ಶೋಭಿಸುವ ಮಹಾದೇವನ ಮೂರ್ತಿಯನ್ನು ಕಂಡು ಶೀತಲಕಿರಣಗಳನ್ನು ಹೊಂದಿರುವ ಚಂದ್ರನನ್ನು ಕಂಡ ಬೆಳದಿಂಗಳ ಹಕ್ಕಿಯಂತೆ ಉಬ್ಬಿ ಉತ್ಸಾಹ ತಾಳಿ ರೋಮಾಂಚನಗೊಂಡು ಮಹದಾನಂದ ಹೊಂದಿದ ಉದ್ಭಟ ಮಹಾರಾಜಚಂದ್ರಮನು ಸೌಂದರವತಿಯೊಡನೆ ನಮಸ್ಕರಿಸಿ ಮತ್ತೆ ಮೇಲೆದ್ದುನಿಂತು ವಿಶೇಷವಾದ ಭಕ್ತಿರಸೋತ್ಕಟತೆಯಿಂದ ಕರಗುತ್ತಿರಲು, ಅಪಾರ ಕರಣಾ ಮೂರ್ತಿಯಾದ ಶಂಕರನು ಮಹಾರಾಜನನ್ನು ನೋಡಿ, ೧೩೯. ಕುಗ್ಗದೆ ಅತ್ಯಾನಂದ ಹೊಂದಿ ಉಬ್ಬಿ ಶೋಭಿಸುವ ಮಹಾರಾಜನನ್ನು ಬಾಲೇಂದುಧರನಾದ ಶಿವನು ಕೈಹಿಡಿದು ಪ್ರೀತಿಯಿಂದ ಮೈದಡವಿ ಗಣಪದವನ್ನು ಅನುಗ್ರಹಿಸಿದನು. ೧೪೦. ಗಣಪದವಿಯನ್ನು ಪ್ರೀತಿಯಿಂದ ಉದ್ಭಟನಿಗೆ ಅನುಗ್ರಹಿಸಿ, ಉದ್ಭಟನು ಬಿಡದೆ ತಂದ ಪಟ್ಟಣಕ್ಕೆ ಶಿವಲೋಕದಲ್ಲಿ ತಪ್ಪದೆ ಮೆಚ್ಚಿ ಆಶ್ರಯ ಕೊಟ್ಟು, ಸ್ತ್ರೀಯರಲ್ಲಿ ಶ್ರೇಷ್ಠಳಾದ ಸೌಂದರಿಯನ್ನು ಪ್ರೀತಿಯಿಂದ ಕಾಪಾಡಿ ಶ್ರೇಷ್ಠ ರುದ್ರಕನ್ಯೆಯ ಪದವಿಯನ್ನು ಅನುಗ್ರಹಿಸಿ ದುರ್ಗುಣದೂರನೂ, ಗುಹೇಶಪ್ರಿಯನೂ ಆದ ಗುರು ವಿರೂಪಾಕ್ಷನು [ಅವನ ಭಕ್ತಿಯನ್ನು] ಕೈಗೊಂಡು ಶೋಭಿಸಿದನು. ೧೪೧. ಉದ್ಭಟ ಮಹಾರಾಜನಿಗೆ ಶ್ರೇಷ್ಠವಾದ ಗಣಾಧೀಶತ್ವವನ್ನು ಪ್ರೀತಿಯಿಂದ ಕೊಟ್ಟು, ಚಂದ್ರ - ಸೂರ್ಯ-ಅಗ್ನಿಗಳನ್ನು ನೇತ್ರಗಳನ್ನಾಗುಳ್ಳವನೂ, ಗಂಗಾಧರನೂ, ನಿರ್ಮಲನೂ, ಚಂದ್ರಶೇಖರನೂ,

ಕೂರ್ತನುರಾಗದಿಂ ಪೊಗಟ್ದು ಮೆಚ್ಚಿಸಿ ಬಂದು ವಿರಾಜಿತೋಲ್ಲಸ
ತ್ಕೀರ್ತಿಮಯೋದ್ಭಟಂಗೆ ಗಣರಾಟ್ಪದವಿತ್ತು ತದುರ್ವಿಪಾಲಕ।
ಸ್ಫೂರ್ತಿಯನ್ನೆಯ್ದದುಜ್ವಲಮನೋಂಬುಜದೊಳ್ಮಿಗೆ ಬೆಚ್ಚು ತೋರ್ಪ ಚಿ
ನ್ಮೂರ್ತಿಯೆ ರಕ್ಷಿಸೆನ್ನನೆಡೆಯಿಲ್ಲದ ಕೂರ್ಮೆಯಿನಲ್ಲಮಪ್ರಿಯಾ ॥ ೧೪೨ ॥

ಕವಿಯಲ್ಲಂ ಶಾಸ್ತ್ರಿಯಲ್ಲಂ ವಿಪುಳಬುಧನುಮಲ್ಲಂ ಪ್ರಸ್ಪದ್ವಾಗ್ಮಿಯಲ್ಲಂ
ಶಿವಭಕ್ತಾನೀಕಪಾದಾಂಬುಜರಜಮೆನಿಪುದ್ಯದ್ವಿಭೂತಿಪ್ರಸನ್ನೋ।
ತ್ಸವದಿಂದಂ ಪೇಟ್ದೆಂ ನಿಂತೀವಿಲಸಿತಕೃತಿಯಂ ಬಲ್ಲ ಪಾಂಗಿಂದೆ ವಿದ್ವ
ನ್ನಿವಹಂ ಸಂಪ್ರೀತಿಯಿಂದಾಲಿಪುದುಟಿದು ವಲಂ ಮದೋದ್ರೇಕದಿಂದಂ ॥ ೧೪೩ ॥

ಅಲ್ಲಮದಕ್ಕುಮೆಂದೊರೆದು ಪೇಟ್ವ ಸುಪಂಡಿತರಿಲ್ಲ ನಿಲ್ಲದಾಂ
ಬಲ್ಲಪೊಲಲ್ಲಮಪ್ರಭುವಿನೊಲ್ಮೆಯಿನೀಕಮನೀಯಕಾವ್ಯಮಂ।
ಸಲ್ಲಲಿತಾರ್ಥದೊಳ್ಪು ನೆಗಟ್ದಿಪ್ಪವೊಲೊಲ್ದುಸಿರ್ದೆಂ ಬುಧರ್ಕಲಾ
ವಲ್ಲಭರ್ಕೈದೆ ಕೇಳ್ದು ಗುಣಮೊಂದನೆ ಬಲ್ಪಿಡಿದಿರ್ಪುದಾವಗಂ ॥ ೧೪೪ ॥

ಎನ್ನೆರ್ದೆವಂದ ರಾಯಸದಲಿಂಗರಸಂ ಬರೆಯಲ್ಕಮಂತುಟಾಂ
ಸನ್ನುತಶಂಭುಭಕ್ತರ ಪದಾಂಬುರುಹಂಗಳನೊಲ್ದು ಪೊತ್ತು ನಿ।
ರ್ಭಿನ್ನ ವಿಲಾಸಮಂ ಪಡೆದು ನಿರ್ಮಿಸಿದೀಕೃತಿಚಂದ್ರಸೂರ್ಯರು
ಳ್ಳನ್ನೆವರಂ ಸಮಸ್ತಸುಜನರ್ಗನುರಾಗಮನೀಗೆ ಧಾತ್ರಿಯೊಳ್ ॥ ೧೪೫ ॥

ಕರುಣಾಕರನೂ, ನಿರುಪಮನೂ, ಸರ್ವನಾಶನೂ, ಶಂಕರನೂ, ವಿಷ್ಣುವಿನ ಕಣ್ಣುಗಳು ಸೇರಿರುವ ಪಾದಕಮಲವನ್ನು ಹೊಂದಿರುವವನೂ ಆದ ಪಂಪಾಂಬಿಕೆಯೊಡೆಯನು ಚೆನ್ನಾಗಿ ಶೋಭಿಸಿದನು. ೧೪೨. [ಶಿವನನ್ನು] ಮೆಚ್ಚಿಸಿ ಬಂದು ಶೋಭಿಸಿರುವ, ಸತ್ಕೀರ್ತಿಯಿಂದ ಪ್ರಕಾಶಿಸುತ್ತಿರುವ ಉದ್ಭಟನಿಗೆ ಒಲವು ತೋರಿ, ಸಂತಸದಿಂದ ಅವನನ್ನು ಹೊಗಳಿ ಗಣಪದವಿಯನ್ನು ಅನುಗ್ರಹಿಸಿ ಮಹಾರಾಜನ ಬುದ್ಧಿಗೆ ನಿಲುಕದೆ ಅವನ ಉಜ್ವಲವಾದ ಹೃದಯಕಮಲದಲ್ಲಿ ಚೆನ್ನಾಗಿ ಹೊಳೆಯುವ ಅಲ್ಲಮ ಪ್ರಿಯನಾದ ಚಿನ್ಮೂರ್ತಿಯೇ ಕೊನೆಮೊದಲಿಲ್ಲದ ಪ್ರೀತಿಯಿಂದ ನನ್ನನ್ನು ಕಾಪಾಡು. ೧೪೩. [ನಾನು] ಕವಿಯಲ್ಲ, ಶಾಸ್ತ್ರ ತಿಳಿದವನಲ್ಲ, ವಿಪುಲ ಜ್ಞಾನಿಯೂ ಅಲ್ಲ, ಅತಿಶಯ ವಾಗ್ಮಿಯೂ ಅಲ್ಲ, ಶಿವಭಕ್ತರುಗಳ ಪಾದಕಮಲದ ರಜವೆಂಬ ಪವಿತ್ರ ವಿಭೂತಿಯ ಪರಮಾನಂದದಿಂದ ಈ ವಿಸ್ತಾರವಾದ ಕೃತಿಯನ್ನು ಹೇಳಿದೆನು. ವಿದ್ವಜ್ಜನರು ತಮಗೆ ತಿಳಿದಂತೆ ಕೋಪ ತಾಪಗಳನ್ನು ಬಿಟ್ಟು ಹೆಚ್ಚಿನ ಮಮತೆಯಿಂದ ಕೇಳುವುದು. ೧೪೪. ಅದಲ್ಲ ಇದು ಎಂದು ಪರೀಕ್ಷಿಸಿ ಹೇಳುವ ಒಳ್ಳೆಯ ಪಂಡಿತರಿಲ್ಲ. ನನಗೆ ತಿಳಿದಂತೆ, ಅಲ್ಲಮಪ್ರಭುವಿನ ಪ್ರೀತಿಯಿಂದ ಈ ಮನೋಹರ ಕಾವ್ಯವನ್ನು ಮಂಜುಳವಾದ ಅರ್ಥದಲ್ಲಿ ಶೋಭೆ ಕಾಣುವಂತೆ ಒಲಿದು ಹೇಳಿದೆನು. ವಿದ್ವಾಂಸರು, ಕಲಾಕೋವಿದರು ಇದನ್ನು ಚೆನ್ನಾಗಿ ಕೇಳಿ ಸದಾ ಗುಣಗ್ರಾಹಿಗಳಾಗಿರುವುದು. ೧೪೫. ನನ್ನ ಮನಸ್ಸಿಗೆ ಪ್ರಿಯರಾದ ರಾಯಸದ ಲಿಂಗರಸನು ಬರೆಯಲು, ಅತಿಶಯವಾಗಿ ಹೊಗಳಲ್ಪಡುವ ಶಿವಭಕ್ತರ ಪಾದಕಮಲಗಳನ್ನು ಪ್ರೀತಿಯಿಂದ ಹೊತ್ತು ನಿರ್ಭಿನ್ನ ಆನಂದವನ್ನು

ಜನನಾಥೋತ್ತಮಸೋಮರಾಜನುಸಿರ್ದೀಕಾವ್ಯಂ ವಲಂ ಶಾಲಿವಾ
ಹನಶಾಕಾಬ್ದಮದ್ಯೆದೆ ಸಾಸಿರದನೂರ್ಸಂದನಾಲ್ವತ್ತನಾ।
ಲ್ಕನೆಯಾರಂಜಿತಚಿತ್ರಭಾನುವವರಾಶ್ವೀಜೋಚ್ಛಿತೈಕಾದಶೀ
ವನಜಾರಾತಿತನೂಜವಾಸರದೊಳಾದತ್ತಲ್ಲಮಂಗರ್ಪಿತಂ ॥ ೧೪೬ ॥

ಇದು ಸಮಸ್ತಸುರಾಸುರಕದಂಬವಿಜೃಂಭಿತಮಕುಟತಟಘಟಿತನವರತ್ನ ಪುಂಜಸಂ
ಜಾತಪಿಂಜರಿತಮಂಜುಳಮಯೂಖಮಂಜರೀರಂಜಿತಶ್ರೀಗುರುವಿರೂಪಾಕ್ಷಪಾ
ವನಪಾದನಖೋಚ್ಛಳಿತಪ್ರಭಾನಿಸ್ತಂದ್ರರುಂದ್ರಸಾಂದ್ರಚಂದ್ರಿಕಾಪಟಲ
ಪಟುಲಂಪಟಚಕೋರಾಯಮಾಣಮಾನಸಶ್ರೀಸೋಮರಾಜೇಂ
ದ್ರವಿರಚಿತಮಪ್ಪ ಕರ್ಣಾಟಕಶೃಂಗಾರಸಾರಮಹಾಪ್ರಬಂ
ಧದೊಳ್ ಶಿವಗಣ ಕೈಲಾಸ ವರ್ಣನಂ
ದ್ವಾದಶಾಶ್ವಾಸಂ ಸಂಪೂರ್ಣಂ.

ಹೊಂದಿ ರಚಿಸಿದ ಈ ಕೃತಿಯು ಭೂಮಿಯಲ್ಲಿ ಚಂದ್ರ ಸೂರ್ಯರಿರುವವರೆಗೂ ಸಕಲ ಸುಜನರಿಗೆ ಸಂತೋಷವನ್ನೀಯಲಿ. ೧೪೬. ರಾಜರುಗಳಲ್ಲಿ ಉತ್ತಮನಾದ ಸೋಮರಾಜನು ರಚಿಸಿದ ಈ ಕಾವ್ಯವು ಕರಾರುವಾಕ್ಕಾಗಿ ಶಾಲೀವಾಹನಶಕ ವರುಷ ಒಂದು ಸಾವಿರದ ನೂರನಲವತ್ತನಾಲ್ಕನೆಯ ಚಿತ್ರಭಾನು ಸಂವತ್ಸರದ ಆಶ್ವೀಜ ಮಾಸದ ಏಕಾದಶಿ ಚಂದ್ರತನೂಜ ಬೆಳಗಿನಲ್ಲಿ ಮುಗಿ[ಯಿತು]. ಈ ಕೃತಿ ಅಲ್ಲಮನಿಗೆ ಅರ್ಪಿತವು.

ಇದು ಸಮಸ್ತ ದೇವತೆಗಳ ಸಮೂಹದಿಂದ ವಿಶೇಷವಾಗಿ ಶೋಭಿಸಿರುವ ಕಿರೀಟಗಳ ಅಂಚಿನಲ್ಲಿ ಸೇರ್ಪಡೆಯಾಗಿರುವ ನವರತ್ನಗಳಿಂದುಂಟಾದ ಹೊಂಬಣ್ಣದ ಮನೋಹರ ಕಿರಣಗಳಿಂದ ರಂಜಿಸಿರುವ ಶ್ರೀ ಗುರು ವಿರೂಪಾಕ್ಷನ ಪವಿತ್ರವಾದ ಪಾದಗಳ ಬೆರಳಿನ ಉಗುರುಗಳಿಂದ ಹೊಮ್ಮಿದ ಬೆಳಗು ವಿಪುಲವೂ ವಿಸ್ತಾರವೂ ದಟ್ಟವೂ ಆಗಿ ಆ ಕಿರಣಗಳ ಕಾಂತಿಯು ತೀಕ್ಷ್ಣವಾಗಿರಲು [ಅದನ್ನು] ಸೇವಿಸಲು ಚಕೋರ ಪಕ್ಷಿಯಂತೆ ಕಾತರನಾಗಿರುವ ಸೋಮರಾಜನಿಂದ ರಚಿತವಾದ ಶೃಂಗಾರಸಾರ ಮಹಾಪ್ರಬಂಧದ ಹನ್ನೆರಡನೆಯ ಆಶ್ವಾಸದಲ್ಲಿ ಶಿವಗಣ ಕೈಲಾಸ ವರ್ಣನೆಯು ಸಂಪೂರ್ಣವಾಯಿತು.

# ಕಠಿಣ ಪದಗಳ ಅರ್ಥ

### ಅ

ಅಂಗಜ ಮಹೀಷ (೧೦.೬೪) ಮನ್ಮಥರಾಜ

ಅಂಗಜಾಗಮ (೧೦.೮೧) ಕಾಮಶಾಸ್ತ್ರ

ಅಂಗಾರ (೧೧.೧೨೨ ವ) ಕೆಂಡ

ಅಂಚಿತ (೧.೪೨) ಸುಂದರ

ಅಂಶುಶೀತ (೧.೧) ತಂಪಾದ ಕಿರಣ

ಅರ್ಕ (೨.೪೨) ಎಕ್ಕೆ

ಅಗರು (೧೧.೯೩ ವ) ಧೂಪ

ಅಗಿಲು (೨.೪೨) ಧೂಪ

ಅಚ್ಚಂಬೊಯ್ (೧೨.೭೩) ಪುಟವಿಡು

ಅಚ್ಚರಿಯರ್ (೮.೨೨) ಅಪ್ಸರೆಯರು

ಅಟಮಟ (೧೦.೬೬) ಆತುರ

ಅಡಕಿಲ್ (೮.೬) ಒಂದರ ಮೇಲೊಂದು ಪೇರಿಸು

ಅಣಿಯರ (೩.೧೦೨ ವ) ಸಡಗರ

**ಅದುರ್ಗಂಚಿ (೫.೨೨) < ಅದಿರ್ಗಂಚಿ-ಮಾಧವಿಹೂವು**

ಅಪರಾಶಾಚಲ (೧೦.೧೦೨) ಪಶ್ಚಿಮದಿಕ್ಕಿನ ಬೆಟ್ಟ

ಅಲರ್ವಕ್ಕಿ (೧.೬೪ ವ) ದುಂಬಿ

ಅಲೆ (೧೦.೭೫) ಪೀಡಿಸು

ಅವದ್ಯ (೧೦.೧೩೦) ಸ್ವಚ್ಛ, ಶುಭ್ರ

ಅವಭೃಥಸ್ನಾನ (೪.೧೧೨ ವ) ಯಾಗ ಮುಗಿದ ಮೇಲೆ ಮಾಡುವ ಸ್ನಾನ

ಅಸತಿ (೧೦.೧೧೭) ಜಾರೆ

ಅಸವಸ (೫.೬೮) ಆತುರ

ಅಸಿ (೬.೯೧) ಸಣ್ಣ, ಕೋಮಲ

ಅಳಿಕ (೬.೧೧೨) ಹಣೆ

### ಆ

ಆಕಪ್ಪು (೨.೫೦) ಆನೆಗುಳಿ

ಆಖು (೬.೧೨೬) ಇಲಿ

ಆಢ್ಯ (೧೨.೧೩೮) ಹೊಂದಿರುವ

ಆತತ (೬.೧೯) ಕೂಡಿದ

ಆಲವಾಲ (೮.೩೮) ಪಾತಿ

ಆಲೋಲ ಆಕೀರ್ಣ (೮.೧೨೨) ಚಂಚಲವಾಗಿ ಹರಡಿದ

ಆವರ್ತ (೧೦.೪೨) ಸುಳಿ

ಆಸಾರ (೪.೮೦) ಜಡಿಮಳೆ

ಆಸಾರ (೯.೨೭) ಮುತ್ತಿಗೆ

### ಇ

ಇಂಗದಿರ್ವಕ್ಕಿ (೧೨.೧೩೮) ಬೆಳುದಿಂಗಳನ್ನು ಸೇವಿಸುವ ಹಕ್ಕಿ

ಇಂಗದಿರ್ವಟ್ಟ (೧೨.೧೩೮ ವ) ಶೀತಲ ಕಿರಣಗಳನ್ನು ಹೊಂದಿರುವ ಚಂದ್ರ

ಇಂಗಳ (೧೦.೫೭) ಬೆಂಕಿ

ಇಂದಿಂದಿರ (೧೨.೪೬) ದುಂಬಿ

ಇಟ್ಟಣ (೩.೩ ವ) ಸೊಗಸು

ಇತ್ತಳತ್ತಳ್ (೧೨.೬೭) ಇತ್ತ ಅತ್ತ

ಇರ್ಪು (೧೦.೫೭) ಇಂಪು, ಸವಿ

### ಈ

ಈಡು (೧೨.೧೩೮) ವ್ಯಾಪಿಸು

### ಉ

ಉಗುರಿಸು (೮.೧೪ ವ) ಉಗುರಿನಿಂದ ಬಾಚು

ಉಡ್ಡೀನ (೧೦.೨೨) ಆಕಾಶಯಾನ

ಉತ್ಸಂಗ (೧೦.೧೩೩) ತೊಡೆ
ಉದ್ಗಮ (೧೦.೧೪೦) ಹೂವು
ಉದ್ಗಮೇಷು (೭.೧೨೨) ಹೂಬಾಣ
ಉದೀಚ (೩.೫೭) ಉತ್ತರದಿಕ್ಕು
ಉಪಕಂಠ (೩.೩೫ ವ) ಸಮೀಪ
ಉಪರಿಭಾಗ (೮.೯೧ ವ) ಮೇಲ್ಭಾಗ
ಉರುತರ (೧೨.೧೩೮ ವ) ವಿಶೇಷ
ಉಲೂಖ (೨.೯೦) ಒರಳು
ಉಷ್ಣೀಷ (೧೧.೮೭) ಕಿರೀಟ
ಊರ್ಮಿ (೧.೩೭) ತೆರೆ

ಎ

ಎಕ್ಕಟಿ (೧೨.೫೨) ಒಂಟಿ, ಏಕಾಂತ, ಗುಟ್ಟು
ಎಸಕ (೯.೧೩೯) ಕಾಂತಿ, ಸೊಬಗು
ಒಬುಳಿ (೧೧.೨೩) < ಒರ್ಪುಳಿ, ರಾಶಿ

ಕ

ಕಂಕ (೧೧.೧೦೯) ಚಿಮಟ
ಕಂಕೇಲ (೯.೬೬) ಅಶೋಕ
ಕಂಜಜ (೧.೪೦) ಬ್ರಹ್ಮ
ಕಂಜಾತಾಕರ (೫.೬೧) ಕಮಲಗಳ ಕೊಳ
ಕಂತುಕ (೬.೧೧೮) ಆಟದ ಚೆಂಡು
ಕರ್ಚು (೧೦.೧೩೬ ವ) ತೊಳೆ
ಕಟಕ (೬.೯೮) ಬಳೆ
ಕಟ್ವಾಣಿ ಮತ್ತು (೬.೧೦೦) ಅಮೂಲ್ಯವಾದ ಮುತ್ತು
ಕಡವಕ (೨.೪೨) ಕದಂಬಕ
ಕಣಿಶ (೩.೧೭) ತೆನೆ
ಕತ (೧೦.೫೫) ಕಾರಣ
ಕರ್ಣಿಕಾರ (೯.೩೮) ಬೆಟ್ಟದಾವರೆ
ಕಪಿತ್ಥ (೧೦.೬೩) ಬೇಲದ ಹಣ್ಣು
ಕಮನೀಯ ಮಾಧವ (೭.೬೩) ಸೌಂದರ್ಯದ ಅಧಿದೇವತೆ
ಕಮಲಾಕ್ಷ (೧೨.೧೪೧) ವಿಷ್ಣು
ಕರಂಜಕ (೬.೧೮) ಖರ್ಜೂರ
ಕಲ್ಹಾರ (೯.೫೧) ನೈದಿಲೆ
ಕವರ್ (೧೦.೮೬) ದೋಚು
ಕವರ್ತೆ (೧೦.೬೬ ವ) ಸುಲಿಗೆ
ಕಳಾಪ (೩.೧೩) ಒಡ್ಯಾಣ
ಕಾವಡಿ (೧೧.೧೦೩) ಕಂಬಿ
ಕಾಳಿಮ (೧.೩೯) ಕಪ್ಪು, ನೀಲಿ
ಕಿಂಜಲ್ಕ (೧೦.೧೨೫) ಹೂವಿನ ಕುಸುರು
ಕಿಂಚುಳಕ (೧.೩೭) ಎರೆಹುಳ
ಕಿಂಪುರುಷ (೧೨.೧೨೯) ಮನುಷ್ಯ ಶರೀರದ ದೇವತೆ
ಕಿಂಶುಕ ಸುಮ (೫.೫೧) ಮುತ್ತುಗದ ಹೂವು
ಕಿರಿ (೧.೩೭) ಹಂದಿ
ಕಿಸಲಯ (೧೦.೧೧೯) ಅಶೋಕ
ಕುಕ್ಕುರ (೧.೨೫) ನಾಯಿ
ಕುಪ್ಪು (೧೦.೧೨೧) ಹಾರಾಡು
ಕುರವಕ (೯.೩೬) ಗೋರಂಟಿ
ಕುಹಳ (೮.೬೧) ಅಡಕೆ ಹೂವಿನ ಗೊಂಚಲು
ಕುಳೀರ (೧.೩೭) ಏಡಿ
ಕೂಪ (೭.೭೦) ಪ್ರಿಯ
ಕೃತ್ತಿ (೧೨.೧೩೬) ಚರ್ಮ
ಕೆಳರು (೯.೧೩೨) ಹರಡು
ಕೇಕರ (೮.೯೫) ಕಡೆಗಣ್ಣೋಟ
ಕೇದಾರ (೩.೨೨) ಗದ್ದೆ
ಕೈ (೮.೬) < ಕೆಯ್-ಅಲಂಕಾರ
ಕೈತವ (೭.೨೨) ನೆವ
ಕೈತವ (೧೨.೫೨) ಮೋಸ, ವಂಚನೆ
ಕೊಲ್ಲಟಿಗ (೫.೧೦೧) ಡೊಂಬ
ಕೋಕನ (೨.೨) ಕಮಲ
ಕೋಕನ (೧೧.೯ ವ) ಕೆಂದಾವರೆ
ಕೋಟೀರ (೨.೨೧ ವ) ಕಿರೀಟ
ಕೋರಕ (೫.೫೧) ಮೊಗ್ಗು

ಕೌಂಗು (೧.೫೭) ಅಡಿಕೆ
ಕ್ರಕಚ (೧.೪೭) ಗರಗಸ
ಕ್ರೋಢ (೨.೫೦) ಹಂದಿ
ಕ್ಷಾಮಿತಿ (೯.೭೧ ವ) ಸೊರಗು
ಕ್ಷ್ವೇಳ (೧೨.೧೩೭) < ಕ್ಷ್ವೇಡ, ವಿಷ
ಕ್ಷೋಣೀಂಧ್ರ (೧೨.೧೧೦) ಪರ್ವತ

**ಖ**

ಖಂಜನ (೨.೪೩) ಮಡಿವಾಳ ಹಕ್ಕಿ
ಖಲೀನ (೯.೨೭) ಕಡಿವಾಣ
ಖರ್ವಟ (೨.೩೩ ವ) ಇನ್ನೂರು ಗ್ರಾಮಗಳ ಕೇಂದ್ರ

**ಗ**

ಗಂಡೂಷ (೮.೧೨೮) ಮುಕ್ಕುಳಿಸುವ ನೀರು
ಗೀರ್ವಾಣ ಬಾಣಾಸನ (೪.೮೦) ಕಾಮನಬಿಲ್ಲು
ಗುಂಜಾಗ್ಯೃಹ (೯.೨೯) ಹೆಂಡದ ಮನೆ
ಗುಹ್ಯಕ (೧೨.೧೩೦) ಯಕ್ಷ
ಗುಳ (೪.೮೦) ಪಕ್ಕ ರಕ್ಷೆ
ಗೋಮಿನಿ (೧೨.೧೩೧) ಲಕ್ಷ್ಮಿ
ಗ್ಲೌ (೧.೧) ಚಂದ್ರ

**ಘ**

ಘಟ್ಟಿವಳ (೧.೫೦) ಸುಗಂಧವ್ಯಾಪಾರಿ
ಘುಸೃಣ (೫.೪೮) ಕುಂಕುಮಕೇಸರಿ
ಘೋಟ (೧೨.೧೩೬) ಕುದುರೆ

**ಚ**

ಚಾಮೀಕರ (೧೨.೯೨) ಚಿನ್ನ
ಚಾರಣ (೧೨.೧೨೯) ಗಂಧರ್ವ
ಚಿತ್ರಕಾಯ (೨.೫೧) ಚಿರತೆ
ಚಿರಂಟಿ (೮.೧೭) ಯುವತಿ
ಚಿಳಿಚಿಮ (೩.೮೪) ಒಂದು ಬಗೆಯ ಕಿರುಮೀನು
ಚೂಚಕ (೩.೮೭) ಗೊಂಚಲು
ಚೂಳಿ (೧೨.೧೦೮) ಶಿಖರ
ಚೆಂದಳ (೨.೯೧) ಕೆಂಪನೆಯ ಕೈ
ಚೆರ್ಚು (೧.೧೦) ಬೆಸುಗೆ
ಚೈತ್ರಮಿತ್ರ (೧.೭೮ ವ) ಕಾಮ
ಚೊಕ್ಕಳ (೫.೪೫) ಸೊಗಸು

**ಜ**

ಜಂಝಾನಿಲ (೯.೧೩೨) ಮಳೆಹನಿಗಳಿಂದ ಕೂಡಿದ ಬಿರುಗಾಳಿ
ಜಂಬುಕ (೨.೪೩) ನರಿ
ಜಂಭ ರಿಪು (೧.೯೧) ದೇವೇಂದ್ರ
ಜಂಭೀರಫಲ (೬.೧೧೮) ನಿಂಬೆಹಣ್ಣು
ಜಕ್ಕುಲಿಸು (೧೨.೭೯) ವ್ಯಾಪಿಸು
ಜತ್ತುಳ (೧.೩೮) ನೊರೆ
ಜಪಾಕುಸುಮ (೫.೨೪) ಕೆಂಪು ದಾಸವಾಳ
ಜಳೂಕ (೧.೩೭) ಜಿಗಣೆ

**ಟ**

ಟೆಂಟಣಿಸು (೧೧.೪೪) ವಿರೋಧಿಸು

**ತ**

ತಂಬುಲಿಗ (೧.೫೦) ಎಲೆ ವ್ಯಾಪಾರಿ
ತಡಬಡಿಸು (೧೦.೧೧೭) ಕಕ್ಕಾಬಿಕ್ಕಿಯಾಗು, ತಡವರಿಸು
ತಣ್ಣಸಗೆಯ್ಯವಟ್ಟ (೨.೬೩) ಚಂದ್ರ
ತಚಿಸಲ್ (೧೨.೮೬) ನಿಶ್ಚಯ
ತಾಮ್ರತುಂಡ (೫.೨ ವ) ಗಿಳಿ
ತಾರ (೧೦.೧೮) ಬೆಳ್ಳಿ
ತಾರಹಾರ (೯.೫) ಮುತ್ತಿನಹಾರ
ತ್ರಿದಿವ (೯.೯೧) ಸ್ವರ್ಗ
ತ್ರಿದಶಕುಜ (೧.೩೧) ಕಲ್ಪವೃಕ್ಷ
ತುಟಿಲಾಳ್ (೧.೮೦ ವ) ಕಲಿ, ವೀರ
ತೆಂಕಲ್ (೨.೩೩) ದಕ್ಷಿಣದಿಕ್ಕು

**ದ**

ದಂಡಧರ (೧.೮೩ ವ) ಯಮ
ದಡ್ಡಿ (೯.೧೪೫) ಬಲೆ
ದರಸ್ಮೇರ (೧೦.೭೫) ಮಂದಹಾಸ
ದರ್ವೀಕರ (೧೨.೧೧೩) ಹಾವು

ದಸಿ (೧೧.೧೧೧) ಮುಳ್ಳು
ದಳನ (೧೨.೧೦೭) ಚೂರು
ದಾರವಂದ (೧೦.೫೫) ಬಾಗಿಲಿನ ಚೌಕಟ್ಟು
ದಿಮ್ಮಿದರು (೮.೭೦) ಹಿರಿಯರು
ದ್ವಿಪ (೧೨.೧೦೭) ಆನೆ
ದುರ್ದಿನ (೧೦.೪) ಮಳೆ ಸುರಿಯುತ್ತಿರುವ ದಿನ; ಮೋಡ ಕವಿದ ದಿನ
ದುಹಿತೃ (೧.೧) ಮಗಳು
ದೂಸಿಗ (೧.೭೪) ಬಟ್ಟೆ ವ್ಯಾಪಾರಿ
ದೃಶೆ (೨.೧೧) ನೋಟ
ದೇಶಿಕ (೫.೧೦೨) ಗುರು
ದ್ವಾ್ಹ (೧.೩೭) ನೀರಾನೆ
ದ್ಯೋತ (೧೦.೧೩) ಬೆಳಗು
ಧ್ವಾಂತ (೧.೩) ಕತ್ತಲೆ
ಧ್ರುವ (೪.೬ ವ) ಆಕಾಶ

ನ

ನಕ್ರ (೧.೩೭) ಮೊಸಳೆ
ನಚ್ಚಣಿ (೮.೮) ನರ್ತಕಿ
ನಿಗ್ಗವ (೨.೯೦) ಆನೆಯ ದಂತ
ನಿಬ್ಬೆಗ (೧೧.೨೩) ಶಾಂತತೆ, ಸೌಮ್ಯತೆ
ನಿಜಿಗ (೨.೧೦೪) ಇಮ್ಮಾವು
ನಿರೀಹ (೧೧.೬೦) ಬಯಕೆಗಳೇ ಇಲ್ಲದವನು
ನಿಷಂಗ (೭.೧೫) ಸೇರಿಕೆ
ನಿಳಿಂಪ (೧೨.೪೦) ದೇವತೆ
ನಿರ್ಮಾಲ್ಯ ಪತ್ರೆ (೧೧.೯೮) ಪೂಜೆ ಮಾಡಿದ ನಂತರ ತೆಗೆದುಹಾಕಿದ ಬಾಡಿದ ಪತ್ರೆ
ನೀರಾಜನ (೧.೪೦) ಆರತಿ
ನೀರು (೧೦.೪೨) ಮುತ್ತು
ನೀರೇಜ (೧೧.೧೦೬) ಕಮಲ
ನೀಲಕಂಠ (೩.೩೫) ನವಿಲು
ನಿಷ್ಯಂದ (೨.೫೨) ಸೋರು
ನೀಹಾರ (೧.೧) ಮಂಜು

ಪ

ಪಂಚಮಹಾಭೂತ (೭.೯೩) ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ
ಪಚಾರಿಸು (೪.೧೦೯) ಹೀಯಾಳಿಸು
ಪಡುವ (೧೦.೧೦೩) ಪಶ್ಚಿಮದಿಕ್ಕು
ಪಣ್ಯಾಂಗನೆ (೧೦.೪೨) ಸೂಳೆ
ಪಣ್ಣಿಯ (೧೨.೯೨) ಚಟ, ಅಭ್ಯಾಸ
ಪತತ್ರಿ (೧೦.೨೩) ಪಕ್ಷಿ
ಪರಿಭವ (೧೨.೫೩) ಅವಮಾನ
ಪರಿರಂಭಿಸು (೧೨.೫೯) ಆಲಂಗಿಸು
ಪರಿವೃಥ (೧೧.೨೭) ಒಡೆಯ
ಪರಿಸ್ರುತಿ (೫.೬೭ ವ) ಮಧು
ಪಲಲ (೫.೬೫) ಮಾಂಸ
ಪಲ್ಲವಕ (೧೦.೫೮) ವಿಟ
ಪಶುವಿಸನ (೪.೫೬ ವ) ಗೋವಧೆ
ಪಟ್ಟುವನೆ (೧೦.೧೩೬ ವ) ಮಲಗುವ ಮನೆ
ಪಾಂಚಾಲಿಕೆ (೧.೬೪) ಗೊಂಬೆ
ಪಾಟಳಿ (೨.೪೨) ಪಾದರಿ
ಪಾರದ (೮.೨೩) ಪಾದರಸ
ಪಾಲಿಕೆ (೫.೭೬) ಪಾತ್ರೆ
ಪಿಂಜರಿ (೫.೭೮) ಬೆಳ್ಳಿ
ಪಿಚುಮಂದ (೨.೪೨) ಬೇವು
ಪುಂಡರೀಕ (೨.೪೩) ಗಿಳಿ
ಪುಙುಂಖು (೮.೨೧) ಬಾಣ
ಪುನ್ನಾಗ (೧.೨೦) ಶ್ರೇಷ್ಠ
ಪೊಂಪುಳಿ (೧೨.೧೩೮ ವ) ರೋಮಾಂಚನ
ಪೊಱುಿಯೇಱ್ (೧೨.೧೩೮ ವ) ಉತ್ಸಾಹ ತಾಳು
ಪ್ರದ್ಯೋತ (೪.೯) ಸೂರ್ಯ
ಪ್ರಸ್ತರ (೩.೫೫) ಕಲ್ಲು
ಪ್ರಾಚಿ (೩.೫೭) ಪೂರ್ವದಿಕ್ಕು
ಪ್ಲವ (೧.೩೭) ಕಪ್ಪೆ

ಬ

ಬಂಭರ (೨.೪೭) ದುಂಬಿ
ಬಡಗ (೧೧.೩೦) ಉತ್ತರ ದಿಕ್ಕು
ಬಣಗು (೧೦.೬೬) ಅಲ್ಪ
ಬದ್ದವಣ (೮.೫೬) ಮಂಗಳವಾದ್ಯ
ಬಲಿಭೋಜ್ಯ (೧.೧೮) ಕಾಗೆ
ಬಾಂಬಾವ್ (೫.೪೨) ರಾಹು
ಬಿಂಬ ಫಲೋಷ್ಠ (೧.೩೫) ತೊಂಡೆಹಣ್ಣಿನಂತೆ ಕೆಂಪಾದ ಮೇಲ್ತುಟಿ
ಬಿಡಾಲ (೧೦.೫೩) ಬೆಕ್ಕು
ಬಿತ್ತೆಗ ಮಿಂಡ (೧೨.೭೨) ಪ್ರೌಢ ವಿಟ
ಬರ್ದ (೧೨.೪೫) ಪ್ರೌಢಿಮೆ
ಬಿದಿರ್ (೧೦.೩೧) ಹರಡು
ಬಿನ್ನ (೭.೭೦) ಮೌನ
ಬಿಬ್ಬೋಕ (೧೧.೨೩) ಹುಸಿಮುನಿಸು
ಬೆಗಟ್ಟು (೧.೪೩) ಭಯ
ಭಗಣೇಶ (೧.೩) ನಕ್ಷತ್ರಗಳ ಒಡೆಯ-ಚಂದ್ರ
ಭರ್ಮಾಚಲ (೧೨.೮೬ ವ) ಸುವರ್ಣ ಪರ್ವತ
ಭಲ್ಲ (೨.೪೩) ಕರಡಿ
ಭಲ್ಲೂಕ (೨.೫೦) ಕರಡಿ
ಭುಜಂಗ (೧೦.೭೫) ವಿಟ

ಮ

ಮಂಜರಿ (೧೦.೧೧೯) ಗೊಂಚಲು
ಮಂಜಿ (೫.೧೦೮) ನಾರು
ಮಂಜೀರ (೪.೫೬) ಕಾಲಂದುಗೆ
ಮಕರ (೧.೩೭) ಮೀನು
ಮಕ್ಷಿಕ (೧೦.೮೩) ನೊಣ
ಮಧ್ಯ (೮.೧೫) ಸೊಂಟ
ಮರೀಚ (೫.೬೪) ಮೆಣಸು
ಮಾಡುವೆಟ್ಟ (೬.೧೯) ಕೃತಕಶೈಲ
ಮಾರ್ತಾಂಡ (೧.೮೩ ವ) ಸೂರ್ಯ
ಮಿಂಡಿ (೧೨.೩೮) ಜಾರೆ
ಮಿಳ್ಳಿಸು (೪.೭೩) ನೆಗೆ
ಮಿಟು (೧೦.೧೨೧) ಶ್ರೇಷ್ಠ
ಮೋದು (೧೦.೫೩) ತಾಗು

ಯ

ಯೋಷಿತ್ (೧೦.೭೧) ಸ್ತ್ರೀ

ರ

ರಕ್ತಪಂಕರುಹ (೫.೫೬) ಕೆಂದಾರವೆಯ ಕೊಳ
ರಜನೀಕರ (೧.೮೫) ಚಂದ್ರ
ರಾಯಸ (೧೨.೧೪೫) ರಾಜ, ಗುರು ಮೊದಲಾದ ಹಿರಿಯರಿಂದ ಪತ್ರ ತರುವವ
ರಿಂಗಣಗುಣಿ (೧೦.೧೨೫) ನರ್ತಿಸು
ರೋಲಂಬಕ (೫.೧೦೨) ದುಂಬಿ
ರೌಪ್ಯ (೧೦.೩೨) ಬೆಳ್ಳಿ

ಲ

ಲಂಜಿಕೆ (೧.೭೬) ಸೂಳೆ
ಲತಾಂತ (೧.೪೦) ಹೂವು
ವರ್ಣಿ (೩.೩೫ ವ) ಬ್ರಹ್ಮಚಾರಿ
ವದಾನ್ಯ (೭.೭೩) ಕೊಡುಗೈದಾನಿ
ವರ್ಧಕಿ (೪.೧೯ ವ) ಬಡಗಿ
ವನಜಾರಾತಿ (೧೨.೧೪೬) ಕಮಲದ ಶತ್ರು- ಚಂದ್ರ
ವರಟ (೮.೭೧) ಹಂಸ
ವಲ್ಕಲ (೯.೧೯) ಮರದ ತೊಗಟೆ
ವಲ್ಲಕಿ (೧.೩೩) ವೀಣೆ
ವಲ್ಲರಿ (೧೦.೧೧೯) ಬಳ್ಳಿ, ಗೊಂಚಲು
ವರ್ಷಲವ (೭.೮೨) ಮಳೆಹನಿ
ವಹಿಲ (೧೨.೫೬) ತ್ವರೆ
ವಳಕ್ಷಕೇಶ (೧೦.೭೧) ಬಿಳಿಗೂದಲು
ವಳಿ (೧.೩೮) ತೆರೆ
ವ್ಯಜನ (೮.೯೧) ಬೀಸಣಿಗೆ
ವಾಗಂಗನೆ (೧೨.೧೩೧) ಸರಸ್ವತಿ
ವಾರಿಜಮಿತ್ರ (೧೨.೩೮) ಕಮಲಕ್ಕೆ ಗೆಳೆಯ ಸೂರ್ಯ
ವಾರಿಧರ (೯.೩೦) ಮೋಡ
ವಿಕಚ (೫.೫೧) ಚೆನ್ನಾಗಿ ಅರಳಿದ
ವಿಗುರ್ವು (೨.೫೪) ಅಚ್ಚರಿ
ವಿಜಿಗೀಷು (೧೨.೪೧) ಜಯವನ್ನು ಬಯಸುವ

ವಿಧುಂತುದನ್ (೨.೫೮) ರಾಹು
ವಿಧೃತ (೧.೩೧) ಬೇರ್ಪಟ್ಟ
ವಿದ್ರುಮ (೧.೯೬) ಹವಳ
**ವಿಪಣಿ (೧.೬೯) ಅಂಗಡಿ**
ವಿಯಚ್ಚಿಕುರ (೨.೩೫) ಆಕಾಶಗಂಗೆಯನ್ನು ಮುಡಿಯಲ್ಲಿ ಧರಿಸಿದವ- ಶಿವ
ವಿರಂಚಿ (೧.೮೩ ವ) ಬ್ರಹ್ಮ
ವಿಸೃಮ (೧.೨) ಪ್ರವಹಿಸು
ವಿಸ್ರಂಭ (೧೧.೩೮) ನಂಬಿಕೆ, ವಿಶ್ವಾಸ
ವೀತಿಹೋತ್ರ (೧೧.೮೯ ವ) ಅಗ್ನಿ
ವ್ರೀಡೆ (೮.೧೦೨) ಲಜ್ಜೆ
ವೇಶ್ಮ (೮.೮೯) ಮನೆ
ವೈಶಿಕ (೧೦.೬೦ ವ) ವೇಶ್ಯೆಯರಿಗೆ ಸಂಬಂಧಿಸಿದ

**ಶ**

ಶಂಬ (೪.೨೮) ವಜ್ರಾಯುಧ
ಶಂಬೂಕ (೧.೩೭) ಕಪ್ಪೆಚಿಪ್ಪು
ಶತಪತ್ರ ಮಿತ್ರಾರಿ (೧೧.೮೯ ವ) ಸೂರ್ಯನ ಶತ್ರುವಾದ ಚಂದ್ರ
ಶತಮಖ (೪.೮) ದೇವೇಂದ್ರ
ಶಫರ (೧.೪೯ ವ) ಮೀನು
**ಶಮಿ (೨.೪೨) ಬನ್ನಿಮರ**
ಶರಾವ (೧೦.೮೦) ಮಣ್ಣಿನ ಮುಚ್ಚಳ
ಶಶ (೨.೪೩) ಮೊಲ
ಶಾಡ್ವಲ (೨.೬೯) ಹಸಿರು ಹುಲ್ಲುಗ್ಗಾವಲು
ಶೀಕರ (೯.೫) ತುಂತುರ
ಶುಂಡಾಲ (೧.೨೫) ಆನೆ
ಶೃಂಗ (೧೨.೭೮) ಕೋಡು, ಕೊಂಬು
ಶೈವಾಳ (೬.೯೮) ಪಾಚಿ
ಶೈವಾಳ (೧೦.೪೨) ಸರ್ಪ
ಶ್ರೋಣಿ (೮.೧೨೫) ನಿತಂಬ

**ಷ**

ಷಟ್ಚಕ್ರ (೩.೩೮) ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ ಎಂಬ ಆರು ಚಕ್ರಗಳು
ಷೋಡಶೋಪಚಾರ (೧೨.೧೦೬) ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ ವಂದನೆ -ಎಂಬ ಹದಿನಾರು ಬಗೆಯ ಉಪಚಾರಗಳು

**ಸ**

ಸಂಕಾಶ (೨.೬) ಸಮಾನ
ಸಂಕ್ರಂದನ ದಿಗ್ವಧೂಮಣಿ (೧೦.೨೫) ಪೂರ್ವ ದಿಗಂಗನೆ
ಸಜ್ಜಕ (೧೦.೭೧) ರವೆ
ಸರ್ವಗ (೧೧.೬೦) ಸರ್ವವ್ಯಾಪಿ
ಸಾಂಪರಾಯಿಕ (೪.೧೦೬) ಕಾಳಗಕ್ಕೆ ಸಂಬಂಧಿಸಿದ
ಸಾಳ್ವ (೨.೫೧) ಗಿಡುಗ
ಸ್ಫಾಟಿಕ್ಯ ಭೂಮಿಧರ (೧.೭೨) ಕೈಲಾಸ ಪರ್ವತ
ಸಿತಕರ (೪.೮) ಚಂದ್ರ
ಸಿರಿಕಂಡ (೯.೧೧೩) ಶ್ರೀಗಂಧ
ಸೀಧು (೫.೬೮ ವ) ಮದ್ಯ
ಸುವಾಸಿನಿ (೮.೯ ವ) ಮುತ್ತೈದೆ
**ಸೂಸುಕ (೮.೪) ಬೈತಲೆಮಣಿ**
ಸೃಕ್ವ (೧೦.೩೫) ಕಟಬಾಯಿ
ಸೈರಿಭ (೨.೮೬) ಕೋಣ
ಸೋಡಂಬಾಡ (೧೦.೪೪) ಮದ್ಯ ಮಾಂಸ
ಸೌಪರ್ಣವಾಹ (೧೨.೧೦೭) ಗರುಡವಾಹ- ವಿಷ್ಣು
ಸೌಸವ (೧.೬೫) ಸುವಾಸನೆ

**ಹ**

ಹಂಸ (೧೨.೧೦೯) ಸೂರ್ಯ
ಹರಿದಶ್ವ (೧೦.೭) ಸೂರ್ಯ
ಹಲ್ಲಕ (೮.೫೧ ವ) ಕೆಂದಾವರೆ
ಹಿಮಕರಕಾಂತ (೮.೯೦) ಚಂದ್ರಕಾಂತಶಿಲೆ
ಹುತವಹ (೪.೮) ಅಗ್ನಿ

ಕನ್ನಡದ ಜನತೆಗೆ ಉತ್ತಮ ಸಾಹಿತ್ಯವನ್ನು ನೀಡುವ ಸಲುವಾಗಿ ಅತ್ಯಂತ ಸುಲಭ ಬೆಲೆಯಲ್ಲಿ ಈ ಪುಸ್ತಕಗಳನ್ನು ಒದಗಿಸಲಾಗಿದೆ. ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮೂಲಕ ಜ್ಞಾನಪ್ರಸಾರ ಮಾಡುವುದು ನಮ್ಮ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

ಹಳಗನ್ನಡ ಕಾವ್ಯಗಳನ್ನು ಮೂಲಪಾಠದೊಡನೆ ಗದ್ಯಾನುವಾದವನ್ನು ಸೇರಿಸಿ ಪ್ರಕಟಿಸುವ ಯೋಜನೆ ಯನ್ನು ಪರಿಷತ್ತು ಕೈಗೊಂಡಿದೆ. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಪೈಕಿ ಸೋಮರಾಜ ಕವಿಯ "ಉದ್ಭಟಕಾವ್ಯ"ವು ಗಮನಿಸಬೇಕಾದ ಕೃತಿಯಾಗಿದೆ. ಕನ್ನಡದ ಗಣ್ಯವಿದ್ವಾಂಸರಲ್ಲಿ ಒಬ್ಬರಾಗಿರುವ ಡಾ|| ಎಸ್. ವಿದ್ಯಾಶಂಕರ್ ಅವರು ಪರಿಷತ್ತಿನ ಮನವಿಯ ಮೇರೆಗೆ ಉದ್ಭಟಕಾವ್ಯದ ಗದ್ಯಾನುವಾದವನ್ನು ಸಮರ್ಥವಾಗಿ ಮಾಡಿಕೊಟ್ಟಿದ್ದಾರೆ. ಅವರಿಗೆ ಪರಿಷತ್ತು ಆಭಾರಿಯಾಗಿದೆ.

ಎನ್. ಬಸವಾರಾಧ್ಯ
ಅಧ್ಯಕ್ಷರು

ಮುದ್ರಣ : ಬಿ. ಎಂ. ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು,
ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೧೮